# ಪರಿವಿಡಿ







## ಸಂಪಾದಕ ಮಂಡಲ

# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ
ಕನ್ನಡ ಮಾಸಪತ್ರಿಕೆ.

ಸಂಪುಟ ೧ } ಜೇಷ್ಠ ಪೌರ್ಣಿಮಾ ಜೂನ ೧೯೫೨ { ಸಂಚಿಕೆ ೧

## ಸಂಪಾದಕೀಯ

**ಮಹನೀಯರೆ,**

ಇಂದಿನ ಈ ವಟಪೌರ್ಣಿಮೆಯ ಶುಭಮುಹೂರ್ತದಲ್ಲಿ 'ವೀರಮಾತೆ'ಯ ಪ್ರಥಮ ಸಂಚಿಕೆಯನ್ನು ತಮ್ಮೆದುರು ಇಡಲು ಸಂತೋಷವೆನಿಸುತ್ತದೆ. ಇದು ತಮ್ಮೆಲ್ಲರ ಶುಭಾಶೀರ್ವಾದ ಸಹಕಾರಗಳ ಮೂರ್ತಸ್ವರೂಪವೆಂದು ಬೇರೆ ಹೇಳಬೇಕಾಗಿಲ್ಲ.

'ವೀರಮಾತೆ' ಪಕ್ಷಾತೀತ ಕನ್ನಡ ಮಾಸಪತ್ರಿಕೆ; ಸೋದರಿಯರ ಸರ್ವತೋಮುಖ ಪ್ರಗತಿಯೇ ಅದರ ಉದ್ದೇಶ. ಹಾಗೆಂದು ಸೋದರರಿಗೆ ಇದರ ಸಂಬಂಧವಿಲ್ಲವೆಂದು ಹೇಳುವಂತಿಲ್ಲ. ಗೃಹಿಣಿ ಸುಸಂಸ್ಕೃತಳಾಗಿ ತನ್ನ ಕರ್ತವ್ಯವನ್ನು ದಕ್ಷತೆಯಿಂದ ಸಾಗಿಸಿಕೊಂಡು ಹೋಗುತ್ತಿದ್ದರಲ್ಲವೇ ಮನೆಯ ಒಳಗೂ ಹೊರಗೂ ಸುಖಸಮಾಧಾನಗಳು ನೆಲೆಸುವದು? ಈ ದೃಷ್ಟಿಯಿಂದ, 'ವೀರಮಾತೆ' ಪ್ರತಿಯೊಬ್ಬರೂ ಮೆಚ್ಚಲೇ ಬೇಕಾದ ಮಾಸಪತ್ರಿಕೆ.

ಪತ್ರಿಕೆ ಜನತೆಯ ಅಭಿಪ್ರಾಯ ವ್ಯಕ್ತಮಾಡುವ ಒಂದು ಸಾಧನ; ಪ್ರಜಾ ತಂತ್ರದ ಇಂದಿನ ಯುಗದಲ್ಲಿ ಜನತೆಯ ಅಭಿಪ್ರಾಯಕ್ಕೆ ಎಷ್ಟೊಂದು ಬೆಲೆಯಿದೆ ಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಬಳಿಕ ಜನಾಂಗದ ಅರ್ಧಭಾಗವನ್ನಾ ಕ್ರಮಿಸಿದ ಮಹಿಳೆಯರಿಗಾಗಿ–ಅವರ ಅಭಿಪ್ರಾಯವನ್ನು ವ್ಯಕ್ತಮಾಡುವದಕ್ಕಾಗಿ ಭಾರತದಲ್ಲಿ ಎಷ್ಟೊಂದು ಪತ್ರಿಕೆಗಳಿವೆ? ಕನ್ನಡನಾಡಿನಲ್ಲಿ ಎಷ್ಟಿವೆ? ಇದ್ದ ಪತ್ರಿಕೆಗಳ ಉದ್ದೇಶ ಎಷ್ಟುಮಟ್ಟಿಗೆ ಸಫಲವಾಗುತ್ತಿದೆ ಎಂಬುದು ವಿಚಾರಿಸಬೇಕಾದ ಮಾತು. ಮಹಿಳೆಯರಿಗಾಗಿ ಪ್ರತ್ಯೇಕ ಪತ್ರಿಕೆಗಳನ್ನು ಪ್ರಾರಂಭಿಸುವದರ ಅಗತ್ಯ ವೇನು? ಇನ್ನುಳಿದ ಪತ್ರಿಕೆಗಳು ಆ ಕಾರ್ಯವನ್ನು ಮಾಡಲಾರವೇ? ಎಂಬ ಪ್ರಶ್ನೆಯೂ ಇದರ ಜೊತೆಗೆ ಹುಟ್ಟಬಹುದು. ಎಲ್ಲದರ ಜೊತೆಗೆ ಅಲ್ಪಸ್ವಲ್ಪ ಸ್ಥಾನ ದೊರೆತರೆ ಸ್ವೀಕರಿಸುವದಕ್ಕಿಂತ ಪ್ರತ್ಯೇಕ ಸ್ಥಳವಿದ್ದರೆ ಒಳ್ಳೆಯದಲ್ಲವೇ? ಅದೂ ಇದುವರೆಗೆ ಹಿಂದುಳಿದವರೆಂದು ಎಣಿಸಲ್ಪಡುವ ಮಹಿಳೆಯರಿಗೆ? ಪ್ರತ್ಯೇಕವಾದ ಸ್ಥಳದೊರೆತರೇ ಅಲ್ಲವೇ ಸ್ತ್ರೀಜೀವನದ ವಿವಿಧ ಘಟಕಗಳ ವಿಮರ್ಶೆಗೆ ಅವಕಾಶ ದೊರೆಯುವದು?

'ವೀರಮಾತೆ' ಕೇವಲ ನಾಲ್ಕು ಜನ ವಿದುಷಿಯರ ದೃಷ್ಟಿಕೋನದಿಂದ ಹೊರಟುದಲ್ಲ. ಪ್ರತಿಭಾವಂತರೂ ಮೇಧಾವಿಗಳೂ ಆದ ಮಹಿಳೆಯರು ಯಾವ ಪರಿಸ್ಥಿತಿಯಲ್ಲೂ ಮುನ್ನುಗ್ಗಿ ತಮ್ಮ ಧ್ವನಿಯನ್ನು ಎತ್ತಿಹಿಡಿಯಬಹುದು. ಆದರೆ ಸಾಮಾನ್ಯ ಮಹಿಳೆಯರ ಮಾತು ಹೇಗೆ? ಮನೆಯ ಮೂಲೆಯಲ್ಲಿ ಅಡಗಿರು ವದೇ ತಮ್ಮ ಜನ್ಮಸಿದ್ಧ ಹಕ್ಕು ಎಂದು ತಿಳಿದಿರುವ ಹೆಣ್ಣುಮಕ್ಕಳನ್ನೂ, ಮಾತೆಯ ವಾತ್ಸಲ್ಯದಿಂದ ಮುಂದೆಕರೆದು ತರುವದು 'ವೀರಮಾತೆ'ಯ ಕರ್ತವ್ಯವಾಗಿದೆ.

ಯೋಗ್ಯತೆಯುಳ್ಳವರು ದೇಶಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿಕೊಟ್ಟರು; ಯೋಗ್ಯತೆಯನ್ನು ಸಂಪಾದಿಸಿಯಾದರೂ ಬಂದ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಹೋಗುವದು ಇನ್ನುಳಿದವರ ಕರ್ತವ್ಯವಾಗಿದೆ. 'ಸ್ವಾತಂತ್ರ್ಯ' ವೆಂದರೇನೆಂಬುದೇ ಇಂದು ಅನೇಕರಿಗೆ ತಿಳಿಯದು; ಮಾತಿನಲ್ಲೂ ಅಷ್ಟೇ, ಕಾರ್ಯದಲ್ಲೂ ಅಷ್ಟೇ. ಅವರಲ್ಲಿ ಮಹಿಳೆಯರೂ ಇದ್ದಾರೆ. ಮಹಿಳೆಯರ ದಾಸ್ಯಕ್ಕೆ ಬಂಧನಗಳು ಇನ್ನೂ ಹೆಚ್ಚು. ಮನೆಯಲ್ಲಿಯೂ ಬಂಧನ, ಮನದಲ್ಲಿಯೂ ಬಂಧನ. ಅಂದು ಗಾಂಧೀಜಿ ಪರಾಧೀನ ಜನತೆಯ ಮನದ ದಾಸ್ಯವನ್ನು ತೊಲಗಿಸಲು ಹೆಣಗಾಡಿದಂತೆ ಇಂದು ಮಹಿಳೆಯರ ಮನದ ದಾಸ್ಯವನ್ನು ದೂರಗೊಳಿಸಲು ಪ್ರಯತ್ನಿಸಬೇಕಾಗಿದೆ. ಈ ದಾಸ್ಯ ತೊಲಗಿದರೆ ಯಾರಿಗೂ ಅನಿಷ್ಟವಿಲ್ಲ; ಬಲಶಾಲಿಯೊಬ್ಬನು ದುರ್ಬ ಲನನ್ನು ಗೆದ್ದು ಸುಖಿಸುವದಕ್ಕಿಂತ ಬಲಶಾಲಿಯನ್ನು ನಿರ್ಮಿಸಿ ಸುಖಪಡುವದರಲ್ಲಿ ಹೆಚ್ಚಿನ ಸಾತ್ವಿಕ ಆನಂದವಿದೆ. ಬಂಧನದಲ್ಲಿ ಯಾವ ಬಗೆಯ ವಿಕಾಸಕ್ಕೂ ಅವಕಾಶವಿಲ್ಲ. ಕಾವಲಿನ ಬಂಧನದಲ್ಲಿದ್ದ ಪಾತಿವ್ರತ್ಯಕೂಡ ನಿಜವಾದುದಲ್ಲ; "Guarded chastity is no chastity" ಎಂದು ಹೇಳುವ ಗಾಂಧೀಜಿಯವರ ಮಾತು ಅಕ್ಷರಶಃ ಸತ್ಯ.

ಇಂದು ರಾಜಕಾರಣ ಜೀವನದ ಎಲ್ಲ ಕ್ಷೇತ್ರಗಳನ್ನು ಆಕ್ರಮಿಸಲು ಯತ್ನಿಸುತ್ತದೆ. ಯಾವದೇ ವ್ಯಕ್ತಿ ಇಂದು ಅದರಿಂದ ಸಂಪೂರ್ಣವಾಗಿ ದೂರಿರುವದು ಸಾಧ್ಯವಿಲ್ಲ. ಸ್ತ್ರೀಯಾದರೂ ಅಷ್ಟೇ; ರಾಜಕಾರಣವನ್ನು ಅವಳು ಹಿಂಬಾಲಿಸದಿದ್ದರೂ, ರಾಜಕಾರಣವೇ ಇಂದು ಅವಳನ್ನು ಹಿಂಬಾಲಿಸುತ್ತಿದೆ. ಬಳಿಕ ಅದರೆಡೆಗೆ ಕಣ್ಣೆತ್ತಿ ನೋಡದಿರುವದು ಹೇಗೆ ಸಾಧ್ಯ? ವ್ಯಕ್ತಿಯೇ ಪ್ರಜಾತಂತ್ರದಲ್ಲಿ ಶಕ್ತಿಯಾದಾಗ, ತನ್ನ ಹಕ್ಕು ಬಾಧ್ಯತೆಗಳೇನು ? ಅವುಗಳನ್ನು ಕಾರ್ಯರೂಪದಲ್ಲಿ ತರುವದು ಹೇಗೆ ? ಎಂಬುದನ್ನು ಸ್ತ್ರೀಯರೂ ತಿಳಿದುಕೊಳ್ಳಬೇಡವೆ ? ಇಂದು ಅವರು ಯಾರೊಬ್ಬರ ಮೇಲೆಯೂ ತಮ್ಮ ಭಾರವನ್ನು ಚೆಲ್ಲಿಕೊಟ್ಟು ಸಾಗುವಂತಿಲ್ಲ. ತನ್ನ ಪಾಲಿನ ಕರ್ತವ್ಯವನ್ನು ಪೂರೈಸಿಯೇ ಅವರು ಉಣ್ಣಬೇಕಾಗಿದೆ. ರಾಜ್ಯತಂತ್ರದಲ್ಲಿ ತಮಗಾಗಿ ಮೀಸಲಾಗಿದ್ದ ಭಾರವನ್ನು ಅವರು ಅರಿಯಬೇಕಾಗಿದೆ. ಅನ್ಯಾಯವನ್ನು ಪ್ರತಿಭಟಿಸಿ ನ್ಯಾಯಕ್ಕಾಗಿ ಹೋರಾಡುವ ಶಕ್ತಿ ಅವರಲ್ಲಿ ಬರಬೇಕಾಗಿದೆ.

'ವೀರಮಾತೆ' ಸ್ತ್ರೀಯರ ಜೀವಾಳದ ಸಮಸ್ಯೆಗಳೆಲ್ಲವನ್ನೂ ಕುರಿತು ಯೋಚಿಸುತ್ತದೆ. ಯಾವದೇ ಬಗೆಯ ಸಂಕುಚಿತ ದೃಷ್ಟಿಯಿಂದ ಒಂದೇ ವರ್ಗದ ಅಥವಾ ಕೆಲವೇ ವರ್ಗಗಳ ಹಿತಚಿಂತನೆಯನ್ನು ಮಾಡುವದು 'ವೀರಮಾತೆ'ಯ ಉದ್ದೇಶವಲ್ಲ; 'ಸ್ತ್ರೀಯರಿಗಾಗಿ ಮಾಸಪತ್ರಿಕೆ,'ಯೆಂದರೆ ಪುರುಷರಿಗೆ ಅವಕಾಶವಿಲ್ಲವೆಂದು ಅದರರ್ಥವಲ್ಲ. ಮಹಿಳೆಯರ ಸಮಸ್ಯೆಗಳನ್ನಾದರೂ ಎದುರಿಸಿ, ಶೀಲ, ಸುಚರಿತ್ರ ಸಂಪನ್ನವಾದ ಸಮಾಜವನ್ನು ಕಟ್ಟುವದೇ ವೀರಮಾತೆಯ ಗುರಿ.

ಇಪ್ಪತ್ತನೆಯ ಶತಮಾನದ ಮುನ್ನಡೆಗನುಸರಿಸಿ, ಪ್ರತಿಕ್ಷೇತ್ರದಲ್ಲೂ ಇಂದು ಸಂಶೋಧನೆ ನಡೆದಿದೆ. ಅವುಗಳ ಪರಿಣಾಮದ ಫಲವು ಸ್ತ್ರೀಜೀವನಕ್ಕೂ ಸಂಬಂಧಪಟ್ಟುದು. ಅವುಗಳನ್ನು ದೂರದಲ್ಲಿಯೇ ಇಟ್ಟು ಕೇವಲ ಹಳೆಯುದಕ್ಕೇ ಅಂಟಿಕೊಂಡಿರುವದು ಯಾವದೇ ಪ್ರಗತಿಪರ ಜನಾಂಗಕ್ಕೆ ಸಾಧ್ಯವಿಲ್ಲ, ಮೇಲೆ ಅವಶ್ಯವೂ ಅಲ್ಲ ; ಹಿತಕಾರಕವೂ ಅಲ್ಲ. ಅಥವಾ ಇದಕ್ಕೆ ವಿರುದ್ಧವಾಗಿ ಕೇವಲ ಹೊಸದನ್ನೇ ಮೆಚ್ಚುವದೂ ಅಷ್ಟೊಂದು ಉಚಿತವಲ್ಲ.

**ಪುರಾಣಮಿತ್ಯೇವ ನ ಸಾಧು ಸರ್ವಂ, ನ ಚಾಪಿ ಕಾವ್ಯಂ ನವಮಿತ್ಯವದ್ಯಮ್ ।**
**ಸಂತಃ ಪರೀಕ್ಷ್ಯಾನ್ಯತರದ್ ಭಜಂತೇ ಮೂಢಃ ಪರಪ್ರತ್ಯಯನೇಯ ಬುದ್ಧಿಃ ॥**

ಎಂಬ ಮಹಾಕವಿ ಕಾಲಿದಾಸನ ವಚನದಂತೆ ನಮ್ಮ 'ವೀರಮಾತೆ'ಯಾದರೂ ಹಳೆಯದು ಹೊಸದು ಎನ್ನದೆ ಅನುಭವ ಮತ್ತು ಶಾಸ್ತ್ರೀಯ ದೃಷ್ಟಿಗಳ ಆಧಾರದಿಂದ ಸಾರವತ್ತಾದುದನ್ನು ಸ್ವೀಕರಿಸುವದು.

ಸ್ವಲ್ಪದರಲ್ಲಿಯೇ ಹೇಳುವದಾದರೆ ಬೇನೆಯವರನ್ನು ಆರೈಕೆಯಿಂದ ಸಂತಯಿಸಿ, ನಿರ್ಜೀವಿಗಳಲ್ಲಿ ಜೀವ ತುಂಬಿ, ನಿರುತ್ಸಾಹಿಗಳನ್ನು ಪ್ರೋತ್ಸಾಹಗೊಳಿಸುವದೇ 'ವೀರಮಾತೆ'ಯ ಪ್ರಬಲವಾದ ಇಚ್ಛೆ.

ಉದ್ದೇಶಕ್ಕನುಸಾರವಾಗಿ 'ವೀರಮಾತೆ'ಯಲ್ಲಿ ಸ್ತ್ರೀಜೀವನಕ್ಕೆ ಸಂಬಂಧಪಟ್ಟ ಎಲ್ಲ ಬಗೆಯ ಲೇಖಗಳಿಗೂ ಅವಕಾಶವನ್ನು ಕೊಡಲಾಗುತ್ತದೆ. ಕಲೆ, ಶಾಸ್ತ್ರ ವಿಮರ್ಶೆ, ಸ್ತ್ರೀಜೀವನಕ್ಕೆ ಸಂಬಂಧಪಟ್ಟ ರಾಜಕಾರಣ, ಆರೋಗ್ಯ, ಗೃಹವ್ಯವಸ್ಥೆ, ಪಾಕಶಾಸ್ತ್ರ ಇವೆಲ್ಲವುಗಳಿಗೂ ಇದರಲ್ಲಿ ಸ್ಥಾನವಿದೆ; ಜೊತೆಗೆ ಸ್ತ್ರೀಯರ ಅತ್ಯಂತ ಮಹತ್ವದ ವಿಷಯವಾದ ಮಕ್ಕಳ ವಿಚಾರವನ್ನೂ ಇದರಲ್ಲಿ ಸೇರಿಸಲಾಗುವದು. ಈ ವಿಷಯಗಳನ್ನು ಕುರಿತು ಲೇಖಗಳನ್ನು ಕಳಿಸುವ ಎಲ್ಲೆಡೆಯ ಬಂಧು-ಭಗಿನಿಯರ ಲೇಖಗಳಿಗೂ ಸುಸ್ವಾಗತವಿದೆ. ಇನ್ನು ಯಾವದೇ ಭಾಗವನ್ನು ಇದರಲ್ಲಿ ಸೇರಿಸು ವದು ಅವಶ್ಯವೆಂದು ಕಂಡಲ್ಲಿ, ನಮ್ಮ ಓದುಗರು ಹಾಗೆಂದು ಸೂಚಿಸಿದಲ್ಲಿ, ಆ ಭಾಗವನ್ನು ಪತ್ರಿಕೆಯಲ್ಲಿ ಅವಶ್ಯವಾಗಿ ಸೇರಿಸಲಾಗುವದು. ಹೊಸ ದೃಷ್ಟಿಯಿಂದ ಸ್ತ್ರೀವಿಷಯಕ ಕಾನೂನಿನ ವಿಚಾರ. ಭಾರತದ ಒಳಹೊರಗಿನ ವಿವಿಧ ಸ್ತ್ರೀ ಸಂಘ-ಸಂಸ್ಥೆಗಳ ಪರಿಚಯಗಳನ್ನೂ ಇದಕ್ಕೆ ಜೋಡಿಸಲಾಗಿದೆ.

ಈ ಪ್ರಥಮ ಸಂಚಿಕೆಯಲ್ಲಿ 'ಹೊಸತಾದುದಕ್ಕೆ ಸ್ಥಾನಕೊಟ್ಟು ಹಿಂದೆ ಸರಿ ಯುವ ಹಳೆಯದರ' ವಿಚಾರವಿದೆ. ಸ್ತ್ರೀಯರ ಸ್ವಾತಂತ್ರ್ಯವನ್ನು ಕುರಿತು ಯೋಚಿ ಸುವ ಲೇಖವಿದೆ, ನ್ಯಾಯ ಪರಿಸ್ಥಿತಿಗಳ ತಕ್ಕಡಿಯಲ್ಲಿ ಘಟನೆಯನ್ನು ತೂಗಿ ನೋಡುವ ಮಶ್ರೂವಾಲಾರ ಲೇಖವಿದೆ.ಶ್ರೀ ಸತ್ಯವಂತರಾಯರ, 'ನ್ಯಾಯಕ್ಕೆಗಲ್ಲು' ಎಂಬ ನಾಟಕದ ಪ್ರಾರಂಭದ ಭಾಗವಿದೆ, ಶ್ರೀಮತಿ ರತ್ನಮ್ಮ ಎಂ. ಎ. ಇವರ 'ಸ್ವರ್ಣ ದೀಪಾವಳಿಯ ಸಂಚಾರ' ಎಂಬ ತಿಳಿಯಾದ ಹಾಸ್ಯದಿಂದ ಕೂಡಿದ ಲಲಿತಸಾಹಿತ್ಯದ ಭಾಗವಿದೆ, ಜೊತೆಗೆ ಹೆಣಿಕೆ, ಕಸೂತಿ, ಗೃಹನಿರ್ವಹಣೆ ಇತ್ಯಾದಿ ಇನ್ನೂ ಅನೇಕ ಉಪಯುಕ್ತ ಭಾಗಗಳೂ ಇವೆ. ಈ ಸಲ ಸಂಚಿಕೆಗೆ ಬಂದ ಲೇಖಗಳಲ್ಲಿ ಸ್ತ್ರೀಯರ ಸ್ವಾತಂತ್ರ್ಯ ಉದ್ಧಾರಗಳನ್ನು ಕುರಿತ ಲೇಖಗಳೇ ಹೆಚ್ಚು. ಇದರ ಭಾರವನ್ನು ಬಂಧುಗಳೇ ಹೆಚ್ಚಾಗಿ ಹೊತ್ತು ತೊಳಲಾಡುವದನ್ನು ನೋಡಿ ಸಂಕೋಚವೆನಿಸುತ್ತದೆ.

ಅತ್ಯಂತ ಉತ್ಸಾಹದಿಂದ ಪರಿಶ್ರಮವನ್ನು ವಹಿಸಿ ಇನ್ನೂ ಅನೇಕ ಮಹ ನೀಯರು, ವಿಚಾರಪೂರ್ಣ ಲೇಖಗಳನ್ನು ಕಳಿಸಿದ್ದಾರೆ; ಸ್ಥಳಾಭಾವದ ಮೂಲಕ ಅವುಗಳನ್ನು ಈ ಸಲದ ಸಂಚಿಕೆಯಲ್ಲಿಯೇ ಪ್ರಕಟಿಸಲು ಸಾಧ್ಯವಾಗಲಿಲ್ಲ ಎಂದು ಹೇಳಲು ಸಂಕೋಚವೆನಿಸುತ್ತದೆ. ಸ್ಥಳ ದೊರೆತಂತೆ ಅವುಗಳನ್ನು ನಿಶ್ಚಯ ವಾಗಿಯೂ ಪ್ರಕಟಿಸಲಾಗುವದು.

ಅಂತೂ ಪತ್ರಿಕೆಯ ಪ್ರಾರಂಭಕ್ಕೇ ಪ್ರೋತ್ಸಾಹ ಕೊಟ್ಟು ಲೇಖಗಳನ್ನು ಕಳಿಸಿ ಸಹಕಾರ ನೀಡಿದ ಮಹನೀಯರಿಗೂ, ಪತ್ರಿಕೆಯು ಕೈಕೊಂಡ ಕಾರ್ಯದ ಬಗ್ಗೆ ಪ್ರಶಂಸೆಯನ್ನು ವ್ಯಕ್ತಮಾಡಿ ತಮ್ಮ ಶುಭೇಚ್ಛೆಯನ್ನು ಕಳಿಸಿದ ಮಹಾಶಯ ರಿಗೂ ನಮ್ಮ ಹಾರ್ದಿಕ ಅಭಿವಂದನೆಗಳು. ಭವಿಷ್ಯದಲ್ಲೂ ಪತ್ರಿಕೆಗೆ ಕನ್ನಡ ನಾಡಿನ ಮೂಲೆಮೂಲೆಯಲ್ಲೂ ಪ್ರೋತ್ಸಾಹ ಸಹಕಾರಗಳು ಕಾದಿವೆಯೆಂದು ನಮ್ಮ ಆಶೆ!

# ಯುಗಾದಿ

**‘ಆನಂದಕಂದ’**

ಪಲ್ಲವಿ

ಕರೆದು ತರುವ ಕಾಲರಾಯ
ವರು-ವರುಷವು ನವಯುಗಾದಿ ;
ಹರುಕುಮುರುಕು ಹಳೆಯ ಕೊಳೆಯ
ಉರಿದು ಬೂದಿ ಮಾಡಿಯೂದಿ !

(೧)

ಹಳೆಯುದೆಲ್ಲ ಹೋಳಿಯಾಡಿ,
ಎಳೆಯ ಬದುಕಿಗೆಡೆಯ ನೀಡಿ,
ಬೆಳೆಯಿಸಿ ಫಲ ನೋಡಿ ನೋಡಿ
ನಡೆಸಿದೆ ಸಂಶೋಧನ,
ನಿಯತಿಯ ಕೈಯನುದಿನ !

(೨)

ಯುಗದಾದಿಯ ದಿನವು ಬರಲು
ನವಶೋಧಕೆ ಮತ್ತೆ ಮೊದಲು
ಅದಕೆಂತಲೆ ಧರಣಿಯೊಡಲು
ಹೊಸತ ತುಂಬಿಕೊಂಡಿದೆ....
ರಸದ ಬಸಿರನೊಂದಿದೆ !

(೩)

ಬರ-ಬರಲೊಳು ಕೊನರು ಚಿಗುರು,
ಮರ-ಮರದೊಳು ಹಸಿರು ತಳಿರು,
ಮರೆಯಾಗಿದೆ ಕೊರೆವ ಕುಳಿರು,
ಬಳ್ಳಿಗಳಿಗೆ ಹೊಸಕುಡಿ !
ಹೊಸಯುಗಕಿದು ದಾಂಗುಡಿ !

(೪)

ಮಾವು ಮಿಡಿಯೊಳಿಡಿದಿಹುದು,
ಬೇವು ಹೂವ ಮುಡಿದಿಹುದು,
ಮೊಲ್ಲೆ ಮುಗುಳ ಪಡೆದಿಹುದು
ಇವೆ ನವೀನ ಜಗದೊಳು
ಸೊಗಸೂಡುವ ಮುಗುಗಳು !

(೫)

ಮರಿಗೋಗಿಲೆ ಮೊದಲರಾಗ
ಮರಳಿ ಮರಳಿ ಉಲಿವುದೀಗ
ಮರಿದುಂಬಿಗಳೆದ್ದು ಬೇಗ
ಸರಿಗಮಗಳ ಸ್ರೋತ....
ಕಲಿವುವು ಸಂಗೀತ !

(೬)

ಮದನನೇನು ಸುಮ್ಮಗಿಹನೊ
ಎದೆಯೆದೆಯೊಳು ನಿಂದುತಾನೆ
ಪ್ರೇರಿಸುತಿಹ ಪ್ರಣಯವನೇ
ಹೊಸಶೋಧನೆಗಾಗಿ....
ಹಸುಳರು ಬೇಕಾಗಿ !

(೭)

ಬಂದಿಹುದಿದು ನವಯುಗಾದಿ,
ಹೊಸ ಸುಖ ಹೊಸ ದುಃಖಕಾದಿ
ಹೊಸಮಳೆ ಹೊಸಬೆಳೆಗೆ ಹಾದಿ
ಹೊಸ ಅನುಭವ ಹೊಸತೆರ
ಕಹಿ ಸಿಹಿಗಳ ಸಂಕರ !

(೮)

ಎಲ್ಲಿ ನೋಡಿದಲ್ಲಿ ಹೊಸತು
ಇಲ್ಲ ಕಳೆದ ದಿನದ ಹಳತು
ನವಯುಗಾದಿಗಿದುವೆಗುರುತು
ಈ ಯುಗ ಸಂಶೋಧನ
ತರಲಿ ಶಾಂತಿ ಸಾಧನ

# ಹೊಸಕಾಲ ಬರುತಲಿದೆ!

ಲೇಖಿಕೆ:— ಶ್ರೀಮತಿ ವೆಂಕಮ್ಮ ಕೊಯಿಮುತ್ತೂರ, ಧಾರವಾಡ.

ಕಾಲ ಉರುಳಿದಂತೆ ಹೊಸತೂ ಹಳೆಯದಾಗುವದು; ಹಳೆಯದು ಬರಲಿರುವ ಹೊಸದಕ್ಕೆ ಸ್ಥಾನವನ್ನು ಕೊಟ್ಟು ಹಿಂದೆ ಸರಿಯಬೇಕಾಗುವದು. ಆದರಲ್ಲಿಯೇ ನಾವೀನ್ಯವಿದೆ! ಚೇತನಾಚೇತನ ವಸ್ತುಗಳೆರಡರ ರಾಜ್ಯದಲ್ಲೂ ಅದೇ ಗತಿ! ಬಳಿಕ ಸೋದರಿಯರ ವಿಷಯದಲ್ಲೂ ನಾವು ಈ ಮಾತನ್ನು ನೆನೆಯಬೇಡವೇ?

ಬದಲಾವಣೆಯೇ ಜೀವಿತದ ಲಕ್ಷಣ. ಈ ಜಗತ್ತಿನಲ್ಲಿ ಕೇವಲ ಸಜೀವಿಗಳೇ ಏಕೆ? ನಿರ್ಜೀವಿಗಳೂ ಸಹ ಇದ್ದಂತೆ ಇರಲಾರವು. ಕಾಲಮಾನ ಪರಿಸ್ಥಿತಿಗನುಸರಿಸಿ ಪ್ರತಿಯೊಂದು ವಸ್ತುವೂ ಬದಲಾವಣೆ ಹೊಂದುವದು. ಸಜೀವಿಗಳು ತಮ್ಮಿಂದ ತಾವೇ ಬದಲಾವಣೆ ಹೊಂದುವವು. ಆದರೆ ನಿರ್ಜೀವಿಗಳು ಸಜೀವಿಗಳಿಂದ ಬದಲಾವಣೆ ಹೊಂದುವವು. ಅಥವಾ ನಿಸರ್ಗವೇ ಅವುಗಳಲ್ಲಿ ಬದಲಾವಣೆಯನ್ನುಂಟುಮಾಡುವದು. ಅಂತೂ ಈ ಜಗತ್ತಿನಲ್ಲಿ ಯಾವದೊಂದು ವಸ್ತುವೂ ಇದ್ದಂತೆ ಇರುವದು ಅಶಕ್ಯ. ಹಾಗೂ ಬದಲಾವಣೆಯನ್ನುಂಟು ಮಾಡುವದೇ ನಿಸರ್ಗದ ಧರ್ಮ.

ಮಾನವನ ಬುದ್ಧಿಯು ದಿನದಿನಕ್ಕೆ ಪ್ರಗತಿ ಮಾರ್ಗದತ್ತ ಸಾಗುತ್ತಿದೆ. ಅಥವಾ (ವಿಕಾಸ ಹೊಂದುತ್ತಿದೆ.) ಹಿಂದಿನ ದಿನವಿಂದಿಲ್ಲ. ಇಂದಿನದು ಮುಂದಿಲ್ಲ. ವಿಚಾರವುಳ್ಳವರು ಹಿಂದು ಮುಂದಿನದನ್ನು ಅರಿತು, ಹಿಂದಾದ ಕ್ರಿಯೆಯಿಂದ ಅನುಭವಿಗಳೂ, ಮುಂದಾಗಬೇಕಾದ ಕ್ರಿಯೆಯ ಬಗ್ಗೆ ಎಚ್ಚರಿಗಳೂ ಆಗುತ್ತಿದ್ದಾರೆ. ಹಿಂದಿನದನ್ನು ನೆನೆದು, ಮುಂದಾಗುವದನ್ನು ಊಹಿಸಿ ಇಂದೇ ಮುಂದಿನದಕ್ಕೆ ಬೇಕಾಗುವ ಯುಕ್ತಿ ಪ್ರಯುಕ್ತಿಯಿಂದ ಉಪಾಯಗಳನ್ನು ಮಾಡುವರು. ಹಿಂದೆ ಪೆಟ್ಟು ತಿಂದವರು ಮುಂದಿನ ಪೆಟ್ಟಿನಿಂದ ದೂರವಿರಲು ಇಂದೇ ಉಪಾಯ ಹುಡುಕುತ್ತಾರೆ. ಈ ಹಿಂದು ಮುಂದಿನ ಗೊಂದಲದ ಸಂಧಿಯಾದ ಇಂದಿನ ಜೀವನದಲ್ಲಿ ಎಷ್ಟೋ ತೊಡಕು, ತೊಂದರೆಗಳಿವೆ. ಅವುಗಳನ್ನು ಹೋಗಲಾಡಿಸಲು ಪ್ರತಿಯೊಬ್ಬನು ತನ್ನ ಶಕ್ತಿ, ಯುಕ್ತಿಗಳನ್ನು ಉಪಯೋಗಿಸುತ್ತಾನೆ.

ಈ ಜಗತ್ತಿನಲ್ಲಿ ಅಸಂಖ್ಯ ವ್ಯಕ್ತಿಗಳಿರುವದರಿಂದ ಶಕ್ತಿ, ಯುಕ್ತಿಗಳ ಉಪಟಳವೂ ಅಸಂಖ್ಯ. ಪ್ರತಿಯೊಬ್ಬರು ತಮ್ಮ ಬಯಕೆಯನ್ನೀಡೇರಿಸಲು, ಗುರಿಮುಟ್ಟಲು ಅಥವಾ ಇನ್ನಾವದೋ ಕಾರಣಕ್ಕಾಗಿ ಯಾವದೇ ರೀತಿಯಿಂದ ಹೋರಾಡುತ್ತಿರುವರು. ಈಡೇರದಿದ್ದಲ್ಲಿ ಶಕ್ತಿ, ಯುಕ್ತಿಗಳ ಪ್ರಯೋಗ ಮಾಡುವರು. ಜಗತ್ತಿನಲ್ಲಿ ಹೀಗೆ ಅಸಂಖ್ಯ ಜೀವಿಗಳಿರುವದರಿಂದ ಬಯಕೆ, ಗುರಿ ಇವುಗಳೂ ಅಸಂಖ್ಯವಾಗಿ ತುಂಬಿವೆ. ಪ್ರತ್ಯೇಕ ಜೀವಿಯ ಜೀವನವು ಬೇರೆ ಬೇರಿರುವದರಿಂದ ಭಿನ್ನ ಭಿನ್ನ ಪರಿಸ್ಥಿತಿಗಳುಂಟಾಗಿವೆ. ಹೀಗಾಗಿ ಅನೇಕ ಪರಿಸ್ಥಿತಿ, ಅನೇಕ ಬಯಕೆ, ಈಡೇರುವಿಕೆ, ಅನೇಕ ಗುರಿ ಮುಂದೆ ಇವುಗಳಿಗೆ ಅನೇಕ ಅಡ್ಡಿ ಆತಂಕಗಳು,

ಅನೇಕ ತೊಡಕು, ತೊಂದರೆಗಳು ಹೀಗೆ ಅನೇಕ ಅನೇಕ ಎಂಬ ವ್ಯತ್ಯಾಸಗಳಿಂದಲೇ ಈ ಜಗತ್ತು ತುಂಬಿದೆ. ಅಥವಾ ಈ ಜಗತ್ತೆಂದರೇ ಅನೇಕ ಪರಿಸ್ಥಿತಿ, ಅನೇಕ ಪರಿಣಾಮಗಳ ಜಾತ್ರೆ ಎನ್ನಬಹುದು. ಹಾಗೆ ಅನ್ನುವದರಲ್ಲಿ ಅತಿಶಯೋಕ್ತಿ ಏನೂ ಇಲ್ಲ. ಇಂತಹ ಅನೇಕತೆಗಳ ಗೊಂದಲದ ಜಗತ್ತಿನಲ್ಲಿ ಸುಮಾರ್ಗದಿಂದ ಸಾಗುವದೇ ಮಾನವರ ಕರ್ತವ್ಯ. ಈ ಸುಮಾರ್ಗದಿಂದ ಸಾಗಬೇಕಾದರೆ ಆ ವ್ಯಕ್ತಿಯು ತನ್ನ ಸುತ್ತು ಮುತ್ತು, ಹಿಂದೆ ಮುಂದೆ ನೋಡಿ ಹೆಜ್ಜೆ ಇಡಬೇಕು. ನಡೆಯುವಾಗ ಎದುರಿಗೆ ದೊಡ್ಡ ವಸ್ತುವು ಕಂಡಲ್ಲಿ ಅದರೊಡನೆ ವೃಥಾ ಹೋರಾಡದೆ ಯುಕ್ತಿಯಿಂದ ಆ ವಸ್ತುವಿಗೇ ಮೊದಲು ಹಾದಿ ಕೊಟ್ಟು ಬದಿಗೆ ಸರಿಯಬೇಕು. ಸಣ್ಣ ವಸ್ತುವು ಕಂಡಲ್ಲಿ ಅದನ್ನು ದಾಟ ಮುಂದೆ ಸಾಗಬೇಕು. ಸಮವಸ್ತುವು ಕಂಡಲ್ಲಿ ಅತಿ ಜಾಣತನದಿಂದ ನಡೆದುಕೊಳ್ಳಬೇಕು. ಸಣ್ಣ ಸೇತುವೆಯ ಮೇಲೆ ಇದಿರು ಬದಿರಾದ ಎರಡು ಟಗರುಗಳ ಕಥೆಯಂತೆ ಯುಕ್ತಿ, ವ್ಯವಹಾರ ಚಾತುರ್ಯದಿಂದ ನಡೆಯಬೇಕು. ಇವುಗಳನ್ನು ಮರೆತು ತಾನೇ ಹೆಚ್ಚೆಂಬ ಹೆಮ್ಮೆಯಿಂದ ಎದುರಿನ ವಸ್ತುವನ್ನು ಲಕ್ಷಿಸದೆ ನಡೆಯುವವರು ಎಡವುವದೇ ನಿಶ್ಚಯ. 'ತಾಗಿದ ಮೇಲೆ ಬಾಗಿಯೇ ತೀರಬೇಕಾ'ದ್ದರಿಂದ ಒಮ್ಮೆ ಎಡವಿ ಬಿದ್ದವರಿಗೆ ಮತ್ತೊಮ್ಮೆ ಹೀಗೆ ಮಾಡಬಾರದೆಂಬರಿವು ಸಹಜವಾಗಿ ಬರಬೇಕು. ಆದರೆ ಎಡವಿ ಬಿದ್ದರೂ ಸಹ ಮೀಸೆಗೆ ಮಣ್ಣು ಹತ್ತಲಿಲ್ಲೆಂಬ ಹೆಮ್ಮೆಯ ಮಾತಾಡುವ ಜನರೂ ಉಂಟು. ಇಂಥವರು ಜನರಿಂದ ಶತಮೂರ್ಖರೆನಿಸಿಕೊಳ್ಳುವರೇ ಹೊರತು ಸ್ವಾಭಿಮಾನಿಗಳೆನಿಸಲಾರರು. ಕಣ್ಣು ಮುಚ್ಚಿ ನಡೆವವರಿಗೆ ಮುಂದಿನ ಹಾದಿ ಎಲ್ಲವೂ ಕತ್ತಲೆಯೇ. ಕಾಲಮಾನ ಪರಿಸ್ಥಿತಿಗಳನ್ನು ಚೆನ್ನಾಗಿ ತಿಳಿದು, ವಿವೇಕದಿಂದ ಪರಿಸ್ಥಿತಿಗನುಸರಿಸಿ ನಡೆಯುವದೇ ಪ್ರತಿಯೊಬ್ಬರ ಜಾಣತನ. ಆದರಿಂದಲೇ ಜಗತ್ತಿಗೆ ಪ್ರಗತಿ. ಮನೆ ಮನೆಗಳಲ್ಲಿಯ ಪ್ರತಿಯೊಂದು ವ್ಯಕ್ತಿಯು ವ್ಯಕ್ತಿಯೆಂದೇ ಸುಧಾರಿಸಿ, ಪ್ರಗತಿ ಮಾರ್ಗ ಹಿಡಿದಲ್ಲಿ ಇಡೀ ಜಗತ್ತೇ ಪ್ರಗತಿಹೊಂದುವದು.

ಜಗತ್ತು ಈ ರೀತಿ ಪ್ರಗತಿ ಹೊಂದಬೇಕೆಂಬ ಬಯಕೆಯು ಜಗತ್ತಿನಲ್ಲಿಯ ಪ್ರತಿಯೊಂದು ಮಾನವ ವ್ಯಕ್ತಿಗೂ ಅರಿವಾಗಬೇಕು. ಅಲ್ಲಿ ಗಂಡು ಹೆಣ್ಣುಗಳೆಂಬ ಭೇದಭಾವವಿಲ್ಲ. ಜಾತಿನೀತಿಗಳೆಂಬ ಮಾತಿಲ್ಲ. ಈಗೀಗ ಹೆಣ್ಮಕ್ಕಳು ಬದಲಾಗುತ್ತಿರುವ ಈ ಜಗತ್ತಿನಲ್ಲಿ ತಮ್ಮ ವಿಚಾರಕ್ಕೆ ಚಾಲನೆ ಕೊಟ್ಟು ಕ್ರಾಂತಿಯನ್ನುಂಟು ಮಾಡುವ ಮೆಟ್ಟಗೆ ಬರುತ್ತಿದ್ದಾರೆ. ಇದನ್ನು ತಿಳಿಯದೆ ಅಜ್ಞಾನದಿಂದ ಕೆಲವು ಗಂಡಸರೇ ಏಕೆ ಹೆಣ್ಮಕ್ಕಳೂ ಸಹ ಸಜಾತಿಯವರ ಈ ಕೃತಿಗಾಗಿ ಬಯ್ಯುತ್ತಿದ್ದಾರೆ. ಜಗತ್ತಿನ ಬದಲಾವಣೆಯ ಕಡೆಗೆ ಲಕ್ಷಿಸದೆ, ಹಿಂದಿನ ವಿಚಾರ, ಆಚಾರಕ್ಕೇ ಹೊಗಳುತ್ತಾ ಇಂದಿನದನ್ನು ಬಯ್ಯುತ್ತಿದ್ದಾರೆ. ಭಾರತೀಯ ಸಂಸ್ಕೃತಿಯು ಕೆಟ್ಟಿತೆಂದು ಚೀರುತ್ತಿದ್ದಾರೆ. ಆದರೆ ಹಿಂದಿನ, ಇಂದಿನ ವಿಚಾರಗಳಲ್ಲಿ ತಪ್ಪಾವುದಿದೆ, ಸರಿ ಯಾವುದಿದೆ, ಯಾವುದನ್ನು ಬಿಡಬೇಕು, ಯಾವುದನ್ನು ಹಿಡಿಯಬೇಕು ಎಂಬುದರ ಕಡೆಗೆ ಲಕ್ಷಿಸುತ್ತಿಲ್ಲ. ಅಜ್ಜ ತೋಡಿದ ಬಾವಿಯೆಂದು ತಿಳಿದು ಸವಳು

ನೀರನ್ನೇ ಕುಡಿಯುವದು ಯಾವ ಜಾಣತನವಾದೀತು? ಇರಲಿ. ಇತರರಿಗೆ ಅನ್ನೂವದೂ ತಪ್ಪು. ಹಾಗೆನ್ನುವವರನ್ನು ಬಯ್ಯದೆ ಅವರ ಮನಃಪರಿವರ್ತನೆ ಯಾಗುವಂತೆ ಸೂಕ್ಷ್ಮರೀತಿಯಿಂದ ತಿಳಿಸಿ ಹೇಳುವದು ಜಾಣರ ಕರ್ತವ್ಯ.

ಸಭೆಗಳಲ್ಲಿ "ಹೆಣ್ಣು ಜಗತ್ತಿನ ಮಾತೆ ಇರುವಳು. ಅರ್ಧ ಜಗತ್ತೆಂದರೆ ಹೆಣ್ಣು. ಹೆಣ್ಣೆಂದರೆ ಶಕ್ತಿ" ಈ ಮಾತುಗಳ ಭಾಷಣ ಬಿಗಿಯುವವರು ನೂರಕ್ಕೆ ೯೯ ಜನರು. ಆದರೆ ಆ ರೀತಿ ನುಡಿದಂತೆ ನಡೆಯುವವರು ೧೦೦ ರಲ್ಲಿ ಉಳಿದ ಒಬ್ಬರು. ಅಂದರೆ ನಡೆಗಿಂತ ನುಡಿಗೇ ಮಹತ್ವವಿದೆ ಈ ಜಗತ್ತಿನಲ್ಲಿ ಇಂದು. ಪಾಪ! ಅವರಾದರೂ ಏನು ಮಾಡಬಲ್ಲರು? ಜಗತ್ತಿನ ವಾತಾವರಣವೇ ಹಾಗಾಗಿದೆ. ಯಾರಾದರೊಬ್ಬರು ಹೆಣ್ಣಿನ ಬೆನ್ನು ಕಟ್ಟಿ ಮುಂದೆ ಬಂದರೆ ಇತರರಿಂದ ಅವರಿಗೆ ನಿಂದೆ! ನಿಂದೆಗೆ ಹೆದರಿ ಮುಂದೆ ಬರುವವರು ಹಿಂದೆ ಸರಿಯುವಂತಾಗಿದೆ. ಆದ್ದರಿಂದ ಈ ವರೆಗೂ, "ಗಂಡಸರು ನಮಗೆ ಸ್ವಾತಂತ್ರ್ಯ ಕೊಡಬೇಕು, ಅವರು ಕೊಟ್ಟಲ್ಲಿ ನಾವು ಸ್ವತಂತ್ರರು" ಮುಂತಾಗಿ ಉಪಯೋಗಿಸುತ್ತಿದ್ದ ವಾಕ್ಯಗಳನ್ನು ಹೃದಯದಿಂದ ಬೇರು ಸಹಿತ ಕಿತ್ತೊಗೆದು ಆ ಸ್ಥಳದಲ್ಲಿ "ನಾನೂ ಒಂದು ವ್ಯಕ್ತಿ. ಜಗತ್ತಿನಲ್ಲಿ ನನಗೂ ಅಸ್ತಿತ್ವವಿದೆ. ಗಂಡಸು ನಮ್ಮ ಸ್ವಾತಂತ್ರ್ಯ ಕಸಿದುಕೊಂಡಿಲ್ಲ. ಆದರೆ ನಾವು ಹಿಂದೆ ಸರಿದು ಮುಂದೆ ಬರಿದಾಗಿ ಮಾಡಿದ ಸ್ಥಳವನ್ನು ಅವರು ಆಕ್ರಮಿಸಿಕೊಂಡಿದ್ದಾರೆ. ಮೊದಲೇನೋ ಅವರು ಒಂದು ರೀತಿಯಲ್ಲಿ ಕಲ್ಯಾಣ ಬುದ್ಧಿಯಿಂಲೇ ತುಂಬಿದ ಸ್ಥಳವು ಮುಂದೆ ಆಕ್ರಮಣವಾಗಿ ಈಗ ಅತಿಕ್ರಮಣದ ದಾರಿಗೆ ಬಂದಿದೆ. ಆದ್ದರಿಂದ ಆ ಕ್ಷೇತ್ರವನ್ನು ಹೆಣ್ಣೇ ಹೋರಾಡಿ ತಿರುಗಿ ಗಳಿಸಿಕೊಳ್ಳಬೇಕಾಗಿದೆಯೇ ಹೊರತು, ಅಲ್ಲಿ ಯಾವ ಗಂಡಸರ ಬಳಿಯಲ್ಲೂ 'ದೇಹಿ' ಎನ್ನುವ ಪ್ರಮೇಯವಿಲ್ಲ, ಎಂಬ ಭಾವನೆಗಳನ್ನು ಚೆನ್ನಾಗಿ ಮೂಡಿಸಬೇಕಾಗಿದೆ. ಕೇವಲ ಮೂಡಿಸಿದರೆ ಸಾಕಾಗಲಿಲ್ಲ.ಮೂಡಿದ ವಿಚಾರದ ಗುರಿ ಸಾಧಿಸಲು ಹೋರಾಡಲು ಬೇಕಾಗಿದೆ! ಆದರೆ ಈಗಿನ ಸಾಮಾಜಿಕ ಪರಿಸ್ಥಿತಿ ನೋಡಿದರೆ ಹೆಣ್ಣು ಹೋರಾಡಲು ಇನ್ನೂ ಹಿಂಜರಿಯುವ ಪರಿಸ್ಥಿತಿಯಲ್ಲಿದ್ದಾಳೆ. ಅವಳಲ್ಲಿರುವ ಈ ಭೀತಿಯನ್ನು ಹೋಗಲಾಡಿಸುವ ಉಪಾಯವನ್ನು ಕೈಕೊಳ್ಳಬೇಕಾಗಿದೆ. ಹಾಗೂ ಹಿರಿಯರು ಹೆಣ್ಣಿನ ಬಗ್ಗೆ ಆಡಿದ ಅಪೂರ್ವ ಮಾತುಗಳನ್ನು ಸತ್ಯಮಾಡಿ ತೋರಿಸಬೇಕಾಗಿದೆ. ಅವರಾಡಿದ ವಾಕ್ಯವು ಹುಸಿಯಾಗಿ ಅವರಿಗಾಗುವ ಅಪಮಾನ ನೋಡುವದು ಯಾರಿಗೂ ಸರಿಯಲ್ಲ; ಧರ್ಮವಲ್ಲ. ಹೆಣ್ಣು ನಿಜವಾಗಿಯೂ ಜಗತ್ತಿನ 'ಮಾತೆ' 'ವೀರಮಾತೆ'ಯಾಗಿ ಮೂಡಬೇಕಾಗಿದೆ. ಈ ಉದ್ದೇಶದಿಂದಲೇ ಈ ನಮ್ಮ 'ವೀರಮಾತೆ'ಯು ತಲೆ ಎತ್ತಿದ್ದಾಳೆ. ತಿಳಿಯದವರಿಗೆ ತಿಳಿಸಿ ಹೇಳುವದೂ, ತಿಳಿದವರಿಗೆ ಇನ್ನೂ ಹೆಚ್ಚು ತಿಳಿಯಹೇಳುವದೂ, ನುಡಿದವರಿಗೆ ಅದರಂತೆ ನಡೆಯ ಹೇಳುವದೂ ಈ 'ವೀರಮಾತೆ'ಯ ಕರ್ತವ್ಯವಾಗಿದೆ. "ಕಾಲಹಳೇ ಕಂಪಿತವಾ ಕಾಣುವ ದೀಗಾ, ಜಡ ಸೃಷ್ಟಿಗೆ ಕೊಡುವದು ಗತಿಕಾಲ ಅಗಾಧಾ" ಎಂದು ಹೇಳಿದ ಬಲ್ಲವರ ಮಾರ್ಗದಲ್ಲಿ ಹೆಜ್ಜೆ ಇಡಲು ಹೊರಟಿದ್ದಾಳೆ ಈ ವೀರಮಾತೆ!

# ಸ್ವರ್ಣ ದೀಪಾವಳಿಯ ಸಂಚಾರ

ಲೇಖಿಕೆ : ಶ್ರೀಮತಿ ರತ್ನಮ್ಮ ಎಂ. ಎ. ಮೌಂಟ ಕಾರ್ಮಲ್ ಕಾಲೇಜ,
ಬೆಂಗಳೂರು.

[ದೀಪಾವಳಿಯನ್ನು ಒಳ್ಳೇ ಆನಂದದಲ್ಲಿ ಅಳೆಯಲಾಶಿಸುವ ನಿರ್ಮಲೆಯ ಜೋಗದರ್ಶನ, ರೋಸಳ ಹಳೆಬೀಡು, ಎಲ್ಲ ಅಲ್ಲಿಯೇ ಉಳಿಯಿತು. ಕೊನೆಗೆ ಎಲ್ಲರೂ ಸೇರಿ ಸುತ್ತಿ ಬಂದುದೆಲ್ಲಿ ? ಲಾಲಬಾಗಿನಲ್ಲಿಯೇ !]

"ಶುಕ್ರವಾರ ರಾತ್ರಿ ರೈಲಿನಲ್ಲಿ ಬೆಂಗಳೂರು ಬಿಟ್ಟಲ್ಲಿ ಶನಿವಾರ ಬೆಳಿಗ್ಗೆ ಭದ್ರಾವತಿ ತಲುಪಿ, ಆ ದಿನ ಅಲ್ಲೆ ಕಳೆದು ಭಾನುವಾರ ಬೆಳಿಗ್ಗೆ ಜೋಗ್‌ಗೆ ತಲುಪ ಬಹುದು. ಭಾನುವಾರ, ಸೋಮವಾರ ಜೋಗ್ ಜಲಪಾತಗಳನ್ನೆಲ್ಲಾ ನೋಡಿ ಕೊಂಡು ಕಾಡಿನಲ್ಲೆಲ್ಲಾ ಅಲೆದು ಸಂತೋಷವಾಗಿ ಕಾಲಕಳೆದು ಸೋಮವಾರ ರಾತ್ರಿ ಅಲ್ಲಿಂದ ವಾಪಸು ಹಿಂತಿರುಗಿದಲ್ಲಿ ಮಂಗಳವಾರ ಹಾಸ್ಟಲ್ಲಿಗೆ ವಾಪಸ್ ಬಂದು ತಲುಪಬಹುದು." ನಿರ್ಮಲೆ ಲೆಕ್ಕಾಚಾರವಾಗಿ ಖಚಿತ ನಿರ್ಧಾರವನ್ನು ವ್ಯಕ್ತ ಪಡಿಸಿದಳು.

"ತಲಾ ಖರ್ಚೆಷ್ಟು ಬೀಳಬಹುದು" ಬಾಬ್ ಬಾಚಿಕೊಳ್ಳುತ್ತಿದ್ದ, ಧೀರಾ ಥಟ್ಟನೆ ಪಕ್ಕಕ್ಕೆ ತಿರುಗಿ ಹೊಸದಾಗಿ ಬಂದಿದ್ದ ಲಲಿತನನ್ನು ನೋಡಿ, "ನೀನೂ ನಮ್ಮೊಂದಿಗೆ ಬರುವಿಯಷ್ಟೆ? ಒಂಬತ್ತು ಮಂದಿಗೆ ಸಿದ್ಧಮಾಡಿರುವ ಸ್ಥಳದಲ್ಲಿ ಹತ್ತುಮಂದಿ ಅಳವಡಿಸಿಕೊಳ್ಳಬಹುದು" ಎಂದಳು.

"ಇಲ್ಲ ನಾನು ಜೋಗ್ ನೋಡಿದ್ದೇನೆ. ಅದೂ ಅಲ್ಲದೆ ಈ ಸಲ ನಾನು ದೀಪಾವಳಿಗೆ ಚಿನ್ನದ ನೆಕ್‌ಲೇಸ್ ಮಾಡಿಸಲು ಹಾಕಿದ್ದೇನೆ. ಇಷ್ಟು ದೊಡ್ಡ ಹಬ್ಬದಲ್ಲಿ ಮನೆಬಿಟ್ಟು ಜೋಗ್ ಜಲಪಾತ ನೋಡಲು ಅಲೆದಾಡುವುದು ನನಗಿಷ್ಟ ವಿಲ್ಲ." ಲಲಿತನ ಮೆಲುದನಿ ! "ಸ್ವರ್ಣ ದೀಪಾವಳಿಯ ಶುಭಾಶಯಗಳು. ಚೀಕ್ ! ಎಂಥ ಮಜ ! ಎಷ್ಟು ಆನಂದ ! ನಾನೂ ಜೋಗ್‌ಗೆ ಹೋಗಲು ಸಾಧ್ಯ ವಿಲ್ಲ. ಏಕೆಂದರೆ ನಾನು ಪಧ್ಯದಲ್ಲಿದ್ದೇನೆ" ರೋಸ್ ಕೋಮಲ ಕಂಠದಲ್ಲಿ ಜೊತೆಗೂಡಿದಳು.

ನಿರ್ಮಲ ನನ್ನ ಕಡೆ ತಿರುಗಿ "ನಿಮಗೂ ಹಬ್ಬವಲ್ಲವೆ? ನೀವೇನು ಒಡವೆ ಅಥವಾ ಸೀರೆ ತೆಗೆಯುವಿರೇನು ?" ಕನ್ನಡದ ಇನಿವಾತಿನ ನಲ್ಮೆಗೆ ನನ್ನ ಮನ ತೆರೆಯಿತು. ನಿಜಸ್ಥಿತಿಯನ್ನು ಕನ್ನಡದಲ್ಲಿಯೇ ಬಿತ್ತರಿಸಿದೆ. "ದೀಪಾವಳಿ ಶ್ರೀಮಂತರ ಸುಖಗಳ ಹಬ್ಬ. ನನ್ನಂತಹ ದುಃಖಿಗಳಿಗಲ್ಲ. ಆದರೂ ವಿಧಿಯಿಲ್ಲದೆ ನಮ್ಮ ತಾಯಿ ಹಬ್ಬದ ಶಾಸ್ತ್ರಮಾಡ್ತಾರೆ. ಹಾಗಾದರೂ ನಾನು ಜೋಗ್‌ಗೆ ಬರಲಾರೆ. ನಾನು ಜೋಗ್ ನೋಡಿದ್ದೇನೆ"

ನಾವೆಲ್ಲ ಗೆಳತಿಯರು ಒಟ್ಟಾಗಿ ಮಾತಾಡಲು ಸಾಧ್ಯವಿದ್ದ ಭಾಷೆ ಇಂಗ್ಲಿಷ್. ಕನ್ನಡಿತಿಯರೂ ಕೂಡ ಪರಸ್ಪರ ಇಂಗ್ಲೀಷಿನಲ್ಲೆ ಗಳಪುತ್ತಿದ್ದರು.

ಆದರೆ ಕನ್ನಡಿತಿಯಲ್ಲದ ನಿರ್ಮಲೆಗೆ ಕನ್ನಡದಲ್ಲಿ ಮಮತೆ. ಆತ್ಮೀಯವಾಗಿ ಕನ್ನಡದಲ್ಲಿ ಕೆಲವೊಮ್ಮೆ ಮಾತನಾಡುತ್ತಿದ್ದಳು.

ಇಡೀ ದೇಶಕ್ಕೆಲ್ಲ ಸ್ವರ್ಣದೀಪಾವಳಿ. ಕೆಲಮಂದಿ ಸಹಾಧ್ಯಾಯಿಗಳೂ ಮನೆಯಲ್ಲಿ ಆನಂದದಿಂದ ಹಬ್ಬಮಾಡಿ ಹೊಸ ಬಟ್ಟೆಯುಟ್ಟು ನಲಿದಾಡಿ ಮಜಮಾಡುತ್ತಾರೆ. ನಮ್ಮ ಕಾಲೇಜಿನಲ್ಲೂ ಮನೋಹರವಾದ ಉತ್ಸವ, ಸಂಗೀತ, ನಾಟ್ಯ ನಾಟಕಗಳ ರಸದೌತಣ. ರಜದಿನ ಸಿಕ್ಕಿತೆಂದು ನಿದ್ದೆಗೆಟ್ಟು ಪ್ರಯಾಣಮಾಡಿ ಹಸಿದ ಹೊಟ್ಟೆಗಷ್ಟು ಹೋಟಲು ತಿಂಡಿ ತುಂಬಿ, ಮೂರು ದಿನದಲ್ಲಿ ಐದುನೂರು ಮೈಲಿ ಅಲೆದು ಕಾಡುಮೇಡು ತಿರುಗಿ ಸೊರಗಲು ಸಿದ್ಧವಾಗಿದ್ದ ಗೆಳತಿಯರ ಮುಖಕಂಡು ನಗುಬಂದಿತು. ಅಷ್ಟು ಹೊತ್ತಿಗೆ ಗ್ರೇಸ್ ಬಂದು ಲಲಿತನ ಕೈಗೆ ಒಂದು ಕವರ್ ಕೊಟ್ಟು ಹೋದಳು. ಜೋಗ್‌ನಲ್ಲಿ ಟೈಫಾಯಿಡ್ ಕಾಯಿಲೆಯೆಂದೂ ಯಾವ ಪ್ರವಾಸಿಗಳೂ ಬರುವುದು ಸಾಧ್ಯವಿಲ್ಲವೆಂದೂ ಅಲ್ಲಿನ ಇಂಜನೀಯರ್ ಜವಾಬು ಕೊಟ್ಟಿದ್ದರು. ಧೀರಳ ನಗುಮುಖ ಬಾಡಿತು. ಧೈರ್ಯಗುಂದಿದ ನಿರ್ಮಲ ಜಯನನ್ನು ನೋಡುತ್ತಾ "ಮೈಸೂರು ದೇಶದಲ್ಲಿ ನೋಡಲರ್ಹವಾದ ಮತ್ತೆ ಯಾವುದಾದರೂ ಸ್ಥಳವನ್ನು ನಿರ್ದೇಶಿಸು" ಎಂದಳು.

"ಜಗತ್ಪ್ರಸಿದ್ಧವಾದ ಹಳೆಬೀಡು, ಬೇಲೂರು, ಶ್ರವಣಬೆಳುಗೊಳ........"

"ಅಲ್ಲೇ ಅಲ್ಲವೆ ಪ್ರಖ್ಯಾತ ಪ್ರತಿಮೆ....ಯಾವುದದು ?"

"ಗೊಮ್ಮಟೇಶ್ವರ" "ಹೌದು ಹೌದು ಅಲ್ಲೆಲ್ಲಾ ಸುತ್ತಾಡಿ ಬರೋಣ" ರೋಸ್ ಜಾಗ್ರತೆಯಾಗಿ ಸೂಚನೆಯನ್ನು ಅನುಮೋದಿಸಿದಳು.

"ನಾನು ಬರುವುದಿಲ್ಲ ನಮ್ಮ ತಾಯಿ ಊರಿಗೆ ಹೋಗುತ್ತಾರೆ ಅದಕ್ಕಾಗಿ." ಮನಸ್ಸಿನ ಅಸಹನೆ ಒಬ್ಬರಿಗೂ ಗೊತ್ತಾಗದಂತೆ ಮಾರ್ನುಡಿದಳು. ಬೇರೊಬ್ಬ ಸಹೋದ್ಯೋಗಿ ಸ್ನೇಹಿತೆ !

ಉಬ್ಬಿದ ಹೃದಯದಿಂದ ನಾನೊಪ್ಪಿ ಹೇಳಿದೆ, "ಅಲ್ಲಿ ನಮ್ಮ ಸಂಬಂಧಿಗಳಿದ್ದಾರೆ. ಸುಖವಾಗಿ ನಾನೆಲ್ಲ ವ್ಯವಸ್ಥೆಮಾಡ್ತೇನೆ. ಶನಿವಾರ ಬೆಳಗ್ಗೆ ಹಾಸನ. ಅಲ್ಲಿಂದ ಬಸ್ಸಿನಲ್ಲಿ ಬೇಲೂರಿಗೆ ಹೋಗಬೇಕು. ಅವತ್ತು ಬೇವಾರು ದೇವಾಲಯದ ದರ್ಶನ. ಭಾನುವಾರ ಹಳೆಬೀಡು. ಸೋಮವಾರ ಶ್ರವಣಬೆಳ್ಗೊಳ ಅಲ್ಲಿಂದ ಬರುತ್ತ ದಾರಿಯಲ್ಲಿಳಿದು ಶ್ರೀರಂಗಪಟ್ಟಣ. ಮಂಗಳವಾರ ಹಾಸ್ಟಲ್ಲಿನಲ್ಲಿರಬಹುದು." ಗೆಳತಿಯರನ್ನೊಪ್ಪಿಸಿ ಸೋದರನಿಗೆ ಸುದ್ದಿಯನ್ನು ಫೋನ್‌ಮಾಡಿ ತಿಳಿಸಿದೆ. ಸೋದರನಿಂದ ಮಾರ್ನುಡಿ ಫೋನನಲ್ಲಿ ಕೇಳಿಬಂದಿತು. "ಸಂತೋಷ. ಅಲ್ಲೆಲ್ಲ ಬಹಳ ಕಾಲರ ನಿಮ್ಮ ಚಿತ್ತ"

ಉತ್ತರವನ್ನು ಕೇಳಿ ಗೆಳತಿಯರು ಬಿಸುಸುಯ್ದರು. "ಹಾಗಾದರೆ ಕೊಡಗಿಗೆ ಹೋಗಿ ಬರೋಣ" ನಿರ್ಮಲನೆಂದಳು.

ಊರಿಗೆಲ್ಲ ಹಬ್ಬ. ಪಟಾಕಿಯ ಸುರಿಮಳೆ. ಕೊಡಗಿನ ಕಾಡುಮೇಡಲೆಯಲು ಗೆಳತಿಯರು ಉತ್ಸಾಹದಿಂದಿದ್ದಾರೆ.

"ಅದು ಸರಿ. ಹೋಗಲು ಎರಡು ದಿನ ಬರಲು ಎರಡು ದಿನ. ಅಲ್ಲಿ ತಂಗಲು ಒಂದು ರಾತ್ರಿ." ಕಾರಿನ ಮಾಲಕಳಾದ ಗೆಳತಿಯ ಉತ್ತರ.

"ಓಹ್. ಬನ್ನಿ ಬನ್ನಿ! ನಾವೆಲ್ಲ ಊಟಿಗೆ ಹೋಗಿಬರೋಣ. ಕಾಶ್ಮೀರ ಸಮ ಸುಂದರ ಪ್ರದೇಶ. ಅಷ್ಟು ಉಲ್ಲಾಸವಾದ ಹವ ನಾನೆಲ್ಲು ಕಾಣೆ. ಅಲ್ಲಿ ಅತ್ಯುತ್ತಮ ಮಾಂಸಾಹಾರದ ಹೋಟೆಲ್ ಇದೆ. ಓ ಎಷ್ಟು ಮಜ. ನಡೆಯಿರಿ. ಸಿದ್ಧ! ಓಹ್!" ಲಂಗದ ನೆರಿ ಸರಿಪಡಿಸಿಕೊಳ್ಳುತ್ತ ನಗೆಯರಳಿದ ಸುಂದರಿ ಮಾರ್ಟಿನ್ ಮೇಲೆದ್ದಳು.

"ಮೂರು ದಿನದ ರಜದಲ್ಲಿ ಮರೂವರೆದಿನ ಪ್ರಯಾಣಮಾಡಬೇಕಾದ ಊಟಿಗೆ ಹೋಗಿ ಬರುವುದು ಸಾಧ್ಯವೆ?"

"ಶಿವಗಂಗಕ್ಕೆ ಹೋಗಿ ಬನ್ನಿರಿ!" ಚಿನ್ನದ ಸರ ಹಬ್ಬಕ್ಕಾಗಿ ಮಾಡಿಸಲು ಸಿದ್ಧವಾಗಿದ್ದ ಸುಖಿ ಹೇಳಿದಳು. "ನಮ್ಮ ಮನೆಗೆ ಬನ್ನಿ ಎಂದು ಕರೆಯಬಾರದಿತ್ತೆ ಎಂದಿತು ನನ್ನ ಒಳಧ್ವನಿ.

× × × × × ×

ದೀಪಾವಳಿ ರಜದಲ್ಲಿ ಎಲ್ಲಿಗಾದರೂ ಹೋಗಿ ಬರಬೇಕೆಂದು ಗೆಳತಿಯರು ತವಕ ಪಡುತ್ತಿದ್ದರು. ಹಾಸ್ಟಲ್ಲಿನ ಗೆಳತಿಯರಿಗಂತೂ ಮನಸ್ಸು ಬಹಳ ರೋಸಿತ್ತು. ಎಲ್ಲಿಗೋ ಕಡೆಗೆ ಹೊರಗೆ ಸುತ್ತಾಡಿ ಬಂದರೂ ಸಾಕು ಎನಿಸಿತ್ತು.

× × × × × ×

ನರಕ ಚತುರ್ದಶಿಯ ದಿನ ಮಧ್ಯಾಹ್ನ ಮನಸ್ಸಿಲ್ಲದ ಮನಸ್ಸಿನಿಂದ ಪಾಯಸ ನುಂಗಿ ಹಾಸ್ಟಲ್ಲಿಗೆ ಹೋದೆ. ಲಲಿತ, ನಿರ್ಮಲ, ಪ್ರೇಮ, ರೋಸ್ ಎಲ್ಲರೂ ಕಡೆಗೆ ಲಾಲ್‌ಬಾಗ್‌ಗಾದರೂ ಹೋಗಿಬರೋಣವೆಂದು ಸಿದ್ಧರಾಗಿದ್ದರು. ಅವರೊಂದಿಗೆ ನಾನೂ ಸೇರಿ ಹಾಸ್ಟಲ್ ಬಿಟ್ಟು ಹೊರಹೊರಟೆ.

"ನಮ್ಮ ತಾಯಿ ತಂದೆ ಇದ್ದಾಗ ನಾವೂ ಹಬ್ಬಮಾಡ್ತಿದ್ದೆವು" ನಿರ್ಮಲ ಮೆಲ್ಲನೆ ಮಾತೆತ್ತಿದಳು.

"ಆದರೆ ಈಗ ನಾವೆಲ್ಲ ನಲಿನಲಿಯುತ್ತ ನಡೆಯುತ್ತಿಲ್ಲವೇ? ನಕ್ಕನಿಮಿಷ ನಿಜವಾದ ಹಬ್ಬ. ಮನಸ್ಸು ಸಂತೋಷದಿಂದ ತುಂಬಿದ್ದಾಗ ಮೃಷ್ಟಾನ್ನ ತಿಂದ ತೃಪ್ತಿಗಿಂತ ಹೆಚ್ಚಾದ ತೃಪ್ತಿ. ಹೃದಯ ತೆರೆದು ಒಬ್ಬರೊಂದಿಗೆ ಕಲೆತಾಗ ಸ್ನೇಹ. ಅಂದಹಾಗೆ ನೋಡಿಲ್ಲ! ಯೋಚಿಸುತ್ತಿದ್ದಂತೆ ಮಾತು ಹೊರಹೊಮ್ಮಿತು." ನಮ್ಮ ಕನ್ನಡ ಭಾಷೆಯಲ್ಲಿ ನಿಜವಾಗಿ ಪ್ರೀತಿಸುತ್ತ ಇದ್ದವರನ್ನು ಕೂಡ ಸಾಧಾರಣವಾಗಿ ಸಂಬೋಧಿಸುವುದಿಲ್ಲ. ನಟನೆಗಾಗಿ ಮಗು, ಪ್ರಿಯತಮೆ ಎಂದೆಲ್ಲಾ ಕರೆಯುವುದಿಲ್ಲ." ಎಂದೆ.

ಮಲಿಯಾಳಿ ಲಲಿತ ಕೂಡಲೆ ಜವಾಬಿತ್ತಳು. ನಮ್ಮ ಭಾಷೆಯಲ್ಲು ಅಷ್ಟೆ. ನಿನಗೆ ಮಲೆಯಾಳಂ ಗೊತ್ತಿದ್ದರೆ, ಅಥವಾ ನನಗೆ ಕನ್ನಡ ಗೊತ್ತಿದ್ದರೆ ನಾವೂ ನಮ್ಮ ಭಾಷೆಗಳಲ್ಲೆ ಮಾತನಾಡಬಹುದಿತ್ತು. ನಿಜವಾಗಿ ಇಂಗ್ಲೀಷ್ ಭಾಷೆಯೂ ಹಾಗೆನೇ ಇದೆ."

ರಸ್ತೆಯ ಸಾಲ್ಮರದ ತಂಪನ್ನು ಸವಿಯುತ್ತ ನಾನೆಂದೆ "ಜೋಗ್‌ನ ರಸ್ತೆಗಳೂ ಹೀಗೆ ತಂಪಾಗಿರುತ್ತವೆ. ನಿರ್ಜನವಾಗಿರುತ್ತವೆ. ಮನಸ್ಸಿನಲ್ಲಿ ಜೋಗ್‌ಗೆ ಹೋಗಿದ್ದೇವೆಂದು ಕಲ್ಪಿಸಿಕೊಳ್ಳಿರಿ."

"ಹೌದೇ ರತ್ನ, ಕನಸು ಕಾಣುತ್ತಿರುವೆಯೇ ನಿನಗೇನೋ ಸುಖ ತೋರಿತೆ?" ಪ್ರೇಮ ಕೇಳಿದಳು.

ತಂಪಿನ ನಿರ್ಜನ ರಸ್ತೆ ಕಳೆದು ರಸೆಲ್ ಮಾರ್ಕೆಟ ತಲುಪಿದೆವು. ಗೆಳತಿಯರು ನಗುನಗುತ್ತ ಸ್ವಲ್ಪ ವ್ಯಾಪಾರಮಾಡಿ ಮುಗಿಸಿದರು. ಹಾಸ್ಟಲ್‌ವಾಸಿಗಳು ಸಂಸಾರಸ್ಥರಂತೆ ತರಕಾರಿ ಕೊಳ್ಳಬೇಕೆಂದು ಪರಸ್ಪರ ಮಾತಾಡಿದ್ದನ್ನು ಕೇಳಿ ಆಶ್ಚರ್ಯವಾಯಿತು. ಪಾಪ ಅವತ್ತು ಅವರೆಲ್ಲ ಬರಿಯ ಮಜ್ಜಿಗೆಯನ್ನು ತಿಂದು ಹಪ್ಪಳ ನಂಜಿಕೊಂಡು ಮೇಲೆದ್ದಿದ್ದರಂತೆ! ರೋಸ್ ಸಹ ಅರಹೊಟ್ಟೆ ತಿಂದು ಮೇಲೆದ್ದಿದ್ದಳು. ಒಂದೇ ನೌಕೆಯ ಒಂದೇ ದರ್ಜೆಯ ಸಹಪ್ರಯಾಣಿಕರು, ನಾವೆಲ್ಲ. ಅದರಿಂದಲೇ ನಮ್ಮ ನಮ್ಮ ಮಧ್ಯೆ ಜಾತಿಮತ ಪ್ರಭಾವ ಬಹಳ ಕುಗ್ಗಿದೆ. ಹಸಿದ ಗೆಳತಿಯರ ಮನೆ ಅಂಗಡಿಗಳ. ದೀಪಾವಳಿಯ ವಿಶೇಷ ವೈಭವ ವೈಖರಿಗಳನ್ನು ಗಮನಿಸಲಿಲ್ಲ. ಅಲಂಕೃತ ಮಾರ್ವಾಡಿ ಅಂಗಡಿಗಳ ಚೆಲುವನ್ನಾಸ್ವಾದಿಸುತ್ತಾ ಅನ್ಯಮನಸ್ಕಳಾಗಿ ತಿರುಗುತ್ತಿದ್ದ ನನಗೆ ನಾವು ಹೋಟಲಿನ ಕಡೆ ಹೋಗುತ್ತಿರುವುದೇ ಗೊತ್ತಾಗಲಿಲ್ಲ. ಆನಂದ ಭವನದ ಬಾಗಿಲು ಮುಚ್ಚಿದೆ! ನಮಗೆ ದೀಪಾವಳಿಯ ಆನಂದವಿಲ್ಲವೆಂದ ಮಾತ್ರಕ್ಕೆ ಹೋಟಲನವರು ಮಜ ಮಾಡಬಾರದೇನು? ಯಾವುದೋ ಪಾಶ್ಚಿಮಾತ್ಯ ಭವನಕ್ಕೆ ಪ್ರವೇಶಿಸಿದೆವು. ಮನಸ್ಸಿನಲ್ಲಿ ಮಾರ್ಟಿನ್ ಜೊತೆ ನೀಲಗಿರಿಯ ಮಾಂಸಹಾರ ಮಂದಿರಕ್ಕೆ ಹೋದ ಕಲ್ಪನೆಮೂಡಿತು. ಅಲ್ಲೂ ಹೊತ್ತಲ್ಲದ ಹೊತ್ತೊಂದು ಕಾಫಿಯಿಲ್ಲವೆಂದು ಜವಾಬು ಬಂದಿತು. ನೀಲಗಿರಿಗೋ ಜೋಗಿಗೋ ಹೋಗಿ ಅಲ್ಲಿ ಕಾಫಿಯಿಲ್ಲದೆ ಅಲೆಯುವ ಕಲ್ಪನೆ ಮನದಲ್ಲಿಮೂಡಿ ನಗು ಹೊರಹೊಮ್ಮಿತು.

"ಏನು ರತ್ನ! ನೀನೊಬ್ಬಳು ಆನಂದದಿಂದ ಮಜಮಾಡುತ್ತಿದ್ದಿಯಾ?" ಪ್ರೇಮನ ಇನಿವಾತು! ಕಲ್ಪನೆಯ ಮುಗಿಲಲ್ಲಿ ತೇಲಾಡುತ್ತಿದ್ದ ನನ್ನ ಮನಸ್ಸಿನ ಭಾವನೆಗಳನ್ನು ಇಂಗ್ಲೀಷಿನಲ್ಲಿ ಬಿತ್ತರಿಸಲಾಗಿದೆ. ಮೌನತಾಳಿ ಮುನ್ನಡೆಯುತ್ತಿದ್ದೆ.

"'ಕಬ್ಬನ್'ಗೆ ಹೋಗಿ ಕಾಫಿ ಕುಡಿದು ಅಲ್ಲಿಂದ ಲಾಲ್‌ಬಾಗ್‌ಗೆ ಹೋಗೋಣ. ಏಕೆಂದರೆ ಹಸಿವು" ನಿರ್ಮಲನ ಕನ್ನಡದ ಇನಿವಾತು.

ಬಸ್ಸಿನಲ್ಲಿ ಒಂದಾಣೆ ಪ್ರಯಾಣಕ್ಕೆ ಎರಡಾಣೆ ದಂಡತೆತ್ತು ಕಬ್ಬನ್ ಪಾರ್ಕ ತಲಪಿದೆವು. ಕುಳಿತುಕೊಳ್ಳುವುದು ಬೇಡ. ಸುತ್ತಾಡೋಣ! ನಾನೆಂದೆ. ಚಿರಪರಿಚಿತ ಕಬ್ಬನ್ ಹೋಟೆಲ್ ಸದಾ ನಮಗಾಗಿಯೇ ಕಾದಿಟ್ಟ ಮೂಲೆಯ ಕಿಟಕಿಯ ಬಳಿಯ ಸ್ಥಳ. ಚಿರಪರಿಚಿತನಾದ ಮಾಣಿ. ನಿರ್ಮಲಾ ಮಸಾಲೆ ದೋಸೆಗೆ ಹೇಳಿದಳು. ಏನು ಹುಡುಗಿಯರು! ಹಬ್ಬದ ದಿನ ಸಿಹಿತಿಂಡಿಯನ್ನು ತರಿಸಿ ತಿನ್ನಬಾರದಿತ್ತೆ! ಆದರೆ ತಿಂಡಿಯ ಸಿಹಿ ಮನಸ್ಸಿನ ನೋವನ್ನು ಹೆಚ್ಚಿಸ ಬಹುದು. ಮನೆಯ ಸವಿನೆನಪು ನಲ್ಮೆಯ ತಾಯಿ ತಂದೆಗಳ ಆದರವನ್ನು ತೋರ ಬಹುದು. ಮೇಲೆ ನಗೆಯ ನಿಲುವಂಗಿ ತೊಟ್ಟಿದ್ದ ಗೆಳತಿಯರು ನಾವೆಲ್ಲ. ದೋಸೆ ಕಾಫಿ ತಂದಿಟ್ಟು ಭಕ್ಷೀಸ್ ಸ್ವೀಕರಿಸಿದ ಮಾಣಿ ಕೇಳಿಯೇ ಬಿಟ್ಟ. "ಸೊಗಸಾದ ಐಸ್‌ಕ್ರೀಮ್ ಇದೆ. ಪಾರ್ಟಿಮಾಡುವಿರೇನು?" ಹೊಟೆಲ್ ಅಂಗಳದಾಟಿ ಕೆಳ ಗಿಳಿದೆವೇ, ಅಸಾಧ್ಯ ಮಳೆ! ಒಂದು ಹೆಜ್ಜೆ ಮುಂದಿಡುವಷ್ಟರಲ್ಲಿ ಉಟ್ಟ ಬಟ್ಟೆಯೆಲ್ಲ ಒದ್ದೆಮುದ್ದೆಯಾಯಿತು. ಕೊಡಗಿನ ಕಲ್ಪನೆ ಮನದಲ್ಲಿ ಮಿಂಚಿತು. ಕಾಲಿನ ಚಪ್ಪಲಿಗಳನ್ನೆತ್ತಿ ತರಕಾರಿ ಕೊಳ್ಳಲು ತಂದಿದ್ದ ಚೀಲದಲ್ಲಿ ತುರುಕಿ ಎಲ್ಲರೂ ಬೀಸುಗಾಲು ಹಾಕಿ ಹೊರಟೆವು. ಯಾವುದೋ ಆಫೀಸಿನ ಮೂಲೆಯೊಂದರಲ್ಲಿ ಒಟ್ಟಾಗಿ ತಲೆ ಮರೆಸಿ ನಗು ನಗುತ್ತ ಮಾತನಾಡುತ್ತ ನಿಂತೆವು. ಮುಕ್ಕಾಲು ಘಂಟೆ ಬಿರುಮಳೆಹುಯ್ದು ಸಣ್ಣ ಹನಿ ತೊಟಗುಟ್ಟುವ ಸ್ಥಿತಿಗೆ ಬರುತ್ತಲು ನಿಂತ ಸ್ಥಳವನ್ನು ಬಿಟ್ಟು ಕುಳಿತುಕೊಳ್ಳುವ ಜಾಗಹುಡುಕಲು ಹೊರಟೆವು. ನೆನೆದ ಬಟ್ಟೆ ಒದ್ದೆತಲೆ, ಕೈಯಲ್ಲಿನ ಚೀಲದಲ್ಲಿ ಚಪ್ಪಲಿ, ಕುಂಕುಮವಿಲ್ಲದ ಹಣೆ! ಆದರೂ ಮುಖದ ನಗು ಮಾತ್ರ ಉಕ್ಕಿಹರಿಯುತ್ತಿದೆ. ಎಳೆಯ ಮಕ್ಕಳಂತೆ ಕೆಲೆಯುತ್ತಾ ಪಾರ್ಕೆಲ್ಲಾ ಅಲೆದೆವು. ಪ್ರಾಣಿಗಳು ತಂಗುವ ಜಾಗದಲ್ಲಿ ಮಳೆಯ ಹೊಡೆತಕ್ಕಾಗಿ ಹತ್ತು ನಿಮಿಷ ನಿಂತು ಅಲೆದಾಡಿ ಐದು ಘಂಟೆಗೆ ಐದು ನಿಮಿಷ ಇದೆ ಎನ್ನುವಾಗ ಮ್ಯೂಸಿಯಂನ ಬಳಿ ಹೋದೆವು. ಬಾಗಿಲಲ್ಲಿ ವೀರಗಲ್ಲು ಕಂಡು ಒಳಹೊಕ್ಕು ಕಾಯುವ ಆಳಿನೊಂದಿಗೆ ವಿನಯವಾಗಿ ಮಾತಾಡಿ ಒಳಕ್ಕೆ ಹೋದೆವು. ಶ್ರವಣಬೆಳ್ಗೊಳದ ಗೊಮ್ಮಟೇಶ್ವರನ ವಿಗ್ರಹದ ಚಿತ್ರ, ಶಿವಗಂಗ ದೇವಾಲಯದ ಚಿತ್ರ, ಜೋಗ್ ಜಲಪಾತದ ಚಿತ್ರ, ನೀಲಗಿರಿಯ ಚಿತ್ರಗಳನ್ನೆಲ್ಲಾ ನೋಡಿ ಶಿಲ್ಪ ಸ್ಮಾರಕಗಳ ಬಳಿ ಬಂದೆವು. ರೋಸ್ ಶಿಲಾಪ್ರತಿಮೆಯನ್ನು ನೋಡಿ ಮರದ ವಿಗ್ರಹ ವೆಂದು ಸಾಧಿಸಿ ನಮ್ಮೆಲ್ಲರನ್ನೂ ನಗಿಸಿದಳು. ಬೇಲೂರಿನ ಪ್ರಸಿದ್ಧ ಮದನಿಕಾ ವಿಗ್ರಹಗಳ ಚಿತ್ರವನ್ನು ಕಂಡು ಎಲ್ಲರೂ ಹೇಗಾದರೂ ಮಾಡಿ ಕ್ರಿಸ್ಮಸ್ ರಜದಲ್ಲಾ ದರೂ ಬೇಲೂರಿಗೆ ಹೋಗಿ ಬರೋಣವೆಂದುಕೊಳ್ಳುತ್ತಾ ಐದು ಘಂಟೆಗೆ ಸರಿ ಯಾಗಿ ಹೊರಬಂದೆವು. ಕುಂಭದ್ರೋಣ ಮಳೆ ಸುರಿಯುತ್ತಿದೆ! ಎಲ್ಲರೂ ನೆನೆದು ಒದ್ದೆ ಮುದ್ದೆಯಾಗಿ ಹೊರ ಕಿಟಕಿಯ ಕೈಸಾಲೆಯಲ್ಲಿ ನಿಂತೆವು. ಇಬ್ಬರು ನಿಲ್ಲುವ ಸ್ಥಳದಲ್ಲಿ ಐದು ಮಂದಿ ಹುಡುಗಿ ನಿಂತೆವು. ಹುಯ್ಲು ಬಂದಾಗ ಮಳೆಯ ಧಾರೆ

ತಲೆಭುಜಗಳ ಮೇಲೆ ರೊಯ್ಯನೆ ಬೀಳುತ್ತಿತ್ತು. ಚಳಿಯ ಗಡಗಡ ನಡುಗುವಿಕೆಗಿಂತ ನಮ್ಮ ಕಾಲೇಜಿನ ಹುಡುಗಿಯರು ಯಾರಾದರೂ ಎಲ್ಲಾದರೂ ಕಂಡಾರೆಂಬ ಅಳುಕು ಬಾಧಿಸುತ್ತಿತ್ತು. ಪಕ್ಕದ ಗೋಡೆಯ ಕೆಂಗಾವಿ ಬಣ್ಣ ನನ್ನ ಸೀರೆಗಂಟಿಕೊಂಡಿತು. ಪ್ರೇಮ ಅದನ್ನು ಕಂಡು ಕೈಚಾಚಿ ಮಳೆನೀರು ಹಿಡಿದುಕೊಟ್ಟು ಉಜ್ಜಿ ತೊಳೆಯಲು ಹೇಳಿದಳು. ಮನಸ್ಸು ಕೊಡಗಿನಲ್ಲಿ ವಿಹರಿಸುತ್ತಿತ್ತು. ಇತ್ತ ಹೊತ್ತಿಗೆ ಮಳೆ ಸ್ವಲ್ಪ ಕಡಿಮೆಯಾಯಿತು. ನಿಂತಲ್ಲಿಂದ ಹೊರಟು ರಸ್ತೆಗೆ ಬಂದು ಬಸ್‌ಗಾಗಿ ಕಾದು ನೆನೆಯುತ್ತಿದ್ದೆವು. ದೈವಕೃಪೆಯಿಂದ ಆರು ಘಂಟೆಗೆ ಬಸ್ ಬಂದು ನಾವೆಲ್ಲ ಹತ್ತಿಕುಳಿತೆವು. ರಸಲ್‌ಮಾರ್ಕೆಟ್ಟಿನಲ್ಲಿ ಬಸ್ ಇಳಿದು ಬೇರೆ ಬಸ್ಸನ್ನು ಹತ್ತಿ ಹಾಸ್ಟಲ್ಲಿನ ಬಳಿ ಗೆಳತಿಯರು ಇಳಿದರು. ಅಲ್ಲಿಂದ ಮುಂದೆ ಸರ್ಕಲ್ಲಿನಲ್ಲಿಳಿದು ನಾನು ಮನೆತಲಪಿದೆ.

ಮನೆಯಲ್ಲಿ ತಾಯಿಕೊಟ್ಟ ಕಾಫಿ ಕುಡಿಯುತ್ತಾ ತಲೆಗೆ ಟವಲ್ ಕಟ್ಟಿಕೊಂಡು "ಸ್ವರ್ಣದೀಪಾವಳಿಯ ಸಂಚಾರಕ್ಕೆ ಹೋಗಿದ್ದೆ. ಜೋಗ್ ಕೊಡಗು, ನೀಲಗಿರಿ, ಬೇಲೂರು, ಶ್ರವಣಬೆಳ್ಗೊಳ ಶಿವಗಂಗ ಎಲ್ಲ ಕಂಡು ಬಂದೆ. ಮತ್ತೆ ಲಾಲ್‌ಬಾಗ್‌ಗೆ ಕೂಡ ಹೋಗಿದ್ದೆನಮ್ಮಾ!" ಎಂದೆ. ಮನಸ್ಸು ಹಾಸ್ಟಲ್ಲಿನಲ್ಲಿತ್ತು.



# ವನಿತಾ-ಸೇವಾ-ಸಮಾಜ, ಧಾರವಾಡ.

"ಧಾರವಾಡದಲ್ಲಿ ವನಿತಾಸೇವಾಸಮಾಜ" ಎಂಬುದೊಂದು ಸಂಸ್ಥೆಯಿದೆ. ಇಸ್ವಿ ಸನ್ ೧೯೨೮ರಲ್ಲಿ ಶ್ರೀಮತಿ ಭಾಗೀರಥಿಬಾಯಿ ಪುರಾಣಿಕ ಎಂಬ ಒಬ್ಬ ವಿಧವಾ ಸ್ತ್ರೀಯು ತಮ್ಮ ಸ್ವಂತ ಜಮೀನು ಮುಂತಾದ ಸರ್ವಸಂಪತ್ತನ್ನು ಅರ್ಪಿಸಿ, ಈ ಸಂಸ್ಥೆಯನ್ನು ಏರ್ಪಡಿಸಿ, ಸ್ತ್ರೀಸಮಾಜದ ಉನ್ನತಿಯ ಕಾರ್ಯವನ್ನು ಪ್ರಾರಂಭ ಮಾಡಿದ್ದಾರೆ. ಅನಾಥ ಸ್ತ್ರೀಯರಿಗೆ ಆಶ್ರಯಕೊಡುವಂಥ ಈ ಸಂಸ್ಥೆಯು ೪೦ ಜನ ಸ್ತ್ರೀಯರನ್ನು ಇಂದಿನ ಮಿತಿಗೆ ಸಂರಕ್ಷಿಸುತ್ತಾ ಇದೆ. ಈ ಹೆಣ್ಣುಮಕ್ಕಳಿಗೆ ವನಿತಾ ಸೇವಾ ಸಮಾಜವು ತಾಯಿ ಇದ್ದಂತೆ ಇದೆ. ಈ ವಿದ್ಯಾರ್ಥಿನಿಯರಿಗೆ ೭ ನೆಯ ಇಯತ್ತೆಯ ವರೆಗೆ ಶಿಕ್ಷಣವು ದೊರೆಯುತ್ತದೆ. ಇದಲ್ಲದೆ ಹೊಲಿಗೆ, ಕೈಮಗ್ಗದ ಮೇಲೆ ನೆಯ್ಯುವುದು, ನೂಲುವದು ಮುಂತಾದ ನಾನಾ ಪ್ರಕಾರದ ಕೈಗಾರಿಕೆಗಳ ಶಿಕ್ಷಣವು ಇವರಿಗೆ ಪ್ರಾಪ್ತವಾಗುತ್ತದೆ. ಇವಲ್ಲದೆ ವ್ಯಾಯಾಮ ಶಿಕ್ಷಣ, ಸಂಗೀತ ಶಿಕ್ಷಣಗಳೂ ಇವೆ. ಈ ಹೆಣ್ಣುಮಕ್ಕಳು ಸ್ವಾವಲಂಬನದಿಂದಲೂ ಸಹಕಾರದಿಂದಲೂ ಸ್ವತಃ ಬೀಸುತ್ತಾರೆ, ಅಡಿಗೆಯನ್ನು ಮಾಡುತ್ತಾರೆ, ಪಾತ್ರೆಗಳನ್ನು ತಿಕ್ಕುತ್ತಾರೆ, ಕಸ ಉಡುಗುತ್ತಾರೆ, ಹೂವು, ತುಳಸಿ ಹಣ್ಣುಹಂಪಲಗಳ ಕೈತೋಟಗಳಿಗೂ, ಪಲ್ಲೆ, ಕಾಯಿಗಳ ಕೈತೋಟಗಳಿಗೂ ನೀರನ್ನು ಸಮೃದ್ಧಿಯಾಗಿ ಉಣಿಸಿ, ಅವು ಫಲವತ್ತಾಗುವಂತೆ ಮಾಡುತ್ತಾರೆ. ಈ ಸಂಸ್ಥೆಯಲ್ಲಿ ಹೆರಿಗೆಯ ಆಸ್ಪತ್ರೆಯು ಇದ್ದುದರಿಂದ ಈ ವಿದ್ಯಾರ್ಥಿನಿಯರಿಗೆ ನರ್ಸಿಂಗದ ಶಿಕ್ಷಣವೂ ದೊರೆಯುತ್ತದೆ. ಈ ಸಂಸ್ಥೆಗೆ ಪ್ರತಿ ತಿಂಗಳಿಗೆ ೨ ಸಾವಿರ ರೂ. ಗಳ ವೆಚ್ಚವಿದೆ. ಈ ಸಂಸ್ಥೆಯ ಶಾಲೆಯಲ್ಲಿಯೂ ಕೈಗಾರಿಕೆಯ ವರ್ಗದಲ್ಲಿಯೂ ಧಾರವಾಡ ಊರೊಳಗಿನ ಇನ್ನೂರು ವಿದ್ಯಾರ್ಥಿನಿಯರು ಬರುತ್ತಾರೆ.

ನಿಂದಾ, ಉಪಹಾಸ, ಟೀಕಾ ಸಹಿಸಿಕೊಂಡು, ೬೩ ವರ್ಷ ವಯಸ್ಸಿನ ಶ್ರೀ ಭಾಗೀರಥಿಬಾಯಿಯವರು ಈ ಸಂಸ್ಥೆಯನ್ನು ಚೆನ್ನಾಗಿ ನಡೆಸುತ್ತಿದ್ದಾರೆ. ಅವರ ದತ್ತಕ ಮಗನಾದ ಶ್ರೀ ಎಲ್. ಆರ್. ಪುರಾಣಿಕ ಇವರೂ ಈ ಸಂಸ್ಥೆಯ ಸೇವೆಯನ್ನು ಆಸ್ಥಾಪೂರ್ವಕವಾಗಿಯೂ ನಿರಪೇಕ್ಷ ಬುದ್ಧಿಯಿಂದಲೂ ಉತ್ತಮ ರೀತಿಯಿಂದ ಮಾಡುತ್ತಿದ್ದಾರೆ.

ಧಾರವಾಡದಲ್ಲಿ ಶ್ರೀ ಪರಮೇಶ್ವರನು ಈ ವನಿತಾ ಸೇವಾ ಸಮಾಜದಲ್ಲಿ ಮಾತ್ರ ಇದ್ದಾನೆಂದು ನಾನು ತಿಳಿಯುತ್ತೇನೆ.

**ಸಾನೆ ಗುರೂಜಿ**

( ಮುಂಬಯಿ 'ಸಾಧನಾ' ಸಾಪ್ತಾಹಿಕ ૩ ನೆಯ ಜೂನ ೧೯೫೦. )

---

# ಸ್ತ್ರೀಯರ ಮೇಲೆ ಅತ್ಯಾಚಾರ

ಮೂಲ ಲೇಖಕರು:— ಶ್ರೀ ಕಿಶೋರಲಾಲ ಮಶ್ರೂವಾಲಾ
ಅನುವಾದಕಿ:— ಎಚ್. ಸುಶೀಲಾದೇವಿ, ಧಾರವಾಡ.

ಇದನ್ನೆಲ್ಲ ನೋಡಲಾಗಿ ಭಾರತೀಯರಲ್ಲಿಯೇ ಇಂಥ ಕೃತ್ಯಗಳನ್ನೆಸಗುವ ಪಾಪ ತುಂಬಿದೆಯೆಂಬುದನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ. 'ದುಃಶಾಸನ' ವೆಂಬ ಹೆಸರು ಯಾವುದೊಂದು ವಿಶಿಷ್ಟ ವ್ಯಕ್ತಿಯದಾಗಿರದೆ, ನಮ್ಮ ದೇಶದಲ್ಲಿ ಅಖಂಡವಾಗಿ ನಡೆದು ಬಂದ ಅತ್ಯಾಚಾರಗಳಿಗೆ ಕಾರಣರಾದ ನೀಚ ರಾಜಸೇವಕರ ಸಾಮಾನ್ಯ ಹೆಸರಾಗಿ ಮೆರೆಯುತ್ತಿದೆ !

ಐದುಸಾವಿರ ವರುಷಗಳ ಹಿಂದೆ ಯುಧಿಷ್ಠಿರನು ಕೌರವರ ಸಂಗಡ ಜೂಜಾಡಿ, ಜೂಜಿನಲ್ಲಿ ದ್ರೌಪದಿಯನ್ನು ಪಣಕ್ಕೆ ಹಚ್ಚುವ ಪಾಪಮಾಡಿದನು. ಜೂಜಿನಲ್ಲಿ ಧರ್ಮರಾಜ ಸೋತ; ದುಶ್ಯಾಸನನು ರಜಸ್ವಲೆಯಾಗಿದ್ದ ದ್ರೌಪದಿಯನ್ನು ತುಂಬಿದ ಸಭೆಗೆ ಎಳೆತಂದು, ವೀರಪುತ್ರರೆಂದು ಹೇಳಿಸಿಕೊಳ್ಳುವ ಐವರು ಪತಿಗಳ ಎದುರಿನಲ್ಲಿ ಜ್ಞಾನವೃದ್ಧರೂ, ವಯೋವೃದ್ಧರೂ ಆದ ಭೀಷ್ಮ ಪಿತಾಮಹರು ನೋಡುತ್ತಿರಲು, ಮಾವನಂಥ ಧೃತರಾಷ್ಟ್ರ ಹಾಗೂ ಅನೇಕ ರಾಜಮಹಾರಾಜರುಗಳ ಸಮ್ಮುಖದಲ್ಲಿ ಅವಳ ಮಾನಹರಣದ ಪ್ರಯತ್ನಮಾಡಿದನು. ದ್ರೌಪದಿಯು, ದೊಡ್ಡವರೂ ಹಿರಿಯರೂ ಹಾಗೂ ಸಭೆಯಲ್ಲಿ ನೆರೆದ ಸಭ್ಯರೂ ಆದವರಿಗೆ ನ್ಯಾಯ ಕೇಳಿದಳು. ತಿಳಿದವರನೇಕರು ಗೊಂದಲದಲ್ಲಿ ಬಿದ್ದು ನ್ಯಾಯದಾನಕ್ಕಸಮರ್ಥರಾದರು. ಅಷ್ಟೇಅಲ್ಲ, ಇಂಥ ಕೃತಿಗೆ ಪರಿಹಾರವಿಲ್ಲದೇಹೋದರೆ ಯಾವುದೇ ಸ್ತ್ರೀಯ—ತಮ್ಮ ಸ್ವಂತ ಹೆಂಡತಿಯ—ಮಾನಭಂಗವು ಹೀಗೆ ತುಂಬಿದ ಸಭೆಯಲ್ಲಿ ನಡೆಯದೇ ಹೋಗದೆಂಬದೂ ಹೊಳೆಯದೇ ಹೋಯಿತು. ಐದೂಜನ ಪಾಂಡವರು ಲಜ್ಜಿತರಾಗಿ ತಮ್ಮ ಎಲ್ಲ ಶಕ್ತಿಯನ್ನು ಕಳೆದುಕೊಂಡಿದ್ದರೆನ್ನೋಣ. ಅದಕ್ಕಾಗಿ ಅವರ ಪ್ರತೀಕಾರದ ಮಾತನ್ನೂ ಬಿಟ್ಟುಬಿಡೋಣ. ಆದರೆ ಇನ್ನುಳಿದ ಕ್ಷತ್ರಿಯರಲ್ಲಿ, ವೃದ್ಧರಾದ ಭೀಷ್ಮರಿಗೆ ಅಥವಾ ಇನ್ನಾರಾದರೂ ವೀರರಿಗೆ ಸಹಜವಾದ ಕ್ಷತ್ರಿಯ ಧರ್ಮವೂ ಪ್ರೇರಕವಾಗದೇ ಹೋಗಬೇಕೆ? ದ್ರೌಪದಿಯು ದಾಸಿಯಾದರೇನಾಯಿತು, ಅವಳ ಮೇಲೆ ನಡೆದ ಅತ್ಯಾಚಾರವನ್ನಾದರೂ ತಡೆಯಬೇಕೆಂಬುದು ತಿಳಿಯದೆ ಹೋಯಿತೆ ? ಅಲ್ಲಿ ನೆರೆದ ಕ್ಷತ್ರಿಯ ವೀರರೆಲ್ಲರೂ ಅಹಿಂಸಾವ್ರತದ ಪೂಜಾರಿಗಳೇನಿರಲಿಲ್ಲ. ಅವರು ಇಷ್ಟ ಪಟ್ಟರೆ ದುಶ್ಯಾಸನನ ಕೈಗಳನ್ನು ಕತ್ತರಿಸಿ ಚೆಲ್ಲಿ ದ್ರೌಪದಿಯ ಮಾನಹರಣವನ್ನು ತಪ್ಪಿಸಬಹುದಾಗಿದ್ದಿತು. ಆದರೆ ಅಂಥದೇನೂ ನಡೆಯಲಿಲ್ಲ. ಇಡೀ ಸಭೆಯಲ್ಲಿ ಕೇವಲ ಇಬ್ಬರೇ ಇಬ್ಬರು ದ್ರೌಪದಿಯ ಪಕ್ಷವಹಿಸಿ ಮಾತನಾಡಲು

ಧೈರ್ಯಮಾಡಿದರು. ಅವರಲ್ಲಿ ಒಬ್ಬರು ವಿದುರ, ಇನ್ನೊಬ್ಬರು ದುರ್ಯೋಧನನ ಚಿಕ್ಕ ತಮ್ಮ! ಅವರೇನೋ ಅಲ್ಲಿ ನಡೆದ ದುಷ್ಕೃತ್ಯಕ್ಕೆ ವಿರೋಧವಾಗಿ ಧ್ವನಿತೆಗೆದರು. ಅದನ್ನಾರೂ ಲಕ್ಷಿಸಲಿಲ್ಲ. ಅವರು ದಾಸೀಪುತ್ರರಿದ್ದರು.

ಹೀಗೆ ದ್ರೌಪದಿಯ ಕಥೆಯು, ಜಗತ್ತಿನ ಇನ್ನಾವ ಇತಿಹಾಸ ಅಥವಾ ಪುರಾಣಗಳಲ್ಲಿ ದೊರೆಯುವದಿಲ್ಲ. ಮಹಾಭಾರತದಲ್ಲಿ ವ್ಯಾಸಮಹರ್ಷಿಗಳು ಇಂಥ ಚಿತ್ರವನ್ನು ಬಣ್ಣಿಸಿದ್ದಾರೆ.

ಐದುಸಾವಿರ ವರ್ಷಗಳಿಂದ ಈ ಕಥೆಯನ್ನು ನಾವು ಕೇಳುತ್ತಬಂದಿದ್ದೇವೆ. ಆದರೂ ಅದು ಇನ್ನೂ ನಮಗೆ ಹಳೆಯ ಕಥೆಯಾಗಿಲ್ಲ. ವ್ಯಾಸರಿಂದ ವರ್ಣಿತವಾದ ಕರುಣ ಕಥೆಯನ್ನು ಎಷ್ಟುಸಲ ಕೇಳುವೆವೊ, ಅಷ್ಟುಸಲ ನಾವು ಕಣ್ಣೀರು ಹಾಕುತ್ತೇವೆ. ಆದರೆ ವ್ಯಾಸರು ಇಂಥ ಕಥೆಯನ್ನೇಕೆ ರಚಿಸಿದ್ದಾರೆ? ಕೌರವರು ಪಾಂಡವರ ವೈರಿಗಳಾಗಿರಬಹುದು. ಆದರೆ ಆರ್ಯರಂತೂ ಇದ್ದರಷ್ಟೇ? ವ್ಯಾಸರು ದುರ್ಯೋಧನನನ್ನು ರಾಜನನ್ನಾಗಿ ಬಣ್ಣಿಸುವಾಗ ಯಾವ ಕೊರತೆಯನ್ನೂ ತೋರಿಸಿಲ್ಲ. ಆದರೂ ಕ್ಷತ್ರಿಯ ಧರ್ಮವನ್ನರಿತವನಾದ ಓರ್ವ ಆರ್ಯಪುತ್ರನ ಕೈಯಿಂದ, ಜ್ಞಾನಿಗಳೆಂದು ಹೇಳಿಸಿಕೊಳ್ಳುವ ವೃದ್ಧರ ಸಮ್ಮುಖದಲ್ಲಿ ಇಂಥ ಒಂದು ಪಾಪಕರ್ಮ ಘಟಿಸಿತು ಎಂಬುದಾಗಿ ವ್ಯಾಸರು ಹೇಗೆ ಬಣ್ಣಿಸಿದರೋ! ಯಾಕೆ ಬಣ್ಣಿಸಿದರೋ! ಪ್ರಶ್ನೆಗಳನ್ನು ಚಿಂತಿಸುವಾಗ ವ್ಯಾಸರಿಗೂ ಕೂಡ ನಡೆದ ಸತ್ಯ ಚಿತ್ರವನ್ನು ಚಿತ್ರಿಸುವಾಗ ನಾಚಿಕೆ ಬಂದಿರಬೇಕೆನಿಸುತ್ತಿದೆ. ಇಂಥ ಕರುಣ ಪ್ರಸಂಗವನ್ನು ಕೊನೆಯವರೆಗೂ ಬಣ್ಣಿಸುತ್ತ ಬಂದರೂ ದ್ರೌಪದಿಯ ಮಾನಭಂಗದ ಪೂರ್ಣ ಚಿತ್ರ ಕೊಡದೇ, ನಮ್ಮ ಸುಕೋಮಲ ಭಾವನೆಗಳಿಗೆ ತೀವ್ರ ಆಘಾತವಾಗುವದನ್ನು ತಡೆದಿದ್ದಾರೆ. ದ್ರೌಪದಿಯ ಮಾನಧನದ ಸುಲಿಗೆ ನಡೆಯುವ ಪೂರ್ವದಲ್ಲಿಯೇ ಅವಳನ್ನು ರಕ್ಷಿಸಿ ನಮ್ಮ ಒಳಮನದ ನೋವು, ನಂಜಾಗದಂತೆ ತಡೆದಿದ್ದಾರೆ.

ದ್ರೌಪದಿಯ ಈ ಕಥೆಯು ನಮಗೆ ಯಕ್ಷಕಿನ್ನರರ ಕಥೆಗಳಂತೆ ಕಾಲ್ಪನಿಕವೆನ್ನಿಸುತ್ತಿದೇಯೇ? ಮಹಾಭಾರತದ ಕಥೆಗಳನ್ನಾಯ್ದು ಅನೇಕ ಕವಿಗಳು, ಕಾವ್ಯಗಳನ್ನೋ, ನಾಟಕಗಳನ್ನೋ, ಕಥೆಗಳನ್ನೋ ರಚಿಸಿದ್ದಾರೆ. ಆವುಗಳಲ್ಲಿ ಮಹಾಭಾರತದ ಕಥೆಗಳನ್ನು ಬೇಕು ಬೇಕಾದಂತೆ ತಿರುವು ಮುರುವುಮಾಡಿದ್ದಾರೆ. ವ್ಯಾಸರಿಂದ ಚಿತ್ರಿತವಾದ ಪಾತ್ರಗಳ ಚರಿತ್ರವನ್ನು ವಿರುದ್ಧ ಅರ್ಥವಾಗುವಂತೆ ಮುಂದಿನ ಕವಿಗಳು ಬರೆದಿದ್ದಾರೆ. ಉದಾಹರಣಾರ್ಥವಾಗಿ, ಕಾಲಿದಾಸನಂತಹ ಕವಿಯು ಮಹಾಭಾರತದ ಶಕುಂತಲೆಯನ್ನು ತನ್ನ ನಾಟಕದ ಮುಖ್ಯ ಪಾತ್ರವನ್ನಾಗಿ ತೆಗೆದುಕೊಂಡದ್ದನ್ನು ನೋಡಿದರೆ, ವ್ಯಾಸರ ಶಕುಂತಲೆಗೂ ಕಾಲಿದಾಸನ ಶಕುಂತಲೆಗೂ ಮಹದಂತರ ಕಂಡುಬರುವದು. ಆದರೆ ಈ ದ್ರೌಪದೀವಸ್ತ್ರಹರಣದ ಕಥೆಯನ್ನು ಯಾವ ಕವಿಯೂ ಬೇರೆ ರೀತಿಯಲ್ಲಿ ಚಿತ್ರಿಸಿದಂತಿಲ್ಲ. ಸಾಹಿತ್ಯದಲ್ಲಿ ಹೀಗಾಗುವದು ತೀರ ಕಡಿಮೆ. ಇಂಥ ಘಟನೆಗಳ ಪರಿಚಯವು ಪ್ರಜೆಗಳಿಗೆ ಸಾಕಷ್ಟಿದ್ದಾಗ ಮಾತ್ರ ಹೀಗಾಗುತ್ತಿರುತ್ತದೆ.

ವ್ಯಾಸರು ಈ ದ್ರೌಪದೀವಸ್ತ್ರಹರಣದ ಕಥೆಯನ್ನು ಕಲ್ಪನೆಗೆ ನಿಲುಕದಂತಹ ಅತ್ಯಾಚಾರದ ಘಟನೆಯನ್ನಾಗಿ ಚಿತ್ರಿಸಿಲ್ಲವೆಂದು ನನಗನಿಸುತ್ತದೆ. ಆದರೆ ಅವರು ಚಿತ್ರಿಸಿದುದರಲ್ಲಿ ತಮ್ಮ ಕಾಲದ ದುಷ್ಟರಾಜ್ಯಗಳಲ್ಲಿ ನಡೆಯುವ ನಿಜ ಘಟನೆಗಳ ಮನೋವೇಧಕ ವರ್ಣನೆ ಇದೆ ಎಂಬುವದು ನಿರ್ವಿವಾದ.

ಬಡಪ್ರಜೆಗಳ ಹೆಣ್ಣುಮಕ್ಕಳ ಹಾಗೂ ಸೋತಂತಹ ವೈರಿಗಳ ಸ್ತ್ರೀಯರ ಈ ಬಗೆಯ ಬಹಿರಂಗ ಮಾನಧನವನ್ನು ಸುಲಿಯುವ ಪಾಪಕಾರ್ಯವು ನಮ್ಮ ದೇಶದಲ್ಲಿ ಬಹಳ ಹಿಂದಿನಿಂದಲೇ ನಡೆದುಬಂದಿದೆ ಎಂದು ನನಗನಿಸುತ್ತದೆ.

ಪಂಜಾಬದ ಅತ್ಯಾಚಾರದ ಕಾಲಕ್ಕೆ ನಡೆದ ಇಂಥ ಅತ್ಯಾಚಾರಗಳ ಘಟನೆಗಳ ವರದಿಮಾಡಲ್ಪಟ್ಟಾಗ, ನಮ್ಮಲ್ಲಿಯ ಅನೇಕರಿಗೆ ಇದು ಏನೋ "ನ ಭೂತೋ ನ ಭವಿಷ್ಯತಿ" ನಡೆಯಿತೆಂದೆನಿಸಿತು. ಆದರಿಂದ ತೀವ್ರ ಆಘಾತವೂ ತಟ್ಟಿದಂತಾಯಿತು. ಕೆಲವರುಷಗಳ ಹಿಂದೆ ಮಹಾತ್ಮಾಗಾಂಧಿಯವರು ಒಪ್ಪಂದಪಾಲನೆಯ ವಿಷಯದಲ್ಲಿ ಸರಕಾರಕ್ಕೆ ಬರೆದ ಪ್ರತಿಭಟನೆಯ ಪತ್ರದಲ್ಲಿ ಇಂಥ ಘಟನೆಗಳ ಉಲ್ಲೇಖಮಾಡಿದ್ದನ್ನು ಕಂಡು ಹೃದಯ ಕಂಪಿಸಿತ್ತು. ಆದರೆ ಪತ್ರಿಕೆಗಳಲ್ಲಿ ಪ್ರಕಟನೆಗೊಂಡ ಸಂಗತಿಗಳು ಮಾತ್ರ ನಮ್ಮೆದುರು ಬಂದವೆಂಬದನ್ನು ಮರೆಯಬಾರದು. ಇದರಿಂದ ಇಂಥ ಅತ್ಯಾಚಾರಗಳು ಎಂದಾದರೊಂದು ದಿನ, ಅಥವಾ ಅತಿ ನೀಚ ಜನರಿಂದ ಮಾತ್ರ ನಡೆಯುತ್ತವೆಂದು ತಿಳಿಯುವ ಕಾರಣವೂ ಇಲ್ಲ.

ನಿಜವಾಗಿ ಹೇಳಬೇಕೆಂದರೆ ದ್ರೌಪದೀವಸ್ತ್ರಹರಣದಂತಹ ಸ್ತ್ರೀ–ಮಾನಹರಣಗಳ ವಿಷಯವಾಗಿ ವ್ಯಾಸರು ಬರೆದಂದಿನಿಂದ ಇಂದಿನವರೆಗೂ ಅಂಥ ಕೃತ್ಯವು ಒಂದಿಲ್ಲೊಂದು ರೀತಿಯಿಂದ ನಡೆಯುತ್ತ ಬಂದಿದೆ ದುಶ್ಯಾಸನವೆಂಬ ಹೆಸರು ಯಾವುದೊಂದು ವಿಶಿಷ್ಟವ್ಯಕ್ತಿಯದಾಗಿರದೆ, ನಮ್ಮ ದೇಶದಲ್ಲಿ ಅಖಂಡವಾಗಿ ನಡೆದು ಬಂದ ಅತ್ಯಾಚಾರಗಳಿಗೆ ಕಾರಣರಾದ ನೀಚ ರಾಜಸೇವಕರ ಸಾಮಾನ್ಯ ಹೆಸರಾಗಿ ಅದು ಮೆರೆಯುತ್ತಿದೆ.

ಬ್ರಿಟಿಷರ ರಾಜ್ಯದ ವಿಷಯವಾಗಿ ನನ್ನಲ್ಲಿ ಯಾವ ಭಾವನೆ ಇದ್ದರೂ ನನ್ನ ದೇಶಬಾಂಧವರು ಭೀತಿಯ ವಾತಾವರಣದಲ್ಲಿರುವದು ನನಗೆ ಸೇರುವದಿಲ್ಲ. ಸ್ತ್ರೀಯರ ಮೇಲೆ ನಡೆದ ಅನಂತ ಅತ್ಯಾಚಾರಗಳಿಗೆ ಪರಕೀಯ ಸತ್ತೆಮಾತ್ರ ಕಾರಣವಿತ್ತೆಂದು ನಾವು ತಿಳಿಯುವಕಾರಣವಿಲ್ಲ. ಇದು ಮುಸಲ್ಮಾನೀ ರಾಜ್ಯ ಕಾಲದ ಘಟನೆ ಎಂದೂ ತಿಳಿಯುವ ಕಾರಣವಿಲ್ಲ. ನಮ್ಮ ನಾರಿಯರ ಮೇಲೆ ಅನೇಕರ ಸಮ್ಮುಖದಲ್ಲಿಯೇ ಆಗಲಿ, ಹೃದಯ ನಡುಗಿಸಿಬಿಡುವಂತೆ ಬತ್ತಲೆ ದೇಹದ ಮೇಲೆ ಬಾರಕೋಲನೆತ್ತುವದನ್ನಾಗಲೀ ನಮ್ಮವರದೇ ಸಹಾಯವಿಲ್ಲದೆ ಪರಕೀಯ ಸತ್ತೆಯು ಕೈಕೊಳ್ಳುವ ಧೈರ್ಯಮಾಡಬಹುದಿತ್ತೇ ?

ಇದನ್ನೆಲ್ಲ ನೋಡಲಾಗಿ ಭಾರತೀಯರಲ್ಲಿಯೇ ಇಂಥ ಕೃತ್ಯಗಳನ್ನೆಸಗುವ ಪಾಪತುಂಬಿದೆ ಎಂಬದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಒಂದುಬದಿಯಿಂದ

ಇಂಥ ಅತ್ಯಾಚಾರಗಳನ್ನೂ ನಡಿಸುವಂತಹ ಹೀನ ಸ್ಥಿತಿಗೆ ನಮ್ಮ ಪ್ರಜಾಕೋಟಿ ಇಳಿಯಿತೆಂಬ ವಿಷಯಕ್ಕೆ ಅನುಕಂಪವೆನಿಸಿದರೆ, ಇನ್ನೊಂದು ಬದಿಯಿಂದ ಇಂಥ ಅತ್ಯಾಚಾರವನ್ನು ಮಾಡುವಷ್ಟು ಪಶುವೃತ್ತಿಗಿಳಿಯಲು ಇನ್ನೂ ಪುರುಷಜಾತಿಗೆ ಹೇಗೆ ಸಾಧ್ಯವಾಗುತ್ತಿದೆ ಎಂಬದಕ್ಕೆ ನಾಚಿ ತಲೆಬಗ್ಗಿಸುವಂತಾಗುತ್ತಿದೆ.

ಸುದೈವಕ್ಕೆ ನಮ್ಮವರೇ ಆದ ವ್ಯಾಸರು ನಮ್ಮವರೇ ಆದ ಕೌರವ ಪಾಂಡವರ ಮುಖಾಂತರವಾಗಿ ಇಂಥ ಅತ್ಯಾಚಾರಗಳ ವಿಷಯವಾಗಿ ತಮ್ಮ ಧ್ವನಿಎತ್ತಿದ್ದಾರೆ. ಆದರೆ ಇಂದಿಗೂ ಅಂಥ ಅತ್ಯಾಚಾರಗಳನ್ನು ಅಶಕ್ಯಗೊಳಿಸುವಷ್ಟು ಸಂಸ್ಕಾರೀಮನವನ್ನು ಪಡೆಯಲು ನಾವು ಇನ್ನೂ ಸಮರ್ಥರಾಗಿಲ್ಲ. ನ್ಯಾಯಬುದ್ಧಿಯಿಂದ ಹಾಗೂ ಶಾಂತಿಯಿಂದ ನಾವು ವಿಚಾರ ಮಾಡಿದ್ದೇ ಆದರೆ ಈ ಕಥನದ ನಿಜ ಮಾತನ್ನು ಸಾಕ್ಷೀಭೂತವಾಗಿ ಬೇಕಾದಷ್ಟು ತೆಗೆದುಕೊಳ್ಳಬಹುದಾಗಿದೆ. ನರಪಿಶಾಚಿಗಳಾದ ಅತ್ಯಾಚಾರೀರಾಜರುಗಳು ನಮ್ಮಲ್ಲಿ ಆಳಿಹೋದ ಬಗ್ಗೆ ಆಶ್ಚರ್ಯವಾಗಿಲ್ಲ. ಶಿವಾಜಿಯ ಚರಿತ್ರವನ್ನು ಎಚ್ಚರದಿಂದ ಬರೆಯುವಾಗ ಮಾತ್ರ ಆಶ್ಚರ್ಯವಾಗುತ್ತದೆ. ಪರಸ್ತ್ರೀಯು ಮಾತೆಯು ಸಮಾನವೆಂಬ ಮಾತು ರಾಜಧರ್ಮದಲ್ಲಿ ಸಮಾವೇಶವಾಗಿದ್ದರೆ ಸುಲಿಗೆಯಲ್ಲಿ ದೊರೆತ ಕನ್ಯೆಯನ್ನು ಕಾಣಿಕೆ ಎಂದು ಶಿವಾಜಿಯ ಎದುರು ನಿಲ್ಲಿಸುವ ಧೈರ್ಯವೇ ಆಗುತ್ತಿರಲಿಲ್ಲ. ಶಿವಾಜಿಯು ಸನ್ಮಾನಪೂರ್ವಕವಾಗಿ ಅವಳನ್ನು ಬೀಳ್ಕೊಟ್ಟದ್ದಕ್ಕೆ ಅವನ ಅನುಯಾಯಿಗಳಿಗೆ ಆಶ್ಚರ್ಯವಾಯಿತು. ಇದರಿಂದಲೇ ಅಂದಿನ ರಾಜರು ತಮ್ಮ ಪ್ರಜರ ಹೆಂಡಂದಿರ ಸಂಗಡ ಹೇಗೆ ನಡೆಯುತ್ತಲಿದ್ದರೆಂಬದನ್ನು ನಾವು ತರ್ಕಿಸಬಹುದು.

ಇನ್ನೊಂದು ಸಾಕ್ಷಿಎಂದರೆ ನಮ್ಮ ದೇಶದ ವಿಷಯವಾಗಿ ತುಚ್ಛತೆ ಬೆಳೆದು ಬರುವಂತಿರುವ ಅಶ್ಲೀಲಬೈಗಳು! ಸಭ್ಯನಾಗರಿಕರ ಕಿವಿಯ ತಂತುಗಳು ಹರಿದು ಬೀಳುವಂತಹ ಅಶ್ಲೀಲ ಹಾಗೂ ಹೇಸಿಬೈಗಳು ನಮ್ಮಲ್ಲಿವೆ. ಅವು ಅಷ್ಟಿಷ್ಟಲ್ಲ! ನಮ್ಮ ತಲೆಯು ನಾಚಿಕೆಯಿಂದ ಬಗ್ಗಿ ಹೋಗುವಷ್ಟು ಭಾರವಾದ ಶಬ್ದಭಾಂಡಾರ ನಮ್ಮಲ್ಲಿದೆ!

ಭಾರತವು ಸ್ವಾತಂತ್ರ್ಯ ಪಡೆದ ಕ್ಷಣದಲ್ಲಿಯೇ ಹಿಂದೂ, ಸೀಖ, ಮುಸಲ್ಮಾನರಲ್ಲಿ ಯಾರೂ ಹಿಂದುಳಿಯದೇ ಪರಂಪರೆಯನ್ನು ಈ ವಿಷಯದಲ್ಲಿ ಮುಂದುವರಿಸಿದ ಪ್ರತ್ಯಕ್ಷ ಪ್ರಮಾಣವು ಎಲ್ಲ ಸಾಕ್ಷಿಗಳನ್ನೂ ಹಿಂದೆ ಹಾಕಿಲ್ಲವೇ?

ಇದಕ್ಕಾಗಿ ಪರಕೀಯ ಸತ್ತೆಯನ್ನು ದೂಷಿಸುವದರಿಂದ ಕಾರ್ಯವಾಗದು. ಸರಿಯಾದ ಮಾರ್ಗದರ್ಶನಮಾಡಲು ನಾನು ಅಸಮರ್ಥನಿದ್ದರೂ, ನಮ್ಮ ಆತ್ಮಶುದ್ಧಿಯಿಂದ ಮಾತ್ರ ಇದರ ನಿವಾರಣೆ ಸಾಧ್ಯವೆಂಬದರಲ್ಲಿ ನನಗೆ ಸಂಶಯವಿಲ್ಲ.

ಈ ಲೇಖನವನ್ನು ಸ್ತ್ರೀಯರ ಮಾಸಪತ್ರಿಕೆಗೆ ಕಳಿಸಲು ನನಗೆ ನಾಚಿಕೆ ಎನಿಸುತ್ತಿದೆ. ಆದರೆ ಇದು ಸ್ತ್ರೀಯರ ದುಃಖವಿದೆ. ಅವರೆದುರು ಇದನ್ನಿಡದೆ ಇನ್ನಾರೆದುರು ಇಡಲಿ? ಒಂದು ವೇಳೆ ಸ್ತ್ರೀಯರೇ ದ್ರೌಪದಿಯಂತೆ ಇದರ ನಿವಾರಣೋಪಾಯವನ್ನು ಹುಡುಕಬಾರದೇಕೆ?

ದೇವರು ಕೋಟಿಕೋಟಿ ದ್ರೌಪದಿಯರ ಮಾನರಕ್ಷಣೆ ಮಾಡಲಿ!

# ವೀರಮಾತೆ ಜೀಜಾಬಾಯಿ

ಮಹಾನಾಡುರಾಷ್ಟ್ರವನು
ಉದ್ಧರಿಸುವಾಸೆಯಿಂ
ವೀರಕುವರನ ಹೆತ್ತು
ರಸಮಿಳಿತ ಅತಿಹಳೆಯ
ವೀರ ಕತೆಗಳ ಹೇಳಿ
ಆತನನು ಬೆಳೆಸಿದಿಯೆ (೧)

ತೊಟ್ಟಿಲಲಿ ಆಡುತಿಹ
ಶಿಶುವನೀಂ ಕಾಣುತಲಿ
ಹೆಸರಾವುದಿಡಲೆಂದು
ಚಿಂತೆಯಲಿ ಬೀಳದಲೆ
ಶಿವ ಬಾ ಎಂಬ ಹೆಸರಿನಿಂದಲಿ
ಕರೆಕರೆದು ಅರಳಿದಿಯೆ (೨)

ಮನೆಯ ಗುರುನೀನಾಗಿ
ಸುಗುಣಗಳ ಕಲಿಸಿದಿಯೆ
ಹೂವಿನಾ ತೆರನಾಗಿ ರಕ್ಷಣೆಯ
ಮಾಡುತಲಿ ಸರಿಯಾದ
ವಿದ್ಯೆಯನು ಕಲಿಸುತಿಹ
ಗುರುಗಳೆಡೆ ಕಳುಹಿದಿಯೆ (೩)

ರಾಜವಿದ್ಯೆಯ ಕಲಿತು
ಮೇಧಾವಿಯಿಂತಾಗಿ ನಿನ್ನಬಳಿ
ಮರಳಿರ್ಪ ಮಗುಮುಖವ-
ಕಾಣುತಲಿ
ಆಶೆ ಫಲಿಸಿತು ಎಂದು
ಉಬ್ಬಿನಲಿ ಮೆರೆಯುತಲಿ
ನೀನಾಗಿ ಮೆರೆದೆ
ವೀರಮಾತೆ (೪)

**ಫತ್ತೇಪೂರ ಶಾಮುಂಡಾ** ಬೆಳವಣಿಕೆ.

# ಸ್ತ್ರೀಯರ ಆರೋಗ್ಯ

**ಲೇಖಕರು:— ವೈದ್ಯ ಗುಂಡಾಚಾರ್ಯ ಸವಣೂರ** L. A. M. S. ಹುಬ್ಬಳ್ಳಿ.

**ಮಕ್ಕಳು ದೇಶದ ಹಿರಿದಾದ ಸಂಪತ್ತು. ಅವರು ಬಲಶಾಲಿಗಳೂ ಬುದ್ಧಿವಂತರೂ ಆಗಬೇಕಾದರೆ ತಾಯಿಯ ಆರೋಗ್ಯ ಅದಕ್ಕೆ ಅತ್ಯವಶ್ಯ. ಸರ್ವವಿಧದಲ್ಲೂ ಬಲಶಾಲಿಯಾಗಲೆಳಸುವ ರಾಷ್ಟ್ರವು ಸ್ತ್ರೀಯರ ಆರೋಗ್ಯದತ್ತ ವಿಶೇಷ ಲಕ್ಷ್ಯವನ್ನು ಪೂರೈಸಲೇಬೇಕು.**

ಆರೋಗ್ಯ ನಿಯಮಗಳು ಮತ್ತು ಸಾಧನಗಳು ಸಾಮಾನ್ಯ ಮತ್ತು ವಿಶೇಷವೆಂದು ಎರಡು ವಿಧವಾಗಿರುವವು. ಮಾನವ ಶರೀರ ರಚನೆಗೆ ಅನುಸಾರವಾಗಿ, ಮನುಷ್ಯಪ್ರಾಣಿಗೇ ಸಾಮಾನ್ಯವಾಗಿರತಕ್ಕದ್ದು ಮೊದಲನೇ ವಿಧವಾದದ್ದು. ಸ್ತ್ರೀಪುರುಷರ ಶರೀರ ರಚನಾಭೇದಕ್ಕನುಸಾರವಾಗಿ ಅವರವರಿಗೆ ತಕ್ಕಂತೇ ಆಚರಿಸತಕ್ಕ ವಿಶಿಷ್ಟ ಆರೋಗ್ಯ ನಿಯಮಗಳು ಮತ್ತು ಸಾಧನಗಳು ಎರಡನೇ ವಿಧಾನವು. ಇಲ್ಲಿ ವಿಚಾರಮಾಡತಕ್ಕದ್ದು, ಅವೆರಡರಲ್ಲಿ ಒಂದಾದ ಸ್ತ್ರೀಯರ ಆರೋಗ್ಯದ ವಿಚಾರ. ಸ್ತ್ರೀಯರ ಆರೋಗ್ಯವು ಗೃಹಸೌಖ್ಯದ ಕಳಸವಿದ್ದಂತೆ. ರೋಗಿಷ್ಠ ಸ್ತ್ರೀಯರಾದ ಮನೆಯಲ್ಲಿ ಪುರುಷನಿಗೆ ನಿಜವಾದ ಸುಖವು ದೊರೆಯುವುದಿಲ್ಲ. ರೋಗಿಷ್ಠರಾದ, ದುರ್ಬಲರಾದ ಮಾತೆಯರಿಂದ ಸುಪ್ರಜಾನಿರ್ಮಾಣವು ಸಾಧ್ಯವಿಲ್ಲ. ಸುಪ್ರಜಾನಿರ್ಮಾಣವು ರಾಷ್ಟ್ರಕ್ಕೆ ಬೇಕಾಗಿದ್ದ ಪಕ್ಷದಲ್ಲಿ ಸ್ತ್ರೀಯರ ಆರೋಗ್ಯದ ಕಡೆಗೆ ಲಕ್ಷ್ಯಕೊಡುವದು ಅತಿ ಮಹತ್ವದ್ದಾಗಿರುವದು. ಈ ವಿಷಯಕ್ಕೆ ನಮ್ಮ ದೇಶದಲ್ಲಿ ಸದ್ಯಕ್ಕೆ ಹೆಚ್ಚಿನ ತಿಳವಳಿಕೆ ಕೊಟ್ಟು ಪ್ರಚಾರ ಮತ್ತು ಪ್ರೋತ್ಸಾಹನೆ ಮಾಡುವದು ಅತಿ ಅವಶ್ಯ. ನಮ್ಮ ದೇಶದಲ್ಲಿಯ ಸ್ತ್ರೀಯರು ವಿಶೇಷತಃ ಕಲಿತು ಸುಶಿಕ್ಷಿತರೆನಿಸಿಕೊಂಡವರು, ಕೊಳ್ಳುತ್ತಿರುವವರು ಈ ಬಗ್ಗೆ ಆಸ್ಥೆವಹಿಸಿ ತಮ್ಮ ಅಕ್ಕತಂಗಿಯರಿಗಾಗಿ ವಿಶೇಷ ಕಾರ್ಯಮಾಡಬೇಕಾಗಿದೆ. ಸಮಾಜಕ್ಕೆ ಸುಶಿಕ್ಷಿತರೆನಿಸಿಕೊಂಡವರು, ಅಥವಾ ಸಮಾಜದಲ್ಲಿ ಯಾರು ನಾವು ಸುಶಿಕ್ಷಿತರು ಎಂದು ತಿಳಿದುಕೊಂಡಿರುವರೋ ಅವರು ಇತರರಿಗೆ ಮಾದರಿಯವರಾಗಿದ್ದಾರೆ. ಅಂದರೆ ಇತರರು ಅವರಂತೆ ಆಚರಣೆ ಮಾಡುವ ರೂಢಿ ಸಮಾಜದಲ್ಲಿ ಬಿದ್ದಿದೆ. ಆದ್ದರಿಂದ ಸುಶಿಕ್ಷಿತರೆಂಬುವವರು ನೈತಿಕ, ಆಧ್ಯಾತ್ಮಿಕ, ಆರೋಗ್ಯ ವಿಷಯಗಳಲ್ಲಿ ಮೇಲು ನೋಟದವರಾಗಿರಬೇಕು. ಉಚ್ಚವಾದ ಆಚರಣೆಯುಳ್ಳವರಿರಬೇಕು. ಆರೋಗ್ಯವು ಹೊರಗಿನ ಆಹಾರ, ಶುದ್ಧವಾದ ಹವೆ, ನೀರು, ಆಹಾರ ಮುಂತಾದವುಗಳ ಮೇಲೆಯೇ ನಿಂತಿರದೆ ವ್ಯಕ್ತಿಯ ಆಚರಣೆಗಳಾದ ಕಾಯಿಕ, ವಾಚಿಕ, ಮಾನಸಿಕ ಭಾವಗಳನ್ನೂ, ವ್ಯಾಯಾಮಾದಿಗಳನ್ನೂ ಅವಲಂಬಿಸಿರುವದು. ಈ ಕಾಯಿಕ ವಾಚಿಕ, ಮಾನಸಿಕ ಭಾವಗಳು ಅಂದರೆ ಕರ್ಮಗಳು ಶರೀರ, ಮನಸ್ಸು, ಜೀವನ ಸಾತ್ವಿಕ, ಶ್ವಾಸ, ರಾಜಸ ಸ್ವಭಾವಗಳಿಗನುಸಾರವಾಗಿ ಜರುಗುವವು. ಇವುಗಳ ಪರಿಣಾಮವು ಮನುಷ್ಯನ ಆಯುಷ್ಯದ ಹಿತಾಹಿತಗಳ ಮೇಲೆ ಆಗುವದು.

ಸ್ತ್ರೀಯರ ಸ್ವಭಾವ, ಮಾನಸಿಕ, ಶಾರೀರಕ ನೆಲೆಗಳು ಪುರುಷರಗಿಂತ ಭಿನ್ನವಾದ್ದರಿಂದ ಅವರು ಆಚರಿಸಬೇಕಾದ ಆರೋಗ್ಯನಿಯಮಗಳೂ, ಸಾಧನಗಳೂ ಪುರುಷರಿಗಿಂತ ಬೇರೆಯೇ ಇರಬೇಕೆಂಬದಕ್ಕೆ ಸಂದೇಹವಿಲ್ಲ.

ಆರೋಗ್ಯವೆಂದರೇನು ? ಎಂಬದನ್ನು ಅದನ್ನು ಸಾಧನೆ ಮಾಡುವದಕ್ಕಿಂತ ಮುಂಚೆ ಚೆನ್ನಾಗಿ ತಿಳಿದುಕೊಳ್ಳಬೇಕು. 'ಆರೋಗ್ಯ' ಶಬ್ದವು "ರುಜ್" ಈ ಧಾತುವಿನಿಂದ ಆಗಿರುತ್ತದೆ. "ರುಜತೀತಿರೋಗ" "ಭಾಧಾಕಾರಿಯಾದದ್ದು ಯಾವದೋ ಅದು ರೋಗ" ರೋಗವಿಲ್ಲದಿರುವದು ಆರೋಗತೆಯು. "ಅಸಮಂತಾತ್ ಅರೋಗತಾಯಾಃಭಾವಃ ಆರೋಗ್ಯಂ" ಸರ್ವತೋಪರಿಯಿಂದ ರೋಗವಿಲ್ಲದಿರುವಿಕೆಯೇ ಆರೋಗ್ಯವೆಂದು ಕರೆಯಲ್ಪಡುವದು. ಅಂದರೆ ರೋಗಾದಿಗಳ ಅಭಾವವೇ ಆರೋಗ್ಯವೆಂಬದು. ಮನುಷ್ಯನಿಗೆ ರೋಗಾದಿಗಳಿಲ್ಲದ ಅವಸ್ಥೆಯೇ ಆರೋಗ್ಯಾವಸ್ಥೆಯೆಂದರೆ ರೋಗಮುಕ್ತನಾಗಿರುವ ಅವಸ್ಥೆಯೇ ಏಕೆ ಆಗಬಾರದು ? ಮಾನಸಿಕ ದೌರ್ಬಲ್ಯವಿದ್ದು ಶರೀರದಲ್ಲಿ ರೋಗಾದಿಗಳಿಲ್ಲದಿದ್ದರೆ ಅದನ್ನು ಆರೋಗ್ಯಾವಸ್ಥೆಯೆಂದು ಕರೆಯಬಹುದೆ ? ಅದರಿಂದ ಶರೀರಕ್ಕೆ ಪುನಃ ರೋಗಾದಿಗಳು ಬಾರದಂತೆ ತಡೆಯಲು, ಮನುಷ್ಯನು ಸಮರ್ಥನಾಗಬಲ್ಲನೇ ? ಈ ವಿಚಾರಗಳನ್ನು ಚಿಂತನೆಮಾಡಹತ್ತಿದರೆ ಕೇವಲ ಆರೋಗ್ಯವಸ್ಥೆಯೆಂಬದೊಂದೇ ರೋಗ ಪ್ರತಿಭಟನಾದಿಗಳನ್ನು ಮಾಡಲು ಸಮರ್ಥವಾಗಲಾರದು. ರೋಗಾದಿಗಳು ಶರೀರಕ್ಕೆ ಬಾರದಂತೆ ಪ್ರತಿಭಟಿಸುವದು, ಬಂದರೆ ಅವುಗಳನ್ನು ನಿವಾರಣೆಮಾಡಲು ನಿಸರ್ಗತಃ ಸಹಾಯವಾಗುವಂತಹ ಒಂದು ಅವಸ್ಥೆ ಯಾವದೋ ಅದು ಆರೋಗ್ಯಾವಸ್ಥೆಗಿಂತ ಬೇರೆಯಾಗಿರುವದು; ಮತ್ತು. ಆರೋಗ್ಯಾವಸ್ಥೆಗಿಂತ ಶ್ರೇಷ್ಠವಾದದ್ದೆಂದು ಹೇಳಬಹುದು. ಈ ವಿಧವಾದ ಶರೀರಾವಸ್ಥೆಗೆ ಆಯುರ್ವೇದ ಶಾಸ್ತ್ರದಲ್ಲಿ "ಸ್ವಾಸ್ಥ್ಯ" ವೆಂದು ಹೇಳಿರುವರು. ಈ ಸ್ವಾಸ್ಥ್ಯವು ಯಾವನಲ್ಲಿರುವದೋ ಅವನಿಗೆ "ಸ್ವಸ್ಥ" ನೆಂದು ಆಯುರ್ವೇದಶಾಸ್ತ್ರದಲ್ಲಿ ಕರೆಯುವರು. ಈ ಸ್ವಸ್ಥಾನ ಲಕ್ಷಣಗಳನ್ನು ಆಯುರ್ವೇದದಲ್ಲಿ ಹೀಗೆ ವರ್ಣನೆಮಾಡಿರುವರು. "ಸಮದೋಷಃ ಸಮಾಗ್ನಿಶ್ಚ, ಸಮಧಾತು ಮಲಕ್ರಿಯಃ। ಪ್ರಸನ್ನಾತ್ಮೇಂದ್ರಿಯಮನಃ ಸ್ವಸ್ಥ ಇತ್ಯಭಿಧೀಯತೇ॥"

ಯಾವನ ವಾತಪಿತ್ತಕಫಾದಿದೋಷಗಳು ಸರಿಯಾಗಿ ಕಾರ್ಯಮಾಡುತ್ತಿರುವವೋ, ಯಾವನ ಜಠರಾಗ್ನಿಯು ಸರಿಯಾಗಿದ್ದು ಹೆಚ್ಚು ಕಡಿಮೆ ತಿಂದರೆ ಸರಿಯಾಗಿ ಜೀರ್ಣಮಾಡುವದೋ; ಯಾವನ ಶರೀರದಲ್ಲಿ ಶರೀರಧಾತುಗಳು (Secretions & Tissues) ಮತ್ತು ಮಲಗಳು (Excretions) ಸರಿಯಾದ ಕಾಲಕ್ಕೆ ಸರಿಯಾದ ಪ್ರಮಾಣದಲ್ಲಿ ಉತ್ಪನ್ನವಾಗಿ ಸ್ರಾವವಾಗುತ್ತ ತಮ್ಮ ಕಾರ್ಯಗಳನ್ನು ಮಾಡುತ್ತಿರುವವೋ। ಯಾವನ ಶರೀರದಲ್ಲಿ ಇಂದ್ರಿಯ, ಮನಸ್ಸು, ಆತ್ಮ ಇವೆಲ್ಲ ಯಾವಾಗಲೂ ಪ್ರಸನ್ನವಾಗಿರುವವೋ ಅಂಥವನಿಗೆ ಸ್ವಸ್ಥನೆಂದು ಕರೆಯುವರು. ಇವಲ್ಲದೆ ಸರಿಯಾದ ಕಾಲಕ್ಕೆ ನಿದ್ರೆಬರುವದು, ಎಚ್ಚರಾಗುವದು, ಓಜಸ್ಸು,

ತುಷ್ಟಿ, ಪುಷ್ಟಿ ಬಲೋದಯಗಳಾಗುತ್ತಿರುವದು ಇಷ್ಟು ಹೆಚ್ಚಿಗೆ ಲಕ್ಷಣಗಳನ್ನು ಚರಕಾಚಾರ್ಯರು ಸ್ವಸ್ಥನ ಲಕ್ಷಣಗಳನ್ನು ಹೇಳುವಾಗ ಹೇಳುವರು.

ಇದರ ಮೇಲಿಂದ ಸ್ವಾಸ್ಥ್ಯಾವಸ್ಥೆ ಮತ್ತು ಆರೋಗ್ಯಾವಸ್ಥೆಗಳಲ್ಲಿಯ ಭೇದವು ಚನ್ನಾಗಿ ತಿಳಿದುಬರುವದು. ಶರೀರದಲ್ಲಿಯ ರೋಗಾದಿಗಳಿಲ್ಲದಿರುವ ಭಾವವನ್ನು ಮಾತ್ರ ಆರೋಗ್ಯಾವಸ್ಥೆಯೆಂಬದು ತೋರಿಸಿಕೊಡುತ್ತದೆ. ಶರೀರದಲ್ಲಿ ರೋಗಾದಿಗಳಿಲ್ಲದಿರುವದೊಂದನ್ನೇ ಹೇಳದೆ-ರೋಗಬಾರದಂತೆ ಮಾಡಲು ಬೇಕಾಗಿರುವ ಶರೀರದ ಅಧಿಭೌತಿಕ ಅಧ್ಯಾತ್ಮಿಕ ವ್ಯಾಪಾರಗಳ ಸಾಮ್ಯತೆಯ ಭಾವಗಳನ್ನು ತೋರಿಸಿಕೊಡುತ್ತದೆ ಸ್ವಾಸ್ಥ್ಯವಸ್ಥೆಯೆಂಬದು. ಆದ್ದರಿಂದ ನಾವು "ಆರೋಗ್ಯ" ಎಂಬ ಪದವನ್ನು ಹೇಳುವಾಗೆಲ್ಲ ಸ್ವಾಸ್ಥ್ಯ ಎಂಬ ಪದವನ್ನು ಹೇಳಿದರೆ ಆರೋಗ್ಯ ಪದದಿಂದ ತಿಳಿಯಬೇಕಾಗಿರುವ ಅರ್ಥವು ಸ್ವಾಸ್ಥ್ಯವೆಂಬ ಪದದಿಂದ ಇನ್ನೂ ಹೆಚ್ಚು ತುಂಬಿಕೊಂಡು ಬರುವದು. ಈ ಕಾರಣದಿಂದ ಇಲ್ಲಿ ಸ್ತ್ರೀಯರ ಆರೋಗ್ಯವೆಂಬುದಕ್ಕಿಂತ ಸ್ತ್ರೀಯರ "ಸ್ವಾಸ್ಥ್ಯ" ವೆಂಬ ಪದವೇ ಹೆಚ್ಚು ಅರ್ಥಪೂರ್ಣವಾಗುವದರಿಂದ. ಇನ್ನು ಮುಂದೆ ಈ ಲೇಖದಲ್ಲಿ ಇದೇ ಪದವನ್ನು ಉಪಯೋಗಿಸಲಾಗುವದು.



# ಸುದ್ದಿ-ಸಮಾಚಾರ

## ೧. ಮಹಿಳಾಗೋಷ್ಠಿ

ಮೇ ತಿಂಗಳ ೧೬, ೧೭, ಹಾಗೂ ೧೮ ನೇ ತಾರೀಖುಗಳಲ್ಲಿ ಬೇಲೂರಿನಲ್ಲಿ ಕೂಡಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ, ಮಹಿಳಾಗೋಷ್ಠಿ ನೆರವೇರಿತು. ಮಹಿಳಾ-ಗೋಷ್ಠಿಗೆ ಮೈಸೂರಿನ ಉತ್ತಮ ಸಾಹಿತಿಗಳೂ, ಲೇಖಿಕೆಯರೂ ಆದ ಶ್ರೀಮತಿ ಎಚ್. ವ್ಹಿ. ಸಾವಿತ್ರಮ್ಮನವರು ಅಧ್ಯಕ್ಷರಾಗಿದ್ದರು. ಅವರ ಭಾಷಣ ಸಾರ ಇಂತಿದೆ.

ಸಾಹಿತ್ಯರಂಗದಲ್ಲಿ ಸ್ತ್ರೀಯರೂ ಹೆಚ್ಚಿನ ಪಾತ್ರವನ್ನು ವಹಿಸಬೇಕು. ಸ್ತ್ರೀಯರಲ್ಲಿ ಒಂದು ಬಗೆಯ ಆಲಸ್ಯವು ಮನೆಮಾಡಿಕೊಂಡಿದೆ. ಈ ಆಲಸ್ಯವನ್ನು ಬಿಟ್ಟು, ತಮ್ಮ ಹೊಣೆಯನ್ನರಿತು, ಸಾಹಿತ್ಯಕ್ಷೇತ್ರದಲ್ಲಿ ಸ್ತ್ರೀಯರು ಕೆಲಸಮಾಡಿದರೆ, ಕನ್ನಡ ಸಾಹಿತ್ಯವು ಹಿರಿಯ ಸಾಹಿತ್ಯದಲ್ಲೊಂದಾಗಲು ಅಡ್ಡಿಯಿಲ್ಲ.

## ೨. ಶ್ರೀಮತಿ ಸುಶೀಲಾದೇವಿ ಕುಲಕರ್ಣಿ

ಮುಂಬಯಿ ಗವ್ಹರ್ನರರು ವಿಧಾನಪರಿಷತ್ತಿಗೆ ಶ್ರೀಮತಿ ಸುಶೀಲಾದೇವಿ ಕುಲಕರ್ಣಿ ಇವರನ್ನು ನಾಮಕರಣ ಮಾಡಿದ್ದಾರೆ. ಇವರು ಕರ್ನಾಟಕದ ಮಹಿಳಾ ಕಾರ್ಯಕರ್ತರಿರುವರು. ಕರ್ನಾಟಕದ ಮಹಿಳೆಯರಿಗೆ ಇಂತಹ ಯೋಗ್ಯತೆಯು ಇನ್ನೂ ಹೆಚ್ಚಾಗಿ ಬರಲೆಂದು ಹಾರೈಸೋಣ.

## ೩. ಕುಮಾರಿಯರ ಸಂಘ

ಲಾಹೋರದಲ್ಲಿ ಕುಮಾರಿಯರ ಸಂಘವೊಂದು ಸ್ಥಾಪಿಸಲ್ಪಟ್ಟದೆಯೆಂದು ಸುದ್ದಿ ಬಂದಿದೆ. ಶಾಲೆ, ಕಾಲೇಜುಗಳಲ್ಲಿ ಕಲಿಯುತ್ತಿರುವ ಸುಮಾರು ೧೨ ಅವಿವಾಹಿತ ತರುಣಿಯರು, ಈ ಸಂಘದ ಸದಸ್ಯರಾಗಿದ್ದಾರೆ. 'ಸುರೈಯಾ' ಎಂಬವಳು ಈ ಸಂಘದ ಸ್ಥಾಪಕಳು. ಅವಳು, "ಪಾಕಿಸ್ತಾನದಲ್ಲಿ ಈಗ ಹುಡುಗಿಯರನ್ನು ಲಗ್ನಮಾಡಿಕೊಡುವದು ಬಹಳ ವೆಚ್ಚದ ಕಾರ್ಯವಾಗಿರುವದರಿಂದ, ತಂದೆ-ತಾಯಿಗಳ ಮೇಲಿನ ಭಾರವನ್ನಿಳಿಸುವದಕ್ಕಾಗಿ ಈ ಸಂಘವನ್ನು ಸ್ಥಾಪಿಸಲಾಗಿದೆ. ಹೆಚ್ಚು ಹೆಚ್ಚು ಕುಮಾರಿಯರು ಈ ಸಂಘದಲ್ಲಿ ಸೇರಿಕೊಳ್ಳಬೇಕು." ಎಂದು ಹೇಳಿದ್ದಾಳೆ.

## ೪. ವಿಧವಾ ತರುಣಿಯನ್ನು ಓಡಿಸಿಕೊಂಡೊಯ್ಯುವ ಸಾಹಸ

ಸೊಲ್ಲಾಪೂರದಲ್ಲಿಯ ಮಕಬೂಲ ಮಹಿಬೂಬ ಹಾಗೂ ಶಂಕರ ಫಕೀರಪ್ಪ ನರೇಂದ್ರ ಎಂಬ ತರುಣರು ಒಬ್ಬ ವಿಧವಾ ತರುಣಿಯನ್ನು 'ಕರ್ದೆಹಳ್ಳಿ' ಎಂಬಲ್ಲಿ ಓಡಿಸಿಕೊಂಡು ಹೋಗಿದ್ದರು. ಅಲ್ಲಿಂದ 'ನಳದುರ್ಗದ' ಕಡೆಗೆ ಓಡಿಸಿಕೊಂಡು ಹೋಗುವಾಗ, ದರ್ಗನಹಳ್ಳಿ ಎಂಬಲ್ಲಿ ಅವರನ್ನು ಕೈದು ಮಾಡಲಾಯಿತು. ಮುಂದಿನ ತಪಾಸಣೆ ನಡೆದಿದೆ.

ಅದೆಷ್ಟು ವಿಧವಾ ತರುಣಿಯರು ಇಂತಹ ಪುರುಷರ ಕೈಯಲ್ಲಿ ಸಿಕ್ಕು ಗೋಳಾಡುತ್ತಿರುವರೋ ಏನೋ!

## ೫. ಪತಿವ್ರತೆ

ಬನಾರಸ:— ಒಬ್ಬ ಹೆಣ್ಣುಮಗಳು, ತನ್ನ ಗಂಡನು ಮೇ ೬ ರಂದು, ಸಾಯಲು, ಅಂತ್ಯಕ್ರಿಯೆಯ ಕಾಲಕ್ಕೆ ಚಿತೆಯ ಮೇಲೆ ಆತನ ಮಗ್ಗುಲಲ್ಲಿ ಮಲಗಿ ಸಾಯಲು ಪ್ರಯತ್ನ ಪಟ್ಟಾಗ ಪೋಲಿಸರು ಅವಳನ್ನು ತಡೆಗಟ್ಟದರಿಂದು ವರದಿಯಾಗಿದೆ.

ಇತ್ತಿತ್ತಲಾಗಿ ಈ ರೀತಿ ಸತಿಹೋಗಲು ಅನೇಕ ಸ್ತ್ರೀಯರು ಪ್ರಯತ್ನಿಸುತ್ತಿದ್ದುದು ಕಂಡುಬರುತ್ತದೆ. ಪತಿಯು ಮರಣದ ನಂತರ ಸತಿಯು ಪರಾವಲಂಬನವೇ ಇದಕ್ಕೆ ಕಾರಣವಾಗಿರಬಹುದು.

### ೬. ವಿಧವೆಯ ಕೊಲೆ.

ಮುಂಬಯಿ:— ಅಜಿತಸಿಂಗನೆಂಬ ೨೭ ವರುಷದ ತರುಣನು ಶ್ರೀಮತಿ ಜೋನ್ ಥೊಯಾಸಳೆಂಬ ವಿಧವೆಯನ್ನು ಗುಂಡಿಕ್ಕಿ ಕೊಂದುದಕ್ಕಾಗಿ, ಅವನನ್ನು ಗಲ್ಲಿಗೇರಿಸಲಾಯಿತು.

ಇವರಿಬ್ಬರು ಕೆಲದಿವಸಗಳವರೆಗೆ ಸ್ನೇಹದಿಂದಿದ್ದರು. ಅಲ್ಲದೆ ಅವನು ಆಕೆಯನ್ನು ಮದುವೆಯಾಗಲು ನಿಶ್ಚಯಿಸಿದ್ದ. ಆದರೆ ಮನೆಯವರು ಇದಕ್ಕೆ ಅಡ್ಡಿಮಾಡಿದರಂತೆ.

ಮನೆಯವರು ಈ ರೀತಿ ಅಡ್ಡಿಮಾಡಿ, ಅದರಿಂದ ಲಾಭವೇನೂ ಆಗದೆ, ಅನೇಕ ಸ್ತ್ರೀ-ಪುರುಷರ ಜೀವನವನ್ನು ಹಾಳುಮಾಡುವ ಹೊಣೆಯನ್ನು ಹೊರುತ್ತಲಿದ್ದಾರೆ.

### ೭. ಪುರುಷರಷ್ಟೇ ಪಗಾರ.

ಲಂಡನದಲ್ಲಿ, “ಸರಕಾರಿ ನವಕರಿಯಲ್ಲಿರುವ ಮಹಿಳೆಯರಿಗೂ ಪುರುಷರಷ್ಟೇ ಪಗಾರ ಕೊಡಬೇಕು” ಎಂದು ಕೇಳಲು ಬ್ರಿಟನದ ಮಹಿಳೆಯರು ಕಾಮನ್ಸ ಸಭೆಯ ಮೇಲೆ ದಾಳಿಮಾಡುವವರಿದ್ದಾರೆ.

### ೮. ಸ್ತ್ರೀ-ಆದರ್ಶಮಾತೆ.

ಇಜಿಪ್ತದಲ್ಲಿ, ಇಸ್ಲಾಮ ಧಾರ್ಮಿಕ ಕಾನೂನಿನ ಅತ್ಯುಚ್ಚ ಅಧಿಕಾರಿಗಳೆಂದು ತಿಳಿಯಲ್ಪಡುವ ಶೇಖ ಹಸನೈನ ಮಹಮ್ಮದ ಮುಫ್ತಿಯವರು ಹೊರಡಿಸಿದ “ಇಸ್ಲಾಮ ರಚನೆಯನ್ವಯ ಸ್ತ್ರೀಯರಿಗೆ ಪುರುಷರ ಕರ್ತವ್ಯಗಳನ್ನು ಆಕ್ರಮಿಸುವ ಹಕ್ಕು ಇಲ್ಲ. ಒಳ್ಳೇ ಗೃಹಿಣಿ ಮತ್ತು ಮಾತೆಯಾಗುವದು ಮಹಿಳೆಯರ ಪಾತ್ರ” ಎಂಬ ಪ್ರಕಟನೆಗೆ ಉತ್ತರ ರೂಪವಾಗಿ ಮೌಲಾನಾ ಅಝಾದರು ಈ ರೀತಿ ಹೇಳಿದ್ದಾರೆ.

“ಇಸ್ಲಾಮ ಧರ್ಮವು ತತ್ವತಃ ಸಾರ್ವಜನಿಕ ಹಾಗೂ ರಾಜಕೀಯ ಜೀವನದಲ್ಲಿ ಗಂಡಸರು ಮತ್ತು ಹೆಂಗಸರಲ್ಲೂ ಭೇದವನ್ನೆಣಿಸುವದಿಲ್ಲ. ಮುಸ್ಲಿಂ ಇತಿಹಾಸದ ಈಚೇಗಿನ ಪುಟಗಳನ್ನು ಹೊರಳಿಸಿದರೆ ಅನೇಕ ಮಹಿಳೆಯರು ರಾಜಕೀಯ ಅಥವಾ ಸಾರ್ವಜನಿಕ ಜೀವನದಲ್ಲಿ ಭಾಗವಹಿಸಬಾರದೆಂದು ನಿರ್ಬಂಧಿಸುವ ಯಾವುದೇ ನಿಯಮವೂ ಇಸ್ಲಾಮ ಧರ್ಮದಲ್ಲಿಲ್ಲ. ಆದರ್ಶ ಗೃಹಿಣಿ ಮತ್ತು

ಆದರ್ಶಮಾತೆಯಾಗುವದೇ ಮುಸ್ಲಿಂ ಮಹಿಳೆಯ ಆದರ್ಶವೆಂದು ಮುಫ್ತಿಯವರು ಹೇಳಿದ್ದು ನಿಜವಾದರೂ, ಇದೇ ಇಡಿಯಾದ ಸತ್ಯವಲ್ಲ."

## ೯. ಇಬ್ಬರು ಸ್ತ್ರೀಯರ ಕೊಲೆ.

ಮುಂಬಯಿಯಲ್ಲಿ ಒಂದು ಕಟ್ಟಡದ ೫ನೆಯ ಅಂತಸ್ತಿನಲ್ಲಿ ಒಬ್ಬನು, ಇಬ್ಬರು ಮಹಿಳೆಯರನ್ನು ಚೂರಿಯಿಂದ ತಿವಿದು,ತಾನು ಮೇಲಿನಿಂದ ಹಾರಿಕೊಂಡು ಮರಣ ಹೊಂದಿದನು. ಅವರಿಬ್ಬರಲ್ಲಿ ಒಬ್ಬಳು ವರ್ತಕನ ಹೆಂಡತಿ ಇದ್ದು ಅವಳು ಆಸ್ಪತ್ರೆಯಲ್ಲಿ ಗುಣಹೊಂದುತ್ತಿದ್ದಾಳೆ. ಇನ್ನೊಬ್ಬಳು ಅವಳ ದಾಸಿಯಿದ್ದು ದವಾಖಾನೆಗೆ ಒಯ್ಯುವಾಗ ಮಾರ್ಗದಲ್ಲಿಯೇ ಮರಣಹೊಂದಿದಳು. ತಿವಿದುಕೊಂಡು ಮೇಲಿನಿಂದ ಹಾರಿ ಸತ್ತವನು ಆ ವರ್ತಕನಲ್ಲಿ ಮೊದಲು ನವಕರಿಗಿದ್ದನೆಂದು ತಿಳಿದು ಬಂದಿತು.

## ೧೦. ಅನ್ನವಿಲ್ಲದೆ ಜೀವಿಸುವದು.

ಒಬ್ಬ ಯುರೋಪಿಯನ್ ಮಹಿಳೆಯು ಜೋಹಾನ್ಸಬರ್ಗದಲ್ಲಿ ೬ ವಾರಗಳ ವರೆಗೆ ಉಪವಾಸ ಮಾಡಿದಳಂತೆ. ಹೋದವರುಷ ಮಿರಾನದಲ್ಲಿಯೂ ಒಬ್ಬ ಮಹಿಳೆಯು ೬೨ ದಿವಸ ಉಪವಾಸ ಮಾಡಿದ್ದಳು.

ಸ್ತ್ರೀಯರಲ್ಲಿಯೂ ಕೂಡ ಉಪವಾಸ ಮಾಡುವ ಶಕ್ತಿ ಸಾಕಷ್ಟು ಇದೆ.

## ೧೧. ಹೆಂಡತಿಯ ಕೊಲೆ.

ಜಬ್ಬಲಪೂರದಲ್ಲಿಯ ಸೆಂಟ್ರಲ್ ಆರ್ಡಿನೆನ್ಸ ಡಿಪೋದ ಹವಾಲ್ದಾರನೊಬ್ಬನು ತನ್ನ ಎರಡನೆಯ ಹೆಂಡತಿಯನ್ನು ಆಯುಧದಿಂದ ಕೊಂದನೆಂದು ಹೇಳಲಾಗಿದೆ. ಕೊಲೆಯ ನಿಜವಾದ ಕಾರಣವಿನ್ನೂ ತಿಳಿದುಬಂದಿಲ್ಲ.

ಕಾರಣವೇನಾದರೂ ಇರಬಹುದು. ಆದರೆ ಇಂದು ಸಂಶಯದಿಂದಾಗಲಿ ಅಥವಾ ಮತ್ತಾವಕಾರಣದಿಂದಾಗಲಿ ಸಂಪೂರ್ಣವಾಗಿ ಸ್ತ್ರೀಯರ ಜೀವವನ್ನು ತೆಗೆದುಕೊಳ್ಳುವ ಪಾಶವೀಕೃತಿಯನ್ನು ಕೈಕೊಳ್ಳುತ್ತಲಿದ್ದಾರೆ.

## ೧೨. ಆರೋಗ್ಯಮಂತ್ರಿ.

ರಾಜಕುಮಾರಿ ಅಮೃತಕುವರು ಇವರು ಪುನಃ ಹಿಂದುಸ್ತಾನದ ಆರೋಗ್ಯ ಮಂತ್ರಿಯಾಗಿದ್ದಾರೆ. ಇದರಂತೆ ಅನೇಕ ಜನ ಸ್ತ್ರೀಯರು ರಾಜಕಾರಣದಲ್ಲಿ ಭಾಗ ವಹಿಸಿದರೆ ದೇಶದ ಕಲ್ಯಾಣ ತೀವ್ರವಾಗಿ ಆಗುವದು.

## ೧೩. ತಾಯಿಯ ದಿನಾಚರಣೆ.

ಅಮೇರಿಕೆಯಲ್ಲಿ ಪ್ರತಿವರುಷ ಮೇ ತಿಂಗಳ ಎರಡನೆಯ ರವಿವಾರವನ್ನು ತಾಯಿಯ ದಿನಾಚರಣೆಯೆಂದು ಆಚರಿಸುತ್ತಾರೆ. ಈ ಪದ್ಧತಿಯು ಅಮೇರಿಕದಲ್ಲಿ ೧೯೦೭ ರಿಂದ ಪ್ರಾರಂಭವಾಗಿದೆ. ಇತ್ತಿತ್ತಲಾಗಿ ಈ ದಿನವನ್ನು ಕ್ಯಾನಡಾ, ಆಫ್ರಿಕಾ ಚೀನ ಮುಂತಾದ ದೇಶದಲ್ಲಿಯೂ ಆಚರಿಸುತ್ತಾರೆ. ಆ ದಿನ ಮಕ್ಕಳು, ಪ್ರೀತಿ ಮತ್ತು ಗೌರವದ ಸೂಚನೆಯೆಂದು ತಾಯಿಗೆ ಬಹುಮಾನವನ್ನು ಕೊಡುತ್ತಾರೆ. ತಾಯಂದಿರ ಆರೋಗ್ಯ ಕಾಪಾಡಲು ಆಸ್ಪತ್ರೆಗಳನ್ನು ಕಟ್ಟಲೋಸುಗ ನಿಧಿಯನ್ನು ಕೂಡಿಸುತ್ತಾರೆ.

## ೧೪. ವಿಮಾನ ಚಾಲನೆಗೆ ಒಬ್ಬ ಮಹಿಳೆ

ನಾಗಪುರ:— ಶ್ರೀಮತಿ ಲೀಲಾ ನರೇಲಕರ ಇವರು ಮಧ್ಯ ಪ್ರದೇಶದ ಫ್ಲಾಯಿಂಗ್ ಕ್ಲಬ್‌ಗೆ ಸೇರಿರುತ್ತಾರೆ. ವಿಮಾನಚಾಲನ ಕಲಿಯಲು ಬಂದ ಮಹಿಳೆಯರಲ್ಲಿ ಇವರೇ ಮೊದಲಿಗರು.

## ೧೫. ತಂದೆಯ ಕೊಲೆ

ಬೆಂಗಳೂರ:— ಮೈಸೂರಿನ ಹೈಕೋರ್ಟಿನ ಅಡ್ವೋಕೇಟರಾದ ಶ್ರೀ ವಿ. ಬಾಲರತ್ನಂರವರು ತಮ್ಮ ತಂದೆಯವರಾದ ಶ್ರೀ. ವ್ಹಿ ರಾಮಕೃಷ್ಣಯ್ಯನವರ ಕೊಲೆ ಮಾಡಲು ಪ್ರಯತ್ನಿಸಿದ್ದಕ್ಕಾಗಿ ಅವರಿಗೆ ೩ ವರ್ಷ ಶಿಕ್ಷೆ ವಿಧಿಸಿದ್ದಾರೆ.

ಆರೋಪಿ ಬಾಲರತ್ನಂ ಅವರು ತಮ್ಮ ತಂದೆ ರಾಮಕೃಷ್ಣಯ್ಯನವರು ತಮ್ಮ (ಬಾಲರತ್ನಂ) ಹೆಂಡಿತಿಯೊಡನೆ ಸಲುಗೆಮಾಡುತ್ತಿದ್ದರೆಂದು ಅವರನ್ನು ದ್ವೇಷಿಸುತ್ತಿದ್ದು ಎರಡುಸಲ ಕೊಲೆಮಾಡಲು ಪ್ರಯತ್ನಿಸಿದರು. ಎರಡನೆಯಸಲ ಕೊಲೆಯ ಪ್ರಯತ್ನದಲ್ಲಿ ರಾಮಕೃಷ್ಣಯ್ಯನವರ ಬಲಗೈ ಕಡಿದಿದ್ದಾರೆ.

## ೧೬. ಸಂಗೀತ ವಿದುಷಿಯ ನಿಧನ

ತಿರುವಾಡಿಯಲ್ಲಿ ಸುಪ್ರಸಿದ್ಧ ಕರ್ನಾಟ ಸಂಗೀತಗಾರರಾದ ಶ್ರೀಮತಿ ನಾಗರತ್ನಮ್ಮನವರು ಶ್ರೀ ತ್ಯಾಗರಾಜರ ಸಮಾಧಿಯ ದೇವಾಲಯದಲ್ಲಿ ನಿಧನ ಹೊಂದಿದರು. ಸಂಗೀತಾಭ್ಯಾಸಮಾಡಿ ತಿರುವಾಡಿಯಲ್ಲಿ ಶ್ರೀ ತ್ಯಾಗರಾಜರ ಸಮಾಧಿಯನ್ನು ಕಟ್ಟಿಸಿ ಇವರು ಆ ಸ್ಥಳವನ್ನು ಮಹಾಕ್ಷೇತ್ರವನ್ನಾಗಿ ಮಾಡಿದ್ದರು.

ಶ್ರೀಮತಿ ನಾಗರತ್ನಮ್ಮನವರ ಆತ್ಮಕ್ಕೆ ಚಿರಶಾಂತಿ ದೊರೆಯಲಿ.

---

# ಮನೆಯ ಶುಚಿ-ರುಚಿ

ಲೇಖಕಿ:— ನೀರಜಾ.

ರುಚಿರುಚಿಯಾದ ತಿಂಡಿತಿನಸುಗಳನ್ನು ಮಾಡುವ ವಿಧಾನ, ಮನೆಯನ್ನೂ ವಸ್ತುಗಳನ್ನೂ ಚೊಕ್ಕಟವಾಗಿಯೂ ಅಂದವಾಗಿಯೂ ಇಡುವ ರೀತಿ ನಿಮಗಷ್ಟೇ ಗೊತ್ತಿರಬೇಕೆ? ‘ ವೀರಮಾತೆ ’ಯ ಮೂಲಕವಾಗಿ ನಿಮ್ಮ ಅಕ್ಕತಂಗಿಯರಿಗೂ ಅವುಗಳನ್ನು ತಿಳಿಸಿಕೊಡಿ.

ಮರ, ಬುಟ್ಟಿಗಳು ಗೃಹಿಣಿಯ ನಿತ್ಯದ ಸಲಕರಣೆಗಳು. ಅವುಗಳಿಲ್ಲದೆ ಕಾಳುಕಡಿಗಳನ್ನು ಹಸನಗೊಳಿಸುವದು ಸಾಧ್ಯವಿಲ್ಲ. ಆದರೆ ಪೇಟೆಯಿಂದ ತಂದ ಮರ ಬುಟ್ಟಿಗಳನ್ನು (ಇವುಗಳು ಬಿದಿರಿನವೇ) ಇದ್ದಕ್ಕಿದ್ದಂತೆ ಉಪಯೋಗಿಸಲು ಬಾರದು. ನಮ್ಮೂರಿನ ಮರ ಬುಟ್ಟಿಗಳ ಹೆಣಿಕೆ ದಟ್ಟಾಗಿದ್ದರೂ ಎಲ್ಲ ಊರುಗಳಲ್ಲಿ ಹೆಣಿಕೆ ಇದೇ ರೀತಿಯಾಗಿರಲಾರದು. ಹೇಗಿದ್ದರೂ ಅವುಗಳಿಗೆ ಯೋಗ್ಯ ಆರೈಕೆ ಯಿಲ್ಲದೆ ಅವುಗಳನ್ನು ಉಪಯೋಗಿಸುವಂತಿಲ್ಲ. ಹೆಣಿಕೆಯ ನಡುವೆ ಅಲ್ಲಲ್ಲಿ ಬಿಟ್ಟಿದ್ದ ಪೊಳ್ಳುಗಳನ್ನು ತುಂಬಿದಲ್ಲದೆ, ಕಾಳುಕಡಿಗಳು ಅದರಲ್ಲಿ ನಿಲ್ಲಲಾರವು.

ಬಿದಿರಿನ ಹೆಣಿಕೆಯಲ್ಲಿಯ ಈ ಪೊಳ್ಳುಗಳನ್ನು ತುಂಬಲು ಅತ್ಯಂತ ಸುಲಭ ವಾದ ಉಪಾಯವೆಂದರೆ ಅವುಗಳನ್ನು ಸಗಣಿಯಿಂದ ಸಾರಿಸುವದು. ಆದರೆ ಹೀಗೆ ಸಾರಿಸಿದ್ದು ಬಹಳ ದಿನ ಬಾಳುವದಿಲ್ಲ. ನಿತ್ಯ ಅದೇ ಉದ್ಯೋಗವನ್ನೇ ಮಾಡಿದಂತೆ ನಿಸುತ್ತದೆ. ಅದಕ್ಕಾಗಿ ಅನೇಕರು ಹಳೆಯ ಬಟ್ಟೆಗಳನ್ನು ಸುಟ್ಟು ಬೂದಿಮಾಡಿ ಅದನ್ನು ಒಳ್ಳೆಯಎಣ್ಣೆಯಲ್ಲಿ ಬೆರಸಿ ಹಚ್ಚುತ್ತಾರೆ. ಅದು ಬಹಳ ದಿನಗಳ ವರೆಗೆ ತಾಳುತ್ತದೆ

ಮತ್ತೊಂದು ಉಪಾಯವೆಂದರೆ ಮರಬುಟ್ಟಿಗಳಿಗೆಲ್ಲ ಕೇರಿನ ಎಣ್ಣೆಯನ್ನು ಅಥವಾ ಡಾಂಬರನ್ನು ಹಚ್ಚಿಬಿಡುವದು. ಇದೂ ಬಹುದಿನಗಳ ವರೆಗೆ ತಾಳಿಕೆ ಬರುವದು. ಆದರೆ ಕೈಯಿಂದ ಹಚ್ಚುವದು ಬಿಸಿಲಲ್ಲಿ ಅವುಗಳನ್ನು ಚೆನ್ನಾಗಿ ಒಣಗಿಸಿಡುವದೂ ಸ್ವಲ್ಪ ಕಷ್ಟಕರವಾದುದು.

ಇವೆಲ್ಲವುಗಳಿಗೆ ಬದಲಾಗಿ ಇನ್ನೊಂದು ಉಪಾಯವಿದೆ, ಅದು ಬಹು ಸುಲಭವೂ ಅಹುದು ; ಅದಕ್ಕೆ ವೆಚ್ಚವೂ ಕಡಿಮೆಹತ್ತುತ್ತದೆ. ಕೇರಿನಎಣ್ಣೆ ಡಾಂಬರ ಗಳನ್ನು ಕೊಂಡು ತರಬೇಕಾಗುತ್ತದೆ. ಆದರೆ ಈ ಉಪಾಯದಿಂದ ಮನೆಯಲ್ಲಿ ಇದ್ದಬಿದ್ದ ರದ್ದೀಕಾಗದದ ತುಂಡುಗಳೆಲ್ಲ ಮಾಯವಾಗಿಬಿಡುತ್ತವೆ.

ಈ ಉಪಾಯಕ್ಕೆ ಮೊದಲು ಹಳೆಯ ತುಂಡುಗಳನ್ನು (ರದ್ದೀ ತುಂಡು ಗಳನ್ನು) ನೀರಿನಲ್ಲಿ ನೆನೆಯಿಡಬೇಕು. ಮೂರುದಿನಗಳ ವರೆಗೆ ನೀರಿನಲ್ಲಿ ಹಾಗೇ ಇಟ್ಟಿರಬೇಕು. ಜೊತೆಗೆ ಸುಮಾರು ೫ ತೊಲಿ ಮೆಂಥೇದ ಕಾಳುಗಳನ್ನೂ ನೆನೆ

ಯಿಡಬೇಕು. ಅದನ್ನೂ ಎರಡು ಮೂರು ದಿನಗಳ ವರೆಗೆ; ಬಳಿಕ ನೆನೆದ ಕಾಗದ ವನ್ನು ಒರಳಿನಲ್ಲಿ ಹಾಕಿ ಸಣ್ಣಾಗಿ ರುಬ್ಬಬೇಕು. ಬಳಿಕ ಮೆಂಥೇದ ಕಾಳುಗಳನ್ನೂ ಬೇರೆಯಾಗಿ ರುಬ್ಬಿಕೊಂಡು ಮತ್ತೆ ಎರಡನ್ನೂ ಕೂಡಿಸಿ ಗಂಧದಂತೆ ಗಟ್ಟಿಯಾಗಿ ರುಬ್ಬಬೇಕು. ಅಷ್ಟು ನೀರುನೀರಾಗಿರಬಾರದು, ಇಂತಹ ಮಿಶ್ರಣ ಒಂದು ಮರಕ್ಕೆ ಸುಮಾರು ಒಂದು ರಬ್ಬರಿನ ಚೆಂಡಿನಷ್ಟು ಬೇಕಾಗುತ್ತದೆ. ಈ ಮಿಶ್ರಣವನ್ನು ಮರದ ಮೇಲ್ಬದಿಗೂ ಕೆಳಬದಿಗೂ ಎಲ್ಲ ಕಡೆಗೂ (ವಿಶೇಷವಾಗಿ ಪೊಳ್ಳುಗಳಲ್ಲಿ) ಹಚ್ಚಬೇಕು. ಮಿಶ್ರಣದ ಕೆಲಭಾಗ ಪುಡಿಯಾಗಿ ಉದುರಿಹೋಗಬಹುದು. ಆದರೆ ಮೆಂಥೇದ ಕಾಳಿನಿಂದ ಮಿಶ್ರಣವು ಜಿಗುಟಾಗಿ ಪೊಳ್ಳುಗಳೆಲ್ಲ ಗಟ್ಟಿಯಾಗಿ ಕೂಡುವದು. ಒಂದು ದಿನದ ಮಟ್ಟಿಗೆ ಈ ಮರಬುಟ್ಟಿಗಳನ್ನು ಬಿಸಿಲಲ್ಲಿಟ್ಟು ಒಣಗಿಸಿದರೆ ಸಾಕು. ಮುಂದೆ ಆರು ತಿಂಗಳವರೆಗೂ ಅವು ತಾಳಿಕೆ ಬರುವವು. ಮರಬುಟ್ಟಿಗಳ ಬಣ್ಣವೂ ಹಾಗೇ ಉಳಿಯುವದು. ವೆಚ್ಚವೂ ಕಡಿಮೆಯಾಗಿರುವದು ಒಂದು ಸಲ ಪ್ರಯೋಗ ಮಾಡಿ ನೋಡಿ.

**ಪಾಕಶಾಸ್ತ್ರ :**

ಇಂದಿನ ರೇಶನ್ ಕಾಲದಲ್ಲಿ ಒಳ್ಳೆಯ ಪದಾರ್ಥಗಳನ್ನು ಹಾಕಿ ತಿಂಡಿ ಗಳನ್ನು ಮಾಡುವದು ಅಷ್ಟೊಂದು ಸುಲಭವಾಗಿರುವದಿಲ್ಲ. ಸಿಕ್ಕ ಪದಾರ್ಥಗಳ ಲ್ಲಿಯೇ ಇಂದು ಒಳ್ಳೆಯ ತಿಂಡಿಗಳನ್ನು ಮಾಡುವದಿದೆ. ಅಡುಗೆ ಮಾಡುವದೊಂದೇ ಮಹಿಳೆಯರ ಕರ್ತವ್ಯವೆಂದು ದಿನದ ಇಪ್ಪತ್ತುನಾಲ್ಕು ಗಂಟೆಗಳಲ್ಲೂ ಅವರು ಅಡು ಗೆಯ ಮನೆಯಲ್ಲೇ ದುಡಿಯುತ್ತಿರುವದೂ ಉಚಿತವಾಗದು. ಕಾಳನ್ನು ತೊಳೆದು ಹಾಕಿ, ರುಬ್ಬಿ, ಹುರಿದು, ಕರಿದು ಮಾಡುವ ಪದಾರ್ಥಗಳಲ್ಲಿ ಜೀವನ ಸತ್ವ (ವ್ಹಿಟಾ ಮಿನ್ಸು) ಗಳು ನಾಶವಾಗಿ ಹೋಗುತ್ತವೆ. ತಿಂಡಿಗಳನ್ನು ಮಾಡಿಡುವ ವಿಧಾನವು ಹೆಚ್ಚು ವೆಚ್ಚದ್ದಾಗಿರಬಾರದು; ಆಹಾರವು ಹೆಚ್ಚು ಪರಿಶ್ರಮವಿಲ್ಲದೆ ಆರೋಗ್ಯಕ್ಕೆ ಹಿತಕರವಾಗಿರಬೇಕು. ಈ ದೃಷ್ಟಿಯಿಂದ ಬರೆದು ಕಳುಹಿಸಲ್ಪಡುವ ಪಾಕಶಾಸ್ತ್ರದ ವಿಷಯದ ಪ್ರಯೋಗಗಳಿಗೂ, ಲೇಖಗಳಿಗೂ ನಮ್ಮ 'ವೀರಮಾತೆ' ಯಲ್ಲಿ ಸುಸ್ವಾಗತವಿದೆ.

**ಟೊಮೇಟೊ ಜಾಮ್ :**

ಒಂದೊಂದು ವಸ್ತುಗಳು ಒಂದೊಂದು ಕಾಲದಲ್ಲಿ ಹೆಚ್ಚಾಗಿ ದೊರೆಯು ತ್ತವೆ, ಆಗ ಅವುಗಳ ಧಾರಣೆಯು ಇಳಿಯುತ್ತದೆ. ಸುಗ್ಗಿಯ ಕಾಲದಲ್ಲಿ ಕೆಂಪಾದ ಟೊಮೇಟೋ ಹಣ್ಣುಗಳು ಪೇಟೆಯಲ್ಲಿ ವಿಪುಲವಾಗಿ ದೊರೆಯುತ್ತವೆ. ಅವುಗಳನ್ನು ತಂದು ಜಾಮ್ ಮಾಡುವದಕ್ಕೆ ಮೊದಲು ನೀರಿನಲ್ಲಿ ಸ್ವಚ್ಛವಾಗಿ ತೊಳೆದು ಒರೆ ಸಿಟ್ಟುಕೊಳ್ಳಬೇಕು. ಬಳಿಕ ಅವುಗಳನ್ನು ಹಿಂಡಿ ರಸವನ್ನು ಬಟ್ಟೆಯಲ್ಲಿ ಸೋಸಿ ಒಂದು ಕಲಾಯಿಯ ಪಾತ್ರೆಯಲ್ಲಿ ಹಿಡಿದುಕೊಳ್ಳಬೇಕು. ಬಳಿಕ ಆ ರಸದ ಅಳತೆ

ಯಷ್ಟೇ ಸಕ್ಕರೆಯನ್ನು ಸೇರಿಸಿ ಎರಡನ್ನೂ ಕಲಾಯಿಯ ಪಾತ್ರೆಯಲ್ಲಿ ಕುದಿಯಲು ಇಡಬೇಕು. ಪಾಕ ಸ್ವಲ್ಪ ಏರಾದರೆ ಜಾಮು ಜೇನುತುಪ್ಪದಂತೆ ರುಚಿಯಾಗಿರುವದು. ಪಾಕವನ್ನು ಕೆಳಗಿಳಿಸಿದ ಬಳಿಕ ಯಾಲಕ್ಕಿಯ ಪುಡಿ, ದ್ರಾಕ್ಷಿ, ಬದಾಮಿಗಳನ್ನು ಪುಡಿಮಾಡಿ ಹಾಕಬೇಕು. ಎಷ್ಟೋದಿನಗಳವರೆಗೆ ಇದನ್ನು ಕಾಯ್ದು ಕೂಡ ಇಡಬಹುದು. ಇದು ಆರೋಗ್ಯಕ್ಕೆ ಬಹಳ ಹಿತಕಾರಿಯಾದುದು.



# ಮಾತಿನ ಜಾಣ್ಮೆ (ಒಂದು ಹರಟೆ)

**ಲೇಖಿಕೆ:— ಶ್ರೀಮತಿ ಚಂಪಾ ಮಹಿಷಿ ಬಿ. ಎ. ಬಿ. ಟಿ.**

**ಮಾತನಾಡುವದೂ ಒಂದು ಉತ್ತಮ ಕಲೆ; ಒಳ್ಳೆಯ ಮಾತುಗಳಿಂದ ಆಗಬಹುದಾದ ಕಾರ್ಯ ಕೊಂಕುನುಡಿಗಳಿಂದ ನಿಂತು ಹೋಗುವದೂ ಉಂಟು; ಮಾನವ ಮನವನ್ನರಿತು ಮಾತನಾಡಬಹುದಾದರೆ, ಎಲ್ಲೆಡೆಯಲ್ಲಿಯೂ ಸುಖ ಶಾಂತಿಗಳು ನೆಲೆಸುವವು — ಎಂಬುದನ್ನು ಲೇಖಿಕೆಯರು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.**

ಸುಮಾರು ಆರು ತಿಂಗಳುಗಳ ಹಿಂದೆ ಇರಬಹುದು: ದೊಡ್ಡ ಮನುಷ್ಯರೊಬ್ಬರ ಭಾಷಣವನ್ನು ಕೇಳಲು ಹೋಗಿದ್ದೆ; ಜನರು ಕಿಕ್ಕಿರಿದು ತುಂಬಿದ್ದರು. ಪುರುಷರು ಮುಂದಿನ ಸಾಲುಗಳಲ್ಲಿ ಕುಳಿತಿದ್ದರು. ಸ್ತ್ರೀಯರು ತಮ್ಮ ಮಕ್ಕಳ ಪರಿವಾರದೊಂದಿಗೆ ಸರಿಯಾದ ಸಮಯಕ್ಕೆ ಬಂದು ಭಾಷಣಕ್ಕಾಗಿ ಕಾಯ್ದಿದ್ದರು. ಅತಿಥಿಗಳೇನೋ ಸರಿಯಾದ ಸಮಯಕ್ಕೆ ಬರಲಿಲ್ಲ. ಆದರೂ ಜನರೆಲ್ಲರೂ ಆಶೆ ನಿರಾಶೆಗಳ ನಡುವೆ ಹೊಯ್ದಾಡುತ್ತ ಅತಿಥಿಗಳು ಬರುವವರೆಗೆ ಕುಳಿತು ಅವರ ಭಾಷಣವನ್ನು ಕೇಳಿಕೊಂಡೇ ಹೊರಟರು. ಭಾಷಣವನ್ನು ಕೇಳುವಾಗ ಅವರು ಸಮಯವು ಎಷ್ಟಾಯಿತು ಎಂಬದನ್ನೇ ಮರೆತಿರಬೇಕು. ಭಾಷಣಕಾರರ ಶೈಲಿಯೇ ಅಂತಹದಿತ್ತು. ಅವರು ತಮ್ಮ ಭಾಷಣದಲ್ಲಿ ಕೆಲವು ಅಭಿಪ್ರಾಯಗಳನ್ನು ಸಮರ್ಥಿಸಿದಾಗ ಜನರೆಲ್ಲರೂ ತಲೆದೂಗಿದರು. ವಿಚಾರಗಳನ್ನು ಮಂಡಿಸುವ ಅವರ ರೀತಿಯೇ ಅಂತಹದಿತ್ತು. ಮತ್ತು ಆ ಶೈಲಿಯ ವಿಚಾರವು ಬಂದಾಗ–ಇದು ಯಾವಾಗಲಾದರೊಮ್ಮೆ ತೋರಿಸುವ ಜಾಣತನವೇ ಅಥವಾ ಸಾಧನವೇ ಎಂಬ ವಿಚಾರವು ನನ್ನ ತಲೆಯಲ್ಲಿ ಮತ್ತೆ ಮತ್ತೆ ಸುಳಿಯಿತು.

ಮಾತುಗಾರಿಕೆ—ಅದೊಂದು ಕಲೆ—ಅದನ್ನು ಹಸ್ತಗತಮಾಡಿಕೊಳ್ಳಲು ಎಷ್ಟೋ ದಿವಸಗಳ ಸಾಧನೆಬೇಕು. ಇನ್ನು ನಮ್ಮಲ್ಲಿ ಅದನ್ನೇ ಕಲಿಸಲು ಪ್ರತ್ಯೇಕ ವಾದ ಶಾಲೆ, ಕಾಲೇಜುಗಳಿಲ್ಲದಿದ್ದರೂ ನಾವು ಸಮೀಪದಲ್ಲಿದ್ದವರಿಂದ ಕಲಿಯಲು ಯಾವಾಗಲೂ ಯತ್ನಿಸುತ್ತಿರುತ್ತೇವೆ. ಪರದೇಶಗಳಲ್ಲಿ ಈ ಕಲೆಯನ್ನು ಕಲಿಸು ವುದಕ್ಕಾಗಿ ಪ್ರತ್ಯೇಕವಾದ ಸಂಸ್ಥೆಗಳೇ ಇವೆ. ಅಲ್ಲಿ ಕಲೆಯನ್ನು ಕಲಿತುಕೊಂಡವರು ತಮ್ಮ ಪ್ರತಿಯೊಂದು ಕೆಲಸದಲ್ಲಿ ಯಶಸ್ವಿಯಾಗಬಲ್ಲರಂತೆ!

ಇನ್ನು ಮಾತುಗಾರಿಕೆಯು ಅನೇಕ ಬಗೆಗಳದಾಗಿದೆ-ಒಂದು ವಿಷಯವನ್ನು ಕೊಟ್ಟರೆ ಅದಕ್ಕೆ ಪೋಷಕವಾಗಿರುವ ವಿಚಾರಗಳಿಂದ ಅದನ್ನು ಸಮರ್ಥಿಸುವದು ಅಥವಾ ವಿರುದ್ಧ ವಿಚಾರಗಳಿಂದ ಅದನ್ನು ಖಂಡಿಸುವದು. ಇಂತಹ ಮಾತುಗಾರಿಕೆ ಗಾಗಿ ಶಾಲೆ ಕಾಲೇಜುಗಳಲ್ಲಿ ಪ್ರೋತ್ಸಾಹನವನ್ನು ಕೊಡುತ್ತಾರೆ– ಇದರ ಲಾಭವನ್ನು ಶಕ್ಯವಿದ್ದಷ್ಟು ಮಂದಿ ತೆಗೆದುಕೊಳ್ಳುತ್ತಾರೆ.

ಇನ್ನು, "ಮಾತು ಬಲ್ಲಣ್ಣ ತಾ, ಸೋತು ಹೋಹುದೆ ಲೇಸು. ಮಾತಿಗೆ ಮಾತು ಮಥಿಸಲ್ಕೆ ವಿಧಿ ಬಂದು ಆತುಕೊಂಡಿಹುದು ಸರ್ವಜ್ಞ," ಎಂಬ ಸರ್ವಜ್ಞನ ವಚನವನ್ನು ನೋಡಿದರೆ ಇದರಲ್ಲಿ ಸರ್ವಜ್ಞನು ನಾವು ನಿತ್ಯದ ವ್ಯವಹಾರದಲ್ಲಿ ಉಪಯೋಗಿಸುವ ಮಾತಗಳಿಗೂ ಜಾಣ್ಮೆಬೇಕೆಂದು ಹೇಳುತ್ತಿದ್ದಾನೆ. ಈ ಜಾಣ್ಮೆ ಸ್ತ್ರೀಪುರುಷರಿಬ್ಬರಿಗೂ ಬೇಕು. ಒಮ್ಮೆ ಒಂದು ಮಾತಿನ ಬಗ್ಗೆ ಈರ್ವರಲ್ಲಿ ಸ್ತ್ರೀಯರಲ್ಲಿ ಮತಭೇದವುಂಟಾಯಿತು. ಒಬ್ಬಳು, 'ನಾನು ಸುಳ್ಳು ಹೇಳುತ್ತಿರುವೆನೆ?' ಎಂದು ಹೇಳುತ್ತಿದ್ದಳು. ಮತ್ತೊಬ್ಬಳು ಕೂಡ ತನ್ನ ಎದುರಿಗಿದ್ದವಳನ್ನು ಇವೇ ಪ್ರಶ್ನೆಯನ್ನೇ ಕೇಳುತ್ತಿದ್ದಳು–"ನಾನು ಸುಳ್ಳು ಹೇಳುತ್ತಿರುವೆನೇ?" ಎಂದು ಇಬ್ಬರೂ ಪ್ರೌಢ ರಿದ್ದರು–ಇವರಲ್ಲಿ ಸೋಲುವವರು ಯಾರು? ಇಬ್ಬರೂ ಗೆಲ್ಲಲು ಇಚ್ಛಿಸುತ್ತಿದ್ದರು. ಇವರಿಬ್ಬರಲ್ಲಿ ಒಬ್ಬಳಿಗೆ ತಾನು ಮಾತಾಡುತ್ತಿರುವುದು ಸುಳ್ಳು ಎಂದು ಮನಸ್ಸಿಗೆ ಎನಿಸುತ್ತಿದ್ದರೂ ಬಹಿರಂಗವಾಗಿ ಅದನ್ನು ಒಪ್ಪುವಂತಿಲ್ಲ. ತಾನು ಮನಃಪೂರ್ವಕ ವಾಗಿ ಸತ್ಯವನ್ನೇನುಡಿಯುತ್ತಿರುವೆ ಎಂದು ನಂಬುವವಳು ತನ್ನ ಅಭಿಪ್ರಾಯವನ್ನು ಬದಲಿಸುವಂತಿಲ್ಲ. ಹೀಗಾಗಿ ಕೊನೆಗೆ ಯಾವ ನಿರ್ಣಯಕ್ಕೆ ಬಂದು ಮುಟ್ಟುವದು? ಪ್ರತಿಯಾಗಿ ಮಾತನಾಡುವವರಿಗೆ ತೀಕ್ಷ್ಣವಾದ ಸೋಲನ್ನು ಒಪ್ಪಿಕೊಳ್ಳುವ ಅನಿಷ್ಟ ಪ್ರಸಂಗವನ್ನು ತರದೆ, ಮೃದು ಮಾತುಗಳನ್ನಾಡಿ ತಮ್ಮ ನಿರ್ಣಯಕ್ಕೆ ಅವರೂ ಬರುವಂತೆ ಮಾಡುವದು ಅದೊಂದು ಜಾಣ್ಮೆಯೇ. "ನಿಮ್ಮದು ತಪ್ಪು" ಎಂದು ಮಾತ್ರ ಒತ್ತಿಯಾಗಿ ಹೇಳಬಾರದು–ಇಲ್ಲದೆ ಹೋದರೆ ತೀಕ್ಷ್ಣ ಜಗಳವಾಗುವ ಸಂಭವವಿದ್ದಾಗ ಜಾಣರಾದವರು ಸೋಲುವದೇ ಲೇಸು. ನೀವು ಹೇಳುವುದೇನೋ ಸರಿ ಈ ವಿಚಾರದಿಂದ ಕೂಡ (ಕೆಲಸದಿಂದ) ಅದೇ ಲಾಭವಾಗುವದು ಎಂದಾಗ ಮತ್ತೊಬ್ಬ ವ್ಯಕ್ತಿಗೆ ತನ್ನ ಸೋಲು ಅಷ್ಟು ಕಹಿಯಾಗಿ ತೋರುವದಿಲ್ಲ.

ತಮ್ಮ ಲೇಖನವನ್ನು ಒಂದು ಪತ್ರಿಕೆಗೆ ಕಳುಹಿಸಿ ಅದು ಪ್ರಕಟವಾಗು ವುದೇನೋ, ಎಂದು ಲೇಖಕರೊಬ್ಬರು ಹಾದೀ ನೋಡುವಾಗ ಆದೇ ತಿಂಗಳಿನ ಪತ್ರಿಕೆಯಲ್ಲಿ ಮುದ್ರಿತವಾಗದಿರುವ ಲೇಖನಗಳ ಲೇಖಕರಿಗಾಗಿ ಸಂಪಾದಕರಿಂದ ಕಿವಿಮಾತುಗಳು ಪ್ರಕಟಿಸಲ್ಪಟ್ಟಿದ್ದವು.

"ಪ್ರಯತ್ನವನ್ನು ಬಿಡಬೇಡಿ; ನಿಮ್ಮ ಒಳ್ಳೆಯ ಲೇಖನವನ್ನು ತಪ್ಪದೆ ಪ್ರಕಟಿಸುವೆವು." ತಮ್ಮ ಸ್ಥಾನದ ಗೌರವ, ಹೊಣೆಗಾರಿಕೆಗಳನ್ನು ಕಾಯ್ದುಕೊಂಡು ಇಂತಹ ಸೂಚನೆಯನ್ನು ಕೊಡುವ ಸಂಪಾದಕರ ಜಾಣ್ಮೆಗೆ ತಲೆದೂಗಿ, ತಮ್ಮ ಸೋಲಿಗೆ ನಿರಾಶರಾಗದೆ ಲೇಖಕರು ಮತ್ತೆ ಮರುತಿಂಗಳ ತಮ್ಮ ಲೇಖನವನ್ನು ತಪ್ಪದೆ ಕಳುಹಿಸುವರು. ಸಂಪಾದಕರು ತಮ್ಮ ಮಾತಿನ ಯುಕ್ತಿಯಿಂದ ಲೇಖಕ ರನ್ನು ಆಶಾವಾದಿಗಳನ್ನಾಗಿ ಮಾಡಿದ ಶ್ರೇಯಸ್ಸನ್ನೂ ಪಡೆಯುವರು!

'ನಿಮ್ಮ ಪ್ರಶ್ನೆಗೆ ನಮ್ಮ ಉತ್ತರ' ಎಂಬ ವಿಭಾಗದಲ್ಲಿ ವ್ಯರ್ಥವಾದ ಪ್ರಶ್ನೆಯೊಂದನ್ನು ಕೇಳಿದವರಿಗೆ ಆ ವಿಭಾಗದ ಸಂಪಾದಕರು ಹೀಗೆ ಉತ್ತರ ಕೊಟ್ಟಿದ್ದುಂಟು: "ಸ್ವಲ್ಪ ವಿಚಾರಮಾಡಿ. ನಿಮ್ಮ ಪ್ರಶ್ನೆಯ ಉತ್ತರ ನಿಮಗೇ ಹೊಳೆ ಯುವದು. ಮುಂದಿನ ಸಲ ನಿಮ್ಮಿಂದ ಒಳ್ಳೆ ಪ್ರಶ್ನೆಗಳು ಬರುವವೆಂದು ಆಶಿಸುವೆವು." ಈ ಉತ್ತರದಿಂದ ಲೇಖಕರು ತಮ್ಮ ಅರ್ಥವಿಲ್ಲದ ಮೊದಲಿನ ಪ್ರಶ್ನೆಯನ್ನು ಮತ್ತೆ ಕಳುಹಿಸುವ ಸಾಹಸ ಮಾಡದೆ, ಅರ್ಥವಿದ್ದ ಹೆಚ್ಚು ಯೋಗ್ಯವೆನಿಸಿದ ಪ್ರಶ್ನೆಗಳನ್ನು ಕಳುಹಿಸುವರು. ಲೇಖಕರಿಗೆ ಕಟುವಾಗಿ ಮಾತನಾಡದೆ ತಮಗೆ ಯೋಗ್ಯವೆನಿಸಿ ದಾಗಲೇ ಅವುಗಳನ್ನು ಪ್ರಕಟಿಸುವ ಅಥವಾ ಅವುಗಳಿಗೆ ಉತ್ತರ ಕೊಡುವದು, ಇದೊಂದು ಸಂಪಾದಕರ ರೀತಿ!

ಮಹತ್ವದ ವಿಷಯಗಳ ಮೇಲೆ ಅಧಿಕಾರವಾಣಿಯಿಂದ ಮಾತನಾಡುವ ಸ್ತ್ರೀಯರು ಎಷ್ಟೋ ಮಂದಿ ಇರುವರು. ಅವರ ಅನುಭವ ವಿಚಾರಗಳನ್ನು ಕಡೆಗಣಿ ಸುವಂತಿಲ್ಲ. ಆದರೆ ಅಂತಹ ಸ್ತ್ರೀಯರು ಬಹಳವಾಗಿಲ್ಲ. ಜನಸಾಮಾನ್ಯರಿಗೆ ಬೇಕಾದುದು ನಿತ್ಯದ ವ್ಯವಹಾರದ ಬಳಕೆಯ ಮಾತುಗಳು. ಆದ್ದರಿಂದ ಸಾಮಾನ್ಯ ಸ್ತ್ರೀಯರು ಮಾತಿನ ಜಾಣ್ಮೆಯಿಂದ ನೆರೆಹೊರೆಯವರೊಡನೆ ಸಣ್ಣಪುಟ್ಟ ಮಾತುಗಳಿ ಗಾಗಿ ಆಗುವ ಜಗಳ ಮನಸ್ತಾಪಗಳನ್ನು ತಪ್ಪಿಸಬಲ್ಲರು. "ಅವರು ನಮ್ಮ ನೆರೆಯು ವರಾದರೂ ಹತ್ತು ವರ್ಷಗಳಿಂದ ಒಂದು ಸಣ್ಣ ಮಾತಿನ ಸಲುವಾಗಿ ನಾವು ಅವ ರೊಡನೆ ಮಾತನ್ನು ಬಿಟ್ಟಿರುವೆವು ಅಥವಾ ಅವರು ನಮ್ಮೊಡನೆ ಮಾತನ್ನೇ ಆಡು ವದಿಲ್ಲ" ಎಂಬ ಪ್ರಸಂಗಗಳು ಕಡಿಮೆಯಾಗಬಹುದು. ನಮ್ಮ ಮಾತುಗಳನ್ನು ನಾವು ತಿದ್ದಿಕೊಳ್ಳಬೇಕಲ್ಲದೆ, ಮೇಲಿಂದ ಮೇಲೆ ಒಳ್ಳೆಯ ನೆರೆಯನ್ನು ಹುಡುಕಿ ಕೊಂಡು ಹೋಗುವದರಲ್ಲಿ ಅರ್ಥವಿಲ್ಲ. ಮಾತನಾಡುವ ಯುಕ್ತಿ ಅರಿಯದವರಿಗೆ ಎಲ್ಲರೂ ದುಷ್ಟರಾಗಿಯೇ ಕಾಣಬಹುದು. ಅಂದ ಮೇಲೆ ನೆರೆಯವರಾದರೂ ಬೇರೊಂದು ಊರಲ್ಲಿ ಇದ್ದವರಂತೆ ನಾವು ಆಗುವೆವು. ಮತ್ತು ಇದರಿಂದ ಅಶಾಂತ ತೆಯ ವಾತಾವರಣವಲ್ಲದೆ ಬೇರೊಂದು ಲಾಭವಿಲ್ಲ. ಇಂತಹ ಮನಸ್ತಾಪವನ್ನು ಕಳೆಯಲು ಯತ್ನಿಸುವದು ಉಚಿತವಲ್ಲವೇ?

# ಹಕ್ಕು ಹೊಣೆಗಳಲ್ಲಿ ಸ್ತ್ರೀಯರಿಗೆ ಸಮಾನತೆ

ಲೇಖಕರು :— ಶ್ರೀ ಮಳಿಯೆ ಗೋವರ್ಧನರಾಯರು.

**ಜನತೆಯ ಅರ್ಧ ಭಾಗವನ್ನು ಸ್ತ್ರೀಯರೇ ಆಕ್ರಮಿಸಿರುವಾಗ, ಅವರನ್ನು ಹಿಂದಿಟ್ಟು ರಾಷ್ಟ್ರವು ಹೇಗೆ ತಾನೇ ಮುಂದುವರಿಯಬಲ್ಲದು? ನಮ್ಮದೇ ಆದ ಸರಕಾರವು ನಮಗಾಗಿ ದುಡಿಯುತ್ತಿರುವದು, ನಾವೂ ಅವರೊಡನೆ ಸಹಕರಿಸ ಬೇಕಲ್ಲವೇ?**

ಭಾರತವು ಬಲಾಢ್ಯ ರಾಷ್ಟ್ರವಾಗಿ ತನ್ನ ಸೇವಾ ಶಕ್ತಿಯಿಂದ ಜಗತ್ತಿನಲ್ಲಿ ಶಾಂತಿಸುಖಗಳನ್ನು ಸ್ಥಾಪಿಸುವಂತಾಗಬೇಕಾದರೆ ಭಾರತೀಯ ಸಮಾಜವು ಸರ್ವಾಂಗ ಪರಿಪುಷ್ಟವಾಗಿ ಬೆಳೆಯಬೇಕು. ಊನಾಂಗ ವಿಕಲಾಂಗಗಳಿಂದ ಕೂಡಿದ ಸಮಾಜ, ದೀನದಲಿತರಿಂದ ತುಂಬಿದ ಸಮಾಜ ಮತ್ತು ಆರ್ಥಿಕ ಅವನತಿಯಿಂದ ಜರ್ಜರಿತ ವಾದ ವರ್ಗಗಳುಳ್ಳ ಸಮಾಜವು ಸುದೃಢವಾಗಿ ಬೆಳೆಯಲಾರದು.ಸಮಾಜದ ಪ್ರತಿ ಯೊಂದು ಘಟಕದ ಅಥವಾ ವ್ಯಕ್ತಿಯ ಮತ್ತು ಪ್ರತಿಯೊಂದು ವರ್ಗದ ಉತ್ಕರ್ಷ ವಾಗದೆ ಇಡಿಯ ಸಮಾಜದ ಉನ್ನತಿಯಾಗಲಾರದು.

ಎಲ್ಲರ ಏಳ್ಗೆಯೆಂದರೆ ಪ್ರತಿಯೊಂದು ವ್ಯಕ್ತಿಯ ಏಳ್ಗೆಯೆಂಬ ದೃಷ್ಟಿಯಿರ ಬೇಕು. ಆದರೆ ತಕ್ಕ ಎಡೆಯಿಲ್ಲದೆ ಏಳ್ಗೆಯೆಂಬುದಿಲ್ಲ. ವ್ಯಕ್ತಿಯ ಜೀವನವಿಕಾಸಕ್ಕೆ ಆವಶ್ಯಕ ಆಸ್ಪದವು ಬೇಕು. ಭಾರತೀಯ ಸಮಾಜದಲ್ಲಿ ಅರ್ಧಕ್ಕಿಂತ ಅಧಿಕವಾಗಿ ಸ್ತ್ರೀಯರಿದ್ದಾರೆ. ಹಿಂದುಳಿದಿರುವ ಹೆಂಗಸರು ವಿದ್ಯಾಬುದ್ಧಿ ಕಲಾಬಲಗಳಿಂದ ವಿಜ್ಞಾನ ಸಂಪತ್ತಿನಿಂದ ಯುಕ್ತರಾಗಿ ಸ್ವಾಭಿಮಾನದಿಂದ ಸುಸಂಘಟಿತರಾಗಿ ಬೆಳೆಯ ದಿದ್ದರೆ ಕೇವಲ ಪುರುಷ ವರ್ಗದಿಂದಲೇ ರಾಷ್ಟ್ರದೃಷ್ಟಿಯಿಂದ ಯಾವ ಪ್ರಭಾವ ಶಾಲಿಯಾದ ಕಾರ್ಯವೂ ಆಗಲಾರದು. ಆದರೆ ಸ್ತ್ರೀಯರಿಗೆ ಸರಕಾರದ ಮತ್ತು ಸಮಾಜದ ಹಕ್ಕುಹೊಣೆಗಳಲ್ಲಿ ಸಮಾನತೆಯಿಲ್ಲದಿದ್ದರೆ ಅವರು ರಾಜಕೀಯ, ಸಾಮಾ ಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ತಕ್ಕ ಸ್ಥಾನಮಾನ ಅಧಿಕಾರಗಳನ್ನು ಪಡೆದು ರಾಷ್ಟ್ರದ ಪೋಷಣ ಪ್ರಗತಿಗಳಲ್ಲಿ ಸಹಕರಿಸುವುದೆಂತು?

ಪರಾವಲಂಬನವೃತ್ತಿಯು ತೊಲಗಿ ಸ್ವಾವಲಂಬನವು ಸಿದ್ಧಿಸದೆ ಯಾವ ವ್ಯಕ್ತಿಗೂ ಸ್ಥಿರವಾದ ಸುಖಸನ್ಮಾನಗಳು ಸಿಕ್ಕಲಾರವು. ಸ್ತ್ರೀಸಮಾಜದಲ್ಲಿ ಸುಶಿಕ್ಷಿತ ರಾದವರು ಹಾಗೂ ಸ್ತ್ರೀಯರ ಉತ್ಕರ್ಷದಲ್ಲಿ ಆಸ್ಥೆಯುಳ್ಳವರು ಎಷ್ಟೋಕಾಲದಿಂದ ಮಹಿಲಾವರ್ಗದ ಮುನ್ನಡೆಗಾಗಿ ಪ್ರಯತ್ನಪಡುತ್ತಿದ್ದಾರೆ. ಅದಕ್ಕಾಗಿ ಅನೇಕ ಸಭೆ ಸಮ್ಮೇಲನಗಳಾದವು. ಸಂಘ ಸಂಸ್ಥೆಗಳು ಹುಟ್ಟಿದವು. ಆರ್ಥಿಕ, ಸಾಮಾಜಿಕ ರಾಜಕೀಯ ಕ್ಷೇತ್ರಗಳಲ್ಲಿಯೂ ಎಡೆಬಿಡದ ಪ್ರಯತ್ನಗಳು ನಡೆದಿವೆ. ಆದರೂ ಮಹಿಲಾವರ್ಗದ ವಿಕಾಸೋನ್ನತಿಗಳು ಸಾಕಷ್ಟು ಸಿದ್ಧಿಸಲಿಲ್ಲ.

ಸ್ತ್ರೀವರ್ಗದ ಸಾಹಸೋತ್ಸಾಹಗಳಿಗೆ ತಕ್ಕ ಪ್ರೋತ್ಸಾಹ ಪೋಷಣೆಗಳು ಸರಕಾರದಿಂದಲೂ ಸಿಕ್ಕಬೇಕು. ಭಾರತದ ಸ್ವಾತಂತ್ರ್ಯ ಸಿದ್ಧಿಗಾಗಿ ಪುರುಷರಂತೆ ಸ್ತ್ರೀಯರೂ ಕಷ್ಟಪಟ್ಟು ದುಡಿದಿದ್ದಾರೆ. ಆದುದರಿಂದ ಸ್ವತಂತ್ರ ಭಾರತದಲ್ಲಿ ಸ್ತ್ರೀಯರ ಮೂಲಭೂತ ಹಕ್ಕುಗಳನ್ನು ಕಾಪಾಡಿಕೊಂಡು ಅವರ ಪ್ರಗತಿಗೆ ತಕ್ಕ ಅವಕಾಶ ಸಾಧನಗಳನ್ನು ಒದಗಿಸುವುದು ಸರಕಾರದ ಮುಖ್ಯ ಕರ್ತವ್ಯವಾಗಿರುವುದು. ಭಾರತದ ಪ್ರಜಾರಾಜ್ಯ ಘಟನೆಯಂತೆ ಈ ಕರ್ತವ್ಯವನ್ನು ಆಡಳಿತದ ನಿರ್ದೇಶಕ ತತ್ತ್ವ (Directive Principles) ಗಳಲ್ಲಿಯೇ ಸೇರಿಸಿದ್ದಾರೆ. ಅಂದ ಬಳಿಕ ಭಾರತ ಸರಕಾರವು ಹೆಂಗಸರ ಹಕ್ಕು ಹಿತಗಳ ರಕ್ಷಣೆಗಾಗಿ ತಕ್ಕ ಏರ್ಪಾಡುಗಳನ್ನು ಮಾಡುವ ಹೊಣೆಯುಳ್ಳದಾಗಿದೆ.

ಇನ್ನು ಈಗಿರುವ ಕಾಂಗ್ರೆಸ ಸರಕಾರದ ದೃಷ್ಟಿಯಿಂದಲೂ ಈ ವಿಷಯವನ್ನು ಆಲೋಚಿಸುವುದು ಒಳಿತು. ಮೊನ್ನೆ ಜರುಗಿದ ಸಾರ್ವತ್ರಿಕ ಚುನಾವಣೆಗಳಲ್ಲಿ ಕಾಂಗ್ರೆಸ ಪಕ್ಷವು ತನ್ನ ಚುನಾವಣಾ ಘೋಷಣೆಯಲ್ಲಿ ಸ್ತ್ರೀ ಸಮಾಜಕ್ಕೆ ಕೆಳಗೆ ಕಾಣಿಸಿದ ಆಶ್ವಾಸನಗಳನ್ನು ಕೊಟ್ಟದೆ.

“ಭಾರತದ ಸ್ತ್ರೀಯರು ಹಿಂದಿನಕಾಲದಲ್ಲಿ ಮತ್ತು ವಿಶೇಷವಾಗಿ ಭಾರತದ ಬಿಡುಗಡೆಯ ಹೋರಾಟದಲ್ಲಿ ಪ್ರಖ್ಯಾತವಾದ ಪಾತ್ರವನ್ನು ವಹಿಸಿ ಹಲವು ಬಗೆಯಲ್ಲಿ ಹೆಸರುಗಳಿಸಿದ್ದಾರೆ. ಆದರೆ ಅನೇಕ ಸಾಮಾಜಿಕ ಮತ್ತು ಇತರ ದೌರ್ಬಲ್ಯಗಳಿಂದ ಅವರು ಬಳಲುತ್ತಿದ್ದಾರೆ. ಅವರಿಗಿರುವ ತೊಂದರೆಗಳನ್ನೆಲ್ಲ ಹೋಗಲಾಡಿಸುವುದು ಮಹತ್ವದ ವಿಷಯವಾಗಿದ್ದು, ಅದರಿಂದ ಮಹಿಳೆಯರಿಗೆ ನಮ್ಮ ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯಲ್ಲಿ ಪೂರ್ಣ ಪಾತ್ರವನ್ನು ಕೈಕೊಂಡು, ಜನತೆಯ ಮತ್ತು ಕುಟುಂಬದ ಜೀವನಕ್ಕಾಗಿ ತಮ್ಮ ವಿಶೇಷ ಸೇವೆಯನ್ನು ಸಲ್ಲಿಸಲು ಅನುಕೂಲವಾಗುವುದು. ಮುಖ್ಯವಾಗಿ, ಅವರು ಸಾಮಾಜಿಕ ಕಲ್ಯಾಣದ ಮತ್ತು ಸಾಮಾಜಿಕ ಶಿಕ್ಷಣದ ಚಟುವಟಿಕೆಗಳೊಡನೆ ನಿಕಟಸಂಬಂಧವನ್ನು ಇಡಬೇಕಾಗುವುದು. ಮುಂದಿನ ಪೀಳಿಗೆಯ ದೃಷ್ಟಿಯಿಂದ ಪುರುಷರಿಗಿಂತ ಸ್ತ್ರೀಯರ ಮೇಲೆಯೇ ಹೆಚ್ಚಿನ ಹೊಣೆಯಿರುವದು. ಹಾಗೂ ಅವರಿಗೆ ಎಲ್ಲ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಪೂರ್ಣ ಭಾಗವಹಿಸಲು ಅವಕಾಶವೀಯದಿದ್ದರೆ ರಾಷ್ಟ್ರದ ಪ್ರಗತಿಯೇ ಕುಂಠಿತವಾಗುವುದು. ಆದುದರಿಂದ ಶಾಸನ ಸಭೆಗಳಲ್ಲಿ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಸೇವೆಸಲ್ಲಿಸುವಂತೆ ಅವರಿಗೆ ಅವಕಾಶವೀಯಲು ಕಾಂಗ್ರೆಸು ಸರ್ವ ಪ್ರಯತ್ನಗಳನ್ನು ಮಾಡಬೇಕೆಂಬ ಅಭಿಪ್ರಾಯವುಳ್ಳದಾಗಿದೆ.”

ಕಾಂಗ್ರೆಸಿನ ಚುನಾವಣಾ ಘೋಷಣೆಯ ಈ ಅಂಶವನ್ನು ಮನದಂದರೆ ಕಾಂಗ್ರೆಸ ಸರಕಾರವು ಸ್ತ್ರೀಯರ ಸರ್ವವಿಧದ ಪ್ರಗತಿಗಾಗಿ ತಕ್ಕ ಕ್ರಮುಗಳನ್ನು ಕೈಕೊಳ್ಳಲು ವಚನಬದ್ಧವಾಗಿದೆ. ಮತ್ತು ಈ ದಿಶೆಯಲ್ಲಿ ಕಾಂಗ್ರೆಸ ಸಂಸ್ಥೆ ಹಾಗೂ ಸರಕಾರಗಳು ಸರ್ವ ಪ್ರಯತ್ನಗಳನ್ನು ಮಾಡುವುದರಲ್ಲಿ ಸಂದೇಹವಿಲ್ಲ. ಆದರೆ

ಕೇವಲ ಸರಕಾರದ ಪ್ರಯತ್ನಗಳನ್ನವಲಂಬಿಸಿ ಸ್ತ್ರೀಸಮಾಜದವರು ಕಾಲಹರಣ ಮಾಡಲಾಗದು. ಸರಕಾರವು ಈ ಬಗ್ಗೆ ಕೈಕೊಳ್ಳುವ ಕಾರ್ಯಕ್ರಮದಲ್ಲಿ ಜನತೆಯ ಕ್ರಿಯಾಶೀಲ ಸಹಕಾರವು ಅವಶ್ಯವೆಂಬುದನ್ನು ಮರೆಯಲಾಗದು.

ಸ್ವಾತಂತ್ರ್ಯ ಸಂಪಾದನೆಯ ನಂತರ ಕಳೆದ ನಾಲ್ಕೈದು ವರ್ಷಗಳು ರಾಷ್ಟ್ರದ ಸ್ವಾತಂತ್ರ್ಯವನ್ನು ಸ್ವೀಕರಿಸಿ ದೇಶದ ಎಲ್ಲ ಭಾಗಗಳನ್ನು ಒಂದೇ ಆಡಳಿತಕ್ಕೊಳ ಪಡಿಸಿ ಭದ್ರತೆಯನ್ನುಂಟುಮಾಡುವುದರಲ್ಲಿ ಹಾಗೂ ತೊಡಕಿನ ವಿವಿಧ ಸಮಸ್ಯೆಗಳ ನ್ನೆದುರಿಸುವುದರಲ್ಲಿ ಕಳೆದವು. ಕಾಂಗ್ರೆಸಿನ ಘನೋದ್ದೇಶಗಳು ಸಾಧಿಸದಿದ್ದರೆ ನಮ್ಮ ರಾಜಕೀಯ ಸ್ವಾತಂತ್ರ್ಯಕ್ಕೆ ಅರ್ಥವೇ ಉಳಿಯುವುದಿಲ್ಲ. ಕಾಂಗ್ರೆಸ ಘಟನೆ ಯಲ್ಲಿ ಸಹ ಮುಂದಿನ ಆರ್ಥಿಕ ಮತ್ತು ಸಾಮಾಜಿಕ ಸಂಘಟನೆಯ ಸ್ವಭಾವೋ ದ್ದೇಶಗಳನ್ನು ಕುರಿತು ಸ್ಪಷ್ಟವಾದ ಹೇಳಿಕೆಯಿದೆ. “ ಪ್ರತಿಯೊಂದು ವ್ಯಕ್ತಿಗೆ ರಾಜ ಕೀಯ, ಆರ್ಥಿಕ ಸಾಮಾಜಿಕ ಹಕ್ಕುಗಳಲ್ಲಿ ಸಮಾನತೆ, ಸಮಾವಕಾಶಗಳನ್ನಿತ್ತು ವಿಶ್ವಶಾಂತಿ, ವಿಶ್ವಬಂಧುತ್ವಗಳನ್ನಪೇಕ್ಷಿಸುವ ಸಹಕಾರೀ ಕಾಮನ್‌ವೆಲ್ಥನ್ನು ಶಾಂತ ವಾದ ನ್ಯಾಯವಾದ ಮಾರ್ಗಗಳಿಂದ ಸ್ಥಾಪಿಸುವುದು ” ಕಾಂಗ್ರೆಸ ಘಟನೆಯ ಹಿರಿ ಗುರಿಯಾಗಿದೆ. ಉದ್ದೇಶ ಉಪಾಯಗಳೆರಡಕ್ಕೂ ಸಹಕಾರವೇ ಆಧಾರವಾಗಿದ್ದು ಘರ್ಷಣ ಸ್ಪರ್ಧೆಗಳು ತಿರಸ್ಕರಿಸಲ್ಪಟ್ಟಿವೆ. ಸಾಮಾಜಿಕ ವ್ಯವಸ್ಥೆಯ ಈ ಕಲ್ಪನೆಯು ಸ್ತ್ರೀಪುರುಷರೆಂಬ ಭೇದವಿಲ್ಲದೆ ಪ್ರತಿಯೊಂದು ವ್ಯಕ್ತಿಗೆ ಸಮಾವಕಾಶ ಸಮಾನಾಧಿ ಕಾರವುಳ್ಳ ಸರ್ವ ಧರ್ಮ ಸಮದೃಷ್ಟಿಯ (ಜಾತ್ಯತೀತ) ರಾಷ್ಟ್ರವೆಂದರೇನೆಂಬು ದನ್ನು ತಿಳಿಸುವುದು. ಈ ತತ್ವಾನುಸಂಧಾನವು ಸರಿಯಾಗಿ ನಡೆದರೆ ಸಾಮಾಜಿಕ ಶಾಂತಿಪ್ರಗತಿಗಳಿಗೆ ಸರ್ವಾನುಕೂಲವುಂಟಾಗಿ ಭಾರತವು ಬಲಶಾಲಿಯಾಗಬಲ್ಲದು.

ಭಾರತದಂತಹ ಅಪರಿಮಿತವಾದ ನೈಸರ್ಗಿಕ ಸಂಪತ್ತುಳ್ಳ ದೇಶದ ಪ್ರಗತಿ ಯಾಗಬೇಕಾದರೆ ಪ್ರಜಾಹಿತಕ್ಕಾಗಿ ಆ ಸಂಪತ್ತಿನ ಪರಿಣಾಮಕಾರಕ ವಿನಿಯೋಗ ವಾಗಬೇಕು. ಇದಕ್ಕೆ ರಾಷ್ಟ್ರಜೀವನದ ಮತ್ತು ಆದರ ಚಟುವಟಿಕೆಗಳ ಎಲ್ಲ ಅಂಗ ಗಳ ಬಗೆಗೂ ಯೋಜನಾ ದೃಷ್ಟಿಯಿಂದ ವಿಚಾರಮಾಡಬೇಕು. ಅದಲ್ಲದೆ ಪ್ರಗತಿ ಸಾಧನೆಗೆ ಯೋಜನಾಬದ್ಧ ಕಾರ್ಯಕ್ರಮವು ಅವಶ್ಯವಾದುದು. ಯೋಜನೆಯು ರಾಷ್ಟ್ರಜೀವನದ ಸರ್ವಾಂಗಗಳನ್ನು ಒಳಗೊಂಡಿದ್ದರೆ ಮಾತ್ರ ಪ್ರಗತಿಯು ಸಮ ನಾಗಿ ಅಥವಾ ಏಕರೂಪದಲ್ಲಿ ನಡೆಯುವುದು. ಇಲ್ಲವಾದರೆ ರಾಷ್ಟ್ರದ ಹಿಂದುಳಿದ ಯಾವುದೇ ಭಾಗದಿಂದ ಈ ಪ್ರಗತಿಗೆ ತಡೆಯುಂಟಾದೀತು.

ಆದುದರಿಂದ ಹಿಂದುಳಿದಿರುವ ಹೆಂಗಸರು, ಹಳ್ಳಿಗಳು ಮುಂತಾದ ಅಂಗಗಳ ಕಡೆಗೆ ವಿಶೇಷ ಗಮನವನ್ನು ಯೋಜನಾ ಶಾಖೆಯು ಕೊಡಬೇಕು. ಹಿಂದುಳಿದ ಸಮಾಜ ಘಟಕಗಳನ್ನು ಉದ್ಧರಿಸಿ ರಾಷ್ಟ್ರರಥದ ಮುನ್ನಡೆಯಲ್ಲಿ ಅವು ತಡೆಯಾಗಿ ನಿಲ್ಲದಂತೆ ನೋಡಿಕೊಳ್ಳುವುದು ಜಾಣರಾದ ಆಡಳಿತಗಾರರ ಕಾರ್ಯ.

---

# ಹೆಣಿಕೆ-ಕಸೂತಿಯ ಬಟ್ಟೆಗಳನ್ನು ತೊಳೆಯುವ ವಿಧಾನ

ಲೇಖಿಕೆ: **ಸರೋಜಿನಿ**

**ಮಕ್ಕಳನ್ನು ಸಂತಯಿಸುವಂತೆ, ಮನೆಯನ್ನು ಅಂದವಾಗಿಡುವದೂ ಗೃಹಣಿಯ ಮುಖ್ಯವಾದ ಕೆಲಸ; ನಯವಾದ ಹೆಣಿಕೆ ಕಸೂತಿಯ ಬಟ್ಟೆಗಳನ್ನು ಕೊಳೆಯಾಗದಂತೆ ಶುಭ್ರವಾಗಿರಿಸಿ, ಮನೆಯನ್ನಲಂಕರಿಸಬಲ್ಲ ಗೃಹಣಿ ಮನವನ್ನೂ ಪ್ರಸನ್ನವಾಗಿರಿಸುವಳು.**

ನೂಲಿನ ಬಟ್ಟೆಗಳನ್ನು ದಿನಾಲು ಉಪಯೋಗಿಸುತ್ತೇವೆ. ಒಗೆಯುವ ಸೋಡಾ, ಸಬಕಾರ ಇತ್ಯಾದಿಗಳನ್ನು ಹಾಕಿ ಅವುಗಳನ್ನು ಒಗೆಯುತ್ತೇವೆ. ಹಸನಾಗಿರಿಸುತ್ತೇವೆ. ನಯವಾದ ಬಟ್ಟೆಗಳಿಗೆ, ರೇಶಿಮೆಯ ಜಿನುಗು ಬಟ್ಟೆಗಳಿಗೆ ಈ ಸೋಡಾ ಸಬಕಾರಗಳನ್ನು ಹಾಕುವದು ಕೂಡ ಅಪಾಯಕರವೇ. ರೇಶಿಮೆಯ ಬಟ್ಟೆಗಳನ್ನು ಹೆಚ್ಚು ವೆಚ್ಚವಿಲ್ಲದೆ ಅರಟಳಕಾಯಿಯ ನೊರೆಯಲ್ಲಿ ತೊಳೆಯಬಹುದು. ಇದರಿಂದ ಬಟ್ಟೆಯ ಅಲ್ಪ ಸ್ವಲ್ಪ ಕೊಳೆಯೂ ಹೋಗುವದು, ಬಟ್ಟೆಯ ಹೊಳಪೂ ಉಳಿಯುವದು. ಕೆಲವನ್ನು, ಉದಾಹರಣೆಗೆ ಉಣ್ಣೆಯ ಬಟ್ಟೆಗಳನ್ನು, ಜಾರ್ಜಟ, ಆರ್ಗಂಡೀ ಇತ್ಯಾದಿಗಳನ್ನು ಹಲವು ಸಲ ಉಪಯೋಗಿಸಿದ ಮೇಲೆ ಸ್ವಚ್ಛ ಮಾಡಬೇಕಾಗುವದು; ಆದರೆ ನೀರಿನಲ್ಲಿ ತೋಯಿಸಿ ಒಗೆದ ಬಟ್ಟೆಯ ಸ್ವರೂಪವೇ ಬದಲಾಗಿ ಹೋಗುವದು. ಅಂಥವುಗಳನ್ನು ಪೆಟ್ರೋಲಿನ ಸಹಾಯದಿಂದ ಸ್ವಚ್ಛ ಮಾಡಬೇಕಾಗುವದು; ಅದರಂತೆ ಹೆಣೆದ ಬಟ್ಟೆ, ಕಸೂತಿಯ ಬಟ್ಟೆಗಳನ್ನೂ ತೊಳೆಯುವ ವಿಧಾನ ಬೇರೆಯಾಗಿಯೇ ಇರುತ್ತದೆ.

ನೂಲಿನ ಲೇಸನ್ನು ತೊಳೆಯುವ ರೀತಿ: ಲೇಸನ್ನು ಒಂದು ಬಾಟಲಿಯ ದುಂಡು ಮೈಗೆ ಸುತ್ತಿ ಅದನ್ನು ನೀರು ತುಂಬಿದ (ಲೇಸಿನ ಭಾಗ ಮುಳುಗುವಂತೆ) ಪಾತ್ರೆಯಲ್ಲಿ ಇಡಬೇಕು. ಈ ನೀರಿನಲ್ಲಿ ಒಳ್ಳೆಯ ಸಾಬೂನನ್ನು ಹಾಕಿರಬೇಕು. ಬಾಟಲಿ ಹೊರಳಿ ಬೀಳುತ್ತಿದ್ದರೆ ಅದರ ಒಳಗೆ ಉಸುಕು ತುಂಬಿ ಇಡಬೇಕು. ಬಳಿಕ ಒಲೆಯ ಮೇಲಿಟ್ಟು ಈ ನೀರನ್ನು ಕುದಿಸಬೇಕು. ಹೀಗೆ ಕುದಿಸುವಾಗ ಲೇಸಿನ ಸುತ್ತು ಒಂದು ತುಂಡು ಬಿಳಿಯ ಬಟ್ಟೆಯನ್ನೂ ಸುತ್ತಿರಬೇಕು.

ನೀರು ಕುದಿಯ ತೊಡಗಿತೆಂದರೆ ಲೇಸಿನ ಕೊಳೆ ಕ್ರಮೇಣ ಬಿಡತೊಡಗುವದು. ನೀರು ಕೊಳೆಯಾದಂತೆ ಮತ್ತೆ ಬೇರೆ ನೀರನ್ನೂ ಹಾಕಿ ಕುದಿಸಬಹುದು. ಹೀಗೆ ಒಂದೆರಡು ಸಲ ಕುದಿಸಿದ ಮೇಲೆ ಆ ನೀರನ್ನು ಚೆಲ್ಲಿ ಬಿಟ್ಟು, ಆ ಪಾತ್ರೆಯಲ್ಲಿ ಸ್ವಚ್ಛವಾದ ತಣ್ಣೀರು ಹಾಕಿ ಲೇಸನ್ನು ತೊಳೆಯಬೇಕು. ಬಳಿಕ ಬಾಟಲಿಯನ್ನು ಹೊರತೆಗೆದು, ಲೇಸನ್ನು ಬಿಚ್ಚಿ, ಹಾಗೇ ಒಣಗಿಸಬೇಕು.

ಲೇಸು ರೇಶಿಮೆಯದಾಗಿದ್ದರೆ, ಅಥವಾ ಸ್ವಲ್ಪ ನಯವಾಗಿದ್ದರೆ ಅದಕ್ಕೆ ಇನ್ನೂ ಸ್ವಲ್ಪ ಉಪಚಾರ ಮಾಡಬೇಕಾಗುವದು. ಮೊದಲು ಅದನ್ನು ಆಲಿವ್ಹ ಎಣ್ಣೆಯಲ್ಲಿ ತೋಯಿಸಿ ಬಳಿಕ ಮೇಲಿನಂತೆ ಅದನ್ನು ತೊಳೆಯಬೇಕು. ನಯವಾದ ಲೇಸಿಗೆ ಅಥವಾ ಬಟ್ಟೆಗೆ ಕೊಂಚ ಕಪ್ಪಿನ ಛಾಯೆಯೇ ಇರುತ್ತದೆ.

ಯಾವದೇ ಬೆಲೆಯುಳ್ಳ ಬಟ್ಟೆಯಾಗಲಿ, ಅಥವಾ ಲೇಸಾಗಲಿ, ತೊಳೆದ ಬಳಿಕ ಹೊಸದರಂತೆ ಕಾಣಿಸಬೇಕಾದರೆ ಬರೀ ನೀರಿನಲ್ಲಿ ತೊಳೆದರೆ ಸಾಕಾಗದು. ಅದನ್ನು ಸ್ಟಾರ್ಚಮಾಡಿ ಇಸ್ತ್ರೀ ಮಾಡಬೇಕಾಗುತ್ತದೆ. ಇವುಗಳನ್ನು ಸಾದಾ ಬಟ್ಟೆಗೆ ಮಾಡಿದಂತೆ ಮಾಡಲು ಬರುವದಿಲ್ಲ. ಸಾಧಾರಣವಾಗಿ ಸ್ಟಾರ್ಚಮಾಡಲು ಅಕ್ಕಿಯ ಅಥವಾ ಗೋದಿಯ ಪಿಷ್ಟದಿಂದ ತಯಾರಿಸಿದ ಸರಿಯನ್ನು ಉಪಯೋಗಿಸುತ್ತೇವೆ. ಆದರೆ ನಯವಾದ ಬಟ್ಟೆಗೆ ಹೀಗೆ ಸ್ಟಾರ್ಚಮಾಡಿದರೆ ತೀರ ಬಿರುಸಾಗಿ ಬಿಡುತ್ತದೆ. ಅದಕ್ಕಾಗಿ ಆರ್ಗಂಡಿಯ ಒಂದು ತುಂಡನ್ನು ನೀರಿನಲ್ಲದ್ದಿ (ನೀರನ್ನೆಲ್ಲ ಹಿಂಡಿ ತೆಗೆದು) ಲೇಸನ್ನು ಬಿಳಿಯ ಬಟ್ಟೆಯ ಮೇಲೆ ಸರಿಯಾದ ಭಾಗವನ್ನು ಕೆಳಗೆಮಾಡಿ ಹಾಸಿ ಹಿಂಭಾಗವನ್ನು ಆ ತುಂಡಿನಿಂದ ಆರ್ದ್ರಗೊಳಿಸಬೇಕು. ಬಳಿಕ ಇಸ್ತ್ರೀಯಿಂದ (ಬೆಚ್ಚಗಿನ) ಎಲ್ಲ ಭಾಗವನ್ನೂ ಇಸ್ತ್ರೀ ಮಾಡಬೇಕು.

ಅಥವಾ ಗೋದಿಯ ಪಿಷ್ಟದ ತಿಳಿಯಾದ ಸರಿಯಿಂದ ಮಾಡಿದರೂ ಸರಿ; ಉಪಯೋಗಿಸತಕ್ಕ ಗೋದಿಯ ಪಿಷ್ಟವನ್ನು ಎರಡು ಭಾಗವನ್ನಾಗಿ ಮಾಡಿಕೊಂಡು, ಎರಡನ್ನೂ ಸ್ವಚ್ಛವಾದ ತಣ್ಣೀರಿನಲ್ಲಿ ತೋಯಿಸಬೇಕು. ಬಳಿಕ ಒಂದನ್ನು ಕುದಿಯುವ ನೀರನ್ನು ಸುರುವಿ ಬಿಸಿಮಾಡಬೇಕು. ಪಿಷ್ಟವು ಸರಿಯಾಗಿ ಹೊಂದಿಕೊಳ್ಳುವಂತೆ, ಮೇಲಿನ ಉಗಿ ಮಾಯವಾಗುವವರೆಗೆ ಅದನ್ನು ಕೈಯ್ಯಾಡಿಸಬೇಕು. ಬಳಿಕ ಎರಡೂ ಭಾಗಗಳನ್ನು ಕೂಡಿಸಿ ಹಾಲಿನಷ್ಟು ತಿಳಿಯಾಗುವವರೆಗೆ ನೀರನ್ನು ಕೂಡಿಸಬೇಕು. ಇದರಲ್ಲಿ ಒಂದೆರಡು ಹನಿ ಕಾಫಿಯ ನೀರನ್ನು ಕೂಡಿಸಿದರೆ ಬಟ್ಟೆಗೆ ಒಂದು ಬಗೆಯ ಕಂದೀ ಹೊಳಪು ಬರುವದು; ಚಹವನ್ನು ಕೂಡಿಸಿದರೆ ಹಸಿರುಮೂಡಿಯ ಛಾಯೆ ಬರುವದು.

ಲೇಸನ್ನು ಸ್ಟಾರ್ಚಮಾಡಿದ ಬಳಿಕ, ಅದರ ಒಂದು ತುದಿಯನ್ನು ಎಡಗೈಯ್ಯಲ್ಲಿ ಹಿಡಿದು ಬಲಗೈಯ್ಯಿಂದ ಅಲ್ಲಲ್ಲಿ ಬಿದ್ದಿದ್ದ ಮಡಿಕೆಗಳನ್ನು, ಹೊರಳಿಕೊಂಡ ಭಾಗಗಳನ್ನೂ ಸರಿಪಡಿಸುತ್ತಹೋಗಬೇಕು. ಸರಿಪಡಿಸಿದ ಬಳಿಕ, ಟೇಬಲ್ಲಿನ ಮೇಲೆ ಶುಭ್ರವಾದ ಬಟ್ಟೆಯನ್ನು ಹಾಸಿ, ಅದರ ಮೇಲೆ ಲೇಸನ್ನು ಅತ್ತಿತ್ತ ಮಡಿಕೆಯಾಗದಂತೆ ಹಾಸಿಟ್ಟುಕೊಂಡು ಅಷ್ಟಷ್ಟೇ ಭಾಗವನ್ನು ಇಸ್ತ್ರೀ ಮಾಡಬೇಕು. ಎಡದಿಂದ ಬಲಕ್ಕೆ ಇಸ್ತ್ರೀಮಾಡಿ ಮತ್ತೊಮ್ಮೆ ಬಲದಿಂದ ಎಡಕ್ಕೆ ಮಾಡಬೇಕು. ಇದರಿಂದ ಸ್ಟಾರ್ಚ ಎಲ್ಲೆಡೆಗೂ ಸರಿಯಾಗಿರುವದು.

ಲೇಸು ತೀರ ನಯವಾಗಿದ್ದರೆ, ಹೀಗೆ ಟೇಬಲ್ಲಿನ ಮೇಲೆ ಹಾಕಿ ಇಸ್ತ್ರಿ ಮಾಡುವದರಿಂದ ಅಲ್ಲಲ್ಲಿ ಮುದ್ದೆಯಾಗುತ್ತಿದ್ದರೆ, ಅದನ್ನು ಬೇರೊಂದು ಬಗೆಯಿಂದ ಇಸ್ತ್ರೀಮಾಡಬೇಕಾಗುತ್ತದೆ. ಕಟ್ಟಿಗೆಯ ಅಗಲವಾದ ಪೊಳ್ಳು ಕೊಳವೆಯನ್ನು ಮೊಣಕಾಲಿಗೆ ಹಾಕಿಕೊಂಡು, ಆ ಕೊಳವೆಯ ಸುತ್ತು ಒಂದು ಬಿಳೀ ಬಟ್ಟೆಯನ್ನು ಸುತ್ತಿ, ಬಳಿಕ ಇಸ್ತ್ರೀ ಮಾಡಬೇಕಾದ ಲೇಸನ್ನು ಆ ಬಟ್ಟೆಯ ಸುತ್ತು ಗುಂಡು ಸೂಜಿಗಳಿಂದ ಗಟ್ಟಿಯಾಗಿ ಕೂಡಿಸಬೇಕು. ಆ ಮೇಲೆ ಆ ಕೊಳವೆಯನ್ನು ಸ್ವಲ್ಪ ಸ್ವಲ್ಪವಾಗಿ ಹೊರಳಿಸಿ ಎಲ್ಲ ಭಾಗಗಳಲ್ಲೂ ಇಸ್ತ್ರೀ ಮಾಡಬೇಕು.

ಲೇಸನ್ನು ತೊಳೆಯುವದು, ಸ್ಟಾರ್ಚ ಮಾಡುವದು, ಗುಂಡುಸೂಜಿಯಿಂದ ಗಟ್ಟಿಯಾಗಿ ಕೂಡಿಸಿ ಇಸ್ತ್ರೀಮಾಡುವದು ಇವೆಲ್ಲ ಕಾರ್ಯಗಳನ್ನು ಒಂದಾದ ಕೂಡಲೇ ಒಂದರಂತೆ ಮಾಡಬೇಕು. ಇಲ್ಲದೆ, ಸ್ಟಾರ್ಚಮಾಡಿದ ಎಂಟು ದಿನಕ್ಕೆ ಇಸ್ತ್ರಿ ಮಾಡಹೋದರೆ, ಆ ಸ್ಟಾರ್ಚದ ಪರಿಣಾಮವೇ ಉಳಿದಿರುವದಿಲ್ಲ. ಆದಕ್ಕಾಗಿ ಸ್ವಲ್ಪ ವೇಳೆ ಹೆಚ್ಚಾಗಿದ್ದಾಗಲೇ ಈ ಕಾರ್ಯವನ್ನು ಮಾಡಬೇಕು.

**ಬಣ್ಣದ ದಾರದಿಂದ ಹಾಕಿದ ಕಸೂತಿಯ ಬಟ್ಟೆಯನ್ನು ತೊಳೆಯುವ ವಿಧಾನ:**

ಇಂತಹ ಕಸೂತಿಯ ಬಟ್ಟೆಯನ್ನು ತೊಳೆಯುವಾಗ ಬಿಸಿನೀರನ್ನೂ ಸಾಬೂನನ್ನೂ ಉಪಯೋಗಿಸಬಹುದಾದರೂ ಒಗೆಯುವ ಸೋಡಾ ಮಾತ್ರ ಉಪ ಯೋಗಿಸುವಂತಿಲ್ಲ. ಕುದಿಯುವ ನೀರಿನಲ್ಲಿ ಒಳ್ಳೆಯ ಸಾಬೂನನ್ನೂ ಹಾಕಿ ಬುರುಗುಮಾಡಿ, ಬಳಿಕ ನೀರನ್ನು ಬೆಚ್ಚಗೆ ಮಾಡಲು ಅದಕ್ಕೆ ಸ್ವಲ್ಪ ತಣ್ಣೀರನ್ನು ಕೂಡಿಸಿ, ಬಳಿಕ ಕಸೂತಿಯ ಬಟ್ಟೆಯನ್ನು ಅದರಲ್ಲಿ ಸ್ವಚ್ಛವಾಗಿ ತಿಕ್ಕಿ ತೊಳೆಯ ಬೇಕು. ಬಳಿಕ ಸ್ವಚ್ಛವಾದ ತಣ್ಣೀರಿನಲ್ಲಿ ಒಂದೆರಡು ಸಲ ಅದನ್ನು ಹಿಂಡಿ ತೆಗೆದು ಸಾಬೂನಿನ ಬುರುಗನ್ನು ಕಳೆದು ಸ್ವಚ್ಛಮಾಡಬೇಕು. ಯಾವದೇ ಕಾರಣ ದಿಂದ ಕಸೂತಿಯ ಬಣ್ಣ ಸ್ವಲ್ಪ ಮಾಸಿದ್ದರೆ, ಹೊಳಪು ಕಡಿಮೆಯಾಗಿದ್ದರೆ, ನೀರಿ ನಲ್ಲಿ ಒಂದು ಚಮುಚೆ ಲಿಂಬೆಯ ರಸವನ್ನು ಹಾಕಿ ಹಿಂಡಬೇಕು ಇಲ್ಲವೆ ಒಂದರ್ಧ ಗ್ಲಾಸು ಬಿಳೀ ವಿನೆಗಾರ (ನೀರಿನಲ್ಲಿ) ಹಾಕಿ ಹಿಂಡಬೇಕು. ಬಳಿಕ ಬಟ್ಟೆಯನ್ನು ಒಣಗಿಸಿ ಇಸ್ತ್ರೀ ಮಾಡಬೇಕು. ಇದರಿಂದ ಕಸೂತಿಯ ಹೊಳಪೂ, ನಯವೂ ಹಾಗೇ ಉಳಿಯುವವು.



# ಕಾನೂನು ವಿಭಾಗ

**ಸ್ತ್ರೀಯರಿಗೆ ಉಪಯೋಗವಾಗಲೆಂದೇ ಈ ವಿಭಾಗವನ್ನು ಪ್ರಾರಂಭಿಸಲಾಗಿದೆ. ಸಾಧ್ಯವಾದಷ್ಟು ವಿವರವಾಗಿ ಕಾಯಿದೆ ವಿಚಾರವನ್ನು ಇದರಲ್ಲಿ ಕೊಡಲಾಗುವದು. ಭಗಿನಿಯರು ಇದರ ಯೋಗ್ಯ ಲಾಭವನ್ನು ಪಡೆಯುವರೆಂದು ನಮ್ಮ ಆಶೆ !**

ಪ್ರಶ್ನೆಗಳು ಸ್ತ್ರೀಜೀವನದ ವಿಷಯಕವಿರಬೇಕು. ಖಾಸಗಿ, ವೈಯ್ಯಕ್ತಿಕ, ಮತ್ತು ಕೂಡಲೆ ಸಲಹೆ ಬೇಕಾದಲ್ಲಿ ಪ್ರತಿಯೊಂದು ಪ್ರಶ್ನೆಯ ಜೊತೆಯಲ್ಲಿ ಫೀ ಎಂದು ಎರಡು ರೂಪಾಯಿಗಳನ್ನು ಮನಿಯಾರ್ಡರದಿಂದ ಕಳಿಸಬೇಕು.

**ಪ್ರಶ್ನೆ:—** ನಾನೊಬ್ಬ ಸ್ಕೂಲ್ ಬೋರ್ಡಿನ ಕಾರಕೂನನಾದ ತರುಣನಿರುತ್ತೇನೆ. ನನ್ನ ಲಗ್ನ ಹಿಂದು ಧರ್ಮ ಪದ್ಧತಿಯಿಂದ ಆಗಿರುತ್ತದೆ. ಈ ಲಗ್ನವು ನನ್ನ ಇಚ್ಛೆಯ ವಿರುದ್ಧವಾಗಿರುತ್ತದೆ. ನನ್ನ ಹೆಂಡತಿ ೨೦ ವರ್ಷ ವಯಸ್ಸಿನವಳು ಇರುವಳು. ಇತ್ತಿತ್ತಲಾಗಿ ಅವಳಿಗೆ ಕ್ಷಯ ಬ್ಯಾನಿ ಹತ್ತಿರುತ್ತದೆ. ಅವಳು ನನ್ನ ಮೇಲೆ ಅತಿಶಯ ಪ್ರೇಮ ಮಾಡುತ್ತಾಳೆ. ಅವಳ ನಡತೆಯು ಚೆನ್ನಾಗಿ ಇದ್ದು, ಯಾವ ತೆರನಾಗಿ ದೋಷವೆಣಿಸುವಂತೆ ಇಲ್ಲ. ಅವಳ ಕೂಡ ಬಿಡುಗಡೆ ಮಾಡಿಕೊಳ್ಳುವದು ನ್ಯಾಯವೆನಿಸುವದಿಲ್ಲ. ಆದರೆ ದ್ವಿಭಾರ್ಯಾ ಪ್ರತಿಬಂಧಕ ಕಾಯ್ದೆಯ ನಿಮಿತ್ತ ನನಗೆ ಎರಡನೆಯ ಲಗ್ನವಾಗಿ ಸುಖಿಯಾಗಿ ಬಾಳಲಿಕ್ಕೆ ಬರುವಂತಿಲ್ಲ. ನಾನೇನು ಮಾಡಬೇಕು ?

**ಉತ್ತರ:—** ತಾವು ಕೊಟ್ಟ ಪರಿಸ್ಥಿತಿಯಲ್ಲಿ ಕಾಯ್ದೆಯಿಂದ ತಮಗೆ ಲಗ್ನವಾಗಲು ಬರುವಂತಿಲ್ಲ. ನಿಮ್ಮ ಹೆಂಡತಿ ಇಷ್ಟಪಡುತ್ತಿದ್ದರೆ, ಬಿಡುಗಡೆ ಹೊಂದಿ ಅವಳನ್ನು ಸಾಕಲು, ಸಲಹಲು ಆತಂಕವಿಲ್ಲ. ಈ ದ್ವಿಭಾರ್ಯಾ ಪ್ರತಿಬಂಧಕ ಕಾಯ್ದೆಯು ಸದೋಷವಿರುವದರಿಂದ ವೈಯ್ಯಕ್ತಿಕ ಎಷ್ಟೋ ಪ್ರಶ್ನೆಗಳನ್ನು ಬಿಡಿಸಲು ಬರುವಂತಿಲ್ಲ. ಇದನ್ನು ಬದಲು ಮಾಡಲು ಎಲ್ಲ ತೆರನಾಗಿ ಯತ್ನಿಸಿದರೆ, ನಿಮಗಾಗಲೀ, ನಿಮ್ಮ ಮುಂದಿನ ಪೀಳಿಗೆಗಾಗಲೀ ಲಾಭಸಿಗುವದು.

**ಪ್ರಶ್ನೆ:—** ನಾನೊಬ್ಬ ಬಿ. ಎ. ಪಾಸಾದ ಬ್ರಾಹ್ಮಣ ಸ್ತ್ರೀ ಇರುತ್ತೇನೆ. ಅನ್ಯ ಜಾತಿಯ ಹಿಂದು ತರುಣನ ಕೂಡ ಲಗ್ನವಾಗಬೇಕೆಂದಿದ್ದೇನೆ. ಲಗ್ನವಾದಬಳಿಕ ನಾನು ಬ್ರಾಹ್ಮಣಳಾಗಿ ಉಳಿಯುವೆನೊ ? ನನ್ನ ಮಕ್ಕಳ ಜಾತಿ ಯಾವುದು ?

**ಉತ್ತರ:—** ಲಗ್ನದಿಂದ, ಪ್ರಚಲಿತ ಕಾಯದೆಯಂತೆ ಮೇಲ್ವರ್ಣದವರ ಜಾತಿಯು ಅದೇ ಉಳಿಯುವದಿಲ್ಲ. ಮೇಲ್ವರ್ಣದವರ ಜಾತಿಯು ಕೀಳ್ವರ್ಣವಾಗಿ ಪರಿಗಣಿಸಲ್ಪಡುವದು. ಪ್ರಚಲಿತ ರೂಢಿಯ ಪ್ರಕಾರ ಕೆಲವೊಂದು ಜಾತಿಯಲ್ಲಿ, ಜಾತೀಯ ಸಂಸ್ಕಾರಗಳಿಂದ ಲಿಂಗಾಯತ, ಆರ್ಯಸಮಾಜದವರಾಗಿ ಅಥವಾ ಜಾತ್ಯತೀತರಾಗಿ ಉಳಿಯುವಿರಿ. ಹೊಸ ರೂಢಿಯನ್ನು ಪ್ರಚಾರದಲ್ಲಿ ತಂದರೆ ಬ್ರಾಹ್ಮಣರಾಗಿಯೇ ಉಳಿಯಬಹುದು. ಮುಂದೆ ಕಾಯದೆಯಲ್ಲಿ ಬದಲಾವಣೆಯಾಗಬಹುದು.

ಪ್ರಶ್ನೆ:— ನಾನೊಬ್ಬ ಬ್ರಾಹ್ಮಣ ವಿಧವೆ ಇರುತ್ತೇನೆ. ಗಂಡನ ಆಸ್ತಿ ಏನೂ ಇರುವದಿಲ್ಲ. ನನ್ನ ಮಗಳು ಸಣ್ಣವಳಿರುವಾಗಲೇ ನನ್ನ ಗಂಡನು ತೀರಿಕೊಂಡನು. ಮುಂದೆ ಅವಳ ಸಂರಕ್ಷಣೆಯ ಭಾರವೆಲ್ಲ ನನ್ನ ಮೇಲೆಯೇ ಬಿದ್ದಿರುತ್ತದೆ. ಈಗ ಅವಳ ಹೆಸರಿನ ಮುಂದೆ ತಂದೆಯ ಹೆಸರಿನ ಬದಲಾಗಿ ನನ್ನ (ತಾಯಿ) ಹೆಸರು ಹಚ್ಚಲು ಕಾಯಿದೆಯಿಂದ ಆತಂಕವಿರುವದೋ ಹೇಗೆ ?

ಉತ್ತರ:— ಕಾಯದೆಯಿಂದ ಮಕ್ಕಳ ಹೆಸರಿನ ಮುಂದೆ ಯಾರ ಹೆಸರು ಹಾಕ ಬೇಕೆಂಬುದರ ಬಗ್ಗೆ ನಿರ್ಣಯವಿಲ್ಲ. ಯಾವ ಹೆಸರು ಹಚ್ಚಿದರೂ ಕಾಯದೆಯಿಂದ ಅಪರಾಧವೇನೂ ಇಲ್ಲ. ಅನೇಕ ಜನರು ಗ್ಯಾಝೆಟನಲ್ಲಿ ಪ್ರಸಿದ್ಧಮಾಡಿ ತಮ್ಮ ಹೆಸರು, ತಂದೆಯ ಹೆಸರು, ಬದಲುಮಾಡಿಕೊಂಡಿದ್ದಾರೆ. ಹೆಣ್ಣುಮಕ್ಕಳ ಹೆಸರು ಹಚ್ಚುವದು ರೂಢಿಯಲ್ಲಿಲ್ಲ. ಹೀಗೆ ಮಾಡಿದರಲ್ಲಿ ಮಗು ವ್ಯಭಿಚಾರಕ್ಕೆ ಹುಟ್ಟಿದೆ ಯೆಂಬ ಲೋಕಭ್ರಮೆ ಉಂಟಾಗುತ್ತದೆ. ಅದನ್ನು ಹೋಗಲಾಡಿಸಲು ಈ ರೂಢಿ ಯನ್ನು ಪ್ರಚಾರದಲ್ಲಿ ತರುವದು ಹೆಣ್ಣುಮಕ್ಕಳ ಸ್ವಾಭಿಮಾನಕ್ಕೆ ಸಲ್ಲುವದು.

ಪ್ರಶ್ನೆ:— ನಾನೊಬ್ಬ ವಿವಾಹಿತಳಿರುವೆನು. ನನಗೊಂದು ಹೆಣ್ಣು ಮಗುವಿದೆ. ನನ್ನನ್ನು ಗಂಡನು ಮತ್ತು ಅತ್ತೆ ಮುಂತಾದವರು ಛಲನೆಮಾಡಿ ಹೊರಗೆಹಾಕಿದರು. ಮತ್ತು ಆ ಮಗುವನ್ನು ನೀನೇ ತೆಗೆದುಕೊಂಡು ಹೋಗು ಎಂದು ಬೀಸಾಡಿಕೊಟ್ಟರು. ನನ್ನದೇ ನನಗೆ ಗತಿ ಇಲ್ಲದಾಗ ಮಗುವನ್ನು ಹಾಗೇ ಬಿಟ್ಟು ಬಂದೆ. ನಾನು ಒಂದು ಶಿಕ್ಷಣ ಸಂಸ್ಥೆಯಲ್ಲಿ ಆಶ್ರಯಹೊಂದಿ ನನ್ನ ಉಪಜೀವನವನ್ನು ಸಾಗಿಸಿದ್ದೇನೆ ಮಗಳ ಸಲುವಾಗಿ ಒಂದೇ ಸವನೆ ಹಲುಬುತ್ತಲಿದ್ದೇನೆ. ನನ್ನ ಗಂಡನು ಸೋಡ ಚೀಟಿಯ ಸಲುವಾಗಿ ಕೋರ್ಟಿನಲ್ಲಿ ದಾವೆಮಾಡಿದ್ದಾನೆ. ನನ್ನ ಮಗಳನ್ನು ನನಗೆ ಕೊಟ್ಟರೆ ಬಿಡುಗಡೆಯ ಪತ್ರವನ್ನು ಕೊಡಲು ಸಿದ್ಧಳಿದ್ದೇನೆ. ಆದರೆ ಇದಕ್ಕೆ ಅವನ ಒಪ್ಪಿಗೆ ಇರುವದಿಲ್ಲ. ಮಗುವನ್ನು ನೋಡಿಹೋಗಲು ಬೇಕಾದಾಗ ಬರಬಹು ದೆಂದು ಅನ್ನುತ್ತಾನೆ. ಕಾಯದೆಯಿಂದ ನನ್ನ ಮಗು ನನಗೆ ಸಿಗಬಹುದೆ ? ಸಿಗದೆ ಇದ್ದಲ್ಲಿ ಅವರ ಒಪ್ಪಿಗೆಯಂತೆ ಬಿಡುಗಡೆಯಾದಲ್ಲಿ ನನ್ನ ಮಗುವನ್ನು ಭೆಟ್ಟಿಯಾಗಲು ಕಾಯದೆಯಿಂದ ಬರುತ್ತದೆಯೇ ?

ಉತ್ತರ:— ಕಾಯದೆಯಿಂದ ತಂದೆ ಪಾಲಕನಾಗಲು ಅನರ್ಹನಿದ್ದರೆ ಮಾತ್ರ ತಾಯಿಯ ಅಧಿಕಾರ ಮಗುವಿನ ಮೇಲೆ ಉಳಿಯುವದು. ಹೊರಗೆ ಬರುವ ಮುಂದೆ ಕೂಸನ್ನು ತಂದಿದ್ದರೆ ವ್ಯವಹಾರತಃ ಗಂಡನಿಗೆ ಜಡವಾಗುತ್ತಿತ್ತು. ಕಾಯದೆ ಯಿಂದ ಮಗು ನಿಮ್ಮಕಡೆ ಬರುವದು ಸಾಧ್ಯವಿಲ್ಲ. ಭೆಟ್ಟಿಯಾಗಲು ಒಪ್ಪಿಗೆ ಕೊಟ್ಟರೂ ಅದೂ ಕೂಡ ಸಾಧ್ಯವಾಗಲಿಕ್ಕಿಲ್ಲ. ಅಪ್ಸಾಸಿನಲ್ಲಿ ಪಂಚರ ಮುಖಾಂತರ ನೀವು ಈ ತೆರನಾಗಿ ಕರಾರಪತ್ರ ಮಾಡಿಕೊಂಡಲ್ಲಿ ಅದರ ಉಪಯೋಗ ಸ್ವಲ್ಪ ಮಟ್ಟಿಗೆ ಆಗಬಹುದು. ಹೆಣ್ಣುಮಕ್ಕಳು ವಿದ್ಯಾಬಲದಿಂದ ಸ್ವಾವಲಂಬಿಗಳಾದಂತೆ ಮಕ್ಕಳ ಮೇಲೆ ತಾಯಂದಿರ ಅಧಿಕಾರವಿರುವಂತೆ ಕಾಯದೆಯಲ್ಲಿ ಬಡಲಾವಣೆ ಮಾಡಿಕೊಳ್ಳಲು ಹೆಣಗುವದು ತಾಯಂದಿರ ಕರ್ತವ್ಯವಾಗಿದೆ.

# ನ್ಯಾಯಕ್ಕೆ ಗಲ್ಲು

ಲೇಖಕರು :— ಶ್ರೀ. ಎಂ. ಸತ್ಯವಂತರಾವ್, ಬಿ. ಎಸ್. ಸಿ. ಬಿ. ಎಲ್.
ಬಳ್ಳಾರಿ.

## ಪಾತ್ರಪರಿಚಯ

ಶ್ರೀಧರಲಾಲ:— ದೊಡ್ಡ ಸಾಹುಕಾರ.
ಭಾಗ್ಯವತಿ :— ಶ್ರೀಧರಲಾಲರ ಏಕಮಾತ್ರ ಪುತ್ರಿ. [B. A. Hons]
ರತಿಲಾಲ :— ಲಕ್ಷ್ಮೀಪುತ್ರ. ಶ್ರೀಧರಲಾಲರು ಭಾಗ್ಯವತಿಗಾಗಿ ಆರಿಸಿದ ವರ.
ಸಮಶೀಲ :— ಸಮತಾವಾದಿ. ಭಾಗ್ಯವತಿಯ ಜೀವದ ಗೆಳೆಯ.
ಭೀಮಪ್ಪಾ:— ಬಡ ಕೂಲಿಕಾರ.
ರಾಮಕ್ಕ :— ಭೀಮಪ್ಪನ ಹೆಂಡತಿ.
( ಸಾಕವ್ವ ಹಾಗೂ ಮಗು:— ಈ ಬಡರೈತರ ಮಕ್ಕಳು ಶ್ರಮಜೀವಿ ಹಾಗೂ ಅವನ ಹೆಂಡಿರು ಮಕ್ಕಳು, ಅಮೀನ ಗೌಡ, ಭೂಮಿ ಮಾಲಕ, ಕೂಲಿಕಾರರು ಅಂಬಿಗರು, ಮಾರವಾಡಿ ನೌಕರ ಮುಂತಾದ ಇದರಲ್ಲಿ ಬರುವ ಪಾತ್ರಗಳು. )

## ಅಂಕ ೧ [ ದೃಶ್ಯ ೧ ]

[ ಸ್ಥಳ:— ಸಮುದ್ರದ ತೀರ. ವೇಳೆ:— ಸಾಯಂಕಾಲದ ೫ ಗಂಟೆ ಹೊಡೆದಿರಬೇಕು. ಅಲ್ಲಲ್ಲಿ ಸಿರಿವಂತರು ತಿನ್ನುವ ಹಣ್ಣುಹಂಪಲಗಳ ಅಂಗಡಿಗಳು ಮತ್ತೊಂದು ಕಡೆ ಬಡಜನರಿಗಾಗಿ ಇಟ್ಟ ಶೇಂಗಾ, ಅಗ್ಗ ತರಹದ ಹಣ್ಣುಗಳ ರಾಶಿ ಹಾಕಿದ ಅಂಗಡಿಗಳು ಅಲ್ಲಲ್ಲಿ ಕಂಡುಬರುತ್ತಿವೆ. ಸಮುದ್ರದ ಹತ್ತಿರವೇ ಉಸುಕಿನ ದಿಬ್ಬೆಯೊಂದರ ಮೇಲೆ ಸಮಶೀಲನು ಕುಳಿತು ದೂರದಲ್ಲಿ ತೇಲಿ ಬರುತ್ತಿದ್ದ ಅಂಬಿಗರ ಹಡಗಗಳನ್ನು ನೋಡುತ್ತಿರುವನು. ಅಂಬಿಗರು ಹಾಡುತ್ತ ದಂಡೆಯ ಕಡೆಗೆ ಹಡಗಗಳನ್ನು ಓಡಿಸುತ್ತಿರುವರು. ]

ಅಂಬಿಗರು :— ಹಾಡು.

ಎಹೆಯ್ಯೊ ಹೆಯ್ಯೊ ಹೆಯ್ಯೊ ಸಾಗರದ ತೆರೆಯೋSS
ನನ್ನ ಮನ ತೇಲಿ ತೇಲಿ
ತುದಿವರಿಗೆ ಸಾಗೇSSS
ಆಹಾ ಬಿರುಗಾಳಿಲSSS
ಎ ಹೆಯ್ಯೊ ಹೆಯ್ಯೊ ಹೆಯ್ಯೊ.
ಈ ಸುಲಿಗೆ ಶೋಷಣೆಯನು
ಈ ಸೃಷ್ಟಿ ಶಕ್ತಿಗಳನು
ತಡೆದಟ್ಟಿ ನಡೆದು

ಆ ಕೆಂಪು ತಾರೆಯಡಿಗೆ....
ಎ ಹೆಯ್ಯೊ ಹೆಯ್ಯೊ ಹೆಯ್ಯೊ.
ನಾವ್ ಸಂಘಟಿತರಾಗಿ ಇಂದು ಹೋರಾಟ ಹೂಡಿ
ಎ ಹೆಯ್ಯೊ ಹೆಯ್ಯೊ ಹೆಯ್ಯೊ.
ಈ ಸುಲಿಗೆ ಶೋಷಣೆಗಳನು ತಡೆದೋಡಿಸುವಾSSS
ಈ ಸೃಷ್ಟಿ ಶಕ್ತಿಗಳನ್ನೆಲ್ಲ ನಮಗಾಗಿ ರೂಪಿಸುವಾSSS
ಎ ಹೆಯ್ಯೊ ಹೆಯ್ಯೊ ಹೆಯ್ಯೊ.
ನಮ್ಮ ರಾಜ್ಯ ನಾವೇ ರಚಿಸಿ ಸ್ವರ್ಗ ಸುಖದಿ ಬಾಳುವಾSS
ಎ ಹೊಯ್ಯೊ ಹೊಯ್ಯೊ ಹೊಯ್ಯೊ.
ಕೆಂಪು ತಾರೆ ಹರಿಕಾರನಂತೆ ಬಂದು ಅರುಣೋದಯ ತಂತು.
ಎ ಹೆಯ್ಯೊ ಹೆಯ್ಯೊ ಹೆಯ್ಯೊ.
ಆ ಕೆಂಪು ತಾರೆ ನೋಡಿ ಅತ್ತ ಸಾಗಿ ನಡೆ
ನೀ ನಡೆ—ನೀ ನಡೆ ನೀ ನಡೆ

[ಅಂಬಿಗರ ಹಾಡನ್ನು ಕೇಳಿ ಸಮಶೀಲನೂ ಅವರ ಜೊತೆಯಲ್ಲಿ ಸೇರಿ ಹಾಡಲು ಪ್ರಯತ್ನಿಸುವನು. ಅಷ್ಟರಲ್ಲಿ ಗಿರಣಿಯ "ವ್ಹಿಸಲ್" ಆಗುವುದು. ಫ್ಯಾಕ್ಟರಿ ಕೂಲಿಕಾರರು ಗುಂಪುಗುಂಪಾಗಿ ಬರುವರು ಮತ್ತೊಂದು ಕಡೆಯಿಂದ ರತಿಲಾಲ್ ಶೇಠರು "ಕಾರಿನಲ್ಲಿ" ಬಂದು ಇಳಿಯುವರು. ಇಳಿದು ಹಣ್ಣಿನ ಅಂಗಡಿಯ ಹತ್ತಿರ ಹಣ್ಣುಗಳನ್ನು ಕೊಳ್ಳುತ್ತಿರಲು ಶ್ರಮಜೀವಿಗಳ ಕುಟುಂಬವೊಂದು ಬರುವುದು.]

**ಶ್ರಮಜೀವಿಯ ಮಗು:—** [ ರತಿಲಾಲ್‌ರನ್ನು ತೋರಿಸುತ್ತ (ತಂದೆಗೆ) ಅಪ್ಪಾ! ಅಪ್ಪಾ !! ಆ ಹಣ್ಣುಗಳು ನನಗೆ ಕೊಡಿಸಪ್ಪಾ ಏನಪ್ಪಾ !

**ಶ್ರಮಜೀವಿ :—** ಥೂ! ನಿನ್ನ ವಟ್ಟೆಗೆ ಬೆಂಕಿ ಹಚ್ಚಾ.

ಒಂದು ಅಣ್ಣು ನಿಂಗೆ ಕೊಡಿಸಿದರS ಮನ್ಯಾಗ ಎಲ್ಲರು ಒಪ್ಪತ್ತು ಖಾನಾ ಇಲ್ಲದ ಇರಬೇಕಾಗತೈತಿ. ನಿನ್ನ ವಟ್ಯಾಗಿನ ಉರಿ ತಣ್ಣಾಗ ಮಾಡಲಿಕ್ಕೆ ಬೊಟ್ಟಗೆ ಅತ್ತು ಅತ್ತಿಅಣ್ಣು ಬರ್‍ತಾವ ತಗೋ.

**ಮಗು :—** ಊಂ ಹೂಂ! ನನಗೆ ಅವೇ ಅಣ್ಣು ಬೇಕು. [ರತಿಲಾಲರನ್ನು ತೋರಿಸುತ್ತ] ನೋಡು. ಅವರೆಷ್ಟು ಅಣ್ಣು ತಕೊಂತಾರ. ಅವರು ಮನ್ಯಾಗೆ ಅನ್ನ ಉಂಬೋದಿಲ್ಲೇನು ?

**ಹೆಂಡತಿ:—** ನಾವು ತಿಂಬಾಕ ಬೇಡಿಬಂದಿಲ್ಲ! ಸೆಟ್ವಿ ತಾಯಿ ನಮ್ಮ ಆಣೀ ಮ್ಯಾಗ ಇಂಗ ಬರದಾಳ, ಅವರ ಆಣೀ ಮ್ಯಾಗೆ ಅಂಗ ಬರದಾಳ.

**ಮಗು:—** ಬಿಡಬೇ ನೀನೇನು ಹೇಳ್ತಿಬಿಡು. ನಮ್ಮ ಚಿಗಪ್ಪ ಅಲ್ಲೇನು

ತ್ವಾಟದಿಂದ ಪುಟ್ಟಿ ತುಂಬಿ ತುಂಬಿ ಇಂಥಾ ಅಣ್ಣು ಇವರ ಅಂಗಡೀಗೆ ಕಳ್ಸಾಂವಾ. ನೀನೇ ಅಲ್ಲೇನು ಪುಟ್ಟಿ ಪುಟ್ಟಿ ಮೇಲೆ ಹೊತ್ತು ತಂದದ್ದು.

**ಹೆಂಡತಿ:—** ಅಂದರೇನು ದುಡಿಯಾಕ ನಾವು ಬೇಡಿ ಬಂದೀವಿ. ತಿಂಬಾಕ ಅವರು ಬೇಡಿ ಬಂದಾರು!

**ಇನ್ನೊಂದು ಮಗು:—** [ ತನ್ನ ಹರುಕು ಬಟ್ಟೆಯನ್ನು ತೋರಿಸುತ್ತಾ ] ಈ ಅರ್ಕ ಬಟ್ಟೆ ನನಗೆ ಬೇಕಾಗಿಲ್ಲ [ ರತಿಲಾಲ್‌ರನ್ನು ತೋರಿಸಿ ] ಅಂತಾ ಡೌಲಾದ ಕಮೀಜು ಮಲ್ಸಿಕೊಡು ನಡಿ. ಬಟ್ಟೆ ಅಂಗಡಿಗೆ ಹೋಗೋಣ ನಡಿ.

**ಶ್ರಮಜೀವಿ:—** ಇದೆಂಥಾ ಇದಿ ನನ್ನ ಬೆನ್ನು ಹತ್ತಿತಪ್ಪ! ಸಗಣಿ ಬಳ್ಯಾಕ ಏನು ಮಾಡ್ತಿಯೋ ಕಮೀಜ?

**೧ನೇ ಮಗು:—** ಬಾಳ ಬೆಚಾಗಿರತೈತಪ್ಪ. ನನ್ನ ಮೈಯಾಗ ಉರಿ ಬಂದಾವು. ಈ ಚಳೀಗಾಳಿಗೆ ಮೈಯ್ಯಾಗಿನ ಎಲುಬು ಜುಮ್ ಅಂತಾವ ಗಿರಿಣ್ಯಾಗ ನೀನೆ ಆಲ್ಲೇನು ನೂಲು ತೆಗೆದು ರಾಶಿ ರಾಶಿ ಬಟ್ಟೆ ಮಾಡಿ ಇವಾಗ ಬಂದದ್ದು? ಎರಡೇ ಗಜ ಬಟ್ಟೆ ಕಮೀಜಿಗೆ ಕೊಡಿಸಪ್ಪಾ.

**ಶ್ರಮಜೀವಿ:—** [ ಮಗನ ಮೈಕೈ ಮುಟ್ಟಿ ] ಬರೇ ಹುಳುಕು ಎಲಬು. ರಗತ ಇಲ್ಲ; ಮಾಂಸ ಇಲ್ಲ. ಸಾಯಲಿ, ಬದುಕಲಿ; ಕಮೀಜು ಹ್ಯಾಂಗ್ ಬರತೈತಿ? ನೀನೂ ಎಂಡಾ ಸುರುಮಾಡು. ಮೈಯಾಗ್ ಬೆಚ್ಚಾಗ್ ಇರತೇತಿ. ನಾವೂ ಅಲ್ಲೇ ನಡೆದೇವಿ. (ಹೆಂಡತಿಯ ಬಗಲ ಕೂಸು ಅಳುವುದು ಹೆಂಡತಿಯೆಡೆಗೆ ತಿರುಗಿ) ಕೂಸಿನ್ನ್ಯಾಕ್ ಅಳಸ್ತೀಯಾ ಮಲಿ ಕುಡ್ಸು.

**ಹೆಂಡತಿ:—** ಮಲ್ಯಾಗ್ ಏನು ಐತಂತ ಕುಡಿಸಲಿ? ಗಿರಿಣ್ಯಾಗ್ ದಗದಾ ಹಿಡಿದಾಗಿಂದ ಹಾಲೇ ಒಣಗ್ಯಾವ.

[ ಈ ಮಾತುಗಳನ್ನು ಕೇಳಿ ದೂರದಲ್ಲಿ ನಿಂತಿದ್ದ ಸಮಶೀಲನು ಎದ್ದು ಬರುವನು. ತನ್ನ ಮೈಮೇಲಿನ ಕೋಟನ್ನು ಆ ಹುಡುಗನಿಗೆ ಕೊಡುವನು. ಹಣ್ಣುಗಳನ್ನು ಖರೀದಿ ಮಾಡಿ ಮಕ್ಕಳಿಗೆ ಕೊಡುವನು. ಶ್ರಮಜೀವಿಗಳು ನಮಸ್ಕಾರ ಮಾಡಿ ಹೋಗುವರು. ]

**ಸಮಶೀಲ (ಸ್ವಗತ):—**(ಶ್ರೀ ದಿವಾಕರರವರ “ ಅಂತರಾತ್ಮನಿಗೆ” ಎಂಬ ಪುಸ್ತಕದೊಳಗಿನ) ಆಹ! ಎಂಥ ಫಲವತ್ತಾದ ಭಾರತವರ್ಷವಿದು. ಕಾಳುಕಡಿ ಹಣ್ಣು ಹಂಪಲ ಹೂ-ಬಳ್ಳಿ ಇವುಗಳನ್ನು ಬೆಳೆಯಿಸಿ ಮಾನವನ ಜೀವನವನ್ನು ಪ್ರಾಣ ಪರಾಕ್ರಮಗಳಿಂದ ಸಫಲಗೊಳಿಸುವುದು ಈ ಭೂಮಿ, ಗಾಳಿ, ತಂಗಾಳಿ ಈ ಒಳಿತು ಈ ತೇಜದಾಯಿ ಬೆಳಕು, ಈ ವಿಶಾಲ ದೇಶಕಾಲಗಳು, ಮಾನವನ ಆಟ, ಆಲ್ಹಾದ ನೋಟಕೂಟಗಳಿಗೆ ಎಡೆಕೊಟ್ಟು ಅವನನ್ನು ರಮಿಸುವವು. ಭೂಗರ್ಭ ಖನಿಜ ಪದಾರ್ಥಗಳನ್ನು ಕೈಎತ್ತಿ ಕೊಟ್ಟು ಮಾನವನ ಹಿತವನ್ನು ಸಾಧಿಸಬೇಕೆನ್ನುವುದು. ಆದರೇನು! ಹೇ ಮಾನವಾ! ಹೇ ಮೂಢ ಮಾನವಾ!! ಹೇ ಮೂರ್ಖ

ಮಾನವಾ !!! ನಿನ್ನ ಗತಿ ಏನಾಗಿದೆ ಭೂಮಿಯ ಮೇಲಿನ ಕೆಳಗಿನ ಈ ಧನ, ಸಂವೃದ್ಧಿ ನಿನ್ನ ದುಃಖಕ್ಕೆ ಮಾತ್ರ ಕಾರಣವಾಗಲಿಲ್ಲವೆ? ಏನಿದು ನಿನ್ನ ಸಮಾಜ, ಏನಿದು ಅದರ ಈ ರಚನೆ? ಎಷ್ಟು ಅನ್ಯಾಯ, ಎಂಥ ಅಸಮಾನತೆ? ಯಾವ ಮತ್ಸರ ಎಂಥ ದಬ್ಬಾಳಿಕೆ ನಿನ್ನ ಸಮಾಜದಲ್ಲಿ? ನನ್ನದು! ನನ್ನದು! ಎಂದು ಪ್ರತಿಯೊಬ್ಬನೂ ಬಡಕೊಂಡು, ಎಲ್ಲವನ್ನೂ ಬಳಕೊಂಡು, ಬಲಿಯ ಬೇಕೆನ್ನುವನು. ಏನಿದು ಬಲಿಯುವ ಹವ್ಯಾಸ? ಎಂಥ ಆಸುರೀ ಆಕೆಯದು? ಇದರಿಂದ ಎಂದು ಬಿಡಿಸುವೆ ದೇವದೇವಾ ಈ ಮರುಳು ಮಾನವರನ್ನು? ಇನ್ನೆಂದು ನಿಜ ಬಂಧು ಭಾವನೆಯನ್ನು ನೆಲೆಗೊಳಿಸುವೆ ಅವರಲ್ಲಿ?

(ಮೋಟಾರಿನಲ್ಲಿ ಶ್ರೀಧರಲಾಲ್, ಅವರ ಕನ್ಯೆ ಭಾಗ್ಯವತಿ ಬರುವರು. ಅದನ್ನು ನೋಡಿ ರತಿಲಾಲ ಮತ್ತು ಸಮಶೀಲ ಹತ್ತಿರ ಹೋಗುವರು.)

**ರತಿಲಾಲ :—** (ಭಾಗ್ಯವತಿಗೆ) Oh! Congratulations for your success with honours in philosophy in B. A. exam. I saw your result in to day's Chronicle and was waiting with these presents for your arrival.

(ಶೇಕ್‌ಹ್ಯಾಂಡಮಾಡಿ ಹಣ್ಣುಗಳನ್ನು ಡ್ರಾಯ್ವರ್ಸ್ ಕೈಯಲ್ಲಿ ಕೊಡುವನು. ಶ್ರೀಧರಲಾಲ್ ಇವರ ಕಡೆಗೆ ತಿರುಗಿ)

Congratulations to you sir,.

(Saw the Governments comminic appointing youas the public prosecutor) (Shake-hand ಮಾಡುವರು.)

**ಭಾಗ್ಯವತಿ :—** Oh! Thank you

Congratulations to you I saw your B. com. examination result in today's paper.

(ದೂರದಲ್ಲಿ ನಿಂತಿದ್ದ ಸಮಶೀಲನನ್ನು ಕಂಡು,) (Hallow Mr. ಸಮಶೀಲ)

Congratulations to you also you are topping the first clss list of successful candidates in History and Economics

ಓಹೋ! ಈ ಪಾಸಾಗಿದ್ದ ಆನಂದದ ಸಲುವಾಗಿ ಈ ನಿನ್ನ ಶಾನ, ದಾನ ಮೈಮೇಲಿನ ಕೋಟು ತೆಗದು ಹುಡುಗನಿಗೆ ಕೊಟ್ಟದ್ದನ್ನು ನೋಡಿ ಹಾಡುವುದನ್ನು ಸಹಾ ನೋಡಿದ್ದೇನೆ.

**ಸಮಶೀಲ :—** ಛಳಿಯಲ್ಲಿ ನಡುಗುತ್ತಿದ್ದ ಆ ಬಲಹೀನ ಹುಡುಗನನ್ನು ನನ್ನಿಂದ ನೋಡುವುದು ಆಗಲಿಲ್ಲ. ಇರಲಿ; ಅದೇನು ದೊಡ್ಡ ಮಾತು! Kindly accept my congratulation on your succes but without any presents. (Shake-hands ಮಾಡಿ ಸಮುದ್ರದೆಡೆಗೆ ಹೋಗುವನು.)

ರತಿಲಾಲ :— (ಶ್ರೀಧರಲಾಲರಿಗೆ) ಪರೀಕ್ಷೆಯ ಕಾರಣವು ಮುಗಿಯಿತು. ನನ್ನ ಸೂಚನೆಯ ವಿಚಾರಮಾಡಲಿಕ್ಕೆ ಯಾವ ವಿಧವಾಗಿಯೂ ಆತಂಕವಿಲ್ಲ.

ಶ್ರೀಧರಲಾಲ :— ನಿಮ್ಮಂಥ ಲಕ್ಷ್ಮೀಪುತ್ರರ ಸೂಚನೆಯನ್ನು, ನಾನು ಯಾವಾಗಲೂ ಮನ್ನಿಸುತ್ತಲೇ ಇರುವೆನು. ನನ್ನ ಮಗಳ ಭಾಗ್ಯೋದಯವೇ ಆದಂತಾಯಿತು, ನಿಮ್ಮ ಪಾಣಿಗ್ರಹಣಮಾಡಿದರೆ.

ರತಿಲಾಲ :— (ಭಾಗ್ಯವತಿಗೆ) ನೀನು ಸಹ ನಮ್ಮಿಬ್ಬರ ಸಂತೋಷವನ್ನು ಹೆಚ್ಚಿಸಲಿಕ್ಕೆ ಅನುಕೂಲಳಾಗಿರಬೇಕು.

(ಭಾಗ್ಯವತಿ ನಗುತ್ತ ನಗುತ್ತ ಮೋಟರಿನಲ್ಲಿ ಹತ್ತುವಳು; ಮೋಟರ ಹೋಗುವುದು. ನಂತರ ರತಿಲಾಲ ತನ್ನ ಮೋಟರಿನಲ್ಲಿ ಹೋಗುವನು.)

ಸಮಶೀಲ :— (ಭಾಗ್ಯವತಿಯ ಮೋಟರವನ್ನು ನೋಡುತ್ತ)

'ಉತ್ಪದ್ಯಂತೆ ವಿಲೀಯಂತೆ ದರಿದ್ರಾಣಾಂ ಮನೋರಥಾಃ' ಭಾಗ್ಯವತಿಯ ಅಭಿಲಾಷೆಯನ್ನು ನನ್ನಂಥ ಬಡವನು ಮಾಡುವುದೆಂದರೆ, ನೆಲವಿಗೆ ಹಾರದ ಬೆಕ್ಕು ಮುಗಿಲಿಗೆ ಹಾರಲು ಯತ್ನಿಸಿದ ಹಾಗೆ ಹಾಸ್ಯಾಸ್ಪದವಲ್ಲವೆ? ಗುಡಿಸಿಲಿನಂಥ ಮನೆಯಲ್ಲಿ ಬಡತನದಿಂದ ಬಾಳುವ ನಾನೆಲ್ಲಿ, ಶ್ರೀಮಂತಗಿರಿಯ ಸುಖಸಂಪತ್ತನ್ನು ಅನುಭವಿಸುವ ವಿದ್ಯೆಯ ಶೋಭೆಯಿಂದ ಹೊಳೆಯುವ ಆ ನಾಜೂಕು ನಾರಿಮಣಿಯೆಲ್ಲ! ಈ ನನ್ನ ಹವ್ಯಾಸವು ಬಡವರ ಗೋಳಾಟದಿಂದ ನನ್ನನ್ನು ವಿಮುಖಮಾಡಿ, ಐಶ್ವರ್ಯವನ್ನು ದೊರಕಿಸುವ ವಾಮಮಾರ್ಗಕ್ಕೆ ಹಚ್ಚಿಸುವುದು. ಈ ಪೂರ್ವಕ್ಕೆ ಮಾಡಿದ ಸಮತಾ ವಿಚಾರವು ಭಾಗ್ಯವತಿಯ ಸಲುವಾಗಿದ್ದ ನನ್ನ ನೈಸರ್ಗಿಕ ಲವಲವಿಕೆಗೆ ವಿರುದ್ಧವಾಗಿರುವುದು. ಸಮಶೀಲ, ಇದು ಬೇಕೋ, ಅದು ಬೇಕೋ ನಿರ್ಣಯಿಸುವ–ಎರಡೂ ದೊರೆಯಲಾರವು.

ಆಚಾರದೋಳ್ ಸಿಗದು ಮಾನ್ಯತಾ ಭಾವನೆಗೆ।
ಬೇರೊಂದು ವಿಕ್ಷಿಪ್ತ ವಿಧಿಯ ತೊಡಕು॥
ಪ್ರಕೃತಿಗುಣವಾಧಾರವಾದುದದು ನೀತಿಗೆ।
ಸಿರಿತನದ ಸೊಬಗವಿದು ಸರ್ವನಾಶಿ॥
ಎಚ್ಚತ್ತು ನೋಡುನೀ ಮಾನವನು ಹೀನಬಲ।
ಆಗುವನು ವಿಸ್ಖಲಿತ ರಚನೆಯಿಂದ॥

---

ಸ್ಥಳ :— (ಹೊಲ; ಕಾಲ, ಸುಗ್ಗಿಕಾಲ, ಕಣಾವಮಾಡುವಾಗ ಭೀಮಪ್ಪ ಅವನ ಹೆಂಡತಿ ರಾಮಕ್ಕ ಮತ್ತು ಅವರ ಮಗಳು ಸಕ್ರಮ್ಮ ಬೇಂದ್ರೆಯುವರ 'ಕುಣಿಯೋಣು ಬಾರ' ಎಂಬುವ ಪದವನ್ನು ಹಾಡುತ್ತ ಕುಣಿಯುತ್ತಿರುವರು.)

ಕುಣಿಯೋಣು ಬಾರ ಕುಣಿಯೋಣು ಬಾ,
ತಿಣಿತಿಣಿಕಿ ಇಣಿಇಣಿಕಿ
ಒಳ ಹೊರಗ ಹಣಿಹಣಿಕಿ
ಸಾಕಾತು ಸುಳ್ಳಣಿಕ। ಕುಣಿ....
ಈ ಬದುಕು ಬರಿಭ್ರಮಿ
ಆಕದಿಮಿ ಗಿಮಿಗಿಮಿ
ಹಾಂಗೊಮ್ಮೆ ಹಿಂಗೊಮ್ಮೆ। ಕುಣಿ.... ॥ ೧ ॥
ಅಂತಿರಲಿ ಇಂತಿರಲಿ,
ನಿಂತಲ್ಲಿ ನಿಂತಿರಲಿ
ಸಂತೆಯು ಚಿಂತಿರಲಿ। ಕುಣಿ....
ಕಣ್ ಒಳಗ ಹೊರಳಿಸಿ
ಎದೆ ಮುಗುಳನರಳಿಸಿ
ಹೂನೀರನುರುಳಿಸಿ। ಕುಣಿ.... ॥ ೨ ॥
ನಾನಲ್ಲ ನೀನಲ್ಲ
ನನ್ನಲ್ಲಿ ನೀನಿಲ್ಲ
ಸಾವಿನ ನೋವಿಲ್ಲ। ಕುಣಿ....
ಇದ್ದದ್ದು ಮರೆಯೋಣ
ಇಲ್ಲದ್ದು ತೆರೆಯೋಣ
ಹಾಲ್ಜೇನು ಸುರಿಯೋಣ। ಕುಣಿ.... ॥ ೩ ॥
ತಾಳ್ಯಾಕ ತಂತ್ಯಾಕ
ರಾಗದ ಚಿಂತ್ಯಾಕ
ಹೆಜ್ಜ್ಯಾಕ ಗೆಜ್ಜ್ಯಾಕ। ಕುಣಿ....
ಕುಲುಕಿಸಿ ಕೈಕೈ
ಮಲಕಿಸಿ ಮೈಮೈ
ಧಕಧಕ ಥೈಥೈ। ಕುಣಿ.... ॥ ೪ ॥

ಕಾಗುಣಿತ ಬರಿ ಗಣಿತ
ಯಾಕ ಡೊಂಬರ ವಣಿತ
ಸುಗ್ಗಿಯ ಸಿರಿಕುಣಿತ । ಕುಣಿ....
ತರಗೇಲಿ ಜಿಗಿಧಾಂಗ
ಚಿಗುರೇಲಿ ಚಿಗಿಧಾಂಗ
ನನಿಕೊನೆ ಮುಗಿಧಾಂಗ । ಕುಣಿ ॥ ೫ ॥
ಚಕಚಕ ಚಂಚಲ
ಮಿಂಚಿನ ಗೊಂಚಲ
ಚಕಮುಕಿ ಚಲಮುಲ । ಕುಣಿ....
ಹೊಂಗ್ಯಾದಿಗಿ ಹೊಡಿ
ಮಿಡಿನಾಗರ ಹೆಡಿ
ಹಾಂಗೊಮ್ಮೆ ತೂಗಾಡಿ । ಕುಣಿ.... ॥ ೬ ॥
ಕುಡಿಗಣ್ಣು ನಗೆಗಣ್ಣು
ಚುಚ್ಚೋಣು ಬಿಚ್ಚೋಣು
ತೇಲ್ಗಣ್ಣು ಮುಚ್ಚೋಣು । ಕುಣಿ....
ಕಣಕಣ್ಣ ಹಣಿಯೋಣು
ಸೆಳೆದತ್ತ ಮಣಿಯೋಣು
ಮೈಮರಿಯ ದಣಿಯೋಣು । ಕುಣಿ.... ॥ ೭ ॥
ಆ ಕ್ಷೀರಸಾಗರ
ದಾನಂದದಾಗರ
ತೆರಿತೆರಿ ತೆರೆದರ । ಕುಣಿ
ಹದಿನಾಲ್ಕು ಲೋಕಕ್ಕ
ಚಿಮ್ಮಲಿ ಈ ಸುಖ
ಹಿಗ್ಗಲಿ ಗಿರಿಮುಖ । ಕುಣಿ.... ॥ ೮ ॥

[ಹೀಗೆ ಹಾಡುತ್ತಿರಲು ಕೋರ್ಟಅಮೀನ ಮತ್ತು ಮಾರವಾಡಿ ಬರುವರು.]

ಅಮೀನ:— [ಭೀಮಪ್ಪನಿಗೆ] ಈ ಮಹಸೂಲು ನೀನು ಮನೆಗೆ ಒಯ್ಯತಕ್ಕದ್ದಲ್ಲ. ಈ ಸೇಟರು ನಿನ್ನ ಮೇಲೆ ಡಿಕ್ರಿ ಹೊಂದಿರುವರು. ೨೦೦ ರೂಪಾಯಕ್ಕೆ ಈ ಕಣದ ಮೇಲಿನ ಮಹಸೂಲು ಮಾಡಿರುವರು.

ಭೀಮಪ್ಪ:— ಈ ಡಿಕ್ರಿ ಪಕ್ರಿ ಸುದ್ದಿ ಸಹ ನನಗೆ ಗೊತ್ತಿಲ್ಲಲ್ಲ?

ಅಮೀನ:— ನಿನಗೆ ಗೊತ್ತುಮಾಡಿದರೆ ಮಹಸೂಲ ಸಾಹುಕಾರ ಕೈಗೆ ಹತ್ತುವದು ಹೇಗೆ?

(ಭೂಮಿಯ ಮಾಲಕನ ಪ್ರವೇಶ)

**ಭೂಮಿ ಮಾಲಕ:—** ಏ, ಮಾರವಾಡಿ! ನನಗೆ ಮೋಸ ಮಾಡಬೇಕೆಂದು ಮಾಡಿದ್ದೀಯಾ? ಅಮೀನರ! ಈ ಭೂಮಿ ನನ್ನದು. ನನ್ನ ಗುತ್ತಿಗೆ ಹಣ ಬರ ತಕ್ಕದ್ದು ಇದೇ ಗುತ್ತಿಗೆಯ ಸಲುವಾಗಿ ಬರತಕ್ಕ ಮಹಸೂಲನ್ನು ಬಿಟ್ಟು ಮಿಕ್ಕ ಮಹಸೂಲು ನೀವು ಏನಾದರೂ ಮಾಡಿರಿ. ಪೂರ್ಣ ಮಹಸೂಲ ಜಪ್ತಮಾಡಲು ನನ್ನ ತಕರಾರು ಇದೆ. ಬೇಕಾದರೆ ಅಮೀನರು ನನ್ನ ತಕರಾರು ಬರೆದುಕೊಂಡು ಹೋಗಲಿ.

(ಗೌಡನ ಪ್ರವೇಶ)

**ಗೌಡ:—** ನಮ್ಮ ಸರಕಾರೀ ಹಣವು ಬರತಕ್ಕದ್ದಿದೆ.

**ಮಾರವಾಡಿ:—** ನಮ್ಮದು ನಿಮ್ಮದು ಗುದ್ಯಾಟ ಇಲ್ಲ. ನಿಮ್ಮ ಭಾಗ ನೀನು ನೀನು ತೆಗೆದುಕೊ. ನನ್ನ ಭಾಗ ನನಗೆ ಬಿಡು.

[ಅಮೀನನು ಗೌಡನಿಗೆ ಮತ್ತು ಭೂಮಿ ಮಾಲಕನಿಗೆ ಅವರ ಅವರ ಭಾಗ ವನ್ನು ಬಿಟ್ಟು ಮಿಕ್ಕ ಮಹಸೂಲವನ್ನು ತನ್ನ ಸ್ವಾಧೀನ ಮಾಡಿಕೊಂಡು ಹೋಗುವನು.]

**ಅಮೀನ:—** [ಹೋಗುತ್ತ ಹೋಗುತ್ತ ಮಾರವಾಡಿಗೆ] ನಮ್ಮ ಮಾಮೂಲ ಬರಲಿ. [ಮಾರವಾಡಿ ಅವನಿಗೆ ಲಂಚ ಕೊಡುವನು.] ಎಲ್ಲರೂ ಹೋಗುವರು.

**ಭೀಮಪ್ಪನ ಮಗ:—** ನಮಗೇನಪ್ಪ ಉಳಿಯಿತು?

**ಭೀಮಪ್ಪ:—** ರೊಜ್ಜಿನ್ಯಾಗಿನ ದುಡಿತ ಅದರಿಂದ ಬಂದ ಒಟ್ಯಾಗಿನ ಗಂಟು.

[ಭೀಮಪ್ಪ ಸ್ವಲ್ಪ ವೇಳೆ ಖಿನ್ನನಾಗಿ ಕೂಡ್ರುವನು. ನಂತರ ಏನೋ ಆಲೋಚನೆ ಮಾಡಿ] (ಹೆಂಡತಿಗೆ) ಇಗೋ ನೋಡು ನನಗೊಂದು ಅಕಲಾ ಹೊಳದೈತಿ. ಈ ಹಾಳು ಒಕ್ಕಲತನ ಬಿಟ್ಟು ಬೊಂಬಾಯಿಗೆ ಹೋಗೋಣ. ದಿನಾಲು ಗಿರಿಣ್ಯಾಗ ೧೨ ಆಣೆ, ರೂಪಾಯಿ ಕೂಲಿ ಅಂತ. ಈ ಹಾಳ ಒಕ್ಕಲತನದಲ್ಲಿ ಏನೈತಿ.

**ಹೆಂಡತಿ:—** ನಡಿ ಬೊಂಬಾಯಿಗೆ ಹೋಗೋಣ. ದಾರೀ ಕರ್ಚಿಗೆ?

**ಭೀಮಪ್ಪ:—** ನಿನ್ನ ಕಡಗs!

**ಹೆಂಡತಿ:—** [ವಕ್ರನಗೆಯಿಂದ] ಅsಟ ಬರೂತಲೆ ನಿನ್ನ ಕಣ್ಣ ಅದರ ಮ್ಯಾಗs! [ಹೋಗುವರು.]

(ಪರದೆ)



# ವೀರಮಾತೆ



**ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ**
**ಕನ್ನಡ ಮಾಸಪತ್ರಿಕೆ.**

ಸಂಪುಟ ೧ } ಆಷಾಢ ಪೌರ್ಣಿಮಾ ಜುಲೈ ೧೯೫೨ { ಸಂಚಿಕೆ ೨

## ಸಂಪಾದಕೀಯ

ಪರಕೀಯರ ಪ್ರಭುತ್ವ ನಮ್ಮ ದೇಶದಲ್ಲಿದ್ದಾಗ, ಆ ರಾಜಭಾಷೆಯನ್ನು ಕಲಿಯುವದೇ ನಮ್ಮ ಉದ್ದೇಶವಾಗಿತ್ತು. ಜೀವನದ ಮಹತ್ವದ ಘಟ್ಟದಲ್ಲಿಯ ಅನೇಕ ವರುಷಗಳು ಅದಕ್ಕಾಗಿಯೇ ಮೀಸಲಾಗಿರುತ್ತಿದ್ದವು. ಭಾಷೆಯನ್ನು ಕಲಿಯುವದು ಜ್ಞಾನದ ಸಾಧನವಾಗಲೆಂದೇ ಹೊರತು, ಅದೇ ಮುಖ್ಯವೆಂದಲ್ಲ; ಬಳಿಕ ರಕ್ತಗತವಾದ ಮಾತೃಭಾಷೆಯಲ್ಲಿಯೇ ಈ ಜ್ಞಾನಸಾಧನೆಯು ಸಾಧ್ಯವಿದ್ದರೆ, ಸುಗಮ್ಯವಿದ್ದರೆ ಅದನ್ನೇಕೆ ಅನುಸರಿಸಬಾರದು? ಹೆಚ್ಚಿನ ಜಿಜ್ಞಾಸುಗಳು ಅಂತರ ರಾಷ್ಟ್ರೀಯ ಭಾಷೆಗಳನ್ನೂ ಕಲಿತು, ಅದರಿಂದಾಗುವ ಲಾಭವನ್ನು ತಮ್ಮ ಬಂಧುಗಳಿಗೆ ಅವಶ್ಯವಾಗಿಯೂ ಒದಗಿಸಿಕೊಡಬೇಕು. ಎಲ್ಲ ಬಗೆಯ ಜ್ಞಾನವೂ, ಸಾಧ್ಯವಿದ್ದಷ್ಟು ಹೆಚ್ಚು ಪ್ರಮಾಣದಲ್ಲಿ, ಮಾತೃಭಾಷೆಯಲ್ಲಿ, ಸಾಧ್ಯವಾಗದೆಹೋದರೆ ರಾಷ್ಟ್ರಭಾಷೆಯಲ್ಲಾದರೂ ದೊರೆಯುವಂತಿರಬೇಕು.

ಯಾವುದೇ ಭಾಷೆ, ನಾಡು, ಸಂಸ್ಕೃತಿಗಳಲ್ಲಿದ್ದ ಒಳ್ಳೆಯ ಅಂಶವನ್ನು ಸ್ವೀಕರಿಸಲು ಯಾವ ಅಡೆತಡೆಯೂ ಇಲ್ಲ. ಆದರೆ ವ್ಯರ್ಥವಾದ ಬಾಹ್ಯಾಡಂಬರಕ್ಕೆ ಮಾತ್ರ ಮನಸೋಲಬಾರದು. ನಮ್ಮವರೇ ನಮಗೆ ಈ ಮಾತನ್ನು ಹೇಳಿದಾಗ

ನಂಬುಗೆಯಾಗುವದಿಲ್ಲವೇನೋ! ಕೆಲದಿನಗಳ ಹಿಂದೆ ಹಿಂದುಸ್ಥಾನಕ್ಕೆ ಭೆಟ್ಟಿಕೊಟ್ಟ ಚೀನದ ಸಂಸ್ಕೃತಿ ಸಂಪರ್ಕ ಮಂಡಲವು ಇದೇ ಮಾತನ್ನೇ ಹೇಳಿದುದು ಗಮನಾರ್ಹ ವಾಗಿದೆ. ಮಂಡಲದ ನುರಿತ ಪ್ರಾಧ್ಯಾಪಕರೂ, ಶಾಸ್ತ್ರಜ್ಞರೂ ಆಗಿದ್ದ ಚೀನ್. ವಿ ಝ್ಯಾಂಗರು, ಚೀನೀ ಭಾಷೆಯನ್ನೇ ಬೋಧಭಾಷೆಯಾಗಿ ಉಪಯೋಗಿಸುತ್ತಿದುದರ ಮಹತ್ವವನ್ನು ವಿವರಿಸಿದರು. ಶಾಸ್ತ್ರೀಯ ಜ್ಞಾನವು ಕೂಡ ಕೆಲವರ ಮಟ್ಟಿಗೇ ಮರ್ಯಾದಿತವಾಗಿರಬಾರದೆಂದೂ, ಸಾಮಾನ್ಯರಲ್ಲಿ ಜ್ಞಾನತೃಷೆ ಹೆಚ್ಚಲೆಂದೂ ಆಶಿ ಸುವದಾದರೆ, ಬಹುಜನರ ಮಾತೃಭಾಷೆಯೂ, ರಾಷ್ಟ್ರಭಾಷೆಯೂ ಆದ ಚೀನೀ ಭಾಷೆಯೇ ಉತ್ತಮವಾದುದು ಎಂಬ ಮಾತನ್ನು ಸ್ಪಷ್ಟಗೊಳಿಸಿದರು. ಇದೇ ಉದ್ದೇಶದಿಂದಲೇ ಪ್ರಸ್ಥಾಪಿತವಾದ ನಮ್ಮ ಪ್ರಾದೇಶಿಕ ವಿಶ್ವವಿದ್ಯಾಲಯಗಳಾದರೂ ಈ ಮಾರ್ಗದಲ್ಲಿ ಸ್ತುತ್ಯಕಾರ್ಯ ಮಾಡುತ್ತಿವೆಯೆಂದು ಹೇಳಬಹುದು. ನಮ್ಮ ಪ್ರಾದೇಶಿಕ ವಿಶ್ವವಿದ್ಯಾಲಯದ ವಿಸ್ತೃತ ಕಾರ್ಯವನ್ನನುಲಕ್ಷಿಸಿ, ಅದರ ಸಾಧನೆ ಗಾಗಿ, ಶ್ರೀ ದಾತಾರರ ನೇತೃತ್ವದಲ್ಲಿ ಹೋಗಿದ್ದ ಶಿಷ್ಟಮಂಡಳಕ್ಕೆ ಮೈಸೂರೊಡೆಯರು ಕೊಡುಗೈಯಿಂದ ದಾನಮಾಡುವ ಆಶ್ವಾಸನ ಕೊಟ್ಟಿದ್ದು ಸಂತೋಷದ ಸಂಗತಿ.

ರಾಷ್ಟ್ರದಲ್ಲಿ ಪ್ರಭುತ್ವದ ಬಗ್ಗೆ ಅಪಪ್ರಚಾರ ಮಾಡಲೆಳಸುವ ಸಾಹಿತ್ಯ ವನ್ನು ಪ್ರತಿಬಂಧಗೊಳಿಸುವದಂತೂ ಶಾಂತತೆಯ ದೃಷ್ಟಿಯಿಂದ ಸರಿ; ಆದರೆ ಸದಭಿ ರುಚಿಯ ದೃಷ್ಟಿಯಿಂದ ಅಶ್ಲೀಲ ಸಾಹಿತ್ಯವನ್ನೂ ಪ್ರತಿಬಂಧಗೊಳಿಸುವದು ಅವಶ್ಯ. ಮೊನ್ನೆ ಲೋಕಸಭೆಯಲ್ಲಿ ಈ ಮಾತು ನಡೆದಾಗ ಗೃಹಸಚಿವರಾದ ಡಾ. ಕೈಲಾಸ ನಾಥ ಕಟಜುರವರು ಅಶ್ಲೀಲ ಸಾಹಿತ್ಯವು ಭಾರತದಲ್ಲಿ ಬಾರದಂತೆ ಇಂಡಿಯನ್ ಪಿನಲ್‌ಕೋಡ, ಮತ್ತು ಸಮುದ್ರದಿಂದ ಬರುವ ಸರಕುಗಳ ಮೇಲೆ ಸುಂಕ ಹೇರುವ ಕಾಯದೆಯನ್ವಯ ಅವಶ್ಯವಿದ್ದ ಕ್ರಮಗಳನ್ನು ಕೈಕೊಳ್ಳಲಾಗುವದು ಎಂದು ಆಶ್ವಾಸನವಿತ್ತರು. ಕೇವಲ ಕೇಂದ್ರ ಸರಕಾರವಿಷ್ಟೇ ಅಲ್ಲ ಪ್ರಾಂತಿಕ ಸರಕಾರಗಳೂ ಇಂಡಿಯನ್ ಪಿನಲ್ ಕೋಡಿನ ಕಲಮುಗಳನ್ವಯ ಅಶ್ಲೀಲ ಸಾಹಿತ್ಯವನ್ನು ತಡೆಗಟ್ಟ ಬಹುದು. ಕರಾವಳಿಯ ಸುಂಕದ ಅಧಿಕಾರಿಗಳೂ ಅಶ್ಲೀಲಸಾಹಿತ್ಯದ ಆಯಾತವಾಗ ದಂತೆ ಕ್ರಮಕೈಕೊಳ್ಳುತ್ತಿದ್ದಾರೆ. ಆದರೆ ಅಶ್ಲೀಲ ಸಾಹಿತ್ಯವನ್ನು ಅಳೆಯುವ ಬಗೆ ಹೇಗೆ? ಸದಭಿರುಚಿಯ ಮಾನದಂಡವೇನು ಎಂಬುದ್ನು ಯೋಚಿಸಲು ಬೇಡವೇ?

ಮದ್ರಾಸಿನಲ್ಲಿ ರಾಜಾಜಿಯವರು ಧೈರ್ಯವಾಗಿ ಕೈಕೊಂಡ ಆಹಾರ ವಿನಿಯಂತ್ರಣದ ಧೋರಣವು ಭಾರತಕ್ಕೇ ಅನ್ವಯಿಸುವದೇನೋ ಎಂದು ನಮ್ಮ ಬಾಯಲ್ಲೂ ನೀರೂರಿದಾಗ ಮುಖ್ಯ ಮಂತ್ರಿಗಳ ಸ್ಪಷ್ಟೋಕ್ತಿಯಿಂದ ಕೊಂಚ ನಿರಾಶೆ ಯಾಯಿತು. "ಪರಿಸ್ಥಿತಿಯ ಮೇಲೆ ಹಿಡಿತವಿಟ್ಟುಕೊಂಡು ನಿಯಂತ್ರಣಗಳನ್ನು ಅವಶ್ಯವಿದ್ದಲ್ಲಿ ಇನ್ನೂ ಬಿಗಿಗೊಳಿಸಿ, ಸಾಧ್ಯವಿದ್ದಲ್ಲಿ ವ್ಯತ್ಯಾಸಗಳನ್ನು ಬಳಕೆಯಲ್ಲಿ ತಂದು, ಒಟ್ಟಿನಲ್ಲಿ ಬೆಲೆಗಳೇರದಂತೆ ನೋಡಿಕೊಳ್ಳುವದೇ ನಮ್ಮ ಧೋರಣ" ಎಂದು ವಿಶದಪಡಿಸಿದ್ದು ಅದರಲ್ಲಿಯೇ ಕೊಂಚ ಸಮಾಧಾನಕರ.

ಆಚಾರ್ಯ ವಿನೋಬಾ ಭಾವೆಯವರು ಕೈಕೊಂಡ ಭೂದಾನ ಯಜ್ಞದ ಪವಿತ್ರ ಕಾರ್ಯವು ಸರ್ವರ ಹಿತವನ್ನೂ ಸಮಾನತೆಯ ದೃಷ್ಟಿಯಿಂದ ಅನುಲಕ್ಷಿಸಿ ಪ್ರಚಾರದಲ್ಲಿ ಬರಹೊರಟಿದೆ. ಹೊಲದಲ್ಲಿ ಮೈಮುರಿದು ದುಡಿಯುವ ರೈತನು ದಾನ ಪಡೆಯಲು ಪಾತ್ರನೇನೋ ಸರಿ, ಆದರೆ ಅವನ ಸರಿಜೊತೆಯಾಗಿ ದುಡಿಯುವ ರೈತರ ಹೆಣ್ಣುಮಕ್ಕಳು ಈ ದಾನಕ್ಕೆ ಪಾತ್ರರಲ್ಲವೇ? ಎಲ್ಲರೂ ಇದರಲ್ಲಿ ಸೇರ್ಪಡೆಯಾಗದಿರಬಹುದು. ಆದರೆ ಕೆಲ ಹೆಣ್ಣುಮಕ್ಕಳಾದರೂ ಇದಕ್ಕೆ ಯೋಗ್ಯರಾಗಿಲ್ಲವೇ? ಭೂದಾನವನ್ನು ಹೆಣ್ಣುಮಕ್ಕಳಿಂದ ತೆಗೆದುಕೊಂಡು, ಕೊಡುವಾಗ ಅವರ ಹೆಸರನ್ನೇ ಎತ್ತದಿರುವದು ಬಹು ವಿಷಾದದ ಸಂಗತಿಯೆಂದು ನಿರ್ವಾಹವಿಲ್ಲದೆ ಹೇಳಬೇಕಾಗುವದು.

ರಾಜ್ಯದಲ್ಲಿ ಬಳಕೆಯಲ್ಲಿ ಬರುವ ಘಟನೆಯ ಅಂಶಗಳಿಗೆ ಜನತೆಯ ಪ್ರತೀಕಾರ ಅತ್ಯವಶ್ಯ; ಜನಾಂಗದ ಅರ್ಧಭಾಗವನ್ನಾಕ್ರಮಿಸಿದ ಹೆಣ್ಣುಮಕ್ಕಳು ಇದರಲ್ಲಿ ಆಸ್ಥೆಯನ್ನೇ ವಹಿಸದಿದ್ದರೆ 'ಹೇಗೆ? ಪ್ರಜಾಪ್ರಭುತ್ವದಲ್ಲಿಯೂ ಸೋದರಿಯರು ಮತದಾನವನ್ನು ಮಾಡುವ ತಮ್ಮ ಅಧಿಕಾರವನ್ನು ಬಿಟ್ಟುಕೊಡುವದೆಂದರೆ? ಎಷ್ಟೋ ಜನ ಸೋದರಿಯರು ತಮ್ಮ ಮತಾಧಿಕಾರವನ್ನು ಉಪಯೋಗಿಸದಿದ್ದುದು ವಿಷಾದದ ಸಂಗತಿ. ಇದನ್ನು ಲಕ್ಷಿಸಿಯೇ ಏನೋ ಸ್ತ್ರೀಜನಾಂಗವನ್ನು ಪ್ರತಿನಿಧಿಸಲು, ಆಯಾ ಮಂತ್ರಿಮಂಡಲಗಳಲ್ಲಿಯೂ ಸ್ತ್ರೀಯರ ಸಂಖ್ಯೆ ಹೆಚ್ಚಾಗಿಲ್ಲ. ಸೋದರಿಯರೇ ಎಚ್ಚೆತ್ತು ಮುಂದುವರಿಯದಿದ್ದರೆ ಅವರಿಗೆ ಅವರ ಸ್ಥಾನವನ್ನು ಕರೆದುಕೊಡುವವರಾರು?

# ನಮ್ಮ ಮಾತು

ಇದೀಗ ತಮ್ಮೆಲ್ಲರ ಸಹಕಾರ ಸಹಾನುಭೂತಿಗಳ ಮೂರ್ತಸ್ವರೂಪವಾಗಿ 'ವೀರಮಾತೆ'ಯ ಎರಡನೆಯ ಸಂಚಿಕೆ ಹೊರಬರುತ್ತಲಿದೆ. ಮೊದಲ ಸಂಚಿಕೆ ಕಳೆದ ಎಂಟನೆಯ ತಾರೀಖಿಗೆ ಪ್ರಕಾಶಿತವಾದರೂ ತಮ್ಮ ಕೈಸೇರಲು ಕಾರಣಾಂತರದಿಂದ ವಿಲಂಬವಾದುದಕ್ಕೆ ಕ್ಷಮೆ ಕೋರುತ್ತೇವೆ. ಪತ್ರಿಕೆಯನ್ನು ಸಕಾಲದಲ್ಲಿ ಓದುಗರ ಕೈಯಲ್ಲಿರಿಸಲು ಸಾಧ್ಯವಿದ್ದಷ್ಟನ್ನೂ ಮಾಡುತ್ತಿದ್ದೇವೆ. ಆದರೂ ಹದಿನೆಂಟನೆಯ ತಾರೀಖಿನೊಳಗಾಗಿ ಪತ್ರಿಕೆ ಕೈಸೇರದಿದ್ದರೆ ಓದುಗರು ಕೂಡಲೆ ತಮ್ಮ ತಕರಾರುಗಳನ್ನು ಕಳಿಸಬೇಕು. ವಿಲಂಬವಾಗಿ ಬಂದರೆ ಅವುಗಳಿಗೂ ಲಕ್ಷ್ಯಪೂರೈಸುವದು ಅಸಾಧ್ಯವಾದೀತು!

'ವೀರಮಾತೆ'ಯ ಮೊದಲ ಸಂಚಿಕೆಯನ್ನು ಜನತೆ ಆದರದಿಂದ ಬರಮಾಡಿಕೊಂಡಿತೆಂಬುದು ಸಂತೋಷದ ಸಂಗತಿ; ಪ್ರತಿಗಳು ಭರದಿಂದ ಮಾರಾಟವಾಗುತ್ತಿರುವದು, 'ವೀರಮಾತೆ' ಪಡೆದ ಸ್ವಾಗತಕ್ಕೆ ಸಾಕ್ಷಿಯಾಗಿದೆ. ಈ ಸಲ ಸಾಧ್ಯವಾದರೆ ಇನ್ನೂ ಹೆಚ್ಚು ಪ್ರತಿಗಳನ್ನು ಹೊರಡಿಸುವ ವಿಚಾರವಿದೆ. ಬೇರೆ

ಊರುಗಳಲ್ಲಿ ಏಜಂಟರಾಗುವವರು, ಮತ್ತು ಚಂದಾದಾರರು ತಮ್ಮ ಬೇಡಿಕೆಗಳನ್ನು ದಯವಿಟ್ಟು ಮುಂಗಡವಾಗಿ ಕಳಿಸಬೇಕು.

'ವೀರಮಾತೆ' ಯನ್ನು ಅಭಿನಂದಿಸಿ ಡಾ. ತಾವರಗೆರೆ ಧಾರವಾಡ, ಶ್ರೀಮಾನ್ ಎಚ್. ಎಸ್ ಪಾಟೀಲ ದಿಲ್ಲಿ, ಶ್ರೀ ದೇಸಾಯಿ ದತ್ತಮೂರ್ತಿ ಹುಬ್ಬಳ್ಳಿ ಮೊದಲಾದವರು ಸಂದೇಶಗಳನ್ನು ಕಳಿಸಿದ್ದಾರೆ. ಅವರಿಗೆಲ್ಲ ನಮ್ಮ ಹಾರ್ದಿಕ ವಂದನೆಗಳು. ಕನ್ನಡನಾಡಿನ ನಮ್ಮ ಬಾಂಧವರು, ಅದರಲ್ಲಿಯೂ ಸುಶಿಕ್ಷಿತ ಸೋದರಿಯರು, 'ವೀರಮಾತೆ'ಯನ್ನು ಆತ್ಮೀಯತೆಯಿಂದ ಕಂಡು ಲೇಖಗಳನ್ನು ಕಳಿಸಿದುದು ನಿಜವಾಗಿಯೂ ಸ್ತುತ್ಯವಾದುದು.

ಈ ಸಂಚಿಕೆಯಲ್ಲಿ ದಾದಾ ಧರ್ಮಾಧಿಕಾರಿಯವರ 'ಸ್ತ್ರೀಯರ ಮೂಲ ಭೂತ ಸಮಸ್ಯೆ' ಎಂಬ ವಿಚಾರಪ್ರಚೋದಕ ಲೇಖವಿದೆ. ಧರ್ಮಾಧಿಕಾರಿಯವರು ಈ ಸಮಸ್ಯೆಯ ನಿವಾರಣೆಗಾಗಿ ಖಂಡಿತವಾದ ತಮ್ಮ ಮತವನ್ನು ಸ್ಪಷ್ಟಗೊಳಿಸಿ ದ್ದಾರೆ. ನಮ್ಮ ಓದುಗರೂ ಈ ಲೇಖದಿಂದ ಪ್ರಚೋದಿತರಾಗಿ ತಮ್ಮ ಅಭಿಪ್ರಾಯ ಗಳನ್ನು ವ್ಯಕ್ತಗೊಳಿಸುವರೆಂದು ನಮ್ಮ ಆಶೆ. ಹಾಗೆ ವ್ಯಕ್ತಗೊಳಿಸಿದಲ್ಲಿ ಮುಂದಿನ ಸಂಚಿಕೆಯಲ್ಲಿ ಅವಶ್ಯವಾಗಿಯೂ ಪ್ರಕಟಿಸಲಾಗುವದು. ಇದಲ್ಲದೆ ಡಾ. ವನವಿಹಾರಿ ಯವರ 'ಸಂಜೀವನಿ' ಇದೆ, ತಾಯ್ತನದ ಪಾವಿತ್ರ್ಯವನ್ನು ಮೂಡಿಸುವ, ಕರುಣ ರಸಪೂರಿತವಾದ 'ತಾಯಿ' ಎಂಬ ಕಥೆಯಿದೆ, ಜೊತೆಗೆ ಮನೆಯ ಶುಚಿ-ರುಚಿ, ಪಾಕಶಾಸ್ತ್ರ, ಕಾನೂನು ವಿಚಾರ ಇತ್ಯಾದಿಗಳನ್ನೆಲ್ಲ ಸೇರಿಸಲಾಗಿದೆ. ಕಾನೂನು ವಿಭಾಗದಲ್ಲಿ ಬಂದ ಪ್ರಶ್ನೆಗಳಿಗೆಲ್ಲ ಒಂದೇ ಸಂಚಿಕೆಯಲ್ಲಿ ಉತ್ತರವನ್ನು ಕೊಡುವದು ಸಾಧ್ಯವಾಗದ್ದರಿಂದ ಕ್ರಮೇಣ ಪ್ರತಿಸಂಚಿಕೆಯಲ್ಲೂ ಪ್ರಶ್ನೆಗಳಿಗೆ ಉತ್ತರಕೊಡಲಾಗು ವದು. ಪ್ರಶ್ನೆಗಳನ್ನು ಕೇಳಿದವರು ಉತ್ತರವು ದೊರೆಯಲಿಲ್ಲವೆಂದು ನಿರಾಶರಾಗ ಬೇಕಾಗಿಲ್ಲ.

**ಅಭಿನಂದನೆ:**

ಶ್ರೀಮತಿ ಸರೋಜಿನಿ ಶಿಂತ್ರಿ ಎಂ. ಎ. ಧಾರವಾಡ. ಇವರು ಕರ್ನಾಟಕ ಕಾಲೇಜಿನಲ್ಲಿ ಇಂಗ್ಲೀಷ ಪ್ರಾಧ್ಯಾಪಕರಾಗಿ ನಿಯುಕ್ತರಾದುದು ಸಂತೋಷದ ಸಂಗತಿ; ಅಭಿನಂದನೆಗಾಗಿ ತಾ॥ ೨೬-೬-೧೯೫೨ ರಂದು 'ವೀರಮಾತೆ' ಯ ಪತಿಯಿಂದ ಅವರಿಗೆ ಸತ್ಕಾರಕೂಟವನ್ನೇರ್ಪಡಿಸಲಾಗಿತ್ತು. ಎಲ್ಲ ದೃಷ್ಟಿಯಿಂದಲೂ ಯೋಗ್ಯತೆ ಯುಳ್ಳ ಶ್ರೀಮತಿಯವರು ಕನ್ನಡನಾಡುನುಡಿಗಳ ಸೇವೆಯನ್ನು ಹೆಚ್ಚಾಗಿ ಮಾಡಲಿ ಎಂಬುದೇ ನಮ್ಮ ಆಶೆ.

ಕೊನೆಯದಾಗಿ ಸಂಚಿಕೆಯ ಹೊದಿಕೆಗೆ ಅರ್ಥಪೂರ್ಣವಾದ ಚಿತ್ರವನ್ನು ತೆಗೆದುಕೊಟ್ಟ ಶ್ರೀಮಾನ್ ಮೂರ್ತಿಯವರಿಗೂ, ಸಕಾಲದಲ್ಲಿ ಮುದ್ರಿಸಿಕೊಟ್ಟ 'ಶ್ರೀ ಸರಸ್ವತೀ ಮುದ್ರಣಾಲಯ'ದ ಒಡೆಯರಾದ ಶ್ರೀಮಾನ್ ಕುರಡಿಯವರಿಗೂ, ನಮ್ಮ ಧನ್ಯವಾದಗಳು!

# ಸ್ತ್ರೀ ಜೀವನದ ಮೂಲಭೂತ ಸಮಸ್ಯೆ

**ಆಚಾರ್ಯ ದಾದಾ ಧರ್ಮಾಧಿಕಾರಿಯವರು, ‘ ಅಮರಹಿಂದ ಮಂಡಳ ದಾದರ’ ದಲ್ಲಿ ಸ್ತ್ರೀ ಜೀವನದ ಮೂಲಭೂತ ಸಮಸ್ಯೆ ಎಂಬ ವಿಷಯವನ್ನು ಕುರಿತು ಎಪ್ರಿಲ್ ೩೦ ರಂದು ಭಾಷಣ ಮಾಡಿದರು. ಅದರ ಸಾರಾಂಶವನ್ನೇ ಕೆಳಗೆ ಕೊಡಲಾಗಿದೆ.**

ಸ್ತ್ರೀ ಜೀವನದ ಸಮಸ್ಯೆಯ ವಿಷಯ ಹಳೆಯದೇನೋ. ಸರಿ. ಆದರೆ ಅದನ್ನು ಕುರಿತು ಮೂಲಭೂತವಿಚಾರ ಮಾಡುವವರು ವಿರಳ. ಸ್ತ್ರೀಯನ್ನು ಕುರಿತು ನಮ್ಮ ವಿಚಾರದಲ್ಲಿ ಭಾವನೆ ಆಕಾಂಕ್ಷೆಗಳಿರಬಹುದು ಆದರೆ ಅವಳ ಸ್ವಾಯತ್ತ ಜೀವನವನ್ನು ಕುರಿತು ಯೋಚಿಸುವ ವಿಚಾರ ನಮ್ಮಲ್ಲಿ ಬರುವದೇ ಇಲ್ಲ. ಆ ಜೀವನದ ಅಧಿಕಾರವಾದರೂ ಅವಳಿಗಿದೆಯೆ ? ಸ್ತ್ರೀ ವೀರಮಾತೆಯಾಗಬಹುದು. ಪುರುಷರ ಶ್ರೇಷ್ಠ ತಪಸ್ಸನ್ನು ಭಂಗಗೊಳಿಸುವ ಶಕ್ತಿ ಅವಳಲ್ಲಿರಬಹುದು. ಆದರೆ ಪುರುಷರಿಗೆ ಸಮಾನವಾದ ಭೂಮಿಕೆಯನ್ನು ಅವಳು ನಿರ್ವಹಿಸಬಲ್ಲಳೇ ? ನಿರ್ವಹಿಸಲಾರಳೆಂದು ಇತಿಹಾಸ ಹೇಳುತ್ತಿದೆ. ಇದುವರೆಗೆ ಯಾವ ಸ್ಮೃತಿಕಾರರೂ ಈ ಪ್ರಶ್ನೆಯನ್ನು ಎತ್ತಿಹಿಡಿದಿಲ್ಲ; ಸ್ತ್ರೀಜೀವನವು ಸ್ವತಂತ್ರವಾದುದೇ ಎಂಬ ಪ್ರಶ್ನೆಗೆ ಉತ್ತರವೂ ದೊರೆತಿಲ್ಲ. ಹಾಗೆ ಉತ್ತರವನ್ನು ಹೇಳುವದೂ ಬಹಳ ಕಷ್ಟ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಸರಂಜಾಮುಶಾಹಿ ಭಾಂಡವಲಶಾಹಿ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀಗೆ ಸ್ವತಂತ್ರ ಅಸ್ತಿತ್ವವಿಲ್ಲ; ಅವಳೊಂದು ಸಾಧನ ಮಾತ್ರ. ಜನ್ಮದ ವಿಚಾರವನ್ನೆತ್ತಿಕೊಂಡು ಸ್ತ್ರೀಯು ಮೊದಲೋ ಪುರುಷನು ಮೊದಲೋ ಎಂದು ವಿಚಾರಿಸಹೊರಟರೆ ಅದೊಂದು ಜೊಳ್ಳು ವಾದವೇ ಆಗಿಬಿಡಬಹುದು. ತಾನು ರಚಿಸಿದಂಥ ಯಾವ ಪುರಾಣದಲ್ಲಿಯೂ ಪುರುಷನು ಸ್ತ್ರೀಯಿಂದ ತನ್ನ ಜನ್ಮ ಎಂಬುದನ್ನು ಒಪ್ಪಿಕೊಂಡಿಲ್ಲ. ಸ್ತ್ರೀಗಾಗಿ ಪುರುಷನು ತಪಶ್ಚರ್ಯವನ್ನೂ ಮಾಡಿಲ್ಲ. ತನ್ನ ಜೀವನಕ್ಕೆ ಕಳೆಗೂಡಿಸುವ ವಸ್ತುವೆಂದೇ ಅಂದು ಅವಳನ್ನವನು ಕಂಡದ್ದು. ಅಂತೂ ಪುರುಷನ ಪ್ರಾಣಭೂತ ಆವಶ್ಯಕತೆಯೆಂದು ಅವಳ ನಿರ್ಮಾಣವಾಗಿಲ್ಲ ಇಷ್ಟುಮಾತ್ರ ಸರಿ.

ಸ್ತ್ರೀಯನ್ನು ಬಿಟ್ಟು ಪುರುಷನಿರಬಹುದು ; ಹಾಗೆ ಸ್ತ್ರೀಯಿರಲು ಸಾಧ್ಯವೇ? ಇಷ್ಟವೇ ? ರಾಷ್ಟ್ರಕ್ಕಾಗಿ ಸ್ತ್ರೀ ಪ್ರೇಮವನ್ನು ಬಿಟ್ಟವರು ಮಾನ್ಯರಾದರು, ಸ್ತ್ರೀಗಾಗಿ ರಾಷ್ಟ್ರಪ್ರೇಮವನ್ನು ಬಿಟ್ಟವರು ಅಮಾನ್ಯರಾದರು. ಇದಕ್ಕೆ ವಿರುದ್ಧವಾಗಿ ಸ್ತ್ರೀಯರ ವಿಚಾರದಲ್ಲಿ ತನ್ನನ್ನು ತಾನೇ ಮರೆತು ಪತಿಯ ಧ್ಯೇಯದೊಡನೆ ಸಮರಸವಾಗಿ

ಹೋಗುವ ಸ್ತ್ರೀಯೇ ಆರ್ಯ ಸ್ತ್ರೀಯೆಂದು ಎಣಿಸಲ್ಪಟ್ಟಳು. ಆತ್ಮಸಮರ್ಪಣ ತ್ಯಾಗಗಳ ಪ್ರತಿಮೂರ್ತಿಯೇ ಅವಳಾಗಿಬಿಟ್ಟಳು. ಅವಳ ಸ್ವಾತಂತ್ರ್ಯ ಕೇವಲ ಔಪಚಾರಿಕವಾಗಿತ್ತು, ಮುಂದೆ ಇದೇ ಅವಳಿಗೊಂದು ಅಲಂಕಾರವಾಗಿಬಿಟ್ಟಿತು.

ಸ್ವತಂತ್ರ ಜೀವನ, ಜೀವನನಿರ್ವಾಹಗಳಿಲ್ಲದ ಸ್ತ್ರೀ, ತನ್ನ ರಕ್ಷಣೆಗಾಗಿ ಪುರುಷನೆಡೆಗೆ ನೋಡುವ ಸ್ತ್ರೀ, ಅವನನ್ನು ನಿಜವಾದ ಅರ್ಥದಲ್ಲಿ ಎಂದೂ ಪ್ರೀತಿಸಲಾರಳು. ಅವಳ ನೀತಿ ಭೀತಿಯನ್ನೇ ಅವಲಂಬಿಸಿದ್ದಾದರೆ ಅವಳು ಪುರುಷನೊಡನೆ ಸಮಾನತ್ವವನ್ನು ಪಡೆಯುವದು ಸಾಧ್ಯವೇ ಇಲ್ಲ. ಸ್ತ್ರೀಪುರುಷರಲ್ಲಿಯ ಕೃತ್ರಿಮ ಭೇದಗಳನ್ನಾದರೂ ನಷ್ಟಗೊಳಿಸಿದ ಬಳಿಕಲ್ಲವೇ ಸಮಾನತೆಯ ವಿಚಾರ? ಆ ಬಳಿಕಲೂ ಸಮಾನತೆ ಅಸಾಧ್ಯವೆಂದು ಸ್ತ್ರೀಯರಿಗೇ ತೋರಿದರೆ, ಹಳೆಯ ಮತವನ್ನೇ ಅನುಸರಿಸಿದ ಹೊರತು ಬೇರೆ ಮಾರ್ಗವಿಲ್ಲ.

ನೈಸರ್ಗಿಕ ಭೇದವಿದ್ದರೂ ಸ್ತ್ರೀಪುರುಷರು ಸಮಾನತೆಯಿಂದ ಜೀವನ ಸಾಗಿಸುವದು ಸಾಧ್ಯವೆಂದು ನಾನು ನಂಬುತ್ತೇನೆ. ಒಬ್ಬರೊಬ್ಬರ ಸಹಕಾರದಿಂದಲೇ ಅವರೀರ್ವರ ಜೀವನ ಸುಖಮಯವಾಗುತ್ತದೆ. ಸ್ತ್ರೀ ಕೇವಲ ಸಹಧರ್ಮಚಾರಿಣಿಯಲ್ಲ, ಪುರುಷನ ಧ್ಯೇಯಸಾಧನೆಯಲ್ಲಿಯೇ ಲೀನವಾಗಿ ಹೋಗುವದು ತನ್ನ ಸ್ವಭಾವವಲ್ಲ ಎಂಬುದನ್ನು ಮಾತ್ರ ಅವಳು ನಂಬಬೇಕು. ಯಾವುದನ್ನು ನಿರಾಕರಿಸುವದು ಸಾಧ್ಯವೇ ಇಲ್ಲವೋ ಅದು ಸ್ವಭಾವ. ಜ್ವರ ಬರುವದು ಮನುಷ್ಯನ ಸ್ವಭಾವವಲ್ಲ, ಬಂದಮೇಲೆ ಅಸ್ವಸ್ಥವಾಗುವದು ಸ್ವಭಾವ. ಒಂದು ನಾಯಿಯನ್ನು ತೋಳನ ಎದುರು ಕಟ್ಟಿಹಾಕಿದರೆ, ಅಂಜುವದೇ ಅದರ ಸ್ವಭಾವವೇನೋ ಅನ್ನುವಂತೆ ಅದು ಯಾವಾಗಲೂ ಅಂಜುತ್ತಿರುತ್ತದೆ. ಕವಿಗಳು ಸ್ತ್ರೀಯನ್ನು 'ಭೀರು' ಎಂದು ಸಂಬೋಧಿಸಿದ್ದಾರೆ; ಭೀರುತ್ವ ಅವಳ ಅಲಂಕಾರವಾಗಿದೆ. ಇಂದು ಇದರ ಜೊತೆಗೆ ಕೋಮಲತೆಯೂ ಸೇರಿದೆ. ಇವೆರಡು ಗುಣಗಳಿಂದ ಭೂಷಿತಗಳಾದ ಸ್ತ್ರೀ 'ಕಾಮಿನಿ' ಯಾದಳು. ಸಹಚಾರಿಣಿಯಾಗಲಿಲ್ಲ. ಈ 'ಕಾಮಿನಿ' ಯನ್ನು ರಕ್ಷಿಸುವ ಹೆಚ್ಚಿನ ಹೊಣೆಯೂ ಪುರುಷನ ಪಾಲಿಗೆ ಬಂತು. ಈ ಹೊಣೆಯನ್ನು ನಿರ್ವಹಿಸುವದು ಇಷ್ಟವಿಲ್ಲದೆ, ಇಂದಿನ ಅನೇಕ ತರುಣರು ಮದುವೆಯಾಗುವದಿಲ್ಲ ಎಂದು ಹೇಳುತ್ತಿರುವರು. ಮದುವೆಯಾದರೆ 'ಸ್ತ್ರೀ' ಸೌಭಾಗ್ಯವತಿಯಾಗುತ್ತಾಳೆ; ಪುರುಷನಿಗೆ ಅದರಿಂದ ಸೌಭಾಗ್ಯವಿಲ್ಲ! ಪುರುಷನ ರಕ್ಷಣೆ ದೊರೆಯುವದು ಅವಳ ಸೌಭಾಗ್ಯ; ಅವಳಿಗೆ ಸೌಭಾಗ್ಯವನ್ನೊದಗಿಸುವದು ಅವನ ದುರ್ಭಾಗ್ಯ!

ಇಂದಿನ ನಮ್ಮ ಸಮಾಜದಲ್ಲಿ ಸ್ತ್ರೀಪುರುಷರ ನೀತಿಯ ಕಲ್ಪನೆ ಭಿನ್ನವಾಗಿದೆ. ಪಶುಗಳು ಹಸಿವಾದಾಗ ಆಹಾರವನ್ನು ತಿಂದು ನೀರಡಿಸಿದಾಗ ನೀರು ಕುಡಿಯುತ್ತವೆ; ಆದರೆ ಮನುಷ್ಯನು ಹಸಿವಿಲ್ಲದಾಗಲೂ ಆಹಾರವನ್ನು ಸೇವಿಸಿ, ತೃಷೆಯಿಲ್ಲದಾಗಲೂ ನೀರು ಕುಡಿಯಬಲ್ಲನು ಅದಕ್ಕೆಂದೇ ಸಹಜೀವನವು ಇಲ್ಲಿ ಶಕ್ಯವಿದೆ.

ಮನುಷ್ಯನ ಕಾಮವಾಸನೆ ಕೇವಲ ಶರೀರಧರ್ಮವಲ್ಲವೆಂದೇ ಸಂಸ್ಕೃತಿಯ ಉಗಮ ಇಲ್ಲಿ ಸಾಧ್ಯವಿದೆ. ಸಹಜೀವನದ ಸಾಧ್ಯತೆಗಾಗಿ ಸಮಾಜವು ವರ್ಗವಿಹೀನ ವಾಗಬೇಕು, ಶೋಷಣರಹಿತವಾಗಬೇಕು: ಹೀಗಾದರೂ ಸಹಜೀವನವು ಎಷ್ಟು ಮಟ್ಟಿಗೆ ಸುಲಭಸಾಧ್ಯವಿದೆ? ಸ್ತ್ರೀ ಮಂತ್ರಿಯಾಗಬಹುದು, ಗವ್ಹರ್ನರ ಆಗ ಬಹುದು, ಸೇನಾಧಿಪತಿಯೂ ಆಗಬಹುದು. ಆದರೆ ಅವಳನ್ನು ಯಾರೂ ಎತ್ತಿ ಕೊಂಡೊಯ್ಯುವದಿಲ್ಲವೆಂಬುದು ಯಾತರ ಮೇಲಿಂದ?

ನೌಖಾಲಿಯಲ್ಲಿ ಬಾಪೂಜಿಯೊಡನೆ ಹೊರಟ ಸ್ತ್ರೀಯರಿಗೆ ಇದೇ ಅಂಜಿಕೆ, 'ಯಾರೂ ನಮ್ಮನ್ನು ಎತ್ತಿಕೊಂಡೊಯ್ಯಲಿಕ್ಕಿಲ್ಲವಲ್ಲ?' ಈ ಬಗೆಯ ಭೀತಿ, ಚಿಂತೆಗಳಿರುವವರೆಗೂ ಸ್ತ್ರೀಯರ ಸಮಸ್ಯೆ ಸಮಸ್ಯೆಯಾಗಿಯೇ ಉಳಿಯುವದು. ಸ್ತ್ರೀಯು ತನ್ನ ವ್ಯಕ್ತಿತ್ವವನ್ನು ನಂಬಿ ಧ್ಯೇಯಸಾಧನೆಯತ್ತ ಲಕ್ಷ್ಯಪೂರೈಸುವ ವರೆಗೂ, ಸಮಾನತೆಯನ್ನು ಕುರಿತು ಕಾಯ್ದೆಕಾನೂನುಗಳನ್ನು ಮಾಡಿಯೂ ಪ್ರಯೋಜನವಿಲ್ಲ; ತನ್ನ ಶಾರೀರಿಕ ಶಕ್ತಿಯನ್ನೇ ಉಪಯೋಗಿಸಿ ಸ್ತ್ರೀಗಿಂತ ನಾನು ಶ್ರೇಷ್ಠ ಎಂದು ಪುರುಷನು ಹೇಳುವದಾದರೆ, ಪರಿಸ್ಥಿತಿ ಭೀಕರವಾದೀತು. ಆದರೆ ಮನುಷ್ಯನು ಸಂಸ್ಕೃತಿ ನಿಷ್ಠಪ್ರಾಣಿ; ಪಾಶವೀ ಬಲಕ್ಕಿಂತ ಜ್ಞಾನದ ಬಲವೇ ಅವ ನಿಗೆ ಹೆಚ್ಚು ಮಹತ್ವದ್ದು.

ಸ್ತ್ರೀಯರಿಗೆ 'ವೀರಮಾತೆ' ಯಾಗಿರೆಂಬ ಸಂದೇಶ ಸಮಾಜದಲ್ಲಿ ದೊರೆ ಯುತ್ತದೆ; ಆದರೆ ಪುರುಷರಿಗೆ 'ವೀರಪಿತ' ರಾಗಿರೆಂದು ಯಾರೂ ಹೇಳುವದಿಲ್ಲ. ಪುರುಷರ ಬ್ರಹ್ಮಚರ್ಯ ಸ್ವಾಯತ್ತವಾದುದು. ಆದಕ್ಕೆಂದೇ ಸ್ವತಂತ್ರವೂ ಆಹುದು. ಆದರೆ ಸ್ತ್ರೀಯರದು ಹಾಗಲ್ಲ. ಭಾಂಡವಲಶಾಹಿಯಲ್ಲಂತೂ ಅವಳ ರೂಪದ ಮಾರಾಟ ವಾಗುತ್ತಿದೆ; ಸೌಂದರ್ಯ ಸ್ಪರ್ಧೆಗಳು ನಡೆದೇ ಇವೆ. ತನ್ನ ಸೌಂದರ್ಯದ ಉಪ ಯೋಗವನ್ನು ಸ್ತ್ರೀಯು ಮಾಡಿಕೊಳ್ಳದಿದ್ದರೆ, ಅವಳ ಸೌಂದರ್ಯ ವ್ಯರ್ಥವಾಯಿ ತೆಂದು ಜನತೆ ಭಾವಿಸುತ್ತದೆ. ಪತಿಯ ಧ್ಯೇಯದಲ್ಲಿ ಒಂದಾಗಿ, ವೀರಪುತ್ರರನ್ನು ಪಡೆಯುವಲ್ಲಿಯೇ ಅವಳ ಜೀವನದ ಸಾರ್ಥಕತೆ ಎಂಬ ಕಲ್ಪನೆಯೂ ಇದೆ, ಅರ್ಜು ನನು ಗಳಿಸಿದ ಮಹತ್ವಕ್ಕೆ ಕುಂತಿಯು ಸಾಧನ ಮಾತ್ರ; ಬಳಿಕ ಸ್ತ್ರೀಯು ಸ್ವತಂತ್ರ ಅಸ್ತಿತ್ವವನ್ನು ಗಳಿಸಬೇಕಾದರೆ ಪಾತಿವ್ರತ್ಯ, ಮಾತೃತ್ವಗಳನ್ನವಳು ತ್ಯಜಿಸಬೇಕು. ಬ್ರಹ್ಮಚರ್ಯವನ್ನಾಚರಿಸಬೇಕು. ಸಮಾಜದಲ್ಲಿ ಪುರುಷನು ಸನ್ಯಾಸಿಯಾಗಿದ್ದರೆ ಅವನು ಗಣ್ಯನಾಗುತ್ತಾನೆ; ಸ್ತ್ರೀಯಾಗಿದ್ದರೆ ಅವಳೊಂದು ಅಶುಭ ಚಿಹ್ನೆ. ಪುರುಷ ರಂತೆ ಸ್ತ್ರೀಯರೂ ಸಾಪೇಕ್ಷ ಜೀವನವನ್ನು ತ್ಯಜಿಸುವದಾದರೆ, ಅವರೂ ಸ್ವತಂತ್ರ ರಾಗಬಲ್ಲರು. ಇದೇ ಉದ್ದೇಶದಿಂದ ನನ್ನ ಬಳಿ ಹಸ್ತಾಕ್ಷರವನ್ನು ಬೇಡಬಂದ ಒಬ್ಬಳಿಗೆ, 'ಸೌಭಾಗ್ಯದ ಆಶೆಯನ್ನು ಬಿಡು,' ಎಂದು ಬರೆಯುತ್ತಲೇ ಅವಳು ಗಾಬರಿಯಾದಳು. ಸ್ತ್ರೀಯು ರೂಪಧನ ಅಥವಾ ಶರೀರಧನವುಳ್ಳ ಪ್ರಾಣಿಮಾತ್ರ ಳಾದರೆ, ಈ ಧನವನ್ನು ಲಕ್ಷ್ಯಪೂರ್ವಕ ರಕ್ಷಿಸಲು, ಪುರುಷನ ಕೈಗೊಂಬೆಯಾಗಿಯೇ

ಅವಳು ಜೀವಿಸಬೇಕಾಗುವದು. ಶರೀರಭ್ರಷ್ಟವಾದರೂ ಆಂತರಿಕ ಮಾನಕ್ಕೆ ಧಕ್ಕೆ ಯಿಲ್ಲವೆಂಬುದನ್ನು ಅವಳು ನಂಬಿದರೆ, ರಕ್ಷಣೆಗಾಗಿ ಅವಳು ಪುರುಷನೆಡೆ ನೋಡ ಬೇಕಾಗಿಲ್ಲ. ಸ್ತ್ರೀಪುರುಷರು ಪರಸ್ಪರರನ್ನು ಭೋಗವಿಷಯ ಎಂದು ತಿಳಿಯುವದು ದೂರವಾದಾಗಲೇ ಸಹಜೀವನವು ಸಾಧ್ಯವಿದೆ. ಈರ್ವರ ಶರೀರಗಳೂ ಸ್ವತಂತ್ರ ವಾಗಿವೆ ಹಾಗೂ ಪವಿತ್ರವಾಗಿವೆ, ಎಂಬ ಭಾವನೆ ಸಮಾಜದಲ್ಲಿ ಮೂಡಬೇಕು. ಸ್ತ್ರೀಪುರುಷರ ಜೀವನ ಸ್ವತಂತ್ರವಾಗಿ ಭಿನ್ನವಾಗಿದ್ದರೂ, ಒಂದಾಗಿ ಹೊಂದಿಕೊಂಡಿ ರುವಲ್ಲಿಯೇ ಸ್ವಾರಸ್ಯವಿದೆ.

ಸಂಯುಕ್ತ ಸಹಜೀವನದ ಸಮಾಜರಚನೆಯಾದುದು ಇತಿಹಾಸದಲ್ಲಿ ಸಾಧಾರಣವಾಗಿ ಎಲ್ಲಿಯೂ ಕಂಡುಬರುವದಿಲ್ಲ. ಪುರುಷನ ಆಶೆಆಕಾಂಕ್ಷೆಗಳನ್ನನು ಸರಿಸಿ ಸಮಾಜದಲ್ಲಿ ಸ್ತ್ರೀಯ ರಚನೆಯಾಗುತ್ತಿದೆ. ಬಳಿಕ ಇದರಿಂದ ಸ್ತ್ರೀಜೀವನದ ವಿಕಾಸವಾಗುವದು ಹೇಗೆ ?

ವೈವಾಹಿಕ ಜೀವನವನ್ನು ಬದಿಗಿರಿಸಿ, ಪುರುಷ ರಕ್ಷಣೆಯನ್ನು ಅಪೇಕ್ಷಿ ಸದೆ, ಆರ್ಥಿಕ ದೃಷ್ಟಿಯಿಂದಲೂ ಸ್ವಾವಲಂಬಿಯಾಗಿ, ತನ್ನ ಧ್ಯೇಯಸಾಧನೆಯ ಲ್ಲಿಯೇ ತೊಡಗುವದಾದರೆ ಅವಳಿಗೂ ಜೀವನವಿಕಾಸದ ಸಂಧಿದೊರೆತೀತು !

ಇದುವರೆಗೆ ಪುರುಷನಿರಪೇಕ್ಷ ಜೀವನವನ್ನು ನಡೆಸಿದ ಸ್ತ್ರೀಯರೇ ಹೆಚ್ಚಾಗಿ ಬೆಳಕಿಗೆ ಬಂದುದನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಅಹಲ್ಯಾ ಬಾಯಿ ಹೋಳಕರ, ಝಾಂಸೀ ಲಕ್ಷ್ಮೀಬಾಯಿಯವರು ಇದೇ ಸಾಲಿಗೇ ಸೇರಿ ದವರು. ಇಂದೂ ಕೂಡ 'ಹಿಂದೂ ಕೋಡ ಬಿಲ್ಲ'ನ್ನು ವಿರೋಧಿಸುವವರು ಅನೇಕರಿದ್ದಾರೆ. ಘಟನೆಗನುಸಾರವಾಗಿ ಸ್ತ್ರೀಯು ರಾಷ್ಟ್ರಪತಿಯ ಸ್ಥಾನವನ್ನೂ ಪಡೆಯಬಲ್ಲಳು;ಆದರೆ ಧಾರ್ಮಿಕ ವಿಧಿಗಳಲ್ಲಿ ಭಾಗವಹಿಸುವ ಅಧಿಕಾರ ಅವಳಿಗಿಲ್ಲ. ಸಂಸ್ಕೃತ ಪಂಡಿತೆಯಾದರೂ ಸ್ತ್ರೀಯು ಧಾರ್ಮಿಕವಿಧಿಗಳಿಗಾಗಿ, ಇನ್ನೊಬ್ಬರನ್ನೇ ನಂಬಬೇಕು. ಈ ಅಧಿಕಾರವಿಲ್ಲವೆಂದೇ ಅವಳಿಗೆ ಸ್ವಾತಂತ್ರ್ಯವಿಲ್ಲ.

ಇಂದು ಸ್ತ್ರೀಯು ಪುರುಷನ ಸಮಸ್ಯೆಯಾಗದೆ, ಅವನ ಸಹಜೀವನವನ್ನು ದ್ವಿಗುಣಿತಗೊಳಿಸಬೇಕಾಗಿದೆ. ಕರ್ತೃತ್ವ ಶಕ್ತಿ ಹೆಚ್ಚಿ ನಾಲ್ಕು ಕೈಗಳಿಂದ ಕಾರ್ಯ ವಾಗಬೇಕಾಗಿದೆ. ನಮ್ಮ ಸಾಮಾಜಿಕ ಜೀವನ ಸಂಸ್ಕೃತಿನಿಷ್ಠವಾದುದು, ಬುದ್ಧಿ ಬಲ ಪ್ರಧಾನವಾದುದು ; ಜೀವನದ ಸಫಲತೆ ಇಂದು ಸಮಾಜವಿಕಾಸವನ್ನೇ ಅವಲಂಬಿಸಿದೆ; ಜೀವನದ ಕ್ಷಮತೆಯಿಲ್ಲದಿರುವವರನ್ನು ಸಶಕ್ತರನ್ನಾಗಿ ಮಾಡುವದು ಇಂದಿನ ಸಮಾಜದ ಗುರಿ. ಇಂತಹ ಸಮಾಜರಚನೆಯೇ ಇದ್ದುದಾದರೆ ಸಹ ಜೀವನದ ಉದ್ದೇಶ ಸಾರ್ಥಕವಾಗುವದು ; ಮಾನವನ ಮೂಲ್ಯದ ನಿಜವಾದ ಆವಿಷ್ಕಾರವಾಗುವದು.



# ಮಾತೆ ( ಅನುವಾದಿತ ಕಥೆ )

[ ಭಾರತೀಯರು ಸ್ತ್ರೀಯರನ್ನು ತಾಯಿಯ ರೂಪದಲ್ಲಿ ಕಾಣುತ್ತಾರೆ; ಪಾಶ್ಚಾತ್ಯರು ' ಸ್ತ್ರೀ 'ಯ ರೂಪದಲ್ಲಿ ಕಾಣುತ್ತಾರೆ. ಈ ಭೇದವನ್ನು ಸಮ ಸ್ಯಾತ್ಮಕವಾದ ಈ ಚಿಕ್ಕ ಕತೆಯಲ್ಲಿ ಕಾಣಬಹುದು. ಇದರಲ್ಲಿ ಸೊಕ್ಕಿನ ಒಬ್ಬ ಯುವತಿಯು ಬಡವಳಾದ ಅಲೋಕಾಳ ತಾಯ್ತನವನ್ನು ಹೀಯಾಳಿ ಸುತ್ತಾಳೆ. ಚಾರುಬಾಬುವಿನ ದೃಷ್ಟಿಯು ಇವಳ ಮೇಲೆ ಬೀಳುತ್ತದೆ. ಮಕ್ಕಳ ವಿಯೋಗದಿಂದ ಬೆಂದ ಅಲೋಕಾಳ ದಿವ್ಯ ಮುಖಮುದ್ರೆಯನ್ನು ನೋಡಿ ಅವನ ಪ್ರೇಮವು ಭಕ್ತಿಯಲ್ಲಿ ಪರಿವರ್ತನಹೊಂದುತ್ತದೆ. ]

ಅಲೋಕಳಿಗೆ ತನ್ನವರೆಂದರೆ ಕೇವಲ ಅವಳ ಮೂವರು ಚಿಕ್ಕ ಮಕ್ಕಳು ಮಾತ್ರ. ಆವಳ ಮನೆಯೆಂದರೆ ಪಟ್ಟಣದ ಮೂಲೆಯಲ್ಲಿರುವ ಮುರುಕು ಗುಡಿಸಲು. ಅದೇ ಅವಳಿಗೆ ಸುಖ-ದುಃಖದ ಆಶ್ರಯವಾಗಿತ್ತು.

ಅವಳು ಒಬ್ಬ ಭಿಕ್ಷುಕಿ. ದಿನಗಳು ಒಂದರಮೇಲೊಂದು ಉರುಳುತ್ತಿದ್ದವು. ಅವುಗಳಲ್ಲಿ ಪರಿವರ್ತನವಿಲ್ಲ, ನಾವೀನ್ಯವಿಲ್ಲ, ಆನಂದವಿಲ್ಲ, ವಿನೋದವಿಲ್ಲ; ಹೊಟ್ಟೆಬಟ್ಟೆಗಳಿಗಾಗಿ ಸಂಗ್ರಹ ಮಾಡುವದು, ಕಷ್ಟಸಂಕಟಗಳನ್ನು ಧೈರ್ಯದಿಂದ ಸಹನಮಾಡುವದು, ಮತ್ತು ಬಡತನಕ್ಕಾಗಿ ಆತ್ಮಾಭಿಮಾನವನ್ನು ಬಲಿಕೊಡುವದು ಅವಳ ನಿತ್ಯ ಜೀವನವಾಗಿತ್ತು. ಅಲೋಕಾ, ಮುಂಜಾನೆಯಿಂದ ಸಂಜೆಯವರೆಗೆ ಮನೆಯಿಂದ ಮನೆಗೆ ಭಿಕ್ಷಾಪಾತ್ರೆಯನ್ನು ಹಿಡಿದು ತಿರುಗುತ್ತಿದ್ದಳು. ದಯೆಯುಳ್ಳವರು ಮುಷ್ಟಿತುಂಬ ಕಾಳು ನೀಡುವರು, ಆಣೆ ಎರಡಾಣೆ ರೊಕ್ಕ ಕೊಡುವರು. ಕೆಲವು ಸಲ ಹರಕು ಅರಿವೆಯು ದೊರೆಯುತ್ತಿತ್ತು. ಇದರ ಜೊತೆಗೆ ಎಷ್ಟೋಸಲ ಭಿಕ್ಷೆಯ ಬದಲು ಬೈಗಳೂ ದೊರೆಯುತ್ತಿದ್ದವು.

ದಿನವೆಲ್ಲ ದಾರಿಯಮೇಲೆ ಆಡುತ್ತಿದ್ದ ಮಕ್ಕಳು ಸಾಯಂಕಾಲವಾದ ಕೂಡಲೆ ತಾಯಿಯ ದಾರಿ ನೋಡುತ್ತ ಕೂಡುತ್ತಿದ್ದವು. ಅನೇಕಸಲ ಒಬ್ಬರ ಮೇಲೊಬ್ಬರು ಮಲಗಿ ಅಲ್ಲಿಯೇ ನಿದ್ದೆಹೋಗುತ್ತಿದ್ದವು. ಅಲೋಕಾ ತನ್ನ ಗುಡಿಸಲಿಗೆ ಮರಳಿ ಬಂದು, ಒಮ್ಮೆ ಕಣ್ಣುತುಂಬ ಮಕ್ಕಳನ್ನು ನೋಡಿ ಪುನಃ ತನ್ನ ಕೆಲಸದಲ್ಲಿ ಮಗ್ನಳಾಗುತ್ತಿದ್ದಳು.

ಆ ದಿನ ಸಂಜೆಯವರೆಗೆ ಅಲೋಕಾಳಿಗೆ ಭಿಕ್ಷೆ ದೊರೆಯಲಿಲ್ಲ. ದೇಶದ ತುಂಬ ವ್ಯಾಪಿಸಿದ ದುರ್ಭಿಕ್ಷೆಯ ಮೂಲಕ ತಿಂಗಳಿಂದ ಹೊಟ್ಟೆತುಂಬ ಭಿಕ್ಷೆ ದೊರೆತಿರಲಿಲ್ಲ. ಅಂದು ಅವಳು ತೀರ ದಣಿದಿದ್ದಳು ಕಾಲುಗಳು. ಮೇಲೇಳುತ್ತಿರಲಿಲ್ಲ. ನೀರಡಿಕೆಯಿಂದ ಗಂಟಲು ಒಣಗಿಹೋಗಿತ್ತು. ದೇಹವನ್ನು ಹಾಗೂ ಹೀಗೂ

ದೂಡುತ್ತ ಒಂದು ಸುಂದರವಾದ ಕಟ್ಟಡದ ಬಾಗಿಲಿಗೆ ಹೋದಳು. ಬಾಗಿಲಲ್ಲಿ ಕಾರು ನಿಂತಿತ್ತು. ಮುತ್ತು-ರತ್ನಗಳ ಆಭರಣಗಳಿಂದ ಅಲಂಕೃತರಾದ ಇಬ್ಬರು ತರುಣಿಯರು ಹೊರಗೆ ಬಂದರು. ಅಲೋಕಾಳಿಗೆ ಅಲ್ಲಿ ಏನಾದರೂ ಸಿಗಬಹು ದೆಂದು ಆಶೆ ಹುಟ್ಟಿತು. ಆಶೆ ಮತ್ತು ವಿಶ್ವಾಸಗಳಿಂದ ಕೈ ಮುಂದೆ ಒಡ್ಡಿ "ಇಡೀ ದಿನ ನನ್ನ ಮಕ್ಕಳು ಉಪವಾಸವಿರುವವು. ಮುಷ್ಟಿ ತುಂಬ ಕಾಳು ನೀಡಿರವ್ಮಾ" ಎಂದು ದೈನ್ಯದಿಂದ ಬೇಡಿಕೊಂಡಳು.

ಆ ತರುಣಿಯರಲ್ಲಿ ಒಬ್ಬಳು ಮೂಗುಮುರಿಯುತ್ತ "ಹಾಳಾಗಿ ಹೋಗು ಇಲ್ಲಿಂದ. ಯಾರಾದರೂ ಮುಟ್ಟ್ಯಾರು. ಬಾಗಿಲು ಕಾಯುವವನು ಸತ್ತುಹೋದನೇ? ಕರೆಯಿರಿ ಅವನನ್ನು. ಇವಳನ್ನು ಚಂಡ ಹಿಡಿದು ಹೊರಗೆಹಾಕಿಸೋಣ." ಅಪ ಮಾನದ ಬೆಂಕಿಯಿಂದ ಅಲೋಕಾಳ ಮೈ ಉರಿಯಹತ್ತಿತು. ಭಿಕ್ಷುಕಿಯಾದರೂ ಎಲ್ಲರಂತೆ ಅವಳಿಗೂ ಕೂಡ ಮನಸ್ಸು ಇದೆ, ಹೃದಯವಿದೆ, ಆತ್ಮವಿದೆ. ಅವಳ ಹೃದಯದಲ್ಲಿ ಪ್ರೇಮ, ಪ್ರೀತಿ, ಸ್ನೇಹ, ದಯೆ, ಮಾಯೆ, ಆಶೆ, ಮೋಹ, ಚಿಂತೆ, ಆತ್ಮಾಭಿಮಾನ ಮುಂತಾದವುಗಳು ಪ್ರವಾಹರೂಪವಾಗಿ ಹರಿಯುತ್ತಿದ್ದವು. ಅವಳ ದುಃಖಿತ ಹಾಗೂ ದೀನ ಹೃದಯದಲ್ಲಿ ಅನೇಕ ಪ್ರಶ್ನೆಗಳು ಏಳುತ್ತಿದ್ದವು. ಜೀವನ ದಲ್ಲಿ ಪತಿಯ ಮರಣದನಂತರ ಸತಿಯು ಭಿಕಾರಿಯಾಗುತ್ತಿದ್ದರೆ ದೇವರು ಪತಿ ಯನ್ನೇಕೆ ಒಯ್ಯುವನು ? ಜಗತ್ತಿನಲ್ಲಿ ದಾರಿದ್ರ್ಯವೇ ತಿರಸ್ಕಾರ ಮತ್ತು ನಾಚಿಕೆಯ ವಸ್ತುವಾಗಿದ್ದರೆ, ರತ್ನಸಿಂಹಾಸನದ ಮೇಲೆ ಕುಳಿತುಕೊಂಡು ಈ ಅನ್ಯಾಯೀ ದೇವರು ಎರಡನೆಯವರ ಸುಖಾಸನವನ್ನು ಏಕೆ ಉರುಳಿಸುವನು ? ಇಂದು ಸಮಾಜವು ನನ್ನ ಸಂತತಿಗೆ ಸಹಾಯಮಾಡಲು, ನಿಂದೆ ಮಾಡಲು ಆದಕ್ಕೆಲ್ಲಿಯ ಅಧಿಕಾರ ಬಂತು ? ಭಿಕ್ಷೆ ಏಕೆ ನನಗೆ ದೊರೆಯಬಾರದು ? ಮನುಷ್ಯಳಾಗಿ ಜನ್ಮ ತಾಳಿದರೂ ನಾನು ಅಸ್ಪೃಶ್ಯಳೇಕೆ ? ಎಂಬೀ ಪ್ರಶ್ನೆಗಳನ್ನು ಮನಸ್ಸಿನಲ್ಲಿ ಅದೆಷ್ಟೋ ವೇಳೆ ಬಿಡಿಸಲು ಪ್ರಯತ್ನಿಸಿ ನಿರಾಶಳಾಗುತ್ತಿದ್ದಳು. ಈ ಜಗತ್ತಿನಲ್ಲಿ ಬಡವರ ಗೋಳನ್ನು ಕೇಳುವವರು ಯಾರಾದರೂ ಇರುವರೋ ? ಎಂಬ ಸಂದೇಹ ಅವಳಿಗೆ.

ರೂಪದಿಂದ ಅವಳು ಸುಂದರಳು. ಅನೇಕ ಕಡೆಯಿಂದ ರೂಪ ಪ್ರಶಂಸೆಯು ಕೇಳಬರುತ್ತಿತ್ತು, ಅನೇಕ ಕಡೆಯಿಂದ ಪರಿಹಾಸವೂ ಕೇಳಬರುತ್ತಿತ್ತು. ಈ ಎಲ್ಲ ಸಮಸ್ಯೆಗಳ ಮಧ್ಯದಲ್ಲಿ ಸಿಕ್ಕ ಹೃದಯ ವ್ಯಾಕುಲಗೊಳ್ಳುತ್ತಿತ್ತು. ಆದರೂ ಅವಳೊಬ್ಬ ಭಿಕ್ಷುಕಿ, ಜನ ಅವಳನ್ನು ಕರೆಯುವದು ಭಿಕಾರಿಯೆಂದು. ಅವಳ ಜೀವನ ಸಾಗುವದು ಭಿಕ್ಷೆಯಿಂದ.

ಆ ತರುಣಿಯರ ಕಠೋರ ಮುಖವನ್ನು ನೋಡಿ, ಅಲ್ಲಿಂದ ದೂರ ಹೋಗಬೇಕೆಂದಳು. ಅಷ್ಟರಲ್ಲಿಯೇ ಎರಡನೆಯವಳು ಪರಿಹಾಸದಿಂದ "ಭಿಕ್ಷೆ ಬೇಡುವ ನಿನಗೆ ಮಕ್ಕಳೂ ಕೂಡ ಇವೆಯೇ ? " ಎಂದಳು. "ಮೂರು ಮಕ್ಕಳು

ಇವೆ ಅಮ್ಮಾ” ಆಲೋಕಾಳ ಮುಖದ ಮೇಲೆ ಆಶೆಯ ಕಿರಣ ಮೂಡಿತು. “ಮನೆಯಲ್ಲಿ ಉಣ್ಣಲು ಅನ್ನಕ್ಕೆ ಗತಿಯಿಲ್ಲದಾಗ, ತಾಯಿ ಏಕೆ ಆದೆ?” ಆಲೋಕಾ ಅಲ್ಲಿಂದ ಸಾವಕಾಶವಾಗಿ ಹೊರಟುಹೋದಳು. ಆವಳ ಅಂತಸ್ತಲದಲ್ಲಿಯ ನಾರೀ ರೂಪವು ಸಿಟ್ಟಿನಿಂದ ಹೊರಹೊಮ್ಮುವದರಲ್ಲಿತ್ತು.

(೩)

ಒಣಗಿದ ಎಲೆಗಳಿಂದ ಆಲೋಕಾ ಒಲೆ ಹೊತ್ತಿಸುತ್ತಿದ್ದಳು. ವಿಮಲೆಯ ಧ್ವನಿಯನ್ನು ಕೇಳಿ ದೀನ ದೃಷ್ಟಿಯಿಂದ “ಏನು?” ಎಂದಳು. ವಿಮಲೆಯು ಮೃದುವಾಗಿ “ತಂಗೀ, ಚಾರುಬಾಬುವು ನಿನಗಾಗಿ ಇವುಗಳನ್ನು ಕಳಿಸಿಕೊಟ್ಟಿದ್ದಾನೆ. ತೆಗೆದುಕೋ.” ಎಂದಳು.

“ಹೊರಟುಹೋಗು ಇಲ್ಲಿಂದ. ನೀನು ಮೇಲಿಂದಮೇಲೆ ನನ್ನ ಹಾಗೂ ನನ್ನ ಮಕ್ಕಳ ಅಪಮಾನ ಏಕೆ ಮಾಡುತ್ತೀ? ನಿಮ್ಮ ಸಾಮಾನು ತೆಗೆದುಕೊಂಡು ಹೋಗು.” “ತಂಗೀ ನೀನು ಇನ್ನೂ ಚಿಕ್ಕವಳು. ನಿನಗೆ ತಿಳುವಳಿಕೆಯಿಲ್ಲ. ಹಿಂದುಗಡೆ ಪಶ್ಚಾತ್ತಾಪ ಪಡಬೇಕಾದೀತು. ಹೊಟ್ಟೆಗಿಲ್ಲದೆ ಎಲ್ಲಿಯವರೆಗೆ ಜೀವಿಸುವಿ? ನಿರರ್ಥಕವಾಗಿ ಕಷ್ಟಪಡಬೇಡ. ನಮ್ಮ ಮಾಲಿಕನ ಮಾತು ಕೇಳು. ಒಳ್ಳೇ ದೊಡ್ಡ ಮನೆಯಲ್ಲಿ ವಾಸಿಸುವಿ. ನಾವೆಲ್ಲರೂ ನಿನ್ನ ಸೇವಕರಾಗುವೆವು. ನಿನ್ನ ಮಕ್ಕಳ ಓದುಬರಹವೂ ಕೂಡ ಸಾಗುವದು. ಚಾರುಬಾಬುವಿನ ದೃಷ್ಟಿಯನ್ನು ನಿನ್ನೆಡೆ ಗೆಳೆದ ನಿನ್ನ ಭಾಗ್ಯವನ್ನು ಕೊಂಡಾಡು.”

ಒಳ್ಳೆಯ ಹಿತಚಿಂತಕಳಂತೆ ವಿಮಲೆಯು ಉಪದೇಶಮಾಡಹತ್ತಿದಳು. ಆಲೋಕಾಳು ಕೇಳಿಸದ ಹಾಗೆ ಸುಮ್ಮನೆ ಇದ್ದಳು. “ನಾನು ಮಕ್ಕಳನ್ನು ಮಲಗಿಸುವೆ. ಇಲ್ಲಿಂದ ಹೊರಟುಹೋಗು.” ಎಂದು, ಕಾಳಿನ (ಧಾನ್ಯದ) ಗಂಟನ್ನು ಹೊರಗೆ ಚೆಲ್ಲಿ ಆಲೋಕಾ ಬಾಗಿಲು ಮುಚ್ಚಿಕೊಂಡಳು.

(೪)

“ಅಮ್ಮಾ ಹೊಟ್ಟೆ ಹಸಿದಿದೆ. ಮುಷ್ಟಿಕಾಳನ್ನಾದರೂ ಕೊಡು,ಕೊಡಮ್ಮಾ ನಿನ್ನ ಕಾಲಿಗೆ ಬೀಳುತ್ತೇನೆ.” “ಅಮ್ಮಾ ಸುಮ್ಮನೇಕಿರುವಿ? ಕೇಳಿಸುವದಿಲ್ಲವೇ? ಒಂದು ತುಣುಕು ರೊಟ್ಟಿಯನ್ನಾದರೂ ಕೊಡು ಇಲ್ಲವಾದರೆ ಸತ್ತುಹೋಗುವೆ, ಕೊಡಮ್ಮ, ಬೇಗನೆ ಕೊಡು.” ಎಂದು ಇಬ್ಬರು ಬಾಲಕರು ಅಳುತ್ತಿದ್ದರು. ಮೂರನೆಯವ ನಿರ್ಜೀವವಾಗಿ ಒಂದು ಮೂಲೆಯಲ್ಲಿ ಬಿದ್ದುಕೊಂಡಿದ್ದ. ನೊಳಕಾಲುಗಳ ಮಧ್ಯದಲ್ಲಿ ಮೋರೆಯನ್ನಿಟ್ಟು ಆಲೋಕಾ ಸುಮ್ಮನೆ ಕುಳಿತಿದ್ದಳು. ಮೃತ್ಯುವಿನ ಕರಾಳರೂಪದಿಂದ ಆ ಗುಡಿಸಲು ಸ್ತಬ್ಧವಾಗಿತ್ತು.

“ಅಮ್ಮಾ........” ಆಲೋಕಾ ಒಮ್ಮೆಲೆ ಬೆಚ್ಚಿಬಿದ್ದಳು. ಮಗುವಿನ ಪ್ರಾಣಪಕ್ಷಿ ಇನ್ನೂ ಹಾರಿಹೋಗಿರಲಿಲ್ಲ. ಆಲೋಕಾ ಸನಿಹಕ್ಕೆ ಹೋಗಿ ಕಿವಿಹಚ್ಚಿ

ನೋಡುತ್ತಾಳೆ, ಶ್ವಾಸವಂತೂ ಇದೆ. ಇಬ್ಬರು ಬಾಲಕರು ಅಪ್ಪಿಕೊಳ್ಳಹೋದರು. ಅವರನ್ನು ದೂರಸರಿಸಿ ಆಲೋಕಾ ಹೊರಗೆ ಓಡಿದಳು.

ಚಾರುಬಾಬುವಿನ ಎದುರಿಗೆ ಆಲೋಕಾ ನಿಂತಿದ್ದಾಳೆ. ಬಾಬುವಿಗೆ ಆಶ್ಚರ್ಯ. ಆಲೋಕಾ ಎಂದಾದರೂ ಇಚ್ಛೆಪೂರ್ವಕ ಬರುವಳೆಂದು ಅವನು ಎಣಿಸಿರಲಿಲ್ಲ. “ನೀನು ಆಲೋಕಾ! ಇದು ಸತ್ಯವೋ? ಅಥವಾ ನಾನೇನಾದರೂ ಕನಸುಕಾಣುತ್ತಿರುವೆನೋ?” ಚಾರುಬಾಬು ನುಡಿದ.

“ನಾನು ಆಲೋಕಾ” ಆಲೋಕಾ ಅಧೀರಳಾಗಿದ್ದಳು. ಚಾರುಬಾಬು ಕೈಮುಂದೆ ಚಾಚಿ “ಬಾ, ಹತ್ತಿರ ಬಾ, ನನ್ನ ಕಡೆಗೆ ನೋಡು, ಕಣ್ಣೆತ್ತಿ ನೋಡು.” ಎಂದೆ ಇಕ್ಕದೆ ಒಂದೇಸವನೆ ಅವಳನ್ನು ನೋಡುತ್ತ ನೋಡುತ್ತ ಚಾರು ಎರಡು ಹೆಜ್ಜೆ ಹಿಂದೆ ಇಟ್ಟ; ಅವನು ಪ್ರೇಮಮಾಡಹೊರಟದ್ದು ಯಾರ ಸಂಗಡ! ತಾಯಿ, ತಾಯಿಯ ಸಂಗಡ! ಆಲೋಕಾಳ ಕಣ್ಮಣಿಯಲ್ಲಿ ಮಾತೆಯ ಪ್ರಶಾಂತವಾದ ಪ್ರಿಯ ಮುಖಮುದ್ರೆಯು ವಿರಾಜಮಾನವಾಗಿತ್ತು. ಅವಳ ಸುಂದರ ಮುಖವೂ ಮಾತೃಪ್ರೇಮದಿಂದ ಪ್ರಕಾಶಮಾನವಾಗಿತ್ತು. ಅವಳ ಪ್ರತಿಯೊಂದು ರೋಮ ರೋಮದಿಂದ ಮಾತೃಪ್ರೇಮವು ಹೊರಹೊಮ್ಮುತ್ತಿತ್ತು, ಮಾತೆಯ ಮುಂದೆ ಕಾಮಾಂಧನ ತಲೆ ಬಗ್ಗಿತು, ಪಶುತ್ವವು ದೇವತ್ವದಲ್ಲಿ ಪರಿವರ್ತನ ಹೊಂದಿತು! ಚಾರುಬಾಬು ಕೈಜೋಡಿಸಿ ನಿಂತುಕೊಂಡನು!!

ಕು. ಸರೋಜಿನಿ ಮಳೇಬೆನ್ನೂರ ಧಾರವಾಡ.

---

# "ಮಹಿಳೆಯರಿಗೊಂದು ಸಂಜೀವಿನಿ"

"As the women of a Nation, So the men and the nation"
ರಾಷ್ಟ್ರದ ಹಾಗೂ ರಾಷ್ಟ್ರದೊಳಗಿನ ಪುರುಷರ ಸ್ಥಿತಿಯು ಆ ರಾಷ್ಟ್ರದೊಳಗಿನ ಸ್ತ್ರೀಯರ ಶಾರೀರಿಕ, ಹಾಗು ಮಾನಸಿಕ ಹಾಗು ಅಧ್ಯಾತ್ಮಿಕ ಸ್ಥಿತಿಯನ್ನವಲಂಬಿಸಿರುವದು. ಅವರು ಸಶಕ್ತ, ನಿರೋಗಿ ಹಾಗು ತೇಜಸ್ವಿಗಳಿದ್ದರೆ ಪುರುಷರೂ ಸಶಕ್ತ ನಿರೋಗಿ ಹಾಗು ತೇಜಸ್ವಿಯಿರುತ್ತಿದ್ದರು. ಅವರು ಆನಂದಿಗಳು ಹಾಗು ನಗೆಮೊಗದವರಿದ್ದರೆ, ಪುರುಷರೂ ಆನಂದಿಗಳೂ, ನಗೆಮೊಗದವರೂ ಆಗುತ್ತಿದ್ದರು. ಅವರು ಸ್ವಾತಂತ್ರ್ಯಪ್ರಿಯರು, ಹಾಗು ಮುಮುಕ್ಷುಗಳಿದ್ದರೆ ಜನರಾದರೂ ಅದರಂತೆ ಸ್ವಾತಂತ್ರ್ಯಪ್ರಿಯರೂ ಮುಮುಕ್ಷುಗಳೂ ಆಗುತ್ತಿದ್ದರು. ಹೀಗಿರದೆ ಅವರು ಉದಾಸೀನರೂ, ಸುಖಲೋಲುಪರೂ, ದಾಸ್ಯಪಂಕದಲ್ಲಿ ಮಗ್ನರೂ, ಅಜ್ಞಾನ ತಿಮಿರದಿಂದಾಚ್ಛಾದಿತರೂ, ಧರ್ಮ ಮೂಢರೂ ಹಾಗು ಮೂರ್ಖರೂ ಆಗಿದ್ದರೆ ಜನರಾದರೂ ನಿರ್ವೀರ್ಯರೂ, ನಿಸ್ತೇಜರೂ,ಕರ್ತೃತ್ವಹೀನರೂ ಮತ್ತು ಹೇಡಿಗಳಾಗಿರುವರು. ಇದರ ಸತ್ಯತೆಯನ್ನು ಮನವರಿಕೆ ಮಾಡಿಕೊಳ್ಳುವದಕ್ಕಾಗಿ, ಭರತಭೂಮಿಯ ಸ್ತ್ರೀಯರ ಪ್ರಾಚೀನ ಹಾಗು ಅರ್ವಾಚೀನ ಇತಿಹಾಸವನ್ನು ನೋಡುವಾ. ಸೀತಾ ಮಂಡೋದರಿ, ಸಾವಿತ್ರಿ ಹಾಗು ಗಾರ್ಗೇಯಿಯರಂಥ ಶುದ್ಧ,ಸಾತ್ವಿಕ ಸ್ತ್ರೀಯರಿಂದ ದೇಶವು ತುಂಬಿತುಳುಕುತ್ತಿದ್ದ ಕಾಲದಲ್ಲಿ ಶ್ರೀರಾಮಚಂದ್ರ, ಸತ್ಯವಾನ, ಯಾಜ್ಞವಲ್ಕ್ಯರಂಥ ಸಾತ್ವಿಕ ಹಾಗು ಮುಮುಕ್ಷು ವೀರರಿಂದ ದೇಶವು ತುಂಬಿಹೋಗಿತ್ತು. ಮಧ್ಯಯುಗದಲ್ಲಿ ಸಂಯೋಗಿತೆ, ಕರ್ಮದೇವಿ, ಜೀಜಾಬಾಯಿಯವರಂಥ, ವೀರರಮಣಿಯರಿಂದ ದೇಶವು ಸಂಪನ್ನವಿದ್ದಾಗ ಪೃಥ್ವಿರಾಜ, ಪ್ರತಾಪಸಿಂಹ,ಶಿವಾಜಿಯರಂಥ ವೀರರಿಂದ ದೇಶವು ದುಮುದುಮುಕಿ ಹೋಗಿತ್ತು. ಆದರೆ ಈಗ ಸುಖಲೋಲುಪರೂ, ದಾಸ್ಯಪ್ರಿಯರೂ, ಹಾಗು ಧರ್ಮದ ಹೆಸರಿಂದ ಎಲ್ಲ ಅನಾಹುತಗಳು ನಡೆದದ್ದರಿಂದ ನಮ್ಮಂಥ ಹೇಡಿ, ಅಂಜುಬುರುಕ, ದಾಸ್ಯಪ್ರಿಯ, ನಿರ್ವೀರ್ಯ ಹಾಗು ನಿಸ್ತೇಜರಾದಂಥ ವೀರರಿಗೇನೂ ಕೊರತೆ ಇಲ್ಲ.

ಮನುಷ್ಯನ ಜೀವಿತವು ಎರಡು ಪ್ರಕಾರದ ಸಂಸ್ಕಾರಗಳಿಂದ ಶುದ್ಧವಾಗಿರುತ್ತದೆ. ಒಂದು ಸ್ವಾಭಾವಿಕ ಸಂಸ್ಕಾರವು; ಇನ್ನೊಂದು ವಿಶಿಷ್ಟ ಶಿಕ್ಷಣದಿಂದುಂಟಾಗತಕ್ಕಂಥ ವಿಶಿಷ್ಟ ಸಂಸ್ಕಾರವು. ಶಿಕ್ಷಣದ ಸಂಸ್ಕಾರದಲ್ಲಿ ಇಬ್ಭಾಗ ಮಾಡಬಹುದು. ಒಂದು ಸತ್ತಾಧೀಶರು ಕೊಟ್ಟ ವಿಶಿಷ್ಟತರದ ಶಿಕ್ಷಣದ ಸಂಸ್ಕಾರವು. ಮತ್ತೊಂದು ವ್ಯಕ್ತಿಗಳ ಪ್ರವೃತ್ತಿಗಳಿಗನುಸಾರವಾಗಿ ಕೊಟ್ಟ ಶಿಕ್ಷಣದ ಸಂಸ್ಕಾರವು. ಮೇಲೆ ವಿವರಿಸಿದ ಸ್ತ್ರೀಯರು ಪರಿಸ್ಥಿತಿಯ ಹಾಗು ಸತ್ತಾಧೀಶರು ಕೊಟ್ಟ ಶಿಕ್ಷಣದ ಸಂಸ್ಕಾರಕ್ಕೊಳಪಟ್ಟವರಿರುವರು. ಸ್ತ್ರೀಯರ ಪ್ರವೃತ್ತಿಗಳಿಗನುಗುಣವಾಗಿ ಸಿಗತಕ್ಕ ಶಿಕ್ಷಣದ ಸಂಸ್ಕಾರದ ಅಭಾವದಿಂದ ಸ್ತ್ರೀಯರ ಜೀವಿತವು ಕೃತ್ರಿಮ ಹಾಗು ಈಶ್ವರೀ ಸಂಕಲ್ಪ

ದಿಂದ ತೀರ ಭಿನ್ನವಾಗಿರುತ್ತದೆ. ಸ್ವರಾಜ್ಯವಿರುವವರೆಗೂ, ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ, ಇಡೀ ಭರತಖಂಡದಲ್ಲಿ ಕಾನೂನು ಒಂದೇ ಮಾದರಿಯದಾಗಿತ್ತು. ರಾಷ್ಟ್ರಹಿತದ ದೃಷ್ಟಿಯಿಂದ ಬೇರೆ ಬೇರೆ ಚಟುವಟಿಕೆಗಳು ನಡೆಯುತ್ತಲಿದ್ದವು. ಇದರಿಂದ ಇಡೀ ರಾಷ್ಟ್ರದಲ್ಲಿ ಒಂದು ಮಾದರಿಯ ಚೈತನ್ಯವು ನೆಲೆಗೊಳ್ಳುತ್ತಿತ್ತು. ಉಚ್ಚ ಸಂಸ್ಕಾರಗಳ ಚಲನದಿಂದ ಇಡೀ ಪರಿಸ್ಥಿತಿಯು ಉಜ್ವಲವಾಗುತ್ತಿತ್ತು. ಇದರಿಂದ ಅಪ್ರತ್ಯಕ್ಷವಾಗಿ ಸ್ತ್ರೀಯರಿಗೆ ಶಿಕ್ಷಣವು ದೊರೆತಂತಾಗಿ ಅವರ ಸ್ವಾಭಾವಿಕ ಧರ್ಮದ ಬೆಳವಣಿಗೆಯ ಕೊರತೆಯು ಎದ್ದು ಕಾಣಿಸಲಿಲ್ಲ. ಕೃತ್ರಿಮ ಸಂಸ್ಕಾರದ ಪರಿಣಾಮಗಳಿಂದುಂಟಾದ ಪ್ರವೃತ್ತಿಗಳು ಕಾಲಾಂತರದಲ್ಲಿ ಸ್ವಾಭಾವಿಕಗಳೆಂದು ಅನಿಸಹತ್ತುವವು. ಪರಿಸ್ಥಿತಿಯು ಬದಲಾಗದವಿನಃ ತನ್ನ ಅವನತಿಯು ಎಷ್ಟಾಗಿರುತ್ತದೆಂಬುದರ ಅರಿವು ಮನುಷ್ಯನಿಗೆ ಆಗುವದಿಲ್ಲ. ಹಿಂದು ಸ್ಥಾನದ ಮೇಲೆ ಮುಸಲ್ಮಾನರು ದಾಳಿಗಳನ್ನು ಮಾಡಿ, ಇಲ್ಲಿ ಅವರು ರಾಜ್ಯಕರ್ತರಾದ ಮೇಲೆ ಇಲ್ಲಿಯ ಪರಿಸ್ಥಿತಿಯು ಹಾಗು ಸಂಸ್ಕಾರವು ಬದಲಾದವು. ಮತ್ತು ಜಾತಿಭೇದದ ಹಾಗು ಸ್ತ್ರೀಯರನ್ನು ಕೃತ್ರಿಮ ಪರಿಸ್ಥಿತಿಯಲ್ಲಿ ಬೆಳೆಸಿದ್ದರ ಭಯಂಕರ ಪರಿಣಾಮಗಳು ಅನುಭವಕ್ಕೆ ಬರಹತ್ತಿದವು. ಜಾತಿಭೇದದ ಮೂಲಕ ರಾಷ್ಟ್ರ ಶಿಕ್ಷಣದ ಹೊಣೆಯು ಕ್ಷತ್ರಿಯರ ಮೇಲೆ ಬಿದ್ದಿತು. ಮಿಕ್ಕವರ್ಣದವರು ಅವರಿಗೆ ಹೆಚ್ಚಿನ ಸಹಾಯ ಮಾಡಲಿಲ್ಲವಿಷ್ಟೇ ಅಲ್ಲ, ಪ್ರಸಂಗ ವಿಶೇಷದಲ್ಲಿ ತಮ್ಮ ಸ್ವಂತದ ರಕ್ಷಣೆಯನ್ನು ಮಾಡಿಕೊಳ್ಳಲು ಸಹ ಅಸಮರ್ಥರಿದ್ದುದರಿಂದ ಇಷ್ಟು ಹೊಣೆಯನ್ನು ಕೊನೆಗಾಣಿಸಲು ಕ್ಷತ್ರಿಯರಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ಹಿಂದುಗಳು ಬಹು ಸಂಖ್ಯಾಕರಿದ್ದರೂ ಕೂಡ ಇಷ್ಟು ವರ್ಷಗಳವರೆಗೂ ದಾಸ್ಯಪಂಕದಲ್ಲಿ ಬಿದ್ದು ಒದ್ದಾಡುತ್ತಿರುವ ಪ್ರಸಂಗ ಬಂದಿತು.

ಸ್ತ್ರೀಯರು ಪಾತಿವ್ರತ್ಯದ ವಿಶಿಷ್ಟ ಮರ್ಯಾದೆಯ ಕಲ್ಪನೆಯಿಂದ ದಿಙ್ಮೂಢರಾಗಿದ್ದರಿಂದ ಪರಿಸ್ಥಿತಿಯನ್ನು ಎದುರಿಸಲು ಅಸಮರ್ಥರಾದರು. ಇದರಿಂದ ಮುಸಲ್ಮಾನರ ಕೂಡ ಯುದ್ಧವಾಗಿ ಕ್ಷತ್ರಿಯರು ಪರಾಭೂತರಾದಾಗ, ಸ್ತ್ರೀಯರು ಸ್ವಂತದ ರಕ್ಷಣೆಮಾಡಿಕೊಳ್ಳಲಿಕ್ಕೂ, ಪುರುಷರಿಗೆ ತಕ್ಕಂಥ ಸಹಾಯ ಮಾಡಲಿಕ್ಕೂ ಅಸಮರ್ಥರಾಗಿ, ನಿರಾಶ್ರಿತರಾಗಿ ದಿಕ್ಕಿಲ್ಲದೆ ಬೀಳುವ ಪ್ರಸಂಗ ಬರುತ್ತ ನಡೆದದ್ದರಿಂದ ಅವರ ಮರ್ಯಾದೆಯ ರಕ್ಷಣ ಮಾಡುವ ಯೋಜನೆಯಿಂದ ಜೋಹಾರದ ಕಲ್ಪನೆಯು ರೂಢವಾಯಿತು. ಇದರಿಂದ ಸಾವಿರಾರು ಸ್ತ್ರೀಯರು ವ್ಯರ್ಥವಾಗಿ ಅಗ್ನಿನಾರಾಯಣನಿಗೆ ತುತ್ತಾದರು. ಇದರಲ್ಲಿ ಯಾರಿಗಾದರೂ ದೋಷಕೊಡುವದು ನನ್ನ ಉದ್ದೇಶವಿಲ್ಲ. ಆದರೆ ದೇವರ ಸ್ವಾಭಾವಿಕ ಯೋಜನೆಯನ್ನು ಬದಿಗಿರಿಸಿದುದರ ಪರಿಣಾಮವನ್ನು ತೋರಿಸುವದು ನನ್ನ ಉದ್ದೇಶ. ಎಷ್ಟೇ ಉಚ್ಚವೆಂದು, ಕೃತ್ರಿಮ ಯೋಜನೆಯನ್ನು ಅಮಲಿನಲ್ಲಿ ತಂದರೂ ಕೂಡ ದೇವರು ಬೇರೆ ಬೇರೆ

ಪರಿಸ್ಥಿತಿಯನ್ನು ಉತ್ಪನ್ನ ಮಾಡಿ ಉಚ್ಚವೆಂದು ತಿಳಿದಂಥ ಕೃತ್ರಿಮ ಯೋಜನೆಗಳ ದುಷ್ಪರಿಣಾಮವನ್ನು ಕಾಲಾಂತರದಿಂದಾದರೂ ಅನುಭವಿಸ ಹಚ್ಚಿ ಎಚ್ಚರಿಕೆಯನ್ನು ಕೊಟ್ಟು ' ಏಕಮೇವಾ ದ್ವಿತೀಯಂ, (ಈ ಜಗದೊಳಗೆ) ತನ್ನಲ್ಲಿ ಭೇದಭಾವವಿಲ್ಲೆಂಬುದರ ಮನವರಿಕೆ ಮಾಡಿಕೊಡುತ್ತಿರುವನು. ಪರಕೀಯರ ವಶದಲ್ಲಿ ಹಿಂದುಸ್ಥಾನವು ಹೋಗುವದರಲ್ಲಾದರೂ, ಈ ಈಶ್ವರ ಯೋಜನೆಯೇ ಇರಬೇಕೆಂದು ನನಗೆ ತೋರುತ್ತದೆ. ಪೂರ್ವಜರೂ ಸ್ತ್ರೀಯರನ್ನು, ಮನುಷ್ಯ ಜಾತಿಯ ಅರ್ಧ ಭಾಗವನ್ನು ಪಾತಿವ್ರತ್ಯದ ಮತ್ತು ವಿವಕ್ಷಿತ ಮರ್ಯಾದೆಯ ಕಲ್ಪನೆಗಳಿಂದ ಕಟ್ಟಿ ಹಾಕಿ ಬಿಡದೆ ಈ ಈಶ್ವರೀ ಯೋಜನೆಯಂತೆ ಪ್ರತಿಯೊಂದು ಕೆಲಸದಲ್ಲಿ ಅವರನ್ನು ಸಹಾಯಕರೆಂದು ತಿಳಿದು ತಮ್ಮಂತೆಯೇ ಅವರನ್ನು ಎಲ್ಲ ವಿಷಯಗಳಲ್ಲಿ ನಡೆಸಿಕೊಂಡಿದ್ದರೆ ಜೋಹಾರದ ಪ್ರಸಂಗವು ಬಾರದೆ ಅವರಾದರೂ ರಣಾಂಗಣದಲ್ಲಿ ಶತ್ರುಗಳ ಕಸುವು ಕಡಿಮೆಮಾಡುತ್ತಿದ್ದರು ಮತ್ತು ಹಿಂದುಸ್ಥಾನವು ಸ್ವತಂತ್ರವಾಗುತ್ತಿತ್ತು. ಅಸ್ತು, ಎಲ್ಲ ಉನ್ನತಿಯು, ಭಾವನೆಯನ್ನವಲಂಬಿಸಿರುವದು. ಪಾಪ ಪುಣ್ಯವು ಭಾವನಾಮಯವಿದ್ದದ್ದರಿಂದ ಅವರಿಗೆ ಕಲಂಕ ತಗಲದೆ ಪುಣ್ಯಬರುತ್ತಿತ್ತು. ಅವರ ಚರಿತ್ರೆಗಳಾದರೂ ನಮ್ಮೆದುರಿನಲ್ಲಿರುತ್ತಿದ್ದವು. ಈಗ ಅವುಗಳಲ್ಲಿಯ ಮರ್ಮವನ್ನು ಕಂಡುಹಿಡಿದು ಮುಂದಿನವರು ತಮ್ಮ ಜೀವಿತದ ಧ್ಯೇಯವನ್ನು ನಿಶ್ಚಿತ ಮಾಡಬೇಕೇ ಹೊರ್ತು ಹಳೆಯದೆಲ್ಲ ಒಳಿತೆಂದು ಅದಕ್ಕೆ ಅಂಟಿಕೊಳ್ಳುವದೆಂದರೆ ಆತ್ಮಘಾತವೇ ಸರಿ. ಮುಂದೆ ಇಂಗ್ಲೀಷರ ಆಳಿಕೆಯು ಪ್ರಾರಂಭವಾದಾಗಿನಿಂದ ಹಿಂದು ಸಂಸ್ಕಾರಗಳಲ್ಲಿ ಬಹಳ ವ್ಯತ್ಯಾಸ ಉಂಟಾಗಿ ತಿರುಳಿಲ್ಲದಂಥ ಶಿಕ್ಷಣದಿಂದ ಜೀವಿತವು ಸಂಸ್ಕಾರ ಪಡೆಯುತ್ತಿದೆ. ಉಚ್ಚ ಸಂಸ್ಕಾರಗಳು ಅಳಿದುಹೋಗಿ ಬಹುಜನ ಸಮಾಜದಲ್ಲಿ ಸ್ವಾರ್ಥವು ಬೇರೂರಿರುವದು. ತತ್ವದ ಬದಲು ರೂಢಿಯು ಪ್ರಬಲವಾಗಿರುತ್ತದೆ. ಸತ್ಯದ ಬದಲು ಅಸತ್ಯಕ್ಕೆ ಹೆಚ್ಚು ಪ್ರಾಧಾನ್ಯವು ಬಂದಿರುತ್ತದೆ. ಶಿಕ್ಷಣವೆಂದರೆ ಹೊಟ್ಟೆಹೊರೆದುಕೊಳ್ಳುವ ಸಾಧನವೆಂಬ ಕಲ್ಪನೆಯು ಹುಟ್ಟಿದೆ. ಅಲ್ಲಿಂದ ಕೇಳುವದೇನು ? ಸ್ತ್ರೀಯರ ಗತಿಯಂತೂ ವಿಚಿತ್ರವಾಯಿತು ! ಕಲಿತು ಮಾಡುವದೇನು ? ಜ್ಞಾನದಿಂದ ಪ್ರಯೋಜನವೇನು ? ಶಿಕ್ಷಣದಿಂದ ನೀತಿಯು ಕೆಡುವದು. ಆಯಿತು, ಅವರ ಸ್ವಾತಂತ್ರ್ಯ ಪ್ರವೃತ್ತಿಗಳು ತಿಳಿಯದಂತಾದವು ! ಶಾಸ್ತ್ರಗಳನ್ನೂ ರೂಢಿಯು ಮೂಲೆಗೊತ್ತಿತು. ಪೌರ್ವಾತ್ಯ ಶಿಕ್ಷಣದ ಸಂಸ್ಕಾರವು ಅಳಿದು ಆಧುನಿಕ ಶಿಕ್ಷಣದ ಪ್ರಭಾವದಿಂದ ಬಹುಜನ ಪುರುಷರು ತಮ್ಮ ಕರ್ತವ್ಯ ಕರ್ಮವನ್ನು ಮರೆತು ಮನಬಂದಂತೆ ವರ್ತಿಸಹತ್ತಿದರು ! ಸೃಷ್ಟಿ ನಿಯಮಗಳ ಭಂಗವಾಗಹತ್ತಿತು ! ಜೀವಂತವಿರಲು ತಿನ್ನುವದೆಂಬುದು ಅಳಿದು ಹೋಗಿ ತಿನ್ನುವದಕ್ಕಾಗಿ ಜೀವಂತ ಇರುವದೆಂಬ ಕಲ್ಪನೆಯು ರೂಢವಾಯಿತು. ನಾಲಿಗೆಯ ಅಧೀನದಲ್ಲಿ ಎಲ್ಲರೂ ಸಿಕ್ಕಬಿದ್ದರು. ಹಲವು ತರದ ಪಕ್ವಾನ್ನಗಳು ಪ್ರಚಾರದಲ್ಲಿ ಬಂದು, ಅವುಗಳನ್ನು ಮಾಡುವದರಲ್ಲಿಯೇ ಸ್ತ್ರೀಯರು ಹಣ್ಣಾಗಿ

ಹೋಗಿರುವರು. ಮೊದಲೆ ವಾಸನೆಗಳು ಪ್ರಬಲ ಅದರಲ್ಲಿ ಇಂಥ ಕೃತ್ರಿಮವಾದ ನಡಾವಳಿಯು. ಇದರಿಂದ ವ್ಯಭಿಚಾರವು ಬೆಳೆಯುತ್ತ ನಡೆದು ತೋರಿಕೆಗೆ ಶಾಸ್ತ್ರ ನಿಯಮದಿಂದ ನಡೆಯುತ್ತೇವೆಂದು ಅನಿಸಿದರೂ ಕೂಡ ಹಲವು ಬಗೆಯಿಂದ ಅನರ್ಥ ಪರಂಪರೆಯು ಒದಗಿತು. ಸ್ತ್ರೀಯರ ಸ್ವಾಭಾವಿಕವಾದ ಹಕ್ಕುಗಳು ಕಾಲ ಕೆಳಗೆ ತುಳಿಯಲ್ಪಟ್ಟು ಅವರಿಗೆ ಬಹಳ ತೊಂದರೆಯುಂಟಾಗಿ ಕಷ್ಟನಷ್ಟಗಳಿಗೆ ಈಡಾಗಬೇಕಾಯಿತು; ಮತ್ತು ಆಗಬೇಕಾಗುತ್ತದೆ. ಅದರ ನಿರಸನಾರ್ಥವಾಗಿ ಪ್ರಯತ್ನವೇನೋ ನಡೆದಿರುತ್ತದೆ. ಅದರ ಪರಿಣಾಮವೆಂದು ಅವರಿಗೆ ಶಿಕ್ಷಣ ಕೊಡಬೇಕೆಂದು ನಿಷ್ಕರ್ಷವಾಯಿತು,ಆದರೆ ಯಾವ ಶಿಕ್ಷಣ ಕೊಡಬೇಕೆಂಬಪ್ರಶ್ನೆಯು ವಾದದಲ್ಲಿ ಕೊಳೆಯುತ್ತ ಬಿದ್ದಿರುವದು.ಸ್ತ್ರೀಯರಮೇಲೆ ನಿಸರ್ಗದಿಂದ ಬಾಲಸಂಗೋಪನದ ಹೊಣೆಯು ಬಿದ್ದಿರುವದು. ಎಲ್ಲ ತೆರನಾಗಿ ಶಾರೀರಿಕ, ಮಾನಸಿಕ ಹಾಗು ಆಧ್ಯಾತ್ಮಿಕ ಶಕ್ತಿಗಳ ಬೆಳವಣಿಗೆಯು ಬಾಲಕರಲ್ಲಿ ಸರಿಯಾಗಿ ಆಗಬೇಕಾದರೆ ಅದು ಸ್ತ್ರೀಯರಲ್ಲಿ ಮೊದಲೇ ಸಾಕಷ್ಟು ಆಗಿರಬೇಕಾಗುವದು. ಆದ್ದರಿಂದ ಎಂಥ ಎಡರುಗಳಿಗೂ ಸೊಪ್ಪುಹಾಕದೆ ಬೈಲಲ್ಲಿ ಸ್ವಚ್ಛ ಹವೆಯಲ್ಲಿ ತರತರದ ವ್ಯಾಯಾಮಗಳಿಂದ ಪೃಥ್ವಿ,ಆಪ್,ತೇಜ,ವಾಯು ಮತ್ತು ಆಕಾಶ ಎಂಬ ಪಂಚತತ್ವಗಳನ್ನೂ ಮನಸೋಕ್ತ ಉಪಭೋಗ ಮಾಡಬೇಕು. ಮತ್ತು ಶಾರೀರಿಕ ಬೆಳವಣಿಗೆಯು ತುಂಬಾ ಆಗುವವರೆಗೂ ಅವಿವಾಹಿತರಿರಲು ತುಂಬಾ ಆಸ್ಪದಕೊಡಬೇಕು. ಇದಿಲ್ಲದೆ ಅವರು ಸಶಕ್ತ ಹಾಗು ನಿರೋಗಿಗಳು ಆಗಲಾರರು. ಮತ್ತು ಮಕ್ಕಳನ್ನು ಸರಿಯಾಗಿ ಕಾಪಾಡಲು ಸಮರ್ಥರಾಗಲಾರರು. ಅವರ ಮಾನಸಿಕ ಶಕ್ತಿಯನ್ನು ಬೆಳೆಯುಗೊಡಬೇಕಾದುದು ಬಹು ಮುಖ್ಯವಾದುದು.

ಸಾವಿರಾರು ಇಕ್ಕಟ್ಟಿನ ಪ್ರಸಂಗಗಳಲ್ಲಿ ಧುಮುಕಿ ಹೋಗಿ ಗಂಡಸರಂತೆ ಧೈರ್ಯ, ಸ್ಥೈರ್ಯ, ಹಾಗೂ ವಿದ್ಯಾಸಂಪಾದನೆಯನ್ನು ಮಾಡಗೊಡಬೇಕು. ಪಾಪ, ಪುಣ್ಯ ಇವು ಭಾವನಾಮಯ ಇದ್ದದರಿಂದ ಆಚಾರಕ್ಕಿಂತಲೂ ಭಾವನಾ ಶುದ್ಧಿಯ ಕಡೆಗೆ ಹೆಚ್ಚು ಲಕ್ಷ್ಯಕೊಡಬೇಕು. ಬಾಹ್ಯಾಚರಣದ ಯೋಗ್ಯತೆಯನ್ನು ಭಾವನೆಗಳ ಮೇಲಿಂದ ನಿಶ್ಚಯಿಸತಕ್ಕದ್ದಿರುತ್ತದೆ. ಆದ್ದರಿಂದಲೇ ಪುರುಷರ ವರ್ಗದಲ್ಲಿ ಲೌಕಿಕ ರೀತಿಯಿಂದ ವಿಸಂಗತ ಕಾಣಿಸುವಂಥ ನಡತೆ ಇದ್ದರೂ ಕೂಡ ಉಚ್ಚ ಭಾವನೆಯಿಂದ ಮೇಲ್ಪಂಕ್ತಿಯನ್ನು ಪಡೆದಂಥ ವಿಭೂತಿಗಳು ಕಂಡು ಬರುವರು. ತಪ್ಪು ಮಾರ್ಗವನ್ನು ಹಿಡಿದು ಅಧೋಗತಿಗೆ ಹೋಗುವದು ಮತ್ತು ಉನ್ನತಿಯ ಮಾರ್ಗದಿಂದ ಹೋಗುತ್ತಿರಲು ಸಾವಿರಾರು ತಪ್ಪುಗಳನ್ನು ಮಾಡುವದು ಇದರಲ್ಲಿ ಬಹಳ ವ್ಯತ್ಯಾಸವುಂಟು. ಹೆಚ್ಚಿಗೆ ತಪ್ಪುಗಳಾದರೂ ಆ ತಪ್ಪುಗಳ ಉಪಯೋಗವನ್ನು ತಮ್ಮ ಉನ್ನತಿಯ ಕಡೆಗೆ ಮಾಡಿಕೊಳ್ಳುವವರದೇ ನಿಜವಾಗಿ ಆತ್ಮೋನ್ನತಿಯಾಗುವದು. ಆತ್ಮೋನ್ನತಿಯೇ ಮಾನವರ ಇತಿ ಕರ್ತವ್ಯವು ಹಲವು ತರದಿಂದ ತಮ್ಮ ತಪ್ಪುಗಳನ್ನು ತಾವೇ ಕಷ್ಟನಷ್ಟಗಳಿಗೆ ಈಡಾದರೂ ತಿದ್ದಿ

ಇಲ್ಲ, ತಿದ್ದಿ ಸುಧಾರಿಸಿಕೊಳ್ಳುವ ಅಧಿಕಾರ ನಿಸರ್ಗತಃ ಪ್ರತಿಯೊಬ್ಬರಿಗೆ—ಪುರುಷ ರಾಗಲಿ, ಸ್ತ್ರೀಯರಾಗಲಿ ಇರಲೇಬೇಕು. ಅದನ್ನು ಸ್ತ್ರೀಯರಿಗೆ ಈವರೆಗೂ ಸಾಕಷ್ಟು ಕೊಟ್ಟಿರುವದಿಲ್ಲ. ಪ್ರತಿಯೊಂದು ವ್ಯಕ್ತಿಯ ಹಕ್ಕನ್ನು ವ್ಯಕ್ತಿಗೇ ಕೊಟ್ಟರೆ ಸಮಾಜವು ಶಿಥಿಲವಾಗುವದೆಂದು ಸತ್ತಾಧೀಶರ ಆತ್ಮಘಾತಕ ಕಲ್ಪನೆ ಇರುವದು. ಸ್ತ್ರೀಯರ ಸ್ವಾಭಾವಿಕ ಹಕ್ಕುಗಳನ್ನು ಅಮಲಿನಲ್ಲಿ ತರುವದರಿಂದ ಪುರುಷರ ಸ್ವೈರ ವರ್ತನಕ್ಕೆ ಬಹಳ ತಡೆಯುಂಟಾಗಿ ಅವರು ತಿಳಿದುಕೊಂಡ ಉನ್ನತಿಯು ಸ್ವಲ್ಪ ತೊಂದರೆಗೆ ಈಡಾಗಬಹುದು.

ಆರಂಭದಲ್ಲಿ ಮೋಕ್ಷ ಪಡೆಯಲು ಪ್ರತಿಯೊಬ್ಬರು ಪ್ರಯತ್ನ ಮಾಡದೆ ಗತ್ಯಂತರವೇ ಇಲ್ಲ. ಆದ್ದರಿಂದ ಆತ್ಮೋನ್ನತಿಯನ್ನು ಮಾಡಿಕೊಳ್ಳಲು ಪುರುಷರಿಗಿರುವ ಹಕ್ಕುಗಳೆಲ್ಲ ಸ್ತ್ರೀಯರಿಗೆ ಇದ್ದೇತೀರಬೇಕು. ಇದರ ಹೊರ್ತು ಅವರು ರಾಷ್ಟ್ರದ ಹಾಗೂ ಜಗತ್ತಿನ ನಿಜವಾದ ಉನ್ನತಿಯು ಎಂದೂ ಆಗುವದು ಶಕ್ಯವಿಲ್ಲ. ಆದ್ದರಿಂದ ಅವರ ಶಿಕ್ಷಣದಲ್ಲಿ ಈ ದೃಷ್ಟಿಯು ಇರಬೇಕು. ಜ್ಞಾನದ ಸಂಜೀವಿನಿಯನ್ನು ಸ್ತ್ರೀಯರಿಗೆ ಸ್ವೈರವಾಗಿ ಸೇವಿಸಗೊಡಬೇಕು ಈ ದೃಷ್ಟಿಯಿಂದ ಶಿಕ್ಷಣ ಕೊಡುವದರಲ್ಲಿ ತೊಂದರೆಗಳಾವವು ? ಆಕ್ಷೇಪಣೆಗಳಾವವು ? ಇದರಿಂದಉದ್ಭವಿಸುವ ತಾತ್ಪೂರ್ತಿಕ ಅಸ್ವಸ್ಥತೆಯು ಆವುದು ? ಇದರ ನಿರಾಕರಣವನ್ನು ಹೇಗೆ ಮಾಡಬೇಕೆಂಬುವದನ್ನು ಇನ್ನೊಮ್ಮೆ ನೋಡುವಾ.

**ಡಾ. ವನವಿಹಾರಿ.**

---

# ನಲ್ಮೆ ಹೆಣ್ಣು

(೧)

ತುಂಬು ಅರಳಿದ ಹೆಣ್ಣ ಕಣ್ಣ ಹೆಂಗಳೆಯಲ್ಲಿ
ಅಂಬುಜದ ತಣ್ಪು ನುಣ್ಪುಬಿಣ್ಪು ಹೆಣೆದಿಹುದು
ಇಂಬೆನಿತೊ ಹೃದಯದಾ, ದಾರಿದ್ರ್ಯದರಿಯಲ್ಲಿ
ಸಿರಿಯ ಶಿಖರದಲಿಕೂಡ
ಹಂಬಲಿಸಿ ಹರುಷಬಡುತಿಹ ನರಗೆ ಸರಿಯಾಗಿ
ಪೊಂಬೊಂಬೆಯಂದದೊಲು ಹಬ್ಬಹರುಷವ ನೀಡಿ
ಮುಂಬರಿವ ದಾರಿಯನು ಕೈದೀಪದಂದದೊಲು
ತೋರಿಸುತ್ತಿಹುದು ಪೆಣ್ಣು !

(೨)

ಹೂವಿನಿಂ ಮಾಧುರ್ಯ, ಹಾವಿನಿಂ ಮೈಬಳಕು,
ಆವಿನಿಂ ಸಭ್ಯತೆ ಪರೋಪಕಾರಾದಿ ಗುಣ,
ಕೂವಕ್ಕಿಯಿಂ ಇಂಪು, ಸೋಮನಿಂದಲಿ ತಂಪು
ಸಾಗರದಿ ಗಾಂಭೀರವ್ಯಂ
ಮಾವಿನೆಳಚಿಗುರ ಕೋಮಲತೆ, ಶಿಷ್ಯನ ಸೇವೆ,
ದೇವಿಯಿಂ ಶಕ್ತಿ, ಸರಸತಿಯಿಂದ ವಿದ್ಯೆಯಂ,
ಭಾವದಿಂ ತೀವಿ ಕರುಣಾಪ್ರೇಮರಸದುಂಬಿ
ದೇವಸೃಷ್ಟಿಸಿದ ಪೆಣ್ಣ !

(೩)

ಸಾಗರದ ನೀರಿನಲಿ ಕಲ್ಲುಬಂಡೆಗಳಿಹವು
ಆಗಸದ ಚಂದ್ರನಲಿ ಕಪ್ಪುಛಾಯೆಯು ಇಹುದು
ಕೋಗಿಲದ ಕಂಠ ಒಂದೇ ಇಂಪು ಮೈ ಕಪ್ಪು
ಪೂರ್ಣ ಚೆಲುವಲ್ಲಿ ಇಲ್ಲ !
ನಾಗನಾ ಮೋಡಿಯಲಿ ತುಂಬು ವಿಷದುಂಬಿಹುದು
ವೇಗದಾ ಗಾಳಿಗೂ ದುರ್ಗಂಧವಿರಬಹುದು
ತ್ಯಾಗಸೇವಾ ನಲ್ಮೆಮೂರ್ತಿ ಸ್ತ್ರೀ ! ಇವಳಲ್ಲಿ
ಕುಂದಿಲ್ಲ ! ನಲ್ಮೆ-ಹೆಣ್ಣು !!

—ಶ್ರೀ ದೇಸಾಯಿ ದತ್ತಮೂರ್ತಿ.
" ಕನ್ನಡ ಕುಟೀರ " ಹುಬ್ಬಳ್ಳಿ.

# ಧಾರವಾಡ ಜಿಲ್ಹಾ ಮಹಿಳಾ ಮಂಡಳ, ಧಾರವಾಡ.

## ( ಅಲ್ಪ ಪರಿಚಯ )

**ಅಖಿಲಭಾರತ ಮಹಿಳಾಪರಿಷತ್ತಿನ ಶಾಖೆಯಾದ ಧಾರವಾಡ ಮಹಿಳಾ ಮಂಡಳದ ಕಾರ್ಯಕಲಾಪಗಳನ್ನು ಕುರಿತು ಅಲ್ಪಪರಿಚಯುವನ್ನುಇಲ್ಲಿ ಕೊಡಲಾಗಿದೆ.**

ಈ ಮಂಡಳವು ೧೯೩೭ರಲ್ಲಿ ಸ್ಥಾಪಿತವಾಯಿತು. ಮಂಡಳದ ಉದ್ದೇಶವೆಂದರೆ ಕರ್ನಾಟಕದ ಮಹಿಳೆಯರ ಹಿತ ಹಾಗೂ ಉನ್ನತಿಗಾಗಿ ದುಡಿಯುವದು, ಆ ಮೂಲಕ ಪ್ರಾಂತದ ಸಾಂಸ್ಕೃತಿಕ ಸಾಮಾಜಿಕ ಹಾಗೂ ರಾಜಕೀಯ ಜೀವನದಲ್ಲಿ ತಮ್ಮ ಪೂರ್ಣ ಹೊಣೆಯನ್ನು ವಹಿಸಲು ನಮ್ಮ ಮಹಿಳೆಯರು ಸಮರ್ಥರಾಗುವಂತೆ ಮಾಡುವದು. ನಮ್ಮ ಮಂಡಳದಲ್ಲಿ ಈಗ ೧೫೦ಕ್ಕೆ ಮೇಲ್ಪಟ್ಟು ಸದಸ್ಯರಿದ್ದಾರೆ. ಗದುಗಿನಲ್ಲಿ ನಮ್ಮದೊಂದು ಶಾಖಾ ಮಂಡಳವಿದೆ. ನಮ್ಮ ಮಂಡಳವು ಅಖಿಲ ಭಾರತ ಮಹಿಳಾಪರಿಷತ್ತಿನ ಶಾಖೆಯೆಂದು ಮನ್ನಣೆಪಡೆದಿದೆ. ಆ ವ್ಯಾಪಕ ಸಂಸ್ಥೆಯ ಧ್ಯೇಯಧೋರಣೆಗಳನ್ನು ಸಾಧಿಸುವಲ್ಲಿ ನಾವು ನಿರತರಾಗಿದ್ದೇವೆ. ಈ ಸಂಸ್ಥೆಯಪರವಾಗಿ ಮಹಿಳೆಯರ, ಮಕ್ಕಳ ಹಿತಸಂಬಂಧದ ವಿಷಯಗಳನ್ನು ಕುರಿತು ಭಾಷಣಗಳನ್ನೂ, ಲಲಿತ ಹಾಗೂ ಉಪಯುಕ್ತ ಕಲೆಗಳನ್ನು ಕುರಿತು ವರ್ಗಗಳನ್ನೂ ನೂಲುವ, ಹೊಲಿಯುವ, ಕಸೂತಿ ಹಾಕುವ ವರ್ಗಗಳನ್ನೂ ನಡೆಸುತ್ತೇವೆ. ನಮ್ಮ ದೇಶದ ವಿಶಾಲ ಜೀವನದಲ್ಲಿ ನಮ್ಮ ಪ್ರಾಂತದ ಮಹಿಳೆಯರು ಭಾಗವಹಿಸಬೇಕಾಗಿದೆ ಎಂಬುದನ್ನರಿತ ನಾವು ಹಿಂದೀ ವರ್ಗಗಳ ವ್ಯವಸ್ಥೆಯನ್ನೂ ಮಾಡಿದ್ದೇವೆ. ಮುಂದುವರಿಯುತ್ತಿರುವ ಸಮಾಜದ ಅವಶ್ಯಕತೆಗಳನ್ನು ಪೂರೈಸುವ ದೃಷ್ಟಿಯಿಂದ ನಮ್ಮ ಕಾರ್ಯರಂಗವನ್ನು ಇನ್ನೂ ಬೆಳೆಸಬೇಕೆಂದಿದ್ದೇವೆ. ಆದರೆ ನಮ್ಮ ಈ ಚಟುವಟಿಕೆಗಳಿಗೆ ತೊಡಕನ್ನುಂಟುಮಾಡುತ್ತಿರುವ ಸಂಗತಿ ಎಂದರೆ ಮಂಡಳಕ್ಕೆ ಸ್ವಂತ ಕಟ್ಟಡವಿಲ್ಲದಿರುವದು, ಮಂಡಳಕ್ಕೆ ಕಟ್ಟಡವಿದ್ದರೆ ವಾಚನಾಲಯ, ಶಿಶುವಿಹಾರ ಆಹಾರಕೇಂದ್ರ ಮುಂತಾದ ಅನೇಕ ಕಾರ್ಯಗಳನ್ನು ಕೈಕೊಳ್ಳಬಹುದಾಗಿತ್ತು. ಮಂದಿರ ನಿರ್ಮಾಣಕ್ಕೆಂದು ಪ್ರಯತ್ನಿಸುತ್ತಿದ್ದೇವೆ, ಕಟ್ಟಡದ ನಿಧಿಯನ್ನು ಸಂಗ್ರಹಿಸುತ್ತಿದ್ದೇವೆ.

ಮಂಡಳಕ್ಕೆ ೧೨ ಜನರನ್ನೊಳಗೊಂಡ ಕಾರ್ಯಕಾರೀ ಸಮಿತಿ ಇದೆ. ಈ ಜವಾಬ್ದಾರೀ ವ್ಯಕ್ತಿಗಳ ಸಹಕಾರ ಸಹಾನುಭೂತಿಯಿಂದ ಮಂಡಳದ ಎಲ್ಲ ಕಾರ್ಯವೂ ಶ್ರೀಮತಿ ಶಾಂತಕ್ಕ ಮಾಳವಾಡ ಇವರ ಅಧ್ಯಕ್ಷತೆಯಲ್ಲಿ ಯಶಸ್ವಿಯಾಗಿ ನಡೆಯುತ್ತ ಬಂದಿದೆ.

ಕಾರ್ಯದರ್ಶಿನಿ

ಧಾರವಾಡ ಜಿಲ್ಹಾ ಮಹಿಳಾಮಂಡಳ, ಧಾರವಾಡ.

# ಆರೋಗ್ಯ ಸಪ್ತಾಹದಲ್ಲಿ ಡಾ. ಶಾಂತಾಬಾಯಿ ಸಪ್ತರ್ಷಿಯವರು

●

[ ಮುಂಬಯಿಯ ಭಗಿನಿಯರ ಸಮಾಜವೊಂದರಲ್ಲಿ 'ಆರೋಗ್ಯ ಸಪ್ತಾಹದ' ಪ್ರಸಂಗದಲ್ಲಿ ಡಾ. ಶಾಂತಾಬಾಯಿ ಸಪ್ತರ್ಷಿಯವರು "ವಿವಾಹಿತ ಸ್ತ್ರೀಯರು ಮತ್ತು ಅವರ ಆರೋಗ್ಯ" ಎಂಬ ವಿಷಯವನ್ನು ಕುರಿತು ಮಾರ್ಮಿಕವಾಗಿ ಭಾಷಣ ಮಾಡಿದರು. "ಪುರುಷರು ಗಳಿಸುವ ಹೆಂಡತಿಯನ್ನು ಮಾಡಿಕೊಂಡು, ತಮ್ಮ ಗಳಿಸುವ ಹೊಣೆಯಿಂದ ಕೂಡ ಒಂದುವೇಳೆ ಮುಕ್ತರಾಗಬಹುದು. ಆದರೆ ಪ್ರಜೋತ್ಪಾದನದ ಹೊಣೆಯನ್ನು ಮಾತ್ರ ಸ್ತ್ರೀಯರು ಏನಾದರೂ ಬಿಟ್ಟುಕೊಡು ವಂತಿಲ್ಲ. ಆದ್ದರಿಂದ ತಮ್ಮ ಮಕ್ಕಳ ಆರೋಗ್ಯದ ಕಡೆಗೆ ಸ್ತ್ರೀಯರು ವಿಶೇಷ ಲಕ್ಷ್ಯಪೂರೈಸಬೇಕು. ]

"ಡಾಕ್ಟರರ ರಾಷ್ಟ್ರೀಕರಣವಾದರೆ ಜನತೆಗೆ ಅಪಾರ ಹಾನಿ ತಟ್ಟುವದು" ಎಂದು ಪ್ರತಿಪಾದಿಸುತ್ತ ಡಾಕ್ಟರ ಶಾಂತಾಬಾಯಿಯವರು ಮುಂದುವರಿದರು.

ಸ್ತ್ರೀಯರು ತಮ್ಮ ಆರೋಗ್ಯದ ಕಡೆಗೆ ಪುರುಷರಿಗಿಂತ ಹೆಚ್ಚು ಲಕ್ಷ್ಯ ಪೂರೈಸಬೇಕು. ಪುರುಷರ ಮುಖ್ಯ ಕರ್ತವ್ಯ ಅರ್ಥೋತ್ಪಾದನ, ಆದರೆ ಸ್ತ್ರೀಯರ ಮೇಲೆ ಇದಕ್ಕಿಂತ ಹೆಚ್ಚಿನ ಹೊಣೆಯಿದೆ; ಅದೆಂದರೆ ಪ್ರಜೋತ್ಪಾದನದ ಹೊಣೆ. ಸೋಮಾರಿಯಾದ ಪುರುಷನು ಗಳಿಸುವ ಹೆಂಡತಿಯನ್ನು ಮಾಡಿಕೊಂಡು ಬಿಟ್ಟರೆ, ತನ್ನ ಹೊಣೆಯಿಂದ ಮುಕ್ತನಾದಂತೆ! ಆದರೆ ಸ್ತ್ರೀಯು ತನ್ನ ಹೊಣೆಯನ್ನು ಯಾರ ಮೇಲೆ ಚೆಲ್ಲಿಕೊಡಬಹುದು? ಇಂದು ಸ್ತ್ರೀ ಸುಶಿಕ್ಷಿತಳಾಗಿದ್ದಾಳೆ ನಿಜ. ಆದರೆ ಆ ಸುಶಿಕ್ಷಿತತೆಯೊಂದಿಗೆ ಆರೋಗ್ಯದ ಜ್ಞಾನವೂ ಅವರಿಗೆ ಇರುತ್ತದೆಂದು ಹೇಳಬರುವಂತಿಲ್ಲ.

ಸ್ತ್ರೀಯರ ಆರೋಗ್ಯದ ಕಡೆಗೆ ಸರಕಾರೀ, ಸಾರ್ವಜನಿಕ ಸಂಸ್ಥೆಗಳೆಲ್ಲವೂ ವಿಶೇಷ ಲಕ್ಷ್ಯವನ್ನು ಪೂರೈಸಬೇಕಾಗುತ್ತದೆ. ಇದಕ್ಕೆ ಅನುಕೂಲವಾಗುವಂತೆ ಸರಕಾರಿ ಕಾಯ್ದೆಗಳೂ ಆಗಬೇಕು. ಈ ದೃಷ್ಟಿಯಿಂದಲೇ "ಮದರ್ಸ ಆ್ಯಂಡ ಚಿಲ್ಡ್ರನ್ಸ ವೆಲಫೇರ ಸೊಸೈಟಿ," ಯವರು ಕಾರ್ಯ ಮಾಡುತ್ತಿದ್ದಾರೆ.

**ತಜ್ಞ ಡಾಕ್ಟರರ ಮೇಲೆ ವಿಶ್ವಾಸವಿಡಿರಿ :**

'ತಜ್ಞ ಡಾಕ್ಟರರನ್ನೂ ಅನೇಕ ಸ್ತ್ರೀಯರು ನಂಬುವದಿಲ್ಲ. ಇದರಿಂದ ಎಷ್ಟೋ ಗರ್ಭಿಣಿಯರು ಅಪಾಯಕ್ಕೆ ಗುರಿಯಾಗಿದ್ದಾರೆ,' ಎಂದು ಸೋದಾಹರಣವಾಗಿ ವಿವರಿಸುತ್ತ ಡಾ. ಶಾಂತಾಬಾಯಿಯವರು ಹೇಳಿದರು. ಡಾಕ್ಟರ ಅಭಿಪ್ರಾಯವನ್ನು ಕೇಳಲು ಬಂದರೂ, ಅದರಂತೆ ನಡೆಯುವವರು ಕಡಿಮೆ. ಕೆಲದಿನವಾದರೂ

ನೀವು ದವಾಖಾನೆಯಲ್ಲಿಯೇ ಇರಬೇಕಾಗುತ್ತದೆ, ಎಂದು ಡಾಕ್ಟರರು ಹೇಳಿದರೆ, "ಮನೆಯನ್ನು ಯಾರು ನಡೆಸುವವರು ?" ಎಂದು ಅನೇಕ ಸ್ತ್ರೀಯರು ಅಲ್ಪಸ್ವಲ್ಪ ರೋಗಗಳನ್ನು ಲಕ್ಷಿಸದೆ ದುಡಿಯುತ್ತಿರುತ್ತಾರೆ. ಆಹಾರದ ವಿಷಯವಾಗಿಯೂ ಪಥ್ಯವನ್ನು ಪಾಲಿಸುವದಾಗುವದಿಲ್ಲ. ಹೀಗಾಗಿ 'ಮೂರ್ಛೆ' ಬರುವದೋ, ಅಥವಾ ಮತ್ತೇನಾದರೂ ರೋಗವೋ ಪ್ರಾರಂಭವಾಗುತ್ತದೆ. ಬಳಿಕ ಅವಳಿಗೆ ದೆವ್ವಬಡಿದಿದೆಯೆಂದು ಮಂತ್ರತಂತ್ರಗಳ ವಿಚಾರಕ್ಕೆ ಮೊದಲಾಗುತ್ತದೆ.

ಗರ್ಭಿಣಿಯರು ತಮ್ಮ ಆರೋಗ್ಯದ ಕಡೆಗೆ ಸರ್ವವಿಧದಲ್ಲೂ ಲಕ್ಷ್ಯ ಪೂರೈಸಬೇಕು. ಮೇಲಿಂದ ಮೇಲೆ ವೈದ್ಯರ ಸಲಹೆಯನ್ನು ಪಡೆದುಕೊಳ್ಳಬೇಕು. ಗರ್ಭಿಣಿಯರು ಹೆಚ್ಚು ಭಾರವನ್ನು ಎತ್ತಬಾರದು; ಮೆಟ್ಟಲುಗಳ ಮೇಲೆ ಏರಿಳಿತವೂ ಅಷ್ಟೊಂದು ಹಿತವಲ್ಲ. ಪಥ್ಯಾಹಾರಗಳು ನಿಯಮಿತವಾಗಿರಬೇಕು. ಒಬ್ಬಳು ತಾನು ಗರ್ಭಿಣಿಯೆಂದು ಒಂಬತ್ತು ತಿಂಗಳ ಕಾಲಕಳೆದು, ಹೆರಿಗೆಯ ಹಾದೀ ನೋಡಿ ಬೇಸತ್ತು ಡಾಕ್ಟರರ ಕಡೆಗೆ ಹೋದಳು. ಅವಳು ಗರ್ಭಿಣಿಯಾಗಿರದೆ, ಅವಳಿಗೊಂದು ಬಗೆಯ ರೋಗವಂಟಿಕೊಂಡಿತ್ತು.

ಹುಟ್ಟಿದ ಮಗು ಗಂಡಾಗಿರಲಿ, ಹೆಣ್ಣಾಗಿರಲಿ, ಹತ್ತುದಿನಗಳ ವರೆಗೆ ಹೆರಿಗೆಯ ಆಸ್ಪತ್ರೆಯಲ್ಲಿ ಅದಕ್ಕೆ ಯೋಗ್ಯ ಪೋಷಣೆ ದೊರೆಯುತ್ತದೆ. ಅನಂತರದ ಹೊಣೆಯು ಮಾತ್ರ ತಾಯಿ-ತಂದೆಗಳದು, ಗಂಡುಮಗುವಾದರೆ ಆನಂದದಿಂದ ಫೇಡೆ ಹಂಚುವದು, ಹೆಣ್ಣುಮಗುವಾದರೆ ಸಿಡಿಮಿಡಿಗೊಳ್ಳುವದು ನಮ್ಮ ಸಮಾಜದಲ್ಲಿ ರೂಢವಾಗಿದೆ. ಹಾಗೆಲ್ಲ ಮಾಡದೆ ಮಗುವಿನ ಕಡೆಗೆ ನಿಷ್ಪಕ್ಷಪಾತ ಬುದ್ಧಿಯಿಂದ ತಾಯಿ-ತಂದೆಗಳು ಲಕ್ಷ್ಯಪೂರೈಸಬೇಕು.

## ಹೆರಿಗೆಯ ಮನೆಗಳಿಗೆ ಬದಲು ಸಂತತಿ ನಿಯಮನ ಕೇಂದ್ರಗಳು.

ಇಂದು ಹೆರಿಗೆಯ ಮನೆಗಳಿಗೆ ಬದಲು ಸಂತತಿನಿಯಮನ ಕೇಂದ್ರಗಳ ಅವಶ್ಯಕತೆಯೇ ಹೆಚ್ಚಾಗಿದೆ. "ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲ," ಎಂಬ ಮಾತು ಒಂದು ಕಾಲಕ್ಕೆ ನಿಜವಾಗಿದ್ದರೂ ಇಂದಿನ ರೇಶನಿಂಗ ಕಾಲದಲ್ಲಿ ಅಸತ್ಯವಾಗಿ ಪರಿಣಮಿಸಿದೆ. ಇದಕ್ಕನುಸರಿಸಿ ಹೆರಿಗೆಯ ಮನೆಗಳಿಗಿಂತ ಸಂತತಿ ನಿಯಮನ ಕೇಂದ್ರಗಳ ಸಂಖ್ಯೆಯೇ ದೇಶದಲ್ಲಿ ಹೆಚ್ಚಾಗಬೇಕೆಂದು ನನ್ನ ಅಭಿಪ್ರಾಯ. ಸಂತತಿ ನಿಯಮನದ ಸಾಧನಗಳನ್ನು ಇಂದು ಬಡವರೂ ಕೂಡ ಉಪಯೋಗಿಸಬಹುದಾಗಿದೆ. ಶಸ್ತ್ರಕ್ರಿಯೆಯನ್ನೇ ಒಂದುವೇಳೆ ಮಾಡಿಸಿಕೊಳ್ಳುವದಾದರೆ ಸ್ತ್ರೀಯರಿಗಿಂತ ಪುರುಷರಿಗೇ ಅದು ಹೆಚ್ಚು ಅನುಕೂಲ. ಅದಕ್ಕಾಗಿ ಪುರುಷರೇ ಈ ಉಪಾಯವನ್ನು ಎತ್ತಿಹಿಡಿಯಬೇಕು, ಎಷ್ಟೋಸಲ ನಮ್ಮ ಸಮಾಜದಲ್ಲಿ, ಮಕ್ಕಳಾಗದಿದ್ದುದಕ್ಕೆ ಸ್ತ್ರೀಯನ್ನು ಶಪಿಸುವದುಂಟು; ಆದರೆ ಆ ದೋಷ ಪುರುಷನೆಡೆಗೇ ಇದ್ದರೆ!"

[ ಮರಾಠೀ ಮಾಸಪತ್ರಿಕೆಯೊಂದರ ಆಧಾರದಿಂದ ಸಂ. ]

# ಸುದ್ದಿ-ಸಮಾಚಾರ

## ೧. ಮಹಿಳೋದ್ಧಾರ ಪಂಚವಾರ್ಷಿಕ ಯೋಜನೆ.

ರಾಜ್ಯ ಪರಿಷತ್ತಿನ ಸದಸ್ಯರಾದ ಶ್ರೀಮತಿ ಸಾವಿತ್ರಿನಿಗಮರು ಮಹಿಳೆಯರ ಉದ್ಧಾರಕ್ಕಾಗಿ ಪಂಚವಾರ್ಷಿಕ ಯೋಜನೆಯೊಂದನ್ನು ಸಿದ್ಧಪಡಿಸಿರುವದಾಗಿ ವಾರ್ತೆ ಇದೆ. ಮಹಿಳೆಯರ ಉದ್ಧಾರಕ್ಕಾಗಿ ಮಹಿಳೆಯರೇ ಈ ರೀತಿ ಮುಂದೆ ಬಂದರೆ ಅವರ ಉದ್ಧಾರ ಬೇಗನೆ ಆದೀತು.

## ೨. ಮಹಿಳೆಯರ ದೌಡು.

ಮನಮಾಡದಲ್ಲಿ ೩ನೆಯ ದಿನಾಂಕ ಸಹಕಾರೀ ಮಂಡಳದ ಮೋಟಾರು ಕೆಟ್ಟದ್ದರಿಂದ ಜನತೆಗೆ ನೀರು ಸಿಗಲಿಲ್ಲ. ಮಹಿಳೆಯರು ಮೆರವಣಿಗೆ ತೆಗೆದು ನಗರ ಸಭೆಗೆ ಹೋದರು "ನೀರು ಕೊಡಿರಿ. ಇಲ್ಲವೆ ಖುರ್ಚಿ ಇಂದ ಎದ್ದೇಳಿರಿ" ಎಂದು ಘೋಷಣೆ ಮಾಡುತ್ತಿದ್ದರು. ಇದರ ನೇತೃತ್ವವನ್ನು ಕು. ಸುಮನ್ ಚಿಟ್ನೀಸ್, ಶ್ರೀಮತಿ ಕಾಶೀಬಾಯಿ ಕುಲಕರ್ಣಿ, ಶ್ರೀಮತಿ ಗೋದುಬಾಯಿ ಮೊದಲಾದ ಮಹಿಳೆಯರು ಸ್ವೀಕರಿಸಿದ್ದರು. ನಗರಸಭೆಯವರು ಬೇಗನೇ ಮೋಟಾರ ದುರಸ್ತ ಮಾಡಲಾಗುವದೆಂದು ಆಶ್ವಾಸನ ಕೊಟ್ಟರು.

## ೩. ಅತ್ತೆಯು ಸೊಸೆಯನ್ನು ಸುಟ್ಟಳು.

ಬಾಯಿ ಧೀರಜಕುಮಾರಳನ್ನು ಜೀವ ಸಹಿತ ಸುಟ್ಟು ಕೊಲೆ ಮಾಡಿದ ಆರೋಪದ ಮೇಲೆ ಆವಳ ಗಂಡನಾದ ಠಾಕೂರ ಸಾಹೇಬ ಹಾಗೂ ಅತ್ತೆಯಾದ ನಂದಕುವರಬಾ ಎಂಬವರನ್ನು ಬಂಧಿಸಲಾಗಿದೆ. ಈ ಮೊದಲೇ ಆವರನ್ನು ಬಂಧಿಸಲಾಗಿದ್ದು ಸಾಕಷ್ಟು ಪುರಾವೆಗಳಿಲ್ಲದ್ದಕ್ಕಾಗಿ ಹಾಗೇ ಬಿಡಲಾಗಿದ್ದಿತು. ಧೀರಜಕುವರಿ ಹಾಗೂ ಮೂವರು ಆಪಾದಿತರು ಮೇ ೨೪ ರಂದು ಬಡೋದೆಯ ಫತೇಗಂಜ ವಿಭಾಗ ಬಂಗಲೆಯೊಂದರಲ್ಲಿ ಮಲಗಿದ್ದು, ಅಂದು ರಾತ್ರಿ ಅವಳನ್ನು ಆಪಾದಿತರು ಹೊಡೆದರೆಂದೂ ಮರುದಿನ ಬೆಳಿಗ್ಗೆ ಅವಳ ಬಟ್ಟೆಗಳ ಮೇಲೆ ಚಿಮಣಿ ಎಣ್ಣೆಯನ್ನು ಸುರುವಿ ಬೆಂಕೀ ಹಚ್ಚಿದರೇಂದೂ ಹೊಗೆ ಬರುವದನ್ನು ನೋಡಿ ನೆರೆಯವರು ಬಂದು ಅವಳನ್ನು ಬಿಡಿಸಿದರೆಂದೂ ನಂತರ ಅವಳು ಆಸ್ಪತ್ರಿಯಲ್ಲಿ ಸತ್ತಳೆಂದೂ ಸರಕಾರಿ ಪಕ್ಷದ ವರದಿಯಾಗಿದೆ.

## ೪. ಸ್ತ್ರೀಯರಿಗೆ ಪ್ರಾತಿನಿಧ್ಯ.

ಬಂಗಾಲ ಪ್ರಾಂತದ ಹೊಸ ಮಂತ್ರಿಮಂಡಳದಲ್ಲಿ ಸ್ತ್ರೀಯರಲ್ಲಿ ಒಬ್ಬರನ್ನು ಮಂತ್ರಿಯನ್ನಾಗಿ ತೆಗೆದುಕೊಂಡಿದ್ದಾರೆ.

ಪ್ರತಿಯೊಂದು ಪ್ರಾಂತದಲ್ಲಿ ಹೀಗೆ ಪ್ರಾತಿನಿಧ್ಯ ಕೊಟ್ಟರೆ ಯೋಗ್ಯವಾಗುವದು.

## ೫. ಸುದ್ದಿಗಳು.

(೧) ಅಂದಮಾನದ ನಡುಗಡ್ಡೆಯ ಹತ್ತಿರಿದ್ದ ಕಾರನಿಕೋಬಾದಲ್ಲಿ ಸ್ತ್ರೀ ಪ್ರಧಾನ ಸಮಾಜ ಜೀವನವಿರುತ್ತದೆ. ವೈವಾಹಿಕ ನಡತೆಗಳು ಸಹ ಇಲ್ಲಿ ವಿಚಿತ್ರ ವಿರುತ್ತವೆ. ಯಾವುದೇ ಗಂಡಸು-ಹೆಂಗಸು ಇಬ್ಬರು ಪ್ರೇಮದಿಂದ ಇರಹತ್ತಿದರೆ ಮತ್ತು ಅವರು ಸಂಸಾರ ಹೂಡುವದನ್ನು ನಿಶ್ಚಯಿಸಿದರೆ, ಅವರಿಗೆ ಪತಿ-ಪತ್ನಿ ಎಂದು ಕೂಡಿ ಇರಬೇಕಾದರೆ ಒಂದು ಸಾದಾ ಔಪಚಾರಿಕ ಸಮಾರಂಭದೊಳಗಿಂದ ಹೋಗಬೇಕಾಗುತ್ತದೆ. ಕೆಲವು ಕಾಲದನಂತರ ಅವರಲ್ಲಿ ಮನಸ್ತಾಪ ಉಂಟಾದರೆ ಎರಡನೇ ಜೊತೆಗಾರರನ್ನು ನೋಡಲು ಸ್ವಾತಂತ್ರ್ಯವಿರುತ್ತದೆ. ಬಹುತರವಾಗಿ ಈ ಲಗ್ನ-ಬಂಧನ ಮುರಿಯುವದಿಲ್ಲ. ಆದರೆ ಹೆಣ್ಣುಮಗಳು ಎರಡನೇ ಗಂಡನು ಹೆಚ್ಚು ಅನುಕೂಲಸ್ಥನೆನಿಸಿದ್ದರಿಂದ, ಅವಳೇ ಬಿಡುಗಡೆ ಮಾಡಿಕೊಂಡು ಎರಡನೇ ಸಂಬಂಧ ಬೆಳೆಸುತ್ತಾಳೆ. ಮಕ್ಕಳೆಲ್ಲರು ತಾಯಿಯ ಹತ್ತಿರವೇ ಇರುತ್ತಾರೆ. ಅವಳ ಹೆಸರನ್ನೇ ಹಚ್ಚುತ್ತಾರೆ. ಗಂಡಸರು ತಮ್ಮ ಸಂತತಿಯ ಸಲುವಾಗಿ ಯಾವ ಶ್ರಮ ವನ್ನೂ ವಹಿಸುವದಿಲ್ಲ. ಆದ್ದರಿಂದ ಅವನ ಹಕ್ಕಾದರೂ ಎಲ್ಲಿಂದ ಬರಬೇಕು? ಮಕ್ಕಳ ಸಂರಕ್ಷಣೆ, ಅಡಿಗೆ, ಮನೆವ್ಯವಸ್ಥೆ, ಈ ಎಲ್ಲ ಹೊಣೆಗಾರಿಕೆಗಳು ಹೆಣ್ಣು ಮಗಳೇ ಹೊತ್ತಿದ್ದರಿಂದ ಅವಳ ಕೈ ಮೇಲೆ ಇರುತ್ತದೆ. ಎಷ್ಟೋ ಹೆಣ್ಣುಮಕ್ಕಳು ಆರಕ್ಕಿಂತ ಹೆಚ್ಚುಜನ ಗಂಡಂದಿರನ್ನು ತಮ್ಮ ಸೇವೆಗೆ ಇಟ್ಟುಕೊಂಡದ್ದು ಕಂಡುಬರು ತ್ತದೆ. ಆದರೆ ಒಂದು ವೇಳೆಯಲ್ಲಿ ಒಬ್ಬನೇ ಗಂಡನಿರುತ್ತಾನೆ. ಈ ಪದ್ಧತಿಯಿಂದ ಅವರ ಕೋಶದಲ್ಲಿ ವ್ಯಭಿಚಾರ, ಜಾರತನ, ವೇಶ್ಯಾವೃತ್ತಿ, ಬಲತ್ಕಾರ ಮುಂತಾದ ಪಟ್ಟಣವಾಸಿಗಳ ಶಬ್ದಗಳು ಎಲ್ಲಿಂದ ಬರಬೇಕು?

### ವಿರೂಪಗೊಂಡ ಮಹಿಳೆಯರು.

ಡಾಕ್ಟರರು ವಿರೂಪವನ್ನು ಹೋಗಲಾಡಿಸಿ ರೂಪವತಿಯರನ್ನಾಗಿ ಮಾಡ ಬಹುದೆಂದು ಹೇಳಿದ್ದಾರಂತೆ.

ಮದುವೆಯ ವಿಷಯದಲ್ಲಿ ಸ್ತ್ರೀಯರು ರೂಪಕ್ಕೇ ಹೆಚ್ಚು ಮಹತ್ವ ಕೊಡುತ್ತಾರೆ. ಸ್ತ್ರೀಯರು ತಮ್ಮ ರೂಪಕ್ಕೆ ತಾವೇ ಮಹತ್ವಕೊಡುತ್ತ ಹೋದರೆ ಮದುವೆಯ ಪ್ರಶ್ನೆ ಇನ್ನೂ ಜಟಿಲವಾಗಬಹುದು. ರೂಪಕ್ಕಿಂತ ಗುಣ, ಯೋಗ್ಯತೆ ಇವುಗಳಿಗೆ ಹೆಚ್ಚು ಮಹತ್ವ ಕೊಡುವದು ಒಳಿತು.

## ೬. ವಿರೂಪಗೊಂಡ ಮಹಿಳೆಯರು.

ಟೋಕಿಯೋ—೧೯೪೫ ರಲ್ಲಿ ಬಿದ್ದ ಅಣುಬಾಂಬಿನಿಂದ ೯ ಜಪಾನಿ ಹುಡಿಗೆಯರು ವಿರೂಪಗೊಂಡಿದ್ದು ತಮ್ಮ ವಿರೂಪವನ್ನು ಹೋಗಲಾಡಿಸಿಕೊಂಡು ಮದುವೆಗೆ ಯೋಗ್ಯರಾಗಬೇಕೆಂಬ ಹಂಬಲದಿಂದ ಟೋಕಿಯೋಕ್ಕೆ ಸರ್ಜನರ ಕಡೆಗೆ ಹೋಗಿದ್ದಾರಂತೆ.

## ೭. ೫ ವರ್ಷದ ಬಾಲಿಕೆಯ ಮೇಲೆ ಅತ್ಯಾಚಾರ.

ಮಂಡಿ—೨೭. ಮಂಡಿ ಮೋಹಲ್ಲಾದಲ್ಲಿ ಉಸ್ಮಾನ್ ಎಂಬ ೨೦ ವರ್ಷದ ತರುಣನು ಅದೇ ಮೊಹಲ್ಲಾದ ಮಮತಾಜ್ ಎಂಬ ೫ ವರ್ಷದ ಬಾಲಕಿಯ ಮೇಲೆ ಬಲವಂತದಿಂದ ಅತ್ಯಾಚಾರ ನಡೆಸಿದ್ದರಿಂದ ಸದರಿ ಹುಡುಗಿಯನ್ನು ಕೃಷ್ಣ ರಾಜೇಂದ್ರ ಆಸ್ಪತ್ರೆಗೆ ದಾಖಲಮಾಡಲಾಗಿದೆ.

ಈ ರೀತಿ ನರಪಿಶಾಚಿಗಳ ಬಲಿಗೆ ನಮ್ಮ ಎಷ್ಟೋ ತರುಣಿಯರೂ ,ಸಣ್ಣ ಬಾಲಕಿಯರೂ ತುತ್ತಾಗಿರುವ ಸಂಗತಿಯು ಪ್ರತಿದಿನವೂ ಕೇಳುತ್ತಲೇ ಇದ್ದೇವೆ. ಈ ನರರಾಕ್ಷಸರ ಸಂಹಾರಕ್ಕಾಗಿ ಹೆಣ್ಮಕ್ಕಳೊಂದು ಉಪಾಯ ಕೈಕೊಂಡ ಹೊರತು ಗತ್ಯಂತರವಿಲ್ಲ.

## ೮. ಜೋರ್ಡಾನ ಮಹಿಳೆಯರ ಪ್ರಗತಿ.

ಸಿಫೂನ—೨ ಜೋರ್ಡಾನ ಮಹಿಳೆಯರನ್ನು ಮೊದಲನೆಯ ಬಾರಿ ಸರಕಾರಿ ಕೆಲಸದಲ್ಲಿ ಸೇರಿಸಿಕೊಂಡಿದ್ದಾರೆ. ಅಮ್ಮಾನ ಹಾಗೂ ಜೆರುಸಲೇಮ ಟೆಲಿಫೋನ ಕಚೇರಿಗಳಲ್ಲಿ ೩೬ ಹುಡಿಗೆಯರನ್ನು ಕೆಲಸಕ್ಕೆ ತೆಗೆದುಕೊಳ್ಳಲಾಗಿದೆ.

ಮಹಿಳೆಯರಿಗೆ ಈ ಬಗೆಯ ಅವಕಾಶ ಕೊಟ್ಟಿರುವದನ್ನು ಜನತೆ ಸ್ವಾಗತಿಸಿದೆ.

## ೯. ಶ್ರೀಮತಿ ಕುಟ್ಟಿಮ್ಮ ರೆಡ್ಡಿ.

ಮದ್ರಾಸ ಕಾಂಗ್ರೆಸ ಶಾಸನ ಸಭೆ ಪಕ್ಷದ ಕಾರ್ಯನಿರ್ವಾಹಕ ಸಮಿತಿಗೆ ಶ್ರೀಮತಿ ಕುಟ್ಟಿಮ್ಮ ರೆಡ್ಡಿಯವರು ಆಯಲ್ಪಟ್ಟರು.

ಅಭಿನಂದನೀಯ ಸಂಗತಿ !

## ೧೦. ವಿದೇಶದಲ್ಲಿ ಭಾರತೀಯ ಮಹಿಳೆಯ ಕಾರ್ಯ.

ಮೊಂಬಾಸದಲ್ಲಿ ಭಾರತೀಯ ಮಹಿಳೆ ಶ್ರೀಮತಿ ಸೊಂಧಿ ಇವರು ಅಲ್ಲಿಯ ಮುನಸಿಪಲ್ ಬೋರ್ಡಿಗೆ ಸದಸ್ಯರಾಗಿದ್ದಾರೆ. ಅಂದರೆ ಹೆಸರಿಗೋಸ್ಕರ ಸದಸ್ಯರಾಗಿಲ್ಲ. ಬಡವರ ವಸತಿಗೃಹಕ್ಕಾಗಿ ೧೪,೦೦೦ ರೂ.ಗಳನ್ನು ಬೋರ್ಡಿನಿಂದ ಮಂಜೂರ ಮಾಡಿಸಿದ್ದಾರೆ.

## ೧೧. ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜದ ಉದ್ಘಾಟನೆ.

ಧಾರವಾಡ—ದಿ. ೧೨. ರಂದು ವನಿತಾಸೇವಾ ಸಮಾಜದಲ್ಲಿ ಸಾಯಂಕಾಲ ೫ ಘಂಟೆಗೆ ಧಾರವಾಡದ ಸುಪ್ರಸಿದ್ಧ ವಕೀಲರಾದ ಶ್ರೀ. ಎನ್. ಕೆ. ದೀಕ್ಷಿತ ದಂಪತಿಗಳ ಹಸ್ತದಿಂದ ಹೆ. ಮ. ಟ್ರೇ. ಕಾಲೇಜದ ಉದ್ಘಾಟನೆಯಾಯಿತು.

## ೧೨. ಅನ್ಸಾರರು ಪಾಕ್-ಪೋಲಿಸರ ಸಹಾಯದಿಂದ ಹಿಂದೂ ತರುಣಿಯೊಬ್ಬಳನ್ನು ಓಡಿಸಿಕೊಂಡು ಹೋದರು.

ಕಲಕತ್ತೆಯಲ್ಲಿ ೬೦ ವರ್ಷದ ಹಿಂದೂ ಮುದುಕನೊಬ್ಬನು ೧೮ ವರ್ಷದ ತನ್ನ ಮಗಳೊಡನೆ ಪ್ರವಾಸ ಮಾಡುತ್ತಿದ್ದಾಗ, ಅನ್ಸಾರರು ಡಬ್ಬಿಯಲ್ಲಿ ಒಳಸೇರಿ ಪಾಕ್ ಪೋಲಿಸರ ಸಹಾಯದಿಂದ ಅವಳನ್ನು ಓಡಿಸಿಕೊಂಡು ಹೋದರು. ಡಬ್ಬಿಯಲ್ಲಿ ಜನದಟ್ಟಣೆಯಿತ್ತು, ಪೋಲಿಸರಿದ್ದರು, ಆದರೆ ಮುದುಕನ ಬೆಂಬಲಕ್ಕೆ ಮಾತ್ರ ಒಬ್ಬರೂ ಬರಲಿಲ್ಲ.

ಮುದುಕನು ಪಾಕಿಸ್ತಾನದ ಒಂದು ಹಳ್ಳಿಯಿಂದ ತನ್ನ ಮಕ್ಕಳೊಡನೆ ಪಶ್ಚಿಮ ಬಂಗಾಲದಲ್ಲಿ ವಾಸಮಾಡಲು ಹೊರಟಿದ್ದನು. ಮುದುಕನ ಹೆಸರು ಕಾಲಿಪದ ಮುಖರ್ಜಿ ನಡೆದ ವಿಷಯವನ್ನು ಕುರಿತು ಅವನನ್ನೇ ಕೇಳಲಾಗಿ ಈ ರೀತಿ ಹೇಳಿದನು.

“ಕೆಲ ಅನ್ಸಾರರು ನನ್ನ ಮೂವರು ಹೆಣ್ಣುಮಕ್ಕಳನ್ನು ಅಪಹರಿಸಿಕೊಂಡೊಯ್ಯುವ ವಿಚಾರದಲ್ಲಿದ್ದಾರೆಂದು ನನಗೆ ಹೋದ ಮೇ ತಿಂಗಳ ಪ್ರಾರಂಭಕ್ಕೆ ತಿಳಿಯಿತು. ಈ ವಿಚಾರ ತಿಳಿದೊಡನೆಯೇ ಮನೆಮಾರು ತೊರೆದು ನನ್ನ ಮೂವರು ಹೆಣ್ಣುಮಕ್ಕಳೊಡನೆ ಪಶ್ಚಿಮ ಬಂಗಾಲಕ್ಕೆ ಹೊರಡಲು ಟಿಕೆಟ್ ಕೊಳ್ಳಲೆಂದು ನಿಲ್ದಾಣಕ್ಕೆ ಹೋದೆನು, ಅಲ್ಲಿ ಆ ಅನ್ಸಾರರು ಮತ್ತೆ ಕಾಣಿಸಿಕೊಂಡರು. ನಾನು ನನ್ನ ಪ್ರವಾಸವನ್ನು ಮುಂದೂಡಿದೆನು. ಬಳಿಕ ಒಂದು ದಿನ ರಾತ್ರಿ ೧೧ರ ಗಾಡಿಗೆ ನನ್ನ ಮಕ್ಕಳೊಡನೆ ಹೊರಟು ಬೆಳಗಿನಜಾವದಲ್ಲಿ ಪರಿದಾಹ ನಿಲ್ದಾಣಕ್ಕೆ ಬಂದು ಮುಟ್ಟಿದೆನು. ಆಗಲೇ ಒಬ್ಬ ಅನ್ಸಾರನು ಬಂದು ನನ್ನ ಹಿರಿಯ ಮಗಳನ್ನು ಕೈಹಿಡಿದೆಳೆದನು. ನಾನು ಅವಳನ್ನೆಳೆದುಕೊಳ್ಳುವಷ್ಟರಲ್ಲಿಯೇ ಪಾಕ್-ಪೋಲಿಸನೊಬ್ಬನು ನನ್ನ ಎದೆಗೆ ಗುಂಡು ಹೊಡೆದನು. ನಾನು ಎಚ್ಚರದಪ್ಪಿ ಬಿದ್ದವನು ಬಹಳ ಹೊತ್ತಿನ ತರುವಾಯ ಎದ್ದು ನೋಡುವಷ್ಟರಲ್ಲಿ ನನ್ನ ಹಿರಿಯ ಮಗಳು ಕಾಣದಾಗಿದ್ದಳು. ನನ್ನೊಡನಿದ್ದ ಹಿಂದೂ ಪ್ರವಾಸಿಗಳು ಕೂಡ ಅನ್ಸಾರರೊಡನೆ ಹೋರಾಡಲು ಸಮರ್ಥರಾಗಲಿಲ್ಲ.

ಪಶ್ಚಿಮ ಬಂಗಾಲದ ಮುಖ್ಯಮಂತ್ರಿಗಳಾದ ಡಾ. ಬಿಧನಚಂದ್ರ ರಾಯರಿಗೆ ಈ ಬಗ್ಗೆ ಪತ್ರ ಬರೆದಿದ್ದೇನೆ. ಆದರೆ ಮಗಳ ಪತ್ತೆ ಮಾತ್ರ ಇನ್ನೂ ಆಗಿಲ್ಲ.”



# ರಾಮು ರಹೀಮು ಕೃಷ್ಣಕರೀಮ್ (ಕಥೆ)

ಲೇಖಕಿ :— ವೆಂಕವ್ಮ ಕೋಯಮುತ್ತೂರ, ಧಾರವಾಡ.

> ಜನತೆಯಲ್ಲಿ ಘರ್ಷಣವನ್ನುಂಟು ಮಾಡುವದು ಜಾತೀಯತೆಯ ಅಂಥ ಶ್ರದ್ಧೆಯೇ ಹೊರತು ಮೂಲತತ್ವದ ಪ್ರಕಾಶವಲ್ಲ ; ಧರ್ಮದ ತಿರುಳನ್ನರಿಯುವದಾದರೆ ಫಾತಿಮಾ ಕಮಲೆಯರಂತೆಯೇ ಇರಬಹುದಲ್ಲ !

"ಹೋಗಿ ಬರುತ್ತೇನೆ ಫಾತಿಮಾ, ಭದ್ರವಾಗಿ ಬಾಗಿಲು ಅಗಳಿ ಹಾಕಿಕೊ, ಹೆದರಬೇಡ, ಬೇಗಬರುವೆ" ಬಾಗಿಲ ಪರದೆಯನ್ನು ಓರೆಮಾಡಿ ಫಾತಿಮಾಳನ್ನು ಕಣ್ತುಂಬ ನೋಡಿ ಹೇಳಿದ ಕಾಸಿಂ. ಫಾತಿಮಾಳು ತಲೆಯಲ್ಲಾಡಿಸಿದಳು. ಅದಕ್ಕುತ್ತರವಾಗಿ. ಪುನಃ ಕಾಸಿಮನು ಪರದೆಯನ್ನು ಮರೆಮಾಡಿ ತೆರಳಿದ. ಫಾತಿಮಾಳಿಗೆ ಇಂದೇಕೋ ಕಾಸಿಮನನ್ನು ಹೋಗಬಾರೆಂದು ಹೇಳಲು ಬಾಯಿಬಾರದಾಯ್ತು. ಕಣ್ತುಂಬ ನೀರುತಂದಳು. ಗಂಡನು ಹೋಗುತ್ತಿರುವ ಕಡೆಗೇ ದೈನ್ಯದಿಂದ ನೋಡುತ್ತಿದ್ದಳು. ಕಾಸಿಮನಿಗೆ ಫಾತಿಮಾಳ ದೈನ್ಯ ಮುಖವು ಕಣ್ಮುಂದೆ ಕಟ್ಟಿ ಮನಸ್ಸು ಅತ್ತ ಎಳೆದರೂ ಸಹ ಅದನ್ನು ಬಿಗಿಹಿಡಿದು ಮೆಲ್ಲನೆ ಮನೆಯಿಂದ ದೂರ ದೂರ ಜಾರಿದ. ಫಾತಿಮಾಳು ಬಾಗಿಲ ಮರೆಯಲ್ಲೇ ನಿಂತು ಗಂಡನು ಹೋಗುವವರೆಗೂ ಕಾತರಭಾವದಿಂದ ನೋಡುತ್ತಿದ್ದಳು. ಕಾಸಿಮನು ಮನೆಮರೆಯಾಗುವವರೆಗೂ ಹಿಂದೆ ತಿರುತಿರುಗಿ ನೋಡುತ್ತಿದ್ದ, ಮರೆಯಾಗುವಾಗ ಅಲ್ಲಿಂದಲೇ ಹೋಗಿಬರುವೆನೆಂದು ಸೂಚಿಸಲು ತನ್ನ ಕರವಸ್ತ್ರವನ್ನು ಮೇಲೆತ್ತಿ ಫಾತಿಮಾಳಿಗೆ ಬಾಗಿಲು ಹಾಕಿಕೊಳ್ಳುವಂತೆ ಸೂಚಿಸಿದ. ಅವನ ಮನಸ್ಸು ಇಂದೇಕೋ ವಿಚಿತ್ರ ಶಂಕೆಗೆ ಒಳಗಾಗಿತ್ತು. ಫಾತಿಮಾಳನ್ನು ನೋಡುವದು ಇದೇ ಕಡೆಯದೇನೋ ಎನಿಸುತ್ತಿತ್ತು "ನನಗೇಕೆ ಈ ರೀತಿ ಹೆದರಿಕೆ ಬರುತ್ತಿದೆ? ನಾನೇನು ಹೆಂಗಸೇ? ದಿನವೂ ಇದೇ ಕಾರ್ಯಕ್ಕಾಗಿ ಓಡಾಡುವ ನನಗೆ ಇಂದೇಕೆ ಈ ರೀತಿ ಹೆದರಿಕೆ?" ಎಂದು ಮನಸ್ಸಿಗೆ ಧೈರ್ಯತಂದುಕೊಂಡು ಹೊರಟ.

ಇತ್ತ ಫಾತಿಮಾಳ ಮನಸ್ಸು ಏಕೋ ಇಂದು ಬಹಳ ವೇದನೆಯಿಂದ ತಳಮಳಗೊಳ್ಳುತ್ತಿತ್ತು. ಯಾರೋ ಅವಳ ಕಿವಿಯಲ್ಲಿ "ಹುಚ್ಚೀ! ಇಂದು ಗಂಡನನ್ನು ಹೋಗಗೊಡಬೇಡ, ಹಿಂದಿರುಗಿ ಬಾರೆಂದು ಕರೆ. ಹೊರಟ, ಹೊರಟ! ಹೊರಟೇಬಿಟ್ಟ!! ಬಹುದೂರ ಹೋದ, ಬೇಗಕರಿ" ಎಂದು ಪಿಸುಗುಟ್ಟಿದಂತಾಯ್ತು. ಇವೆಲ್ಲವೂ ತನ್ನ ಭ್ರಮೆ; ದೇಶದ ಪರಿಸ್ಥಿತಿಯು ಜಾತೀಯತೆಯಿಂದ ಕೆಟ್ಟಿರುವ ಮೂಲಕ ತನಗೀರೀತಿಯಾಗುತ್ತಿದೆಯೆಂದು ತನಗೆ ತಾನೇ ಸಮಾಧಾನಪಡಿಸಿಕೊಂಡು

ಬಾಗಿಲು ಮುಚ್ಚಿ ಒಳಹೊಕ್ಕಳು. ಒಳಗೆ ತೂಗುಹಾಕಿದ್ದ ಕಾಸೀಮನ ತಸ್ವೀರಿನ ಮುಂದೆ ನಿಂತಳು. ಕಣ್ಣನ್ನು ಅತ್ತಿತ್ತ ಹೊರಳಿಸುವ ಮನಸ್ಸಾಗಲಿಲ್ಲ. ಅವಳಿಗೆ, ಕಾಸಿಮನು ಹೊರಡುವ ಮೊದಲು "ಫಾತಿಮಾ ಚಿಂತೆಬೇಡ, ಬೇಗಬರುವೆ. ಬಾಗಿಲು ಭದ್ರ. ಯಾರು ಬಂದರೂ ಬಾಗಿಲು ತೆರೆಯಬೇಡ" ಎಂದು ಹೇಳಿದ ವಾಕ್ಯವು ಕಿವಿಯಲ್ಲಿ ಒಂದೇಸವನೆ ಬಡಿಯುತ್ತಿತು. ತಸ್ವೀರಿನ ಮುಂದೆ ನಿಂತು ನಿಂತು ಸಾಕಾಗಿ ಕಾಲುಕಿತ್ತಲಾರದೆ ಕಿತ್ತಿ ಹಾಸಿಗೆಯಮೇಲೊರಗಿದಳು.

* * * * *

ಕೃಷ್ಣನಗರವು ದೊಡ್ಡ ಊರಲ್ಲದಿದ್ದರೂ ಸಣ್ಣ ಹಳ್ಳಿಯಲ್ಲ. ನಾಲ್ಕಾರು ಸರಕಾರಿ ಆಫೀಸ, ಒಂದು ಹ್ಯಾಸ್ಕೂಲ,ಒಂದೆರಡು ಪ್ರಾಥಮಿಕ ಶಾಲೆಗಳಿದ್ದ ಊರು. ದೇಶದಲ್ಲೆಲ್ಲ ಎದ್ದುನಿಂತ ಜಾತಿಯ ಗೊಂದಲದ ಝಳವು ಅಲ್ಲಿಗಾದರೂ ಬಡಿಯದೆ ಬಿಡಲಿಲ್ಲ. ಕಾಸಿಮನು ಈ ಊರಿನ ಹ್ಯಾಸ್ಕೂಲಿನಲ್ಲಿ ಒಬ್ಬ ಮಾಸ್ತರನು, ಗಲಭೆಯ ಮೂಲಕ ಶಾಲೆಗಳನ್ನು ಮುಚ್ಚಿದ್ದರಿಂದ, ಮನೆಯಲ್ಲಿ ಸುಮ್ಮನೆ ಕೂಡುವ ಚಟವಿಲ್ಲದ ಕಾಸಿಮನು ಹಿಂದು ಮುಸ್ಲೀಮರ ಐಕ್ಯತೆಗಾಗಿ ಒಂದು ಸಂಘವೇರ್ಪಡಿಸಿ ಊರಿನಲ್ಲಿ ಅಲ್ಲಲ್ಲಿ ಭಾಷಣಮಾಡಿ, "ದೊಡ್ಡ ದೊಡ್ಡ ಊರುಗಳಲ್ಲಿ ಅವರವರ ಅಂತಃಕಲಹದ ಮೂಲಕ ಅಥವಾ ರಾಜಕಾರಣದಲ್ಲಾದ ಕಲಹಗಳ ಮೂಲಕ ಅಲ್ಲಿಯ ಜನರು ಬಡಿದಾಡುತ್ತಿದ್ದರೆ, ನಾವೇಕೆ ಅವರನ್ನು ಅನುಸರಿಸಬೇಕು ? ಇಷ್ಟು ದಿನಗಳ ವರೆಗೆ ಅಣ್ಣತಮ್ಮಂದಿರಂತೆ ನಾವು ಈ ಊರಿನಲ್ಲಿದ್ದು ಈಗೇಕೆ ಒಬ್ಬರನ್ನೊಬ್ಬರು ದ್ವೇಷಿಸಬೇಕು ? ಈ ವಿಷಯದಲ್ಲಿ ನಾವು ಏನೂ ವಿಚಾರಮಾಡದೆ ಇತರರನ್ನು ಅನುಸರಿಸುವದು ಸರಿಯೆ ? ಬಂಧುಗಳೇ, ಇನ್ನು ಮುಂದಾದರೂ ವಿಚಾರಮಾಡಿ ಈ ಕಾರ್ಯಕ್ಕೆ ಕೈಹಾಕಿರಿ" ಎಂದು ನಾನಾ ರೀತಿಯಲ್ಲಿ ಉಪದೇಶಿಸುತ್ತಿದ್ದ. ಊರಿನಲ್ಲಿ ಶಾಂತತೆ ಕಾಯಲು ಪ್ರಯತ್ನಿಸುತ್ತಿದ್ದ. ಇಂಥಾದರೂ ಕಾಸಿಮನು ಇದೇ ಕಾರ್ಯಕಾಗಿ ಹೊರಟಿದ್ದನು. ಆದರೆ ಒಂದು ತತ್ವದ ಹೆಸರಿನ ಕೆಳಗೆ ಮತ್ತೊಂದು ದುರ್ಲಾಭ ತೆಗೆದುಕೊಳ್ಳುವ ದುರ್ಬುದ್ಧಿಯ ಜನರು ಇದರ ಕಡೆಗೆ ಲಕ್ಷಿಸುತ್ತಿರಲಿಲ್ಲ. ಅಲ್ಲಾದರೂ ಎಲ್ಲ ಊರುಗಳಂತೆಯೇ ಹಿಂದು ಮುಸ್ಲೀಮರು ಪರಸ್ಪರರ ಮನೆಗೆ ನುಗ್ಗಿ ದಾಳಿ ನಡೆಸಿದ್ದರು. ಎಷ್ಟೋ ಮಕ್ಕಳ ಕೊಲೆ, ಸ್ತ್ರೀಯರ ಮಾನಹರಣ, ಮುದುಕರ ಗೋಳು ಆಗುತ್ತಿತ್ತು. ಅಂತೂ ಒಂದು ನರಕ ಕೂಪವೇ ಆ ಊರಾಗಿ ತೋರ್ನಲಡ್ಡಿಯಿಲ್ಲ. ಇಂಥ ಭಯಂಕರ ಗದ್ದಲ ನಡೆದಿರುವ ಸಮಯದಲ್ಲಿ ಫಾತಿಮಾಳಿಗೆ ಒಬ್ಬಳೇ ಮನೆಯಲ್ಲಿರಲು ಹೆದರಿಕೆಬರುವದರಲ್ಲೇನಾಶ್ಚರ್ಯ ? ಅಂತೆಯೇ ಅವಳು ಇಂದು ತನ್ನನಲ್ಲನನ್ನಗಲಲು ಅಷ್ಟು ಗಾಬರಿಯಾಗಿದ್ದಳು. ಎಲ್ಲ ಕುಲೀನ ರಮಣಿಯರಂತೆ ಅವಳಿಗಾದರೂ ತನ್ನ ಪಾವಿತ್ರ್ಯದ ಸಲುವಾಗಿ ಗುಂಡಾ ಜನರ ಭಯವಿತ್ತು.

× × × × ×

"ಅಯ್ಯೋ! ಅಣ್ಣಂದಿರಾ!! ನಿಮಗೆ ತಂಗಿಯರಿಲ್ಲವೇ? ಬಂಧುಗಳೇ! ಯಾರಲ್ಲಿ? ಯಾರಾದರೂ ನನ್ನನ್ನು ಈ ಪಾಪಿಗಳ ಕೈಯಿಂದ ಬಿಡಿಸಬಾರದೆ? ಅಯ್ಯೋ! ಸತ್ತೇ........ಸತ್ತೇ!........"

ಕಾಸಿಮನು ಈ ಆರ್ತ ನಾದದ ಕಡೆಗೆ ಧಾವಿಸಿದ. ಹಿಂದೂ ರಮಣಿಯೋರ್ವಳನ್ನು ನಾಲ್ವರು ಮುಸ್ಲೀಮರು ಹಿಡಿದೆಳೆಯುತ್ತಿದ್ದಾರೆ! ತರುಣಿಯು ಬಿಡಿಸಿಕೊಳ್ಳಲು ಆದಷ್ಟು ಪ್ರಯತ್ನ ನಡಿಸಿದ್ದಾಳೆ. ಆದರೆ! ಪಾಪ, ನಾಲ್ಕು ಹುಲಿಗಳ ನಡುವೆ ಸಿಕ್ಕ ಹರಿಣಿ ಮಾಡಬಲ್ಲದೇನು? ಅದರಲ್ಲೂ ತುಂಬ ಗರ್ಭಿಣಿ. ಇದನ್ನು ನೋಡಿದ ಕಾಸಿಮನು ಸಿಟ್ಟುಬೆಂಕಿಯಾದ. ಅವನಿಗೆ ಕೂಡಲೇ ಫಾತಿಮಾಳ ನೆನಪಾಯ್ತು. "ಅಯ್ಯೋ! ನನ್ನ ಫಾತಿಮಾಳಿಗೆ ಹೀಗಾದರೆ ನಾನೆಂದಾದರೂ ಸುಮ್ಮನಿರುತ್ತಿದ್ದೆನೇ?" ಕಾಸಿಮನ ಎದೆ ಝುಲ್ಲೆಂದಿತು. ಫಾತಿಮಾಳ ಖಿನ್ನಮುಖವು ಎದುರು ನಿಂತಿತು. "ಬೇಗ ಬಾ ಕಾಸಿಂ" ಎನ್ನುತಿತ್ತು ಆ ಮುಖ. ಕಾಸಿಮನು ಒಂದೇ ಉಸುರಿನಲ್ಲಿ ಓಡಿಬಂದು "ಖಬರದಾರ" ಎಂದು ಒದರಿದ. ಆದರೆ ಜಾತಿಯ ಅಭಿಮಾನದ ಸೋಗನ್ನು ಹಾಕಿ, ತಮ್ಮ ಹುಚ್ಚುಹಸಿವನ್ನು ತೃಪ್ತಿಪಡಿಸಿಕೊಳ್ಳ ಹೊರಟ ಆ ನರಪಿಶಾಚಿಗಳಿಗೆಲ್ಲಿ ಕೇಳಿಬರಬೇಕು ಈ ಕೂಗು? ಕಾಸಿಮನು ಕೂಡಲೇ ತನ್ನ ಅಪಾಯಕರ ಸೂಚಕ ಸೀಟಿಯನ್ನೂದಿ ತನ್ನ ಜನರಿಗೆ ಸೂಚನೆ ಕೊಟ್ಟು ತಾನು ಆ ದೈತ್ಯರ ಗುಂಪಿನೊಳ ನುಗ್ಗಿದ. ಕೈಗೆ ಸಿಕ್ಕ ಇಬ್ಬರನ್ನು ಹೊಡೆದು ಕೆಡವಿದ. ಸ್ತ್ರೀಯಳನ್ನು ಹಿಂದಕ್ಕೆಳೆದುಕೊಂಡ; ಉಳಿದವರು ಅವಳ ಮೇಲೆ ನುಗ್ಗದಂತೆ ತಾನು ಅಡ್ಡನಿಂತ; ಕೈಲಿ ಪಿಸ್ತೂಲ ತೆಗೆದ.

ಇಷ್ಟು ಗೊಂದಲವಾಗುವದರೊಳಗೆ ಕಾಸಿಮನ ಜನರು ಓಡಿಬಂದರು. ಆದರೆ ಅಷ್ಟರಲ್ಲೇ ಕಾರ್ಯವು ಮಿಂಚಿಹೋಗಿತ್ತು. ಕಾಸಿಮನ ಎದೆಗೆ ಯಾರೋ ವೈರಿಗಳು ಚೂರಿ ಹಾಕಿದ್ದರು. ಅವನ ಜನರನ್ನು ನೋಡಿದೊಡನೆ ವೈರಿಗಳು ಕಾಲ್ಕಿತ್ತರು. ತರುಣಿಯು ಕಾಸಿಮನ ಬಳಿ ಕುಳಿತು ಬಿಕ್ಕಿ ಬಿಕ್ಕಿ ಅಳಹತ್ತಿದಳು. ಕಾಸಿಮನು ಒಮ್ಮೆ ಕಣ್ದೆರೆದು ನೋಡಿ, "ತಂಗೀ! ನಿನ್ನ ಅತ್ತಿಗೆ ಫಾತಿಮಾಳಿಗೆ ಈ ವಿಷಯವನ್ನು ತಿಳಿಸು. ನಾನಿನ್ನು ಹೋಗಿಬರುವೆ." ಎಂದು ಹೇಳಿ ಕಣ್ತುಂಬ ನೀರು ತಂದು ಕಣ್ಮುಚ್ಚಿದ. "ಅಣ್ಣಾ! ನನ್ನ ಮಾನರಕ್ಷಣೆಗಾಗಿ ನೀನು ಬಲಿಯಾದೆಯಾ? ಅಯ್ಯೋ! ಇದೆಂಥ ನ್ಯಾಯ!! ಏನು ಮಾಡಲಣ್ಣಾ? ಇಂದಿನವರೆಗೂ ಮುಸಲ್ಮಾನರೆನ್ನುವವರೆಲ್ಲಾ ಕ್ರೂರಿಗಳೇ ಎಂದು ತಿಳಿದಿದ್ದೆ ನಾನು. ಆದರಿಂದು ನನಗೆ ನಿಮ್ಮ 'ಅಲ್ಲಾ'ನ ಗುಣ ತಿಳಿಯಿತು. ನಿಮ್ಮಲ್ಲೂ ಮಾನವತೆ ಇದೆ ಎಂಬುದರಿತೆನು."

ಕಾಸಿಮನು ಈ ವಾಕ್ಯ ಕೇಳಿ ತರುಣಿಯ ಮುಖ ನೋಡಿದ. ಮುಗುಳ್ನಗೆಯವನ ಮುಖದಲ್ಲಿ ಮೂಡಿತ್ತು. ಹೃದಯ ಉಕ್ಕಿಬಂದಿತು. ತರುಣಿಯು ಕಾಸಿ

ಮನ ತಲೆಯನ್ನು ಎತ್ತಿ ಮೆಲ್ಲನೆ ತನ್ನ ತೊಡೆಯಮೇಲಿರಿಸಿಕೊಂಡಳು. ಪ್ರೇಮದಿಂದ ತಲೆಯ ಮೇಲೆ ಕೈಯ್ಯಾಡಿಸಿದಳು.

“ ತಂಗೀ ! ಇಂದಿಗೆ ನಾನು ಧನ್ಯನಾದೆ. ಸಾಯುವದರೊಳಗಾಗಿ ‘ ಕೃಷ್ಣ ಕರೀಮರು ’ ಬೇರಲ್ಲವೆಂಬದನ್ನು ತಿಳಿಸುವ ಅಭಿಲಾಷೆಯು ನನಗಿತ್ತು. ಅಲ್ಲಾನ ಅನುಯಾಯಿಗಳೆಲ್ಲರೂ ಕ್ರೂರಿಗಳೇ ಇರುವದಿಲ್ಲೆಂದು ಜಗತ್ತಿಗೆ ತೋರಿಸಿಕೊಡ ಬೇಕೆಂದಿದ್ದೆ. ಅವರಿಗಾದರೂ ಹಿಂದುಗಳಂತೆಯೇ ಹೃದಯ, ಮನಸ್ಸುಗಳಿವೆಯೆಂಬ ದನ್ನು ತಿಳಿಸಬೇಕೆಂದಿದ್ದೆ. ಆದರದು ಈ ನಮ್ಮ ಜನರ ದುಷ್ಟ ವರ್ತನೆಯಿಂದ ಸಾಧ್ಯವಾಗಲಿಲ್ಲ. ಆದರೆ ಜಗತ್ತಿಗೆಲ್ಲವೂ ತಿಳಿಸಲಾಗದಿದ್ದರೂ ಸಹ ನಿನ್ನೊಬ್ಬಳಿ ಗಾದರೂ ಈ ವಿಷಯವು ತಿಳಿಯಿತಲ್ಲಾ ! ಇದೇ ನನ್ನ ಭಾಗ್ಯ, ಆನಂದ. ತಂಗೀ, ಇನ್ನು ನಾನು ಆನಂದದಿಂದ ಹೋಗಿಬರುವೆ. ಅತ್ತಿಗೆ ಫಾತಿಮಾಳ ಭಾರ ನಿನ್ನ ಮೇಲೆ, ನಿನ್ನ ಕೈಯಲ್ಲೇ ಒಪ್ಪಿಸಿರುವೆನವಳನ್ನು; ಕರುಣೆಯಿಂದ ನೋಡವಳನ್ನು. ನಮಸ್ತೇ.........ಹೋಗಿ.........ಬರು.....ವೆ. ”

ಕಾಸೀಮನು ದೀರ್ಘ ನಿಟ್ಟುಸಿರೊಂದನ್ನು ಬಿಟ್ಟು ಆಯಾಸದಿಂದ ಕಣ್ಮು ಚ್ಚಿದ. ತರುಣಿಗೆ ಕರುಳು ಹಿಚುಕಿದಂತಾಯ್ತು, ಕಣ್ಣಿನಿಂದ ನೀರು ಧಾರಾಕಾರವಾಗಿ ಸುರಿದು ಕಾಸಿಮನ ತಲೆಯನ್ನು ತೋಯಿಸಿತು. ಅವನ ಜನರೆಲ್ಲರೂ ಸೇರಿ ಅವನನ್ನು ಮನೆಗೆ ಸಾಗಿಸಿದರು. ಹಿಂದೂ ತರುಣಿ ಕಮಲೆಯಾದರೂ ತನ್ನ ಧರ್ಮ ಬಂಧು ಕಾಸಿಮನ ಮನೆಗೆ ತೆರಳಿದಳು.

ನಲ್ಲನಬರವನ್ನೇ ಎದುರು ನೋಡುತ್ತಿದ್ದ ಫಾತಿಮಳು ನೋಡಿದ್ದೇನನ್ನು ? ಕಾಸಿಮನ ಕಳೇಬರ ! ಅವಳು ದಿಕ್ಕೆಟ್ಟು ಮೂರ್ಛಿತಳಾದಳು. ಕಮಲೆಯ ಉಪ ಚಾರದಿಂದ ಅವಳು ಎಚ್ಚತ್ತಳು. ಕಾಸಿಮನ ಮುಖದ ಮೇಲೆ ತನ್ನೊಬ್ಬ ತಂಗಿಯ ಮಾನ ಕಾಯ್ದ ಹೆಮ್ಮೆಯು ಎದ್ದು ಕಾಣುತ್ತಿತ್ತು. ಮುಖವು ಒಳ್ಳೇ ಗಂಭೀರ ವಾಗಿತ್ತು. ಸಮಾಧಾನದ ಗೆರೆ ಮೂಡಿತ್ತು. ನಿರ್ಜೀವವಿದ್ದರೂ ಜೀವಂತ ಲಕ್ಷಣ ವಿತ್ತಾ ಮುಖದ ಮೇಲೆ. ಸಂಜೆಯ ಮುಳುಗುವ ನೇಸರನ ಕೆಂಬೆಳಗು ಮುಖದ ಮೇಲೆ ಬಿದ್ದು ಮತ್ತಷ್ಟು ವೀರ ಕಳೆಗೂಡಿಸಿತ್ತು, ಆದಕ್ಕೆ.

* * * * *

ಫಾತಿಮಾಳ ಮನೆಯ ಹಿತ್ತಲು, ಅಲ್ಲೊಂದು ಗೋರಿ. ದಿನವೂ ಸಂಜೆ ಅಲ್ಲಿಗೆ ಫಾತಿಮಾ ಮತ್ತು ಕಮಲೆಯರು ಬಂದು ಆ ಗೋರಿಗೆ ಪೂಜಿಸಿ ಕಣ್ಣೀರು ಸುರಿಸುತ್ತ ಎಷ್ಟೋ ವೇಳೆಯ ವರೆಗೆ ಮೌನದಿಂದ ಧ್ಯಾನ ಮಾಡುತ್ತಾರೆ. ಹಿಂದಿ ನಿಂದ ಪುಟ್ಟ ಕಾಸಿಮನು, ಕಮಲೆಯ ಮಗು ಪುಟ್ಟ ಪುಟ್ಟ ಹೆಜ್ಜೆ ಇಟ್ಟು ತಾಯಿ ಯೆಡೆಗೆ ಬರುವಾಗ ಫಾತಿಮಾಳು ಅವನನ್ನು ಮುದ್ದಿಸಿ, “ ಏ ತುಂಟಾ, ನಿಮ್ಮ ಮಾವ ಮಲಗಿದ್ದಾರೆ ” ಎನ್ನುತ್ತಾಳೆ ! (ತನ್ನಣ್ಣನ ಹೆಸರೆಂದು ಕಮಲೆಯು ಮಗನಿಗೆ ಅದೇ ಹೆಸರನ್ನಿಟ್ಟದ್ದಾಳೆ.) ಇಂತಿದೆ ಅವರ ದಿನದ ಪರಿಪಾಠ !!

# ಹೆಣಿಕೆ ಕಸೂತಿಯ ಬಟ್ಟೆಗಳನ್ನು ತೊಳೆಯುವ ವಿಧಾನ

ಲೇಖಕಿ :— ಸರೋಜಿನಿ.

**ಮೆರುಗಿನ ರೇಶಿಮೆಯಿಂದ ಹೊಳೆಹೊಳೆಯುವ ಕಸೂತಿಯ ಬಟ್ಟೆಗಳು ಮಾಸಿದರೂ ಮತ್ತೆ ಹೊಳಪು ಪಡೆಯುವಂತೆ, ನಿರುತ್ಸಾಹಗೊಂಡಿದ್ದ ಗೃಹಿಣಿಯ ಮನಸ್ಸೂ ಆ ಹೊಳಪಿನೊಡನೆ ಪುನಃ ಉತ್ಸಾಹಗೊಳ್ಳುವದು.**

ಮಾಸಿದ ಹೆಣಿಕೆ ಕಸೂತಿಯ ಬಟ್ಟೆಗಳನ್ನು, ಒಗೆಯುವ ಸೋಡಾ ಬಹಳ ವಾಗಿಲ್ಲದ ಸಾಬೂನಿನ ಬುರುಗಿನಲ್ಲಿ ಎದ್ದಿ ತೊಳೆಯಬಹುದು. ರೇಶಿಮೆಯ ಹೊಳಪು ಪುನಃ ಬರುವದಕ್ಕಾಗಿ ಒಂದರ್ಧ ಲಿಂಬೆಹಣ್ಣಿನ ರಸ ಕೂಡಿದ ನೀರಿನಲ್ಲಿ ಅಥವಾ ವಿನೆಗಾರ ಕೂಡಿದ ನೀರಿನಲ್ಲಿ ತೊಳೆಯಬಹುದು. ಆದರೆ ಹೆಣಿಕೆ ಕಸೂತಿಯ ಬಟ್ಟೆಗಳ ಮೇಲೆ ಇನ್ನಾವುದಾದರೂ ಕಲೆ ಕೂತಿದ್ದರೆ ಅದನ್ನು ತೆಗೆಯುವ ಬಗೆ ಹೇಗೆ? ನೂಲಿನ ಬಟ್ಟೆಗೆ ಉಪಯೋಗಿಸುವ ಉಪಾಯಗಳನ್ನೇ ಉಪಯೋಗಿಸಿದರೆ, ಕಸೂತಿಗೆ ಅಪಾಯವಾಗಬಹುದು. 'ಕಲೆ' ಸ್ವಲ್ಪ ಭಾಗದಲ್ಲಿ ಮಾತ್ರ ಬಿದ್ದಿದ್ದು ಅಷ್ಟನ್ನೇ ತೊಳೆಯಬೇಕಾಗಿದ್ದರೆ, ನೂಲಿನ ಬಟ್ಟೆಗೆ ಉಪಯೋಗಿಸುವ ಉಪಾಯವನ್ನೇ ಕೈಕೊಂಡು ಅದನ್ನು ತೊಳೆದುಬಿಡಬಹುದು. ಬಟ್ಟೆ ರೇಶಿಮೆಯದಾಗಿದ್ದರೆ?

ಬಟ್ಟೆಯ ಮೇಲೆ ಹಣ್ಣಿನ ರಸ, ಕಬ್ಬಿಣದ ಜಂಗು, ಮಸಿ, ಇತ್ಯಾದಿಗಳ ಕಲೆಗಳೇ ಬೀಳುವ ಸಂಭವ ಹೆಚ್ಚು. ಈ ಕಲೆಗಳನ್ನು ತೊಳೆಯಲು ಮೊದಲನೆಯ ಉಪಾಯವೆಂದರೆ ಕಟ್ಟಿಗೆ ಅಥವಾ ಮಣ್ಣಿನ ಪಾತ್ರೆಯೊಂದರಲ್ಲಿ (ಕಬ್ಬಿಣದ ಪಾತ್ರೆಯನ್ನು ಮಾತ್ರ ಉಪಯೋಗಿಸ ಕೂಡದು) ತಣ್ಣೀರಲ್ಲಿ ಬೆರೆಸಿದ ಬ್ಲೀಚಿಂಗ ಪಾವಡರನ್ನು ಸುರುವಿ, ಅಷ್ಟೇ ಪ್ರಮಾಣದಲ್ಲಿ ಕುದಿಯುವ ನೀರನ್ನು ಅದರಲ್ಲಿ ಬೆರೆಸಬೇಕು. ಬಳಿಕ ಬಿಸಿನೀರಲ್ಲಿ ಮೊದಲೇ ತೊಳೆದ ಕಸೂತಿಯ ಬಟ್ಟೆಯನ್ನು ಈ ಮಿಶ್ರಣದಲ್ಲಿ ಅರ್ಧತಾಸಿನ ವರೆಗೆ ನೆನೆಯಲು ಬಿಡಬೇಕು. ಆಗಾಗ್ಗೆ ಬಟ್ಟೆಯನ್ನು ಕೈಯಿಂದ ತಿಕ್ಕುತ್ತಿರಬೇಕು. ಅರ್ಧ ತಾಸು ನೆನೆದ ಬಳಿಕ, ಮತ್ತೆ ಅಷ್ಟು ಬಿಸಿಯಲ್ಲದ ಸಾಬೂನಿನ ಬುರುಗಿನಲ್ಲಿ ಎದ್ದಿ ತೊಳೆಯಬೇಕು. ಇದರಿಂದ ಕಲೆಗಳೆಲ್ಲ ಮಾಯವಾಗಿ ಬಟ್ಟೆ ಸ್ವಚ್ಛವಾಗುವದು.

ಮೇಲಿನ ಉಪಾಯದಿಂದ ಎಲ್ಲ ಕಲೆಗಳನ್ನೂ ತೊಳೆಯುವದು ಸಾಧ್ಯವಾಗದಿದ್ದರೆ, ಹೀಗೂ ತೊಳೆಯಬಹುದು; ಆದರೆ ಕಸೂತಿಗೆ ಉಪಯೋಗಿಸಿದ ರೇಶಿಮೆ ಮಾತ್ರ ಡಿ. ಎಮ್. ಸಿ ರೇಶಿಮೆಯಾಗಿರಬೇಕು. ಒಂದು ತಂಬಿಗೆ ನೀರಿನಲ್ಲಿ ಸುಮಾರು ಒಂದರ್ಧ ಔಂಸು ಸಾಬೂನನ್ನು (ಅದರಲ್ಲಿ ಒಗೆಯುವ ಸೋಡಾ ಹೆಚ್ಚಾಗಿ ಇರಕೂಡದು) ಕರಗಿಸಿ ನೊರೆಯನ್ನು ಮಾಡಬೇಕು. ಬಳಿಕ ಕಸೂತಿಯ

ಬಟ್ಟೆಯನ್ನು ಹತ್ತು ನಿಮಿಷಗಳಿಂದ ಒಂದು ತಾಸಿನ ವರೆಗೂ ಇದರಲ್ಲಿ ಕುದಿಸ ಬಹುದು. ಕುದಿಸುವ ವೇಳೆ, ತೊಳೆಯತಕ್ಕ ಕಲೆಗಳನ್ನು ಅವಲಂಬಿಸಿದೆ. ಕುದಿಸಿದ ಬಳಿಕ ತಣ್ಣೀರಲ್ಲಾಗಲಿ ಅಥವಾ ಲಿಂಬೆಹಣ್ಣಿನ ರಸ ಕೂಡಿದ ನೀರಿನಲ್ಲಾಗಲಿ ತೊಳೆಯಬೇಕು. ಅಂದರೆ ಮತ್ತೆ ರೇಶಿಮೆಗೆ ಮೆರುಗು ಬರುವದು.

ಕಸೂತಿಯ ಬಟ್ಟೆಗಳನ್ನು ಅಥವಾ ರೇಶಿಮೆಯ ಬಟ್ಟೆಗಳನ್ನು ತೊಳೆಯಲು **ಕ್ಲೋರಿನ್** ಉಪಯೋಗಿಸುವದು ಕೊಂಚ ಅಪಾಯಕರ. ಆದರೆ ಯಾವ ಉಪಾಯ ದಿಂದಲೂ ಕಲೆ ಹೋಗದಿದ್ದ ಪಕ್ಷದಲ್ಲಿ ಕ್ಲೋರಿನ್ ಉಪಯೋಗಿಸಬಹುದು. ಡಿ. ಎಮ್. ಸಿ. ರೇಶಿಮೆಯಾಗಿದ್ದರೆ ಇದರಿಂದಲೂ ಕಸೂತಿಗೆ ವಿಶೇಷ ಅಪಾಯವಿಲ್ಲ. ಇದನ್ನು ತಯಾರಿಸಲು ಮೊದಲು ಒಂದು ತಂಬಿಗೆ ನೀರಿಗೆ ಒಂದು ದೊಡ್ಡ ಚಮಚೆ ಕ್ಲೋರಿನ್ ("ಯೋಡಿ ಜಾವೆಲ್") ಹಾಕಿ ಮಿಶ್ರಣವನ್ನು ಸಿದ್ಧಪಡಿಸಿಕೊಳ್ಳಬೇಕು. ಬಳಿಕ ಕಸೂತಿಯ ಬಟ್ಟೆಯನ್ನು ನೀರಿನಲ್ಲೆದ್ದಿ, ನೀರನ್ನೆಲ್ಲ ಹಿಂಡಿ ತೆಗೆದು, ಈ ಮಿಶ್ರಣದಲ್ಲಿ ತೋಯಿಸಬೇಕು. ಸುಮಾರು ಐದು ನಿಮಿಷಗಳ ತರುವಾಯ ಆ ಬಟ್ಟೆಯನ್ನು ಹೊರದೆಗೆದು ತಣ್ಣೀರಿನಲ್ಲಿ ಅಥವಾ ಲಿಂಬೆರಸ ಕೂಡಿದ ನೀರಿನಲ್ಲಿ ತೊಳೆಯಬೇಕು. ನೀರನ್ನು ಹಿಂಡದೆ ಕಸೂತಿಯ ಬಟ್ಟೆಯನ್ನು ಬಹಳ ಹೊತ್ತಿನ ವರೆಗೆ ನೆನೆಯಲು ಮಾತ್ರ ಬಿಡಬಾರದು.

ಪಕ್ಕಾ ರೇಶಿಮೆಯಿಂದ ಹೆಣೆದ ಕಸೂತಿಯ ಬಟ್ಟೆಗಳನ್ನು ತೊಳೆಯುವದು:— ಒಗೆಯುವ ಸೋಡಾ ಸ್ವಲ್ಪವೂ ಇರದಂಥ ಸಾಬೂನನ್ನು ಇಲ್ಲಿ ಉಪಯೋಗಿಸುವದೇ ಹೆಚ್ಚು ಒಳಿತು. ಆದಷ್ಟು ಬಿಳಿಯ ಸಾಬೂನನ್ನು ಉಪಯೋಗಿಸಬೇಕು.

ಮೊದಲು ಕುದಿಯುವ ನೀರಿನಲ್ಲಿ ಬಿಳಿಯ ಸಾಬೂನನ್ನು ಕರಗಿಸಿ ಬುರುಗು ಮಾಡಿ, ಬಳಿಕ ಅದರಲ್ಲಿ ಸ್ವಲ್ಪ ತಣ್ಣೀರನ್ನು ಸುರುವಿ ಮಿಶ್ರಣವನ್ನು ಬೆಚ್ಚಗೆ ಮಾಡ ಬೇಕು. ಕಸೂತಿಯ ಬಟ್ಟೆಯನ್ನು ಈ ಮಿಶ್ರಣದಲ್ಲೆದ್ದಿ ಕೈಯಿಂದ ತಿಕ್ಕಿ ತಿಕ್ಕಿ ತೊಳೆದು, ಬಳಿಕ ತಣ್ಣೀರಿನಲ್ಲಿ ನಾಲ್ಕಾರು ಸಲ ನೀರು ಬದಲಿಸಿ ತೊಳೆದು, ನೀರು ತೆಗೆದುಬಿಡಬೇಕು. ಬಟ್ಟೆಯನ್ನು ಮುರಿಗೆ ಹೊಡೆದು ಹಿಂಡಬಾರದು. ಬಟ್ಟೆಯನ್ನು ಗಾಳಿಗೆ ಒಡ್ಡಿ ಆದಷ್ಟು ಬೇಗ ಒಣಗಿಸಿಬಿಡಬೇಕು. ಅಥವಾ ಟೇಬಲ್ ಮೇಲೆ ಎರಡು ಬಟ್ಟೆಗಳ ನಡುವೆ ಕಸೂತಿಯ ಬಟ್ಟೆಯನ್ನು (ಸರಿಯಾದ ಭಾಗವನ್ನು ಕೆಳಗೆ ಮಾಡಿ ಹಾಕಿ) ಬೆಚ್ಚಗಾದ ಇಸ್ತ್ರಿಯಿಂದ ಆಡಿಸಬೇಕು; ಇಸ್ತ್ರೀ ಹೆಚ್ಚು ಕಾಯ್ದಿದ್ದರೆ ರೇಶಿಮೆಯ ಬಣ್ಣಕ್ಕೆ ಅಪಾಯವಾಗುವ ಸಂಭವವಿದೆ.

ಪೂರ್ಣ ರೇಶಿಮೆಯ ಬಟ್ಟೆಗೆ ಹೆಚ್ಚು ಒಗೆಯುವದಾಗಲಿ, ಉರುಟಾದ ಉಪಾಯಗಳನ್ನು ಉಪಯೋಗಿಸುವದಾಗಲಿ ಬೇಕಾಗಿಲ್ಲ. ನಯವಾದ ಬಟ್ಟೆಯನ್ನು ನಯವಾಗಿಯೇ ಒಗೆಯಬೇಕು.



# ಕಾಯದೆ-ಕಾನೂನು



[ ಪ್ರಶ್ನೆಗಳನ್ನು ಕಳಿಸಿದವರು ತಮ್ಮ ಪ್ರಶ್ನೆಗಳಿಗೆ ಉತ್ತರ ದೊರೆಯಲಿಲ್ಲವೆಂದು ನಿರಾಶರಾಗಬೇಕಿಲ್ಲ; ಪ್ರಶ್ನೆಗಳು ಬಂದ ಕ್ರಮದಲ್ಲಿ ಅವುಗಳಿಗೆ ಉತ್ತರಗಳನ್ನು ಕೊಡಲಾಗುವದು. ]

೧. ಪ್ರಶ್ನೆ:— ನಾನೊಬ್ಬ ಬ್ರಾಹ್ಮಣ ಜಾತಿಯ ವಿಧವೆ. ೧೦ ಮತ್ತು ೧೨ ವರ್ಷದ ಇಬ್ಬರು ಮಕ್ಕಳಿದ್ದಾರೆ. ನನ್ನ ಮೈದುನ ವಕೀಲಿ ಮಾಡುತ್ತಾನೆ. ಮಾವನು ಹತ್ತು ವರ್ಷಗಳ ಹಿಂದೆ ತೀರಿಕೊಂಡಿರುತ್ತಾರೆ. ಅವರ ಆಸ್ತಿಯನ್ನು ದೊಡ್ಡ ಮಗನ ಹೆಸರಿನಲ್ಲಿ ಮಾಡಿದ್ದಾರೆ. ಟ್ರಸ್ಟಿಯನ್ನು ನೇಮಿಸಿದ್ದಾರೆ. ನಾನು ಹುಡುಗರೊಂದಿಗೆ ಅವರ ಹತ್ತಿರ ಇರಬೇಕು. ಮಕ್ಕಳ ಶಿಕ್ಷಣ, ಪೋಷಣೆ ಅವರು ಮಾಡಬೇಕು. ಹುಡುಗರು ಸುಜ್ಞಾನಿಯಾಗುವವರೆಗೆ ಆ ಆಸ್ತಿ ಉಳಿಯುವದು. ಅದು ನಾನು ಮತ್ತು ಮಕ್ಕಳು ಅವರ ಮನಸ್ಸಿನಂತೆ ವರ್ತಿಸಿದರೆ ಮಾತ್ರ ಸಿಗುವದು. ಈ ಶರ್ತುಗಳು ಕಾಯದೆಗೆ ಅನುಸರಿಸಿ ಇರುವವೋ? ಅಜ್ಜನ ಆಸ್ತಿಗೆ ಮೊಮ್ಮಕ್ಕಳು ವಾರಸದಾರರಲ್ಲವೇ? ನಾನು ತವರು ಮನೆಯಲ್ಲಿ ಐದಾರು ವರ್ಷದಿಂದ ಇರುತ್ತೇನೆ. ಯಾಕಂದರೆ ನನ್ನ ಗಂಡ ತೀರಿಕೊಂಡನಂತರ ಎರಡು ವರ್ಷ ಅತ್ತೆಯ ಮನೆಯಲ್ಲಿದ್ದೆ. ಆಗ ನನ್ನ ಕಡೆಗೆ ಮತ್ತು ಮಕ್ಕಳ ಕಡೆಗೆ ಪೂರ್ಣ ಅಲಕ್ಷವಾಗಿತ್ತು. ಸಣ್ಣ ಹುಡುಗ ಮರಣೋನ್ಮುಖನಾದರೂ ಅತ್ತಕಡೆಗೆ ಯಾರೂ ಲಕ್ಷಕೊಡಲಿಲ್ಲ. ಇಂತಹ ಎಷ್ಟೋ ಕಾರಣಗಳ ಮೂಲಕ ನಾನು ಅಲ್ಲಿ ಇರಲು ಇಚ್ಛಿಸುವದಿಲ್ಲ. ಮೈದುನನ ಇಚ್ಛೆ, ನಾನು ಶಿಕ್ಷಣ ತೆಗೆದುಕೊಳ್ಳದೆ ಒಕ್ಕಲಗಿತ್ತಿಯಂತೆ ದುಡಿಯಬೇಕು. ಇದು ನನಗೆ ಒಪ್ಪಿಗೆ ಇಲ್ಲದ್ದರಿಂದ ನಾನು ತವರು ಮನೆಯಲ್ಲಿ ನನ್ನ ಹಿರಿಯರ ವೆಚ್ಚದಿಂದ ನನ್ನ ಮತ್ತು ನನ್ನ ಮಕ್ಕಳ ಶಿಕ್ಷಣ ನಡೆಸಿದ್ದೇನೆ. ನನ್ನ ತವರು ಮನೆಯು ಹೈದರಾಬಾದಿನಲ್ಲಿ ಇರುತ್ತದೆ. ಅತ್ತೆಯ ಮನೆಯ ಒಂದು ಸ್ವಂತ ಮನೆಯು ಧಾರವಾಡದಲ್ಲಿ ಇರುತ್ತದೆ. ಅದು ಮೈದುನನ ಕೈಯಲ್ಲಿ ಇರುತ್ತದೆ. ಅದಕ್ಕೆ ೬೦-೭೦ ರೂ. ಬಾಡಿಗೆ ಬರುತ್ತದೆ. ಅದು ಮತ್ತು ಬ್ಯಾಂಕಿನಲ್ಲಿದ್ದ ಮಾವನ ಹಣ ಅವರಿಗೆ ತೆಗೆದುಕೊಳ್ಳಲು ಅಧಿಕಾರವಿದೆ. ಆ ಬಾಡಿಗೆ ಬ್ಯಾಂಕಿನ ದುಡ್ಡು ತೆಗೆದು ಅವರು ಖರ್ಚು ಮಾಡುತ್ತಲಿದ್ದಾರೆ. ನನಗೆ ಒಂದು ಪೈ ಕೂಡ ಸಹಾಯ ಮಾಡುವದಿಲ್ಲ. ನನಗೆ ಶಿಕ್ಷಣ ಮತ್ತು ಪೋಷಣಕ್ಕಾಗಿ ಕಾಯದೆಯಿಂದ ಸಹಾಯ ಸಿಗಲಿಕ್ಕಿಲ್ಲವೇ? ಆಸ್ತಿಯೊಳಗಿಂದ ಸಹಾಯ ಬೇಕಾದರೆ ನಾನು ಅತ್ತೆಯ ಮನೆಯಲ್ಲಿಯೇ ಇರಬೇಕೆಂದು ಒತ್ತಾಯ ಪಡಿಸಲು

ಬರುತ್ತದೆಯೋ ? ಮಾವನವರು ಪೆನ್ ಶನ್‌ದಾರರಿದ್ದು, ಸಾಯುವಕಿಂತ ಮೊದಲು ಕೆಲವು ದಿನ ಭ್ರಮಿಷ್ಟರಾಗಿದ್ದರು. ಆದ್ದರಿಂದ ಮತ್ತು ಮೃತ್ಯುಪತ್ರದೊಳಗಿನ ಕೆಲವು ಸಂಗತಿಗಳ ಮೇಲಿಂದ ಆ ಮೃತ್ಯುಪತ್ರ ನನಗೆ ನಿಜವೆನಿಸುವದಿಲ್ಲ. ಆ ಮೃತ್ಯುಪತ್ರ ರಜಿಸ್ಟರ ಆಗಿಲ್ಲ. ಅದು ಆಗುವಾಗ್ಗೆ ನಾನು ಅಲ್ಲಿ ಇರಲಿಲ್ಲ. ಈ ಮೃತ್ಯುಪತ್ರ ಕೋರ್ಟಿನಲ್ಲಿ ನಿಜವೆಂದು ಗಣಿಸಲ್ಪಡುವದೋ ? ಮಕ್ಕಳಿಗೆ ಆ ಇಸ್ಟೇಟು ಈಗಲೇ ಸಿಗುವದೋ ಅಥವಾ ಸಜ್ಞಾನಿಗಳಾದ ಮೇಲೆಯೋ ? ಅದಕ್ಕಾಗಿ ಪ್ರಯತ್ನ ಈಗಲೇ ಮಾಡಬಹುದೋ ಅಥವಾ ಮುಂದೆಯೋ ? ಮಕ್ಕಳಿಗೆ ಅರ್ಧಪಾಲು ಸಿಗುವದೋ ? ಲಗ್ನದಲ್ಲಿ ಹಾಕಿದ ಬಂಗಾರವನ್ನು ಸಹ ತೆಗೆದುಕೊಳ್ಳಲು ಮೈದುನನು ಇಚ್ಛಿಸುತ್ತಾನೆ. ಕಾಯದೆಯಿಂದ ನಾನು ಅದನ್ನು ಕೊಡಬೇಕಾಗುವದೋ ? ಅಥವಾ ಸ್ತ್ರೀ ಧನವೆಂದು ಅದು ನನ್ನದಾಗಬಲ್ಲದೋ ? ನಾನು ತವುರು ಮನೆಯಲ್ಲಿ ಇದ್ದುದರಿಂದ ಮೈದುನನು ನನಗೆ ಕಾರಣವಿಲ್ಲದೆ ಕಲಂಕ ಹಚ್ಚಲು ಪ್ರಯತ್ನಿಸುತ್ತಾನೆ. ಆದರೆ ನಾನು ನಿಷ್ಪಾಪ ಬುದ್ಧಿಯಿಂದ ನನ್ನ ಶೀಲ ಹಾಗೂ ಚಾರಿತ್ರ್ಯದ ಬಗ್ಗೆ ಚೆನ್ನಾಗಿ ಲಕ್ಷ್ಯಕೊಟ್ಟು ಮಕ್ಕಳ ಮತ್ತು ನನ್ನ ಶಿಕ್ಷಣ ನಡೆಸಿ ಸ್ವಾವಲಂಬಿಯಾಗಲು ಇಚ್ಛಿಸುತ್ತೇನೆ. ಕಾರಣ ತಾವು ಯೋಗ್ಯ ಸಲಹೆಯನ್ನು ನೀಡಬೇಕಾಗಿ ಬಿನ್ನಹ.

ಉತ್ತರ:— ತಮ್ಮಂತೆ ಎಲ್ಲ ಹೆಣ್ಣುಮಕ್ಕಳ ಸ್ಥಿತಿಯು ಸ್ವಲ್ಪ ಹೆಚ್ಚುಕಡಿಮೆ ಇದೇ ಬಗೆಯಾಗಿ ಇರುತ್ತದೆ. ಇದು ತಮ್ಮ ಚಿತ್ರವಿರದೆ ಸಮಾಜದ ಚಿತ್ರವೆಂದು ಹೇಳಬಹುದು. ಒಂದು ಮಾತು ನೀವು ಸಾಮಾನ್ಯವಾಗಿ ಲಕ್ಷ್ಯದಲ್ಲಿಡತಕ್ಕದ್ದೇನಂದರೆ ಪ್ರತಿಪಕ್ಷಿಯು ಕಾಯದೆಯ ಅಥವಾ ಕೋರ್ಟುಕಚೇರಿಗಳ ನೆರವು ತೆಗೆದುಕೊಳ್ಳುವದಿಲ್ಲವೆಂದು ಅನಿಸಿದರೆ ಮನುಷ್ಯನು ಯಾತಕ್ಕೂ ಹೆದರುವದಿಲ್ಲ, ಕೇವಲ ತನ್ನ ಸ್ವಾರ್ಥದ ಕಡೆಗೆ ಗಮನಕೊಟ್ಟು ನಡೆಯುವನು ಮತ್ತು ಹಾಗೆ ಮಾಡಲು ಅನುಕೂಲವಿರುವದು. ಯಾಕಂದರೆ ಪ್ರತಿಪಕ್ಷಿಯು ಬಾಯಿಮುಚ್ಚಿಕೊಂಡು ಸಹನ ಮಾಡುತ್ತಿರುವನು. ಇದೇ ಜಗತ್ತಿನ ನ್ಯಾಯವಾಗಿದೆ. ಈ ಜಗತ್ತಿನ ನಿಯುಮವು ಹೆಣ್ಣುಮಕ್ಕಳ ವಿಷಯಕ್ಕೆ ಹೆಚ್ಚಾಗಿ ಕಂಡುಬರುವದು. ಯಾಕಂದರೆ ಹೆಣ್ಣುಮಕ್ಕಳು ಕಾಯದೆ ಕಡೆಗೆ ಹೋಗುವದನ್ನು ಒಳಿತಾಗಿ ತಪ್ಪಿಸುತ್ತಿರುವರು. ಅರ್ಥಾತ್ ಅವರ ಪ್ರತಿಪಕ್ಷಿಗಳಿಗೆ ಹಿತವಾಗುವದು. ನಿಜವಾಗಿ ತಮ್ಮ ಆಭರಣಗಳ ಮೇಲೆ ಮೈದುನನ ಹಕ್ಕು ಸ್ವಲ್ಪೂ ಕೂಡ ಇಲ್ಲ. ಇದು ತೀರ ಸಣ್ಣ ಮತ್ತು ಒಡೆದು ಕಾಣುವಂತಹ ಮಾತು. ಇದಕ್ಕಾಗಿ ಅವರು ಇಷ್ಟು ಗೊಂದಲ ಹಾಕುತ್ತಿದ್ದ ಮೇಲೆ ಏನು ಬೇಕಾದರೂ ಮಾಡಿದರೆ ನಡೆಯುವದೆಂದು ಅವರು ಭಾವಿಸಿರುವರೆಂದು ಸ್ಪಷ್ಟವಾಗುತ್ತದೆ. ಈ ಅವರ ತಪ್ಪು ತಿಳುವಳಿಕೆಯನ್ನು ಹೋಗಲಾಡಿಸಲು ಯತ್ನಿಸಬೇಕು. ಅವಶ್ಯ ಕಂಡರೆ ಕೋರ್ಟಿಗೆ ಹೋಗುವ ಸಿದ್ಧತೆ ಇದೆಯೆಂದು ಅವರಿಗೆ ಮನವರಿಕೆಯಾಗುವಂತೆ ತೋರಿಸಿಕೊಡಬೇಕು.

ಟ್ರಸ್ಟಿನ ಬಗ್ಗೆ ಸಂಗತಿ ಪೂರ್ಣ ಇಲ್ಲ. ಅದು ಕಾಯದೆಗೆ ಅನುಸರಿಸಿ ಇದೆಯೋ ಹೇಗೆ ನೋಡಬೇಕು. ಆಮೇಲೆ ಅದರೊಳಗಿನ ನಿಮ್ಮ ಹಾಗೂ ನಿಮ್ಮ ಮಕ್ಕಳ ಸಂಬಂಧಿ ಶರ್ತುಗಳು ಕಾಯದೆಯಿಂದ ಬಂಧನಕಾರಿ ಇವೆಯೋ ಹೇಗೆ ನೋಡಬೇಕು. ಇದೇ ಪರಿಸ್ಥಿತಿ ಮೃತ್ಯುಪತ್ರದ್ದಾದರೂ ಇರುವದು. ಮೃತ್ಯುಪತ್ರದ ಕಾಲಕ್ಕೆ ಆವರ ಮನಸ್ಸಿನ ಸ್ಥಿತಿ ಸರಿಯಾಗಿತ್ತೋ ಇಲ್ಲವೋ ನೋಡಬೇಕು. ಅದರೊಳಗಿನ ಎಷ್ಟು ಭಾಗ ತಮಗೆ ಬಂಧನಕಾರಿ ಇದೆಯೆಂಬುದನ್ನು ನೋಡಬೇಕು. ಸ್ವಲ್ಪದರಲ್ಲಿ ಕೇವಲ ಟ್ರಸ್ಟು ಮಾಡಲಾಗಿದೆ. ಮೃತ್ಯುಪತ್ರ ಬರೆಯಲಾಗಿದೆ, ಎಂದು ಒಬ್ಬ ಸ್ವಾರ್ಥಿ ಮನುಷ್ಯನು ತನ್ನ ಸ್ವಾರ್ಥಕ್ಕಾಗಿ ಹೇಳಿದರೆ ಅದೆಲ್ಲ ಕಾಯದೆಶೀರ ಎಂದು ಗ್ರಹಿಕೆ ಮಾಡದೆ ವಕೀಲರ ಸಹಾಯದಿಂದ ಆದರ ಪರೀಕ್ಷೆ ಮಾಡಿಸಿ ಚೆನ್ನಾಗಿ ತಿಳಿದುಕೊಳ್ಳಬೇಕು. ತಮ್ಮ ಮಾವನ ಇಸ್ಟೇಟು ಪಿತ್ರಾರ್ಜಿತ ಎಷ್ಟು? ಸ್ವಕಸ್ವಾರ್ಜಿತವೆಷ್ಟು? ಎಂಬುದು ಮಹತ್ವದ ಪ್ರಶ್ನೆ ಇದೆ. ಪಿತ್ರಾರ್ಜಿತವಿದ್ದರೆ, ಮೃತ್ಯುಪತ್ರ, ಟ್ರಸ್ಟ ಮಿಕ್ಕ ಯಾವುದೇ ರೀತಿಯಿಂದ ಅದರ ವ್ಯವಸ್ಥೆಮಾಡುವ ಅಧಿಕಾರವಿಲ್ಲ. ಯಾಕಂದರೆ ಮಾನವರು ಜೀವಂತ ವಿದ್ದಾಗ್ಯೂ ಸಹ ಮೊಮ್ಮಕ್ಕಳ ಅಧಿಕಾರವಿರುತ್ತದೆ. ಮೃತ್ಯುಪತ್ರ ಅಥವಾ ಟ್ರಸ್ಟ ಬೇಕಾಯದೆಶೀರ ಇದೆಯೆಂದು ನಿಶ್ಚಿತವಾದರೆ,ಆ ರೀತಿಯಿಂದ ಅದು ಆಗಬೇಕೆಂದು ತಾವು ಶಕ್ಯವಿದ್ದಷ್ಟು ಪ್ರಯತ್ನ ಮಾಡುವದು ತಮಗೆ ಹಿತಕಾರಿ ಇರುತ್ತದೆ. ಈ ಬಗೆಯ ವ್ಯವಸ್ಥೆ ಅಪಸಾತಿನಲ್ಲಿ ಆಗದಿದ್ದರೆ ತಾವು ಕೋರ್ಟಿನ ಲಾಭಪಡೆಯಬೇಕು. ಮಕ್ಕಳಿಗೆ ಪಾಲು ಸಿಗುವಲ್ಲಿ ಸಂಶಯವಿಲ್ಲ. ಅದಕ್ಕಾಗಿ ಈಗಿನಿಂದಲೇ ಪ್ರಯತ್ನ ಆರಂಭಿಸುವದು ಒಳ್ಳೆಯದು. ತಾವು ಮೈದುನನ ಹತ್ತಿರ ಇರುವದಿಲ್ಲವೆಂದು, ಕಾಯದೆ ದೃಷ್ಟಿಯಿಂದ ತಮಗೆ ಮತ್ತು ಮಕ್ಕಳಿಗೆ, ಪಾಲನ ಪೋಷಣ ಮತ್ತು ಶಿಕ್ಷಣದ ವಿಷಯದಲ್ಲಿ ಅವಶ್ಯವಿದ್ದ ಸಹಾಯಕೊಡುವದಿಲ್ಲವೆಂದು ಅನ್ನಲು ಬರುವದಿಲ್ಲ. ಇದಕ್ಕಿಂತ ವಿದ್ಯೆ-ಬುದ್ಧಿಯಿಂದ ತಾವು ಸ್ವಾವಲಂಬಿಯಾದರೆ, ಮಿಕ್ಕ ಸಾಮಾಜಿಕ ಪರಿಸ್ಥಿತಿಯೂ ಸಹ ನಿಮಗೆ ಹೆಚ್ಚು ಅನುಕೂಲವಾಗುವದು. ಇದರಲ್ಲಿ ನೀವು ಹೆಣ್ಣುಮಕ್ಕಳಿಗಾಗಿ ಗಂಡಸರಲ್ಲಿದ್ದ ಸ್ತ್ರೀ ದಾಕ್ಷಿಣ್ಯದ ಲಾಭವನ್ನಾದರೂ ಬಯಸತಕ್ಕದ್ದಲ್ಲ. ಅದರಿಂದ ಸಹಿತ ಹೊಸ ಸಂಕಟದಲ್ಲಿ ಬೀಳುವ ಸಂಭವವಿದೆ.

೨. **ಪ್ರಶ್ನೆ:**— ನಾನೊಬ್ಬ ೧೯ ವಯಸ್ಸಿನ ಕನ್ನಡ ೬ನೆಯ ಇಯತ್ತೆಯ ವರೆಗೆ ಕಲಿತ, ಮದುವೆಯಾದ ಹರಿಜನ ಸ್ತ್ರೀ ಇರುತ್ತೇನೆ. ನನ್ನ ಅಕ್ಕಂದಿರು ಲಗ್ನವಾಗಿದ್ದು, ಸುಶಿಕ್ಷಿತರಿದ್ದು ಶಿಕ್ಷಕಿಯರ ಕೆಲಸವನ್ನು ಮಾಡುತ್ತಿರುವರು. ಅವರು ಸ್ವತಂತ್ರ ನವಕರಿ ಮಾಡುತ್ತಿರುವದರಿಂದ ನನ್ನ ಗಂಡನು ಇಲ್ಲದ ಸಲ್ಲದ ಸಂಶಯಗಳಿಂದ ನನ್ನನ್ನು ಬಹಳವಾಗಿ ಕಾಡುತ್ತಿರುವನು. ಮತ್ತು ನನ್ನ ಶಿಕ್ಷಣಕ್ಕೆ ಆತಂಕ ಮಾಡುತ್ತಿರುವನು. ಅವನಿಗಾಗಿ ನಾನು ಕಲಿಯುವದನ್ನು ಬಿಟ್ಟರೂ ಸಹ ಸಂಶಯುಗಳಿಂದ ನನ್ನನ್ನು ಹಿಂಸಿಸಿದನು, ಇದಕ್ಕೆ ಬೇಸತ್ತು ಮನೆಯಿಂದ ಓಡಿ

ಹೋಗಿ ನಾನು ಒಂದು ಶಿಕ್ಷಣ ಸಂಸ್ಥೆಯನ್ನು ಸೇರಿರುತ್ತೇನೆ. ಇಲ್ಲಿಯೂ ಒಂದು ದಿನ ಒಬ್ಬ ವಕೀಲರನ್ನು ಕರೆದುಕೊಂಡು ಬಂದು, ತಮ್ಮ ಕೂಡ ಬರದಿದ್ದರೆ, ಎಳೆದುಕೊಂಡು ಹೋಗುವೆನೆಂದು ಬೆದರಿಸಿದನು. ವಕೀಲರು ಸಹ ಆ ಶಿಕ್ಷಣ ಸಂಸ್ಥೆಯ ಚಾಲಕರಿಗೆ ಈ ತೆರನಾಗಿ ನೀವು ಹೆಣ್ಣುಮಕ್ಕಳಿಗೆ ಸವಲತ್ತು ಕೊಟ್ಟರೆ ಎಲ್ಲ ಹೆಣ್ಣುಮಕ್ಕಳು ಗಂಡಂದಿರನ್ನು ಬಿಟ್ಟು ನಿಮ್ಮಲ್ಲಿಗೆ ಬರುವರು ಮತ್ತು ನೀವೇ ಕುಟುಂಬ ವ್ಯವಸ್ಥೆಯನ್ನು ಮುರಿಯಲು ಕಾರಣರಾಗುವಿರಿ, ಎಂದು ಅಂದರು. ಹೀಗೆ ಅವರು ನನ್ನನ್ನು ಎಳೆದು ಒಯ್ಯಬಲ್ಲರೋ ? ಮತ್ತು ಸಂಸ್ಥೆಗೆ ನನ್ನಿಂದ ಕುಂದು ಉಂಟಾಗಬಹುದೋ ?

**ಉತ್ತರ:—** ಗಂಡನಾಗಲೀ, ವಕೀಲನಾಗಲಿ ಕಾಯದೆಯಿಂದ ಹಿಂಸೆಪಡಿಸಿ ಎಳೆದುಕೊಂಡು ಯಾರನ್ನೂ ಒಯ್ಯಲಾರರು. ಹೀಗೆ ಮಾಡಿದಲ್ಲಿ ಅವರ ಮೇಲೆಯೇ ಕಾಯದೇಶೀರ ಇಲಾಜ ಮಾಡಲಾಗುವದು. ಹೋಗಲು ಇಷ್ಟವಿಲ್ಲದಲ್ಲಿ ಕಾಯದೆಯಿಂದ ಬಿಡುಗಡೆ ಹೊಂದಬಹುದು. ಶಿಕ್ಷಣ ಸಂಸ್ಥೆಗೆ ತಮ್ಮಿಂದ ಕುಂದು ತಟ್ಟುವದಿಲ್ಲ. ತಟ್ಟಿದಲ್ಲಿ ಅದು ಜನರ ಅಜ್ಞಾನವೇ ಸರಿ. ಕುಂದುತಟ್ಟುವ ಬದಲಾಗಿ ಇವತ್ತಿನ ವರೆಗೂ ಹೆಣ್ಣುಮಕ್ಕಳ ಅಜ್ಞಾನದ ಲಾಭಪಡೆದ ಗಂಡಸರು ಮನಬಂದಂತೆ ನಡೆಯುಲು ತಡೆಮಾಡಿದಂತಾಗುವದು.



# ಮನೆಯ ಶುಚಿ-ರುಚಿ

ಲೇಖಕಿ :— ನೀರಜಾ.

> ಮನೆಯ ಒಳಹೊರಗನ್ನು ಅಂದವಾಗಿರಿಸುವಲ್ಲಿ ಗೃಹಿಣಿಯದು ನುರಿತ ಕೈ; ಮನೆಯ ಒಳಭಾಗವನ್ನು ಹೇಗೋ ಹಾಗೆ ಹೊರಭಾಗವನ್ನೂ ಅವಳು ಅಲಂಕರಿಸ ಬಲ್ಲಳು. ಆ ಅಲಂಕಾರವನ್ನು ನೋಡುವವರ ಮನಸ್ಸೂ ಮಳೆಗಾಲದಲ್ಲಿ ಚಿಗು ರೊಡೆಯುವ ಹಸಿರಿಲೆಗಳಂತೆ ಉಲ್ಲಸಿತವಾಗಿರುತ್ತದೆ.

ಹೆಚ್ಚು ಆಹಾರ ಬೆಳಿಯಿರಿ, ಎಂಬ ಕೂಗು ದೇಶದುದ್ದಕ್ಕೂ ಪಸರಿಸಿದೆ, ಆಹಾರಖಾತೆಯ ಮಂತ್ರಿಗಳು, ಸಲಹಾಸಮಿತಿಗಳು ಈ ಗೊತ್ತುವಳಿಯನ್ನು ಪಾಸು ಮಾಡಿದರೆ ಕೆಲಸವಾದಂತಾಗಲಿಲ್ಲ. ಇದನ್ನು ಕಾರ್ಯರೂಪದಲ್ಲಿ ತರುವದಕ್ಕೆ ಪರಿಶ್ರಮಬೇಕು. ಅಲ್ಲದೆ ತರತಕ್ಕವರೂ ಬೇರೆ ಇದ್ದಾರೆ; ಈಗಿದ್ದ ಆಹಾರಧಾನ್ಯ ಸಾಲದು ಎಂಬುದಕ್ಕೆ ಅಲ್ಲವೇ ಈ ಕೂಗು ? ಬಳಿಕ ಹೆಚ್ಚು ಬೆಳೆಯಿಸಿ ಅಥವಾ ಇದ್ದ ಆಹಾರಧಾನ್ಯವನ್ನು ವ್ಯರ್ಥವಾಗದಂತೆ ಉಪಯೋಗಿಸಿ, ಈ ಕಾರ್ಯಕ್ಕೆ ಸಹಕಾರ ನೀಡುವಲ್ಲಿ, ಮಹಿಳೆಯರೂ ಕಾರಣರಾಗಿದ್ದಾರಲ್ಲವೇ ?

ಮನೆಯ ಮುಂಭಾಗದಲ್ಲಿ ತೋಟವೊಂದಿದ್ದರೆ ಎಲ್ಲ ದೃಷ್ಟಿಯಿಂದಲೂ ಸೊಗಸು, ಅಂದಚೆಂದದ ಹೂವಿನ ಗಿಡಗಳನ್ನು ಹಚ್ಚಬಹುದು, ಕಾಯಿಪಲ್ಲೆಗಳನ್ನು ಬೆಳೆಯಬಹುದು; ನಗರದ ವಾಸಸ್ಥಳವಾದಲ್ಲಿ ಎಲ್ಲರ ಮನೆಯ ಮುಂದೂ ಹೀಗೆ ಸ್ಥಳವನ್ನು ಇಟ್ಟುಕೊಳ್ಳುವದು ಸಾಧ್ಯವಾಗಲಿಕ್ಕಿಲ್ಲ.ಆದರೆ ಹಳ್ಳಿಗಳಲ್ಲಿ ಮಾತ್ರ ಇಂತಹ ಬಯಲು ಭೂಮಿಗೆ ಕೊರತೆಯಿಲ್ಲ. ಮನೆಯ ಹಿಂಭಾಗದಲ್ಲಾದರೂ ಸರಿ, ಮುಂಭಾಗ ದಲ್ಲಾದರೂ ಸರಿ, ಸ್ಥಳವಿದ್ದರೆ ಮಾತ್ರ ಪುಕ್ಕಟೆ ಹೋಗಗೊಡುವದು ಸರಿಯಲ್ಲ.

ಇದ್ದಬಿದ್ದ ಕಸಕಡ್ಡಿಗಳನ್ನೆಲ್ಲ ತೆಗೆದು ಸ್ವಚ್ಛಮಾಡಿ, ಸ್ವಲ್ಪ ಅಗಿದು ಬೀಜ ಹಾಕಿದರೆ, ಸುಲಭಸಾಧ್ಯವಾದ ಕಾಯಿ, ತೊಪ್ಪಲು ಪಲ್ಲೆಗಳನ್ನು ಪಡೆಯಬಹುದು. ಆ ಸ್ಥಳದ ಸುತ್ತಲೂ ಒಂದು ಬೇಲಿ ಕಟ್ಟಿ, ಮಡಿಗಳನ್ನು ಮಾಡಿ ಮೆಂಥೆ, ಕೊತ್ತಂ ಬರಿ, ತಿಂಗಳು ಅವರಿ, ಪಡವಲು ಬೀಜಗಳನ್ನು ಹಾಕಬಹುದು. ಮೆಂಥೆ, ಕೊತ್ತಂ ಬರಿಗಳನ್ನು ಮಡಿಗಳಲ್ಲಿ ಹಾಕುವದುಂಟು. ಅವರಿ, ಪಡವಲಗಳನ್ನು ಮಾತ್ರ ಹಂದರ ಹಾಕಿ ಮೇಲೆ ಹಬ್ಬಿಸುವರು. ಹರವಿ, ರಾಜಗಿರಿಯಂಥ ತೊಪ್ಪಲಗಳು ಮಳೆಗಾಲದಲ್ಲಿ ಒಂದಕ್ಕೆ ಎರಡಾಗಿ ತಾವೇ ಬೆಳೆಯುವವು. ಇಡೀ ವರುಷವೆಲ್ಲ ಈ ಬೆಳೆಗಳನ್ನು ತೆಗೆದುಕೊಳ್ಳುವದು ಸಾಧ್ಯವಾಗದಿದ್ದರೂ ಮಳೆಗಾಲದಲ್ಲಿ ಇದು ಸುಲಭ, ಗಿಡಗಳಿಗೆ ಹೊತ್ತು ನೀರೆರೆಯಬೇಕಾಗಿಲ್ಲ.

ಹೇಳಿದರೆ ಆಶ್ಚರ್ಯವೆನಿಸಬಹುದು, ನಾನೊಂದು ಸಲ ಮಳೆಗಾಲದಲ್ಲಿ ಪಡುವಲ ಬೀಜವನ್ನು ನೆಟ್ಟಿದ್ದೆ. ಮಳೆಗಾಲ ಮುಗಿಯುವವರೆಗೂ ಮಾರುದ್ದ

ಕಾಯಿಗಳು ಬಂದೇ ಬಂದವು ! ಪಡುವಲ ಕಾಯಿಗೆ ಮಾತ್ರ ಹೀಚಿನಲ್ಲಿಯೇ ಅದರ ತುದಿಗೊಂದು ಕಲ್ಲು ಕಟ್ಟಬೇಕು; ಅಂದರೆ ಕಾಯಿ ಎಳಸಾಗಿ ಬೆಳೆಯುತ್ತದೆ.

ಮನೆಗೆಲಸವನ್ನು ಮಾಡಿಕೊಂಡೂ ಗೃಹಿಣಿಯರು ದಿನದ ತಾಸೆರಡು ತಾಸು ವೇಳೆಯನ್ನು ತೋಟದಲ್ಲಿ ಕಳೆಯಬಹುದು. ಇದರಿಂದ ಸ್ವಚ್ಛವಾದ ಹವೆ ದೊರೆತು ಆರೋಗ್ಯವೂ ಸುಧಾರಿಸುವದು, ಉಪಯುಕ್ತವಾದ ಬೆಳೆಯೂ ಬರುವದು.

---

## ಪಾಕಶಾಸ್ತ್ರ

ಲೇಖಕಿ :— ಪಾರ್ವತೀಬಾಯಿ ಭಟ್ಟ, ಧಾರವಾಡ.

**ಬಾಳೇಕಾಯಿಯ ಸಂಜೀವನಿ :**

ಉತ್ತರಕನ್ನಡ ಜಿಲ್ಹೆಯಲ್ಲಿ ಬಾಳೇಕಾಯಿಯ ಬೆಳೆ ಹೆಚ್ಚು. ಬಾಳೆಗಿಡದ ಯಾವ ಭಾಗವೂ ಸಾಧಾರಣವಾಗಿ ಪುಕ್ಕಟೆ ಹೋಗುವದಿಲ್ಲ. ಹೂ, ಕಾಯಿ, ಹಣ್ಣು, ದಿಂಡು ಎಲ್ಲವೂ ಉಪಯೋಗಕ್ಕೆ ಬರುತ್ತವೆ. ಬಾಳೇಕಾಯಿ ಒಂದರಿಂದಲೇ ಅನೇಕ ಪದಾರ್ಥಗಳನ್ನು ತಯಾರಿಸಬಹುದು. ಹಪ್ಪಳ, ಸಂಜೀವನಿ, ಚಿಪ್ಸಗಳು ಆ ಪದಾರ್ಥಗಳ ಒಂದೆರಡು ಉದಾಹರಣೆಗಳು ಮಾತ್ರ.

ಬಾಳೇಕಾಯಿಗಳಲ್ಲಿಯೂ ಮೂರು ನಾಲ್ಕು ಜಾತಿಗಳಿರುತ್ತವೆ. ಆನೆಬಾಳೆ ಇವುಗಳಲ್ಲಿ ದೊಡ್ಡದು. ಬಾಳೇಕಾಯಿಯ ಸಂಜೀವನಿಯನ್ನು ತಯಾರು ಮಾಡುವದಕ್ಕೆ ಮೊದಲು ಅದನ್ನು ಸ್ವಚ್ಛವಾಗಿ ತೊಳೆಯಬೇಕು. ಬಳಿಕ ತುಂಬು ತೆಗೆದು ಅದನ್ನು ಉಗಿಯ ಮೇಲೆ ಬೇಯಿಸಬೇಕು. ಬೆಂದನಂತರ ಇಳಿಸಿ, ಕಾಯಿಯನ್ನು ಸುಲಿದು ಒರಳಲ್ಲಿ ರುಬ್ಬಬೇಕು. ಸಣ್ಣಾಗಿ ರುಬ್ಬಿದ ಬಳಿಕ, ಸುಮಾರು ಹತ್ತು ಬಾಳೇಕಾಯಿಗಳಿಗೆ ೩ ಚಟಾಕು ಉಪ್ಪು, ೫ ತೊಲೆ ತೂಕ ಹಸಿಮೆಣಸಿನಕಾಯಿ, ಒಂದು ಕಡ್ಡಿ ಕೊತ್ತಂಬರಿಯಂತೆ ಅರೆದು ಇವುಗಳ ಜೊತೆಗೆ ಕರಿಬೇವು ಸೇರಿಸಿದರೂ ಸರಿ. ಆ ರುಬ್ಬಿದ ಬಾಳೇಕಾಯಿಯೊಡನೆ ಚೆನ್ನಾಗಿ ಸೇರಿಸಿ ಕಲಿಸಬೇಕು. ಬಳಿಕ ತಯಾರಾದ ಈ ಹಿಟ್ಟನ್ನು ಒಂದು ಅಡಿಕೆಬೆಟ್ಟದಷ್ಟು ತೆಗೆದುಕೊಂಡು, ಬಾಳೇಎಲೆಗೆ ಎಣ್ಣೆ ಹಚ್ಚಿ ತಟ್ಟಿ, ಎಣ್ಣೆಯಲ್ಲಿ ಬಿಟ್ಟು ಕರಿಯಬೇಕು. ಹಿಟ್ಟಿನಲ್ಲಿ ನೀರು ಮಾತ್ರ ಕೂಡಿಸಬಾರದು. ಆದರೆ ಎಲೆಯ ಮೇಲೆ ಒತ್ತಲು ಬರುವಂತಿರಬೇಕು. ಕರಿದೊಡನೆ ಉಬ್ಬಿಕೊಂಡು, ಹಗುರಾಗಿ ಸಂಜೀವನಿ ತಯಾರಾಗುವದು. ಆರಿದ ಮೇಲೆ ತಿಂದರೆ ರುಚಿಯಾಗಿರುವದು.

**ಲಿಂಬೆ ತೊಗಟೆಯ ಅರ್ಕ :**

ಬೇಸಿಗೆಯ ದಿನಗಳಲ್ಲಿ ತಂಪಾದ ಪೇಯಗಳನ್ನು ಉದಾಹರಣೆಗೆ ಲೇಮನ್, ಆರೇಂಜ ಇತ್ಯಾದಿಗಳನ್ನು ಸಾಧಾರಣವಾಗಿ ಎಲ್ಲರೂ ಕುಡಿಯುತ್ತಾರೆ. ಆದರೆ

ಮನೆಯಲ್ಲಿಯೇ ಸುಲಭವಾಗಿ ಸಿದ್ಧಗೊಳಿಸಬಹುದಾದ ಪೇಯವೆಂದರೆ ಲಿಂಬೆಹಣ್ಣಿನ ಸರಬತ್. ಆಗ ಬಹುತರವಾಗಿ ಎಲ್ಲ ಮನೆಗಳಲ್ಲಿಯೂ ದಿನಕ್ಕೆ ಕನಿಷ್ಟ ಒಂದು ಲಿಂಬೆಹಣ್ಣನ್ನಾದರೂ ಉಪಯೋಗಿಸುತ್ತಾರೆ. ಆದರೆ ಆ ಹಣ್ಣಿನ ತೊಗಟೆಯನ್ನು ಕಸದ ಕೂಡ ಚೆಲ್ಲಿಬಿಡುವವರೇ ಬಹಳ ಜನ ಇಂಥ ತೊಗಟೆಗಳನ್ನು ಚೆಲ್ಲದೆ, ಚೆನ್ನಾಗಿ ಒಣಗಿಸಿಟ್ಟುಕೊಳ್ಳಬೇಕು. ಹತ್ತೆಂಟು ಹಣ್ಣಿನ ತೊಗಟೆಗಳು ಒಣಗಿದ ವೆಂದರೆ ಅವುಗಳನ್ನು ಸಣ್ಣ ತುಂಡುಗಳಾಗಿ ಕೊಯ್ದು, ಕಲಾಯಿಯ ಪಾತ್ರೆಯಲ್ಲಿ ಒಂದು ಚಮಚೆ ತುಪ್ಪಹಾಕಿ ಹುರಿಯಬೇಕು. ಕಂಪಾದ ವಾಸನೆ ಬಂದಕೂಡಲೆ ಕೆಳಗೆ ಇಳಿಸಿಟ್ಟುಕೊಳ್ಳಬೇಕು. ಬಳಿಕ ಒಂದು ಪೌಂಡು ಸಕ್ಕರೆ, ಜೊತೆಗೆ ಅರ್ಧ ಲಿಂಬೆಹಣ್ಣಿನ ರಸ ಸೇರಿಸಿ ಕುದಿಸಿ, ಕುಸುರೆಳ್ಳಿನ ಪಾಕದಂತೆ ಪಾಕಮಾಡಬೇಕು. ಪಾಕದಮೇಲೆ ಆ ತೊಗಟೆಯ ತುಂಡುಗಳನ್ನು ಸೇರಿಸಿ, ಅವುಗಳೊಡನೆ ಯಾಲಕ್ಕಿ ಪುಡಿ, ಮೆಣಸಿನ ಪುಡಿ ಇತ್ಯಾದಿಗಳನ್ನೂ ಹಾಕಿ ಇಡಬೇಕು. ಬಳಿಕ ೧೦-೧೨ ದಿನ ಗಳಿಗೆ ಈ ಅರ್ಕು ಪೆಪರಮಿಂಟಿನ ಅರ್ಕಿನಂತೆ ಅತ್ಯಂತ ರುಚಿ ಹತ್ತುವದು. ದೇಹಕ್ಕೂ ಇದು ಬಹಳ ಹಿತಕರ. ಮೈಸೂರ ಕಡೆಗೆ ಕಿತ್ತಳೆಹಣ್ಣಿನ ತೋಟೆ ಗಳನ್ನೂ ಹೀಗೆ ಉಪಯೋಗಿಸುವರಂತೆ.



## ಸಾದರ ಸ್ವೀಕಾರ

(೧) **ನವರತ್ನದ ಕಡಗ** (ಕಥಾ ಸಂಗ್ರಹ) ಲೇಖಕಿ : ಸೌ. ಶಾರದಾ ಜಡೆ. ಹುಬ್ಬಳ್ಳಿಯ 'ಸರ್ವೋದಯ ಸಾಹಿತ್ಯಮಾಲೆಯ' ನಾಲ್ಕನೆಯ ವರುಷದ ನಾಲ್ಕನೆಯ ಪುಷ್ಪವೆಂದು ಪ್ರಕಾಶಿತವಾದುದು. ಪುಟ ೭೬ ಬೆಲೆ ೧-೦-೦

(೨) **'ಮನೆಯಲ್ಲಿ ಹೊಲಿಗೆ'** ಬರೆದವರು ಶ್ರೀ ಹಳಪೇಟೆ ಚಿಂತಾಮಣಿರಾಯರು ಮತ್ತು ಸೌ. ಹಳಪೇಟೆ ಸುಶೀಲಾದೇವಿ. 'ಕರ್ನಾಟಕದ ಟೇಲರಿಂಗ ಕಾಲೇಜ' ಧಾರವಾಡದಿಂದ ಪ್ರಕಾಶಿತ. ಪುಟ ೧೧೯. ಬೆಲೆ ೧-೮-೦

**'ವೀರಮಾತೆಗೆ' ಪ್ರತಿಯಾಗಿ ಬರುವ ಪತ್ರಿಕೆಗಳು.**

(೧) **ಕಾನಡಾವೃತ್ತ :** ಕನ್ನಡ ವಾರಪತ್ರಿಕೆ, ಪ್ರತಿ ಮಂಗಳವಾರ ಕುಮಟಾದಿಂದ ಹೊರಡುವದು. ಸಂಪಾದಕರು : ಪಾಂಡುರಂಗ ಕೃಷ್ಣ ಶ್ಯಾನಭಾಗ. ವಾರ್ಷಿಕ ಚಂದಾ ೫ ರೂಪಾಯಿ.

(೨) **ಕರ್ನಾಟಕ ವೈಭವ :** ಕನ್ನಡ ವಾರಪತ್ರಿಕೆ, ಪ್ರತಿ ರವಿವಾರ ವಿಜಾಪುರ ದಿಂದ ಹೊರಡುತ್ತದೆ. ಸಂಪಾದಕರು : ಟಿ. ಕೆ. ನಾಯಿಕ.

(೩) **ನಾಗರಿಕ :** ಕುಮಟಾದಿಂದ ಹೊರಡುವ ಕನ್ನಡ ವಾರಪತ್ರಿಕೆ. ಸಂಪಾದ ಕರು : ಮಾ. ಗ. ಶೆಟ್ಟಿ. ವಾರ್ಷಿಕ ಚಂದಾ ೫ ರೂಪಾಯಿ.



ಒಂದು ಹೆಣ್ಣುಮಕ್ಕಳ ಸಂಸ್ಥೆಯ ಪ್ರಾರ್ಥನೋತ್ತರ ಭಾಷಣಗಳ ಸಾರ ಭಾಗ ೧. ಲೇಖಕಿ : ಶ್ರೀ. ಮಹಲಕ್ಷ್ಮೀ ಕುವರಿ. ಪುಟ ೧೦೨. ಪ್ರಕಾಶಕರು : ಡಾ. ವನವಿಹಾರಿ, ಧಾರವಾಡ.

೧೦೨ ಪುಟಗಳ ಈ ಪುಟ್ಟ ಹೊತ್ತಿಗೆಯು ನಮ್ಮ ಹೆಣ್ಮಕ್ಕಳ ಪ್ರಪಂಚಕ್ಕೆ ಒಂದು ಅಮೌಲ್ಯವಾದ ಪುಸ್ತಕವು. ಇದರಲ್ಲಿ ಒಬ್ಬ ಅನುಭವಿಕ ಭಾಷಣಕಾರರು ಒಂದು ಸ್ತ್ರೀ ಸಂಸ್ಥೆಯಲ್ಲಿನ ಪ್ರತಿದಿನದ ಪ್ರಾರ್ಥನಾನಂತರ ಒಳ್ಳೇ ಮಾರ್ಮಿಕವಾಗಿ ಮಾಡಿದ ಭಾಷಣದ ಸಾರವಿರುತ್ತದೆ. ಅಂಧ ರೂಢಿಯಿಂದ ದಿನ ನಿತ್ಯದಲ್ಲಿ ನಡೆಯುತ್ತಿರುವ ಎಷ್ಟೋ ತಪ್ಪುಗಳನ್ನು ಹಾಗೂ ಅದರಿಂದಾಗುತ್ತಿರುವ ಅನಾಹುತಗಳನ್ನು ವಿಚಾರಮಾಡಿ ಎಲ್ಲ ಜನಾಂಗಕ್ಕೂ ಆದರಲ್ಲೂ ಹೆಚ್ಚಾಗಿ ಹೆಣ್ಣುಮಕ್ಕಳಿಗೆ ಉಪಯೋಗ ಬೀಳುವಂತೆ, ಭಾಷಣಕಾರರು ಇದರಲ್ಲಿ ತಿಳಿಸಿ ಹೇಳಿದ್ದಾರೆ. ಕೆಲವು ಭಾಷಣಗಳಲ್ಲಿ ಹೆಣ್ಮಕ್ಕಳ ಬಗ್ಗೆ ಹಿಂದಿನಿಂದ ಬಂದ ಕೆಲವು ಸಂಸ್ಕಾರಗಳೂ, ಕಲ್ಪನೆಗಳೂ, ಸರಕಾರೀ ಕಾಯ್ದೆ ಕಟ್ಟಳೆಗಳಿಗಿಂತ ಹೇಗೆ ಭಯಂಕರವಿವೆಯೆಂಬುದನ್ನು ತಿಳಿಸಲಾಗಿದೆ. ಅಜ್ಞಾನಿ ಹೆಣ್ಮಕ್ಕಳು ಕೆಲವು ಗಂಡಸರ ನಟನಾಪ್ರೇಮವನ್ನೇ ನಂಬಿ ಹೇಗೆ ತಮ್ಮ ಬಾಳನ್ನು ಹಾಳುಮಾಡಿಕೊಳ್ಳುತ್ತಿದ್ದಾರೆ ಹಾಗೂ ಗಂಡಸರು ಈ ಅಜ್ಞಾನದ ದುರ್ಲಾಭವನ್ನು ಯಾವ ರೀತಿಯಿಂದ ಪಡೆಯುತ್ತಿದ್ದಾರೆಂಬ ವಿಷಯವನ್ನಂತೂ ಇದರಲ್ಲಿಯ ಬಹುತೇಕ ಎಲ್ಲ ಭಾಷಣಗಳಲ್ಲಿಯೂ ಬೇರೆ ಬೇರೆ ಉದಾಹರಣೆಗಳಿಂದ ತಿಳಿಸಲಾಗಿದೆ. ಶ್ರೀಮಂತ ಹಾಗೂ ಏಕತ್ರ ಕುಟುಂಬಗಳಲ್ಲಿದ್ದ ಹೆಣ್ಮಕ್ಕಳು ತಮ್ಮ ಜೀವನವನ್ನು ಯಾವ ರೀತಿಯಲ್ಲಿ ಯಂತ್ರದಂತೆ ಸಾಗಿಸಬೇಕಾಗುತ್ತದೆ, ಹಾಗೂ ಕೆಲವೊಮ್ಮೆ ಆದರಲ್ಲೂ ಕೆಲವು ಹೆಣ್ಮಕ್ಕಳು ತಮ್ಮ ಗಂಡಂದಿರ ಪ್ರೇಮದಿಂದ ವಂಚಿತರಾಗಿ ವಿಕಾರವನ್ನು ತಾಳಲಾರದೆ ಹೇಗೆ ಪರಪುರುಷರ ತುತ್ತಾಗಿ ಆಯುಷ್ಯವನ್ನೆಲ್ಲಾ ಕಷ್ಟದಲ್ಲೇ ಕಳೆಯುವ ಪ್ರಸಂಗ ಬರುತ್ತದೆ ಎಂಬದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ವಿಧವಾ ಹೆಣ್ಮಕ್ಕಳು ತಮ್ಮ ಉಪಜೀವನಕ್ಕಾಗಿ ಮಂದಿಯ ಮನೆಯಲ್ಲಿ ಕೆಲಸಕ್ಕೆ ನಿಂತಲ್ಲಿ ಆ ಮನೆಯ ಹೆಣ್ಮಕ್ಕಳೇ ಅವರನ್ನು ಹೇಗೆ ಕಾಣುವರೆಂಬ ವಿಚಾರವನ್ನೂ ಇದರಲ್ಲಿ ಸ್ಪಷ್ಟಪಡಿಸಲಾಗಿದೆ. ಗಂಡಸರು ತಾವು ಎಂತಹ ಕೀಳುದರ್ಜೆಯಲ್ಲಿ

ಜೀವಿಸುತ್ತಿದ್ದರೂ ಸಹ ಅದರ ಕಡೆಗೆ ಲಕ್ಷಿಸದೆ, ತಪ್ಪಿ ಕಾಲುಜಾರಿದ ಹೆಣ್ಮಕ್ಕಳಿಗೆ ಹೆಸರಿಡಲು ಹೇಗೆ ಸಿದ್ಧರಾಗುವರು ಎಂಬದನ್ನು ಮಾರ್ಮಿಕವಾಗಿ ತಿಳಿಸಿದ್ದಾರೆ. ಈ ಭಾಷಣದ ಮತ್ತೊಂದು ವೈಶಿಷ್ಟ್ಯವೆಂದರೆ ಭಾಷಣಕಾರರು ಯಾವುದೇ ವಿಷಯ ವನ್ನಾದರೂ ಸಹ ಕೇವಲ ಒಂದೇ ಮಗ್ಗಲು ಹಿಡಿದು ಮಾತಾಡುತ್ತ ಹೊರಡದೆ, ಪ್ರತಿಯೊಂದು ವಿಷಯದ ಪ್ರತಿಯೊಂದು ಅಂಗವನ್ನೂ ಸಂಪೂರ್ಣ ನಿರೀಕ್ಷಿಸಿ ಮಾತಾ ಡಿದ್ದಾರೆ. ಜಗತ್ತಿನಲ್ಲಿ ನಡೆಯುವ ವಿವಿಧ ವಿಷಯಗಳ ವಿಚಾರಗಳೂ ಈ ಪುಟ್ಟ ಹೊತ್ತಿಗೆಯಲ್ಲಿ ಅಡಕವಾಗಿವೆ. ಹಾಗೂ ವಿಚಾರಪರವಿವೆ. ಜನರು ಕ್ಷುಲ್ಲಕ ವಿಷಯ ವೆಂದೆಣಿಸುವ ವಿಷಯಗಳು ಸಹ ಹೇಗೆ ಮಹತ್ವದ್ದಿವೆ ಎಂಬದನ್ನು ಉದಾಹರಣೆ ಗಳಿಂದ ಮನವರಿಕೆ ಮಾಡಿಕೊಟ್ಟಿದ್ದಾರೆ.

ಈ ಗ್ರಂಥಕ್ಕೆ ಮುನ್ನುಡಿ ಬರೆದಿರುವ ಡಾ. ವನವಿಹಾರಿಯವರು ತಮ್ಮ ಮುನ್ನುಡಿಯಲ್ಲಿ “ ಈ ಪ್ರಚಲಿತ ಪದ್ಧತಿಯನ್ನು ಬದಲಾಯಿಸಲು ಹೆಣ್ಮಕ್ಕಳು ದೇವರ ನಿಯಮದ ತಳಹದಿಯ ಮೇಲೆ ನಿಂತು ಹೋರಾಡಬೇಕೇ ಹೊರ್ತು ಸೃಷ್ಟಿ ನಿಯಮದ ವಿರುದ್ಧ, ಕೇವಲ ಗಂಡಸರಿಗೆ ಪ್ರತೀಕಾರ ಮಾಡುವ ಬುದ್ಧಿಯಿಂದ ಯಾವ ಚಳವಳಿಯನ್ನೂ ಮಾಡಬಾರದು.” ಎಂದಿದ್ದಾರೆ. ಈ ಗ್ರಂಥದಲ್ಲಿನ ವಿಚಾರ ವಾದರೂ ಮೊದಲಿನಿಂದ ಕಡೆತನಕ ಇದೇ ಉದ್ದೇಶವಿಟ್ಟು ಹೊರಟಿದ್ದರೂ ಸಹ ಪ್ರತಿದಿನದ ಪ್ರತಿಭಾಷಣಗಳಲ್ಲಿಯೂ ನಾವೀನ್ಯತೆ ಇದೆ. ಇಂಥ ಗ್ರಂಥವನ್ನು ಎಲ್ಲರೂ ವಿಶೇಷವಾಗಿ ಹೆಣ್ಮಕ್ಕಳು ಸಂಗ್ರಹಿಸಿ ಮನನಮಾಡಬೇಕಾದದ್ದು ಅತ್ಯಾವಶ್ಯಕ. ಈ ಹೊಸ ಅನುಭವಾಮೃತವು ಹೊಸ ಮಾದರಿಯದಿದ್ದರೂ ಸಹ ಗ್ರಂಥದ ಗಹನ ವಿಚಾ ರಕ್ಕೆ ಲೇಖಕಿಯರ ಶೈಲಿಯು ಅಷ್ಟು ತಕ್ಕಂತೆ ಇಲ್ಲದಿರುವದೊಂದೇ ಇದರಲ್ಲಿ ಕೊರತೆ ಯಾದ್ದರಿಂದ ಓದುಗರು ಸ್ವಲ್ಪ ಅದರ ಕಡೆಗೆ ಹಂಸಕ್ಷೀರ ನ್ಯಾಯದಂತೆ ನೋಡುವ ದೊಳಿತು. ಇಲ್ಲಿ ವಿಚಾರ ಮುಖ್ಯವೇ ಹೊರತು ವಾಕ್ಸ್ಸರಣಿಯಲ್ಲ.

ಶ್ರೀ

# ವೀರ ಸಾಧ್ವೀಶಿರೋಮಣಿ

## ಶ್ರೀ ತಿಮ್ಮಮ್ಮನವರ ಚರಿತ್ರೆಯು

ಲೇಖಕ :— **ಶ್ರೀ ನಾರಾಯಣ ಶ್ರೀನಿವಾಸ ರಾಜಪುರೋಹಿತ,**
**ಇತಿಹಾಸ ಸಂಶೋಧಕ ಧಾರವಾಡ.**

ಸಾಧುವರ್ಯರ ಅಥವಾ ಸಾಧ್ವಿಯರ ಚರಿತ್ರಗಳು ಸ್ಫೂರ್ತಿದಾಯಕವಾಗಿರುತ್ತವೆ. ಅವುಗಳಿಂದ ಉದಾತ್ತಧ್ಯೇಯವು ಜನರ ಹೃದಯದಲ್ಲಿ ಸ್ಥಿರವಾಗಿ ನೆಲೆಗೊಳ್ಳುತ್ತವೆ. ಮತ್ತು ಆದರಿಂದ ಪ್ರತಿಯೊಬ್ಬರಲ್ಲಿ ತಾವೂ ಅವರಂತೆ ಪುಣ್ಯಶ್ಲೋಕರಾಗಬೇಕೆಂಬ ಆಶಾಂಕುರವು ನಿರ್ಮಾಣವಾಗುತ್ತದೆ. ಇಂಥ ಮಹನೀಯರ ಚರಿತ್ರಗಳಿಂದ ಸಂಕಟ ಕಾಲದಲ್ಲಿ ಹೇಗೆ ಧೈರ್ಯದಿಂದ ನಡೆದುಕೊಳ್ಳಬೇಕೆಂಬುದು ತಿಳಿಯುತ್ತದೆ.

ಶ್ರೀ ತಿಮ್ಮಮ್ಮನವರಿಗೆ ದೈವದುರ್ವಿಲಾಸದಿಂದ ಬಾಲ್ಯದಲ್ಲಿಯೇ ವೈಧವ್ಯದಂಥ ದೊಡ್ಡ ಆಪತ್ತಿಯು ಬಂದೊದಗಿದರೂ, ಆ ಆಪತ್ತಿಯನ್ನು ಆಧ್ಯಾತ್ಮಿಕ ಸಂಪತ್ತಿಯಲ್ಲಿ ರೂಪಾಂತರಗೊಳಿಸಿದಂಥ ವೀರ ಶಿರೋಮಣಿಯಾದ ಸಾಧ್ವಿಯರಾಗಿದ್ದಾರೆ ಇವರು! ಈ ಪುಣ್ಯಶ್ಲೋಕಳ ದಿವ್ಯ ಚರಿತ್ರೆಯು ಸಾದ್ಯಂತವಾಗಿ ಬೋಧಪ್ರದವಾಗಿದೆ.

## ಮಂಗಲಾಚರಣ

ಸಾಧ್ವೀಶಿರೋಮಣಿ ಶ್ರೀ ತಿಮ್ಮಮ್ಮನವರು ತಿರುಮಲೆಯ ಶ್ರೀ ವೆಂಕಟರಮಣ ದೇವರ ಭಕ್ತರಾಗಿದ್ದುದರಿಂದ ವಿಖ್ಯಾತ ದಾಸವರ್ಯರಾದ ಶ್ರೀ ಪುರಂದರದಾಸರ, ಶ್ರೀ ವಿಜಯದಾಸರ, ಶ್ರೀ ಪ್ರಸನ್ನ ವೆಂಕಟದಾಸರ ಭಕ್ತಿಪರಿಪೂರ್ಣವಾದ ವಾಣಿಯಿಂದ ವ್ಯಕ್ತವಾದ ಶ್ರೀ ವೆಂಕಟರಮಣ ದೇವರ ಸ್ತೋತ್ರಗಳನ್ನು ಈ ಮಂಗಲಾಚರಣದಲ್ಲಿ ನಿವೇದನ ಮಾಡುತ್ತೇವೆ.

### (೧) ಶ್ರೀ ಪುರಂದರದಾಸರ ವಾಣಿಯಿಂದ

( ನಾದ ನಾಮ ಕ್ರಿಯಾ ರಾಗ, ಅಟತಾಳ )

ದಾಸನ್ನ ಮಾಡಿಕೊ ಎನ್ನ, ಸ್ವಾಮಿ
ಸಾಸಿರ ನಾಮದ **ವೆಂಕಟರಮಣ** ॥ ಪ ॥
ದುರುಳ ಬುದ್ಧಿಗಳೆಲ್ಲ ಬಿಡಿಸೊ ನಿನ್ನ
ಕರುಣ ಕವಚ ಎನ್ನ ಹರಣಕ್ಕೆ ತೊಡಿಸೊ ॥

ಚರಣಸೇವೆ ಎನಗೆ ಕೊಡಿಸೊ ಅಭಯ
ಕರಪುಷ್ಪ ಎನ್ನಯ ಶಿರದೊಳು ಮುಡಿಸೊ ॥ ೧ ॥

ದೃಢಭಕ್ತಿ ನಿನ್ನಲ್ಲಿ ಬೇಡಿ ನಾ-
ನಡಿಗೆರಗುವೆನಯ್ಯ ಅನುದಿನ ಪಾಡಿ ॥
ಕಡೆಗಣ್ಣಿಲೇಕೆನ್ನ ನೋಡಿ ಬಿಡುವೆ
ಕೊಡು ನಿನ್ನ ಧ್ಯಾನವ ಮನಶುಚಿಮಾಡಿ ॥ ೨ ॥

ಮೊರೆಹೊಕ್ಕವರ ಕಾವ ಬಿರುದು ನೀ
ಮರೆಯದೆ ರಕ್ಷಣೆ ಮಾಡೆನ್ನ ಪೊರೆದು ॥
ದುರಿತಗಳೆಲ್ಲವ ತರಿದು ಸಿರಿ
ಪುರಂದರ ವಿಠ್ಠಲ ಕರುಣದಿ ಕರೆದು ॥ ೩ ॥

## (೨) ಶ್ರೀ ವಿಜಯದಾಸರ ವಾಣಿಯಿಂದ

( ಕಾಂಬೋಧಿರಾಗ, ಝಂಪೆತಾಳ )

ನಿನ್ನದರುಶನಕೆ ಬಂದವನಲ್ಲವೊ ಮಹಾ
ಪುಣ್ಯವಂತರ ದಿವ್ಯಚರಣ ನೋಡಲು ಬಂದೆ ॥ ಪ ॥

ಎಲ್ಲಿ ನೋಡಲು ನೀನೆ ವ್ಯಾಪ್ತನಾಗಿರಲಿಕ್ಕೆ
ಇಲ್ಲಿಗೇ ಬಾಹ ಕಾರಣವಾವುದೊ
ಸೊಲ್ಲಿಗೆ ಕಂಭದೊಳು ತೋರಿದ ಮಹಾಮಹಿಮ
ಅಲ್ಲಿ ಇಲ್ಲೇನಯ್ಯ ಬಲ್ಲಭಕುತರಿಗೆ ॥ ೧ ॥

ನೀನಿದ್ದ ಸ್ಥಾನದಲಿ ಸರ್ವಪುಣ್ಯಕ್ಷೇತ್ರ
ನೀನಿದ್ದ ಸ್ಥಾನದಲಿ ಸಕಲ ತೀರ್ಥ
ನೀನಿದ್ದ ಸ್ಥಾನದಲಿ ಸಮಸ್ತ ತಾತ್ವಿಕರು
ನಾನಿತ್ತ ಬಂದಿದ್ದು ನಿನಗೆ ತಿಳಿಯದೆ ಪ್ರಭುವೆ ॥ ೨ ॥

ಭಳಿರೆ **ತಿರಮಲರಾಯ** ನಿನ್ನ ಕರುಣಾರಸಕೆ
ನೆಲೆಗಾಣೆ ನೆಲೆಗಾಣೆ ನೆರೆಹೊರೆಯುಲಿ
ಒಲಿದು ಭಕ್ತರಿಗಾಗಿ ಮದುವೆ ಹವಣಿಸಿಕೊಂಡೆ
ಸುಲಭ ದೇವರ ದೇವ ವಿಜಯ ವಿಠ್ಠಲರಾಯ ॥ ೩ ॥

## (೩) ಶ್ರೀ ಪ್ರಸನ್ನ ವೆಂಕಟದಾಸರ ವಾಣಿಯಿಂದ

ಬಿಡೆನೋ ನಿನ್ನಂಘ್ರಿ ಶ್ರೀನಿವಾಸಾ॥ ನನ್ನ
ದುಡಿಸಿಕೊಳ್ಳೆಲೋ ಶ್ರೀನಿವಾಸಾ॥ ನಿ-
ನ್ನಡಿಯೇ ಜೀತಲ್ಲೋ ಶ್ರೀನಿವಾಸಾ ॥ ನನ್ನ
ನಡೆ ತಪ್ಪು ಕಾಯೋ ಶ್ರೀನಿವಾಸಾ ॥೧॥

ಬಡಿಯೋ ಬೆನ್ನಲಿ ಶ್ರೀನಿವಾಸಾ॥ ನ-
ನ್ನೊಡಲ ಹೊಯ್ಯದಿರೊ ಶ್ರೀನಿವಾಸಾ ॥ ನಾ
ಬಡವ ಕಾಣೆಲೊ ಶ್ರೀನಿವಾಸಾ ॥ ನಾ
ನಿನ್ನೊಡಲ ಹೊಕ್ಕೆನು ಶ್ರೀನಿವಾಸಾ ॥ ॥೨॥

## ೧ ನೆಯ ಅಧ್ಯಾಯ

# ಜನ್ಮ ಮತ್ತು ಬಾಲ್ಯ



ಶಕವರ್ಷದ ೧೬೪೫ ರಲ್ಲಿ ( ಎಂದರೆ ಕ್ರಿಸ್ತವರ್ಷದ ೧೭೨೩ ರಲ್ಲಿ ) ನಿಜಾಮ ಉಲ್ಮುಲ್ಕನ (ಕ್ರಿ. ವ. ೧೭೧೩-೧೭೪೮) ಸಂಸ್ಥಾನದಲ್ಲಿ ಕರ್ನಾಟಕದಲ್ಲಿ ರಾಯಚೂರ ಜಿಲ್ಹೆಯ ತುರಡಗಿ ಗ್ರಾಮದಲ್ಲಿ, ವೇದಶಾಸ್ತ್ರ ಸಂಪನ್ನ ನರಸಿಂಹಾಚಾರ್ಯ ಜ್ಯೋತಿಷಿ ಎಂಬ ಕಾಣ್ವಶಾಖಾಧ್ಯಾಯಿಯಾದ ತಪೋನಿಷ್ಠ ಬ್ರಾಹ್ಮಣನು ವಾಸಿಸುತ್ತಿದ್ದನು. ಈ ವಿಪ್ರೋತ್ತಮನ ಹೆಂಡತಿಯ ಹೆಸರು ಸೌ॥ ಚಂದ್ರಲಾದೇವಿ. ಸಾತ್ವಿಕ ಶಿರೋಮಣಿಯಾದ ಈ ಮಹನೀಯಳನ್ನು ಜನರು 'ಚಂದ್ರಕ್ಕಾ' ಎಂದು ಆದರಪುಸ್ಸರವಾಗಿ ಕರೆಯುತ್ತಿದ್ದರು. ಪುಣ್ಯಶ್ಲೋಕರಾದ ನರಸಿಂಹಾಚಾರ್ಯರು ವೇದ, ಶಾಸ್ತ್ರಗಳಲ್ಲಿ ಪಾರಂಗತರಾಗಿ ಗೃಹಸ್ಥಾಶ್ರಮದಲ್ಲಿದ್ದುಕೊಂಡು, ಯಜ್ಞಯಾಗಾದಿ ವೈದಿಕ ಕರ್ಮಗಳನ್ನು ಮಾಡುತ್ತ ಹಾಗೂ ದೇವ-ಋಷಿಗಳನ್ನೂ ಅತಿಥಿ-ಅಭ್ಯಾಗತರನ್ನೂ ತೃಪ್ತಿಬಡಿಸುತ್ತ ಸುಖದಿಂದ ಕಾಲಕ್ರಮಣ ಮಾಡುತ್ತಿದ್ದರು. ಈ ದಂಪತಿಗಳು ತಮ್ಮ ದಿವ್ಯತೇಜಸ್ಸಿನಿಂದ ಸರ್ವರಿಗೂ ಪೂಜ್ಯರಾಗಿದ್ದರು. ಇಂಥ ಮಾತಾಪಿತೃಗಳ ಪವಿತ್ರತೆಯಿಂದಲೇ ಆ ಶ್ರೇಷ್ಠ ತಾಯಿತಂದೆಗಳ ಹೊಟ್ಟೆಯಲ್ಲಿ ಸತ್ಪುರು

(೧) ಈ ಚರಿತ್ರೆಯು ಸಂಬಂಧದ ಎಲ್ಲ ಹಕ್ಕುಗಳನ್ನು ಲೇಖಕರು ತಮ್ಮ ಸ್ವಾಧೀನದಲ್ಲಿ ಇಟ್ಟುಕೊಂಡಿರುತ್ತಾರೆ.

ಷರು ಅಥವಾ ಸಾಧ್ವಿಯರು ಅವತಾರ ಮಾಡುತ್ತಿರುತ್ತಾರೆ. ಸದ್ಗೃಹಿಣಿಯರು, ಹಾಗೂ ಸದ್ಗೃಹಸ್ಥರು ಯಾವ ಸಮಾಜದಲ್ಲಿ ಹೆಚ್ಚು ಹೆಚ್ಚು ಇರುತ್ತಾರೋ, ಆ ಸಮಾಜದಲ್ಲಿ ಧೀರೋದಾತ್ತರಾದ ಸಾಧ್ವಿಯರು ಮತ್ತು ಸತ್ಪುರುಷರು ಜನ್ಮ ಹೊಂದುತ್ತಾರೆ.

ತುರಡಗಿ ಗ್ರಾಮದ ತಪೋಧನರಾದ ಜ್ಯೋತಿಷಿ ನರಸಿಂಹಾಚಾರ್ಯರು ಹಾಗೂ ಅವರ ಧರ್ಮಪತ್ನಿಯರಾದ ಚಂದ್ರಲಾದೇವಿಯರು ಪರಮಪಾವನ ಚರಿತೆ ಯುಳ್ಳವರಾಗಿದ್ದರು. ಇಂಥ ಸತ್ವಶಾಲಿಯಾದ ಈ ದಂಪತಿಗೆ, ಶಕವರ್ಷದ ೧೬೫೦ ರಲ್ಲಿ ಸಾಕ್ಷಾತ್ ಶ್ರೀ ಯಾಜ್ಞವಲ್ಕ್ಯ ಮಹರ್ಷಿಗಳ ಹಿರಿಯ ಹೆಂಡತಿಯಾದ ಬ್ರಹ್ಮವಾದಿನೀ ಮೈತ್ರೇಯಿದೇವಿಯೇ ಪುತ್ರಿಯಾಗಿ ಜನಿಸಿದಳೆಂದು ಹೇಳಬೇಕಾ ಗಿದೆ. ಏಕಂದರೆ, ಈ ಮಹಾತೇಜಸ್ವಿಯಾದ ಮೈತ್ರೇಯಿದೇವಿಯ ಉಜ್ವಲ ತ್ಯಾಗ ಮಯ ಜೀವನವು, ಈ ತುರಡಗಿ ಗ್ರಾಮದಲ್ಲಿ ಅವತರಿಸಿದ ಈ ಕನ್ಯೆಯ ಚರಿತ್ರೆ ಯಲ್ಲಿ ಸ್ಪಷ್ಟವಾಗಿ ಒಡಮೂಡಿದೆ. ಆ ಮೈತ್ರೇಯಿದೇವಿಯ ತ್ಯಾಗಮಯ ಜೀವನವು, ಸುಪ್ರಸಿದ್ಧವಾದ ಬೃಹದಾರಣ್ಯಕ ಉಪನಿಷತ್ತಿನಲ್ಲಿಯೇ ಹೀಗೆ ಕೀರ್ತಿತವಾಗಿದೆ.

ಗೃಹಸ್ಥಾಶ್ರಮದಲ್ಲಿದ್ದಂಥ ಶ್ರೀ ಯಾಜ್ಞವಲ್ಕ್ಯ ಮಹಾಮುನಿಗಳಿಗೆ ಇಬ್ಬರು ಹೆಂಡಂದಿರಿದ್ದರು. ಹೀಗೆ:— (೧) ಮೈತ್ರೇಯಿ (೨) ಕಾತ್ಯಾಯನಿ. ಒಂದು ದಿವಸ ಶ್ರೀಯಾಜ್ಞವಲ್ಕ್ಯ ಮಹರ್ಷಿಗಳು, ತಮ್ಮ ಜ್ಯೇಷ್ಠ ಪತ್ನಿಯಾದ ಮೈತ್ರೇಯಿದೇವಿಯನ್ನು ತಮ್ಮ ಬಳಿಗೆ ಕರೆದು ಹೀಗೆ ನುಡಿದರು:–"ಹೇ, ಮೈತ್ರೇಯೀ, ನಾನು ಇನ್ನು ಮುಂದೆ ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ಮಾಡಿದ್ದೇನೆ. ಇದಕ್ಕೆ ನಿನ್ನ ಅನುಮತಿಯನ್ನು ಕೇಳುತ್ತೇನೆ; ಇದಲ್ಲದೆ ನಿನಗೂ ಕಾತ್ಯಾಯನಿಗೂ ನನ್ನ ಬಳಿಯಲ್ಲಿದ್ದ ಬೆಳ್ಳಿ, ಬಂಗಾರ, ಮುತ್ತು ರತ್ನ, ವಜ್ರ, ವೈಢೂರ್ಯ ಹಾಗೂ ಸುವರ್ಣನಾಣ್ಯ ಮುಂತಾದ ಐದೈದುಲಕ್ಷ ರೂಪಾಯಿ ಬೆಲೆಯುಳ್ಳ ಆಸ್ತಿಯನ್ನೆಲ್ಲ ಸಮನಾಗಿ ಹಂಚಿಕೊಡುತ್ತೇನೆ. ಇದಕ್ಕೆ ನಿನ್ನ ಅಭಿಪ್ರಾಯವೇನು ?"

ಈ ಮಾತನ್ನು ಕೇಳಿ, ಮೈತ್ರೇಯಿದೇವಿಯು ವೈರಾಗ್ಯ ಪ್ರಚಂಡವಾದ ದೃಷ್ಟಿಯಿಂದ ಹೀಗೆ ಪ್ರಶ್ನೆಯನ್ನು ಮಾಡಿದಳು:–" ಅಹೋ, ಭಗವನ್, ಒಳ್ಳೆಯದು, ಧನ–ಕನಕಗಳಿಂದ ಸಮೃದ್ಧವಾದ ಸಂಪೂರ್ಣ ಪೃಥ್ವಿಯೇ ನನಗೆ ಪ್ರಾಪ್ತವಾದರೆ, ನಾನು ಅಮರನಾಗುತ್ತೇನೇನು ? ಎಂದರೆ ನನಗೆ ಅಮೃತತ್ವವು ( = ಮೋಕ್ಷವು ) ದೊರೆಯುತ್ತದೆಯೋ ಹೇಗೆ ?" ಇದಕ್ಕೆ ಶ್ರೀ ಯಾಜ್ಞವಲ್ಕ್ಯರು ಉತ್ತರ ಹೇಳಿದ್ದೇ ನೆಂದರೆ:– " ಇಲ್ಲ ! ಇಲ್ಲ !! ಧನ, ಕನಕಗಳಿಂದ ಅಮೃತತ್ವವು ಪ್ರಾಪ್ತವಾಗು ವುದಿಲ್ಲ !!! ಕೇವಲ ಸುಖಸಾಧನಗಳಿಂದ ಸಮೃದ್ಧವಾದ ಶ್ರೀಮಂತರ ಜೀವಿತದಂತೆ ನಿನ್ನ ಜೀವನವೂ ಸುಖೋಪಭೋಗಗಳಿಂದ ಸಂಪನ್ನವಾಗುವುದು; ಹೊರತು

[ ಶ್ರೀಧರಲಾಲರ ಮನೆ. ಭಾಗ್ಯವತಿ ಆಲೋಚಿಸುತ್ತ ಕುಳಿತಿರುವಳು. ಜೊತೆಗೆ ಹಾಡೊಂದನ್ನು ಗುಣಗುಟ್ಟುತ್ತಿದ್ದಾಳೆ. ]

ಹಾಡು :— [ ಮುರಳೀಧರನ ಧೂನ ನುಸಾಗ ಅಥವಾ ಮನವನೆ ಮೋಹಿಸಿತು ಎಂಬಂತೆ ]

ಮನವನೆ ಮೋಹಿಸಿತು ದರುಶನವು ।
ಸಮುಸಕಲಾ ಸಮುಶೀಲ ಸಾಧುಗುಣ ಮನವನೆ ॥ ೧ ॥
ಮೋಹಿಸಿತೂ ऽऽ ....... [ರಾಗ]
ಮೋಹಿಸಿತೂ ಅತಿ ಮೋದಯುತ ಯೋಗವು ।
ಅಭಯು ವಿನೋದದ ಸತ್ ಚಿತ್ ಮೂರುತಿ ॥ ೨ ।
ಮಾಡೆ ವಿಹಾರ ಸರಸರಾಗದಿ ।
ಬೀರುವುದೈ ಮುದ ನಿನ್ನ ಸುಗಾನವು ॥ ೩ ॥

( ಶ್ರೀಧರಲಾಲನ ಪ್ರವೇಶ )

ಶ್ರೀಧರಲಾಲ :— ರತಿಲಾಲರಂಥ ಐಶ್ವರ್ಯ ಸಂಪನ್ನ ತರುಣನು ನಿನ್ನ ಪಾಣಿಗ್ರಹಣ ಮಾಡಲಿಕ್ಕೆ ಒಪ್ಪಿರಲಿಕ್ಕೆ ನೀನು ಇನ್ನೇನು ಆಲೋಚನೆ ಮಾಡುತ್ತಿರುವೆ ಯೆಂಬುವುದು ತಿಳಿಯದು. ಬಂಗಾರಕ್ಕೆ ಸುವಾಸನೆ ಇದ್ದ ಹಾಗೆ ಸಂಪತ್ತು ಮತ್ತು ವಿದ್ಯೆ ಎರಡೂ ಅವರಲ್ಲಿ ಇರುವವು !

ಭಾಗ್ಯವತಿ :— ಎಷ್ಟು ವಿಚಾರಮಾಡಿದರೂ ಮನಸ್ಸಿನ ನಿರ್ಧಾರವಾಗಲೊಲ್ಲದು. ಪ್ರಪಂಚದಲ್ಲಿ ಸಂಪತ್ತು ಮತ್ತು ವಿದ್ಯೆ ಇವೆರಡನ್ನು ಬಿಟ್ಟರೆ ಬೇರೆ ಯಾವುದಾದರೂ ವಿಚಾರವು ಮದುವೆಮಾಡಿಕೊಳ್ಳಲಿಕ್ಕೆ ಬೇಕಲ್ಲವೆ ?

ಶ್ರೀಧರಲಾಲ :— ನಿನ್ನ ಹಾಳು ವಿಚಾರವನ್ನು ಬಿಟ್ಟುಬಿಡು; ನನ್ನ ಮಾತು ಕೇಳದೇ ಹೋದರೆ ನನ್ನದು ನಿನ್ನದು ಸಂಬಂಧವೇ ಮುರಿದು ಹೋಗಬಹುದು !

( ನೌಕರನ ಪ್ರವೇಶ )

ನೌಕರ :— ಯಾರೋ ಕೂಲಿಕಾರರು ಬಂದಾರೆ.

ಶ್ರೀಧರಲಾಲ :— ಕರೆ; ಅವರನ್ನು ಒಳಗೆ.

[ ಭೀಮಪ್ಪ, ರಾಮಕ್ಕ ಮತ್ತು ಮಗು ಬರುವರು; ಭಾಗ್ಯವತಿ ಎದ್ದು ಹೋಗುವಳು. ]

ಶ್ರೀಧರಲಾಲ :— ಏನು ಬಂದಿದ್ದು ?

ಭೀಮಪ್ಪ :— ನನ್ನ ಹೆಂಡತಿಗೆ ಯಾವ ಕೆಲಸವಿಲ್ಲ; ನಿಮ್ಮ ಮನ್ಯಾಗ ಒಕ್ಕಲಗಿತ್ತಿ ಕೆಲಸಮಾಡಿ ಇರಬೇಕೆಂತಾಳ. ನಿಮ್ಮಂಥಾ ದೊಡ್ಡವರ ಮನೆಯಲ್ಲಿ ಎಂಜಲ ಮಾಡಿ ಬೀಸಾಡಿದ ಚಾನದಿಂದ ನಮ್ಮ ಹೊಟ್ಟೆತುಂಬತೈತಿ.

ರಾಮಕ್ಕ:— ಹೌದು ಸೋಮಿ! ನೀವು ಹೇಳಿದ ಕೆಲಸ ಮಾಡಿ, ಕೊಟ್ಟ ಸಂಬಳದ ಮ್ಯಾಲೆ ಇರತೇನಿ ಸೋಮಿ.

ಶ್ರೀಧರಲಾಲ:— (ಸ್ವಗತ) ಪಟ್ಟಣದ ಡೌಲಿನ ಡ್ರೆಸ್ಸು ಇಲ್ಲದಿದ್ದರೂ ಮುಖ ಚರ್ಯೆಯು ಮೇಲೆ ಆರೋಗ್ಯದ ಕಳೆ ಇರುವುದು. (ಬಹಿರಂಗ) ಬಿದ್ದ ಕೆಲಸ ಮಾಡಲಿಕ್ಕೆ ನಿನ್ನ ಹೆಂಡತಿ ದಷ್ಟಪುಷ್ಟ ಇರುವಳೋ? ನಮ್ಮ ಒಂದೇ ಮನೆ ಕೆಲಸ ಮಾಡಿದರೆ ತಿಂಗಳಿಗೆ ಮೂರು ರೂಪಾಯಿ ಸಂಬಳವಾದರೆ ಕೆಲಸ ಕೊಡುತ್ತೇನೆ.

ಭೀಮಪ್ಪ:— ಮೂರು ರೂಪಾಯಿಗೆ ನಮ್ಮ ಹೊಟ್ಟೆ ಹೇಗೆ ತುಂಬಬೇಕು ಸ್ವಾಮಿ?

ಶ್ರೀಧರಲಾಲ:— ನಿಮ್ಮ ಹೊಟ್ಟೆಯನ್ನು ತುಂಬುವ ಭಾರ ನಮ್ಮ ಮೇಲೆ ಇಲ್ಲ. ನಮ್ಮ ಮನೆ ಕೆಲಸ ತಪ್ಪದೇ ಸಾಗಬೇಕು.

ರಾಮಕ್ಕ:— ಆಗಲಿ, ಸ್ವಾಮಿ; ಮುಸ್ಸ್ಯಾಗ ನನ್ನ ಹುಡುಗ್ಗ ಒಂದು ತುತ್ತು ಅನ್ನ ಬಿಡ್ರಿ.

ಶ್ರೀಧರಲಾಲ:— ನಿನ್ನ ಈ ಪ್ರಪಂಚಕ್ಕೆ ಹುಡುಗರು ಬೇರೆ ಏನು? ಎಷ್ಟು ಹುಡುಗರು ನಿನಗೆ? ನಮ್ಮ ಮನೆಗೆಲಸಕ್ಕೆ ಬರುವಾಗ ಹುಡುಗರನ್ನು ಕರೆದುಕೊಂಡು ಬರುವಹಾಗಿಲ್ಲ. ನಾವು ತಿಂಡಿ ತಿನ್ನೋ ವೇಳೆಗೆ ಅವು ಪಿರಿ ಪಿರಿ ಕಣ್ಣು ಬಿಟ್ಟರೆ ನಮಗೆ ಅದು ಸರಿಹೋಗುವುದಿಲ್ಲ.

ರಾಮಕ್ಕ:— ದೇವರು ಕೊಟ್ಟ ಮಕ್ಕಳಿಗೆ ಏನು ಮಾಡಬೇಕು ಸ್ವಾಮಿ? ನನಗೇನು ಒಂದೇ ಒಂದು ಐತೆ.

ಶ್ರೀಧರಲಾಲ:— ಇದ್ದ ಹುಡುಗನನ್ನು ಏನಾದರೂ ಮಾಡಿಕೊ. ಇನ್ನು ಮೇಲೆ ಹೆರಿಗೆಗೆ, ನಿನ್ನ ಬ್ಯಾನಿ ಬೇಸರಿಕೆಗೆ, ರಜೆ ಇಲ್ಲ. ಬ್ಯಾನಿ ರಜೆ, ಬ್ಯಾಸರಿಕೆ ಅಲ್ಪ ರಜೆ ಇವೆಲ್ಲ ದೊಡ್ಡ ಸಂಬಳದವರಿಗೆ! ಅವೆಲ್ಲ ಸವಲತ್ತುಗಳು ಒಕ್ಕಲಗಿತ್ತಿಗಲ್ಲ. ಹೊಟ್ಟೆಯನ್ನು ಕಟ್ಟಬೇಕು; ಬ್ಯಾನಿ ಬೀಳಬಾರದು; ಕೆಲಸ ಜಾಸ್ತಿ ಮಾಡಬೇಕು; ಮಕ್ಕಳುಮರಿ ತಂಟೆ ಇರಬಾರದು; ಇವೆಲ್ಲ ಮಾತುಗಳಿಗೆ ಒಪ್ಪಿಗೆಯಾದರೆ ನಾಳಿನಿಂದ ನೌಕರಿಗೆ ಬರ್ಲಿ. ಈಗ ಇದ್ದವಳಿಗೆ ಬಿಡಬೇಕಾಗಿದೆ. ಯಾವಾಗಲೂ ತಿಂಗಳಿಗೆ ಒಂದೆರಡು ಸಲ ತಪ್ಪಿಸುವಳು. ಸಂಬಳದಲ್ಲಿ ೩ ಆಣೆ ಮುರಕೊಂಡರೆ ಗುದ್ದಾಡುವಳು.

ರಾಮಕ್ಕ:— ನಾವು ಬಡವರು; ನಿಮ್ಮ ಕಾಲಾಗಿನ ಕಸ ಆಗಿ ನೀವು ಹೇಳಿದಂತೆ ಇರುತ್ತೀವಿ ಸೋಮಿ!

ಶ್ರೀಧರಲಾಲ:— ನಾಳಿನಿಂದ ಬಾ, ಹೋಗು.

---

## ಅಂಕ ೧ [ ದೃಶ್ಯ ೪ ]

[ ಶ್ರೀಧರಲಾಲನ ಮನೆ, ಭಾಗ್ಯವತಿ ಹಾಡುತ್ತಾ ಬರುವಳು ]

**ಹಾಡು:**—( ಮೇರೆತೋ ಗಿರಿಧರಗೋಪಾಲ ಎಂಬಂತೆ )

ಏಕೆ ಬರದಿಹ ಮನಮೋಹನ
ಆಯಿತು ಬಹುಕಾಲ ॥ ೧ ॥
ಶಾಂತಿಯಿಂದ ಕಾಂತಿಬಲು ।
ಪ್ರಾಪ್ತನಿನಗೆ ನಿರುಪಮ ॥ ೨ ॥
ಬೋಧೆಯಿಂದ ಭ್ರಾಂತಿಯನ್ನು
ಹಾರುಗೊಳಿಸು ನನ್ನಯ ॥ ೩ ॥

[ ಸ್ವಗತ : ] ರತಿಲಾಲ ಶೇಟರ ಸಂಗಡ ನನ್ನ ವಿವಾಹ ಮಾಡುವ ತಂದೆಯ ವಿಚಾರದ ಬಗ್ಗೆ ಸಮಶೀಲನ ಅಭಿಪ್ರಾಯವನ್ನು ತಿಳಕೊಳ್ಳಬೇಕೆಂದು ಅವನಿಗೆ ಕರೆ ಕಳಿಸಿರುವೆನು. ಏಕೆ ಇನ್ನೂ ಬರಲಿಲ್ಲ? ನನ್ನ ಮನಸ್ಸು ಸಮಶೀಲನ ಕಡೆಗೆ ಇರುವುದು. ತಂದೆಯ ಹಟವು, ನಾನು ರತಿಲಾಲನ್ನು ಪಾಣಿಗ್ರಹಣಮಾಡಬೇಕೆಂದು. ತಂದೆ ಹೇಳುವುದು ಒಂದು ವಿಧವಾಗಿ ಯುಕ್ತವೇ ಆಗಿರುವುದು. ನನ್ನ ಮನೆಯಲ್ಲಿ ನನಗಿದ್ದ ಹತ್ತರಷ್ಟು ಸುಖಸೌಕರ್ಯದ ಅಪೇಕ್ಷೆಯನ್ನು ನನ್ನ ಮನಸ್ಸು ಮಾಡುವುದು. ಅದನ್ನು ತೃಪ್ತಿಮಾಡುವ ಯೋಗ್ಯತೆಯು ರತಿಲಾಲರಿಗೇ ಇರುವುದು. ಪ್ರತಿ ಪಟ್ಟಣದಲ್ಲಿ ಅವರ ಗಿರಣಿಗಳು ಲಕ್ಷಾವಧಿ ರೂಪಾಯಿಯ ಆದಾಯವು! ಪಾಪ! ಸಮಶೀಲನು ಬಹಳ ಪ್ರಯಾಸಪಟ್ಟು ಗ್ರಂಥ ಮತ್ತು ಲೇಖದಿಂದ ತನ್ನ ಮತ್ತು ತನ್ನ ತಾಯಿಯ ಜೀವನವನ್ನು ನಡೆಸುವನು. ಅವನ ಸಂಗಡ ವಿವಾಹ ಮಾಡಿಕೊಳ್ಳುವ ಧೈರ್ಯವು ನನ್ನಿಂದಾಗದು. ( ಸಮಶೀಲನ ಪ್ರವೇಶ )

**ಭಾಗ್ಯವತಿ:**— Come in! ಚಾತಕಪಕ್ಷಿಯಂತೆ ನಿನ್ನನ್ನೇ ನಾನು ಎದುರು ನೋಡುತ್ತಿದ್ದೆನು. ಏನು; ಎಲ್ಲಾ ಸೌಖ್ಯವೆ?

**ಸಮಶೀಲ:**— ಯಾವಾಗಲೂ ನನಗೆ ಸೌಖ್ಯವೇ!

**ಭಾಗ್ಯವತಿ:**— ಏನು? ಏನಾದರೂ ದೊಡ್ಡ appointment ಸಿಕ್ಕಿರುವುದೆ?

**ಸಮಶೀಲ:**— ನನ್ನ ಸುಖವು appointment ನ ಮೇಲಾಗಲಿ, ಬ್ಯಾಂಕಿನಲ್ಲಿಯ ಡಿಪಾಜಿಟ್ಟಿನ ಮೇಲಾಗಲಿ, ಅಥವಾ ಮನೆಯಲ್ಲಿಯ ಬಂಗಾರದ ತೂಕದ ಮೇಲಾಗಲಿ ಅವಲಂಬಿಸಿಲ್ಲ. ನನ್ನ ಮನೋಧರ್ಮವನ್ನು ಅನುಸರಿಸಿ ಶಾರೀರಿಕ ಮತ್ತು ಬೌದ್ಧಿಕ ಪರಿಶ್ರಮವನ್ನು ಮಾಡುವುದರೊಳಗೇ ನನಗೆ ಸುಖವು. ಆ ಪರಿಶ್ರಮದ ನಂತರ ಬರುವ ವಿಶ್ರಾಂತಿಯೇ ನನ್ನ ಸಮಾಧಾನವು.

ಭಾಗ್ಯವತಿ:—ಈ ಮಾತುಗಳಿರಲಿ; ರತಿಲಾಲ ಶೇಟರ ಸಂಗಡ ನನ್ನ ವಿವಾಹ ಮಾಡುವ ತಂದೆಯ ವಿಚಾರದ ಬಗ್ಗೆ ನಿನ್ನ ಅಭಿಪ್ರಾಯವೇನು? ಆತ್ಮೀಯ ಭಾವ ದಿಂದ ಈ ಪ್ರಶ್ನೆಯನ್ನು ನಿನಗೆ ಮಾಡುತ್ತೇನೆ.

ಸಮಶೀಲ:— ಭಾಗ್ಯವತಿ, ಇಂಥ ನಾಜೂಕು ಮತ್ತು ನಿನ್ನ ಅಖಿಲ ಆಯುಷ್ಯದ ಧೋರಣೆಗೆ ಸಂಬಂಧಿಸಿದ್ದ ಮಾತಿನ ಬಗ್ಗೆ ನಾನು ಏನು ಅಭಿಪ್ರಾಯ ಕೊಡಬಲ್ಲೆನು?

ಭಾಗ್ಯವತಿ:— ನಿನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿಯೇ ಹೇಳಿ ಬಿಡು.

ಸಮಶೀಲ:— ಈ ಆಸ್ತಿ-ಪ್ರಧಾನ ಯುಗದಲ್ಲಿ ಸ್ತ್ರೀಯರ ಸ್ಥಾನ ಬಹಳ ವಿಲಕ್ಷಣವಾಗಿರುವುದು. ಶ್ರೀಮಂತರ ಆಸ್ತಿಯನ್ನು ಅನುಭವಿಸುವ ಲಾಲಸೆಯಿಂದ ಸ್ತ್ರೀಯು ಶ್ರೀಮಂತ ಪುರುಷನ ಆಸ್ತಿ ಭಾಗ ಅಥವಾ ಭೋಗ್ಯವಸ್ತುವಾಗಲಿಕ್ಕೆ ಒಪ್ಪ ವಳು; ಆದ್ದರಿಂದ ಲಗ್ನ ಮತ್ತು ವೇಶ್ಯಾವೃತ್ತಿ ಇದರೊಳಗಿನ ಭೇದವೇ ನೀತಿ ಸೃಷ್ಟಿ ಯಲ್ಲಿ ನಷ್ಟವಾಗಿರುವುದು. ಪುರುಷನ ಇಚ್ಛೆಯ ಮೇಲೆ ಅವಲಂಬಿಸಿರುವ ಸುಖವು ಗುಲಾಮಗಿರಿಯ ಸುಖವಲ್ಲವೆ? ಸ್ವಯಂಕಷ್ಟಾರ್ಜಿತ ಸುಖವು ನಿನಗೆ ಬೇಕಾಗಿದ್ದರೆ ಪುರುಷನ ಸಂಪತ್ತಿಯ ವಿಚಾರವನ್ನು ಬಿಟ್ಟು ನೀನು ಆಲೋಚನೆಮಾಡು. ನೀನು ಬುದ್ಧಿವಂತೆ; ಸ್ವತಂತ್ರವಾಗಿ ವಿಚಾರವನ್ನು ಮಾಡಬಹುದು.

ಭಾಗ್ಯವತಿ:— ಅಂದರೆ ಸ್ತ್ರೀಯರು ಸಹ ದ್ರವ್ಯಾರ್ಜನ ಮಾಡಬೇಕೆಂದು ನಿನ್ನ ಅಭಿಪ್ರಾಯವೇನು?

ಸಮಶೀಲ:— ಹಾಗಲ್ಲ; ಪುರುಷನ ಸಂಪತ್ತಿಯ ಮೇಲೆ ಸ್ತ್ರೀಯರು ತಮ್ಮ ಸುಖ ಸಾಮ್ರಾಜ್ಯವನ್ನು ರಚಿಸಬಾರದು. ಪುರುಷನು ಒಂದು ವಿಧವಾಗಿ ಕಷ್ಟ ಪಟ್ಟರೆ ಸ್ತ್ರೀಯರು ಇನ್ನೊಂದು ವಿಧವಾಗಿ ಕಷ್ಟಪಡಲೇ ಬೇಕು. ಅದರಿಂದಲೇ ಸಹಕಾರವುಂಟಾಗುವದು. ದ್ರವ್ಯಾರ್ಜನವು ಮುಖ್ಯಮಾತಲ್ಲ. ದ್ರವ್ಯಾರ್ಜನದ ಪರಿಮಾಣವು ಸದ್ಯದ ಅರ್ಥಿಕ ವಿಷಮತಾಯುಗದಲ್ಲಿ ಬೌದ್ಧಿಕ, ಶಾರೀರಿಕ, ಪರಿ ಶ್ರಮದ ಮೇಲೆ ಅವಲಂಬಿಸಿಲ್ಲ. ಮಹದಾಲಸಿಯು ಸಂಪತ್ತಿಯಲ್ಲಿ ಮುಳುಗಿರ ಬಹುದು. ಮಹದುದ್ಯೋಗಿಯು ಬಡತನದಲ್ಲಿ ಗೋಳಾಡಬಹುದು. ಪರಾವಲಂಬಿ ಆಯುಷ್ಯವೇ, ಮಿಥ್ಯಾಚಾರಿ, ನಿರ್ಲಜ್ಜನ ಜೀವನವು! ನಿರಾಲಸ ಪರಿಶ್ರಮವೇ ಆ ವಿಶ್ರಾಂತಿ ಕಾರ್ಯಮಾಡುವ ಸೃಷ್ಟಿಕರ್ತನ ಸೇವೆಯು.ಆ ಸೇವೆಯಿಂದಲೇ ಆತ್ಯಂತಿಕ ಸುಖವು.

ಭಾಗ್ಯವತಿ:— ಸಮಶೀಲ! ನಿನ್ನ ಈ ಗಂಭೀರ ವಿಚಾರವನ್ನು ಕೇಳಿ ನನ್ನ ಮನಸ್ಸಿನಲ್ಲಿ ವಿವಿಧ ವಿಚಾರ ತರಂಗಗಳ ಗದ್ದಲವು ಆಗುವುದು. ಆದರೆ ವ್ಯಾವ ಹಾರಿಕ ವಿಚಾರವನ್ನು ಮಾಡಬೇಕಲ್ಲವೆ? ಕೇವಲ ಸೊಬಗಿನ ಕಲ್ಪನೆಯ ಪ್ರಯೋ ಜನವೇನು?

# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ
ಕನ್ನಡ ಮಾಸಪತ್ರಿಕೆ.

ಸಂಪುಟ ೧ } ಶ್ರಾವಣ ಪೌರ್ಣಿಮಾ ಅಗಸ್ಟ ೧೯೫೨ { ಸಂಚಿಕೆ ೩

## ಸಂಪಾದಕೀಯ

ಸ್ವತಂತ್ರ ಭಾರದಲ್ಲಿಯ ಐದು ವರುಷಗಳುರುಳಿ ಆರನೆಯ ವರುಷ ಕಣ್ದೆರೆಯುತ್ತಿದೆ. ಸ್ವತಂತ್ರ ಭಾರತದ ಪ್ರಜೆಗಳೆಂದು ನಾವೀಗ ತಲೆಯೆತ್ತಿ ಮೆರೆಯುತ್ತಲಿದ್ದೇವೆ; ದೇಶ ವಿದೇಶಗಳಲ್ಲಿ ರಕ್ತಕ್ರಾಂತಿಯಿಲ್ಲದೆ ಸ್ವಾತಂತ್ರ್ಯ ದೊರಕಿಸಿದ ಭಾರತೀಯನಿಗೆ ಗೌರವ ದೊರೆಯುತ್ತಿದೆ; ಇದೆಲ್ಲ ಸರಿ, ಹೊರಗೆ ಪ್ರಕಾಶಕಾಣುತ್ತಿದೆ, ಆದರೆ ಮನೆಯೊಳಗಿನ ಕತ್ತಲೆಯನ್ನು ಹೊಡೆದೋಡಿಸುವದು ಹೇಗೆ? ಅಖಂಡ ಹಿಂದುಸ್ಥಾನ ಇಬ್ಭಾಗವಾದಾಗಲೇ ನವೀನ ಸಮಸ್ಯೆಗಳ ನಿರ್ಮಾಣವಾಯಿತು. ನಿರ್ವಾಸಿತರ ಸಮಸ್ಯೆ, ಆಹಾರ ಬಟ್ಟೆಗಳ ಕೊರತೆ, ದೇಶದ ದಾರಿದ್ರ್ಯ, ಶಿಕ್ಷಣದ ಅಭಾವ—ಒಂದೊಂದಾಗಿ ಸಮಸ್ಯೆಗಳು ಭಾರತ ಸರಕಾರದೆದುರು ಬಂದು ನಿಂತವು. ಒಂದೊಂದು ಸಮಸ್ಯೆಯನ್ನು ಬಿಡಿಸಲು, ಸಮಸ್ಯೆಗಳೆಷ್ಟಿವೆಯೋ ಅಷ್ಟೇ ತೊಡಕುಗಳು! ಹದವಾದ ಭೂಮಿಯಲ್ಲಿ ಬೀಜನೆಟ್ಟು, ಬೆಳೆತೆಗೆಯಬಹುದು; ಆದರೆ ಭೂಮಿಯನ್ನು ಹದಗೊಳಿಸಬೇಕಲ್ಲ ಮೊದಲು! ಪ್ರಚಂಡ ಚುನಾವಣೆಗಳು ಜರುಗಿದವು. ನಮ್ಮ ಪ್ರತಿನಿಧಿಗಳು ಕೇಂದ್ರ ಸಭೆಯಲ್ಲಿ ವಿರಾಜಮಾನರಾದರು; ಸಾತ್ವಿಕ ಉಪಾಯ

ಗಳಿಂದ ಸರ್ವರಿಗೂ ಸಮೃದ್ಧವಾದ ಜೀವನಸೌಕರ್ಯಗಳನ್ನೊದಗಿಸುವದು ಸರಕಾರದ ಗುರಿಯೇನೋ ಸರಿ; ಆದರೆ ಪ್ರಗತಿಪಥದ ಒಂದೊಂದು ಹೆಜ್ಜೆಯಲ್ಲೂ ಎಡರು ತೊಡರುಗಳ ಪೆಡಂಭೂತ! ಇವುಗಳನ್ನೆದುರಿಸುವ ಧೈರ್ಯ ನಮ್ಮಲ್ಲಿಲ್ಲ; ಇನ್ನುಳಿದವರ ಸಹಕಾರ ಮೊದಲೇ ಇಲ್ಲ. ಒಳಗೆ ಒಮ್ಮತವಿಲ್ಲ, ಒಮ್ಮತವಿಲ್ಲವೆಂಬುದನ್ನು ಹೊರಗೆ ತೋರಗೊಡುವಂತಿಲ್ಲ; ಪರಕೀಯರ ದಾಸ್ಯತೊಲಗಿದರೂ ನಮ್ಮ-ನಮ್ಮಲ್ಲಿಯ ದಾಸ್ಯವಿನ್ನೂ ಹೋಗಿಲ್ಲ; ಅಸ್ಪೃಶ್ಯತೆ? ಅದೂ ಹಾಗೇ ಇದೆ. ಆಳವಾಗಿ ಬೇರೂರಿದ ಅಂಧಶ್ರದ್ಧೆಗಳನ್ನು ಕಿತ್ತೊಗೆದು, ಜ್ಞಾನದ ಪ್ರಸಾರಮಾಡಿ, ನೈಸರ್ಗಿಕ ಸಂಪತ್ತಿಯಿಂದಲೂ, ಇನ್ನುಳಿದ ರೀತಿಗಳಿಂದಲೂ ಬರಬಹುದಾದ ಸೌಕರ್ಯಗಳನ್ನು ಕಲ್ಪಿಸಿಕೊಟ್ಟು, ಜೀವನ ವಿಕಾಸಕ್ಕೆ ಅನುವು ಮಾಡಿಕೊಡಲೆಳಸುವ ಪಂಚವಾರ್ಷಿಕ ಯೋಜನೆ ಸರಕಾರದೆದುರು ಇದೆ. ನೂರು ಪುಟಗಳನ್ನು ಮುಗುಚಿ ಹಾಕಿದರೂ ಮುಗಿಯದ ಯೋಜನೆ ಕಾರ್ಯರಂಗಕ್ಕಿಳಿಯಲಾರದೆ ಬಳಲುತ್ತಿದೆ. ಸರ್ವೋದಯ ಯೋಜನೆ ಅಮೇರಿಕೆಯ ಆರ್ಥಿಕಸಹಾಯವಿಲ್ಲದೆ ಬಳಕೆಯಲ್ಲಿ ಬರಲಾರದು. ಕೋಯನಾ ಆಣೆಕಟ್ಟಿನ ಯೋಜನೆ ಹಾಗೇ ಬದಿಗುಳಿದಿದೆ, ಶಿಕ್ಷಣ ಸಂಸ್ಕೃತಿ ಕೇಂದ್ರಗಳೂ ಧನಸಹಾಯವಿಲ್ಲದೆ ತೊಳಲಾಡುತ್ತಿವೆ.

ದೇಶದ ಘಟಕಗಳಾದ ಭಿನ್ನ ಭಿನ್ನ ಪ್ರಾಂತಗಳ ಹಿತವನ್ನನುಲಕ್ಷಿಸಿ, ಭಾಷಾವಾರ ಪ್ರಾಂತರಚನೆಯ ಆಶ್ವಾಸನವನ್ನು ಕಾಂಗ್ರೆಸ್ಸುಕೊಟ್ಟು ಮೂವತ್ತು ವರುಷಗಳಾದವು. ಆಡಳಿತದ ಸೌಕರ್ಯಕ್ಕಾಗಿ, ಬ್ರಿಟಿಷರ ಕಾಲದಲ್ಲಿ ಹರಿದು ಹಂಚಿಹೋಗಿದ್ದ ತುಂಡುಗಳು, ಒಂದುಗೂಡುವದು, ಸಾಂಸ್ಕೃತಿಕ ದೃಷ್ಟಿಯಿಂದಲೂ ಅತ್ಯವಶ್ಯ. ಆದರೆ ಪ್ರತಿ ಪ್ರಾಂತಕ್ಕೂ ಇರಬಹುದಾದ ಆರ್ಥಿಕ ಸೌಕರ್ಯವನ್ನು ಗಣನೆಗೆ ತಾರದೆ, ಬರಿಯ ಭಾಷೆಯ ತಳಹದಿಯೊಂದನ್ನೇ ಇಟ್ಟುಕೊಂಡು ಘಟಕಗಳನ್ನು ನಿರ್ಮಿಸುವದು ಅಸಾಧ್ಯ; ತಾಯಿ ಒಂದು ಮಗುವಿನ ಕೈಗೆ ಪೆಪ್ಪರಮಿಂಟನ್ನು ಕೊಟ್ಟರೆ, ಇನ್ನುಳಿದ ಮಕ್ಕಳೂ ಕೈಯೊಡ್ಡಿ, ಅವನಿಗೇಕೆ ದೊಡ್ಡದು? ಎಂದು ಅಳುವಂತೆ, ಆಂಧ್ರಪ್ರಾಂತ ರಚನೆಯ ಮಾತು ಬಂದಾಗಲೇ ಇಂತಹ ಸಂದರ್ಭ ಮೊದಗಿತು. ಬಳ್ಳಾರಿಯ ಕೆಲ ಪ್ರದೇಶದ ಬಗ್ಗೆ, ಆಂಧ್ರ ಕನ್ನಡಿಗರಲ್ಲಿ ಒಮ್ಮತವಿಲ್ಲ; ಮದ್ರಾಸದ ಭಾಗವನ್ನು ಬಿಟ್ಟುಕೊಟ್ಟ ಆಂಧ್ರಪ್ರಾಂತ ಆಂಧ್ರರಿಗೆ ಬೇಕಿಲ್ಲ. ಇವರಿಗೆ ಬೇಕಾದುದು ತಮಿಳರಿಗೆ ಬೇಕಾಗಿಲ್ಲ; ಇದರಂತೆ ಮುಂಬಯಿ ನಗರವನ್ನು ಬಿಟ್ಟುಕೊಡುವದು ಮಹಾರಾಷ್ಟ್ರದವರಿಗೂ ಇಷ್ಟವಿಲ್ಲ, ಗುಜರಾಥಿನವರಿಗೂ ಅಷ್ಟೇ! ಭಿನ್ನಾಭಿಪ್ರಾಯಗಳನ್ನು ನಿಲ್ಲಿಸಿ ಗಡಿಗಳನ್ನು ನಿರ್ಧರಿಸಲು ಗಡಿಸಮಿತಿಗಳನ್ನು ನಿಯಮಿಸಬೇಕು. ಆ ಸಮಿತಿಗಳ ವರದಿಯಾದರೂ ನಮಗೆ ಮೆಚ್ಚಿಕೆಯಾಗುತ್ತದೋ ಇಲ್ಲವೋ ಹೇಳಲು ಬರುವಂತಿಲ್ಲ. ಪರಿಸ್ಥಿತಿ ಇಂತಹದಾಗಿರುವಾಗ ಪ್ರಧಾನ ಮಂತ್ರಿಗಳ ಮಾತು ಆಶಾದಾಯಕವಾಗಿದೆ, ಗೃಹಮಂತ್ರಿಗಳ ಮಾತು ಹಾಗಿಲ್ಲ ಎಂದು ಹೇಳುವದರಲ್ಲಿ ಏನರ್ಥ? ಮೇಲ್ನೋಟಕ್ಕೆ ಇಬ್ಬರ ಮಾತಿನಲ್ಲಿ ಭೇದ

ಕಂಡುಬಂದರೂ, ಒಳಹೊಕ್ಕು ಪರಿಶೀಲಿಸಿದಲ್ಲಿ ಇಬ್ಬರ ಮಾತಿನ ಅರ್ಥವೂ ಒಂದೇ! ಗಡಿಪ್ರದೇಶದ ತಂಟೆ, ಒಂದು ಘಟಕದಲ್ಲಿ ಸೇರಲರ್ಹವಾದ ಭಾಗವನ್ನು ಬಿಟ್ಟು-ಕೊಟ್ಟೇ ಪ್ರಾಂತಗಳನ್ನು ನಿರ್ಮಾಣಮಾಡುವದು--ಇತ್ಯಾದಿಗಳೆಲ್ಲ ಘಟಕಗಳ ಹಿತದ ದೃಷ್ಟಿಯಿಂದ ಅಸಮಂಜಸ, ಗಡಿತಂಟೆಯನ್ನು ಬಗೆಹರಿಸಿ ಪ್ರಾಂತನಿರ್ಮಾಣಗಳ ಬಗ್ಗೆ ಒಮ್ಮತದ ಒತ್ತಡವನ್ನು ತಂದಲ್ಲಿ, ಈ ಪ್ರಶ್ನೆ ಸುಲಭದಲ್ಲಿಯೇ ಬಗೆಹರಿಯ ಬಹುದು.

* * * * *

ಮುಂಬಯಿ ರಾಜ್ಯದ ಸೆರೆಮನೆಗಳಲ್ಲಿ ಸುಧಾರಣೆ ಮಾಡುವ ಯೋಜನೆ ನಿಜವಾಗಿಯೂ ಸ್ತುತ್ಯವಾದುದು;ಸೆರೆಮನೆಗಳ ಇತಿಹಾಸ ಬಹು ಪುರಾತನವಾದುದು. ಕೈದಿಗಳನ್ನು--ಯಾವ ಬಗೆಯ ಕೈದಿಯೇ ಇರಲಿ--ಸೆರೆಮನೆಯಲ್ಲಿ ಹೂಳಿಬಿಡುವದೆಷ್ಟು ಭೀಕರವೋ, ಅಷ್ಟೇ ಅವರಿಂದ ಜೀವಾವಧಿಸಕ್ತಮಜೂರಿಯನ್ನು ಮಾಡಿಸಿಕೊಂಡು ಪ್ರಾಣಹರಣ ಮಾಡುವದೂ ಭೀಕರ; ರಾಜಕೀಯ ಕೈದಿಗಳೇ ಒಂದು ಕಾಲದಲ್ಲಿ ಸವಲತ್ತುಗಳಿಗಾಗಿ ಚಳವಳಿಯನ್ನು ಹೂಡುವ ಪ್ರಸಂಗ ಬಂತು, ಬಳಿಕ ಇನ್ನುಳಿದ ಅಪರಾಧಿಗಳ ಪಾಡೇನು? ಮನಃಶಾಸ್ತ್ರದ ಮೇರೆಗೆ ಈ ಕೈದಿಗಳ ಮನಸ್ಸನ್ನು ಅಭ್ಯಸಿಸಿ, ಮಾನಸಿಕ ಪರಿವರ್ತನೆಯನ್ನೇ ಅವರಲ್ಲಿ ಉಂಟುಮಾಡುವ ಕ್ರಮ ಕೈಕೊಂಡದ್ದು ಮೆಚ್ಚತಕ್ಕ ವಿಷಯ ಅವರ ಒಲವನ್ನು ಕಂಡುಕೊಂಡು, ಮುಂದೆ ಒಳ್ಳೆಯ ನಾಗರಿಕರಾಗುವಂತೆ ಕೈದಿಗಳಿಗೆ ವೃತ್ತಿಶಿಕ್ಷಣವನ್ನು ಕೊಡುವದು, ದೀರ್ಘಾವಧಿ ಶಿಕ್ಷೆಯಾದವರಿಗೆ ಒಕ್ಕಲತನವನ್ನು ಮಾಡುವ ಕಲೆಯನ್ನು ಹೇಳಿಕೊಟ್ಟು, ಅವರನ್ನು ಕೃಷಿವಿಶಾರದರನ್ನಾಗಿ ಮಾಡುವದು--ಇತ್ಯಾದಿಗಳು ಸಮಾಜದ ಹಿತದ ದೃಷ್ಟಿಯಿಂದ ಉಚಿತವಾದವುಗಳು. ಇದರಂತೆ ಸ್ತ್ರೀಕೈದಿಗಳಿಗೂ ಮಾನಸಿಕ ಹಿಂಸೆಯನ್ನು ಕೊಡದೆ, ಅನೇಕ ಸವಲತ್ತುಗಳನ್ನು ಕಲ್ಪಿಸಿಕೊಟ್ಟು, ಅವರ ಮಾನಸಿಕ ಪರಿವರ್ತನೆಯನ್ನೇ ಮಾಡುವ ಕಾರ್ಯ ಬಹಳ ಒಳ್ಳೆಯದು; ಪರಿವರ್ತನವಾಗ ಬಹುದೆಂಬ ಆಶೆಯಿದ್ದಲ್ಲಿ ಈ ಕಾರ್ಯ ಇಷ್ಟವೇ; ಆದರೂ ಕೆಲ ಕೈದಿಗಳನ್ನು ಅನಿವಾರ್ಯವಾಗಿ ಶಿಕ್ಷಿಸಲೇ ಬೇಕಾಗುವದು ಅನಿವಾರ್ಯ. ಈ ಯೋಜನೆಯಿಂದ ಭವಿಷ್ಯದಲ್ಲಿ ಕೈದಿಗಳ ಸಂಖ್ಯೆ ಇಳಿದೀತೆಂಬ ಬಲವಾದ ಆಶೆಯಿದೆ. ಜೊತೆಗೆ 'ಮೂಲೆ ಕುಠಾರ' ನ್ಯಾಯದಂತೆ, ಅಪರಾಧಮಾಡುವ ಪ್ರವೃತ್ತಿಯನ್ನು ಬಾಲ್ಯದಲ್ಲಿಯೇ ಕೊನೆಗಾಣಿಸುವದಾದರೆ, ಯೋಜನೆ ಇನ್ನೂ ಸಫಲವಾಗುವದು; ಆದರೆ ಇದೆಲ್ಲ ಹೊಣೆ ಮಾತ್ರ ಹೆಣ್ಣುಮಕ್ಕಳಿಗೇ ಸೇರಿದ್ದು.

* * * * *

ಮದರಾಸಿನಲ್ಲಿ ರಾಜಾಜಿಯವರು ಕೈಕೊಂಡಿರುವ ಆಹಾರ ವಿನಿಯಂತ್ರಣದ ಧೋರಣೆ ಅವರನ್ನುವಂತೆ ಯಶಸ್ವಿಯಾಗಿದೆ. ಹೆಚ್ಚು ಆಹಾರ ಬೆಳೆಯುವ ಕಾರ್ಯ, ಮಿತವ್ಯಯ ಇದರ ಜೊತೆಗೆ ಸೇರಿದರೆ ಅದಿನ್ನೂ ಹೆಚ್ಚು ಸಫಲವಾಗ

ಬಹುದು. ಕೇಂದ್ರ ಆಹಾರಮಂತ್ರಿಗಳು ಮದರಾಸಿಗೆ ಭೆಟ್ಟಿಯಿತ್ತಾಗ, ವಿನಿಯಂತ್ರಣದ ಧೋರಣೆಯನ್ನು ಮೆಚ್ಚಿ ಇನ್ನುಳಿದ ಪ್ರಾಂತಗಳಲ್ಲೂ ಈ ಧೋರಣೆಯನ್ನು ಕೈಕೊಳ್ಳಬಹುದು ಎಂದಿದ್ದಾರೆ. ಈ ಧೋರಣೆಯ ಮೂಲಕವಾಗಿ ಆಹಾರ ಧಾನ್ಯಗಳ ಬೆಲೆ ಮೊದಮೊದಲು ಏರಿದರೂ ಯಾರೂ ಭಯಪಡಬೇಕಾಗಿಲ್ಲವಂತೆ!

* * * * *

ನೈತಿಕ ಬಂಧನಗಳೇ ಅನೀತಿಗೆ ಕಾರಣವೆಂಬಂತೆ, ಮದ್ಯಪಾನಪ್ರತಿಬಂಧವೇ, ಪಾನಕ್ಕೆ ಪ್ರೋತ್ಸಾಹಕೊಡುತ್ತಿದೆ; ಕಳ್ಳಸಾಗಾಟ ನಡೆಯುತ್ತಿದೆ ಅದಕ್ಕಾಗಿ ಪ್ರತಿಬಂಧವನ್ನು ದೂರಮಾಡಬೇಕು, ಎಂಬುದು ಮದ್ಯಪ್ರಾಂತ ಸರಕಾರದ ಕೂಗು; ಇದರಿಂದ 'ಕರ' ಕೂಡಬಹುದು; ಆದರೆ ಪಾನದ ದುಷ್ಪರಿಣಾಮ ಯಾರ ಮೇಲೆ? ಸ್ತ್ರೀಯರು ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ ನಡೆಸಿದರು; ಅವರ ಕಾರ್ಯಕ್ಷೇತ್ರ ಅಷ್ಟಕ್ಕೇ ಮುಗಿಯಿತೇ? ಪಾನದ ದುಷ್ಪರಿಣಾಮವನ್ನನುಭವಿಸುವ ಹೆಣ್ಣುಮಕ್ಕಳ ಮತವು ಪ್ರತಿಬಂಧನಿವಾರಣೆಯ ಬಗ್ಗೆ ಏನಿದೆಯೆಂಬುದನ್ನು ಸರಕಾರವು ಯಾಕೆ ಹೇಳಬಾರದು?

ಸಂತತಿನಿಯಮನದ ವಿಷಯವಾಗಿಯೂ ಸರಕಾರದ ಧೋರಣೆ ಇದೇ ಆಗಿದೆಯೆಂದು ಹೇಳಬಹುದು. ಪಂಚವಾರ್ಷಿಕ ಯೋಜನೆಯಲ್ಲಿ 'ಕುಟುಂಬ ಯೋಜನೆ,' ಯಿದ್ದರೂ ಆರೋಗ್ಯ ಮಂತ್ರಿಗಳು, 'ಇದು ವೈಯ್ಯಕ್ತಿಕ ವಿಷಯ' ಎಂದು ಬದಿಗೆ ಸರಿಸಿಬಿಟ್ಟರು. ಈ ಯೋಜನೆಯ ಸಾಫಲ್ಯದ ಬಗ್ಗೆ ಉಪಾಯಗಳನ್ನು ಯೋಜಿಸುವವರು, ಹೆಚ್ಚಾಗಿ ಪುರುಷರೇ; ಇಂದಿನ ಸಮಾಜದಲ್ಲಿಯೂ ಸ್ತ್ರೀಯು ಪುರುಷನಿರ್ಮಿತ ಮೂರ್ತಿಯಾಗಿರಬೇಕೇ?

## ನಮ್ಮ ಮಾತು

ನಮ್ಮ 'ವೀರಮಾತೆ' ಸಂಚಿಕೆಯ ಮೇಲು ಹೊದಿಕೆಯ ಚಿತ್ರ ಶಿರಹಳೆಯ ಬೆಡಗಿನದು ಎಂದು ಆಕ್ಷೇಪಿಸಿ, ಅದಕ್ಕೆ ಬದಲಾಗಿ ಹೊಸತನ್ನು ಸೇರಿಸಲು ಸೂಚಿಸಿ, ನಮ್ಮ ಓದುಗರಲ್ಲಿ ಕೆಲವರು ಪತ್ರಬರೆದಿದ್ದಾರೆ. ಅವರ ಸೂಚನೆಗೆ ಅವಶ್ಯವಾಗಿಯೂ ಗಮನಕೊಡಲಾಗುವದು. 'ಕಾಯಿದೆ ಕಾನೂನು' ವಿಭಾಗವನ್ನು ಮೆಚ್ಚಿ ಪತ್ರ ಬರೆದ ನಮ್ಮ ಓದುಗರಿಗೆಲ್ಲ ಅಭಿವಂದನೆಗಳು.

ದೂರದ ಹೈದರಾಬಾದ, ಮುಂಬಯಿ, ದಿಲ್ಲಿಗಳಿಂದ ಕನ್ನಡಿಗರು ಪತ್ರಿಕೆಯನ್ನು ಮೆಚ್ಚಿ ಚಂದಾದಾರರಾಗಲು ಇಚ್ಛಿಸಿದುದು ಪತ್ರಿಕೆಗೆ ಪ್ರೋತ್ಸಾಹಕವಾದುದು; ಈಸಲ ಸಂಚಿಕೆಗೆ ಜಯಪೂರದಿಂದ ಶ್ರೀಮತಿ ಸುಶೀಲಾದೇವಿ ಕೊಪ್ಪರರು 'ಕಥೆ'ಯನ್ನೂ, ದಕ್ಷಿಣಕನ್ನಡ ಜಿಲ್ಹೆಯ, ಕೆ. ಸೀತಾರಾಮ್ ಅಡಿಗರು ಕವನವೊಂದನ್ನೂ ಕಳುಹಿಸಿದ್ದಾರೆ. ಅಲ್ಲದೆ ಪ್ರತಿಭಾವಂತ ಕವಿಗಳಾದ ಮಹದೇವ ಬಣಕಾರರು, ನವೋದಿತ ಕವಯಿತ್ರಿಯಾದ ಶ್ರೀಮತಿ ರತ್ನಮ್ಮ ಎಂ. ಎ. ಬೆಂಗಳೂರ

ಇವರು ಕವನಗಳನ್ನು ಸಲ್ಲಿಸಿ, 'ವೀರಮಾತೆ' ಯನ್ನು ಸಿಂಗರಿಸಿದ್ದಾರೆ. ಅಲ್ಲದೆ ಈ ಸಂಚಿಕೆಯಲ್ಲಿ 'ಸ್ತ್ರೀಯರ ಅಧೋಗತಿಯ ಕಾರಣ,' "ಹಬ್ಬ ಆರೋಗ್ಯಗಳ ತಾತ್ವಿಕ ಸಂಬಂಧ," ಇತ್ಯಾದಿಗಳೂ ಇವೆ.

ಸಂಚಿಕೆಯಲ್ಲಿ ಮಕ್ಕಳ ವಿಭಾಗವನ್ನು ಸೇರಿಸುವ ಯೋಚನೆ ಈ ಮೊದಲೇ ನಮ್ಮಲ್ಲಿತ್ತು. ಹಾಗೆ ಸೇರಿಸಬೇಕೆಂದು ಸೂಚಿಸಿ ಅನೇಕ ಓದುಗರೂ ಅದಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಈ ವಿಭಾಗವು ಯಶಸ್ವಿಯಾಗಲು, ಮಕ್ಕಳೂ ಮಕ್ಕಳ ಪಾಲಕರೂ ಸಹಕಾರವನ್ನು ನೀಡುವರೆಂದು ಆಶೆಯಿದೆ.

ಸಂಚಿಕೆಗೆ ಈಗಲೇ ಹೆಚ್ಚು ಪುಟಗಳನ್ನು ಸೇರಿಸುವದು ಸಾಧ್ಯವಾಗದ್ದರಿಂದ, ವಿಷಯುಗಳಲ್ಲಿ ಒಂದೆರಡನ್ನು ಸೇರಿಸುವದೋ, ಒಂದೆರಡನ್ನು ಬಿಡುವದೋ ಅನಿವಾರ್ಯವಾಗಬಹುದು. ಯಾವದೇ ವಿಭಾಗವನ್ನು ಒಂದು ಸಂಚಿಕೆಯಲ್ಲಿ ಬಿಟ್ಟರೂ, ಮುಂದಿನ ಸಂಚಿಕೆಯಲ್ಲಿ, ಅದನ್ನು ಮತ್ತೆ ಪ್ರಕಟಿಸಲಾಗುವದು. ಓದುಗರು ತಾಳ್ಮೆಯಿಂದ ನಮ್ಮೊಡನೆ ಸಹಕರಿಸುವ ಕೃಪೆಮಾಡಬೇಕು.

ಸಂಚಿಕೆಯಲ್ಲಿಯ, 'ಸುದ್ದಿಸಮಾಚಾರ' ವಿಭಾಗದ ಬಗ್ಗೆ ಓದುಗರೊಬ್ಬರು ಸೂಚನೆಯನ್ನು ಕಳಿಸಿದ್ದಾರೆ. 'ಸ್ತ್ರೀಯರ ಮೇಲೆ ಅತ್ಯಾಚಾರ, ಅಪಪ್ರಚಾರದ, ಸುದ್ದಿಗಳನ್ನು ಪ್ರಕಟಿಸಿ ಸಮಾಜದ ಮುಂದೆ ಹೇಯವಾದ ಚಿತ್ರವನ್ನಿಡುವದೇಕೆ'? ಎಂದು ಇಂದು ರಾಜಕಾರಣವು ಜನತೆಯ ಲಕ್ಷ್ಯವನ್ನು ತನ್ನಡೆಗೆ ಎಳೆಯುವಷ್ಟು, ಸಮಾಜದ ಈ ಕುಂದುಕೊರತೆಗಳು ಎಳೆಯಲಾರವು. ಸಮಾಜದ ನೈತಿಕ ವಿಕಾಸವಾಗದೆ ರಾಜಕಾರಣ ಏನು ತಾನೇ ಮಾಡಬಲ್ಲದು? ಅಲ್ಲದೆ ಒಳಗಿನ ಕುಂದುಕೊರತೆಗಳನ್ನು ಬಚ್ಚಿಟ್ಟು ಒಳ್ಳೆಯ ಮೇಲು ಹೊದಿಕೆಯನ್ನು ಹಾಕಿದರೆ ಅದರಿಂದಾಗುವ ಪ್ರಯೋಜನವೇನು? ಸಮಾಜದ ಯಥಾವತ್ತಾದ ಚಿತ್ರವನ್ನು ಜನತೆಯ ಎದುರು ಇಟ್ಟು, ಅದನ್ನು ಆಳವಾಗಿ ಪರಿಶೋಧಿಸಿ, ಅದರ ನಿವಾರಣೆಗೆ ತಕ್ಕ ಉಪಾಯುಗಳನ್ನು ಕೈಕೊಳ್ಳಬೇಕೆಂಬುದು ನಮ್ಮ ಆಶೆ. ಅದಕ್ಕಾಗಿ ಸ್ತ್ರೀಸಮಾಜದ ವಿಶೇಷ ಸುದ್ದಿಸಮಾಚಾರಗಳು ಯಾವ ಭಾಗದಲ್ಲಾದರೂ ಇದ್ದರೆ, ಅದರ ಸಾದ್ಯಂತ ಇತಿಹಾಸವನ್ನು ದಯವಿಟ್ಟು ನಮ್ಮ ಪತ್ರಿಕೆಗೆ ಕಳುಹಿಸಿಕೊಡಬೇಕು. ಪ್ರಕಟಿಸಿ, ಅದರ ನಿವಾರಣೆಗೆ ಸಾಧ್ಯವಿದ್ದ ಉಪಾಯಗಳನ್ನು ಕೈಕೊಳ್ಳಲಾಗುವದೆಂಬ ಭರವಸೆಯನ್ನೂ ನಾವು ತಮಗೆ ಕೊಡಬಲ್ಲೆವು.

* * * *

ಈಗ ಕಾಲುಶತಮಾನದಿಂದಲೂ, ಭಾರತದ ಭಗಿನಿಯರ ಸರ್ವತೋಮುಖ ವಿಕಾಸಕ್ಕಾಗಿ ಹೆಣಗಾಡುತ್ತಿರುವ ಧಾರವಾಡದ, 'ವನಿತಾ ಸೇವಾ ಸಮಾಜವು' ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜನ್ನೂ ಸೇರಿಸಿಕೊಂಡು ಬೆಳೆಯುತ್ತಿರುವದು ಅಭಿನಂದನೀಯ. ಇದಕ್ಕಿದ್ದ ಒಂದು ಕೊರತೆಯೆಂದರೆ, ಮಕ್ಕಳ ತೋಟಪಟ್ಟಿಗೆ, ಆಟಕ್ಕೆ ಬೇಕಾದ ಸ್ಥಳದ ಅಭಾವ. ಸಂಸ್ಥೆಗೆ ಹೊಂದಿಕೊಂಡಿದ್ದ ಬಯಲುಭೂಮಿಯನ್ನು,

ಕೊಡಬೇಕಾಗಿ ಧಾರವಾಡ ನಗರಸಭೆಗೆ ಅನೇಕ ಸಲ ಕೇಳಿಕೊಂಡಾಗಿದೆಯಂತೆ; ಆದರೆ ನಗರಸಭೆ ಅದಕ್ಕೆ ಒಪ್ಪಿಲ್ಲ. ಇದಕ್ಕಾಗಿ, 'ಸಮಾಜ'ವು ಸ್ವಾತಂತ್ರದಿನದಂದು· ಸತ್ಯಾಗ್ರಹವನ್ನು ಹೂಡಲಿರುವದಂತೆ!

ಸಾಂಸ್ಕೃತಿಕ ಸಂಸ್ಥೆಯೊಂದಕ್ಕೆ ಸಾಧ್ಯವಿದ್ದ ಸೌಕರ್ಯಗಳನ್ನೊದಗಿಸಿ ಕೊಡುವದು ಸರಕಾರದ–ಸಂಬಂಧಪಟ್ಟ ಸ್ಥಳಿಕ ನಗರಸಭೆಗಳ ಕರ್ತವ್ಯ, ಸಾಂಸ್ಕೃತಿಕ ಕೇಂದ್ರಗಳೇ ದೇಶದ ಉಸಿರು; ಸ್ವಾತಂತ್ರ್ಯದ ಹೊಸ ಸೂರ್ಯೋದಯ ತನ್ನೊಡನೆ ಜ್ಞಾನೋದಯವನ್ನೂ ತರಲಿ.

ಸ್ವಾತಂತ್ರ್ಯದ ಹೊಸ ವರುಷವು ಸರ್ವರಿಗೂ ಶುಭದಾಯಕವಾಗಲೆಂದು 'ವೀರಮಾತೆ'ಯ ಅಂತಃಕರಣದ ಹರಕೆ!

## ಆಯೋಡಿನ್ನದ ದುಷ್ಪರಿಣಾಮಗಳು

ನಮ್ಮ ದಿನದ ಬಳಕೆಯಲ್ಲಿ ನಾವು ಉಪಯೋಗಿಸುವ ಔಷಧಿಗಳೆಷ್ಟು ಅಪಾಯಕಾರಕ ಇರುತ್ತವೆ, ಇದರ ಅರಿವು ನಮಗೆ ವಿಶೇಷವಾಗಿ ಹೆಣ್ಣುಮಕ್ಕಳಿಗೆ ಇರುವದಿಲ್ಲ. ಆಯೋಡಿನ ವಿಶೇಷವಾಗಿ ಟಿಂಕ್ಚರ ಆಯಡಿನವೆಂಬ ಔಷಧಿಯನ್ನು ನಾವು ಬಹಿರಂಗ ಉಪಚಾರವೆಂದು ಅದರ ಪರಿಣಾಮದ ಕಡೆಗೆ ಲಕ್ಷ್ಯ ಕೊಡದೆ ಉಪಯೋಗಿಸುತ್ತಿರುವೆವು. ಅಬ್ಬಬ್ಬಾ ಅದರ ಪರಿಣಾಮ ನೋಡಿ ಎಚ್ಚರಾಗಿರಿ.

ಈ ಆಯಿಡಿನ ಮತ್ತು ಟಿಂಕ್ಚರ ಆಯಿಡಿನ ಇದರ ಉಪಯೋಗ ಬಹಿರಂಗವಾಗಿ ಅಥವಾ ಅಂತರಂಗವಾಗಿ ಮಾಡುವದರಿಂದ ಮಿದುಳಿನ ಹಾಗು ಜ್ಞಾನ ತಂತುಗಳ ಘಟಕಗಳು ನಾಶವಾಗುತ್ತವೆ. ಇದರ ಪರಿಣಾಮವಾಗಿ ಮಿಕ್ಕ ದೇಹದ ಘಟಕಗಳು ನಾಶವಾಗುತ್ತವೆ. ಗ್ರಂಥಿಗಳ ರಚನೆ (System) ಯ ಮೇಲೆ ವಿಶೇಷವಾಗಿ ಲಾಲಾರಸ ಪಿಂಡಗಳ ಮೇಲೆ (Salivery glands) ಮತ್ತು ಸ್ವಾದುಪಿಂಡದ ಮೇಲೆ (Pancreas) ಬಹಳ ಕೆಟ್ಟ ಪರಿಣಾಮವಾಗುತ್ತದೆ. ಇದರ ಲಕ್ಷಣವೆಂದರೆ ಬೆಳ್ಳಗೆ ಹಾಲಿನಂತೆ ಹೊಟ್ಟೆ ಝಾಡಿಸುವದು. ಬಾವುಗಳನ್ನು ಹುಗುಳುಗಳನ್ನು ಗಾಯಗಳನ್ನು ಆಯೊಡಿನದಿಂದ ಉಪಚರಿಸುವದರಿಂದ ನರಗಳ ಚೈತನ್ಯ ಶಕ್ತಿ ಕಡಿಮೆಯಾಗುವದರಿಂದ ವ್ಯಾಧಿಯು ಗುಣವಾಗದಂತೆ ಅನಿಸಿದರೂ ಪ್ರತ್ಯಕ್ಷವಾಗಿ ಔಷಧಿಯಲ್ಲಿಯ ವಿಷದಿಂದ ಬಾಧೆಯುಂಟಾಗಿ ಮಿಕ್ಕ ಆಯುಷ್ಯದಲ್ಲೆಲ್ಲ ಅದರ ಪರಿಣಾಮವನ್ನು ಭೋಗಿಸಬೇಕಾಗುತ್ತದೆ. ಆಗಾಗ್ಗೆ ಭಯಂಕರ ತಲೆ ಶೂಲೆಗಳ ಶೆಳೆತ ಕಣ್ಣ ಮುಂದೆ ಚುಕ್ಕೆಗಳು ಕಾಣುವಿಕೆ, ಕೆಂಪು ಚುಕ್ಕೆಗಳು ಆಯೊಡಿನ್ನಿನ ಗುರುತಿನ ಚಿನ್ಹದ ಸ್ವರೂಪಿನಲ್ಲಿ ಮಿಶ್ರ ನೊರೆ ಅಥವಾ ಹಳದೀ ಬಣ್ಣದ್ದು ಕಾಣುವವು. ಈ ಚುಕ್ಕೆಗಳು ಅನ್ನಾಶಯ ಮಿದುಳಿನ ಭಾಗಗಳಿಗೆ ಸಂಬಂಧಿಸಿರುವವು.

# ಜಗದ ಶಕ್ತಿ ವೀರಮಾತೆ

—ಕೆ. ಸೀತಾರಾಮ ಅಡಿಗ, ಕುರಾಡಿ. ದ.ಕ.

ಜಗದ ಶಕ್ತಿ ಒಂದುಗೂಡಿ ।
ಜಗಕೆ ಶಾಂತಿರಸವ ನೀಡಿ ।
ಹಗಲು ರಾತ್ರಿ ಒಂದೆ ಮಾಡಿ ।
ದುಡಿಯುತಿಹಳು ನಮ್ಮ ಮಾತೆ ।
ಜಗದ ಶಕ್ತಿ ವೀರಮಾತೆ ॥ ೧ ॥

ಹೊತ್ತು ಬಸಿರ ಹಡೆಯುತಿಹಳು ।
ತುತ್ತು ನೀಡಿ ಸಲಹುತಿಹಳು ।
ಮತ್ತೆ ಶಾಂತಿ ಪ್ರೀತಿಯಿಂದ ।
ದುಡಿಯುತಿಹಳು ನಮ್ಮ ಮಾತೆ ।
ಜಗದ ಶಕ್ತಿ ವೀರಮಾತೆ ॥ ೨ ॥

ಕರ್ಮಪ್ರೇಮ ಒಂದೆ ಶಕ್ತಿ ।
ಧರ್ಮ ಬೆರೆತರದುವೆ ಮುಕ್ತಿ ।
ಮರ್ಮವರಿತು ಎರಕವೆರೆದು ।
ದುಡಿಯುತಿಹಳು ನಮ್ಮ ಮಾತೆ ।
ಜಗದ ಶಕ್ತಿ ವೀರಮಾತೆ ॥ ೩ ॥

ಭಾಳಿ ಭೂಮಿಯಲ್ಲಿ ಹರಿಸಿ ।
ಆಳವಾಗಿ ಮಮತೆಯೊಸರ ।
ಕರ್ಮ ನೇಗಿಲಿಂದ ಉತ್ತು ।
ದುಡಿಯುತಿಹಳು ನಮ್ಮ ಮಾತೆ ।
ಜಗದ ಶಕ್ತಿ ವೀರಮಾತೆ ॥ ೪ ॥

ಶಾಂತಿ ಸ್ನೇಹ ಬೀಜಬಿತ್ತಿ ।
ಕ್ರಾಂತಿ ಕ್ರೌರ್ಯಕಳೆಯಕಿತ್ತು ।
ಭ್ರಾಂತ ಜಗಕೆ ಸುಖದ ಫಲವ ।
ಉಣಿಸುತಿಹಳು ನಮ್ಮ ಮಾತೆ ।
ಜಗದ ಶಕ್ತಿ ವೀರಮಾತೆ ॥ ೫ ॥

ಜಗದ ಆ–ದರ್ಶಕಾಗಿ ।
ಸೊಗದ ಸಂ–ಸಾರಕಾಗಿ ।
ನಗದ ಜಗಕೆ ಜೀವ ಸ್ಫೂರ್ತಿ ।
ತುಂಬಿ ದುಡಿವಳೆಮ್ಮ ಮಾತೆ ।
ಜಗದ ಶಕ್ತಿ ವೀರಮಾತೆ ॥ ೬ ॥

# ಮುದುಕಿಯ ಮದುವೆ (ಕಥೆ)

●

ಲೇಖಕಿ:— ಶ್ರೀಮತಿ ಸುಶೀಲಾ ಕೊಪ್ಪರ ಜಯಪೂರ

[ ಎರಡು ಹೃದಯುಗಳ ಮಿಲನವೇ ಮದುವೆ; ಆದರೆ ಇಂದು ಮದುವೆ ಒಂದು ಸಾಮಾಜಿಕ ನಿರ್ಬಂಧವಾಗಿದೆ; ಮುದುಕಿ ಸುಗುಣವ್ವನಿಗೂ ಅದನ್ನು ಮೀರುವದಾಗಲಿಲ್ಲ ! ]

ಮುದಿಕಿ ಸುಗುಣವ್ವನ ಚಿಕ್ಕಗುಡಿಸಲದ ಬಾಗಿಲಿಗೇನೂ ತಳಿರು ತೋರಣಗಳಿದ್ದಿರಲಿಲ್ಲ. ಬಾಳೀಕಂಬಗಳ ಜೋಡಿರಲಿಲ್ಲ. ಓಲಗದ ಸಪ್ಪಳವಿರಲಿಲ್ಲ. ಜನರ ಗದ್ದಲವಿಲ್ಲ. ಆದರೂ " ಇಂದು ಮುದುಕಿ ಸುಗಣವ್ವನ ಮದಿವೆ " ಎಂಬ ಮಾತು ಎಲ್ಲ ಓಣಿಯ ಜನರ ನಗೆಯ ವಿಷಯುವಾಗಿತು.

ಆಕಾಶದ ಪಶ್ಚಿಮದ ಅಂಚಿನಲ್ಲಿ ಜಾರುತ್ತಿದ್ದ ಸೂರ್ಯನಿಗಾದರೂ ಇಂದು ಈ ಲಗ್ನ ನೋಡಿಯೇ ಹೋಗುವ ಅಪೇಕ್ಷೆ.ತಾನು ಲಗ್ನ ನೋಡುತ್ತ ನಿಂತರೆ ಇಡೀ ಜಗತ್ತಿನಲ್ಲಿ ತನ್ನಿಂದಾಗುವ ಬದಲಾವಣೆಗೆ ಬೆದರಿ ದಾರೀ ಹಿಡಿದ ಸೂರ್ಯ.

ಸಣ್ಣ ದೊಡ್ಡ ಕೆಲ ಹುಡುಗರು ಸಂಭ್ರಮದಿಂದ ಜಿಗಿದಾಡುತ್ತಿದ್ದರು. ಅವರಿಗೆಲ್ಲ ಮುದುಕಿಯ ಮನೆಯಲ್ಲಿ ಊಟದ ಆಮಂತ್ರಣವಂತೆ. ಆ ಹುಡುಗರ ತಂದೆ ತಾಯಿಗಳು ಒಂದೆಡೆ ' ಮುದುಕಿಯ ಮದಿವೆ ' ಎಂದು ಕುಚೇಷ್ಟೆ ಮಾಡುತ್ತಿದ್ದರೆ ಇನ್ನೊಂದು ಕಡೆಗೆ ಮದಿವೆಗೆ ಹೋಗುವ ಸಂಭ್ರಮದಲ್ಲಿದ್ದರು. ಹೆಂಗಸರು ತಮ್ಮ ಪೆಟ್ಟಿಗೆಗಳಲ್ಲಿ ಎಷ್ಟೋವರ್ಷಗಳ ವರೆಗೆ ಇಟ್ಟು ' ಗುನುಗು ' ನಾರುತ್ತಿರುವ ' ಘಾಗರಾ ' ಗಳನ್ನು ಉಡಹತ್ತಿದ್ದರು. ಸಣ್ಣ ಮಕ್ಕಳಿಗೆ ' ಮುದುಕಿಯಮದಿವೆ ' ಎಂದು ಎಲ್ಲರಿಗೂ ಕೇಳಿಸುವಂತೆ, ಅನ್ನಬಾರದು ಎನ್ನುವ ಬುದ್ಧಿ ಎಲ್ಲಿ ? ' ಬುಡಿಯಾಕಾ ಬ್ಯಾ ' ' ಬುಡಿಯಾಕಾ ಬ್ಯಾ ' ಎಂದು ಅರ್ಥತಿಳಿಯದೇ ಬಡಬಡಿಸುತ್ತಿದ್ದವು. ರಸ್ತೆಯಲ್ಲಿ ಡಂಗುರ ಹೊಡೆಯುವದೊಂದೇ ಉಳಿದಿತ್ತು. ನವ ವಿವಾಹಿತರ ಭಾವಚಿತ್ರಗಳನ್ನು ವರ್ತಮಾನಪತ್ರದಲ್ಲಿ ಕೊಟ್ಟು ಅವರ ಹೆಸರನ್ನು ಕೆಳಗೆ ಬರೆದಿದ್ದರೂ ಎಷ್ಟು ಜನರು ನೋಡುತ್ತಿದ್ದರೋ ! ಆದಕ್ಕೂ ಹೆಚ್ಚಿನ ಜಾಹೀರಾತು ಚಿಕ್ಕಮಕ್ಕಳ ಬಾಯಿಂದ ನಡೆದಿತ್ತು. ಆದರಲ್ಲಿಯ ಒಂದು ದೊಡ್ಡ ಹುಡುಗ ಚಂದ್ರಾಬಾಯಿಯ ಬಾಗಿಲಿಗೆ ಬಂದು " ಚಂದ್ರಾಬಾಯ್ರ ಮುದಿಕಿ ಸುಗಣವ್ವನ ಮದಿವ್ರಿ " ಎಂದು ಒದರಿಯೇ ಬಿಟ್ಟ. ಹಂಚಿನ ಮೇಲಿನ ರೊಟ್ಟಿ ಸಹ ತೆಗೆಯದೇ ಕೈಯ್ಯಲ್ಲಿ ಹಿಟ್ಟಿನ ಮುದ್ದೆಯನ್ನು ಹಿಡಿದುಕೊಂಡೇ " ಏನು ? ಏನು ? " ಎಂದು ಕಾರಭಾರಕ್ಕೆ ಕೈಹಾಕಿದಳು ಚಂದ್ರಾಬಾಯಿ.

ಕಾರಭಾರಗಿತ್ತಿ ಚಂದ್ರಾಬಾಯಿಗೆ ಏನಾದರೂ ಹೊಸ ಸುದ್ದಿ ಸಿಕ್ಕರೆ ಸಾಕು. ಹಸಿದ ಬಿಕ್ಷುಕನಿಗೆ ಬಿಸಿ ರೊಟ್ಟಿ ಸಿಕ್ಕಷ್ಟು ಸಂತೋಷ. ಹುಲಿಯಂಥ ಸುದ್ದಿಯನ್ನು

ಬೆಕ್ಕಿನಂಥದಾಗಿಯೂ ಬೆಕ್ಕಿನಂಥ ಸುದ್ದಿ ಹುಲಿಯಂಥದಾಗಿಯೂ ಮಾಡುವ ಬುದ್ಧಿ ಅನೇಕರಿಗೆ ಇರಬಹುದು. ಅದರಲ್ಲಿ ಸ್ವಲ್ಪ ಸಾಮ್ಯವಾದರೂ ಇದ್ದಿರಬಹುದು. ಆದರೆ ಯಾವದೂ ಸಾಮ್ಯವಿಲ್ಲದ ಹುಲಿಯನ್ನೇ ಇಲಿಯನ್ನಾಗಿಯೂ ಇಲಿಯನ್ನೇ ಹುಲಿಯನ್ನಾಗಿಯೂ ಮಾಡುವ ಮಾತಿನ ಜಾಣ್ಮೆ ಚಂದ್ರಾಬಾಯಿಯಲ್ಲಿದೆ 'ಸುಳ್ಳಿಗೂ ಸತ್ಯಕ್ಕೂ ನಾಲ್ಕು ಬೆರಳಿನ ಅಂತರವಿದೆ' ಎಂದ ಬೀರ-ಬಲ್ಲನಂಥ ಜಾಣನೆಂದರೆ ಸುಳ್ಳಿಗೂ ಸತ್ಯಕ್ಕೂ ಅಂತರವನ್ನೇ ತೋರಿಸಲಾರದಂಥ ಮಾತಿನ ಕೌಶಲ್ಯ ಚಂದ್ರಾಬಾಯಿಯಲ್ಲಿ!

ಇಂಥ ಒಬ್ಬಳು ಹೆಂಗಸಿಗೆ ನಿಜವಾಗಿಯೂ ಅವಳ ಮನೆಯ ಹಿಂದಿನ ಗುಡಿಸಿಲಿನಲ್ಲಿ ಸುಮಾರು ೫೦ ವಯಸ್ಸಿನ ಮುದುಕಿಯ ಮದಿವೆ ಎಂದು ತಿಳಿದರೆ ಸಂತೋಷ(?) ವಾಗದೇ ಬಿಟ್ಟೀತೆ?

"ಅಲ್ಲೋ ಈಶ್ಯಾ ಖರೇನ ಹೇಳತಿಯೋ, ಚಾಷ್ಟಿನೋ?"
ಚಂದ್ರಾಬಾಯಿ ಹುರುಪಿನಿಂದ ಕೇಳಿದಳು.

"ಖರೇವಂದ್ರರೀಯವ್ವಾ ನೋಡ್ರಿ ಬೇಕಾದ್ರ ಆಕಿ ಗಂಡಾನೂ ಮುದುಕ ಆದಾನ್ರಿ" ಹುಡುಗ ನಗುತ್ತ ಹೇಳಿದ.

"ಹಾಗಾದ್ರ ಆಕಿ ಅಳ್ಯಾ ಮಗಳು ಎಲ್ಲಾರೂ ಬಂದಾರೇನು?"

"ಇಲ್ರಿ ಯವ್ವಾ ಆಕಿ ಇಬ್ರೂ ಹೆಣಮಕ್ಕಳೂ ಅಳೀರು ಯಾರೂ ಬಂದಿಲ್ರಿ ಮುದಿಕೇನ ಮದಿವಿ ಮಾಡಿಕೋತಾಳಂತ ಸಿಟ್ಟಬಂದತೆಂತರಿ ಅವರಿಗೆ" ಹುಡುಗ ತಾನು ಕೇಳಿದ ಸುದ್ದಿ ಹೇಳಿದ.

"ಹೌದs- ನೋಡಲಿಕ್ಕೆ ಬರತೀನಿ ನಿಂದ್ರು, ಅಲ್ಲೋ ಈಶ್ಯಾ, ಆಕಿ ಏನು ಉಟಗೊಂಡಾಳೊ? ಹೊಸ ಅರಿವಿ ಹಾಕ್ಕೊಂಡಾಳೇನು?" ಚಂದ್ರಾಬಾಯಿ ಕುತೂಹಲದಿಂದ ಕೇಳಿದಳು.

"ಇನ್ನೂ ಇಲ್ರಿ ಯವ್ವಾ, ಇನ್ನಾ ಯಾರೂ ಬಂದಿಲ್ಲಾ. ಹೋಳಿಗಿ ಮಾಡಾಕ ಕುಂತಾಳ ಮಂದಿ ಎಲ್ಲಾ ಬರೂದ್ರಾಗ ಹೋಳಿಗಿ ಮಾಡಿ ಮುಗಿಸಿ, ತಯಾರ ಆಕ್ಕಾಳ್ರಿ, ರಾತ್ರಿ ಹನ್ನೊಂದಕ್ಕ ಲಗನ್ರಿ" ಎಂದು ಹೇಳಿ ಹುಡುಗ ಓಡಿಯೇಬಿಟ್ಟ.

ಇಂಥ ರಸಮಯ ಚಿತ್ರ ನೋಡುವದು ರಾತ್ರಿ ಹನ್ನೊಂದರ ವರೆಗೆ ಮುಂದು ಬಿದ್ದಿತಲ್ಲ ಎಂದು ಚಂದ್ರಾಬಾಯಿಗೆ ಒಳಗೊಳಗೆ ಅಸಮಾಧಾನ ಆದರೂ ಆ ವರೆಗೆ ಮನೆಗೆಲಸವನ್ನೆಲ್ಲ ಮುಗಿಸಿ ಲಗ್ನ ನೋಡಲು ಹೋಗಲಿಕ್ಕೆ ಬರುವದಲ್ಲ! ಎಂದು ಸಮಾಧಾನ ತಂದುಕೊಂಡಳು (ತನಗೆ ಆಮಂತ್ರಣವಿಲ್ಲದಿದ್ದರೂ!)

ಅಂದು ರಾತ್ರಿ ಚಂದ್ರಾಬಾಯಿಯ ಗಂಡ ಉಂಡು ಮಲಗುವವರೆಗೂ ಚಂದ್ರಾಬಾಯಿಯ ಬಾಯಿ ಒಂದೇ ಸವನೇ ನಡೆದಿತ್ತು. ಮುದಿಕಿಯ ಪೂರ್ಣ ಇತಿಹಾಸ ಅವಳ ಅಳಿಯ ಮಕ್ಕಳು ರೂಪು ವಯಸ್ಸು ಎಲ್ಲವಂತೂ ಸರಿಯೆ! ಹೊರ್ತಾಗಿ

ತಾನಿನ್ನೂ ನೋಡದ ಮುದಿಕಿಯು ಗಂಡ ಮುದುಕನ ವರ್ಣನೆಯನ್ನೂ ರಸವತ್ತಾಗಿಯೇ ಬಣ್ಣಿಸಿದಳು. ದಣಿದು ಬಂದ ಚಂದ್ರಾಬಾಯಿಯು ಪತಿ ಮುದುಕಿಯು ಮದಿವೆಯು ಜೋಗುಳ ಪದದೊಂದಿಗೆ ನಿದ್ರೆ ಹೋದ.ಹಿತ್ತಿಲ ಗುಡಿಸಿಲಿನಲ್ಲಿಯ 'ಡೋಲ' ಬಾರಿಸುವ ಸಪ್ಪಳ ಅವನನ್ನೇನೂ ಎಚ್ಚರ ಮಾಡಲಿಲ್ಲ. 'ಡೋಲಿ'ನ ಸಪ್ಪಳ ಜೋರಾಯಿತು. ಜನರ ಗದ್ದಲ ಕೇಳಿಸತೊಡಗಿತು. ಚಂದ್ರಾಬಾಯಿಯ ಕಾಲು ಮನೆಯಲ್ಲಿ ನಿಲ್ಲಲಾರದಾದವು. ಸಾವಕಾಶವಾಗಿ ಮನೆಯ ಬಾಗಿಲಗಳನ್ನು ಇಕ್ಕಿಕೊಂಡು ಗುಡಿಸಿಲಿನ ಕಡೆಗೆ ಸಾಗಿದಳು.

ಗುಡಿಸಿಲಿನ ಮುಂಭಾಗದಲ್ಲಿ ಪೆಟ್ರೋಲ್ ಮ್ಯಾಕ್ಸೊಂದು ಸ್ಸೂss- ಎಂದು ಢಂ—ಢಂ ಬಾರಿಸುವ 'ಡೋಲಿ'ಗೆ ಸ್ವರ ಹಿಡಿದಿತ್ತು. ನಾಲ್ವತ್ತು ಐವತ್ತು ಜನರು ಗುಂಪಾಗಿ ಎದ್ದು ನಿಂತಿದ್ದರು. ಎಲ್ಲರ ಹಣೆಗಳೂ ಗುಲಾಲಿನಿಂದ ಸುಶೋಭಿತವಾಗಿದ್ದವು. ಎಲ್ಲರ ಕೊರಳಲ್ಲಿಯೂ ಒಂದೊಂದು ಚಂಡು ಹೂವಿನ ಮಾಲೆ! ವಧು-ವರರು ಹೋಮದ ಮುಂದೆ ಕುಳಿತಿದ್ದರು. ವರ ಬಣ್ಣದ ರುಮಾಲಿನಿಂದ ತನ್ನ ಬಿಳಿ ಕೂದಲಗಳನ್ನು ಮುಚ್ಚಿದ್ದ.ತಿಳುವಾದ ರೇಶ್ಮೆ ಅಂಗಿಗೆ ದಪ್ಪವಾದ ಬೆಳ್ಳಿಯ ಸರಪಳಿಯಲ್ಲಿ ಹೆಣೆಯಲ್ಪಟ್ಟ ಬೆಳ್ಳಿ-ಗುಂಡಿಗಳನ್ನು ಹಾಕಿದ್ದ "ಮುದುಕನ ಮದುವೆ ಎಂದು ಟೀಕಿಸುತ್ತಿದ್ದ ಇಲ್ಲಿ ನೆರೆದ ಯಾವ ತರುಣನ ಎದೆ ತನ್ನಷ್ಟು ಗಟ್ಟಿಮುಟ್ಟಾಗಿದೆ?" ಎಂದು ಕೇಳುವಂತಿತ್ತು ಅವನ ಎದೆಯ ಏರಿಳಿತ!

ಬಲಕಿನ ಮೂಗಿನ ಹೊರಳಿಯಲ್ಲಿ ಒಂದು ಚಿಮುಟ ನಾಶೀಪುಡಿ ಏರಿಸುತ್ತ ಬಲಕ್ಕೆ ಜೋಲಿ ಹೊಡೆಯುತ್ತಿದ್ದ. ಆಗ ಬಲಕ್ಕೆ ಕುಳಿತ ಮುದಿಕಿಯ ಸ್ಪರ್ಶಸುಖ ಪಡೆದು ತಮ್ಮ ಕಡೆಗೆ ಎಷ್ಟು ಜನರ ಲಕ್ಷವಿದೆ ಎಂದು ನಿರೀಕ್ಷಿಸುತ್ತಿದ್ದ. ಎಡಕಿನ ಹೊರಳಿಗೆ ಚಿಮುಟ ನಾಶೀಪುಡಿ ಏರಿಸುತ್ತ ಎಡಕ್ಕೆ ಜೋಲಿ ಹೊಡೆಯುತ್ತಿದ್ದ.ಆಗ ಬಲಕ್ಕೆ ಕೂತ ಹೆಂಡತಿಯ ಮುಖ ನೋಡಲು ಯತ್ನಿಸುತ್ತಿದ್ದ. ಈ ದೃಶ್ಯ ಎಲ್ಲರನ್ನೂ ನಗುವಂತೆ ಮಾಡುತ್ತಿತ್ತು. ಆಗ ಮುದುಕ ತನ್ನ ರಸಿಕತೆಗೆ ತಾನೇ ಮೆಚ್ಚಿ ಒಂದು ಮಂದಹಾಸ್ಯ ಬೀರುತ್ತಿದ್ದ.

ಆದರೆ ಪಾಪ ಮುದುಕಿಗೆ ಮಾತ್ರ ಇದೆಲ್ಲ ಸಂಭ್ರಮ ಯಾವಾಗ ಮುಗಿಯುವದೋ ಎನ್ನಿಸಿರಬಹುದು. ಅವಳು ಹಾಕಿದ ಮುಸುಕಿನಲ್ಲಿ (ಘುಂಗಟ) ಅವಳಿಗೆ ಉಸಿರು ಕಟ್ಟಿದಂತಾಗಿರಬಹುದು. ಕೆಂಪು ಮಲಮಲಿನ ಮುಸುಕಿನಲ್ಲಿ, ಅವಳ ಮೋರೆಯ ಮೇಲಿನ ಗೆರೆಯಾಗಲೀ, ಅವಳ ಬೈತಲಿನ ಅಗಲವಾಗಲೀ, ಅಥವಾ ಯಾವದೇ ಭಾವವಾಗಲೀ ನೋಡುವವರಿಗೆ ಕಾಣಿಸುವಂತಿದ್ದಿಲ್ಲ. ಯಾವಾಗಲಾದರೂ ನಡುವೆ ಸ್ವಲ್ಪ ಅಲುಗಾಡಿ ಕಣ್ಣು ಒರಿಸಿಕೊಳ್ಳುವದು ಮಾತ್ರ ತಿಳಿಯುವಂತಿತ್ತು. 'ಬೇಕೆಂದು ಮದುವೆ ಮಾಡಿಕೊಂಡು ಮದಿವೆಯ ಸಮಯಕ್ಕೆ ಅಳುವಷ್ಟು ಚಿಕ್ಕ ಮಗುವೆ? ಈ ಮುದಿಕಿ' ಎಂದು ಚಂದ್ರಾಬಾಯಿಗೆ ದಿಗಿಲು. ಚಂದ್ರಾಬಾಯಿ ಕಾರಭಾರಗಿತ್ತಿಯಾದರೂ ಎರಡನೆಯವರ ಕಣ್ಣೀರಿಗೆ ಎದೆ ಕರಗುವ ಮೃದು ಸ್ವಭಾವದವಳು. ಒಮ್ಮೆಲೆ ಗದ್ದಲದಲ್ಲಿಂದ ಮುದಿಕಿಯ ಹತ್ತರ ಹೋಗಿ "ಆತು ಬಿಡು

ಸುಗಣವ್ವ, ಯಾಕ ತ್ರಾಸ ಮಾಡಿಕೋತಿss; ನೀನೂ ಒಬ್ಬಾಕಿ ಇದ್ದಿss "........ ಎಂದು ತನ್ನ ಸಹಾನುಭೂತಿ ವ್ಯಕ್ತಪಡಿಸಿದಳು. ಮುದಿಕಿಯ ಅಳುವು ಮತ್ತಿಷ್ಟು ಹೆಚ್ಚಾಯಿತು. ಚಂದ್ರಾಬಾಯಿಗೆ ಆಗ ನಿಲ್ಲುವದಾಗಲಿಲ್ಲ. ತನ್ನ ಮನೆಯ ದಾರೀ ಹಿಡಿದಳು. ಆದರೂ ಮುದಿಕಿ ಬೇಕಾಗಿ ಮದುವೆಯಾಗಿ ಅಳುವದು ಯಾತಕ್ಕಾಗಿ ಎಂಬದು ಮಾತ್ರ ಚಂದ್ರಾಬಾಯಿಯ ಬದ್ಧಿಗೆ ಮೀರಿದ ಮಾತಾಗಿತ್ತು. ಮನೆಗೆ ಹೋಗುವಾಗ ಆಚೆ ಗುಡಿಸಿಲಿನ ಬಳಿ ಕತ್ತಲೆಯಲ್ಲಿ ಮೂರು ಕಾಲಿನ ಮುರುಕು ಹೊರಸಿನ ಮೇಲೆ ಮುದುಕ ಮಾದಪ್ಪ ಚಿಲುಮೆ ಸೇದುತ್ತ ಕುಳಿತಿದ್ದ. ಅವನು ಕುಳಿತ ಜಾಗವೆಲ್ಲ ಕತ್ತಲೆಯಲ್ಲಿ ಮುಳುಗಿದ್ದರೂ ಅವನು ಊದಿದಾಗ ಅವನ ಚಿಲುಮೆ ಮಾತ್ರ ಬೆಳಕು ಕೊಡುತ್ತಿತ್ತು.

" ಯವ್ವಾ ಕತ್ತಲ್ಯಾಗ ಯಾಕ ಹೊಕ್ಕೀರಿss........ಒಳಗಿಂದ ಲಾಟಣ ತರ ತೀನಿ, ನಿಂದರ್ರಿ " ಎಂದ ಮಾದಪ್ಪ

" ಅಲ್ಲೋ ಮಾದಪ್ಪಾ, ನೀ ಯಾಕ ಹೋಗಿಲ್ಲೊ ಲಗ್ನಕ್ಕ? " ಎಂದಳು ಚಂದ್ರಾಬಾಯಿ ನಗುತ್ತ. ಒಂದು ಕ್ಷಣದ ಹಿಂದೆ ಮುದುಕಿಗೆ ಸಹಾನು-ಭೂತಿ ತೋರಿಸಿದ ಚಂದ್ರಾಬಾಯಿ ಮರುಕ್ಷಣದಲ್ಲಿಯೇ ಅದನ್ನು ಮರೆತು ಮತ್ತೆ ನಗೆ ಯಾಡಲಾರಂಭಿಸಿದಳು.

" ನಂದೇನೈತ್ರಿ ಯವ್ವಾ ಅಲ್ಲಿ ಕೆಲಸಾ " ಎಂದ ಮಾದಪ್ಪ.

"ಯಾರದೇನದ ಅಲ್ಲೆಕೆಲಸ?ನಮ್ಮದೇನಾರೆ ಕೆಲಸ ಇತ್ತಂತ ಹೋಗಿದ್ವೇನ ಅಲ್ಲೆ?"

" ನೀವೆಲ್ಲಾ ಹಾರೇದವ್ರು, ಮಜಾ ಆಕ್ಕತ್ರಿ ನೋಡಾಕಾ; ಯಾರದ ಅವ ರಿಗೆ ಗೊತ್ತು " ಎಂದು ನಿಟ್ಟುಸಿರು ಬಿಟ್ಟ ಮಾದಪ್ಪ.

" ಯಾಕೋ ಮಾದಪ್ಪಾ ! ಆ ಸುಗಣವ್ವನ ನೋಡಿ ನಿನಗೂ ಲಗ್ನ ಆಗೂ ಅಪೇಕ್ಷಾ ಆಗೇದೇನು ? ಯಾಕೋ ಭಾಳ ಕಾಳಜ್ಯಾಗ ಬಿದ್ದಂಗ ಕಾಣಸ್ತಿ ? ಅಲ್ಲಿ ಯಲ್ಲಾರೂ ಹೋಳಗಿ ತಿನ್ನಿಲಿಕ್ಕೆ ಹತ್ಯಾರ. ನೀ ಒಬ್ಬನ ಇಲ್ಲಿ ಕತ್ತಲ್ಯಾಗ ಕೂತ ಏನ ಮಾಡತಿ ? ನೋಡ ಆರೆ ಹೋಗ ಅಲ್ಲೆ" ಎಂದು ನಗೆಯಾಡಿದಳು ಚಂದ್ರಾಬಾಯಿ.

" ಹೋಳಗಿ ತಿನ್ನಾಕ ಏನ ಹೋಕ್ಕತಿ ಗಂಟು ! ಹೋಳಿಗಿ ತಿನ್ನುವ್ಹಾಂಗ ತಿಂದು ಹಿಂದ ಹೋಳಿಹುಣ್ಣಿವಿ ಮಾಡತದ ಇದ ಜನ. ಪರಸಂಗ ಬಂದರ ತಿಳಿತದರಿ ಯವ್ವಾ, ಅವರ ಅವರ ದುಕ್ಕಾ ಅವರವರಿಗೆ " ಎಂದು ಮಾದಪ್ಪ ಗಂಭೀರವಾಗಿಯೇ ಮಾತನಾಡಿದ.

" ಅಲ್ಲೋ ಮಾದಪ್ಪಾ, ಈ ಮುದಿಕಿಗೆ ಲಗ್ನಾ ಮಾಡಿಕೊಳ್ಳೊ ಅಂಥಾ ಪ್ರಸಂಗ ಏನ ಬಂದಿತ್ತೊ ? ನಾಲ್ಕುಮನಿ ದುಡದು ಮುಸರಿ ತಿಕ್ಕಿ ಬರತಿದ್ಲು. ಸುಮ್ಮನ ಇರಬಾರದಾಗಿತ್ತ ? ಯಾತಕ್ಕ ಬೇಕಾಗಿತ್ತು ಲಗ್ನ ? ಮಂದಿ ನಗದ ಏನ ಮಾಡ್ಯಾರೋ ಮಾದಪ್ಪಾ ? ಮ್ಯಾಲ ಈಗ ಅಳತಿದ್ಲು. ಅಳಲಿಕ್ಕೆ ಏನಾತು ಮತ್ತು ಮುದಿಕಿಗೆ ? " ಚಂದ್ರಾಬಾಯಿಸವಿಸ್ತಾರ ಮಾಹಿತಿ ತೆಗೆಯಲೆತ್ನಿಸಿದಳು.

“ ಅಳದ ಏನ ಮಾಡ್ಯಾಳ್ರೀ ಮಂದಿ ಒಳಗ ಆಕಿಗೇನೂ ನಾಚಿಗೇನೆ ಇಲ್ಲಾಂತ ತಿಳಿದೀರಾ ? ಗಂಡ ಸತ್ತ ಮ್ಯಾಗ ಕೈಕಾಲ ಗಟ್ಟಿ ಇರೂತನಕಾ ನಾಕ ಮನಿ ಮುಸರೀ ತಿಕ್ಕಿ ಹೊಟ್ಟೀ ತುಂಬಿಕೊಂತಿದ್ಲು. ಆದರಾಗs-ಹೆಣ್ಣಮಕ್ಕಳ ಲಗ್ನಾ ಮಾಡಿದ್ಲೂ. ಈಗ ವಯಸ್ಸಾಗೇತೀ. ಸದಾ ಸದಾ ಬ್ಯಾನೀ ಬೀಳತಾಳು. ಇದ್ದ ನಾಲ್ಕು ಕೆಲಸದಾಗ ಎರಡು ಹೋಗಿ ಎರಡು ಉಳದಾವು. ಅದು ಸಹಿತ ಎಂದಾರ ಬ್ಯಾನಿಬಿದ್ರ ಆ ಯಜಮಾನ್ರ ಮನಿಯವರು ಬಂದು ಬಾಯಿಗೆ ಬಂದ್ಹಾಂಗ ಬೊಗಳ ತಾರು. ಆ ಎರಡು ಮನ್ಯಾವ್ರು ಕೊಟ್ಟ ನಾಲ್ಕಾರು ರೂಪಾಯಿದಾಗ ಈಕಿ ಹೊಟ್ಟಿ ಆದರೂ ಹ್ಯಾಂಗ ತುಂಬಬೇಕು ? ಹೆಚ್ಚಿನ ಮನೀ ಕೆಲಸಾ ಮಾಡಾಕs ತಾಕತ ಇಲ್ಲಾ. ಆಕಿನ್ನ ಮದಿವಿ ಆಗ್ಯಾನ ಆ ಮುದಕಾ ! ಅಂವಂದೊಂದು ನಶೀಬಾನ-ಚಲೋ ಗಟ್ಟಿ ಮುಟ್ಟ ಅದಾನೂ-ಎಲ್ಲಾರ ಕೂಲಿ ಕುಂಬಳಿ ಮಾಡಿ ನಾಕು ದುಡ್ಡ ತರತಾನು. ಮನ್ಯಾಗ ಹ್ಯಾಣತಿ ಇಲ್ಲ. ಮಗ ಸೊಸಿ ಎಲ್ಲಾರೂ ಆದಾರು. ಆದರ ಅವಂಗ ಗಂಜೀ ಕಾಸಿ ಕೊಡೊದಕ್ಕ ಯಾರ ದಿಕ್ಕ ಇಲ್ಲಾ. ಏನೋ ದೇವರು ಅವ ರಿಗೆ ಕೂಡಿಸಿ ಕೊಟ್ಟಾ ಅಂತ ಸಂತೋಸ ಬಡುದು ಬಿಟ್ಟು ಎಲ್ಲಾರೂ ನಗಾವರೇ ” ಎಂದು ಆವೇಶದಿಂದ ಒಂದೇ ಉಸುರಿನಲ್ಲಿ ಮಾತನಾಡಿಬಿಟ್ಟ ಮಾದಪ್ಪ.

ಚಂದ್ರಾಬಾಯಿಯ ನಗುವು ಯಾವಾಗಲೋ ಮಾಯವಾಗಿತ್ತು. ಆ ಹೊಸ ಮುದುಕ ದಂಪತಿಗಳ ಕಡೆಗೆ ನೋಡುವ ಚಂದ್ರಾಬಾಯಿಯ ದೃಷ್ಟಿಯೇ ಮಾದಪ್ಪನ ಮಾತಿನಿಂದ ಬದಲಾಯಿತು.

“ ಇಷ್ಟಕ್ಕ ಮದಿವಿ ಬೇಕಾಗಿದ್ರ ಹಂಗೆ ಕೂಡಿ ಇರಬಹುದಾಗಿತ್ತಲ್ಲೋ ಮಾದಪ್ಪಾ ” ಚಂದ್ರಾಬಾಯಿಯ ಧ್ವನಿ ಸ್ವಲ್ಪ ಮೃದುವಾಗಿಯೇ ಇತ್ತು.

“ ಅಷ್ಟಕ್ಕ ! ಇಷ್ಟಕ್ಕ ! ಮದಿವಿ ಯಾರಿಗೆ ಎಷ್ಟಕ್ಕ ? ಅಂತ ಹೇಳೂದ ಭಾಳ ಕಷ್ಟರೀ ಯವ್ವಾ. ಕಳ್ಳ ಯಾಪಾರ ಭಾಳ ದಿವಸ ನಡ್ಯಾಣಿಲ್ಲರಿ. ಅಂವಾ ಯಾವಾಗಾರೆ ಬಂದು ಸುಗಣವ್ವನ ಮನ್ಯಾಗ ರೊಟ್ಟಿತಿಂದು ಯಾಡ್ಡ ಸರೆ ರೇಶನ್ ತಂದ ಕೊಟ್ಟರ ಮಂದಿ ಹೂಲೀನ ಎಬಸಿದ್ರು. ಮದಿವಿಮಾಡಿಕೊಂಡು ದೂರ ಹೋಗಿ ಬಿಟ್ಟರಾತೂ. ಇಬ್ಬರಿಗೂ ಸುಕಾ ಆಕ್ಕತ್ರಿ. ನಾಕದಿವಸ ಮಂದಿ ನಕ್ಕ ಏನ ಮಾಡತಾರು ? ಅಂತ ಠರಾಸಿ ಮದಿವಿ ಆಗ್ಯಾರ. ನಾಳೆ ಇಲ್ಲಿ ಯಾರಿಗಾರ ಸುಗ ಣವ್ವನ ನೋಡಲಿಕ್ಕೆ ಆಕಿ ಸಿಕ್ಯಾಳೇನು ? ಆ ಸಾವಕಾರ ಮನ್ಯಾವ್ರು ಮುಸರಿಗೆ ಕರಿ ಲಿಕ್ಕೆ ಬಂದು ಬಾಗಲಿಗೆ ಬೈಕೊಂಡು ಹೋಕ್ಯಾರ ” ಎಂದು ಮುದುಕ ಮಾದಪ್ಪ ಮೀಸೆಯಲ್ಲಿಯೇ ನಗುತ್ತ ಕಂದೀಲ ಎತ್ತಿ ಬೆಳಕು ತೋರಿಸಿದ ಚಂದ್ರಾಬಾಯಿಯ ಮನೆಯಹಾದಿಗೆ. ಅವನ ಆ ನಗೆಯ ಅರ್ಧಭಾಗ,ಶ್ರೀಮಂತರ ವಿಷಯಕ್ಕೆ ತಾತ್ಸಾರ ವನ್ನೂ ಇನ್ನರ್ಧಭಾಗ ಬಡವರ ವಿಷಯಕ್ಕೆ ಸಹಾನುಭೂತಿಯನ್ನೂ ತೋರಿಸು ತ್ತಿತ್ತು. ಆ ನಗೆಯ ಅರ್ಥ ಚಂದ್ರಾಬಾಯಿಗೆ ಆಗದಿದ್ದರೂ ಮುದಿಕಿಯ ಮದಿ ವೆಯ ಅರ್ಥಮಾತ್ರ ಸಂಪೂರ್ಣವಾಗಿತ್ತು !

# ಸ್ತ್ರೀಯರ ಅಧೋಗತಿ ದೇಶದ ಪತನಕ್ಕೆ ಕಾರಣ

ಲೇಖಕಿ: ಶ್ರೀಮತಿ ಲಲಿತಾ ಕರಿಮನೆ

**ಸ್ತ್ರೀಯರು ತಮ್ಮ ನಿಜವಾದ, ನೈಸರ್ಗಿಕ ಕಾರ್ಯರಂಗದಲ್ಲಿ ಕೆಲಸ ಮಾಡುವದನ್ನು ಬಿಟ್ಟು ಯುದ್ಧರಂಗದಲ್ಲಿ ಗುಂಡು ಹೊಡೆಯುವದು ತಪ್ಪು, ಎಂದು ಗಾಂಧೀಜಿಯವರು ಹೇಳಿದ್ದಾರೆ. ಸ್ತ್ರೀ ಪುರುಷರು ತಮ್ಮ ತಮ್ಮ ಕಾರ್ಯರಂಗದಲ್ಲಿ ದಕ್ಷತೆಯಿಂದ ಕೆಲಸ ಮಾಡುವಲ್ಲಿಯೇ ಎಲ್ಲರ ಏಳ್ಗೆಯಿದೆ. ಆದರೆ ಪ್ರಸಂಗ ಬಂದಾಗ, ಬಂದ ವಿಪತ್ತನ್ನು ಎದುರಿಸುವ ಧೈರ್ಯ ಮಾತ್ರ ಇಬ್ಬರಲ್ಲೂ ಬೇಕು.**

ಭರತಖಂಡ ಸ್ವತಂತ್ರವಾಗಿ ಮೆರೆಯುತ್ತಿದೆ. ಎಲ್ಲ ದೇಶಗಳಂತೆ ನಮ್ಮ ದೇಶಕ್ಕೂ ಒಂದು ಸ್ಥಾನಮಾನವಿದೆ. ಆದರೆ ಅಂತ:ಕಲಹದಿಂದ ತುಂಬಿದ ನಮ್ಮ ದೇಶಕ್ಕೆ ಈ ಸ್ವಾತಂತ್ರ್ಯ ಎಷ್ಟು ದಿವಸದ ವರೆಗೆ ನಿಲ್ಲುತ್ತದೆಯೇ ಸಂಶಯದ ಮಾತು. ಏಕೆಂದರೆ ದೇಶದ ಏಳ್ಗೆಗೆ ಮೂಲ ಕಾರಣರಾದ ಸ್ತ್ರೀಯರ ದುಃಸ್ಥಿತಿಯು ತೀರ ಅಸಹ್ಯವಾದ ಪರಿಸ್ಥಿತಿಯಲ್ಲಿದೆ. ಅವರು ಅದರಿಂದ ಮತ್ತು ಪುರುಷ ಪ್ರಾಬಲ್ಯದಿಂದ ತುಂಬಿದ ಪರಿಸ್ಥಿತಿಯಿಂದ ತಲೆ ಎತ್ತದವರಾಗಿದ್ದಾರೆ. ತಿಳಿದವರೂ, ತತ್ವನಿಷ್ಠರೂ ಕುತ್ತಿಗೆ ಗೋಯ್ಕರಾದಾಗ್ಗೆ ಎಳೆಕುಡಿಯ ತಲೆ ಚಿವುಟದಂತೆ, ಅವರು ಎತ್ತುತ್ತಿದ್ದ ತಲೆಯನ್ನು ನೆಲಕ್ಕಪ್ಪಳಿಸಿಬಿಡುವ ಕಾರ್ಯನಿಷ್ಠರು ಅಲ್ಲಲ್ಲಿಗೆ ತುಂಬಿಕೊಂಡಿದ್ದಾರೆ. ಅದಕ್ಕೆ ಕಾರಣ ಅವರ ಅಹಂಕಾರ—ದುರುದ್ದೇಶ—ಪಾಪದೃಷ್ಟಿ ಮುತ್ಸದ್ದಿತನ ಹೆಂಗಸಿನ ದೌರ್ಬಲ್ಯ.

ದಿನಾಂಕ ೨೫-೬-೫೧ ರಲ್ಲಿ ಸ್ತ್ರೀದಾಕ್ಷಿಣ್ಯವೆಂಬ ಲೇಖ ಬರೆದ ಮಾನ್ಯ ಕಿ. ಘ. ಮಶ್ರೂವಾಲಾ ಇವರು ದೇಶದ ಗೊಂದಲಗೆಟ್ಟ ಪರಿಸ್ಥಿತಿಯಲ್ಲಿ ಹೆಣ್ಣುಮಕ್ಕಳ ತೊಡಕು ಹೇಗಿದೆ ಎಂಬುದನ್ನು ಹೇಳಿದ್ದಾರೆಯೇ ವಿನಃ ಅದರ ನಿವಾರಣೋಪಾಯ ಹೇಳಲಿಲ್ಲ. ಏಕೆಂದರೆ ಬಿಡಿಸಲಾರದ ಸಮಸ್ಯೆಯೇ ಎದುರಿಗಿದ್ದಾಗ್ಗೆ ಬಿಡಿಸುವ ಸಾಹಸಕ್ಕೆ ಕೈಹಾಕುವವರಾರು ?

'ತಮ್ಮ ಹೊಲಮನೆ-ದನಕರುಗಳನ್ನು ರಕ್ಷಿಸಿಕೊಳ್ಳುವ ಬುದ್ಧಿ ಎಲ್ಲರಿಗಿರುತ್ತದೆ. ಆದರೆ ತಮ್ಮ ಹೆಂಗಸರನ್ನು ಸಂರಕ್ಷಿಸುವ ತಾಳ್ಮೆ ಗಂಡಸರಿಗಿಲ್ಲ, ಮತ್ತು ಪ್ರಾಣಹೋಗುವ ಪ್ರಸಂಗ ಬಂದಾಗ್ಗೆ ಬಾಕಿ ಉಳಿತಾಯಗಳ ಕಡೆಗೆ ಲಕ್ಷವಿಟ್ಟು ಪಾಲಾಯನ ಹೇಳುವರೇ ವಿನಃ ಹೆಂಗಸರ ಚಿಂತೆ ಅವರಿಗಿಲ್ಲ." ಎಂದು ಅವರು ಹೇಳಿದ್ದಾರೆ. ಇದು ನಿಜವಾದ ಮಾತು. ಸದ್ಯದ ವಾತಾವರಣದಲ್ಲಿ ನಡೆಯುವ ವಿಚಿತ್ರ ಸಂಗತಿಗಳನ್ನು ಅವರು ಎತ್ತಿತೋರಿಸಿದ್ದಾರೆ.

ಆದರಲ್ಲೂ ಸ್ತ್ರೀಯರ ಉತ್ಕರ್ಷಕ್ಕಾಗಿ ಹೆಣಗುವವರ ಸಹಾಯಕ್ಕಾದರೂ ಯಾರಾದರೂ ಹೋಗುವರೇ ? ಇಲ್ಲ. ಮಾಡುವ ಕಾರ್ಯಕ್ಕೆ ಕಲ್ಲುಹಾಕುವ ಕೆಲಸ

ವನ್ನು ಮಾತ್ರ ಮಾಡುವರು. ಇದರಲ್ಲಿ ಸ್ತ್ರೀಪುರುಷರಿಬ್ಬರೂ ಅಷ್ಟೇ. ತಮ್ಮ ಸ್ವಾರ್ಥಕ್ಕೆ ಅಡ್ಡಬಂದಾಗ್ಗೆ ಇಂಥ ಕಾರ್ಯಗಳಿಗೆ ಅವರು ಮನಸ್ಸು ಮಾಡುವದಿಲ್ಲ.

ಪರಿಸ್ಥಿತಿಯು ಎಲ್ಲ ಕಡೆಯಲ್ಲಿದ್ದುದರ ಮೂಲಕ ಗ್ರಾಮಸೇವಿಕೆಯರಿಗೂ ಸಮಾಜಸೇವಿಕೆಯರಿಗೂ ಹೆಣ್ಣಮಕ್ಕಳ ಏಳ್ಗೆಗಾಗಿ ಕೆಲಸಮಾಡುವ ಪ್ರಸಂಗದಲ್ಲಿ ಎದೆಗಾರ್ತಿಯರಾಗಿ ಮುಂದುವರಿದು ಕೆಲಸಮಾಡುವ ಧೈರ್ಯವೂ ಕುಗ್ಗಿ ಹೋಗುತ್ತದೆ. ಪುನಃ ಅವರು ಗಂಡಸಿನ ಆಶ್ರಯ ಪಡೆಯಬೇಕಾಗುತ್ತದೆ. ಮತ್ತು ಗಂಡಸಿನ ಧೈರ್ಯದ ಕೆಳಗೆ ಕಾರ್ಯ ಪ್ರಾರಂಭಿಸಬೇಕಾಗುತ್ತದೆ. ಮತ್ತು ಇತ್ತೀಚಿಗೆ ಹಿರಿಯರೂ ಮುಖಂಡರೂ ಕರ್ತವ್ಯ ಭ್ರಷ್ಟರಾದಾಗ್ಗೆ ಯಾರನ್ನು ನಂಬಬೇಕು ಎಂಬುದೇ ಹೆಂಗಸಿಗೆ ಗೂಢವಾದ ಸಮಸ್ಯೆಯಾಗಿದೆ.

ಮೊದಲೇ ಹೆಂಗಸರು ನಿರಕ್ಷರಿ-ನಿರಾಧಾರಿಗಳು. ಅಕ್ಷರವನ್ನು ನೋಡಿದ ಜನ ಸ್ವಲ್ಪವೇ. ಮನಸ್ಸಿನ ಮತ್ತು ಸಂಸ್ಕೃತಿಯ ದೌರ್ಬಲ್ಯದ ಮೂಲಕ ಕಲಿತವರು-ಕಲಿಯದವರು ಒಂದೇ ದಾರಿಯ ಮೇಲೆ ಇದ್ದಾರೆ. ಗಂಡಸರಿಗೆ ಯೋಗ್ಯ ಬುದ್ಧಿಯನ್ನು ಕಲಿಸುವ ಧಿಟ್ಟಹುಡಿಗೆಯರು ಸ್ವಲ್ಪವೇ ಇರುತ್ತಾರೆ. ಇಲ್ಲವೆಂದರೂ ಅಡ್ಡಿ ಇಲ್ಲ. ಆದರೆ ಎಲ್ಲ ಜನರೂ ಹೊತ್ತುಬಂದಂತೆ ಕೊಡೆಹಿಡಿಯುವವರು !

ವೇಶ್ಯೆ ಎಂದು ನಾವು ತಿರಸ್ಕರಿಸುತ್ತೇವೆ. ಆದರೆ ವೇಶ್ಯೆಯಾಗಲು ಕಾರಣವೇನೆಂದು ವಿಚಾರಮಾಡುವದಿಲ್ಲ. ಇರಲಿ. ಆದರೆ ವೇಶ್ಯೆಗಿರುವ ದೈಹಿಕ ಸ್ವಾತಂತ್ರ್ಯ-ಧೈರ್ಯ,ಗೃಹಿಣಿಯರಿಗಿರುವದಿಲ್ಲ. ಸಾಧ್ವಿಯರು ಅನೇಕರಿರುತ್ತಾರೆ.ಆದರೆ ಅವರು ಬಹಳ ದುರ್ಬಲರಿರುತ್ತಾರೆ. ಜಾರಿಣಿಯರು ಗಂಡಸರಿಗೆ ಹೆದರುವದಿಲ್ಲ. ಅವರು ತಮ್ಮಂತೆ ಪತಿತರಾದ ಹೆಂಗಳೆಯರನ್ನು ನೋಡಿ ಕನಿಕರ ಪಟ್ಟು ಸಹಾಯ ಮಾಡುತ್ತಾರೆ. ಆದರೆ ಪತಿವ್ರತಾಸ್ತ್ರೀಯರಿಗೆ ಪರಿಸ್ಥಿತಿಯ ಮೂಲಕ ಇವಕ್ಕೆ ಅವಕಾಶವಾಗದೆ ಅವರು ಕೆಳಗೆ ಬಿದ್ದ ಹೆಂಗಸರನ್ನು ಮೇಲೆ ಕರೆಯುವ ಬದಲು ತಿರಸ್ಕೃತ ದೃಷ್ಟಿಯಿಂದ ನೋಡುತ್ತಾರೆ. ಇದು ಬುದ್ಧಿಪೂರ್ವಕ ಕೆಲಸವಲ್ಲವಾದರೂ ಸಮಾಜದಲ್ಲಿಯ ನಿಯಮಬದ್ಧತೆಯ ಮೂಲಕವಾಗಿ. ಮತ್ತು ಅವರು ಗಂಡಸಿಗೆ ಪೂರ್ಣ ಆಧೀನರಾಗಿ ಅವರ ಪ್ರತಿಯೊಂದು ಅನ್ಯಾಯದ ಪರಿಣಾಮವನ್ನು ಸಹಿಸುತ್ತಾರೆ. ಇದು ಸಜ್ಜನರ ದೃಷ್ಟಿಗೆ ಸರಿಕಂಡರೂ ನಿಜವಾದ ಸಜ್ಜನಿಕೆಯಾದಂತಾಗುವದಿಲ್ಲ. ಇದು ಎಲ್ಲರಿಗೆ ಗೊತ್ತಿದ್ದಮಾತು. ಮತ್ತು ಕಿ.ಘ. ಮಶ್ರೂವಾಲಾರಂಥ ಆಧ್ಯಾತ್ಮಿಕರು ಸಾರಿದ ಸಂದೇಶ.

ಸ್ತ್ರೀಯರು ಇಂಥ ಪರಿಸ್ಥಿತಿಯಿಂದ ಹೊರಗುಳಿಯಬೇಕಾದರೆ ಏನು ಮಾಡಬೇಕು ? ಪುರುಷರಂತೆ ಎಲ್ಲ ಹಕ್ಕುಗಳು ಹೆಂಗಸರಿಗೆ ಬಂದರೂ ಅವರು ತಮ್ಮ ಮಾನರಕ್ಷಣೆಗಾಗಿ ಗಂಡಸರನ್ನು ಅವಲಂಬಿಸಬೇಕಾಗುತ್ತದೆ. ಅಲ್ಲದೆ ಅವರ ಪಾಪ ದೃಷ್ಟಿಗೆ ಬಲಿಯಾಗಬೇಕಾಗುತ್ತದೆ. ಅದರಲ್ಲೂ ಅವರ ಕ್ಷೇತ್ರ ಪುರುಷಕ್ಷೇತ್ರ ಬೇರೆ ಬೇರೆ ಇರುವದರಿಂದ ಎಲ್ಲ ಹಕ್ಕುಗಳು ಇವರಿಗೆ ಬಂದರೂ ಕೆಲವೊಂದು ಕ್ಷೇತ್ರ

ದಲ್ಲಿ ಕೆಲಸಮಾಡಲು ಇವರು ಹಿಂದೆಗೆಯಬೇಕಾಗುತ್ತದೆ. ಮತ್ತೂ ಅವರು ತಮ್ಮ ಪ್ರತಿಯೊಂದು ಕಾರ್ಯಕ್ಕೆ ಪುರುಷನ ಸಲಹೆ ಕೇಳಬೇಕಾಗುತ್ತದೆ.

ಮ. ಗಾಂಧೀಜಿಯವರು 'ಹೆಂಗಸರಿಗೆ ತಮ್ಮ ನಿಜವಾದ, ನೈಸರ್ಗಿಕವಾದ ಕಾರ್ಯರಂಗದಲ್ಲಿ ಕೆಲಸಮಾಡುವದನ್ನು ಬಿಟ್ಟು ಯುದ್ಧರಂಗದಲ್ಲಿ ಗುಂಡುಹೊಡೆ' ಎಂದು ಹೇಳುವದು ತಪ್ಪು ಎಂದು ಹೇಳಿದ್ದಾರೆ. ಏಕೆಂದರೆ ಹೆಣ್ಣುಮಕ್ಕಳ ಸಹಜ ಕಾರ್ಯರಂಗದಲ್ಲಿ ಅವರು ಯೋಗ್ಯತೆಯಿಂದ ಕೆಲಸಮಾಡಿದರೆ ದೇಶದ ಏಳ್ಗೆ-ತಮ್ಮ ಏಳ್ಗೆ ಎರಡೂ ಸಾಧಿಸುತ್ತವೆ ಆದರೆ ಇಲ್ಲಿ ಮಾತ್ರ ಅವರಿಗೆ ಬಂಧನತೆಗೆದು ಅವರ ಕಾರ್ಯರಂಗದಲ್ಲಿ ಸಹಜವಾಗಿ ವ್ಯೈಚಳಿಬಿಟ್ಟು ಕೆಲಸಮಾಡಲು ಆಸ್ಪದ ಬೇಕು. ಅಂದರೆ ಸಾಧ್ಯ. ಪುರುಷ ಮತ್ತು ಸ್ತ್ರೀ ಇವರ ಪರಸ್ಪರ ಸಹಕಾರದಿಂದ ಜಗತ್ತು ಯೋಗ್ಯದಾರಿಯಲ್ಲಿ ಸಾಗಬಹುದು. ಆದರೆ ಎಲ್ಲ ಕಾರ್ಯಕ್ಷೇತ್ರದಲ್ಲಿ ಪುರುಷನಿಗೂ-ಸ್ತ್ರೀಗೂ ಸಮವಾಗಿ ಭಾಗತೆಗೆದುಕೊಳ್ಳಲು ಅಸಾಧ್ಯ. ಅವರವರ ಕೆಲಸ ಅವರವರಿಗೆ ಯೋಗ್ಯ; ಅಂದರೆ ಶ್ರಮವಿಭಾಗವೂ ಆಗುವದು. ಮತ್ತು ಸಹಕಾರ ಬುದ್ಧಿಯೂ ಹೆಚ್ಚುತ್ತ ಹೋಗುವದು. ಬಂದ ಪ್ರಸಂಗ ಎದುರಿಸುವ ಕಾಲದಲ್ಲಿ ಮಾತ್ರ ಇಬ್ಬರಿಗೂ ಎಲ್ಲ ಕ್ಷೇತ್ರದಲ್ಲಿ ದುಡಿಯುವ ರೂಢಿ ಇರಬೇಕು.

ಇಲ್ಲದಿದ್ದರೆ, ಮೇಲಿನ ವಿಚಾರ ಸರಿಕಾಣದೆ ಇದ್ದರೆ ಅನಾದಿ ಕಾಲದಲ್ಲಿದ್ದ ಕಾಡು ಜನರಂತೆ ಸ್ತ್ರೀ--ಪುರುಷರು ವರ್ತನೆ ಇಡಬೇಕು. ಸೃಷ್ಟಿನಿಯಮಕ್ಕನುಸರಿಸಿ ಸ್ತ್ರೀ-ಪುರುಷರು ಪಶುಗಳ ರೀತಿಯಲ್ಲಿ ಸ್ಥಿತಪ್ರಜ್ಞರಾಗಿದ್ದು ಬಿಟ್ಟರೆ ಯಾವ ತೊಂದರೆಯೂ ಇಲ್ಲ. ಹಸಿವಾದಾಗ್ಗೆ ತಿನ್ನುವದು ಇಚ್ಛೆಬಂದಾಗ್ಗೆ ಇಚ್ಛೆಯಂತೆ ವರ್ತನವಿಟ್ಟು ಬುದ್ಧಿಗೆ ತೋರಿದಂತೆ ಪಶುಗಳ ರೀತಿಯಲ್ಲಿ ನಡೆಯುತ್ತಬಂದರೆ, ಈಗ ನಡೆಯುವ ಯುದ್ಧ-ಶಾಂತಿಗಳ ಸಮಸ್ಯೆಯಾದರೂ ಬಿಟ್ಟೀತು. ಆದರೆ ಇಷ್ಟು ದಿವಸಗಳ ಸಂಸ್ಕಾರ ನಿಮಿತ್ತ ಇದು ಕೆಲವರಿಗೆ ಸರಿಹೋಗುವದಿಲ್ಲ. ಆದಕಾರಣ ಎಷ್ಟೇ ತ್ರಾಸದಾಯಕವಾದರೂ ಈಗಿದ್ದ, ಸ್ತ್ರೀಯರಿಗೆ ಬಂಧನಕಾರಕ ನಿಯಮಗಳನ್ನು ಬದಿಗೊತ್ತಿ ಸ್ತ್ರೀ-ಪುರುಷರು ಸಹಕಾರ ಬುದ್ಧಿಯಿಂದ ನಡೆದರೆ, ಆಗುವ ಅನಾಹುತಗಳಾದರೂ ತಪ್ಪಬಹುದು ಎಂದು ತೋರುತ್ತದೆ. ಅಲ್ಲದೆ ಸ್ತ್ರೀಯರನ್ನು ಹಿಂದೆ ಇಟ್ಟು, ಅವರ ಪತನಕ್ಕೆ ಕಾರಣರಾಗಿ ಗಂಡಸರು ಮುಂದೆ ನಡೆದರೆ ಈಗ ದೇಶದಲ್ಲಿ ನಡೆದಿರುವ ಪರಿಸ್ಥಿತಿಗಿಂತ ಭಯಂಕರ ಪರಿಸ್ಥಿತಿಯನ್ನು ಜನರು ಎದುರಿಸುವ ಪ್ರಸಂಗ ಬರಬಹುದು. ಸ್ತ್ರೀಯರ ಅಧೋಗತಿ ದೇಶದ ಪತನಕ್ಕೆ ಕಾರಣವಾಗುವದು.



# ಮುನ್ನೂರು ರೂಪಾಯಿ ಬೆಂಡೋಲೆ

## ( ಒಂದು ನಾಟ್ಯ ಛಟೆ )

ಲೇಖಕಿ:— ಶ್ರೀಮತಿ ಚಂಪಾ ಮಹೀಷಿ ಬಿ.ಎ.ಬಿ.ಟಿ. ಧಾರವಾಡ.

[ ಮುನ್ನೂರು ರೂಪಾಯಿ ಬೆಂಡೋಲೆ ಇಟ್ಟುಕೊಂಡಿದ್ದೇನೆಂಬ ಶ್ರೀದೇವಿಯ ಸಂತೋಷ ಅಕ್ಕಸಾಲಿಗ ಪಾಂಡಪ್ಪನ ಆಗಮನದಿಂದ ಜರ್‍ರನೆ ಇಳಿದು ಹೋಯಿತು. ]

ಶ್ರೀದೇವಿ:— ಬಾ ಶಾರದಾ, ಎಷ್ಟು ಸಾರೆಕರೆದರೂ ಬಂದಿದ್ದಿಲ್ಲ. ಆಪರೂಪಕ್ಕ ಇವತ್ತ ಬಂದಿ—ಚೊಲೊ ಆತು. ಬೆಂಡೋಲೆ ಹೊಸವೇನು ಅಂದ್ಯಾs ಹು. ನೀನೂ ತಗೊಂಡ ಸುದ್ದಿಕೇಳಿ ಬೆಂಡೋಲೆ ನೊಡಲಿಕ್ಕೇ ಬಂದಿ ಕಾಣ್ತರ. ಅದೊಂದು ದೊಡ್ಡ ಕಥೀನ ಆತು. ನಿನ್ನಮುಂದ ಹೇಳಿದರ ಏನು ತಪ್ಪಾತು ಬಿಡುs–ಎಷ್ಟೋ ಸಣ್ಣ ಕಿಮ್ಮತ್ತಿನ ಬೆಂಡವಾಲಿ ತಂದು ತೋರಿಸಿದರು. ನಾನು ಸ್ಪಷ್ಟಹೇಳಿ ಬಿಟ್ಟೆ, ಮುನ್ನೂರು ರೂಪಾಯಿಕ್ಕಿಂತ ಕಡಿಮೆ ಕಿಮ್ಮತ್ತಿನ ಬೆಂಡೋಲೆ ಇಡೋಹಾಗಿಲ್ಲ ಅಂತ. ನಮ್ಮ ಅತ್ತೇನುs ಸುಮ್ಮನಿರುವಾಕೆ ? ತನ್ನ ಪುರಾಣಾ ಮೊದಲಿನಿಂದ ಕಡೀತನಕ ಹೇಳಿದಳು. ಆಕೀ ಜೋರೇನು ಕೇಳೋದು ? ಈಗಿನ ಮಂದೀದು ಹೆಚ್ಚಿಂದು ಸಡಗರ. ಇಷ್ಟು ಕಿಮ್ಮತ್ತಿಂದು ನಾವೇನೂ ಎಂದೂ ಇಡಲಿಲ್ಲ. ತವರ ಮನಿಯವರು ಮಾಡಿಸಿ ಕೊಡಲಿಲ್ಲ; ಗಂಡ ಕೊಂಡುಕೊಡಲಿಲ್ಲ ; ಇನ್ನು ಮಕ್ಕಳು ಕೆಲಸ ಮಾಡಲಿಕ್ಕೆ ಹತ್ತಿದ ಮ್ಯಾಲೆ,ಮುದುಕಿ ಆದ ಮ್ಯಾಲೆ ಯಾತಕ್ಕ ಬೆಂಡವಾಲಿ ಅಂತ ನಾನೂ ಕೊಳ್ಳಲಿಲ್ಲ.–ಅಂತ ಒಂದುದಿವಸ ಅಂದುಬಿಟ್ಟಳು. ನಾನೂ ಸುಮ್ಮನ ಕೂಡಲಿಲ್ಲ. ಬೆಂಡವಾಲಿ ಇಡದಿದ್ದರ ಏನಾತು, ನೀವು ದೊಡ್ಡ ದೊಡ್ಡ ಗೋಟು ಪಾಟ್ಲ ತೋಡೆ ಹಾಕ್ಕೊಂಡರಿ, ಅವೇನೂ ತುಸಾ ಕಿಮ್ಮತ್ತಿನೊಳಗ ಆದವ ? ನಮಗ ಈಗಿನ ಮಂದಿಗೆ ಅಂಥಾವೇನೂ ಹಾಕ್ಕೊಳ್ಳೋದು ಸೇರುದಿಲ್ಲ. ಎರಡು ಚೆಲೋ ಬೆಂಡವಾಲಿ, ಕೊರಳೊಳಗೊಂದು ಚಪಲಾಹಾರ, ಕೈಯೊಳಗೆ ಎರಡೆರಡು ಬಿಲ್ವರ, ಆದರ ಸಾಕರಿ ; ಹೆಚ್ಚೇನೂ ಬ್ಯಾಡ. ಆದಕ ಅವೆಲ್ಲ ಭಾರೀಕಿಮ್ಮತಿನವ ಆಗಬೇಕು ಅಂತಹೇಳಿದೆ. ಅತ್ತೆವರು ಅಂದದ್ದು ಕೇಳಿ ಇವರೂ ಅಂದ್ರು ಬಹಾಳ ರೊಕ್ಕಕೊಟ್ಟರ ಖರೇ ಏನು ? ಸ್ವಲ್ಪ ಕಿಮ್ಮತ್ತಿನೊಳಗ ಕಲ್ಚರ ಮುತ್ತಿನವು ಚೊಲೊ ಬೆಂಡವಾಲಿ ಬರತಾವ. ನಮ್ಮ ತಂಗಿ ಚೆಲೊ ಮುತ್ತಿನವು ಅಂತ ತಗೊಂಡಳು. ನಾಲ್ಕು ವರ್ಷದೊಳಗ ಸವದು ಸಿಂಪು ಆದವು. ಅಂತ ಆದರ ನಾ ಏನೂ ಕೇಳಲಿಲ್ಲ ನೋಡು. ಇಟ್ಟರ ಚೊಲೋವು ಇಡೋದು ಇಲ್ಲದಿದ್ದರ ಯಾವದೂ ಬೇಡ ಅಂತಹೇಳಿಬಿಟ್ಟೆ ಕಡೀಕ ಮೊನ್ನೆ ಇವನ್ನ ತಂದರು ; ಕಿಮ್ಮತ್ತೆಷ್ಟು ಅಂತ ಕೇಳಿದೆ; ಹೇಳಲಿಲ್ಲ. ನಾನೂ ಇಷ್ಟು ದಿವಸ ಹಟಾಹಿಡದಿದ್ದಕ್ಕ ಚೋಲೋವು ತಂದಿರಬೇಕು ಅಂತ ಸುಮ್ಮನಾದೆ.

ರೊಕ್ಕಾ ಬಹಳಖರ್ಚು ಮಾಡಿಸಿದ್ದಕ್ಕ ಸಿಟ್ಟು ಬಂದಿದ್ದೀತು ಮತ್ತೇನದ. (ಬಾಗಿಲ ನೋಡಿ) ಯಾರವರು, ಅಕ್ಕಸಾಲಿಗ ಪಾಂಡಪ್ಪ ಏನು ? ಮುತ್ತಿನ ಹಾರಾ ತಂದಿಯಾ ? ಚಲೋ ಕಲ್ಚರ ಮುತ್ತಿನದ ?–ಬೇಡಪ್ಪಾ ಕಲ್ಚರ ಮುತ್ತಿನದ ಆದರ ನೋಡೋದು ಸುದ್ಧಾ ಬೇಡಾ. ಅಂತಹ ನೂಲು ಬೇಡಾಂತ ಇಷ್ಟುದಿವಸ ಬಿಟ್ಟು ಕಡೆಗೆ ಚೊಲೊ ಮುತ್ತಿನವು ಬೆಂಡೋಲಿ ತಗೊಂಡೆ. ಏನು ? ಇವನ್ನ ನಿನ್ನ ಕಡೇನ ತಂದಾರ ? ಕಿಮ್ಮತ್ತು ೬೦ ರೂಪಾಯಿ ? ಚೊಲೋ ಕಲ್ಚರ ಮುತ್ತಿನವು ಅಂತ ಕೊಟ್ಟೇಯಾ ? ಶಾರದಾ ನೋಡಿದ್ಯಾ ಈ ಗಂಡಸರ ಜಾಣತನ ? ಇನ್ನ ನಮ್ಮವರು ಹೊರಗಿನಿಂದ ಮನೀಗ ಬಂದಕೂಡಲೆ ಕಾಡೋದು ವಸ್ತಕ್ಕ. ಸನ್ಮಾನ ಚೊಲೊ ಆತು ನಂದೂ. (ಪಾಂಡಪ್ಪನಿಗೆ) ಆ ಹಾರ ತಗೊಂಡು ನಮ್ಮ ಮನೀಗೆ ಬರಲಿಕ್ಕೆ ನಿನಗ್ಯಾಕ ದೇವರು ಬುದ್ಧಿ ಕೊಟ್ಟನಪ್ಪsss– ನಾ ಎಷ್ಟು ಸಂತೋಷದಿಂದ ಇದ್ದೆ. ಮುನ್ನೂರುರೂಪಾಯಿ ಬೆಂಡವಾಲಿ ಇಟ್ಟುಕೊಂಡೇನೆ ಅಂತ ?



# ದೇಹಾರೋಗ್ಯವೂ ಧಾರ್ಮಿಕ ನಿಯಮಗಳು

## ಅಥವಾ ( ಧಾರ್ಮಿಕ ನಿಯಮಗಳ ಮೂಢಕಲ್ಪನೆ )

ಲೇಖಕಿ:- ವೆಂಕಮ್ಮ ಕೊಯಮುತ್ತೂರ

**ದೇಹಾರೋಗ್ಯಕ್ಕೂ,ಧಾರ್ಮಿಕ ನಿಯಮಗಳಿಗೂ ನಿಕಟವಾದ ಸಂಬಂಧವಿದೆ; ಆದರೆ ಇದರ ಒಳತಿರುಳನ್ನು ಅರಿಯದೆ, ಇಂದಿನ ಸಮಾಜದಲ್ಲಿ, ಧಾರ್ಮಿಕ ನಿಯಮಗಳ ಪಾಲನೆಯ ತಳದಲ್ಲಿ ಅಜ್ಞಾನ ಅಂಧಶ್ರದ್ಧೆಗಳು ಬೇರೂರಿವೆ.**

ಎಲ್ಲ ಧಾರ್ಮಿಕ ನಿಯಮಗಳೂ ಮಾನವನ ದೇಹಾರೋಗ್ಯ ಹಾಗೂ ಸ್ವಚ್ಛತೆಗಳನ್ನೇ ಅವಲಂಬಿಸಿರುತ್ತವೆ. ಮತ್ತು ವ್ಯವಹಾರ ಚಾತುರ್ಯ ಸಹಾ ಕೆಲವು ಧಾರ್ಮಿಕ ನಿಯಮಗಳಲ್ಲಡಗಿರುತ್ತದೆ. ಆರೋಗ್ಯ ಹಾಗೂ ಸ್ವಚ್ಛತೆಗಳ ನಿಯಮವೆಂದು ಹೇಳಿದರೆ ಸಾಮಾನ್ಯ ಜನರ ಮೇಲೆ ಅದರ ಪರಿಣಾಮವಾಗುವದಿಲ್ಲೆಂದು ಕೆಲವು ವಿಚಾರವಂತ ಪೂರ್ವಜರು ದೇವರ ಹೆಸರಿನ ಕೆಳಗೆ ಧಾರ್ಮಿಕವೆಂದು ಕೆಲವು ನಿಯಮಗಳನ್ನು ಹಾಕಿಕೊಟ್ಟಿರುವರು. ಆದರೀಗ ಬರಬರುತ್ತ ಜನರು ಸುಧಾರಣೆಯ ಹಾದಿಯತ್ತ ಸಾಗಿದಂತೆ, " ಈ ಧಾರ್ಮಿಕ ನಿಯಮಗಳು ಅಜ್ಞಾನಪೂರಿತ " ಎಂಬ ಸಿದ್ಧಾಂತಕ್ಕೆ ಬಂದು ಅವುಗಳನ್ನು ದೂರಸರಿಸುತ್ತ ನಡೆದಿದ್ದಾರೆ. ಹಾಗೂ ಸ್ವಚ್ಛತೆ, ಆರೋಗ್ಯ ಇವುಗಳ ಕಡೆಗೆ ಸಹ ಲಕ್ಷಹಾಕುತ್ತಿಲ್ಲ. ಈಗ ನಾವು ಹಿಂದಿನವರಿಗಿಂತ ಏನೋ ದೊಡ್ಡ ಸುಜ್ಞಾನಿಗಳೆಂದು ಭಾವಿಸಿ, ಮತ್ತಷ್ಟು ಅಜ್ಞಾನದ ಮಡುವಿನಲ್ಲಿ ಬಿದ್ದು ಬಳಲುತ್ತಿದ್ದೇವೆ. ಹೀಗಾಗಲು ಕಾರಣವೆಂದರೆ ಆ ಧಾರ್ಮಿಕ ನಿಯಮಗಳ ಅತಿರೇಕತೆಯಿಂದ ನಾವು ಬೇಸತ್ತಿರುವದೇ ಹೊರತು ಮತ್ತೇನಿಲ್ಲ.

ಇನ್ನು ಧಾರ್ಮಿಕನಿಯಮ ಹಾಗೂ ಆರೋಗ್ಯ ಇವೆರಡಕ್ಕೂ ಸಂಬಂಧವೇನು?

ನಾವು ಹೊರಗಿನಿಂದ ಮನೆಗೆ ಬಂದೊಡನೆ ಕೈಕಾಲು ತೊಳೆದು ಒಳಗೆ ಬರಬೇಕು. ಇಲ್ಲವಾದರೆ ಮನೆಯಲ್ಲಿ ಭೂತವು ಸೇರುವದೆಂದು ಹೇಳುತ್ತಾರೆ. ಈಗಿನ ಕಾಲದ ನಮಗೆ ಈ ಮಾತಿನಿಂದ ನಗುಬರುತ್ತದೆ. ಆದರೆ ಸೂಕ್ಷ್ಮವಾಗಿ ವಿಚಾರಮಾಡಿದರೆ, ಹಿರಿಯರು ಸಣ್ಣ ಸಣ್ಣ ಆರೋಗ್ಯ ನಿಯಮಗಳನ್ನು ಸಹಾ ಹೇಗೆ ಪಾಲಿಸುತ್ತಿದ್ದರೆಂಬದು ಇದರಿಂದ ಸ್ಪಷ್ಟವಾಗುತ್ತದೆ. ನಾವು ಹೊರಗೆ ಅಡ್ಡಾಡುವಾಗ ಹಾದಿಯಲ್ಲಿನ ಹಲವು ಹೊಲಸು ಧೂಳೀಕಣಗಳು ನಮ್ಮ ಪಾದಗಳಲ್ಲಿ ಆಶ್ರಯ ಹೊಂದಿರುತ್ತವೆ. ಅದೇ ಹೊಲಸಿನಿಂದ ನಾವು ಮನೆಯೊಳಗೆ ಬರುವದರಿಂದ ಅಲ್ಲಿ ಕ್ರಿಮಿಕೀಟಗಳು ಉತ್ಪನ್ನವಾಗುತ್ತದೆಯೆಂಬದು ಸಾಮಾನ್ಯವಾಗಿ ನಾಲ್ಕಾರು ತರಗತಿಯವರೆಗೆ ಓದಿದವರಿಗೆ ಸಹಾ ಗೊತ್ತಿದ್ದ ಮಾತು. ಈ ಮಾತನ್ನು ಹೇಳಿದರೆ

ಸಾಮಾನ್ಯ ಜನರು ಅಷ್ಟು ಗಮನಿಸಲಾರರೆಂದು, ಹಿರಿಯರು ಭೂತವೆಂಬ ದೊಡ್ಡ ಪದಉಪಯೋಗಿಸಿ, ಜನರನ್ನು ಹೆದರಿಸಿದ್ದಾರೆ. ಈಗಿನ ಜನರೆನ್ನಬಹುದು, "ನಾವು ಬೂಟು, ಚಪ್ಪಲುಗಳನ್ನು ಹಾಕಿಕೊಂಡೇ ಹೊರಗೆ ತಿರುಗಾಡುತ್ತೇವೆಂದು." ಆದರೆ ಶೀತಪ್ರದೇಶಗಳ ಫರಂಗಿಯ ಜನರಂತೆ ಉಷ್ಣಪ್ರದೇಶದ ನಾವು ಸಹಾ ಬೂಟು ಹಾಕುವದಾದರೂ ಎಷ್ಟು ಸಮಂಜಸವಾಗಬಹುದು? ಇರಲಿ ಅದು ಬೇರೆ ಮಾತು. ಚಪ್ಪಲು ಹಾಕಿದರಂತೂ ಕಾಲಿನಲ್ಲಿ ಧೂಳೀಕಣಗಳು ಸೇರಲು ಯಾವ ತೊಂದರೆಯೂ ಇಲ್ಲ. ಮೇಲಾಗಿಕಾಲಿಗೆ ಹೊಲಸು ಹತ್ತದಿದ್ದರೂಸಹ ಬೂಟಿಗೆಚಪ್ಪಲುಗಳಿಗೆ ಹೊಲಸು ಹತ್ತಿಯೇ ಹತ್ತುತ್ತದೆ. ಅದೇ ಬೂಟನ್ನು ಚಪ್ಪಲುಗಳನ್ನು ಹಾಕಿಕೊಂಡೇ ಮನೆಯಲೆಲ್ಲಾ ಓಡಾಡುವ ಮಹನೀಯರೂ ಹುಟ್ಟಿದ್ದಾರೆ ನಮ್ಮಲ್ಲಿ. ಅದಂತಿರಲಿ, ಮತ್ತೊಂದೆಂದರೆ ಹೊರಗೆ ಓಡಾಡಿ ಆಯಾಸದಿಂದ ಮನೆಗೆ ಬಂದೊಡನೆ ಕೈಕಾಲು ತೊಳೆಯುವದರಿಂದ ಕಣ್ಣಿಗೆ ತಂಪಾಗುತ್ತದೆ ಹಾಗೂ ಆಯಾಸವು ಪರಿಹಾರ ವಾಗುತ್ತದೆ. ಆಯುರ್ವೇದ ಶಾಸ್ತ್ರವು ಇದಕ್ಕೆ ಬಲವಾದ ಪುಷ್ಟಿಯನ್ನು ಕೊಡುತ್ತದೆ.

ಮನೆಯಲ್ಲಿ ಅಡಿಗೆಮಾಡುವ ಕೆಲಸವು ಹೆಣ್ಣುಮಕ್ಕಳದು. ಅವರ ಪಾಲಿಗೆ ಮಕ್ಕಳ ಸಂರಕ್ಷಣೆಯಂತೂ ಇದ್ದದ್ದೆ. ಸಣ್ಣ ಮಕ್ಕಳ ತಾಯಂದಿರೆಂದ ಮೇಲೆ ಸ್ವಲ್ಪವಿಲ್ಲಸ್ವಲ್ಪ ಅಸ್ವಚ್ಛತೆಯು ಅವರಲ್ಲಿ ಹೇಗಾದರೂ ಬಂದೇಬರುತ್ತದೆ. ಆದ್ದರಿಂದ ಹಿರಿಯರು ಸಣ್ಣ ಸಣ್ಣ ಮಕ್ಕಳ ತಾಯಂದಿರು ಮಡಿಯಲ್ಲಿ ಅಡಿಗೆಮಾಡಲು ಯೋಗ್ಯರಲ್ಲವೆಂದೂ,ಮಡಿಯಲ್ಲಿದ್ದು ಅಡಿಗೆಮಾಡುವವರು ಮತ್ತ್ಯಾರನ್ನೂ ಮುಟ್ಟಿಸಿಕೊಳ ಬಾರದೆಂದೂ ಹಲಕೆಲವು ನಿಯಮಗಳನ್ನು ಹೇಳಿದ್ದಾರೆ. ಮುಸುರೆ ಪಾತ್ರೆಗಳನ್ನು ತಿಕ್ಕಿದ ಮೇಲೆ ಆ ಪಾತ್ರೆಯಲ್ಲಿ ಎಲ್ಲೂ ಮುಸಿ ಉಳಿಯಬಾರದು, ಉಳಿದರೆ ಮೈಲಿಗೆ. ಇದರಲ್ಲಿ ಮೇಲಿನಿಂದ ನೋಡಿದರೆ ಏನೂ ತಥ್ಯಾಂಕ ಕಾಣುವದಿಲ್ಲ. ಆದರೆ ಸೂಕ್ಷ್ಮದಿಂದಷ್ಟು ವಿಚಾರಮಾಡಿರಿ. ಇಂದು 'ಮುಸಿ' ಎಂದು ಅಲಕ್ಷಿಸಿದರೆ ನಾಳೆ ಅದರಲ್ಲಿ ಮುಸುರೆಪದಾರ್ಥಗಳೂ ಸಹ ಉಳಿಯುವ ಸಂಭವವಿದೆ. ಮುಂದೆ ಮೂರನೆಯ ದಿನಕ್ಕೆ ಆ ಪದಾರ್ಥವು ಹಳಸಿಯಾಗಲೀ, ಕರಟಿಕಟ್ಟಿಯಾಗಲೀ ಅಲ್ಲಿ ಕ್ರಿಮಿಗಳಾಗಲು ಅನುವು ಮಾಡಿಕೊಡುವದೆಂಬ ಭಯ. ಮೇಲಾಗಿ 'ಮುಸಿ' ಇದ್ದರೇನು ಎಂದು ದಿನಪೂ ಸ್ವಲ್ಪ ಮುಸಿ ಉಳಿಸುತ್ತ ಹೋದಲ್ಲಿ ಮುಂದೆ ಇದೇ ಸಣ್ಣ ಮಾತಿನಿಂದ ಸಹಾ ಆಲಸ್ಯವು ಬೆಳೆಯಲು ಮಾರ್ಗವಾಗುವದು. ಆದ್ದರಿಂದ ಇಲ್ಲಿ ಅದಕ್ಕೆ ಮಡಿಮೈಲಿಗಳ ವಿಚಾರ ಕೊಟ್ಟಿದ್ದಾರೆ.

ಈಗ ಸಾಮಾನ್ಯವಾಗಿ ಜನರು ತಿಳಿದಿರುವದೆಂದರೆ, ಮಡಿ ಎಂದೊಡನೆ ಮೈಮೇಲೆ ನಾಲ್ಕು ತಂಬಿಗೆ ನೀರುಸುರಿದುಕೊಂಡು ಧೂಳಿನಿಂದ ಮುಸುಕಿದ, ಗೂಟಕ್ಕಿಟ್ಟ ಧಾಬಳಿ ಅಥವಾ ರೇಶ್ಮೆಯ ವಸ್ತ್ರ ಅಥವಾ ಸೀರೆಯನ್ನು ಉಡುವದೆಂದು. ಆದರೆ ಇದರಿಂದ ಅಸ್ವಚ್ಛತೆಯು ಹೆಚ್ಚಾಗಿ ರೋಗಬರಲು ಮತ್ತಷ್ಟು ಸ್ಥಳಮಾಡಿ ಕೊಟ್ಟಂತಾಗುವದೇ ವಿನಃ ಮಡಿಯಾಗಲಾರದು. ಸಧ್ಯಃ ಈಗ ಮಡಿಯೆಂದೊಡನೆ

ನಮ್ಮ ಕಣ್ಣಿಗೆ ಕಾಣುವದೆಂದರೆ ಎಣ್ಣೆಬೆಣ್ಣೆಗಳಿಂದ ಅಭಿಷೇಕವಾದ, ಎಷ್ಟೋ ತಿಂಗಳುಗಳಿಂದ ನೀರುಕಾಣದ, ಹಾಗೂ ನೀರಿನಲ್ಲಿ ಹಾಕಿದರೂ ತೋಯಲಾರೆನೆಂಬ ಗಟ್ಟಿ ಹಠತೊಟ್ಟ ಕವುಟುಧಾಬಳಿ.

ದೇವರ ಪೂಜೆಮಾಡುವ ಪದ್ಧತಿಗೆ ನಮ್ಮಲ್ಲಿ ಬಹಳ ಮಹತ್ವವಿದೆ. ದೇವರ ಪೂಜೆಗೆ ಮೊದಲು ಬೇಕಾದದ್ದು ತುಳಸಿ ಹಾಗೂ ಹೂಗಳು. ಆದ್ದರಿಂದ ನಮ್ಮ ಹಿಂದೂ ಧರ್ಮದಲ್ಲಿ ಮನೆಯ ಮುಂದೆ ತುಳಸೀವೃಂದಾವನ ಹಾಗೂ ಹೂಗಿಡಗಳನ್ನು ಹಚ್ಚಿರಬೇಕೆಂಬ ನಿಯಮವಿದೆ. ತುಳಸಿಯ ಮಹತ್ವವು ಸಾಮಾನ್ಯವಾಗಿ ಸುಶಿಕ್ಷಿತರೆನಿಸಿದವರೆಲ್ಲರಿಗೂ ಗೊತ್ತೇ ಇದೆ. ಅದರಿಂದ ಎಂತೆಂತಹ ರೋಗರುಜೆಗಳಿಗೆ ಔಷಧವಾಗುವದೆಂಬದನ್ನು ಪ್ರತ್ಯೇಕ ಹೇಳುವ ಕಾರಣವಿಲ್ಲ. ನಮ್ಮ ಹಿಂದೂ ಪದ್ಧತಿಯ ಬಹುಶೇಕ ಔಷಧೋಪಚಾರಗಳಿಗೆಲ್ಲ ತುಳಸೀರಸವು ಬೇಕೇಬೇಕು. ಈ ತುಳಸೀ ತಪ್ಪಲದಲ್ಲಿನ ರಸವು ಚರ್ಮರೋಗವನ್ನು ಸಹಾ ಹೋಗಲಾಡಿಸುವದು.ಮನೆಮನೆಗಳಲ್ಲಿನ ಅಶಿಕ್ಷಿತ ಮುದುಕಿಯರೂ ಸಹ ಇದರ ಹಿರಿಮೆಯನ್ನು ಹೇಳುತ್ತಾರೆ.ಈ ಗಿಡದ ಗಾಳಿಯಿಂದ ನಮಗೆ ತಿಳಿಯದೆಯೇ ಹವೆಯ ಸ್ವಚ್ಛವಾಗುತ್ತಿರುತ್ತದೆ. ಈ ತುಳಸಿಯಲ್ಲಿದ್ದ ಗುಣವೇ ಕಾಮಕಸ್ತೂರಿಯಲ್ಲಿ ಹಾಗೂ ಬಿಲ್ವಪತ್ರಿಯಲ್ಲಿ ಸಹಾ ಇರುತ್ತದೆ. ಈ ಕಾರಣಗಳಿಂದಲೇ ಲಿಂಗಾಯತರ ಹಾಗೂ ಮುಸಲ್ಮಾನ ಮತದವರಲ್ಲಿ ಮನೆಯ ಮುಂದೆ ಬಿಲ್ವಪತ್ರಿ, ಕಾಮಕಸ್ತೂರಿ ಗಿಡವನ್ನು ಹಚ್ಚುವ ನಿಯಮವಿದೆ. ಅದರಂತೆ ಒಳ್ಳೊಳ್ಳೆಯ ಸುವಾಸಿತ ಹೂಗಿಡ ಬಳ್ಳಿಗಳ ಹೂವಿನ ಸುವಾಸನೆಯಿಂದ ಮನಸ್ಸಿಗೆ ಒಂದು ಬಗೆಯ ಸಮಾಧಾನ ಶಾಂತತೆಯು ಸಿಗುತ್ತದೆ. ಮಾನವನ ದೇಹಾರೋಗ್ಯಕ್ಕೆ, ಮನಸ್ಸಿನ ಸಮಾಧಾನ ಶಾಂತತೆಯೇ ಮೂಲಕಾರಣ. ಮೇಲಾಗಿ ಈ ಸುವಾಸನೆಯಿಂದ ಹವೆಯಲ್ಲಿನ ಕೆಲವು ವಿಷಕಾರಿಕ್ರಿಮಿಗಳು ಸಹ ನಾಶಹೊಂದುತ್ತವೆ. ಮತ್ತೊಂದೆಂದರೆ ಗಿಡಗಳಿಗೆ ನೀರು ಹಾಕುವದರಿಂದಾಗಲೀ ಅದಕ್ಕೆ ಕಳೆತೆಗೆದು ಹಸನುಮಾಡುವದರಿಂದಾಗಲೀ ನಾವು ಕೃತ್ರಿಮರೀತಿಯಿಂದ ವ್ಯಾಯಾಮಮಾಡುವ ಪ್ರಸಂಗಬರುವದಿಲ್ಲ. ಇದೇ ನಮಗೆ ಸಾಕಷ್ಟು ವ್ಯಾಯಾಮವಾಗುವದು.

ಕೆಲವು ಹಿಂದೂಧರ್ಮದವರಲ್ಲಿ ಸಾಲಿಗ್ರಾಮ ಪೂಜಿಸುವ ಪದ್ಧತಿ ಇದೆ. ಇದಕ್ಕೆ ಈಗಿನ ನಾವು ಹಾಸ್ಯಮಾಡುತ್ತೇವೆ. ಕಾರಣವೆಂದರೆ ನಮಗದರ ಮಹತ್ವ ತಿಳಿದಿಲ್ಲ. ಸಾಲಿಗ್ರಾಮದಲ್ಲಿ ಕ್ಷಯರೋಗದಂತಹ ಜೀರ್ಣರೋಗವನ್ನು ಸಹಾ ಹೋಗಲಾಡಿಸುವ ಶಕ್ತಿಯಿದೆ. ಅದನ್ನು ತೊಳೆದ ನೀರೇ ಕ್ಷಯರೋಗದ ನಿವಾರಣಾಮದ್ದು. ಈ ಜ್ಞಾನವು ನಮಗಿಲ್ಲದಾಗ ಯಾರೋ ಒಬ್ಬ ಪರಕೀಯರು ಅದರ ಶೋಧಮಾಡಿದ್ದಾರೆ. ನಮ್ಮ ಈ ಅಜ್ಞಾನದಿಂದಲೇ ನಮ್ಮಲ್ಲಿಯ ಎಷ್ಟೋ ಬೆಲೆಯುಳ್ಳ ಭಾರತೀಯ ಸಂಸ್ಕೃತಿಗಳು ಹಾಳಾಗುತ್ತಿವೆ. ಮತ್ತೊಂದೆಂದರೆ ಸುದರ್ಶನವನ್ನು ಜನಿವಾರದಲ್ಲಿ ಹಾಕಿಕೊಳ್ಳುವ ಪದ್ಧತಿಯು ಸಹಾ ಇದೆ. ಇದರಿಂದ ಕ್ಷಯರೋಗವು ಬರುವದೇ ಇಲ್ಲವೆಂಬ ಸಿದ್ಧಾಂತವನ್ನು ನಮ್ಮ ಪೂರ್ವಜರು ಹೇಳಿದ್ದಾರೆ.

ದೇವರ ಮನೆಯಲ್ಲಿ ಧೂಪಹಾಕಿರಬೇಕು. ದೇವತಾರಾಧನೆಯ ವೇಳೆಯಲ್ಲಿ ಕರ್ಪೂರದಾರತಿಮಾಡಬೇಕು. ಇದು ಎಷ್ಟು ಉಚ್ಚವಿಚಾರವಿದೆ ನೋಡಿ. ಕರ್ಪೂರ ಹಾಗೂ ಧೂಪಗಳ ಗುಣವು ಕ್ರಿಮಿನಾಶಕವಿರುತ್ತದೆ. ದೇವರ ಹೆಸರಿನಲ್ಲಾದರೂ ಕ್ರಿಮಿಯ ನಾಶವಾಗಲೆಂಬ ವಿಚಾರ ಹಿರಿಯರದು.ದೇವರ ಪೂಜೆಯ ಪದ್ಧತಿ ಹಾಕಿದ್ದಾದರೂ ನಮ್ಮ ಚಂಚಲಮನಸ್ಸು ಸ್ವಲ್ಪ ವೇಳೆಯವರೆಗಾದರೂ ಒಂದು ಸ್ಥಿಮಿತದಲ್ಲಿ ಇರಲೆಂದು.ಸುಮ್ಮನೆ ಒಂದು ಕಡೆಯಲ್ಲಿ ಕುಳಿತು ಮನ್ಸನ್ನು ಸ್ಥಿಮಿತದಲ್ಲಿ ತರಲು ಪ್ರಯತ್ನಿಸುವದು ಅಪರಿಪಕ್ವದೆಶೆಯಲ್ಲಿದ್ದವರಿಗೆ ಕಷ್ಟವೆಂದು ತಿಳಿದು ಮೂರ್ತಿ, ವಿಗ್ರಹಗಳನ್ನು ಮಾಡುವ ಪದ್ಧತಿತಂದಿದ್ದಾರೆ.ಹಾಗೂ ದೇವತಾರಾಧನೆಯ ಸಮಯದಲ್ಲಿ ಮಂಗಳಾರತಿಯೊಡನೆ ಗಂಟೆಬಾರಿಸುವ ರೂಢಿ ಇದೆ.ಇದಾದರೂ ದೇವರೆದುರು ನಿಂತ ಭಕ್ತರ ಮನಸ್ಸು ಅತ್ತಿತ್ತಹರಿದೋಡಿದ್ದಲ್ಲಿ, ಪುನಃ ಅದನ್ನು ಒಂದು ಕಡೆಗೆ ತರಲುಕೊಡುವ ಸೂಚಕ ಶಬ್ದ. ಆದರೆ ಬರಬರುತ್ತ ಈ ನಿಯಮಗಳ ಮರ್ಮವನ್ನರಿಯಲಾರದ ಪಂಡಿತರು, ದೇವರೆಂದರೆ ಒಂದು ಕಲ್ಲಿನಮೂರ್ತಿ, ಅದರಲ್ಲಿ ಯಾವದೋ ಒಂದು ಶಕ್ತಿಯಡಗಿದೆ. ಅದನ್ನು ಬೆಳಕು ಸಹಾ ಕಾಣದ, ಅನಾರೋಗ್ಯಕರ ಹವೆಗೆ ಸ್ಥಾನವಾದ ಕತ್ತಲೆಯ ಗರ್ಭಗುಡಿಯಲ್ಲಿಟ್ಟು ದಿನವೂ ಎಣ್ಣೆಮಜ್ಜನ ಮಾಡಿಸಬೇಕು. ಇದಕ್ಕೆ ತಪ್ಪಿನಡೆದಲ್ಲಿ ಪಾಪತಟ್ಟುವದು. ನಾವು ಅಸ್ಪೃಶ್ಯರೆಂದು ತಿಳಿದವರ ಕಣ್ಣಿಗೆ ಸಹ ಈ ದೇವರ ಮೂರ್ತಿಯು ಬೀಳಬಾರದು. ಬಿದ್ದಲ್ಲಿ ಮೈಲಿಗೆ ಮುಂತಾದ ಮೂಢಕಲ್ಪನೆಗಳನ್ನು ಹಾಕಿಕೊಂಡು, ಸ್ವಚ್ಛತೆ, ಮನಸ್ಸಮಾಧಾನ ಆರೋಗ್ಯ ಇವುಗಳಿಗಾಗಿ ಹಾಕಿದ ನಿಯಮಗಳನ್ನು ಯಾವದೋ ಅಜ್ಞಾನ ಮಡುವಿನಲ್ಲಿ ಮುಳುಗಿಸಿ, ಆ ನಿಯಮಗಳಿಂದಲೇ ನಮಗೆ ಅಶಾಂತಿ ಸಿಗುವಂತೆ ಮಾಡಿದ್ದಾರೆ. ದೇವರಗುಡಿಯ ಹಿಮ್ಮಗ್ಗಲಲ್ಲಿರುವ ತೀರ್ಥದಗುಂಡಿಯೊಂದೇ ಸಾಕು ಇದರ ನಿದರ್ಶನಕ್ಕೆ. ಇದರಂತೆ ಈಗ ಹೆಜ್ಜೆ ಹೆಜ್ಜೆಗೆ ಹಿಂದಿನ ನಿಯಮಗಳ ವಿರುದ್ಧಾಚರಣೆಗಳು ಕಂಡುಬಂದು,'ಹಿಂದಿನದೆಲ್ಲಾ ಹೊಲಸು' ಎಂಬ ವಿಚಾರಕ್ಕೆ ಬಂದು ಮುಟ್ಟಿದೆ.

ಬೆಳಗಿನಲ್ಲಿ ಬೇಗನೆದ್ದು ತಣ್ಣೀರು ಸ್ನಾನಮಾಡುವದರಿಂದ ಮೈಯಲ್ಲಿ ಉಷ್ಣತೆಯು ಹುಟ್ಟುವದು. ಅಷ್ಟೇ ಅಲ್ಲ ಅದರಿಂದ ಮೈಯಲ್ಲಿನ ಚರ್ಮರೋಗಗಳೂ ಸಹ ವಾಸಿಯಾಗುವವು. ಇದರ ಬಗ್ಗೆ 'ನೀತಿಬೋಧೆ' ಎಂಬ ಸಣ್ಣ ಮಕ್ಕಳ ಪುಸ್ತಕದಲ್ಲಿ 'ಕಜ್ಜಬುರುಕ' ನೊಬ್ಬನ ಪಾಠ ಸಣ್ಣಮಕ್ಕಳು ಸಹಾ ಓದಿರಲು ಸಾಕು. ಸ್ನಾನವಾದೊಡನೆ ಸೂರ್ಯನಮಸ್ಕಾರ ಹಾಕುವ ಪದ್ಧತಿ. ಇದರಿಂದ ಮೈಗೆ ವ್ಯಾಯಾಮವಲ್ಲವೇ? ಶ್ರೀ. ಪೂಜ್ಯ ಸಾನೆಗುರೂಜಿಯವರು ತಮ್ಮ 'ಭಾರತೀಯ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಸ್ನಾನದ ಬಗ್ಗೆ ಕೆಳಗಿನಂತೆ ಒಂದು ಮಾತು ಹೇಳಿದ್ದಾರೆ.

ಮೊದಲಿನ ಜನರು ಸಮುದ್ರ ನದಿ ಮುಂತಾದ ದೊಡ್ಡ ದೊಡ್ಡ ವಿಶಾಲ

ಪ್ರವಾಹೀ ನೀರಿನಲ್ಲಿ ಸ್ನಾನಮಾಡುತ್ತಿದ್ದರು. ಆದ್ದರಿಂದ ಅವರ ಬುದ್ಧಿ ಮನಸ್ಸು ಗಳಾದರೂ ವಿಶಾಲವೂ, ಸರಳವೂ, ಸೂಕ್ಷ್ಮವೂ ಆಗಿದ್ದು ಯಾವಾಗಲೂ ಮುಂದೆ ಮುಂದೊರೆಯುತ್ತಲೂ ಇದ್ದವು. ಆದರೆ ಮುಂದೆ ಈ ಸ್ನಾನದ ಮಟ್ಟವು ಭಾವಿಯ ನೀರಿಗೆ ಬಂದಿತು. ಜನರ ಬುದ್ಧಿಯ ವಿಶಾಲತೆಯಲ್ಲಿ ಕಡಿಮೆಯಾಯ್ತು ಹಾಗೂ ಆದು ಮುಂದೆ ಮುಂದೆ ಚಲಿಸದೆ ಒಂದೇ ಕಡೆ ನಿಂತ ನೆಲೆಯಾಯ್ತು. ಆದರೆ ಈಗೀಗ ನಲ್ಲಿ (ನಳ) ಗಾಗಲೀ, ಬಿಸಿನೀರಿನ ಹಂಡೆಗಾಗಲೀ ಬಂದು ಹತ್ತಿದ್ದರಿಂದ ಜನರ ಮನ, ಬುದ್ಧಿಗಳೆರಡೂ ಬಹಳೇ ಆಕುಂಚಿತವಾಗಿದೆ.” ನಿಜವಾಗಿ ಇದರ ತಾತ್ಪರ್ಯವೆಂದರೆ ನದಿ, ಹೊಳೆಗಳಲ್ಲಿ ಸ್ನಾನಮಾಡುವದರಿಂದ ಏನು ಸಮಾಧಾನ ಸಿಗುವದೋ ಆ ಸಮಾಧಾನವು ನಾಲ್ಕುತಂಬಿಗೆ ಬಿಸಿನೀರಿನಿಂದಾಗಲೀ, ಸಣ್ಣಗೆ ಬರುವ ನಲ್ಲಿಯ (ನಳದ) ನೀರಿನಲ್ಲಾಗಲೀ, ತುಂಬಿಟ್ಟ ಕೊಡ ಸುರಿದುಕೊಳ್ಳುವದ ರಿಂದಾಗಲೀ ಸಿಗಲಾರದೆಂದು. ಮುಂದೆ ಸ್ನಾನವಾದೊಡನೆ ಗಂಡಸರಿಗೆ ಸಂಧ್ಯಾ ವಂದನೆಯ ಪದ್ಧತಿ ಇಡಲಾಗಿದೆ. ಆ ಸಮಯದಲ್ಲಿ ಕೆಲವು ಧರ್ಮದವರು ಮೈಗೆ ಗೋಪೀಚಂದನವನ್ನು ಮತ್ತೆ ಕೆಲವು ಧರ್ಮದವರು ವಿಭೂತಿಯನ್ನು ಹಚ್ಚುವ ಪರಿ ಪಾಠವಿದೆ. ಈ ವಸ್ತುಗಳಲ್ಲಿ ಮೈಯಲ್ಲಿ ಉಷ್ಣತೆ ಹುಟ್ಟಿಸುವ ಗುಣವಿದೆ. ಹಾಗೂ ವಿಷಕ್ರಿಮಿಗಳ ನಾಶಕ ಗುಣವು ಇದರಲ್ಲಿದೆ. ಹೆಣ್ಮಕ್ಕಳಾದರೂ ಮೈತೊಳೆಯುವಾಗ ಮೈಗೆ ಅರಿಸಿಣಹಚ್ಚಬೇಕೆಂಬ ನಿಯಮವಿದೆ. ಇದರಲ್ಲಾದರೂ ಚರ್ಮರೋಗ ವಾಸಿ ಮಾಡುವ ಹಾಗೂ ಆ ರೋಗಬಾರದಂತೆ ಮಾಡುವ ಗುಣವಿದೆ. ಮಳೆಗಾಲದಲ್ಲಿ ನಿಮ್ಮ ಕಾಲಿನಲ್ಲಾದ ಕೆಸರು ಹುಣ್ಣಿಗೆ ಎಣ್ಣೆ ಅರಶಿಣ ಹಚ್ಚುವದರಿಂದ ಬೆಳಗಾಗುವ ದರಲ್ಲಿ ಯಾವ ಪರಿಣಾಮವಾಗುವದೆಂಬದು ಸರ್ವಸಾಮಾನ್ಯವಾಗಿ ಎಲ್ಲರಿಗೂ ಗೊತ್ತೇ ಇರಬಹುದು. ಇಲ್ಲದಿದ್ದರೆ ಒಮ್ಮೆ ಮಾಡಿನೋಡಿರಿ. ಆದರೆ ಈಗೀಗ ಹೆಂಗೆಳೆ ಯರು ಪೌಡರ್, ಸ್ನೋ, ಸೋಪು ಮುಂತಾದವುಗಳಲ್ಲಿ ಅಮೌಲ್ಯಗುಣ ಕಂಡಿದ್ದಾರೆ. ಇರಬಹುದು. ಅದಕ್ಕೆ ಹೆಸರಿಡಲು ನಾನು ತಯಾರಿಲ್ಲ. ಎಷ್ಟೋ ದೊಡ್ಡ ದೊಡ್ಡ ಡಾಕ್ಟರರಿಂದ ಶಿಫಾರಸ್ ಪಡೆದ ಈ ವಸ್ತುಗಳಲ್ಲಿ ಏನಾದರೂ ಸತ್ಯಾಂಶವಿದ್ದೇ ಇರ ಬೇಕಷ್ಟೇ ? ಆದರೀವಸ್ತುಗಳು ಶ್ರೀಮಂತರಿಗೆ ಕಟ್ಟಿಟ್ಟದ್ದು. ಬಡವರಿಗಿದರ ಕಲ್ಪನೆ ಇಲ್ಲದೇ ಅವರಾದರೂ ಪರಕೀಯ ಫ್ಯಾಶನ್ನುಗಳಿಗೆ ಮಾರುಹೋಗಿ, ತಮ್ಮ ಹೊಟ್ಟೆಗೆ ವಂಚಿಸಿ, ಬಾಹ್ಯಾಡಂಬರಕ್ಕಾಗಿ ದುಡ್ಡು ಹಾಳುಮಾಡುತ್ತಿದ್ದಾರೆ. ಒಳಗಿನ ಮನಕ್ಕೆ ಗೆದ್ದಲು ಹತ್ತುತ್ತಿದ್ದರೂ ಆದರ ಪರಿವಿಲ್ಲದ ಪರಿಸ್ಥಿತಿಗೆ ಬಂದಿದೆ ನಮ್ಮ ಇಂದಿನ ಭಾರತ.

ನಮ್ಮ ಹಿಂದೂಧರ್ಮದಲ್ಲಿ ವ್ರತನಿಯಮ, ಹಬ್ಬಹುಣ್ಣಿಮೆಗಳ ಹಾರಾಟವು ಹೆಚ್ಚಾಗಿದೆ. ಆದರೆ ಇವೆಲ್ಲವೂ ಒಂದೊಂದು ರೀತಿಯಿಂದ ಹೇಗೆ ಯೋಗ್ಯವಿದೆ ನೋಡಿರಿ. ಪ್ರತಿಯೊಂದು ಹಬ್ಬಗಳೂ ಒಂದೊಂದು ಋತು ನಿಯಮಗಳನ್ನನುಸ ರಿಸಿ ಅಂದರೆ ಆಯಾ ತಿಂಗಳ ಹವಾ, ಬೆಳೆ ಇವುಗಳ ಮೇಲೇ ಕಲ್ಪಿಸಲ್ಪಟ್ಟದ್ದಿವೆ.

ಅದರ ಬಗ್ಗೆ ಕೆಲವೇ ಉದಾಹರಣೆ ಕೊಡುವದೆಂದರೆ, ಚೈತ್ರ, ವೈಶಾಖ ತಿಂಗಳು ಗಳಲ್ಲಿ ನಮ್ಮಲ್ಲಿ ಬಿಸಿಲಿನ ತಾಪ ಭಯಂಕರ. ಆದ್ದರಿಂದಲೇ ಆ ಸಮಯದಲ್ಲಿ ಕೆಲವು ಹಬ್ಬಗಳನ್ನು ಕಲ್ಪಿಸಿ, ಆದಿನದಲ್ಲಿ ಆರಿದಬಾಯ್ಗಳಿಗೆ ಪಾನಕ, ನೀರು ಮಜ್ಜಿಗೆ ಗಳನ್ನು ಎರೆಯುವ ನಿಯಮವಿಟ್ಟದ್ದಾರೆ. ಮುಂದೆ ಶ್ರಾವಣ ಭಾದ್ರಪದ ಮಾಸಗಳಲ್ಲಿ ಹಬ್ಬಗಳ ಸಾಲುಗಳನ್ನೇ ಹರಡಿದ್ದಾರೆ. ಕಾರಣವೆಂದರೆ ಹೊಸದಾಗಿ ಫಸಲುಬಂದು ದವಸಧಾನ್ಯಗಳು ಹಳೆಯವಾಗಿ ಹುಳಹತ್ತುವಮೊದಲೇ ಹೊಟ್ಟೆಸೇರಲೆಂದು. ಮತ್ತು ಆ ತಿಂಗಳುಗಳಲ್ಲಿ ಹಸಿ ಅಕ್ಕಿಯು ತಂಬಿಟ್ಟುತಿನ್ನುವ ಪದ್ಧತಿಹಾಕಿದ್ದಾರೆ. ಆ ದಿನ ಗಳಲ್ಲಿ ಅಕ್ಕಿಯು ಮೈಗೆ ಸೇರುವದರಿಂದ ದೇಹಕ್ಕೆ ಹಿತಕರವಾಗುವದು. ಅದೇ ತಿಂಗ ಳುಗಳಲ್ಲಿ ಕೆಲವು ವ್ರತಗಳನ್ನಾದರೂ ಹಾಕಿದ್ದಾರೆ. ಕಾರಣವೆಂದರೆ ಮಿತಿಮೀರಿ ತಿಂದು ಅಜೀರ್ಣವಾಗಬಾರದೆಂದು. ದಿನವೂ ಉಪ್ಪು ಕಾರಗಳ ಅಡಿಗೆ ತಿಂದೇ ತಿನ್ನು ತ್ತೇವೆ. ಶ್ರೀಮಂತರ ಹೊರತಾಗಿ ಬಡವರಿಗೆ ಕಾರಣವಿಲ್ಲದೆ ಬೆಲ್ಲ, ತುಪ್ಪಗಳನ್ನು ತಂದು ಅಡಿಗೆಮಾಡುವ ಮನಸ್ಸಾಗುವದಿಲ್ಲ. ಸಿಹಿ ಪದಾರ್ಥ, ತುಪ್ಪ ಇವು ಹೊಟ್ಟೆಗೆ ಸೇರದಿದ್ದರೆ ಅದರಿಂದ ಸಹಾ ನಮ್ಮ ಆರೋಗ್ಯಕ್ಕೆ ಕುಂದು ಬರುವದೆಂಬ ಮಾತು ಎಲ್ಲ ಸುಶಿಕ್ಷಿತರಿಗೂ ಗೊತ್ತು. ಆದ್ದರಿಂದಲೇ ಹಬ್ಬ ಹರಿದಿನಗಳ ನೆವದಿಂದಾದರೂ ಸಿಹಿಉಣ್ಣಲೆಂಬ ವಿಚಾರದಿಂದ ಅಂದು ಸಿಹಿ ಅಡಿಗೆ ಮಾಡಿಯೇ ತೀರಬೇಕು. ಇಲ್ಲ ವಾದರೆ ದೇವರಿಗೆ ಅಪಮಾನ ಮಾಡಿದಂತಾಗುವದು ಎಂದು ಹೇಳಿದ್ದಾರೆ. ಈ ನಿಯಮಮಾಡುವಾಗ ದೇಶವು ಈ ಪರಿಸ್ಥಿತಿಯಲ್ಲಿರಲಿಲ್ಲ. ಆಗ ಬಡವರೆನ್ನುವವರೂ ಸಹ ಮರ್ಯಾದೆಯಿಂದ ತಮ್ಮ ಮನೆಯಲ್ಲಿ ಮಿತಸುಖದಿಂದ ಕಾಲಕಳೆಯುವಷ್ಟು ಸ್ಥಿತಿಇತ್ತು. ಈಗಿನಂತೆ ಬಲ್ಲಿದ, ಬಡವರ ನಡುವಿನ ಅಂತರ ವಿಶಾಲವಾದದ್ದಿರಲಿಲ್ಲ. ಆದರೆ ಜನರ ಮನಸ್ಸು ವಿಶಾಲವಿತ್ತು. (ಆಗ ಇಬ್ಬರ ನಡುವಿನ ಅಂತರ ಆಕುಂಚನ ವಿದ್ದದ್ದು ಈಗ ಮನಸ್ಸು ಆಕುಂಚನವಾಗಿದೆ.)

ಇನ್ನು ದೀಪಾವಳಿಯ ವಿಚಾರನೋಡಿರಿ. ಮನಸ್ಸಮಾಧಾನದಿಂದ ಸಹಾ ದೇಹದಮೇಲೆ ಸುಪರಿಣಾಮವಾಗುವದೆಂದು ಹಿಂದೆಯೇ ಹೇಳಿದೆ. ಇದಕ್ಕಾಗಿಯೇ ದೀವಳಿಗೆ ಹುಟ್ಟಿದೆ. ಈ ಹಬ್ಬದಲ್ಲಿ ಅಳಿಯನನ್ನು ಕರೆಸುವ ಮೂಲ ಉದ್ದೇಶ ವೆಂದರೆ ಸಿಟ್ಟಾದ ಅಳಿಯನ ಸಮಾಧಾನಕ್ಕೆ ಎನ್ನಬಹುದು. ಬಹಳವಾಗಿ ನಮ್ಮಲ್ಲಿ ಮದುವೆಯ ಸಮಯದಲ್ಲಿ ಅಳಿಯಂದಿರಿಗೆ ಸಿಟ್ಟು ಬರುವದು ರೂಢಿಯಾಗಿಬಿಟ್ಟಿದೆ. ಮುಂದೆ ಇದರಿಂದ ಅತ್ತೆಯ ಮನೆಯಲ್ಲಿ ತಮ್ಮ ಮಗಳಿಗೆ ಕಷ್ಟವಾಗಬಹುದೆಂದೂ, ಅದರಿಂದ ಅವಳ ಮನಸ್ಸಿಗೆ ಸಮಾಧಾನ ಸಿಗದೆ ಅವಳ ಆರೋಗ್ಯವು ಕೆಡಬಹು ದೆಂಬ ಹೆದರಿಕೆ ಹೆತ್ತವರಿಗೆ. ಇರಲಿ, ಮತ್ತೂ ಒಂದು ಉದ್ದೇಶವೆಂದರೆ ನಮ್ಮಲ್ಲಿ ಕೆಲವೊಂದು ಪ್ರದೇಶಗಳಲ್ಲಿ ಎರೆದುಕೊಳ್ಳುವಾಗ ಎಣ್ಣೆ ಹಚ್ಚುವರೂಢಿ ಇರುವದಿಲ್ಲ. ನಿಜವಾಗಿ ಎಣ್ಣೆಹಚ್ಚಿ ಎರೆದುಕೊಳ್ಳುವದರಿಂದ ಕಣ್ಣಿಗೆ ತಂಪಾಗುತ್ತದೆ. ತಲೆ ಶಾಂತವಿರುತ್ತದೆ. ಆದ್ದರಿಂದ ವರ್ಷಕ್ಕೆರಡು ಭಾರಿಯಾದರೂ ಎಣ್ಣೆಮಜ್ಜನ ಮಾಡ

ಲೆಂಬ ಉದ್ದೇಶದಿಂದಲೇ ದೀವಳಿಗೆ ಹಾಗೂ ಉಗಾದಿಗಳನ್ನು ಕಲ್ಪಿಸಿದ್ದಾರೆ. ಉಗಾದಿಯಲ್ಲಿ ಬೇವು ಬೆಲ್ಲ ತಿನ್ನುವ ರೂಢಿಇದೆ. ಕಾರಣವೆಂದರೆ ಬದಲಾದ ಹವೆಗೆ ಸರಿಹೋಗುವಂತೆ ನಮ್ಮ ದೇಹದಲ್ಲಿ ಕೆಲವು ಪದಾರ್ಥಗಳ ಸಂಗ್ರಹವಾಗಬೇಕಾಗುತ್ತದೆ. ಬೇವಿನಲ್ಲಿ ಆ ಗುಣವಿರುವದರಿಂದ, ಬರೇಬೇವುತಿನ್ನಲು ಕಷ್ಟಸಾಧ್ಯವಾದ್ದರಿಂದ ಅಂದು ಬೇವಿನೊಡನೆ ಬೆಲ್ಲವನ್ನು ಸೇರಿಸಿ ತಿನ್ನುವ ರೂಢಿಹಾಕಿದ್ದಾರೆ.

ಇನ್ನು ಉಪವಾಸ, ಫಲಾಹಾರಗಳ ವಿಚಾರ ಮಾಡೋಣ. ಹಿಂದೆ ಸಮೃದ್ಧಿಯಾಗಿ ಊಟಉಪಚಾರಗಳು ಸಿಗುತ್ತಿದ್ದ ಸಮಯದಲ್ಲಿ ಏಕಾದಶಿ, ಶಿವರಾತ್ರಿಗಳ ನಿಯಮವಿತ್ತು. ದಿನವೂ ಹೆಚ್ಚಿಗೆ ತಿಂದ ಆಹಾರದಿಂದ ಅಜೀರ್ಣವಾಗದಿರಲೆಂದೇ ಇದರ ಉದ್ದೇಶ. ಅದರಂತೆ ಕೆಲವು ಜಾತಿಸಂಗಡಗಳಿಗನುಸರಿಸಿ ಕೆಲವು ವಾರಗಳಲ್ಲಿ ಅವರವರ ದೇವರು, ಗುರು ಇವರ ಹೆಸರಿನಲ್ಲಿ ' ಒಪತ್ತು ' ಮಾಡುವರೂಢಿ ಇವೆ. ಇದಾದರೂ ಇದೇ ಉದ್ದೇಶ. ಮತ್ತು ಕೆಲವೊಮ್ಮೆ ಫಲಾಹಾರದ ನಿಯಮವಿಟ್ಟಿದ್ದಾರೆ. ಇದರಲ್ಲಿನ ತತ್ವವೆಂದರೆ ನಮ್ಮ ದೇಹದಲ್ಲಿ ಯಾವದೇ ಕಾರಣಾಂತರಗಳಿಂದ ಕೆಲವೊಂದು ಅನ್ನಾಂಗಗಳೂ (Vitamin) ಕಡಿಮೆಯಾಗಿದ್ದಲ್ಲಿ ಅವು ಹಣ್ಣುಹಂಪಲಿನಿಂದ ತುಂಬಿಬರಲೆಂಬ ಉದ್ದೇಶ. ದೇಹದ ಶಕ್ತಿಗಾಗಿ ದಿನವೂ ಹಣ್ಣು ತಿನ್ನಲು ಸಾಮಾನ್ಯರಿಗೆ ಸಾಧ್ಯವಿಲ್ಲದ್ದರಿಂದ ಈ ನಿಯಮಗಳ ಮುಸುಕಿನಲ್ಲಾದರೂ ಅದನ್ನು ತುಂಬಬಹುದಲ್ಲಾ !

ನಮ್ಮಲ್ಲಿನ ಮತ್ತೊಂದು ಅಮೌಲ್ಯ ರೂಢಿಯೆಂದರೆ, ಬಂಜೆಹೆಣ್ಮಕ್ಕಳು ನಿರ್ಮಲವಾದ ನದಿನೀರಿನಲ್ಲಿ ಸ್ನಾನಮಾಡಿ ಅಶ್ವತ್ಥಪ್ರದಕ್ಷಣೆ, ನಮಸ್ಕಾರ ಮಾಡಿದಲ್ಲಿ ಬಸಿರಾಗುವರೆಂಬ ಕಲ್ಪನೆ. ಇದರಲ್ಲಿ ಯಾವ ಮರ್ಮವಡಗಿದೆ ಎಂಬದನ್ನು ನೋಡಿದರೆ ಆಶ್ಚರ್ಯವೆನಿಸುವದು. ಕೆಲವು ಹೆಣ್ಮಕ್ಕಳ ಗರ್ಭಕೋಶ, ದೇಹಾರೋಗ್ಯ ಹಾಗೂ ಮನಸ್ಸಿನ ಆರೋಗ್ಯ ಇವುಗಳು ಯಾವದೇ ರೀತಿಯಿಂದ ವ್ಯತ್ಯಾಸವಾಗಿರುತ್ತದೆ. ಗರ್ಭಕೋಶದ ವ್ಯತ್ಯಾಸವನ್ನು ಸರಿಪಡಿಸುವ ಗುಣವು ಅಶ್ವತ್ಥಗಿಡದ ಗಾಳಿಯಲ್ಲಿ, ನೆರಳಿನಲ್ಲಿದೆ. ಸ್ನಾನಪ್ರದಕ್ಷಣೆ, ನಮಸ್ಕಾರಗಳಿಂದ ದೇಹಕ್ಕೆ ವ್ಯಾಯಾಮವಾಗಿ ನರ ಮತ್ತು ಮನಸ್ಸಿನ ಆರೋಗ್ಯವು. ಅಭಿವೃದ್ಧಿಹೊಂದುತ್ತದೆ. ಗರ್ಭಕೋಶ ಹಾಗೂ ಮನಸ್ಸಿಗೆ ನಿಕಟ ಸಂಬಂಧವಿದೆ. ಆದ್ದರಿಂದ ದೇಹ ಮನಸ್ಸು ಎರಡೂ ಆರೋಗ್ಯ ಹೊಂದುವದಲ್ಲಿದೆ, ಗರ್ಭಕೋಶದ ವ್ಯತ್ಯಾಸವೂ ಅಶ್ವತ್ಥದ ನೆರಳು, ಗಾಳಿಗಳಿಂದ ಸರಿಗೊಳ್ಳುವದರಿಂದ ಮುಂದೆ ಅವರು ಗರ್ಭಧಾರಣ ಮಾಡುವ ಸಂಭವವಿದೆ.

ಈಗ ಕಡೆಯದಾಗಿ ಹೇಳುವ ಮಾತೆಂದರೆ ನಮ್ಮ ಹಿಂದೂ ಪದ್ಧತಿಯಲ್ಲಿ ಬಾಣಂತಿಯರಿಗಾಗಲೀ, ತಿಂಗಳ ಸರ್ತಿ (Monthly course) ಕೂತವರಿಗಾಗಲೀ ಈ ಮಡಿ ಮೈಲಿಗೆಗಳ ಅತಿರೇಕದ ಕಲ್ಪನೆಯಿಂದ ಬಹಳೇ ಕಷ್ಟವಾಗುತ್ತಿದೆ. ಬಾಣಂತಿಯರಿಗಾದರೂ ಸಣ್ಣಮಗುವಿನ ಮೇಲಿನ ಮಮತೆಯಿಂದೆನ್ನಿ ಅಥವಾ ಕನಿಕರದಿಂದೆನ್ನಿ ಅವರ ನಿಯಮದಲ್ಲಿ ಸ್ವಲ್ಪ ಶಿಥಿಲಮಾಡಲಾಗಿದೆ. ಅವರನ್ನು

ಸ್ವಲ್ಪ ಮೇಲ್ತರಗತಿಯ ಮೈಲಿಗೆಯಲ್ಲೇ ಕಾಣುತ್ತಿದ್ದಾರೆ. ಆದರೂ ಸಹ ಕೆಲ ವೊಮ್ಮೆ ಅವರಿಗೆ ಇದರಿಂದ (ಮಡಿ ಮೈಲಿಗೆಯ ನಿಯಮದಿಂದ) ಬಹಳ ಕಷ್ಟಸೋಸ ಬೇಕಾಗಿದೆ. ವೇಳೆವೇಳೆಗೆ ಆಹಾರ ಸಿಗಬೇಕಾದರೆ ವಿಶ್ವಪ್ರಯತ್ನ. ಆದರೂ ಅವರ ಪಾಡು ಅಷ್ಟು ಶೋಚನೀಯವಾಗಿಲ್ಲ. ಆದರೆ 'ತಿಂಗಳ ಸರ್ತಿ' ಕೂತವರ ಗೋಳು ಮಾತ್ರ ಹೇಳತೀರದು. ಮನೆಯಲ್ಲಿನ ಮಡಿವಂತರು ಅವಳನ್ನು ನೋಡಬಾರದಂತೆ, ಅವಳ ಧ್ವನಿ ಕೇಳಬಾರದಂತೆ. ಇದರಿಂದ ಅವಳಿಗೆ ಮಾತಾಡುವ ಹಾಗೂ ಓಡಾ ಡುವ ಸ್ವಾತಂತ್ರ್ಯಗಳನ್ನೂ ಕಳೆದುಕೊಳ್ಳುವ ಪ್ರಸಂಗಬಂದು ಬೇಸರದಿಂದ ಮೂಲೆ ಯಲ್ಲಿ ಕೂಡುವ ಪ್ರಸಂಗಬಂದಿದೆ. ವೇಳೆವೇಳೆಗೆ ಊಟವಿಲ್ಲ. ಮೈಮೇಲೆ ನೀರು ಸುರಿದುಕೊಳ್ಳುವಂತಿಲ್ಲ. (ಸ್ನಾನ). ಬೆಚ್ಚಗೆ ಹಾಸಿಗೆ ಹೊದ್ದಿಕೆ ಹಾಕಿಮಲಗಲು ಆಸ್ಪದವಿಲ್ಲ. ಒಂದು ತಂಬಿಗೆ ನೀರಿಗೆ ಸಹಾ ಪರಾಧೀನ. ಎಲ್ಲರ ಊಟವೂ ಆದ ಮೇಲೆ ಸಿಗುವ ತಣ್ಣನ್ನಅನ್ನ, ಅವಳಿಗಾಗಿ ಪ್ರತ್ಯೇಕ ಅರೆದ ಖಾರದ ಚಟ್ನಿ ಇವೇ ಅವಳ ಮೂರುದಿನಗಳ ಆಹಾರ. ಮೊದಲು ಹಿರಿಯರು ಇವರ ಬಗ್ಗೆ ಹಾಕಿದ ಈ ಮಡಿ ಮೈಲಿಗೆಯ ನಿಯಮವು ಎಷ್ಟು ಉದಾತ್ತವಿತ್ತು, ಎಂಬದನ್ನು ಪ್ರತಿಯೊಬ್ಬ ಮಹಿಳೆಯರೂ ವಿಚಾರಮಾಡಬೇಕಾಗಿದೆ. ಈ ಎರಡೂ ಸಮಯಗಳಲ್ಲಿ ಹೆಣ್ಮ ಕ್ಕಳ ಪ್ರಕೃತಿಯು ಬಹಳ ಸೂಕ್ಷ್ಮವಾಗಿರುತ್ತದೆ. ಅವರಿಗೆ ಆಗ ಸಂಪೂರ್ಣವಿಶ್ರಾಂ ತಿಯ ಅವಶ್ಯಕತೆ ಇರುತ್ತದೆ. ಕೆಲಸವಿಲ್ಲದೆ ಸುಮ್ಮನೆ ಕೂಡೆಂದರೆ ಕೂಡಲು ಯಾರಿಂದಲೂ ಸ್ವತಃ ಮನಸ್ಸಾಗುವದಿಲ್ಲ. ಮೇಲಾಗಿ ಅತ್ತೆಯಮನೆಯ ಸೊಸೆಯ ರಿಗಂತೂ ಇದೆಂದೂ ಬೇಕೆಂದರೂ ಸಾಧ್ಯವೇಇಲ್ಲ. ಎಂಬ ವಿಚಾರದಿಂದ, ಅವರು ಮೈಲಿಗೆಯೆಂಬ ಕಲ್ಪನೆಬರುವಂತೆ ಹಿರಿಯರು ವಿಚಾರ ಕೊಟ್ಟಿದ್ದರು.

ಹೀಗೆ ಪ್ರತಿಯೊಂದರಲ್ಲೂ ಸಾರಾ ಸಾರಾ ವಿಚಾರ ಮಾಡುತ್ತ ನಡೆದಂತೆ ಈಗ ಧಾರ್ಮಿಕ ನಿಯಮಗಳ ಅತಿರೇಕದಿಂದಾಗಲೀ ಅಥವಾ ಅವಿಚಾರದಿಂದ ಅದನ್ನು ಅಲ್ಲಗಳೆದಾಗಲೀ ನಮ್ಮ ಭಾರತವು ಯಾವ ಕೂಪದಲ್ಲಿ ಸೇರುತ್ತಿದೆಯೆಂಬ ದನ್ನು ಪ್ರತಿಯೊಬ್ಬ ವ್ಯಕ್ತಿಯೂ ವಿಚಾರಮಾಡಿ, ಆಚರಿಸತಕ್ಕದ್ದಿದೆ.

ಇಲ್ಲಿಯವರೆಗೆ ಆರೋಗ್ಯಕ್ಕೆ ಸಂಬಂಧಪಟ್ಟ ಧಾರ್ಮಿಕ ನಿಯಮಗಳನ್ನು ತಿಳಿದಮಟ್ಟಿಗೆ ತಿಳಿಸಿದ್ದಾಯ್ತು. ಮುಂದೆ ಮತ್ತಾವಾಗಲಾದರೂ ವ್ಯವಹಾರಕ್ಕೂ ಧಾರ್ಮಿಕನಿಯಮಗಳಿಗೂ ಹೇಗೆ ಸಂಬಂಧವಿವೆಯೆಂಬದನ್ನಷ್ಟು ನೋಡೋಣ. ಆ ವರೆಗೂ ವಾಚಕರೆಲ್ಲರೂ ಆದರಬಗ್ಗೆ ವಿಚಾರಮಾಡಲೆಂದು ನನ್ನಬಯಕೆ.



# ಇನಿಯನಲ್ಲಿ ಭಿಕ್ಷೆ !

( ೧ )

ಇದೊಂದು ದಿನವಿದ್ದು ನಾಳೆ ಹೋಗುವಿರಂತೆ
ನಾಳೆ ಎಂಬುವದೇನು ದೂರವಿಲ್ಲ.
ಎಂದು ಬಂದರು ಎರಡು ದಿನವಿಲ್ಲ ನೀವಿಲ್ಲಿ
ಬಂದ ಮೂರನೆ ದಿನವೆ ನಡೆವಿರಲ್ಲ....!

( ೨ )

ಏಕೆ ಏಕಾಂತದೊಳಗೇನು ಸಂಭವಿಸಿದುದು
ಎನ್ನ ಮೇಲಿರುತಿಹುದೆ ನಿಮ್ಮ ಮುನಿಸು ?
ನಿಮ್ಮನುಳಿದರೆ ಚಣಕೆ ಒಡಲಿನಾಳಕೆ ಬೆಂಕಿ
ಅಗಲದಿರಿರೆನ್ನುತಿದೆ ಎನ್ನ ಮನಸು !

( ೩ )

ಎನ್ನ ಕಂಗಳ ಜ್ಯೋತಿ ಸನ್ಮೋದಗಳ ಮೂರ್ತಿ
ಅಯ್ಯೊ ! ನೀವಿಲ್ಲದಿರೆ ಎನ್ನದೇನು ?
ಸತ್ಯ-ಪ್ರೀತಿಯು-ಸದಭಿಮಾನ-ಸನ್ಮಂಗಳದಿ
ಮೂಡಿದಿಂದರ ನೀವೆ ಅಲ್ಲವೇನು ?

( ೪ )

ಹಬ್ಬಿಕೊಂಡಿಹುದಿಂದು ನಮ್ಮೆದೆಯ ಆಗಸದಿ
ಬೆಳ್ಳಿಬುರುಗಿನ ಜೊನ್ನ ನಿಬಿಡವಾಗಿ;
ಮಾತುಮಾತಿನ ಮುತ್ತು ಮುತ್ತನಿತ್ತು ತಲಿಹವು
ಮೋಹ-ಮೋದದಿ ಮುಗ್ಧತನವ ನೀಗಿ !

( ೫ )

ಮರೆತು ಹೋಗಿದೆ ಬಾಳ, ಸಾವು-ನೋವಿನಕಂತೆ
ಬೆರೆತುಹೋಗಿದೆ ಜೀವ ಜೀವದಲ್ಲಿ !
ಇರುವೆರಡು ದಿವಸಗಳು ರಸನಿಮಿಷವಾಗಿರಲಿ
ಎನ್ನಿನಿಯ ಮಿಲನದೀ ಸಾರದಲ್ಲಿ !

* * * * *

ಇದೊಂದು ದಿನವಿದ್ದು ನಾಳೆಹೋಗುವಿರಂತೆ
ನಾಳೆ ಎಂಬುವದೇನು ದೂರವಿಲ್ಲ....!

( ಶೀಘ್ರದಲ್ಲಿಯೇ ಪ್ರಕಟವಾಗಲಿರುವ " ಬಣ್ಣದ ಕಾರಂಜಿ " ಯಿಂದ )

—ಮಹದೇವ ಬಣಕಾರ ಹುಬ್ಬಳ್ಳಿ.

# ಸುದ್ದಿ-ಸಮಾಚಾರ

## ಗಂಡನ ಹಿಂದೆ ಹೆಂಡತಿ

ಅಂಕೋಲಾ:—೨೮. ಈಗ ಈ ಪ್ರದೇಶದಲ್ಲಿ ಜಾರಿಗೆಬಂದಿರುವ ಸಂಚಾರ ಕಾಯ್ದೆಯಂತೆ ಗಂಡ-ಹೆಂಡಿರು ಜೊತೆಯಲ್ಲಿ ತಿರುಗಾಡದೆ ಒಬ್ಬರಹಿಂದೆ ಒಬ್ಬರು ತಿರುಗಾಡಬೇಕೆಂದು ಅಂಕೋಲಾದಲ್ಲಿ ಕಾಯ್ದೆಮಾಡಲಾಗಿದೆ!

ತಲೆ ಕೆಳಗೆ ಮಾಡಿ ನಡೆದರೆ ಬಹಳ ಒಳಿತು!

## ಶ್ರೀಮತಿ ದುರ್ಗಾಬಾಯಿ

ಶ್ರೀಮತಿ ದುರ್ಗಾಬಾಯಿಯವರು ಯೋಜನಾ ಆಯೋಗದ ಸದಸ್ಯೆಯರೆಂದ್ಯ ನೇಮಕಹೊಂದಿದ್ದಾರೆ. ತಮ್ಮ ಹೊಸ ಅಧಿಕಾರೀ ಸೂತ್ರವನ್ನು ೨೩ಕ್ಕೆ ತೆಗೆದು ಕೊಂಡರು. ಆ ಸಮಿತಿಯು ಆರೋಗ್ಯ, ಶಿಕ್ಷಣ, ಸಮಾಜಸುಧಾರಣೆ ಹಾಗು ಮಹಿಳೆಯರ, ಮಕ್ಕಳ ಯೋಗಕ್ಷೇಮ ಸಂಬಂಧವಾಗಿ ಹೆಣಗುವದು.

## ಚಿಕ್ಕಬಾಲಿಕೆಗೂ ಮಂತ್ರಿಯಾಗುವ ಇಚ್ಛೆ!

ದಿಲ್ಲಿ:— ಪಂ. ನೆಹರೂರವರು ಇಲ್ಲಿ ಒಮ್ಮೆ ಬಾಲಿಕೆಯರಶಾಲೆಗೆ ಭೆಟ್ಟಿಯಿತ್ತಾಗ ಒಬ್ಬಬಾಲಿಕೆಯನ್ನು ಕರೆದು ಕೇಳಿದರಂತೆ:—"ನೀನು ಮುಂದೆ ಏನುಮಾಡಬೇಕೆಂದಿರುವೆ?" ೧೨ ವರುಷದ ಆ ಬಾಲೆಯು ಹೇಳಿದಳಂತೆ:— "ನಾನು ಕೇಂದ್ರ ಸಂಪುಟದಲ್ಲಿ ಗೌರವ ಸಚಿವಳಾಗಬೇಕೆಂಬುದೇ ನನ್ನ ಜೀವನದ ಉದ್ದೇಶ."

ಮಹತ್ವಾಕಾಂಕ್ಷೆಯ ಬೀಜಾಂಕುರವು ಹುಟ್ಟಿದೆ!

## ಮಹಿಳಾ ಪರಿಷತ್ತು

ಮಹಿಳಾ ವಕೀಲರುಗಳ ಅಂತರ್ ರಾಷ್ಟ್ರೀಯ ಫೆಡರೇಶನ್ನಿನ ಸಭೆಯು ಸೇರಿತ್ತು. ಅದರಲ್ಲಿ ಲಗ್ನವಾದ ಸ್ತ್ರೀಯರ ಆಸ್ತಿಯ ವಿಚಾರವನ್ನು ಮಾಡಲಾಯಿತು. ಜುಲೈ ೨-೧೯೫೨ ಸ್ವಾವಲಂಬನದ ತತ್ತ್ವ ಒಪ್ಪಿಗೆಯಾಯ್ತಲ್ಲವೆ?

## ದಾದಿಯರ ಉಪವಾಸ ವ್ರತ

ಜೋಧಪೂರ:—೧. ಗಾಂಧೀಜಿ ಆಸ್ಪತ್ರೆಯಲ್ಲಿಯ ೧೮೦ ದಾದಿಯರೂ ಮತ್ತು ಕಂಪೌಂಡರರೂ ಉಪವಾಸವ್ರತವ ಕೈಕೊಂಡಿದ್ದಾರೆ! ವೈದ್ಯ ಶಾಖೆಯವರು ಮಾಡಿದ ಹಲವು ನಿಯಮಗಳನ್ನು ಪ್ರತಿಭಟನೆಗಾಗಿ ಈ ಉಪವಾಸವ್ರತವನ್ನು ಕೈಕೊಂಡಿದ್ದಾರೆ. ಆಸ್ಪತ್ರೆಯಲ್ಲಿಯ ಕೆಲಸವು ವಿದ್ಯಾರ್ಥಿಗಳಿಂದಲೂ, ಹೊರಗಿನ ಶಿಬ್ಬಂದಿಗಳಿಂದಲೂ ನಡೆಯುತ್ತಾ ಇದೆ. "ಶುಭಾಸ್ತೆ ಪಂಥಾನಃ"

## ನಾಲ್ವರಿಗೆ ಒಬ್ಬಳೇ ವಧು!

ಜಬಲಪೂರ:— ಇಲ್ಲಿಂದ ನಾಲ್ಕು ಮೈಲುಗಳಮೇಲಿರುವ ಹುಟಾಗ್ರಾಮಕ್ಕೆ ಬೇರೆ ಬೇರೆ ಕಡೆಯಿಂದ ೪ ವರಗಳು ತಮಗೆ ಕೊಟ್ಟ ಮನೆಪತ್ತೆಕೇಳುತ್ತ ಬಂದರಂತೆ

ಇವರೆಲ್ಲರ ಹಾದಿಯನ್ನು ಒಬ್ಬಳೇ ವಧು ಕಾಯುತ್ತಿದ್ದಳು. ಈ ಸಂಗತಿ ತಿಳಿದ ಕೂಡಲೆ ಎಲ್ಲರೂ ಬೆಚ್ಚಿಬಿದ್ದರು. ಇದು ತಾಯಿ ಹಾಗೂ ಕಕ್ಕನ ಮೋಸವೆಂದು ಹಿಂದಿನಿಂದ ತಿಳಿಯಿತಂತೆ! ಆರ್ಯ ಸಂಸ್ಕೃತಿಯ ಒಳ್ಳೆಯ ಅರಿವಿದು!

**ವಿಜಾಪೂರದಲ್ಲಿ ವಿಚಿತ್ರ ಕೂಸಿನ ಜನನ.**

ವಿಜಾಪೂರ:— ಇಲ್ಲಿಯ ರೇಲ್ವೆ ಸ್ಟೇಶನ್ನಿನಬಳಿಯಲ್ಲಿ ಗುಡಿಸಿಲಿನೊಳಗೆ ಓರ್ವಳು ಒಂದು ವಿಚಿತ್ರ ಕೂಸನ್ನು ಹಡೆದಳಂತೆ! ಅದರ ಹೃದಯ ಎದೆಯ ಹೊರಗೆ ನೇತಾಡುತ್ತಿತ್ತಂತೆ! ಅದನ್ನು ಡಾಕ್ಟರರು ಪರೀಕ್ಷಿಸಿ ಬಹಳ ದಿವಸ ಬದುಕಲಾರ ದೆಂದು ಅಭಿಪ್ರಾಯಪಟ್ಟರಂತೆ! ದೇವರ ಲೀಲೆ ವಿಚಿತ್ರವಾದದ್ದು.

ದೇವರ ಹೆಸರಿನಲ್ಲಿ ಮನುಷ್ಯನ ಸುಧಾರಣೆಯ ಪರಿಣಾಮ.

**ಶ್ರೀಮತಿ ಪ್ರಮೀಲಾಬಾಯಿ ದೇಶಪಾಂಡೆ.**

ಹುನಗುಂದ:—೮. ಇಲ್ಲಿಯ ಸರಪಂಚರಸ್ಥಳಕ್ಕೆ ಶ್ರೀಮತಿ ಪ್ರಮೀಲಾ ಬಾಯಿ ದೇಶಪಾಂಡೆಯವರು ಆರಿಸಿಬಂದಿರುವರು.

ಈ ರೀತಿಯಾಗಿ ಸ್ತ್ರೀಯರು ಪ್ರಯತ್ನ ಮಾಡಿ ಕಷ್ಟ ಅಸಾಧ್ಯಗಳನ್ನು ನೀಗಿಸಿ ಸಮಾಜವನ್ನು ಉಚ್ಚಸ್ಥಿತಿಗೆ ತರಲು ಪ್ರಯತ್ನಿಸಬೇಕು.

**ಹೆಂಗಳೆಯರಾಚರಿಸಿದ-ವನಮಹೋತ್ಸವ.**

ಕೊಪ್ಪಳದ ಗರ್ಲ್ಸಹಾಯಸ್ಕೂಲಿನ ಹೆ। ಮಿಸ್ಟ್ರಸ್ ಶ್ರೀ.ಲಕ್ಷ್ಮೀದೇವಿ ಜಂಗಮ ಶೆಟ್ಟಿ, ಬಿ. ಎ. ಇವರ ನೇತೃತ್ವದಲ್ಲಿ ವನಮಹೋತ್ಸವವು ಜರುಗಿತು. ಈ ಸಭೆಗೆ ಶ್ರೀಮತಿ ಎನ್. ಎಚ್. ಜೋಶಿಯವರು ಅಧ್ಯಕ್ಷಪದವನ್ನು ವಹಿಸಿದ್ದರು. ಊರ ಪ್ರತಿಷ್ಠಿತ ಮಹಿಳೆಯರೆಲ್ಲರೂ ಆಗಮಿಸಿದ್ದರು. ಅನುಕರಣ ಪ್ರಿಯತೆ.

**ವಿವಾಹಿತ ತರುಣಿಯನ್ನು ಓಡಿಸಿಕೊಂಡು ಹೋದರು.**

ಸೊಲಾಪೂರ ಶುಕ್ರವಾರ ಪೇಟೆಯಲ್ಲಿರುವ ಇಸ್ಮಾಯಿಲ್ ಇಲಾಹಿಬಕ್ಷ ಖಲೀಫ ಎಂಬ ಮುಸಲ್ಮಾನನು ವಿವಾಹಿತ ಹಿಂದೂ ತರುಣಿಯನ್ನು ಓಡಿಸಿಕೊಂಡು ಹೋದನು. ಕೊನೆಗೆ ಬಹಳ ಪ್ರಯತ್ನಪಟ್ಟು ಪೋ. ಸಬ್ ಇನಸ್ಪೆಕ್ಟರರಾದ ಸಾಳ್ವೆ ಯವರು ಖಲೀಫನ ಮನೆಯನ್ನು ಮುತ್ತಿ ಆ ತರುಣಿಯನ್ನು ಹುಡುಕಿ ತೆಗೆದರು.

ಲಗ್ನವೆಂದರೆ (ಹೆಂಗಸರಿಗೆ) ಸಂರಕ್ಷಣೋಪಾಯವಲ್ಲ!

**ಬೆಳಗಾಂವ ಕ್ಯಾಂಪಿನ ಬಗ್ಗೆ ಆರೋಪ.**

ಕುಮಾರಿ ಆಶಾ ಎಂಬ ಬಾಲಿಕೆಯೋರ್ವಳನ್ನು ಬೆಳಗಾಂವ ಕ್ಯಾಂಪಿನಲ್ಲಿ, ನಾಲ್ವರು ಸೇರಿ, ಅನೈತಿಕ ಕಾರ್ಯಕ್ಕೆ ಪ್ರೇರೇಪಿಸಿದ ವರದಿ ಇದೆ; ವಿವರಗಳ ಬಗ್ಗೆ ಇನ್ನೂ ತಪಾಸಣೆ ನಡೆದಿದೆ.

# ಬಹುಪತ್ನೀಕತ್ವ

ಲೇಖಕಿ :– **ಸಮತಾವಾದಿ**

**ವಿಶಿಷ್ಟ ಪರಿಸ್ಥಿತಿಯಲ್ಲಿ ಪಾಲಿಸಲ್ಪಡುವ ಕೆಲವೊಂದು ಕಟ್ಟಳೆಗಳು, ಆ ಪರಿಸ್ಥಿತಿ ಮಾಯುವಾದೊಡನೆ, ಮಾಯುವಾಗುವ ಸಂಭವವೂ ಇದೆ !**

ಸಮಾನ ಹಕ್ಕು ಅಂದರೆ ಎರಡನೆಯವರು ಏನು ಮಾಡುತ್ತಾರೆ ಅದರಂತೆ ಮಾಡುವ ಹಕ್ಕಲ್ಲ. ಆದರೆ ತಮ್ಮ ಪ್ರವೃತ್ತಿಯಂತೆ ನಡೆಯುವ ಹಕ್ಕು. ಮುಂಬೈ ಕಾಯ್ದೆ ಕೌನ್ಸಿಲಿನಲ್ಲಿ ಬಹುಪತ್ನೀಕತ್ವದ ವಿರುದ್ಧ ಕಾಯ್ದೆ ಪಾಸಾಗಿದೆ. ಮತ್ತು ಪಾಶ್ಚಿಮಾತ್ಯ ದೇಶಗಳಲ್ಲಿ ಇದರ ಬಗ್ಗೆ ಏನು ಕಾಯ್ದೆ ಪ್ರಚಾರದಲ್ಲಿರುತ್ತದೆ, ಅದರ ಸಂಬಂಧವಾಗಿ ನಾಲ್ಕು ಮಾತುಗಳನ್ನು ಜನರೆದುರಿಗೆ ಇಟ್ಟರೆ, ವಿಚಾರವಿನಿಮಯ ವಾದೀತೆಂಬ ಆಶೆಯಿಂದ ಕೆಳಗಿನ ನಾಲ್ಕು ಸಾಲುಗಳನ್ನು ಬರೆಯುತ್ತಿದ್ದೇನೆ.

ಈ ಕಾಯ್ದೆಗೂ ಮತ್ತು ಸ್ತ್ರೀ ಸುಧಾರಣೆಗೂ ನಿಕಟ ಸಂಬಂಧವಿರುತ್ತದೆ. ಸ್ತ್ರೀಯರಲ್ಲಿ ವಿದ್ಯೆಯ ಪ್ರಸಾರ ಬೆಳೆಯುತ್ತ ನಡೆದಂತೆ, ಅವರಲ್ಲಿ ಸ್ವಾತಂತ್ರ್ಯದ ಕಲ್ಪನೆ ಹೆಚ್ಚುತ್ತ ಹೋಗಿ ಹಕ್ಕು ಬಾಧ್ಯತೆಯ, ಅಸ್ತಿತ್ವದ ಮತ್ತು ಸ್ವಾಭಿಮಾನದ ಅರಿವು ಆಗುತ್ತ ನಡೆದಿದೆ. ಅವರ ಮೇಲೆ ಹೇರಿದ ಕಾಯ್ದೆ, ರೂಢಿ, ಬಂಧನಗಳ ವಿಚಾರವಾಗುತ್ತ ಹೋಗಿ ಅವುಗಳ ವಿರುದ್ಧ ಪ್ರತಿಕ್ರಿಯೆಮಾಡುವ ಪ್ರವೃತ್ತಿಯು ಸ್ವಾಭಾವಿಕವಿದೆ. ಆದರೆ ಕೇವಲ ಪ್ರತಿಕ್ರಿಯೆ ಮಾಡುವದರಿಂದ ಅಂದರೆ ಮುಯ್ಯಕ್ಕೆ ಮುಯ್ಯ ತೀರಿಸುವದರಿಂದ ಬಹಳ ಹಿತವಾಗುತ್ತದೆಯೆಂದಲ್ಲ, ಇಂದಿನ ವರೆಗೆ ಪುರುಷರು ಸ್ತ್ರೀಯರ ಮೇಲೆ ಪಾತಿವ್ರತ್ಯದ ಕಾಯ್ದೆಯನ್ನು ಹೇರಿದ್ದಾರೆ, ಹೇರುತ್ತ ಲಿದ್ದಾರೆ. ಇದಕ್ಕೆ ಪ್ರತಿಕ್ರಿಯೆ ಎಂದು ಸ್ತ್ರೀಯರು ಈ ದ್ವಿಭಾರ್ಯಾ ಪ್ರತಿಬಂಧಕ ಕಾಯ್ದೆಯನ್ನು ಕೆಲವು ಪುರುಷರ ಸಹಾಯದಿಂದ ಪುರುಷರ ಮೇಲೆ ಹೇರುವ ಪ್ರಯತ್ನಮಾಡಿದ್ದಾರೆ. ಈ ಎರಡು ಕಾಯ್ದೆಗಳು ಅಂದರೆ ಏಕಪತ್ನೀತ್ವ ಹಾಗೂ ಏಕಪತಿತ್ವ ಇವುಗಳು ಎಷ್ಟರಮಟ್ಟಿಗೆ ಪಾಲಿಸಲ್ಪಡುತ್ತವೆ? ಮತ್ತು ಇವುಗಳನ್ನು ಪಾಲಿಸುವದರಿಂದ ಲಾಭಗಳು ಆಗಿರುತ್ತವೆಯೋ ಇಲ್ಲವೊ, ಪಾಲಿಸಿದಲ್ಲಿ ಫಾಯ್ದೆ ಗಳಾವವು ಮತ್ತು ಮುಂದೆ ಸ್ತ್ರೀಯರು ಯಾವ ಮಾರ್ಗವನ್ನು ಕೈಕೊಳ್ಳಬೇಕು ಇದರ ಸಂಬಂಧವಾಗಿ, ಕಾಯ್ದೆ ದೃಷ್ಟಿಯಿಂದಲ್ಲ. (ಯಾಕಂದರೆ, ಅದರ ಜ್ಞಾನವು ಸ್ತ್ರೀಸಮಾಜಕ್ಕೆಎಳ್ಳಷ್ಟಿಲ್ಲ)ಆದರೆ ಆರೋಗ್ಯಶಾಸ್ತ್ರ ದೃಷ್ಟಿಯಿಂದ ವಿಚಾರಮಾಡುವಾ.

ಈ ಮಾನವೀ ಜಗತ್ತಿನಲ್ಲಿ ಗಂಡಸರ ಅಧಿಕಾರವು ಬೆಳೆದಾಗಿನಿಂದ ಅಥವಾ ಮಾನವೀ ಸುಧಾರಣೆಯ ತಳಹದಿ ಹಾಕಲ್ಪಟ್ಟಾಗಿನಿಂದ ಎಲ್ಲ ದೇಶಗಳಲ್ಲಿ ವಿಶೇಷತಃ ನಮ್ಮ ಭರತಖಂಡದಲ್ಲಿ ಏಕಪತಿವ್ರತದ ಕಾಯ್ದೆಯು ಸ್ತ್ರೀಯರ ಮೇಲೆ ಹೇರ

ಲ್ಪಟ್ಟಿದೆ. ಅದು ಕೇವಲ ಕಾಯ್ದೆಯಾಗದೆ ಅದು ತನ್ನಿಂದ ತಾನೆ ಪಾಲಿಸಲ್ಪಡಲು ಅವಶ್ಯಕವಾದಂಥ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ನೈತಿಕ ಬಂಧನದ ವಾತಾವರಣವಾಗಿ ನಿರ್ಮಿಸಲ್ಪಟ್ಟಿದೆ. ಈ ಕಾಯ್ದೆಯು ಸ್ತ್ರೀಯರ ಲೈಂಗಿಕ ಅಸ್ತಿತ್ವನ್ನು ಸಹ ಮನ್ನಿಸಿಲ್ಲ. ಏಕಪತಿವ್ರತದ ಕಾಯ್ದೆಯನ್ನು ಮುರಿದಲ್ಲಿ ಅದು ವ್ಯಭಿಚಾರವೆಂಬ (Adultory) ಗುನ್ಹೆಯು ಆಗುವದು. ಇದನ್ನು ಮುರಿಯುವ ಸ್ತ್ರೀ, ಪುರುಷರಲ್ಲಿ, ಪುರುಷನಿಗೆ ಮಾತ್ರ ಭಯಂಕರ ಶಿಕ್ಷೆ. ಅಂದರೆ ಏಳು ವರ್ಷ, ತುರಂಗವಾಸ ಅಥವಾ ಸಶ್ರಮಶಿಕ್ಷೆ ಆಗುವದು. ಅಂದರೆ ಕಾಯ್ದೆಯಿಂದ ಸ್ತ್ರೀಯರ ಅಸ್ತಿತ್ವವನ್ನು ಅಲ್ಲಗಳೆದಂತಾಯಿತು. ಆದರೆ ಸಾಮಾಜಿಕ, ಧಾರ್ಮಿಕ ಮತ್ತು ನೈತಿಕ ದೃಷ್ಟಿಯಿಂದ ಸ್ತ್ರೀಯರಿಗೆ ಬಹಳ ಶಿಕ್ಷೆಯನ್ನು ಅನುಭವಿಸ ಬೇಕಾಗುತ್ತದೆ. ಈ ಶಿಕ್ಷೆಯೊಳಗಿಂದ ಗಂಡಸು ಪಾರಾಗುವನು. ಏಕಂದರೆ ಏಕಪತಿವ್ರತದ,ಪಾವಿತ್ರ್ಯ, ಹಾಗೂ ಮಹತ್ವದ ವಿಷಯವಾಗಿ ಮೊದಲಿಗೇ ಸಾಕಷ್ಟು ಪ್ರಚಾರ ಮಾಡಲಾಗಿದೆ. ಸ್ತ್ರೀಯರ ನೈಸರ್ಗಿಕ ಗುಣಧರ್ಮಗಳ ಮೂಲಕ ಅಂದರೆ ಬಾಲ ಸಂಗೋಪನದ ಭಾರವು ಅವರ ಮೇಲೆ ಬಿದ್ದದ್ದರಿಂದ, ಅವರಿಗೆ ಸ್ವಲ್ಪ ಶಾಂತವಾತಾವರಣವು ಹೆಚ್ಚು ಪ್ರಿಯವಾಗಿರುವದು. ಪ್ರತ್ಯಕ್ಷ ಕೆಲಸಮಾಡುವ ಹೊಣೆಗಾರಿಕೆಯು ಅವರ ಮೇಲೆ ಬಿದ್ದದ್ದರಿಂದ ಎಡಬಲದ ಸಂಗತಿಗಳಷ್ಟೇ ಕಾಣುವವು. ಬಹಳ ದೂರದವರೆಗೆ ಅವರ ದೃಷ್ಟಿಯು ಹೋಗುವದಿಲ್ಲ. ಸ್ತ್ರೀಯರಿಗೆ ಪ್ರಿಯಕರನೆಂದರೆ ಅವರ ಸರ್ವಸ್ವ.ಆದರೆ ಗಂಡಸರಿಗೆ ತನ್ನ ಪ್ರಿಯಳೆಂದರೆ ಬಹಳ ಜನರಲ್ಲಿ ಒಬ್ಬ ಗೆಳತಿಯೆನಿಸುತ್ತಾಳೆ. ಈ ಮತ್ತು ಬೇರೆ ಕಾರಣಗಳ ಮೂಲಕ ಸ್ತ್ರೀಯರ ಮನಸ್ಸಿನ ರಚನೆಯು ಏಕಪತಿವ್ರತದ ಕಾಯದೆಯನ್ನು ಪಾಲಿಸಲು ಹೆಚ್ಚಿಗೆ ಅನುಕೂಲವಾಗಿರುತ್ತದೆ. ಈ ಕಟ್ಟಳೆಯು ವಿಶಿಷ್ಟ ಪರಿಸ್ಥಿತಿ ಇಲ್ಲದಿದ್ದಾಗ ಪಾಲಿಸಲ್ಪಡಲಿಲ್ಲ ಮತ್ತು ಪಾಲಿಸಲ್ಪಡುವದಿಲ್ಲ. ಈ ವಿಶಿಷ್ಟ ಪರಿಸ್ಥಿತಿಯೆಂದರೆ ಚಿಕ್ಕಂದಿನಿಂದ ಏಕಪತಿವ್ರತದ ಫಲಶ್ರುತಿಯನ್ನು ಹೊಗಳಿ ಹೊಗಳಿ ಅವರ ಎಳೆ ಮನಸ್ಸಿನ ಮೇಲೆ ಸಂಸ್ಕಾರಗಳನ್ನು ಮಾಡಿ ಅವರನ್ನು ಮಾನಸಿಕ ಗುಲಾಮರನ್ನು ಮಾಡಿಡೋಣ, ಲಗ್ನವಾದ ನಂತರ ಗಂಡನ ಮೇಲೆ ಪ್ರೀತಿ, ಮಿಕ್ಕ ಸುಖ ಸೌಕರ್ಯಗಳ, ಪರಪುರುಷರ ವಿಶೇಷ ಸಂಪರ್ಕ ಬರದಂತೆ ಬಂಧನ, ಇಷ್ಟೇ ಸಂಸ್ಕಾರಗಳನ್ನು ಗ್ರಹಣಮಾಡುವಷ್ಟು ಶಿಕ್ಷಣ. ಇದರಲ್ಲಿ ಸ್ವಲ್ಪಾದರೂ ವ್ಯತ್ಯಾಸ ಕಂಡಲ್ಲಿ ಏಕಪತಿವ್ರತದ ಕಾಯದೆಯನ್ನು ಉಲ್ಲಂಘಿಸುವದರಲ್ಲಿ ಸಂಶಯವಿಲ್ಲವೆಂದು ತಿಳಿಯಬೇಕು. ಈ ವಿಶಿಷ್ಟ ಪರಿಸ್ಥಿಯನ್ನು ನಿರ್ಮಿಸುವಂಥ ಅನುಕೂಲತೆಯು ಎಲ್ಲ ಕಡೆಗೂ ಅಷ್ಟು ಇಲ್ಲದಿದ್ದರಿಂದ ಇನ್ನು ಸ್ವಲ್ಪ ಹೆಚ್ಚು ಕಡಿಮೆ ಪ್ರಮಾಣದಿಂದ ಈ ಕಾಯದೆಯನ್ನು ಮುರಿಯುವದರಲ್ಲಿಯೇ ಪಾಲನೆಯಾಗುತ್ತದೆ. ವಿಶೇಷವಾಗಿ ಆದರಲ್ಲಿಯೂ ಮನಬಂದಂತೆ ನಡೆಯುವ ಪುರುಷರ ವೃತ್ತಿಯ ಮೂಲಕ ಈ ಕಾಯದೆಯ ಉಲ್ಲಂಘನೆಗೆ ಹೆಚ್ಚು ಸಹಾಯವಾಗುತ್ತದೆ. ಇದನ್ನು ಉಲ್ಲಂಘಿಸುವ ಸ್ತ್ರೀಯರು ಮಾತ್ರ ಇದನ್ನು ಪ್ರೇರೇಪಿಸುವ

ಗಂಡಸರಿಂದಾಗಲಿ ಸಮಾಜದಿಂದಾಗಲೀ ಹಿಂಸೆಯನ್ನು ಅನುಭವಿಸಬೇಕಾಗುತ್ತದೆ. ಏಕಪತಿವ್ರತದ ಕಾಯದೆಗೆ ಅನುಕೂಲವಾಗಿ ಸ್ತ್ರೀಯರ ಸ್ವಭಾವದ ರಚನೆಯು ಇದ್ದಾಗ್ಯೂ ಅದನ್ನು ಪಾಲಿಸುವದು ಬಹು ಅಂಶದಿಂದ ಶಕ್ಯವಾಗುವದಿಲ್ಲ. ಇಂಥ ಪರಿಸ್ಥಿತಿಯಲ್ಲಿ ಏಕಪತ್ನೀವ್ರತದ ಕಾಯದೆಯು ಪುರುಷರ ಪ್ರತಿಕೂಲ ಮನೋವೃತ್ತಿಯ ಮೂಲಕ ಶತಾಂಶದಿಂದ ಅದನ್ನು ಸರಿಯಾಗಿ ಪಾಲಿಸಲ್ಪಡುವದೆಂಬ ಆಶೆಯು ವ್ಯರ್ಥವಿರುತ್ತದೆ. ನಿಸರ್ಗದಿಂದ ಭಿನ್ನ ಸ್ವಭಾವವುಳ್ಳ ಎರಡು ವ್ಯಕ್ತಿಗಳು ಶಾಶ್ವತವಾಗಿ ಒತ್ತಟ್ಟಗಿರುವ ಕಲ್ಪನೆಯು ಸಹ ಅಸ್ವಾಭಾವಾವಿಕವಾಗಿದೆ. ಕ್ಷಣ ಕ್ಷಣಕ್ಕೆ ಬದಲಾಗುತ್ತಿರುವ ಬಾಹ್ಯ ಪರಿಸ್ಥಿತಿಯ ಪರಿಣಾಮಗಳ ಮೂಲಕ ಭಿನ್ನ ಭಿನ್ನ ಸಂಸ್ಕಾರಗಳುಂಟಾಗುವವು. ಆ ಸಂಸ್ಕಾರಗಳಂತೆ ವಿಚಾರಗಳಲ್ಲಿ ಬದಲಾವಣೆಯಾಗುವದು. ವಿಚಾರದಂತೆ ಆಚಾರವಾಗುವದು ಕ್ರಮಪ್ರಾಪ್ತವಿರುತ್ತದೆ; ಆದ್ದರಿಂದ ಕಾಯದೆಯ ಬೆಂಬಲದಿಂದ, ವಿದ್ಯೆಯ ಸಾಮರ್ಥ್ಯದಿಂದ, ಸಾಮಾಜಿಕ ರೂಢಿಯ ಒತ್ತಾಯದಿಂದ ಸ್ತ್ರೀಪುರುಷರನ್ನು ಆಜನ್ಮ ಒತ್ತಟ್ಟಗೆ ಕಟ್ಟಿಹಾಕುವ ಪ್ರಯೋಜನವು ತಾತ್ಪೂರ್ತಿಕವಾಗಿ ಯಶಸ್ವಿಯಾದಂತೆ ಕಂಡಾಗ್ಯೂ ಅದು ಬಹ್ವಂಶದಿಂದ ಸಹ ಯಶಸ್ವಿಯಾಗಿಲ್ಲ.



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗೆಷ್ಟೋ ಜನ ಮೆಂಬರ ಆಗಿದ್ದಾರೆ, ಅವರಲ್ಲಿ ಕೆಲವು ಪರಿಚಯವನ್ನು ಮುಂದೆಕೊಟ್ಟಿದೆ ಜೊತೆಗೆ ನಿಮ್ಮ ಭಾವಚಿತ್ರ (ಬ್ಲಾಕ) ವನ್ನೂ, ಕಳಿಸಿದರೆ, ಅದನ್ನೂ ನಿಮ್ಮ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರವೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**
ವನಿತಾಸೇವಾ ಸಮಾಜ
**ಧಾರವಾಡ.**

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು........................................................................
..........................................................................................................

ಪೂರ್ಣ ವಿಳಾಸ...............................................................................
(ಮನೆ ನಂಬರು ಸಹಿತ) ................................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು.............................                                    ಸಹಿ

## 'ಅಕ್ಕನ ಪೆಟ್ಟಗೆ'ಗೆ ಈ ಸಲ ಮೆಂಬರಾದವರು

| ಹೆಸರು | ವರ್ಷ | ಊರು | ಪರಿಚಯ |
|---|---|---|---|
| (೧) ವಿಮಲಾ ಹೂಲಿ | (೧೦) | ಧಾರವಾಡ | ಕನ್ನಡ ಆರನೆಯ ಇಯತ್ತೆ, ನಾಟಕ, ಗಾಯನಗಳಲ್ಲಿ ಬಹಳ ಇಷ್ಟ; ಆದರೆ ಚಿತ್ರಕಲೆ ಬರುವ ದಿಲ್ಲವೆಂದು ಅವಳ ತಕರಾರು! |
| (೨) ಪ್ರಕಾಶ ಹಾಲಗಿ | (೯) | ಧಾರವಾಡ | ಓದು ತಪ್ಪಿಸಿ ಆಟವಾಡುವದೆಂದರೆ ಬಹಳ ಇಷ್ಟ! ತೋಟ ಮಾಡು ವಲ್ಲಿ ಒಳ್ಳೆ ಜಾಣ. |
| (೩) ಆನಂದಾ ಮುನ್ನೂರಾವ | (೧೧) | ಮಂಗಳೂರ | ಕನ್ನಡ ಆರನೆಯ ತರಗತಿ; ಗಾಯನದಲ್ಲಿ ಅಭಿರುಚಿ; ಓದು ಬೇಸರವಂತೆ ! ಹಾಡು ಮಾತ್ರ ಬೇಕಾದಷ್ಟು ! |
| (೪) ಲಕ್ಷ್ಮೀದೇವಿ | (೬) | ಚಿಕ್ಕಮಗ ಳೂರ | ಇದೀಗ ಶಾಲೆಗೆ ಹೋಗುತ್ತಿದ್ದಾಳೆ; ಆದರೆ ಮಾತಿನಮಲ್ಲಿ. ತಲೆತುಂಬ ಹರಟೆ! ತಾನೂ ಅಕ್ಕನ ಪೆಟ್ಟಗೆಗೆ ಕಥೆ ಬರೆಯುತ್ತಾಳಂತೆ ! |
| (೫) ಮೀರಾ ಪೈ | (೧೧) | ಸಿದ್ದಾಪುರ | ಕಾನ್ವೆಂಟಿನಲ್ಲಿ ಓದುತ್ತಿದ್ದಾಳೆ; ಇಂಗ್ಲೀಷ ಮಾತನಾಡಲು ಅವ ಳಿಗೆ ಬಹಳ ಇಷ್ಟ! ಇಂಗ್ಲೀಷ ಮಾತನಾಡಿ ಅಜ್ಜಿಯನ್ನು ರೇಗಿಗೆ ಬ್ಬಿಸಿ ಬಿಡುತ್ತಾಳಂತೆ ! |
| (೬) ಶಕುಂತಲಾ ಮಹಿಷಿ | (೮) | ಧಾರವಾಡ | ಕನ್ನಡ ಮೂರನೆಯ ತರಗತಿ, ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜ ಧಾರವಾಡ. ನಾಟಕದಲ್ಲಿ ಪಾತ್ರ ವಹಿಸಲು, ವರ್ಗದಲ್ಲಿ ಹಿರೇಮಣಿ ಯಾಗಲು ಇಷ್ಟ. |
| (೭) ಅಶೋಕ ಗೋಸಾವಿ | (೮) | ಧಾರವಾಡ | ಕನ್ನಡ ಮೂರನೆಯ ತರಗತಿ; ಬಹಳ ಕಿಡಿಗೇಡಿ, ಕಣ್ಣುತಪ್ಪಿಸಿ ಕೆಲಸ ಸಾಧಿಸುವಲ್ಲಿ ಬಹಳ ಜಾಣ. |

ಈ ಸಲ ಅಕ್ಕನ ಪೆಟ್ಟಗೆಗೆ ಚಿಕ್ಕ ಶಕುಂತಲಾ ತನ್ನ ಅನುಭವ ಬರೆದು ಕಳಿಸಿದ್ದಾಳೆ.

# ಕಳವು

ಮನೆಯಲ್ಲಿ ಅಂಗಡಿಯಿಂದ ಸಣ್ಣ ಸಣ್ಣ ಸಾಮಾನುಗಳನ್ನು ನಾನೇ ತರುವವಳು. ಅಪ್ಪ ನನ್ನ ಕೈಯ್ಯಲ್ಲಿಯೇ ರೊಕ್ಕ ಕೊಡುವರು. ಸಾಮಾನು ತರುವಾಗ ಉಳಿದ ಒಂದಾಣೆ ಎರಡಾಣೆಗಳನ್ನು ಅವರು ಕೇಳುವದೇ ಇಲ್ಲ; ಅದಕ್ಕಾಗಿ ಸಾಮಾನು ತರಲು 'ನಾನು, ನಾನು' ಎಂದು ನಿತ್ಯವೂ ನಮ್ಮ ಮನೆಯಲ್ಲಿ ಜಗಳ; ಅಕ್ಕನು ತಾನು ತರಬೇಕೆನ್ನುತ್ತಾಳೆ; ಆದರೆ ಅವಳಿಗೆ ಕೊಡಬಾರದೆಂದು ನನ್ನ ಹಟ ಉಳಿದ ಒಂದೆರಡಾಣೆಯಿಂದ ನಾವು ಬಳೆ ರಿಬ್ಬನ್ನು ಇತ್ಯಾದಿಗಳನ್ನೆಲ್ಲ ಕೊಂಡುಕೊಳ್ಳುತ್ತೇವೆ, ಎಷ್ಟೊ ಸಲ ಬಾಳೆಹಣ್ಣು ಸೇಬೂಹಣ್ಣುಗಳನ್ನೂ ಕೊಂಡು ತಿನ್ನುತ್ತೇವೆ.

ಒಂದು ಸಲ ಎಂಟಾಣೆ ರೊಕ್ಕ ತೆಗೆದುಕೊಂಡು ಬಾಳೇಹಣ್ಣು ತರಲು ಪೇಟೆಗೆಹೋಗಿದ್ದೆ. ಆರಾಣೆಗೆ ಒಂದು ಡಝನ್ ಬಾಳೇಹಣ್ಣು ಕೊಂಡುಕೊಂಡೆ. ಎರಡಾಣೆ ಉಳಿಯಿತು, ಸೇಬೂ ಕೇಳಿದೆ, ಮೂರಾಣೆ ಹೇಳಿದನು; ನೋಡಲು ಸೇಬುಹಣ್ಣು ಬಹಳ ಚಂದವಾಗಿತ್ತು, ದೊಡ್ಡದೂ ಇತ್ತು. ಆದರೆ ಏನುಮಾಡಿದರೂ ಎರಡಾಣೆಗೆ ಅವನು ಕೊಡಲಿಲ್ಲ; ಸರಿ ಇವನ ಫಜೀತಿ ಮಾಡಬೇಕು ಅಂದು, ಆ ಸೇಬುಹಣ್ಣನ್ನುಬಾಳೇಹಣ್ಣಿನೊಡನೆಯೇ ಚೀಲದಲ್ಲಿ ಮೆಲ್ಲಗೆ ಹಾಕಿಬಿಟ್ಟು ಅಲ್ಲಿಂದ ಓಡಿದೆ. ಅಂಗಡಿಯವನಿಗೆ ತಿಳಿಯಲೇ ಇಲ್ಲ.

ಮನೆಗೆ ಹೋಗಿ ಬಾಳೇಹಣ್ಣುಗಳನ್ನು ಅವ್ವನ ಕೈಗೆ ಕೊಟ್ಟೆ; ಸೇಬೂಹಣ್ಣನ್ನೂ ಒಳ್ಳೇ ಅಭಿಮಾನದಿಂದ ತೋರಿಸಿದೆ. ನೋಡಿ ಅವಳಿಗೂ ಸಂತೋಷವಾಯಿತು 'ಎಂಟಾಣೆಯಲ್ಲಿ ಎರಡನ್ನೂ ತಂದಿದ್ದಾಳಲ್ಲs!' ಎಂದು ಅಪ್ಪನೂ ಆಶ್ಚರ್ಯಪಟ್ಟರು;– ನಾನು ನನ್ನ ಹತ್ತರವಿದ್ದ ಎರಡಾಣೆಯನ್ನು ಯಾರಿಗೂ ಕೊಟ್ಟಿರಲೇ ಇಲ್ಲ.ಆದರೆ ನನ್ನ ಕಿಸೆಯಲ್ಲಿದ್ದ ಎರಡಾಣೆ.ತಟ್ಟೆಯನ್ನೆತ್ತಲು ಕೆಳಗೆ ಬಗ್ಗಿದಾಗ ಬಿದ್ದೇ ಬಿಟ್ಟಿತು. ನನ್ನ ಕಳವು ಹೊರಬಿತ್ತು; ಅವ್ವ ಪೀಡಿಸಿ ಪೀಡಿಸಿ ಕೇಳಿದಳು 'ಸೇಬೂಹಣ್ಣನ್ನು ಅಂಗಡಿಯವನು ಹಾಗೇ ಮೇಲೆ ಕೊಟ್ಟಿದ್ದಾನೆ,' ಎಂದೆ; ಅಪ್ಪ ನಂಬಲಿಲ್ಲ, ಅಂಗಡಿಯವನನ್ನೇ ಕೇಳಿಬರುತ್ತೇನೆ ಎಂದು ಹೊರಟರು. ನಾನು 'ಬೇಡ,' ಎಂದು ಹಟಹಿಡಿದೆ; 'ಹಾಗಾದರೆ ನೀನೇ ನಿಜವಾದುದನ್ನು ಹೇಳು, ನೀನು ಹೇಳುವವರೆಗೆ ನಾನು ಊಟವನ್ನೇ ಮಾಡುವದಿಲ್ಲ,' ಎಂದು ಕುಳಿತುಬಿಟ್ಟರು; ಸುಳ್ಳೇಅನ್ನುತ್ತಾರೆ ಎಂದು ನಾನೂ ಸುಮ್ಮನಿದ್ದೆ; ಅವ್ವ ಅಪ್ಪನನ್ನು ಊಟಕ್ಕೆ ಎಬ್ಬಿಸಿದಳು; ಆದರೆ ಅಪ್ಪ ಏಳಲಿಲ್ಲ. ಸುಮ್ಮನೇ ಕುಳಿತಿದ್ದರು. ಮಧ್ಯಾಹ್ನವಾಯಿತು ಸಂಜೆಯ ೫ ಗಂಟೆಯಾಯಿತು. ಅವ್ವ ನನ್ನನ್ನು ಬಯ್ಯತೊಡಗಿದಳು; ಅಪ್ಪ ಅವಳಿಗೆ ಬಯ್ಯಬೇಡವೆಂದು ಹೇಳಿದರು. ಅಷ್ಟು ಹೊತ್ತಿಗೆಂದರೆ ನನ್ನ ಮನಸ್ಸು ಕರಗಿ ಹೋಗಿತ್ತು; ನನ್ನಿಂದ ಅಳುವು ತಡೆಯುವದಾಗಲಿಲ್ಲ. ಅಳುತ್ತಳುತ್ತ ಹೇಳಿದೆ,

" ಹೌದು ಅಂಗಡಿಯವನು ಎಷ್ಟು ಕೇಳಿದರೂ ಎರಡಾಣೆಗೆ ಕೊಡಲಿಲ್ಲ; ಅವನಿಗೆ ಕಾಣಿಸದಂತೆ ನಾನಾಗಿಯೇ ತಂದೆ. "

' ಸರಿ, ಈಗ ನಿಜವಾದ ಮಾತನ್ನು ಹೇಳಿದೆ; ಇದಕ್ಕಾಗಿ ನಾನು ನಿನ್ನನ್ನು ಬಯ್ಯುವದೂ ಇಲ್ಲ ಹೊಡೆಯುವದೂ ಇಲ್ಲ, ನಾನೇ ಇಂದು ಉಪವಾಸ ಮಾಡುತ್ತೇನೆ.' ಅಪ್ಪ ಹೇಳಿದರು.

ನನಗೆ ಬಹಳ ದುಃಖವಾಯಿತು;-ಅವರು ನನ್ನನ್ನು ಹೊಡೆದಿದ್ದರೂ ನನಗೆ ಅಷ್ಟೊಂದು ದುಃಖವಾಗುತ್ತಿರಲಿಲ್ಲ. " ಇನ್ನೊಂದು ಸಲ ಹೀಗೆ ಮಾಡುವದಿಲ್ಲ, " ಎಂದು ಬಹಳ ಹೇಳಿಕೊಂಡೆ; ಅವರು ಕೇಳಲಿಲ್ಲ; ತಮ್ಮ ಮಾತನ್ನು ನಡೆಸಿಯೇ ಬಿಟ್ಟರು.

ಆ ದಿನದ ಸಂಗತಿಯನ್ನು ಮಾತ್ರ ನಾನು ಎಂದೂ ಮರೆಯುವಂತಿಲ್ಲ!

† † † † †

' ನಾನು ನಾಲ್ಕು ಅಕ್ಷರದವನು ಇದ್ದೇನೆ; ' ಒಂದು ಎರಡನೆಯ ಅಕ್ಷರಗಳನ್ನು ಸೇರಿಸಿದರೆ ' ಕುದುರೆ ' ಎಂದರ್ಥವಾಗುವದು; ಮೂರು ನಾಲ್ಕನೆಯವುಗಳನ್ನು ಸೇರಿಸಿದರೆ ' ಮನುಷ್ಯ ' ಎಂದರ್ಥವಾಗುವದು. ನಾಲ್ಕೂ ಅಕ್ಷರಗಳು ಸೇರಿದರೆ, ' ಭಕ್ತ ' ಎಂದರ್ಥವಾಗುವದು. ಆದರೆ ನಾನಾರು "

—ಎಸ್. ಟಿ. ಪಾಟೀಲ, ಧಾರವಾಡ.

( ಒಗಟಕ್ಕೆ ಉತ್ತರ ಕಳಿಸುವಾಗ, ಸರಿಯಾದ ವಿಳಾಸದೊಡನೆ ಕಳಿಸಿರಿ )

# ನಗೆಹನಿ

**ಸೇಠ :—** ( ಹೊಟ್ಟೆಯ ಮೇಲೆ ಕೈಯಾಡಿಸುತ್ತ ) ಏನದು ನನ್ನ ಕಾಲ ಕೆಳಗೆ ಸಪ್ಪಳವಾಗುವದು ?

**ಆಳು :—** ಏನೂ ಇಲ್ಲರಿ, ನಾನs ಕಸಾ ಹೊಡ್ಯಾಕ ಹತ್ತೀನಿ.

† † † † †

**ಗಿರಾಕಿ :—** ( ಅಗಸನಿಗೆ ) ಏನೋ ಒಂದರಿವೆಗೆ ಎರಡಾಣೆ ತೋಗೋತೀದಿ, ಅಂಗೀನs ಬೆಳ್ಳಗ ಮಾಡೂದಿಲ್ಲಲ್ಲ ( ಒಂದು ಕರೇ ಅಂಗಿಯನ್ನು ತೋರಿಸುವನು )

**ಅಗಸ :—** ರಾಯರs ಬೆಳ್ಳಗ ಮಾಡಿದರ ಬಣ್ಣಹೋಗಿ ಮಸಿಹಚ್ಚಿದ್ಹಂಗ ಆದೀತಂತ ಬಿಟ್ಟೇನ್ರಿ. ಎಸ್. ಟಿ. ಪಾಟೀಲ, ಧಾರವಾಡ

† † † † †

**ಹಾಲಿನ ಗಿರಾಕಿ :—** ನೀರಿನಲ್ಲಿ ಹಾಲು ಕೂಡಿಸಿಕೊಟ್ಟರೆ ಹೇಗೋ ಗೌಳಿ?

**ಗೌಳಿ :—** ಒಳ್ಳೇ ಹಾಲು ರೂಪಾಯಿಗೆ ಮೂರು ಸೇರು ಹೇಗೆ ಸಿಕ್ಕೀತು ಸ್ವಾಮಿ? ಎರಡುವರೆ ಯಾದಠೆ ಏನೋ ಸ್ವಲ್ಪ ..........

**ಗಿರಾಕಿ:**— ಆದೀತು ಆದರೆ ಹಾಲು ನನ್ನೆದುರೇ ಹಿಂಡಿಕೊಂಡಬೇಕು.

**ಗೌಳಿ:**— ಇಲ್ಲ ಇಲ್ಲ ಅದಾಗದು, ಹಾಗಾದರೆ ಒಂದೂವರೆ ಸೇರೇ!

ವಿಲಾಯತಿಯಿಂದ ಹಿಂದಿರುಗಿದ ಮಗನು ಗಾಯತ್ರೀ ಜಪವನ್ನೂ ಮಾಡಬೇಕೆಂದು, ತಂದೆಯ ಇಚ್ಛೆ! ಸಮಯವೇನೂ ಬಹಳ ಹಿಡಿಯದೆಂದು ತಂದೆ ಗಾಯತ್ರೀ ಮಂತ್ರ ಹೇಳಿ ಜಪಮಾಲೆಯನ್ನು ಮಗನ ಕೈಗೆ ಕೊಡುತ್ತಾನೆ. ಮಗನು ಒಂದು ಮಣಿಯನ್ನು ಸರಿಸಿ ಗಾಯತ್ರೀ ಮಂತ್ರ ಹೇಳುತ್ತಾನೆ. ಎರಡನೆಯ ಮಣಿಯನ್ನು ಸರಿಸುತ್ತಲೆ 'Ditto' ಎಂದು ಬಿಡುತ್ತಾನೆ!



# ಕಾಯದೆ–ಕಾನೂನು

**ಪ್ರಶ್ನೆಯ ಮುಖ್ಯಾಂಶಗಳು:**

(೧) ತನಗೆ ಮಕ್ಕಳಿಲ್ಲವೆಂದು ಹೇಳಿ (ಮಗಳಿದ್ದಾಳೆ) ತನ್ನ ಗಂಡನಿಗಾಗಿ ಇನ್ನೊಬ್ಬಳನ್ನು ತಂದಳು ಎಂದು ಹೆಂಡತಿಯ ಮೇಲೆ **ಮೋಸದ ಆರೋಪ.**

(೨) ಒತ್ತಾಯದ ಲಗ್ನವೆಂಬುವ ಹಾಗೆ ಕಾಣಿಸಿದೆ.

(೩) ಮದುವೆಯಾದವಳ ಇಚ್ಛೆ ಗಂಡನ ಮನೆಯಲ್ಲಿ ಇರುವುದು ಇದೆ: ಇದಕ್ಕೆ ಮದುವೆಯಾದವಳ ತವರು ಮನೆಯವರ ವಿರೋಧವಿದೆ. ಮದುವೆಯಾದ ವಳಿಗೆ ೧೮ ವರ್ಷ.

(೪) ಇದು ಮಿಶ್ರವಿವಾಹ.

**ಪರಿಹಾರಯಾಚನೆ:**

(ಅ) ಈ ಪರಿಸ್ಥಿತಿಯಲ್ಲಿ ತಂಗಿಯನ್ನು ಅತ್ತೆಯ ಮನೆಗೆ ಕಳಿಸದಿದ್ದರೆ ನಮ್ಮ ಮೇಲೆ ಇಲಾಜಮಾಡಲು ಕಾಯದೆಯಿಂಧ ಅಧಿಕಾರವಿದೆಯೊ?

(ಬ) ಹಾಗೆ ಆದಲ್ಲಿ ಅದರೊಳಗಿಂದ ಪಾರಾಗಲು ನಮಗೆ ಮಾರ್ಗವಿದೆಯೆ?

(ಕ) ಹುಡುಗೆಗೆ ಎರಡನೆಯ ಮಾರ್ಗ ಯಾವುದಿದೆ?

**ಉತ್ತರ—**

(೧) ಹುಡುಗೆ ಗಂಡನ ಮನೆಗೆ ಹೋಗಬೇಕೆಂಬ ಇಚ್ಛೆ ಇರುವಾಗ ನೀವು ತಡೆವುದೇಕೆ? ತಡೆದರೂ ಅವಳು ನಿಲ್ಲಬಹುದೆ? ಅವಳು ಒಲ್ಲೆನೆಂದರೆ ಅವಳ ಸಂರಕ್ಷಣದ ಭಾರ ನಿಮ್ಮ ಮೇಲೆ. ಮದುವೆಯ ನಿಮಿತ್ತಕ್ಕಾಗಿ ಅವಳು ಅಜ್ಞಾನಿಯಲ್ಲ. ಅವಳಿಗೆ ೧೮ ವರುಷವಾಗಿದೆ. ಆದುದರಿಂದ ಗಂಡನ ಮನೆಯಿಂದ ಅವಳನ್ನು ಒತ್ತಾಯದಿಂದ ಬಿಡಿಸಿ ತಂದರೆ ಸಮಂಜಸವಾದೀತೆ?

(೨) ಅವಳ ಮದುವೆ ಮೋಸದ ಮೂಲಕವಾಗಿ ಆಗಿದೆ. ಎಂದು ಹೇಳಬಹುದು. ಮೋಸ ಮೊದಲನೆಯ ಹೆಂಡತಿಯಿಂದ ಮಕ್ಕಳಿಲ್ಲವೆಂದು ಹೇಳಿದ ಆರೋಪ ಮಾತ್ರ. ಹೆಂಡತಿಯು ತನ್ನ ಗಂಡನಿಗಾಗಿ ಕನ್ಯೆ ಹುಡುಕುತ್ತಿದ್ದಾಳೆ. ಸವತಿಯನ್ನು ಒಪ್ಪಿ ಮದುವೆ ಮಾಡಿಕೊಂಡಿದ್ದಾಳೆಂದ ಹಾಗಾಯಿತು.

(೩) ಮಿಶ್ರವಿವಾಹ. ಎಂದೂ ಹುಡಿಗೆಯನ್ನು ಊರಿಗೆಕರೆದುಕೊಂಡು ಹೋಗಿ ಯಾರೊಡನೆಯೂ ಮಾತನಾಡದೆ ಅವಳನ್ನು ಒಂದು ದಿನ ಗುಡಿಯಲ್ಲಿ ಮದುವೆಯಾದನು ಎಂದು ಹೇಳಿದ್ದೀರಿ: ಅಲ್ಲಿ ಮದುವೆ ಯಾವ ಪದ್ಧತಿಯಿಂದ ನಡೆಯಿತು? ಯಾರು ಮಾಡಿಸಿದರು. (ಹುಡಿಗೆಯ ಒಪ್ಪಿಗೆ ಇದೆಯೆಂದು ನಿಮ್ಮ ಮಾತಿನಿಂದ ತಿಳಿವುದು.) ಅಲ್ಲದೆ ಈ ಮದುವೆ ಆದ ತಾರೀಖು ಯಾವುದು? ಇವುಗಳ ಮೇಲಿಂದ ಮುಂದಿನ ವಿಚಾರ.

ಒತ್ತಾಯದಿಂದ ಮದುವೆಮಾಡಿಕೊಂಡಿದ್ದಾದರೆ ಹುಡಿಗೆ ಅಲ್ಲಿ ಗಂಡನ ಮನೆಗೆ ಹೋಗಬೇಕೆನ್ನುತ್ತಿರಲಿಲ್ಲ. ಆದ ಕಾರಣ ಆ ಆಪಾದನೆ ಇಲ್ಲ. ಇನ್ನು ಸಪತ್ನಿ ವಿವಾಹ—ಕಾಯದೆ ಜಾರಿಯಲ್ಲಿ ಬಂದನಂತರ ಈ ಮದುವೆ ಆಗಿದ್ದರೆ ಈ ಮದುವೆಯು ಗೊತ್ತುಗೇಡಾಗುವವುದು.

(೪) ಮದುವೆ ಗೊತ್ತುಗೇಡಾದ ನಂತರ ಮರುಮದುವೆಯು ಒಂದು ಉಪಾಯ.

೨ ಪ್ರಶ್ನೆ:— ನಾನೊಬ್ಬ ೬೫ ವರ್ಷದ ಮುದುಕನಿದ್ದೇನೆ. ಮುಪ್ಪಿನಕಾಲದಲ್ಲಿ ಉಪಯೋಗವಾಗಬೇಕೆಂದು ೮ ವರ್ಷಗಳ ಹಿಂದೆ ಪುನರ್ವಿವಾಹವಾಗಿದ್ದೇನೆ. ನನಗೊಬ್ಬ ಹುಡಗನಾಗಿದ್ದಾನೆ. ನನಗೆ ಉಳಿದವರಾರೂ ಸಂಬಂಧಿಕರಿಲ್ಲ. ನನ್ನ ಹುಡುಗನ ವಯಸ್ಸು ೧೫. ನನ್ನ ಹೆಂಡತಿಗೆ ಮೊದಲಿನ ಗಂಡನಿಂದ ೩ ಮಂದಿ ಗಂಡುಮಕ್ಕಳು ಆಗಿರುತ್ತವೆ. ಅವುಗಳ ಪಾಲನ ಪೋಷಣವನ್ನಾದರೂ ನಾನೇ ಮಾಡಿರುತ್ತೇನೆ. ಆಗಾಗ್ಗೆ ನನ್ನ ಹೆಂಡತಿಯು ಮನೆಯೊಳಗಿನ ಕಾಗದಪತ್ರ ಮತ್ತು ಸಾಮಾನುಗಳನ್ನು ತೆಗೆದುಕೊಂಡು ಪ್ರಿಯಕರನ ಹತ್ತಿರ ಪರವೂರಲ್ಲಿ ಇರುತ್ತಾಳೆ. ಅವಳು ಇಲ್ಲಿಗೆ ಬರಲು ನಕಾರಿಸಿದ್ದರಿಂದ ನನ್ನ ಮಗನನ್ನು ನಾನು ಕರೆದುಕೊಂಡು ಬಂದಿರುತ್ತೇನೆ. ನನಗೆ ತಿಳಿಯದೆ ಅವನನ್ನು ಮರಳಿ ಒಯ್ದಿರುತ್ತಾಳೆ. ಈಗ ನಾನು ಏನು ಮಾಡಬೇಕು ? Guardian Act ದ ಪ್ರಕಾರ ಏನು ಮಾಡಲು ಬರುತ್ತದೆ ?

ಉತ್ತರ:— ಹಿಂದೂ ಕಾಯದೆಯಂತೆ ಪಾಲನ-ಪೋಷಣದ ಅಧಿಕಾರವು ಗಂಡನಿಗೆ ಮುಖ್ಯವಾಗಿ ಇದ್ದಾಗ್ಯೂ, ತಾಯಿಯ ಕಡೆಗೆ ಅಧಿಕಾರಕೊಟ್ಟರೆ ಮಕ್ಕಳ ಕಲ್ಯಾಣವಾಗುವದೆಂದು ಅನಿಸಿದರೆ (ಕೋರ್ಟಿಗೆ) ಮಕ್ಕಳನ್ನು ತಾಯಿಯ ಹತ್ತಿರ ಇಡುವಂತೆ ನಿರ್ಣಯಿಸಲು ಕೋರ್ಟಿಗೆ ಅಧಿಕಾರವಿದೆ. ಅದು ಸಾಕ್ಷಿ ಪುರಾವೆಗಳನ್ನವಲಂಬಿಸಿದೆ.

೩ ಪ್ರಶ್ನೆ:— ಒಬ್ಬಳು ಹರಿಜನ ಹೆಣ್ಣುಮಗಳಿರುವಳು. ಅವಳು ಲಗ್ನವಾದಂದಿನಿಂದ ಅತ್ತೆಯಮನೆಗೆ ಹೋಗಿಲ್ಲ. ಪ್ರಿಯಕರನ ಕೂಡ ಓಡಿಹೋಗಿರುವಳು. ಅವಳಿಗೆ ಒಬ್ಬ ಹುಡುಗ, ಇಬ್ಬರು ಹುಡುಗೆಯರಿರುವರು. ಪ್ರಿಯಕರನು ತೀರಿಕೊಂಡಿದ್ದರಿಂದ ಅನೀತಿಯವರ್ತನೆ ಇಟ್ಟಾಗ್ಯೂ, ತಮ್ಮ ತಂದೆ ತಾಯಿಯ ಆಸ್ತಿಯಲ್ಲಿ ಅಣ್ಣ ತಮ್ಮಂದಿರು ಇಲ್ಲದ್ದರಿಂದ, ಅಕ್ಕತಂಗಿಯರಲ್ಲಿ ಪಾಲು ಬೇಡುತ್ತಲಿದ್ದಾಳೆ. ಅದು ಅವಳಿಗೆ ಸಿಗಬಹುದೇ ? ಪ್ರಿಯಕರನ ಆಸ್ತಿ ಸಿಗುವದೇ ? ತವರುಮನೆಯವರ ಆಸ್ತಿಯನ್ನೆಲ್ಲ ಮಾರಿದ್ದಾರೆ.

ಉತ್ತರ:— ಅಕ್ಕತಂಗಿಯರು, ತಾಯಿತಂದೆಗಳು ತೀರಿದನಂತರ ಮದುವೆಯಾಗಿರುವರೋ ? ಇದು ಮಹತ್ವದ ಪ್ರಶ್ನೆ. ಯಾಕಂದರೆ ಹೆಣ್ಣುಮಕ್ಕಳಿಗೆ ವಾರಸಾ ಹಕ್ಕು ಯಾರಿಂದ, ಹೇಗೆ ಹೋಗುತ್ತದೆಯೆಂಬುದು ಒಂದು ಪ್ರಶ್ನೆ. ಹಿಂದೂ ಕಾಯದೆಯಂತೆ ಮೊದಲು ಅವಿವಾಹಿತ ಹೆಣ್ಣುಮಕ್ಕಳ ವಾರಸಾ ಹೋಗುತ್ತದೆ. ವಿವಾ

ಹಿತ ಹುಡುಗೆಯರಲ್ಲಿಯೂ ಬಡವರಕಡೆಗೆ ಹೋಗುತ್ತದೆ. ಆದ್ದರಿಂದ ನೀವು ಕೇಳಿದ ಪ್ರಶ್ನೆಯಲ್ಲಿ, ತಾಯಿತಂದೆಗಳು ಸತ್ತಾಗ ಅವರ ವಿವಾಹಿತರಿದ್ದರೋ ಅವಿವಾಹಿತರಿದ್ದರೋ ? ಎಂಬುದು ಮಹತ್ವದ ಪ್ರಶ್ನೆ. ಪ್ರಿಯಕರನ ಆಸ್ತಿ ಸಿಗುವದು ಬಿಡುವದು ಇದರ ಮೇಲೆ ಈ ಪ್ರಶ್ನೆ ಅವಲಂಬಿಸಿರುವದಿಲ್ಲ. ಅದು ಸಿಕ್ಕರೂ, ತಾಯಿತಂದೆಗಳ ಆಸ್ತಿ ಸಿಗಬಾರದೆಂದು ಕಾಯದೆ ಇಲ್ಲ. ಈಸ್ಟೇಟ ತೆಗೆದುಕೊಂಡವರ ಹಾನಿ ಮೊದಲೇ ಅವರು ಈ ತಪ್ಪು ಮಾಡಿದ್ದರೆ ತಪ್ಪಿಸಲು ಸಾಧ್ಯವಿಲ್ಲ.



# ಸಾದರ ಸ್ವೀಕಾರ

(೧) **ಆರೋಗ್ಯ ಜೀವನ :** ಲೇಖಕರು ಶ್ರೀ. ಎನ್. ಬಿ. ನಾಡಿಗೇರ ಬಿ. ಎ. (ಆನರ್ಸ) ಧಾರವಾಡ.
ಪ್ರಕಾಶಕರು : ಹೊಂಬಾಳಿ ಬಂಧುಗಳು ಗದಗ. ಪುಟ ೨೧೪
ಬೆಲೆ ೨-೮-೦

(೨) **ಬಲಿದಾನ** (ಐತಿಹಾಸಿಕ ಕಾದಂಬರಿ) : ಲೇ:- ಶ್ರೀ. ಪ್ರಿ. ವಿಜಯ ಕುಮಾರ, ಕಣಬರಗಿ ವೀರಭಾರತ ಗ್ರಂಥಮಾಲೆಯ ೧೧ನೆಯ ಪುಷ್ಪ, ಪುಟ ೭೫, ಬೆಲೆ ೦-೧೨-೦

(೩) ಧಾರವಾಡ ಜಿಲ್ಹಾ ಸರ್ವೋದಯ ಯೋಜನೆ ಅರವಟಗಿ (ವರದಿ)

(೪) ಹುಬ್ಬಳ್ಳಿಯ ಭಗಿನೀಮಂಡಳದ ವಾರ್ಷಿಕ ವರದಿ.

(೫) ಕರ್ನಾಟಕಪ್ರಾಂತ, ಕಸ್ತೂರಬಾ ಗಾಂಧೀ ರಾಷ್ಟ್ರೀಯ ಸ್ಮಾರಕನಿಧಿಯ ವರದಿ.

ಜುಲೈದಿಂದ ವೀರಮಾತೆಗೆ ಪ್ರತಿಯಾಗಿ ಬರುವ ಪತ್ರಿಕೆಗಳು.

(೧) **ನೂತನ :** ಕನ್ನಡ ಮಾಸಪತ್ರಿಕೆ. ನೂತನ ಪ್ರಕಾಶನ ಸಮಿತಿಯ ಕಾರ್ಯಾಲಯ, ಜವಳಿಪೇಟ, ಧಾರವಾಡ.

(೨) **ಕನ್ನಡನುಡಿ :** ಹೊರನಾಡ ಕನ್ನಡಿಗರ ತ್ರೈಮಾಸಿಕ ಪತ್ರಿಕೆ, ಕನ್ನಡ ಕುಟೀರ ದಿಲ್ಲಿ.

(೩) **'ಕೊರವಂಜಿ'** ಮಾಸಪತ್ರಿಕೆ, ಬಳೆಪೇಟೆ ಬೆಂಗಳೂರುಸಿಟಿ.



‘ಆರೋಗ್ಯ ಜೀವನ’ ಬರೆದವರು ಶ್ರೀ ಎನ್. ಬಿ. ನಾಡಿಗೇರ ಬಿ. ಎ. (ಆನರ್ಸ), ನಿವೃತ್ತ ಶಿಕ್ಷಣಾಧಿಕಾರಿ, ಧಾರವಾಡ, ಪ್ರಕಾಶಕರು ಹೊಂಬಾಳಿ ಬಂಧುಗಳು ಗದಗ, ಪುಟ ೨೧೪; ಬೆಲೆ ೨-೮-೦

‘ಆರೋಗ್ಯ ಜೀವನ’ವನ್ನು ಕುರಿತ ಮೂಲ ಗ್ರಂಥ ಸಂಪತ್ತಿ ಕನ್ನಡದಲ್ಲಿ ಅಷ್ಟೊಂದಿಲ್ಲ; ಹೆಚ್ಚಾಗಿ ಅನುವಾದಿತ ಕೃತಿಗಳೇ ಇವೆ. ಆದರೆ ಶ್ರೀಮಾನ್ ನಾಡಿಗೇರರು ತಮ್ಮ ಕೃತಿಯಿಂದ ಈ ಕೊರತೆಯನ್ನು ತುಂಬಿಕೊಟ್ಟಿದ್ದಾರೆ. ವೈದ್ಯರೆಂಬ ಉಪಾಧಿ ಅವರಿಗಿಲ್ಲದಿದ್ದರೂ, ತಜ್ಞರ ಅನುಭವಜನ್ಯಜ್ಞಾನದ ಬೆಂಬಲ ಅವರಿಗಿದೆ. ಹಳ್ಳಿಗಳಲ್ಲಿ ಮಠದ ಅಯ್ಯನವರೇ ಗುರುಗಳೂ ವೈದ್ಯರೂ ಆಗಿರುವ ಸಂದರ್ಭದಲ್ಲಿ ಈ ಪುಸ್ತಕ ಒಳ್ಳೇ ಮಾರ್ಗದರ್ಶಿಕೆಯಂತಿದೆ!

ಶರೀರದ ವಿವಿಧ ಭಾಗಗಳ ವಿವರವಾದ ವರ್ಣನೆ, ಪಚನೇಂದ್ರಿಯಗಳ ಕಾರ್ಯ, ಆಹಾರದ ಚರ್ವಣ, ಪಚನ, ರಕ್ತಗತವಾಗೋಣ ಇತ್ಯಾದಿ ಕಾರ್ಯ—ಸ್ನಾಯುಗಳು ಮತ್ತು ಎಲುವುಗಳ ಸಂಬಂಧ, ಸಂಧಿಗಳ ಅನುಕೂಲತೆ, ಇವೆಲ್ಲವುಗಳನ್ನು ಆ ಮೂಲಾಗ್ರವಾಗಿ ಬಿಡಿಬಿಡಿಸಿ ತಿಳಿಹೇಳಿದ್ದಾರೆ.

ಮಜ್ಜಾಸಂಸ್ಥೆ ದೇಹದಲ್ಲಿ ಅತಿ ದೊಡ್ಡ ಆಫೀಸ ಇದ್ದಂತೆ! ಅದು ಇತರ ಅವಯವಗಳಿಂದ ಕೆಲಸ ಮಾಡಿಸುವ ಬಗೆಯನ್ನು ಲೇಖಕರು ಮನೋಹರವಾಗಿ ಚಿತ್ರಿಸಿದ್ದಾರೆ. ಸೂಕ್ಷ್ಮವಾದ ಕಣ್ಣಿನಂತಹ ಅವಯವಗಳನ್ನು ಜಾಗರೂಕತೆಯಿಂದ ಕಾಯ್ದುಕೊಳ್ಳುವ ಉಪಾಯಗಳನ್ನೂ ಸೂಚಿಸಿದ್ದಾರೆ.

‘ಮಂಗನಿಂದ ಮನುಷ್ಯ’ ಎಂಬ ವಿಕಾಸವಾದದ ಇತಿಹಾಸವನ್ನೂ ಮನುಷ್ಯನ ದೇಹ ರಚನೆಯ ಜೊತೆಗೇ, ಮನಸ್ಸನ್ನು ಮುಟ್ಟುವಂತೆ ಹೇಳಿದುದು, ಈ ಪುಸ್ತಕದ ಇನ್ನೊಂದು ವೈಶಿಷ್ಟ್ಯ. ಅಂತೂ ಪುಸ್ತಕವನ್ನು ಮೊದಲಿನಿಂದ ಕೊನೆಯವರೆಗೆ ಅರಿತು ಓದಿದ ವ್ಯಕ್ತಿ, ಶರೀರದ ಯಾವುದೇ ಭಾಗದ ಪರಿಚಯ ನನಗಾಗಿಲ್ಲ, ಎಂದು ಹೇಳುವಂತಿಲ್ಲ. ಶರೀರ ಯಂತ್ರದ ಯಾವ ಭಾಗವನ್ನೂ ಲೇಖಕರು ತಿಳಿಸಿ ಹೇಳದೆ ಬಿಟ್ಟಿಲ್ಲ.

ಪುಸ್ತಕದ ತುಂಬೆಲ್ಲ ಹರಡಿರುವ ರೇಖಾಚಿತ್ರಗಳು ವಿಷಯವನ್ನು ತಿಳಿದುಕೊಳ್ಳಲು ತುಂಬಾ ಸಹಾಯಕಾರಿಯಾಗಿವೆ; ಶರೀರಕ್ಕೆ ಅಪಾಯವಾದಾಗ ಕೈಕೊಳ್ಳತಕ್ಕ ಉಪಾಯಗಳನ್ನು ಬಿಚ್ಚಿ ತೋರಿಸುವ ರೇಖಾಚಿತ್ರಗಳೂ ಇವೆ; ಅಪಾಯ ತಟ್ಟುವ ಮೊದಲು ಜಾಗೃತೆಯಿಂದಿರತಕ್ಕ ಸೂಚನೆಗಳನ್ನು ಎತ್ತಿ ತೋರಿಸುವ ರೇಖಾಚಿತ್ರಗಳೂ ಇವೆ; ಇದರಿಂದ ವಿಷಯದ ಮಹತ್ವ ಇನ್ನೂ ಹೆಚ್ಚಿದೆ.

ಪುಸ್ತಕದಲ್ಲಿ ಮೂರು ಭಾಗಗಳನ್ನು ಮಾಡಿದ್ದು ಎರಡನೆಯ ಭಾಗ ಪ್ರಥಮ ಚಿಕಿತ್ಸೆಗೆ ಸಂಬಂಧಿಸಿದ್ದು. ತತ್ಕಾಲಕ್ಕೆ ಈ ಉಪಾಯಗಳನ್ನು ಕೈಕೊಂಡು ತಜ್ಞರ ಕಡೆಗೆ ಹೋಗುವವರೆಗೆ ಹೆಚ್ಚಿನ ಅಪಾಯ ತಟ್ಟದಂತೆ ನೋಡಿಕೊಳ್ಳಲು, ಪ್ರಥಮ ಚಿಕಿತ್ಸೆ ತುಂಬಾ ಉಪಯುಕ್ತವಾಗಿದೆ. ಮನುಷ್ಯನ ಜೀವನದಲ್ಲಿ ದಿನಂಪ್ರತಿ ಸಂಭವಿಸುವ ಗಾಯ, ಅಪಾಯಗಳಿಂದ ದೂರವಾಗಿರಲು, ಈ ಭಾಗ ಬಹಳ ಸಹಾಯಕಾರಿಯಾಗಿದೆ, ಮೇಲೆ ಸುಲಭವೂ ಆಗಿದೆ.

ಮೂರನೆಯ ಭಾಗ ರುಗ್ಣೋಪಚಾರ; ತಜ್ಞರು ಔಷಧಿಕೊಟ್ಟ ಮೇಲೂ ಇನ್ನುಳಿದವರು ಮಾಡಬೇಕಾದ ಕಾರ್ಯ ಇದು; ಸಾಮಾನ್ಯ ಸ್ತ್ರೀಪುರುಷರಿಗೂ ತಿಳಿಯುವಂತೆ ಸುಲಭವಾದ ಭಾಷೆಯಲ್ಲಿ ಇದು ಬರೆಯಲ್ಪಟ್ಟಿದೆ. ೪ ನೆಯ ಭಾಗ ಸಾಮಾನ್ಯ ಬೇನೆಗಳನ್ನೂ ಅವುಗಳ ನಿವಾರಣೋಪಾಯಗಳನ್ನೂ ಕುರಿತು, ೫ ನೆಯ ಭಾಗ ಸುಲಭೋಪಾಯಗಳನ್ನು ಕುರಿತು ಇವೆ; ಅಜೀರ್ಣ, ಕೆಮ್ಮು, ನೆಗಡಿಯಂತಹ ಬೇನೆಗಳು ಮೊದಲು ಚಿಕ್ಕವೆನಿಸಿದರೂ ಅವೇ ಮುಂದೆ ಬೆಳೆಯಬಹುದು. ಅವುಗಳನ್ನು ಹಾಗೇ ಬಿಡದೆ ಸಮೂಲ ನಾಶಮಾಡುವದೇ ಒಳಿತು. ಕೊನೆಯ ಭಾಗದಲ್ಲಿ ತುಳಸಿ, ಮೆಣಸುಗಳಂತಹ ಸಾಮಾನ್ಯ ವಸ್ತುಗಳಿಂದಲೂ ಔಷಧಿಯನ್ನು ತಯಾರಿಸುವ ಕ್ರಮವನ್ನು ಹೇಳಿದ್ದಾರೆ. ಹೆಚ್ಚಿನ ವೆಚ್ಚವಿಲ್ಲದೆ ಬೇನೆ ಹೋದರೆ ಅದೇನು ಸಣ್ಣ ಮಾತಾಗಲಿಲ್ಲ.

ಅಂತೂ ಲೇಖಕರು ಪಾಶ್ಚಿಮಾತ್ಯ ವೈದ್ಯವಿಜ್ಞಾನ, ಆಯುರ್ವೇದ, ನಿಸರ್ಗಚಿಕಿತ್ಸೆ ಎಲ್ಲದರ ಜ್ಞಾನವನ್ನೂ ಬಳಸಿಕೊಂಡು ಉಪಯುಕ್ತವಾದ ಒಂದು ಕೃತಿಯನ್ನು ಕೊಟ್ಟಿದ್ದಾರೆ; ಓದುಗನು ಅರಿತು ಓದಿ ಉಪಯೋಗಿಸಿದರೆ ಒಳ್ಳೆಯದೇ; ಆದರೆ ಅವನನ್ನು ಗೊಂದಲದಲ್ಲಿ ಕೆಡಹುವಷ್ಟು ವಿಷಯಸಂಗ್ರಹವಿದರಲ್ಲಿ ಎಲ್ಲಿ ಆಗಿದೆಯೋ! ಎಂದು ಸಂಶಯವೂ ಬರುತ್ತದೆ ಒಂದೊಂದು ಸಲ!

—ಸುಮತಿ



## ವೀರ ಸಾಧ್ವೀ ಶಿರೋಮಣಿ

# ಶ್ರೀ ತಿಮ್ಮಮ್ಮನವರ ಚರಿತ್ರೆಯು

ಲೇಖಕ:— ಶ್ರೀ. ನಾರಾಯಣ ಶ್ರೀನಿವಾಸ ರಾಜಪುರೋಹಿತ
ಇತಿಹಾಸ ಸಂಶೋಧಕ ಧಾರವಾಡ.

ತುರಡಗಿ ಗ್ರಾಮದ ತಪೋಧನರಾದ ಜ್ಯೋತಿಷಿ ಶ್ರೀ ನರಸಿಂಹಾಚಾರ್ಯರು ಹಾಗೂ ಅವರ ಧರ್ಮಪತ್ನಿಯರಾದ ಶ್ರೀಮತಿ ಚಂದ್ರಲಾದೇವಿಯರು ಪರಮಪಾವನ ಚರಿತೆಯುಳ್ಳವರು. ಇಂಥ ಸತ್ವಶಾಲಿಯಾದ ಈ ದಂಪತಿಗಳ ಮಗಳೇ ಸಾಧ್ವೀಮಣಿ ಶ್ರೀ. ತಿಮ್ಮಮ್ಮನವರು.

ಞ ಞ ಞ ಞ ಞ ಞ

ಹಿಂದಿನ ಸಂಚಿಕೆಗಳು ಅಂದರೆ ಜೂನ ಮತ್ತು ಜುಲೈ ತಿಂಗಳದ ಸಂಚಿಕೆಗಳಲ್ಲಿನ ನ್ಯಾಯಕ್ಕೆ ಗಲ್ಲು ಎಂಬ ನಾಟಕದ ಕಥಾ ಸಾರಾಂಶವನ್ನಾದರೂ ಇಲ್ಲೀ ಕೊಡಲಾಗಿದೆ.

# ನ್ಯಾಯಕ್ಕೆ ಗಲ್ಲು

ಲೇಖಕ:— ಎಮ್. ಸತ್ಯವಂತರಾವ ಬಿ.ಎಸ್‌ಸಿ.ಬಿ.ಎಲ್. ವಕೀಲ
ಬಳ್ಳಾರಿ.

ಸಮಶೀಲನು ಸಮತಾವಾದದ ವಿಚಾರಗಳಿಂದ ಕೂಡಿದ ಯುವಕ! ಸುತ್ತಲಿನ ದಾರಿದ್ರ್ಯ ಐಶ್ವರ್ಯಗಳ ಏರಿಳಿತಗಳನ್ನೂ ಅವುಗಳ ದುಷ್ಪರಿಣಾಮಗಳನ್ನೂ ಕಂಡು ಅವನು ತಳಮಳಿಸುವನು. ನಾಟಕದಲ್ಲಿ ಬರುವ ಭಾಗ್ಯವತಿಯೂ ಪದವೀಧರೆ, ಅವಳ ಮುಂದೊಂದು ಸಮಸ್ಯೆ! ತನ್ನ ಜೀವನದಲ್ಲಿ ನಿಜವಾದ ಪಾಲುಗಾರನಾಗಬಲ್ಲ ಸಮಶೀಲನನ್ನು ವರಿಸುವದೋ ಅಥವಾ, ಬಾಹ್ಯಕೊರತೆಗಳನ್ನೆಲ್ಲ ಪೂರೈಸಿ, ಐಶ್ವರ್ಯದಲ್ಲಿ ತೇಲಿಸಬಲ್ಲ ರತಿಲಾಲ ಶೇಠರನ್ನು ಮದುವೆಯಾಗುವದೋ!



ಧನ, ಕನಕಗಳಿಂದ ಅಮೃತತ್ವವು ದೊರೆಯಲಾರದು." ಪತಿವರ್ಯರು ಹೇಳಿದ ಈ ಉತ್ತರವನ್ನು ಕೇಳಿ, ವೀರ. ವೈರಾಗ್ಯಶಾಲಿನಿಯಾದ ಮೈತ್ರೇಯಿದೇವಿಯು ಧೀರೋದಾತ್ತವಾದ ವಾಣಿಯಿಂದ ನುಡಿದದ್ದೇನೆಂದರೆ:– "ಯಾವುದರಿಂದ ನನಗೆ ಅಮೃತತ್ವವು ಪ್ರಾಪ್ತವಾಗುವುದಿಲ್ಲವೊ, ಆ ಧನ, ಕನಕಗಳನ್ನು ತೆಗೆದುಕೊಂಡು ನಾನೇನು ಮಾಡಲಿ ? ಅವು ನನಗೆ ಬೇಕಿಲ್ಲ; ಅವುಗಳನ್ನೆಲ್ಲ ಚಿಕ್ಕ ಹೆಂಡತಿಗೆ ಕೊಟ್ಟು ಬಿಡಿರಿ. ಕೇವಲ ತಾವು ತಿಳಿದುಕೊಂಡಂಥ ಅಮೃತತ್ವವನ್ನು (ಎಂದರೆ ಮೋಕ್ಷವನ್ನು) ಪಡೆಯುವ ಸಾಧನವನ್ನೇ ನನಗೆ ಹೇಳಿರಿ." ಈ ತಮ್ಮ ಮಡದಿಯ ಮೋಕ್ಷದ ಉತ್ಕಟೇಚ್ಛೆಯ ಭಾಷಣವನ್ನು ಕೇಳಿ, ಶ್ರೀ ಯಾಜ್ಞವಲ್ಕ್ಯ ಮಹರ್ಷಿಗಳು ಆನಂದಭರಿತರಾದರು. ತನಗೆ ಸಮಾನ ಶೀಲೆಯಾದ ಹೆಂಡತಿಯನ್ನು ನೋಡಿ, ಗಂಡನಿಗೆ ಸಂತೋಷವಾಗುವುದು ಸ್ವಾಭಾವಿಕವಾಗಿದೆ ಆಗ ಈ ಮಹರ್ಷಿಗಳು ತಮ್ಮ ಈ ಹೆಂಡತಿಗೆ ಮೋಕ್ಷ ಸಾಧನವನ್ನು ಕುರಿತು ಉಪದೇಶ ಮಾಡಿದರು."

ಈ ನರಸಿಂಹಾಚಾರ್ಯರ ಮನೆತನದ ಕುಲದೇವತೆ ಸನ್ನತಿಕ್ಷೇತ್ರದ ಶ್ರೀ ಚಂದ್ರಲಾಪರಮೇಶ್ವರೀ ದೇವಿಯು; ಇಷ್ಟ ದೇವತೆ ತಿರುಮಲೆಯ ಕ್ಷೇತ್ರದ ಒಡೆಯನಾದ ಶ್ರೀ ವೆಂಕಟೇಶನು; ಎಂದರೆ ತಿರುಮಲೆರಾಯನು. ಆದುದರಿಂದಲೇ ನರಸಿಂಹಾಚಾರ್ಯರು ತಮ್ಮ ಈ ಹೆಣ್ಣು ಕೂಸಿಗೆ ೧೨ ನೆಯ ದಿವಸ ತೊಟ್ಟಿಲದಲ್ಲಿ ತಮ್ಮ ಇಷ್ಟ ದೇವತೆಯಾದ ಶ್ರೀ ತಿರುಮಲೆರಾಯನ ಹೆಸರನ್ನೇ ಇಟ್ಟರು. ಆದ್ದರಿಂದ ಈ ಕೂಸನ್ನು 'ತಿರುಮಲಾಂಬಾ[1]' ಎಂಬ ಹೆಸರಿನಿಂದ ಎಲ್ಲರೂ ಕರೆಯಲಾರಂಭಿಸಿದರು. ಮುಂದೆ ಕಾಲಾಂತರದಿಂದ ಉಚ್ಚಾರಸೌಲಭ್ಯಾರ್ಥವಾಗಿ ಈ ಹೆಸರು ಅಪಭ್ರಂಶಹೊಂದಿ, ತಿಮ್ಮಾಂಬಾ ಅಥವಾ ತಿಮ್ಮಮ್ಮಾ ಎಂಬ ರೂಪವನ್ನು ಹೊಂದಿತು. (ತಿರುಮಲಾಂಬಾ–ತಿಮ್ಮಾಂಬಾ–ತಿಮ್ಮಮ್ಮ) ಈ ತಿಮ್ಮಮ್ಮನು ಬಾಲಲೀಲೆಗಳಿಂದ ಸರ್ವರಿಗೂ ಆನಂದವನ್ನೀಯುತ್ತ ಶುಕ್ಲಪಕ್ಷದ ಬಿದಿಗೆಯ ಚಂದ್ರನಂತೆ ದಿನೇದಿನೇ ಬೆಳೆಯಲಾರಂಭಿಸಿದಳು.

ಈ ಮನೆಯಲ್ಲಿ ತಾಯಿ, ತಂದೆಗಳಿಬ್ಬರೂ ಧರ್ಮದಲ್ಲಿ ಅತಿಶಯ ನಿಷ್ಠೆಯುಳ್ಳವರಾಗಿದ್ದುದರಿಂದ ಅನೇಕ ವ್ರತವೈಕಲ್ಯಗಳನ್ನು ಬಹುಭಕ್ತಿ ಪುರಸ್ಸರವಾಗಿ ಅವರು ಆಚರಿಸುತ್ತಿದ್ದರು. ತಂದೆಯವರಾದ ನರಸಿಂಹಾಚಾರ್ಯರು ದಿನಾಲು ಭಾಗವತ, ಭಾರತಾದಿ ಪುರಾಣಗಳನ್ನು ಹೇಳುತ್ತಿದ್ದರು. "ತಾಯಿಯಂತೆ ಮಗು"

---

(೧) ವಿಜಯನಗರದ ಕೃಷ್ಣದೇವರಾಜನು (ಕ್ರಿ. ಶ. ೧೫೦೯-೧೫೩೦) ಪರಮಭಕ್ತಿಭಾವದಿಂದ ನೂತನವಾಗಿ ಶ್ರೀ ವೆಂಕಟೇಶಭಕ್ತಿಯನ್ನು ಸ್ವೀಕರಿಸಿದ್ದರಿಂದ ತನ್ನ ಮಗಳಿಗೆ "ತಿರುಮಲಾಂಬಾ" ಎಂಬ ಶ್ರೀ ವೆಂಕಟೇಶ ದೇವರ ಎಂದರೆ ತಿರುಮಲೆರಾಯನ ಹೆಸರನ್ನೇ ಇಟ್ಟದ್ದಾನೆ. ಈ ತಿರುಮಲಾಂಬಾದೇವಿಯನ್ನು ಸುಪ್ರಸಿದ್ಧ ಅಳಿಯ ರಾಮರಾಯನಿಗೆ ಮದುವೆ ಮಾಡಿಕೊಟ್ಟದ್ದನೆಂಬುದು ಇತಿಹಾಸ ಪ್ರಸಿದ್ಧವೇ ಇದೆ.

ಎಂಬ ಗಾದೆಯ ಮಾತಿನಂತೆ "ಪರಿಸ್ಥಿತಿಯ ಮಕ್ಕಳು ಮನುಷ್ಯರು" ಎಂಬ ಲೋಕೋಕ್ತಿಯು ನಿರ್ಮಾಣವಾಗಿದೆ. ಈ ಪ್ರಕಾರ ಈ ಮನೆತನದ ಪರಿಸ್ಥಿತಿಯು ಕೇವಲ ಧರ್ಮಮಯವಾಗಿದ್ದುದರಿಂದ ಬಾಲಿಕೆಯಾದ ಈ ತಿಮ್ಮಮ್ಮನ ಹೃದಯದ ಮೇಲೆ ಈ ಪರಿಸ್ಥಿತಿಯು ಒಳ್ಳೆಯ ಧಾರ್ಮಿಕ ಪ್ರಭಾವವನ್ನು ಬೀರಿತು! ಆದುದರಿಂದಲೇ ಈ ತಿಮ್ಮಮ್ಮನು ಬಾಲ್ಯದಲ್ಲಿ ತನ್ನ ಕಾಲದ ಚಿಕ್ಕ ಬಾಲಿಕೆಯರೊಡನೆ ಅಂಥಿಂಥ ಆಟಗಳನ್ನಾಡುತ್ತ ಕುಳಿತುಕೊಳ್ಳದೆ, ದೇವರ ಮೂರ್ತಿಗಳನ್ನು ಇಟ್ಟುಕೊಂಡು, ತಾನೊಬ್ಬಳೇ ಆಟವನ್ನಾಡುತ್ತಿದ್ದಳು. ಎಂದರೆ ದೇವರನ್ನು ಮಾಡಿ ಕುಳ್ಳಿರಿಸಿ, ಅದರ ಮುಂದೆ ರಂಗವಲ್ಲಿಗಳನ್ನು ಹಾಕುವುದು, ದೇವರ ಹಾಡುಗಳನ್ನು ಹೇಳುತ್ತ ಆ ದೇವರಿಗೆ ಆರತಿಯನ್ನು ಮಾಡುವುದು; ತಾನು ಪುರಾಣಗಳಲ್ಲಿ ಕೇಳಿದ ದೇವರ ಕಥೆಗಳನ್ನು ತನ್ನ ಗೆಳತಿಯರ ಮುಂದೆ ಹೇಳುವುದು; ಹಾಗೂ ತನ್ನ ತಂದೆಯವರು ಭಾಗವತ, ಭಾರತಾದಿ ಪುರಾಣಗಳನ್ನು ಹೇಳುವಾಗ್ಗೆ ಅಲ್ಲಿ ಕುಳಿತುಕೊಂಡು, ಆ ಪುರಾಣವನ್ನು ಭಕ್ತಿಪುರಸ್ಸರವಾಗಿ ಕೇಳುವುದು ಈಕೆಯ ಬಾಲ್ಯದ ಕಾರ್ಯಕ್ರಮಗಳಾಗಿದ್ದವು. "ಮೂರು ವರ್ಷದ ಬುದ್ಧಿ ನೂರು ವರ್ಷದ ತನಕ ಎಂಬ ಗಾದೆಯ ಮಾತಿನಂತೆ ಈ ತಿಮ್ಮಮ್ಮನ ಉತ್ಕಟವಾದ ದೇವಭಕ್ತಿಯು ಬಾಲ್ಯದಿಂದ ಆಮರಣಪರ್ಯಂತ ಸ್ಥಿರವಾಗಿ ಇದ್ದಿತು. ವೇ॥ ನರಸಿಂಹಾಚಾರ್ಯರು ತಮ್ಮ ಮಧ್ವಮತಕ್ಕನುಸರಿಸಿ, ತಮ್ಮ ಈ ಮಗಳಿಗೆ ಜಗನ್ನಾಥರಾಯರ "ಹರಿಕಥಾಮೃತಸಾರ" ಗ್ರಂಥದ ಕನ್ನಡ ಪದ್ಯಗಳೆನ್ನೆಲ್ಲ ಸಂಪೂರ್ಣವಾಗಿ ಕಲಿಸಿದರಲ್ಲದೆ ಪುರಂದರದಾಸ, ಕನಕದಾಸ, ವಿಜಯದಾಸ ಪ್ರಭೃತಿ ದಾಸಕೂಟದವರ ಮುಖ್ಯ ಮುಖ್ಯ ತತ್ವಪದಗಳನ್ನೂ ಕಲಿಸಿದರು. ತಾಯಿಯಾದ ಚಂದ್ರಕ್ಕನು ತನ್ನ ಪ್ರಿಯ ಮಗಳಾದ ಈ ತಿಮ್ಮಮ್ಮನಿಗೆ ಗೃಹಕೃತ್ಯಗಳನ್ನು ಅಚ್ಚುಕಟ್ಟಾಗಿಯೂ ಓರಣದಿಂದಲೂ ಹೇಗೆ ಮಾಡಬೇಕೆಂಬುದನ್ನು ಚೆನ್ನಾಗಿ ಕಲಿಸಿದಳು. ಈ ಪ್ರಕಾರ ಉತ್ತಮವಾದ ಗೃಹಶಿಕ್ಷಣವನ್ನು ಪಡೆದು ತಿಮ್ಮಮ್ಮನು ವಿವಾಹಕ್ಕೆ ಸುಸಂಸ್ಕೃತಳಾದ ಕನ್ಯೆಯಾದಳು.

---

# ೨ ನೆಯ ಅಧ್ಯಾಯ

## ವಿವಾಹ

—◆—

ಪಾರಸ್ಕರ ಗೃಹ್ಯಸೂತ್ರದಲ್ಲಿ ಪ್ರಥಮ ಕಾಣ್ಡದ ೪ನೆಯ ಕಣ್ಡಿಕೆಯಲ್ಲಿ ಹೀಗೆ ಹೇಳಿದೆ:— "ಎಲೈ ಕನ್ಯೆಯೇ! ನೀನು ಹುಟ್ಟಿದಂದಿನಿಂದ ಸೋಮನು ಎಂದರೆ ಚಂದ್ರನು ೨ತ್ತಿ ವರ್ಷ ನಿನ್ನ ಪತಿಯಾಗುತ್ತಾನೆ. ಆಬಳಿಕ ೨ತ್ತಿ ವರ್ಷ ಗಂಧರ್ವನು ಎಂದರೆ ಸೂರ್ಯನು ನಿನ್ನ ಪತಿಯಾಗುತ್ತಾನೆ. ತದನಂತರ ೨ತ್ತಿ ವರ್ಷ ಅಗ್ನಿಯು ನಿನ್ನ ಪತಿಯಾಗುತ್ತಾನೆ. ಈ ರೀತಿ ೬ತ್ತಿ ವರ್ಷಗಳು ನಿನಗೆ ಪ್ರಾಪ್ತವಾದ ಬಳಿಕ ಮನುಷ್ಯನು ನಿನ್ನ ಪತಿಯಾಗುತ್ತಾನೆ." ಹೆಣ್ಣುಮಗಳಿಗೆ ೮ನೆಯ ವರ್ಷಕ್ಕೆನೇ 'ಕನ್ಯೆ' ಎಂಬ ಹೆಸರು[೧] ಪ್ರಾಪ್ತವಾಗುತ್ತದೆ. ಪ್ರಾಚೀನಕಾಲದಲ್ಲಿ ಗೃಹ್ಯಸೂತ್ರಕ್ಕನುಸರಿಸಿ, ಹೆಣ್ಣುಮಗಳಿಗೆ ೮ನೆಯ ವರ್ಷಕ್ಕೇನೇ ವಿವಾಹ ಮಾಡುತ್ತಿದ್ದರೆಂಬುದು, ವೈದಿಕ ವಿವಾಹ ಪ್ರಯೋಗದಲ್ಲಿಯ ಕೆಳಗಿನ ವಾಕ್ಯದಿಂದ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗುತ್ತದೆ.

ವಿವಾಹ ಸಮಾರಂಭದಲ್ಲಿ ಕನ್ಯೆಯ ತಂದೆಯು, ವರನ ತಂದೆಗೆ ಕೂಸನ್ನು (ಎಂದರೆ ಕನ್ಯೆಯನ್ನು) ಒಪ್ಪಿಸುವಾಗ್ಗೆ ಹೀಗೆ ಹೇಳುತ್ತಾನೆ:—

ಅಷ್ಟವರ್ಷಾ ತ್ವಿಯಂ ಕನ್ಯಾ ಪುತ್ರವತ್ಪಾಲಿತಾ ಮಯಾ ॥
ಇದಾನೀಂ ತವ ಪುತ್ರಾಯ ದತ್ತಾ ಸ್ನೇಹೇನ ಪಾಲ್ಯತಾಮ್ ॥

(ಅರ್ಥ:— ಈ ಕನ್ಯೆಯನ್ನು ಎಂಟು ವರ್ಷಗಳ ವರೆಗೆ ನಾನು ಗಂಡುಮಗನಂತೆ ಸಂರಕ್ಷಿಸಿದ್ದೇನೆ. ಈಗ ನಿನ್ನ ಮಗನಿಗೆ ಈಕೆಯನ್ನು ಮದುವೆಮಾಡಿ ಕೊಟ್ಟಿದ್ದೇನೆ ಈ ನಿನ್ನ ಸೊಸೆಯನ್ನು ಮಮತೆಯಿಂದ ಕಾಪಾಡಬೇಕು.)

ವೈದಿಕ ಧರ್ಮಕ್ಕನುಸರಿಸಿ ಆಚರಿಸುತ್ತಿದ್ದ ವೇದ, ಶಾಸ್ತ್ರಸಂಪನ್ನ ನರಸಿಂಹಾಚಾರ್ಯರು ತಮ್ಮ ಪಾರಸ್ಕರ ಗೃಹ್ಯಸೂತ್ರಕ್ಕನುಸಾರವಾಗಿ ತಮ್ಮ ಮಗಳಾದ ಕುಂಕುಮ ಸೌಭಾಗ್ಯ ಕಾಂಕ್ಷಿಣಿಯಾದ ತಿಮ್ಮಮ್ಮನ ವಿವಾಹವನ್ನು ಈಕೆಯ ೮ನೆಯ ವರ್ಷದ ವಯಸ್ಸಿಗೇನೇ ಮಾಡತಕ್ಕದ್ದೆಂದು ಆಲೋಚಿಸಿ, ತಮ್ಮ ತುರಡಗಿ ಗ್ರಾಮದಿಂದ ೩ ಮೈಲುಗಳ ದೂರದಲ್ಲಿರುವ ಮುದ್ದಲಗುಂದಿ ಗ್ರಾಮನಿವಾಸಿಗಳಾದ ಶ್ರೀಮಾನ್ ವೆಂಕಟನರಸಿಂಹ ನಾಯಕ ಚಿನಿವಾಲ ಇವರ ಪುತ್ರನಾದ ಚಿ॥ ಅಶ್ವತ್ಥನೆಂಬುವನನ್ನು ವರನನ್ನಾಗಿ ನಿಶ್ಚಯಿಸಿದರು. ಈ ನಾಯಕರ ಗೋತ್ರ ಕಾಶ್ಯಪ; ವೇ॥ ನರಸಿಂಹಾಚಾರ್ಯರ ಗೋತ್ರ ಭಾರದ್ವಾಜ. ಈ ಚಿನಿವಾಲ ವೆಂಕಟನರಸಿಂಹ

---

(೧) ಅಷ್ಟವರ್ಷಾ ಭವೇತ್ಕನ್ಯಾ ನವವರ್ಷಾ ತು ರೋಹಿಣೀ ॥
ದಶವರ್ಷಾ ಭವೇದ್ಗಾರೀ ಅತ ಊರ್ಧ್ವಂ ರಜಸ್ವಲಾ ॥

ನಾಯಕರೂ ಸಹ ಕಾಣ್ವಶಾಖೀಯ ಮಾಧ್ವಬ್ರಾಹ್ಮಣರೆಂಬುದನ್ನು ಹೊಸದಾಗಿ ಹೇಳುವ ಕಾರಣವೇ ಇಲ್ಲ. ಈ ಚಿನಿವಾಲರ ಮನೆತನದ ಕುಲದೇವತೆ, ಕೊಪ್ಪರ ಕ್ಷೇತ್ರದ ಶ್ರೀ ನರಸಿಂಹ ದೇವರು; ಇಷ್ಟದೇವತೆ ಶ್ರೀ ವೆಂಕಟೇಶ ದೇವರು. ಆದುದರಿಂದಲೇ ಇಷ್ಟದೇವತೆಯ ಹೆಸರನ್ನೂ ಕುಲದೇವತೆಯ ಹೆಸರನ್ನೂ ಜೋಡಿಸಿ ತಮ್ಮ ಗಂಡುಮಗನಿಗೆ "ವೆಂಕಟನರಸಿಂಹ" ಎಂಬ ಹೆಸರನ್ನು ಇಡುವ ಸಂಪ್ರದಾಯವು, ಈ ಚಿನಿವಾಲರ ಮನೆತನದಲ್ಲಿ ಹೆಚ್ಚು ಪ್ರಚಾರದಲ್ಲಿ ಬಂದಿದೆ.

ಇತ್ತ ತುರಡಗಿ ಗ್ರಾಮದಲ್ಲಿ ವೇ|| ನರಸಿಂಹಾಚಾರ್ಯರು ಮತ್ತು ಇವರ ಪತ್ನಿಯರಾದ ಸೌ|| ಚಂದ್ರಕ್ಕನು ಇಷ್ಟೇ ಅಲ್ಲ, ಇವರ ಆಪ್ತರಿಷ್ಟರೆಲ್ಲರೂ ಸಹ ವಿವಾಹ ಸಮಾರಂಭದ ಸಕಲ ಸಾಮಗ್ರಿಗಳನ್ನು ಸಿದ್ಧಪಡಿಸುವುದರಲ್ಲಿ ತೊಡಗಿದರು. ಅತ್ತ ಮುದ್ದಲಗುಂದಿ ಗ್ರಾಮದಲ್ಲಿ ಶ್ರೀಮಾನ್ ವೆಂಕಟನರಸಿಂಹ ನಾಯಕರು ಹಾಗೂ ಅವರ ಹೆಂಡಂದಿರಾದ ಸೌ|| ಲಕ್ಷ್ಮೀಬಾಯಿಯವರೂ ವಿವಾಹಕ್ಕೆ ಬೇಕಾಗುವ ಎಲ್ಲ ಸಾಹಿತ್ಯಗಳನ್ನೂ ಶೀಘ್ರವಾಗಿ ತಯಾರಿಸಿಕೊಂಡು, ವಿಪ್ರ ಶ್ರೇಷ್ಠರನ್ನೂ ಬಂಧುಬಳಗದವರನ್ನೂ ಸಂಗಡ ಕರೆದುಕೊಂಡು, ಮಂಗಲಕರವಾದ ವಸ್ತುಗಳೊಡನೆ ಹೊರಟು, ತುರಡಗಿ ಗ್ರಾಮದ ಸೀಮಾಂತಕ್ಕೆ ಬಂದರು.

ಬೀಗರು ತಮ್ಮ ಗ್ರಾಮದ ಸೀಮಾಂತಕ್ಕೆ ಬಂದಿದ್ದಾರೆಂಬ ಸುದ್ದಿಯು ವೇ|| ನರಸಿಂಹಾಚಾರ್ಯರಿಗೆ ತಿಳಿದ ಕೂಡಲೇ ಅವರು ಸಹ ಕುಟುಂಬ ಸಹಪರಿ ಆಪ್ತ-ಇಷ್ಟರನ್ನೂ ಊರೊಳಗಿನ ಸದ್ಗೃಹಸ್ಥರನ್ನೂ ಸದ್ಗೃಹಿಣಿಯರನ್ನೂ ಸಂಗಡ ಕರೆದುಕೊಂಡು, ಅನೇಕ ಮಂಗಲವಾದ್ಯ ಘೋಷಗಳೊಡನೆ ಬಹು ಸಂಭ್ರಮದಿಂದ ಇದಿರ್ಗೊಳ್ಳುವುದಕ್ಕೆ ಹೊರಟರು. ಅಲ್ಲಿಗೆ ಹೋದಬಳಿಕ ಬೀಗರು ಒಬ್ಬರಿಗೊಬ್ಬರು ಆಲಿಂಗನ ಕೊಟ್ಟು ಭೆಟ್ಟಿಯಾದರು. ತದನಂತರ ಕನ್ಯಾಪಿತನಾದ ನರಸಿಂಹಾಚಾರ್ಯನು ಪತ್ನಿ ಸಹವರ್ತಮಾನ ವರನ ಪೂಜೆಯನ್ನು ಪಾದಪ್ರಕ್ಷಾಲನ ಪೂರ್ವಕ ವಸ್ತ್ರಾದಿಗಳಿಂದ ಮಾಡಿದನು. ಇದಲ್ಲದೆ ವರಪಕ್ಷದವರಿಗೆಲ್ಲರಿಗೂ ಅಲ್ಪೋಪಹಾರವನ್ನು ಏರ್ಪಡಿಸಿ, ಆತಿಥ್ಯವನ್ನು ಚೆನ್ನಾಗಿ ನೆರವೇರಿಸಿದನು.

ಈ ಪ್ರಕಾರ 'ಸೀಮಾಂತ ಪೂಜನ' ವಾದ ಬಳಿಕ ವರಮೂರ್ತಿಯಾದ ಚಿ|| ಅಶ್ವತ್ಥರಾಯನು(೧) ಅಶ್ವಾರೂಢನಾಗಿ ಹೊರಡಲು, ಮಂಗಲವಾದ್ಯಗಳು ಧ್ವನಿ

(೧) ಶ್ರೀ. ವೆಂಕಟನರಸಿಂಹ ನಾಯಕ ಚಿನಿವಾಲ ಇವರ ಮನೆತನದ ಕುಲದೇವತೆ, ಕೊಪ್ಪರ ಕ್ಷೇತ್ರದ ಶ್ರೀ ನರಸಿಂಹ ದೇವರು ಎಂದು ಹಿಂದೆಯೇ ಹೇಳಿದ್ದೇವೆ. ಈ ಕೊಪ್ಪರ ಕ್ಷೇತ್ರದಲ್ಲಿ ಶ್ರೀ ನರಸಿಂಹ ದೇವರು ಹೀಗೆ ಇದ್ದಾನೆ:— ಕೃಷ್ಣಾನದಿಯ ಕೇವಲ ದಂಡೆಯ ಮೇಲೆ ಅಶ್ವತ್ಥನಾರಾಯಣ ವೃಕ್ಷದ ಕಟ್ಟೆಯಿದೆ. ಇದರಲ್ಲಿ ಅರಳಿಯ ಮರ+ಬೇವಿನಮರ ಒಂದಕ್ಕೊಂದು ಜೊತೆಯಲ್ಲಿ ಹುಟ್ಟಿಬೆಳೆದು ನಿಂತಿರುತ್ತವೆ. ಈ ವೃಕ್ಷಗಳ ಹೊದರಿನಲ್ಲಿಯೇ ಶಾಲಗ್ರಾಮಗಳಿದ್ದು, ಅವುಗಳಲ್ಲಿ ಒಂದು ಶ್ರೀ ನರಸಿಂಹ ಶಾಲಗ್ರಾಮವಿದೆ. ಇದೇ ಶ್ರೀ. ಅಶ್ವತ್ಥ ನರಸಿಂಹ ದೇವರು. ಅದ್ದರಿಂದಲೇ ಶ್ರೀ. ವೆಂಕಟನರಸಿಂಹ ನಾಯಕರು ತಮ್ಮ ಈ ಪುತ್ರನಿಗೆ 'ಅಶ್ವತ್ಥ ನರಸಿಂಹ' ಎಂಬ ಹೆಸರನ್ನಿಟ್ಟಿದ್ದಾರೆ. ಇದರ ಸಂಕ್ಷಿಪ್ತ ರೂಪವೇ 'ಅಶ್ವತ್ಥ' ಎಂಬ ಹೆಸರು.

**ಸಮಶೀಲ:—** ವ್ಯಾವಹಾರಿಕ ವಿಚಾರವನ್ನು ಮಾಡುವದು ಸಾಮಾನ್ಯ ಜನರ ಲಕ್ಷಣವು; ನಿನ್ನಂಥ ನಾರೀಮಣಿಯು ಸಾಮಾನ್ಯ ಜನರಿಗೆ ದಾರಿ ತೋರ ಬೇಕೇ ಹೊರತು, ಸತ್ಯದ ದಾರಿಯನ್ನು ಹೇಡಿತನದಿಂದ ಬಿಡಕೂಡದು. ಸತ್ಯದ ದಾರಿಯನ್ನು ಸಾಮಾನ್ಯರ ದಾರಿಯನ್ನಾಗಿ ಮಾಡಲು ಕಷ್ಟನಷ್ಟಗಳನ್ನು ಸಹನಮಾಡಿ ಪ್ರಯತ್ನಿಸಬೇಕು. ಉಜ್ವಲ ಭಾವನೆಗಳನ್ನು ದಬ್ಬಬೇಡ. ಇನ್ನು ಮೇಲೆ ನೀನು ಸ್ವತಂತ್ರವಾಗಿ ವಿಚಾರಮಾಡು. ನಾನು ಹೋಗಿಬರುವೆನು.

( **ಹೋಗುವನು** )

**ಭಾಗ್ಯವತಿ:—** [ಸ್ವಗತ] ನನ್ನ ಅಂತಃಕರಣದ ಪ್ರೀತಿ ಒಂದು ಕಡೆ. ಮನಸ್ಸಿನ ಲಾಲಸೆಯು ಇನ್ನೊಂದು ಕಡೆ! ಸುಖಸಂಪತ್ತು ಒಂದು ಕಡೆ, ಬಡವರ ಮೇಲಿನ ಪ್ರೀತಿಯಿಂದ ತನ್ನ ಇದ್ದ ಒಂದು ಕೋಟನ್ನು ತೆಗೆದು ಕೊಡುವ ಸದ್ಗುಣ ಮತ್ತು ಪರರ ಪರಿಶ್ರಮದ ಮೇಲೆ ತನ್ನ ಸುಖವನ್ನು ಬಯಸದಿರುವ ತ್ಯಾಗಬುದ್ಧಿ ಇವು ಇನ್ನೊಂದು ಕಡೆ! ನಾನೇನು ಮಾಡಲಿ?

[ಹೈ ದಃನಿಯಾಮಿ ಪಾಪಗುಲಾಮಿ ಎಂಬಂತೆ]

ನಿಶ್ಚಯ ರಹಿತ ನೀರಸ ನನ್ನೀ।
ಬದುಕೇ ಬಾಳಲು ಬಲು ಕಠಿಣ।
ಸುಖಸಂಪದ ಬಿಡೆನು ॥ ೧ ॥

ಸಂಪದ ನೋಡಲು ಪ್ರೇಮವೇ ಸಿಗದು।
ಸಮಗುಣ ಶೀಲನ ಪ್ರೇಮವು ಇಲ್ಲದೆ,।
ಬದುಕೇ ಬಲು ಕಠಿಣ ॥ ೨ ॥

[ ಪ ರ ದೆ ]

( ೧ ನೆಯ ಅಂಕ ಸಮಾಪ್ತ )



[ ಸ್ಥಳ:—ಭೀಮಪ್ಪನ ಮನೆ: ಸಾಯಂಕಾಲದ ಏಳು ಹೊಡೆದಿರಬೇಕು. ರಾಮಕ್ಕ ಹಾಸಿಗೆಯ ಮೇಲೆ ಮಲಗಿರುವಳು. ತೆರೆಯು ಏಳುವದು ]

**ಹುಡುಗರು:—** ಆವ್ವಾ! ಆವ್ವಾ! ಬಾನಾ ನೀಡವ್ವಾ ಪಟ್ಟೆ ಹಸ್ದೈತಿ. ನಿನ್ನೆ ಬೆಳಗ್ನಿಂದ ಬಾನಿಲ್ಲ. ಪಟ್ಟೆ ಹಸ್ದೈತಿ! ಆವ್ವಾs ಬಾನಾ ನೀಡು.

[ ಮಕ್ಕಳು ಅಳುವರು ]

**ರಾಮಕ್ಕ:—** ನನ್ನ ಜೀವ ಒಂದು ಉಳಿದೈತಿ ಆದನ್ನು ತಿನ್ರಿ, ನಾನs ಆಡದು ಹದ್ನೈದು ದಿವಸಾತು. ಸ್ವಾಮ್ಯಾರು ಸಂಬಳ ಮುರುಕೊಂಡಾರ. ಕೈಯಾಗ ಕಾಸಿಲ್ಲ. ಆತ ದುಡಿದಿದ್ದೆಲ್ಲ ಆತನ ಯೆಂಡಕ್ಕs ಸರಿಹೋಗತೈತಿ. ಈ ಮಕ್ಕಳ ಭಾರs, ಮನಿಕೆಲ್ಸs, ಹೊರಗಿನ ಕೆಲ್ಸ, ಗಂಡನ ಬಡ್ತs, ಮ್ಯಾಲೆ ಆರಾಮು ಇಲ್ದಾಂಗ ಕಾಟ ದೇವ್ರsss ಸಾಕಾಗೈತಿ. ಯಾಕ ಉಟ್ಟಿಸಿದೀ ಈ ಜೀವನ್ನ ದುಕ್ಕಪಡಸಲಿಕ್ಕೆ ಬದಕಿಸಿಟ್ಟೆಯಾ? ನೀನೇನು ಮಾಡೀs! ನಾನು ಮಾಡಿದ ಕರ್ಮಕ್ಕs!!

**ಭೀಮಪ್ಪಾ:—** [ ಕುಡಿದು ಕೈಯ್ಯಾಗ ಹೆಂಡದ ಬಾಟ್ಲಯನ್ನು ಹಿಡಿದುಕೊಂಡು ಹಾಡುತ್ತ ಬರುವನು. ]

**ಹಾಡು—**

ಓಹೋ ಏನೇಳ್ಲಿ ಕುಡಿತದ ಮಜವಾ
ಓಹೋ ಏನೇಳ್ಲಿ ಹೆಂಡದೊೀಳ್ ಮಜವಾ
ಓಹೋ ಏನೇಳ್ಲಿ ಸಂತೋಸದ ಮಜವಾ
ಕೈಕಾಲ ನೋಯ್ವುದು ಮೈಬೇನೆಯಿಕ್ಕುವುದು
ಅಯ್ಯೊ ಎಂದು ಕೂಗುವುದು
ಇಂಥ ಶ್ರಮವನ್ನು ಕಳೆವುದು ಏನೇಳ್ಲಿ.... ॥ ೧ ॥

ಬಹಳ ಬಡವರು ಮತ್ತೆ ದೈವುಳ್ಳವರು
ಕಾಲವನು ಸುಖದಿಂದ ಕಳೆಯುವರು
ಇದರಿಂದ ಏನೇಳ್ಲಿ.... ॥ ೨ ॥

" ಕುಡಿಯುವುದು ಬಿಡು " ಎಂದು ಬಡಕೊಳ್ಳುವರು ತಾವು
ಬಡವರ ದಣಿವನು ಕುಡಿಯುವದೆ
ಕಳೆಯುವದು ಏನೇಳ್ಲಿ.... ॥ ೩ ॥

[ ಕುಡಿಯುತ್ತ ಮನೆಯೊಳಗೆ ಬರುವನು ]

ಹುಡುಗರನ್ನು ಯಾಕ ಅಳಸ್ತಿಯು. ನನಗೆ ಹುಡುಗರಿಗೆ ಬಾನಾ ನೀಡು. ಎಳು ಏ ಹುಚ್ಚು ಮುಂಡಿ ಹೂಂ! ಏಳು. [ ಹೆಂಡತಿಯಾದ ರಾಮುಕ್ಕನನ್ನು ಹೊಡೆಯುವನು. ]

ರಾಮುಕ್ಕ:— ಮನ್ಯಾಗ ಏನೈತೀ ಅಂತ ಬಾನಾ ನೀಡಲಿ. ನೀನು ದುಡಿದದ್ದೆಲ್ಲಾ ಹೆಂಡದ ಪಾಲಾತು. ನನ್ನ ಕೈಯಾಗಿನ ಕಡಗಾ ಕೊನಿಗೆ ನನ್ನ ತಾಳೀ ಸಾಮಾನ ಎಲ್ಲಾನು ಹೋದುವು. ಕೈಯಾಗ ಕರಿ ಧಾರಾ ಕಟ್ಟಿಕೊಂಡು, ಕೊಳ್ಳಾಗ ಕರಿಮಣಿ ಕಟ್ಟಿಕೊಂಡು ಕುಂತೀನಿ. ಈ ಹಾಳು ಬಂಬೈಗೆ ಬಂದಾಗಿನಿಂದ ಇದೇ ಸುಕ.

ಭೀಮಪ್ಪ:— [ ಸಿಟ್ಟಿಗೆದ್ದು ] ‘ ಏ ಹುಚ್ಚು ಮುಂಡಿ ಎಷ್ಟು ಮಾತಾಡ್ತಿಯೇ ಬಂದು ಬಾನಾ ಹಾಕೂ ಅಂದ್ರ ಹಾಕ್ತಿಯೋ ಇಲ್ಲೋ ಇನ್ನೊಂದು ಬೇಕೇನು. [ ಮತ್ತೆ ಹೊಡೆಯುವನು. ರಾಮುಕ್ಕ ಮತ್ತು ಅವನ ಮಕ್ಕಳು ಅಳುವವು. ]

[ ಸಮಶೀಲ ಮತ್ತು ಡಾಕ್ಟರರು ಅದೇ ರಸ್ತೆಯಿಂದಾಗಿ ಬರುವರು. ಭೀಮಪ್ಪನು ಹೊಡೆಯುವದನ್ನು ಕೇಳುವರು. ]

ಸಮಶೀಲ:— ಯಾವನೋ ಒಬ್ಬ ಕೂಲಿಕಾರನು ಕುಡಿದು ತನ್ನ ಹೆಂಡತಿಯನ್ನು ಹೊಡೆಯುತ್ತಿದ್ದ ಹಾಗೆ ಕಾಣಿಸುತ್ತದೆ. ನಮ್ಮ ‘ Walk ’ ಈಗಿರಲಿ. ಅಲ್ಲಿಗೆ ಹೋಗಿ ನೋಡೋಣ

ಡಾಕ್ಟರರು :— [ ಯಾವ ಭಾವನೆಗೂ ಒಳಗಾಗದೆ] ಅದೇನು ದೊಡ್ಡ ವಿಶೇಷ ? ಕೂಲಿಕಾರರು ಇದ್ದಲ್ಲಿ ಕುಡುಕತನ, ಕುಡುಕತನವಿದ್ದಲ್ಲಿ ಬಡದಾಟ ! ನಮಗೇಕೆ ಬೇಕು ಅದರ ಉಸಾಬರಿ ? ನಮ್ಮ ಹಾದಿಯಿಂದ ನಾವು ಹೋಗೋಣ.

ಸಮಶೀಲ:— ಹೋಗಿ ನೋಡೋಣ ನಡೆ, ನಮ್ಮಿಂದ ಏನಾದರೂ ಪ್ರಯೋಜನವಾದರೆ..........’

[ ಇಬ್ಬರೂ ಒಳಗೆ ಹೋಗುವರು. ಒಳಗೆ ಹೋಗಿ ಭೀಮಪ್ಪನ ಕಡೆಗೆ ತಿರುಗಿ ]

ಏನು ಗಲಾಟೆಯಿದು ?

ಭೀಮಪ್ಪ:— ‘ ಏನಿಲ್ಲ ಬುದ್ಧಿ. ನಿಮ್ಮುಂದೆ ಸುಳ್ಳು ಹೇಳಾಕಿಲ್ಲ ಬುದ್ಧಿ. ನಿಮ್ಮ ಪಾದದ ಸಾಕ್ಷಿ. ಇನ್ಮುಂದೆ ಈ ಕುಡುಕತನ ಬಿಟ್‌ಬುಡತೇನ್ ಬುದ್ಧಿ. ಮನ್ಯಾಗ ಬಾನಿಲ್ಲ ಬುದ್ಧಿ.

ಡಾಕ್ಟರ್:— ನಿನ್ನ ಹೆಂಡತಿ ಹಡೆದಹಾಗೆ ಕಾಣುತ್ತೆ. ಅವಳನ್ನು ಸರಕಾರಿ ಆಸ್ಪತ್ರಿಗೆ ಏಕೆ ಕಳಿಸಲಿಲ್ಲ ಹೆರಿಗೆಗೆ ?

ಭೀಮಪ್ಪ:— ನಮ್ಮನ್ಯಾರು ಕೇಳ್ತಾರ್ ಬುದ್ಧೀ ಅಸ್ಪತ್ರ್ಯಾಗ. ಮನ್ಯಾಗಿನ ಕಿಂತಿ ಜಾಸ್ತಿ ಆಗ್ತೈತಿ. ಅಲ್ಲಿ ಖರ್ಚ್ಚಾ, ಅವರ ಕೈ ಇವರ ಕೈ ಬಿಸಿ ಮಾಡಿದರೇನೆ ಔಸುದ್ಯಾ ಬುದ್ಧಿ ! ಇಲ್ಲದಿದ್ದರ ನಮ್ಮ ಹೊಲಸಿನಾಗ ನಾವು ಬಿದ್ದಿರಬೇಕು ಬುದ್ಧಿ. ಬಡವರು ಎಲ್ಲಿದ್ದರೇನು ಬುದ್ಧಿ ?

**ಸಮಶೀಲ:—** [ ಡಾಕ್ಟರ್‌ರಿಗೆ ] ನೀವು ಇವರಿಗೆಲ್ಲಾ ಉಚಿತಾರ್ಥವಾಗಿ ಔಷಧವನ್ನು ಕೊಡಿ.

**ಡಾಕ್ಟರ್:—** ಹೀಗೆ ಹಡೆದವರಿಗೆಲ್ಲ ಉಚಿತಾರ್ಥವಾಗಿ ಔಷಧವನ್ನು ಕೊಟ್ಟರೆ ಡಾಕ್ಟರರೂ ಬೂದಿ ಹಚ್ಚಿಕೊಂಡು ಹೋಗಬೇಕಾಗುವುದು. ಅದರೊಳಗೆ "ಮಾಲ್‌ಥೂಸ" ಹೇಳಿದ ಸಂತತಿ ನಿರೋಧಕ ತತ್ವದ ಜ್ಞಾನವೇ ಇಲ್ಲ ಈ ಬಡವರಿಗೆ. ಮಕ್ಕಳ ಸಂಖ್ಯೆ ಬೆಳೆದ ಹಾಗೆ ಬಡತನವೂ ಹೆಚ್ಚುವುದು.

**ಸಮಶೀಲ:—** [ ಸ್ವಲ್ಪ ಸಿಟ್ಟಿಗೆದ್ದು ] ನಿನ್ನ "ಮಾಲ್‌ಥೂಸ"ನ ಸಂತತಿ ನಿರೋಧಕ ತತ್ವದಷ್ಟು ಬುದ್ಧಿಹೀನ ತತ್ವವು ಅರ್ಥಶಾಸ್ತ್ರದಲ್ಲಿ ಮತ್ತಾವುದೂ ಇರಲಿಕ್ಕಿಲ್ಲ. ಒಂದು ವ್ಯಕ್ತಿಯು ತಾನು ಎಷ್ಟು ಉಪಯೋಗಿಸಬಲ್ಲನೋ ಅದರ ಸಾವಿರಾರು ಪಟ್ಟು ಸಂಪತ್ತಿಯನ್ನು ಯಂತ್ರಸಹಾಯದಿಂದ ನಿರ್ಮಾಣ ಮಾಡಬಲ್ಲನು. ಹೀಗಿರಲು ಮಕ್ಕಳ ಸಂಖ್ಯೆ ಬೆಳೆದ ಹಾಗೆ ಬಡತನವು ಕಡಿಮೆಯಾಗುವುದೆ ವಿನಃ ಅದು ಎಂದಿಗೂ ಹೆಚ್ಚಾಗಲಿಕ್ಕಿಲ್ಲ. ಬಡತನ ಹೆಚ್ಚುವುದು ನಿಮ್ಮ ಈ ಸುಲಿಗೆಯ ಸಮಾಜದಿಂದಾಗಿ. ಸುಲಿಗೆಯ ಈ ಪರಿಣಾಮವನ್ನು ಸೂಳೆಯು ಪಾಪ ಸನ್ಯಾಸಿಯ ಮೇಲೆ ಅಂದ ಹಾಗೆ ಬಡವರ ತಲೆಯ ಮೇಲೆ ಏಕೆ ತಿಕ್ಕುವಿರಿ? ಸುಲಿಗೆ ಖೋರ ವರ್ಗಗಳಿಗೆ ಅನುಕೂಲವಾಗುವ ಹಾಗೆ ರಚಿಸಿರುವನು "ಮಾಲ್‌ಥೂಸ" ತನ್ನ ಸಿದ್ಧಾಂತವನ್ನು.

**ಡಾಕ್ಟರ್:—** [ರಾಮಕ್ಕನ ಹತ್ತಿರ ಹೋಗಿ ಮನೆಯಲ್ಲಿ ಸುತ್ತುಮುತ್ತು ನೋಡಿ] ಥೂ! ಥೂ!! ಥೂ!!! ಈ ಮನೆಯೆಂದರೆ ಭೂಲೋಕದಲ್ಲಿಯ ನರಕವಿದ್ದಂತಿದೆ. ಎಲ್ಲಿ ನೋಡಿದರೂ ಹೊಲಸು. ಮನೆಯೊಳಗೆ ಉಗುಳು, ಹೊಲಸು; ಚಿಮಣಿ ಹೊಗೆ, ಜಿಟ್ಟೇ, ಜೊಂಡಂಗೀ, ನೊಣಾ, ನೊರಜು, ಥೂ! ಥೂ!! ಥೂ!!! ಮಕ್ಕಳನ್ನು ನೋಡಿದರೆ ಹೊಟ್ಟೆ ಡುಮ್ಮ ಕೈಕಾಲು ಸಣ್ಣಾ. ಹುರುಕು ಖಜ್ಜಿಯಿಂದ ತುಂಬಿರುವವು! ಮೂಗಿನಲ್ಲಿ ಸಿಂಬಳಾ, ಕಣ್ಣಾಗೆ ಪಿಚ್ಚಾ. ಬಟ್ಟೆಗೆ ಬೆವರಿನ ಗುಂ ಅಂತ ವಾಸನೆ ಥೂ! ಥೂ!! [ ರಾಮಕ್ಕಗೆ ] ನಿನಗೇನು ಧಾಡೀ ಇವೆಲ್ಲ ಶುಭ್ರವಾಗಿ ಇಡಲಿಕ್ಕೆ.

**ರಾಮಕ್ಕ:—** ಸ್ವಾಮ್ಯಾರ ಮನ್ಯಾಗs ಕಸ ಗುಡ್ಸಿ ಗುಡ್ಸಿ ಅವರ ಬಟ್ಟೆ ಒಗದೂ ಒಗದೂ ಸಂಜೆಯೊಳಗೆ ಟೊಂಕದಾಗ ಜುಮ್ ಅಂತೈತಿ. ಈ ಹಾಳು ಮನೇ ಕೆಲ್ಸ ಎಲ್ಲಿ ಮಾಡಲಿ.

**ಡಾಕ್ಟರ್:—** [ಭೀಮಪ್ಪನ ಕಡೆಗೆ ತಿರುಗಿ ] ಈ ಹಾಳು ಕುಡುಕತನ ಬಿಟ್ಟು ಬಿಡು. ನಿನ್ನ ಕುಡುಕತನದಿಂದಲೆ ಬಡತನ ಬಂದಿರುವುದು.

**ಭೀಮಪ್ಪ:—** [ ಸ್ವಲ್ಪ ಗಾಬರಿಗೊಂಡು ] ಇದೇನ್ರಿ ಬುದ್ಧಿ ನಿಮ್ಮ ಮಾತು ತಿರುವಾ ಮುರುವಾ ಹೇಳ್ತಿರಲ್ಲಾ. ಬಡತನದಿಂದಾ ಕುಡುಕತನ ಬಂದೈತೋ ಕುಡುಕತನದಿಂದ ಬಡತನ ಬಂದೈತೋ?

# ವೀರಮಾತೆ



**ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ**
**ಕನ್ನಡ ಮಾಸಪತ್ರಿಕೆ.**

ಸಂಪುಟ ೧ } ಆಶ್ವಿನ ಪೌರ್ಣಿಮಾ ಸಪ್ಟೆಂಬರ ೧೯೫೨ { ಸಂಚಿಕೆ ೪

## ಸಂಪಾದಕೀಯ

ಸ್ವಾತಂತ್ರ್ಯದ ಐದು ವರ್ಷಗಳು ಕಳೆದು ಆರನೆಯ ವರ್ಷ ಪ್ರಾರಂಭವಾಗುತ್ತಲಿದೆ. ವ್ಯಕ್ತಿಯ ಜೀವನದಲ್ಲಿ ಐದು ವರುಷಗಳು ಒಂದವಧಿಯನ್ನು ಸೂಚಿಸಬಹುದು. ಆದರೆ ರಾಷ್ಟ್ರದ ಜೀವನದಲ್ಲಿ ಅದೇನೂ ಅಲ್ಲ. ಅದೂ ಈ ಸಂಕ್ರಮಣ ಯುಗದಲ್ಲಿ! ಹಳೆಯ ಮುಸುಕು ಪೂರ್ಣವಾಗಿ ಸರಿದು ಹೋಗಿಲ್ಲ, ಹೊಸ ಪ್ರಕಾಶ ಬಿದ್ದಿಲ್ಲ. ಗಾಂಧೀಜಿಯ ಹಿರಿತನದಲ್ಲಿ, ಮಹಿಳೆಯರೂ ಮುಂದೆ ಸಾಗಿ ಸ್ವಾತಂತ್ರ್ಯ ಸಮರದಲ್ಲಿ ಸಹಿಷ್ಣುತೆಯಿಂದ ಭಾಗವಹಿಸಿದರು; ದೇಶದ ಯಾವ ಜನಾಂಗವೂ ಸುಪ್ತಾವಸ್ಥೆಯಲ್ಲಿಲ್ಲ ಎಂಬುದನ್ನು ತೋರಿಸಿಕೊಟ್ಟರು. ಆದರೆ ಈ ಜಾಗೃತಿ ಸಾಮೂಹಿಕವಾಗಿ ಪಸರಿಸುವದು ಪ್ರಜಾತಂತ್ರರಾಜ್ಯದಲ್ಲಿ ಅತ್ಯಂತ ಅವಶ್ಯಕವಾಗಿರುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ತನ್ನ ಹೊಣೆಯನ್ನರಿತು ಅದನ್ನು ನಿರ್ವಹಿಸಬೇಕಾದರೆ, ಶಿಕ್ಷಣ, ಸಂಸ್ಕೃತಿಗಳು ಬೇಕೇ ಬೇಕು ಒಬ್ಬ ಮಾತೆ ವಿದ್ಯಾವತಿಯಾಗಿದ್ದರೆ ಹತ್ತು ಜನ ಒಳ್ಳೆಯ ನಾಗರಿಕರನ್ನವಳು ಸಮಾಜಕ್ಕೆ ನೀಡಬಹುದು. ಪುರುಷನು ವಿದ್ಯಾವಂತನಾದರೆ ಅದು ಅವನ ಮಟ್ಟಿಗೇ ಎಂದು ಅನೇಕ ಮಹನೀ

ಯರು ಉದ್ಗಾರ ತೆಗೆಯುತ್ತಾರೆ: ಆದರೆ ಈ ಕಾರ್ಯವನ್ನು ನೀಗಿಸಿಕೊಂಡು ಹೋಗಲು ಆ ಮಾತೆಗೆ ಎಂತಹ ಶಿಕ್ಷಣಬೇಕು? ನಿಸರ್ಗ ದಯಪಾಲಿಸಿದ ಶಿಕ್ಷಣ ಅವಳಿಗಿದೆ; ಇದಕ್ಕೆ ಸಹಕಾರವೆಂದು ಮತ್ತಾವ ಶಿಕ್ಷಣ, ಅವಳ ಗುಣಗಳಿಗೆ, ತನ್ನದೆಂದು ತಿಳಿದಿರುವ ಅವಳ ಸಾಮಾಜಿಕ ಕಾರ್ಯಕ್ಕೆ, ಯಾವ ಪ್ರೋತ್ಸಾಹ ದೊರೆಯುತ್ತಿದೆ?

ಆಧುನಿಕ ಸ್ತ್ರೀಯ ಬಗ್ಗೆ ಆರೋಪಗಳು ಅಲ್ಲಲ್ಲಿ ತಲೆದೋರುತ್ತಿವೆ. ತೆರೆಯಮರೆಯ ಪದ್ಧತಿ ಅವಳಿಂದ ದೂರವಾಗಿದ್ದರೂ ಪರಸಂಸ್ಕೃತಿಯ ಮೋಹದ ತೆರೆ, ದಾಸ್ಯದ ತೆರೆ ಅವಳಿಗಿನ್ನೂ ಬಿಟ್ಟಿಲ್ಲ. ಅಷ್ಟೇ ಏಕೆ, ನಾಡಿನ ಜನತೆಯನ್ನೇ ಅದು ಬಿಟ್ಟಿಲ್ಲೆಂದು ಹೇಳಬಹುದು. ನಾಡಿನ ಯುವಕರು ಹೀಗೆ ಮಾಡುತ್ತಾರೆ ಅದರಿಂದ ನಾವೂ ಹೀಗಿದ್ದೇವೆ ಎಂದು ಸ್ಪರ್ಧಾಳುವಿನ ದೃಷ್ಟಿಯಿಂದ ಅವರು ಹೇಳುವದು ಲಜ್ಜಾಸ್ಪದ; ಅನಿಷ್ಟಕರ; ದಾಸ್ಯದ ಆಘಾತ ಎಲ್ಲರಿಂದಲೂ ಬೇಗ ತೊಲಗಿದಷ್ಟು ಹಿತಕರ; ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಭಾಷಣಮಾಡುತ್ತ ಭಾರತದ ಜನರಲ್ ಕಾರಿಯಪ್ಪನವರು ಸಾರಿಹೇಳಿದರು, “ನಾಡಿನ ಭವಿತವ್ಯವನ್ನು ವಿದೇಶೀ ಧ್ಯೇಯಗಳಿಗೆ ಮಾರಿಕೊಳ್ಳಬೇಡಿ,” ಎಂದು. ಎಲ್ಲೆಡೆಗೆ ಅನುಭವದ ಕುರುಹು, ಭಾಷಣದ ಚಟುವಟಿಕೆ ನಡೆದಿದ್ದರೂ, ಮೂಲತಃ ಕಾರ್ಯರಂಗಕ್ಕಿಳಿದು ಬಳಿಕೆಯಲ್ಲಿ ಬರುವದು ಕಠಿಣವಾದುದು.

* * * * *

ಸ್ವಾತಂತ್ರ್ಯ ದಿನದಂದು ರಾಷ್ಟ್ರಾಧ್ಯಕ್ಷ ರಾಜೇಂದ್ರಪ್ರಸಾದರು, “ವ್ಯಕ್ತಿ ವ್ಯಕ್ತಿಗಳು ಸೇರಿ ರಾಷ್ಟ್ರವಾಗುತ್ತದೆ; ಅವರು ನಡೆದುಕೊಂಡಂತೆ ರಾಷ್ಟ್ರದ ನಿರ್ಮಾಣ; ಅವರಿಂದಲೇ ಸರಕಾರ; ತ್ಯಾಗಸಹಿಷ್ಣುತೆಗಳಿಂದ ಸಾಮರ್ಥ್ಯಗಳಿಸಿ ಅವರು ರಾಷ್ಟ್ರವನ್ನು ಕಟ್ಟಬಲ್ಲರು; ಇಂದು ಸಂಘದಲ್ಲಿಯೇ ಶಕ್ತಿ ಇದೆ,” ಎಂಬ ಸಂದೇಶವನ್ನು ಬಿತ್ತರಿಸಿದರು.

ಪಂಡಿತ ನೆಹರೂ, “ದೇಶದ ಯಾವ ಭಾಗದಲ್ಲಿ ಕೊರತೆಯುಂಟಾದರೂ ಅದು ನಮಗುಂಟಾದಂತೆಯೇ, ಎಲ್ಲರೂ ಸೇರಿ ನಮಗಿದ್ದ ಸಮಸ್ಯೆಗಳನ್ನು ಎದುರಿಸೋಣ; ಇಂದು ನೋವಿನಲ್ಲಿದ್ದ ಭಾರತೀಯರ ನೋವನ್ನು ದೂರಮಾಡಿ ಅವರು ಕಣ್ಣೀರು ಕರೆಯದಂತೆ ಮಾಡುವದೇ ನಮ್ಮ ಕರ್ತವ್ಯ,” ಎಂದು ಹೇಳಿದರು.

ಸರ್ವೋದಯ ಯೋಜನೆಯನ್ನು ಬಳಿಕೆಯಲ್ಲಿ ತರುತ್ತಿರುವ ವಿನೋಬಾ ಭಾವೆಯವರು, “ಮಿಲ್ಲುಗಳು ಬಂದು ಗೃಹಕೈಗಾರಿಕೆಗಳನ್ನು ಹಿಂದೂಡಿವೆ; ಗೃಹಕೈಗಾರಿಕೆಗೆ ಉತ್ತೇಜನ ಸಿಗದೆ, ರಾಷ್ಟ್ರ ಅಭಿವೃದ್ಧಿಯನ್ನು ಪಡೆಯಲಾರದು,” ಎಂದು ಮುಂತಾಗಿ ಹೇಳಿದರು.

ಸಹಕಾರದಿಂದ ಸರ್ವರೂ ಸತತವಾಗಿ ಪರಿಶ್ರಮ ಮಾಡಬೇಕೆಂಬ ಮಾತು ಎಲ್ಲರೂ ಒಪ್ಪತಕ್ಕದ್ದೇ.

* * * * *

ದೇಶದ ಸಂಪತ್ತನ್ನು ಎಲ್ಲ ಬಗೆಯಲ್ಲಿಯೂ ಹೆಚ್ಚಿಸಲು ಮುಖಂಡರು ಯೋಚಿಸುತ್ತಿದ್ದಾರೆ. ಪ್ರಜೆಗಳ ಬೆಂಬಲವೂ ಅವರಿಗಿದೆ. ಈ ಯೋಜನೆಗೆ ಅನುಸಾರವಾಗಿ ರಾಜಾಜಿ ಒಂದು ಸೂಚಿನೆಯನ್ನು ಮುಂದೆ ತಂದಿದ್ದಾರೆ, ಅದೆಂದರೆ ಸಂತತಿನಿಯಮನ ಮಾಡುವ ಅವಶ್ಯಕತೆ ದೇಶದಲ್ಲಿಲ್ಲವೆಂದು. ಸಂತತಿನಿಯಮನವನ್ನು ಸಮರ್ಥಿಸುವದರ ಮೂಲದಲ್ಲಿ ಸ್ವಾರ್ಥವಿದೆ; ತಮಗೆ ಒಳ್ಳೊಳ್ಳೆಯ ಸೀರೆಗಳನ್ನೂ, ಕಾರುಗಳನ್ನೂ ಕೊಳ್ಳಬೇಕೆಂಬುದೇ ಅವರ ಅಪೇಕ್ಷೆ ಎಂದು ಅವರ ಅಭಿಪ್ರಾಯ.

ಭಾರತದಲ್ಲಿ ಪ್ರತಿಯೊಬ್ಬನ ಗುರಿ ಕಾರುಕೊಳ್ಳುವದೇ ಆಗಿದ್ದರೆ, ಇದುವರೆಗೆ ಅಸಂಖ್ಯ ಜನರು ಕೊಳ್ಳಬಹುದಾಗಿತ್ತು. ಜನಸಂಖ್ಯೆಗೆ ತಕ್ಕಂತೆ ಉದ್ಪಾದನೆಯಿಲ್ಲ; ಹೆಚ್ಚು ಉತ್ಪಾದನೆಯ ಕಾರ್ಯವನ್ನು ಕೈಕೊಂಡು ಅನ್ನ ಬಟ್ಟೆಗಳ ಸಮಸ್ಯೆಯನ್ನು ಪೂರೈಸಬೇಕು ಎಂದು ಹೇಳಿದ್ದರೆ ಇದೇನೋ ಒಂದು ವೇಳೆ ಒಪ್ಪತಕ್ಕ ಮಾತು ಎನ್ನಬಹುದು. ಹೊಟ್ಟೆಗೇ ಗತಿಯಿಲ್ಲದಿರುವಾಗ ಕಾರಿನ ಮಾತೆಲ್ಲಿ? ಎಂಟು ಜನ ಅರೆಹೊಟ್ಟೆಯ ಮಕ್ಕಳನ್ನು ಬೆಳೆಸಿ, ಅರೆನಾಗರಿಕರನ್ನು ಮಾಡಿ ದೇಶಕ್ಕೆ ಕೊಡುವದಕ್ಕಿಂತ, ಹೊಟ್ಟೆ ತುಂಬ ತಿಂದು ಬೆಳೆದ, ಗಟ್ಟಿಮುಟ್ಟಾದ ನಾಲ್ಕು ಜನ ಯುವಕರನ್ನು ದೇಶಕ್ಕೆ ಕೊಡುವದು ಹೆಚ್ಚು ಹಿತಕರವಾದೀತು. ಹಿಂದುಸ್ಥಾನದಲ್ಲಿ ಬಡಕುಟುಂಬ, ಬಡತನಗಳಿಗೇನೂ ಕೊರತೆಯಿಲ್ಲ; ಸರಕಾರದಿಂದ ಯಾವ ಬಗೆಯ ಪ್ರೋತ್ಸಾಹ ಇವಕ್ಕೆ ದೊರೆಯುತ್ತಿದೆ? ಒಂದೇ ವಿಷಯವನ್ನು ಕುರಿತು ಇಬ್ಬಗೆಯ ಮತವನ್ನು ಎದುರಿಸಲು ಸಾಮಾನ್ಯ ಬುದ್ಧಿ ಅಸಮರ್ಥವಾಗಿರುತ್ತದೆ; ಒಮ್ಮತದಿಂದ ಸಾಧಿಸುವ ಕೆಲಸ ಇದರಿಂದಾಗಲಾರದು.



## ನಮ್ಮ ಮಾತು

ಈಸಲ 'ವೀರಮಾತೆ'ಯ ಸಂಚಿಕೆಯನ್ನು ಆದಷ್ಟು ಬೇಗ ತಮ್ಮ ಕೈಯ್ಯಲ್ಲಿರಿಸುವ ಯೋಜನೆಯನ್ನು ಕೈಕೊಳ್ಳಲಾಗಿದೆ. ಪತ್ರಿಕೆಗೆ ಬೇರೆ ಬೇರೆ ಕಡೆಗಳಿಂದ ಬೇಡಿಕೆಗಳು ಬರುತ್ತಿದ್ದುದು ಸಂತೋಷದ ಸಂಗತಿ.

ಚಂದಾದಾರರಲ್ಲಿ ಅನೇಕರು ಮನಿಆರ್ಡರಿನ ಮೂಲಕ ಈಗಾಗಲೆ ಚಂದಾಹಣವನ್ನು ಸಲ್ಲಿಸಿದ್ದಾರೆ; ಇನ್ನುಳಿದವರೂ ಬೇಗನೆ ಹಾಗೆ ಮಾಡಿದಲ್ಲಿ ತುಂಬ ಅನುಕೂಲವಾಗುವದು.

ಮಕ್ಕಳ ವಿಭಾಗಕ್ಕೆ ಎಲ್ಲಕ್ಕಿಂತ ಹೆಚ್ಚು ಪ್ರೋತ್ಸಾಹ ದೊರೆಯುತ್ತಿದ್ದುದು ಅಭಿನಂದನೀಯ. ಈ ವಿಭಾಗದ ಲೇಖನಗಳನ್ನು ಬರೆಯಲು ಹೆಚ್ಚು ಅರ್ಹರಾದ

ಶಿಶುವಿಹಾರಗಳ ಸಂಚಾಲಕರು, ತಾವೇ ಬರೆದಾಗಲಿ, ಮಕ್ಕಳಿಂದ ಬರೆಸಿಯಾಗಲಿ ಕಳಿಸಬಹುದು; ಶಿಶುವಿಹಾರಗಳ ಮಾಹಿತಿಯನ್ನು ಕಳಿಸಿದಲ್ಲಿ ಅದನ್ನೂ ಪ್ರಕಟಿಸಲಾಗುವದು.

ಈಸಲದ ಸಂಚಿಕೆಯಲ್ಲಿ ಬಹುಪತ್ನೀಕತ್ವ, ಸ್ತ್ರೀಯರ ಮೇಲಿನ ಅತ್ಯಾಚಾರದ ಮೀಮಾಂಸೆ, ಚೈನಾದೇಶದ ವಿವಾಹಕಾರ್ಯ್ವ ಇತ್ಯಾದಿ ವಿಚಾರ ಪೂರ್ಣ ಲೇಖಗಳಿವೆ; ಅನಂತ ಪ್ರೇಮವೆಂಬ ಕಿರುಗತೆಯಿದೆ; ದತ್ತಮೂರ್ತಿ ಹಾಗೂ ಅಡಿಗರವರ ಕವನಗಳಿವೆ. ಇದಲ್ಲದೆ ಮಕ್ಕಳವಿಭಾಗ, ಕಾರ್ಯ್ವಕಾನೂನು ಇತ್ಯಾದಿಗಳೆಲ್ಲ ಇವೆ; ಸಂಚಿಕೆಯನ್ನು ಸಿಂಗರಿಸಿದ ಈ ಮಹನೀಯರಿಗೆಲ್ಲ ನಮ್ಮ ಧನ್ಯವಾದಗಳು.

'ವೀರಮಾತೆ'ಯ ಉದ್ದೇಶ ಹೆಣ್ಣುಮಕ್ಕಳ ವಿಕಾಸವಾದ್ದರಿಂದ, ಇದರಲ್ಲಿ ಮೂಡುವ ಲೇಖಗಳ ಶೈಲಿ ಸರಳವಾಗಿರಬೇಕೆಂದು ಓದುಗರೊಬ್ಬರು ಸೂಚಿಸಿದ್ದಾರೆ, ಆ ದೃಷ್ಟಿಯ ಕಡೆಗೆ ಅವಶ್ಯವಾಗಿಯೂ ಲಕ್ಷ್ಯಕೊಡಲಾಗುವದು. ಇಂದು ನಮ್ಮ ಸ್ತ್ರೀಸಮಾಜದಲ್ಲಿ ಎರಡು ವರ್ಗಗಳಾಗಿವೆ. ಒಂದು ಕಲಿತವರದು, ಇನ್ನೊಂದು ತಮ್ಮ ವಿಚಾರಗಳನ್ನು ಹೇಳುವ ಶಕ್ತಿಯೂ ಇಲ್ಲದಂಥವರದು. ಇವೆರಡು ವರ್ಗಗಳಿಗೂ ಮೆಚ್ಚಿಕೆಯಾಗಬಲ್ಲ ಸಾಹಿತ್ಯವನ್ನು ಒದಗಿಸುವದು ಸ್ವಲ್ಪ ಕಠಿಣ; ಓದುತ್ತ ಹೋದಂತೆ, ವಿಚಾರಗಳನ್ನು ಹೇಳುವ, ತಿಳಿದುಕೊಳ್ಳುವ ರೂಢವಾದಂತೆ 'ವೀರಮಾತೆ' ಎಲ್ಲರ ಮೆಚ್ಚುಗೆಯನ್ನೂ ಪಡೆಯುವದೆಂದು ನಮ್ಮ ಆಶೆ! ಎರಡೂ ವರ್ಗಗಳನ್ನೂ ಬೆಸೆಯುವ ಕಾರ್ಯ, 'ವೀರಮಾತೆ'ಯದು!



# ಅನಂತ ಪ್ರೇಮ

**ಲೇಖಕಿ :— ಸುಮತಿ.**

"ಮದುವೆ ಪ್ರೇಮವಿಲ್ಲದ ಎರಡು ವ್ಯಕ್ತಿಗಳನ್ನು ಒಂದೆಡೆ ಸೇರಿಸಿ ಪ್ರೇಮ ಮಾಡ ಹಚ್ಚುವ ಒಂದು ಸಾಮಾಜಿಕ ನಿರ್ಬಂಧ; ಅಖಂಡವಾದ ಅನಂತ ಪ್ರೇಮಕ್ಕೆ ಮದುವೆಯ ನಿರ್ಬಂಧವೇಕೆ?" ಕಥೆ ಓದಿ ನೋಡಿ.

ಕುಟಿಲತೆಯ ಮಧ್ಯದಲ್ಲಿ ಬೆಳೆದಿದ್ದರೂ ಅದನ್ನರಿಯದ ಮುಗ್ಧೆ ಮಧೂ; ಅವಳಿಗೀಗ ತಾನೇ ಇಪ್ಪತ್ತುವರುಷ ಮಿಕ್ಕಿತ್ತು. ನೋಡಲು ತುಂಬಾ ರೂಪವಂತೆ! ಎಳಸಾದ ದೇಹ, ಗೌರ ವರ್ಣ, ತುಂಬಿದ ಮೊಗ! ಚಿಕ್ಕ ಬಾಲಿಕೆಯಂತೆ ಆಟವಾಡಿಕೊಂಡಿರುವದೇ ಅವಳಿಗೆ ಸುಖವಾಗಿತ್ತು. ತಾಯಿಯ ಬಲಾತ್ಕಾರಕ್ಕೆ ಗಾನ, ನರ್ತನ, ಮಿಕ್ಕವೇಳೆಯಲ್ಲಿ ಅವಳ ಆಟವೇ ಆಟ!

ಮಧು, ಗೌರಮ್ಮನನ್ನು 'ಅಮ್ಮ' ಎಂದೇ ಕರೆಯುತ್ತಿದ್ದಳು. ಅವಳಿಗೆ ನೆನಪಿದ್ದಾಗಿನಿಂದಲೂ ಅಮ್ಮನನ್ನು ಬಿಟ್ಟು ಅವಳು ಎಲ್ಲಿಯೂ ಹೋಗಿರಲಿಲ್ಲ. 'ಅಮ್ಮ' ನೆಂದರೆ ಅವಳಿಗೆ ಪ್ರಾಣ; ಗೌರಮ್ಮನಿಗೂ ಅಷ್ಟೇ, ಒಂದೂ ಕೊರತೆಯಾಗದಂತೆ ಅವಳನ್ನು ನೋಡಿಕೊಂಡಿದ್ದಳು. ಗೌರಮ್ಮನ ಮನೆಗೆ ಬರಹೋಗುವ ಜನರ ಸಂಖ್ಯೆ ಸ್ವಲ್ಪ ಹೆಚ್ಚು. ಇದೀಗ ಈ ಸಂಖ್ಯೆ ಕಡಿಮೆಯಾಗಿದೆಯೆಂದು ಜನ ಆಡಿಕೊಳ್ಳುತ್ತಿದ್ದರೂ, ಅದು ಸಾಕಷ್ಟಿತ್ತು.

ತುಂಬಿದ ಮನೆ, ಮನೆಯಲ್ಲಿ ಆಳು ಕಾಳು; ಇವುಗಳ ಮಧ್ಯದಲ್ಲಿ ಅಧಿಕಾರದಿಂದ ಓಡಾಡುವ ವ್ಯಕ್ತಿಯೆಂದರೆ ರಂಗಣ್ಣ. ಅವರೊಳ್ಳೆ ಭರ್ಜರಿ ಆಸಾಮಿ, ಜರೀಪಂಚೆ, ಸರ್ಜಕೋಟು. ತಲೆಗೆ ಠೀವಿಯಿಂದ ಸುತ್ತಿದ ರುಮಾಲ ಅವರ ವೇಷ; ಅವರು ಗುಡುಗುವದನ್ನು ಕೇಳಿದರೆ ಮನೆಯ ಆಳುಗಳೆಲ್ಲ ನಡುಗಿ ಬಿಡುತ್ತಿದ್ದರು.

ರಂಗಣ್ಣನ ಪರಿಚಯ ಮಧುವಿಗೆ ಬಹಳ ದಿನದಿಂದಲೂ ಇತ್ತು. ಅವರ ಸಲಹೆಯಿಲ್ಲದೆ ಯಾವ ಕೆಲಸವನ್ನೂ ಅವಳು ಮಾಡುವಂತಿರಲಿಲ್ಲ. ಮೇಲಾಗಿ ಅವಳ ಶಿಕ್ಷಣವನ್ನೆಲ್ಲ ಅವರೇ ನೋಡಿಕೊಳ್ಳುತ್ತಿದ್ದರು; ಗೌರಮ್ಮನಾದರೂ ಮಧುವಿನ ವಿಷಯವಾಗಿ ರಂಗಣ್ಣನವರನ್ನೇ ಕೇಳುತ್ತಿದ್ದಳು.

* * * * *

ಈಗೆರಡು ದಿನಗಳಿಂದ ರಂಗಣ್ಣ ಗೌರಮ್ಮನವರಲ್ಲಿ ಮಧುವಿನ ವಿಷಯವಾಗಿ ಅದೇನೋ ಗುಜು ಗುಜು ಮಾತು ನಡೆದಿತ್ತು. ಮಧು, ಅಡಗಿನಿಂತು ಕಿವಿಗೊಟ್ಟು ಕೇಳಿದರೂ ರಂಗಣ್ಣ ಸ್ಪಷ್ಟವಾಗಿ ಉಚ್ಚರಿಸುತ್ತಿದ್ದ, 'ಲಕ್ಷಾಧೀಶ' ಶಬ್ದದ ಹೊರತು ಬೇರೇನೂ ಕೇಳುತ್ತಿರಲಿಲ್ಲ. ಅವಳೆದುರು ಮಾತ್ರ ಇದುವರೆಗೆ ಅವರಾವ ಮಾತನ್ನೂ ಆಡಿರಲಿಲ್ಲ.

ಮಧು, ಹಾಗೆ ಕುಳಿತಾಗ,ಅಂತರಂಗದಲ್ಲಿ ಅವಳ ಭವಿಷ್ಯದ ಚಿತ್ರ ಅಸ್ಪಷ್ಟವಾಗಿ ಮೂಡಿ ಅವಳನ್ನು ತೊಂದರೆಗೀಡುಮಾಡುತ್ತಿತ್ತು. ಮನೆಗೆ ಬರುತ್ತಿದ್ದ ಹಲವಾರು ಯುವಕರು ಅವಳ ಮನವನ್ನು ಸೆಳೆಯದೆ ಹೋದರು. ಗೌರಮ್ಮ ಅವಳ ಅರಿವಿಗೆ ನಿಲುಕದಂತಿಟ್ಟಿದ್ದ ಮನೆಯ ವಾತಾವರಣ ಮಧುವಿಗೆ ಇದೀಗ ಅರ್ಥವಾಗ ಹತ್ತಿ ಬೇಸರವನ್ನುಂಟುಮಾಡತೊಡಗಿತು.

* * * * *

ರಂಗಣ್ಣ ಯಾವುದೋ ಕಾರಣದಿಂದ ಎರಡುದಿನ ಊರಿಗೆ ಹೋಗಿದ್ದರು. ಈ ಮಧ್ಯೆ ಗೌರಮ್ಮ ಮಧುವಿನ ಮುಖವನ್ನು ನೆಟ್ಟ ನೋಟದಿಂದ ನಾಲ್ಕಾರು ಸಲ ನೋಡಿ ನಿಟ್ಟುಸಿರು ಬಿಟ್ಟರು. 'ನನ್ನ ಮಗೂ ಅಗಲಿಹೋಗುವೆಯಪ್ಪಾ' ಎಂದು ಒಂದು ಸಲ ಅವಳನ್ನು ತಬ್ಬಿಕೊಂಡು ಹೇಳಿದರು, "ಆದರೇನು ನನ್ನ ಮಗು ರಾಣಿ!"

ಮಧುವಿಗೆ ಒಂದೂ ಅರ್ಥವಾಗಲಿಲ್ಲ; ಎವೆಯಿಕ್ಕದೆ ಗೌರಮ್ಮನನ್ನೇ

ನೋಡುತ್ತಿದ್ದಳು. ಗೌರಮ್ಮ ಬಿಡಿಸಿ ಹೇಳಿದರು, “ ಮಗು ದೊಡ್ಡವಳಾದಿ; ಎಷ್ಟು ದಿನ ನಿಮ್ಮಮ್ಮನೊಂದಿಗಿರಬಲ್ಲೆ ? ಜೀವನದ ಸಂಗಾತಿಯನ್ನಾರಿಸುವದು ಬೇಡವೇ? ನನ್ನಂತೆ ಜೀವನ ಬೇಡ ಕಂದಾ, ನೀನು ರಾಣಿಯಾಗಿರು; ” ಅವರ ಕಣ್ಣಿನಿಂದ ಹನಿಗಳುದುರಿದವು. ಅಮ್ಮನ ತೆಕ್ಕೆಯಿಂದ ಬಿಡಿಸಿಕೊಂಡು ಹೋಗಬೇಕಾದರೆ ಮಧು ವಿಗೆ ಸಾಕುಬೇಕಾಯಿತು !

* * * * *

ರಂಗಣ್ಣ ಮರುದಿನ ಶ್ರೀಮಂತರೊಬ್ಬರೊಡನೆ ಮೋಟಾರಿನಲ್ಲಿ ಕುಳಿತು ಗೌರಮ್ಮನ ಮನೆಗೆ ಬಂದರು. ಈ ಮೋಟಾರಿನ ಹಿಂದೆ ಆ ಶ್ರೀಮಂತನ ಸೇವಕ ಜನದ ಒಂದು ಮೋಟಾರು ! ಓಣಿಯಲ್ಲಿಯ ಜನ ಗುಂಪುಕಟ್ಟಿಕೊಂಡು ಇವರನ್ನು ನೋಡಲು ನಿಂತಿದ್ದರು. ಮಧು– ಮುಗ್ಧೆ ಮಧು–ಹೊರಟು ಹೋಗುವಳೇನೋ ಎಂದು ಅವರು ತಮ್ಮೊಳಗೆ ಪಿಸುಗುಟ್ಟುತ್ತಿದ್ದರು. ಆ ಶ್ರೀಮಂತನ ಜರೀಪಂಚೆ, ರೇಶ್ಮೆ ಶರ್ಟು, ಸರ್ಜಕೋಟು, ಸೇವಕಗಣವನ್ನು ಕಂಡ ಗೌರಮ್ಮ ಕೊಂಚ ಹರ್ಷಿತ ರಾದರು; ಅವನನ್ನು ಬೊಟ್ಟುಮಾಡಿ ಮಧುವಿಗೆ ಮರೆಯಿಂದ ತೋರಿಸಿದರು. ನಾಲ್ವತ್ತು ವರ್ಷಕ್ಕೆ ಮಿಕ್ಕಿದ ಅವನನ್ನೂ, ಅವನ ದರ್ಪವನ್ನೂ ನೋಡಿ ಮಧುವಿನ ಕಣ್ಣೀರು ಉಕ್ಕಿಬಂತು.

ಅದೇ ದಿನವೇ ಮಧುವಿನ ಸಂಗೀತ ಕಛೇರಿ ; ಶ್ರೀಮಂತನೇ ಮುಖ್ಯ ಅತಿಥಿ ; ಅವನು ತಂದ ವಜ್ರದ ಆಭರಣಗಳನ್ನು ಗೌರಮ್ಮ ಮಧುವಿಗೆ ತೊಡಿಸಿದರು. ಕಛೇರಿಗೆ ಜನ ನೆರೆದಿತ್ತು. ಒಳ್ಳೇ ಕೌಶಲ್ಯದಿಂದ ಸುಂದರಿ ಮಧು ನರ್ತಿಸುತ್ತಿದ್ದಳು. ಮೇಳದವರು ಕಲ್ಲಿನ ಬೊಂಬೆಗಳಂತೆ ವಾದ್ಯ ಬಡಿಯುತ್ತಿದ್ದರು. ನರ್ತನ ಮುಗಿ ಯುತ್ತ ಬಂದಂತೆ ಜನ ಚದರಿದರು. ಕೊನೆಗೆ ಅಲ್ಲಿ ಯಾರೂ ಉಳಿಯಲಿಲ್ಲ: ಮಧು ವಿನ ಕಿವಿಯಲ್ಲಿ ಏನೋ ಉಸುರಿ ಗೌರಮ್ಮನೂ ಹಿಂದೆಸರಿದರು. ಅವಳ ನರ್ತನ ಕೊನೆಗಂಡಿತು.

ತನ್ನ ಕಣ್ಣುಗಳಿಂದಲೇ ಮಧುವನ್ನು ಹೀರುತ್ತಿದ್ದ ಶ್ರೀಮಂತ ಅವಳನ್ನು ತನ್ನೆಡೆಗೆ ಎಳೆದುಕೊಂಡನು ; ಮಧು ಚೀರಿದಳು. “ ಹಾಗೇಕೆ ಮಧೂ ? ನಾನೇನು ಬೇರೆಯೇ ? ”

(ಮಧು ಸುಮ್ಮನೆ ಇದ್ದಳು )

“ ಈ ವಜ್ರದ ಬಳೆನೋಡು, ನಿನಗಾಗಿ ನಾನೇ ತೆಗೆಸಿದ್ದು ”

ಮಧು ಬಳೆಗಳನ್ನು ಎತ್ತಿಸೆದು ಬಾಗಿಲಬಳಿ ಓಡಿದಳು; ಕೊಸರಿಕೊಂಡು ಕೊನೆಗೂ ಅಮ್ಮನಬಳಿ ಬಂದುಬಿಟ್ಟಳು.

ತನಗೆ ಇಷ್ಟೊಂದು ಜನ ರೂಪವತಿಯರಿದ್ದರೂ, ಮಧುವನ್ನು ಮೆಚ್ಚಿ ಬಂದಂತೆ ಇನ್ನಾರನ್ನೂ ಮೆಚ್ಚಿಲ್ಲನೆಂದು ಶ್ರೀಮಂತನ ಹೇಳಿಕೆ. ಮಧುವನ್ನು ಬಿಟ್ಟಿ ರುವದು ತನಗೆ ಸಾಧ್ಯವೇ ಇಲ್ಲವೆಂದು ಅವಳಿಗಾಗಿ ಅವನ ಪ್ರಾರ್ಥನೆ. ಮೊದಲು

ಹಾಗೆ ಮಾಡಿದರೂ, ಕೊನೆಗೆ ತಾವೇ ಸರಿಹೋಗುವದೆಂದು ಗೌರಮ್ಮನವರ ಸಮಾಧಾನ.

* * * * *

ಮಧುವನ್ನು ಕಳಿಸುವ ದಿನ ಬಂದೇ ಬಂತು; ಗೌರಮ್ಮನೂ ಅವಳ ಸಮಾಧಾನಕ್ಕಾಗಿ ಎರಡು ದಿನಗಳ ಮಟ್ಟಿಗೆ. ಅವಳೊಡನೆ ಹೊರಟರು. ಬೇಡ ಬೇಡವೆಂದರೂ ಹೋಗುವಾಗ ಲಕ್ಷಾಧೀಶನು ಹತ್ತು ಸಾವಿರ ರೂಪಾಯಿಯ ' ಚೆಕ್ ' ಒಂದನ್ನು ರಂಗಣ್ಣನವರ ಕೈಗಿತ್ತನು !

* * * * *

ಮಧುವಿಗೇ ಹೊಸಲಾದ ವಿಶಾಲ ಮನೆಯಿದೆ; ಅವಳ ಅಂತರಂಗದ ದಾಸಿಯೊಬ್ಬಳಿದ್ದಾಳೆ. ಮುದುಕಿ; ಅವಳಲ್ಲದೆ ಇನ್ನೂ ಅನೇಕ ದಾಸಿಯರು. ತನ್ನ ಶೃಂಗಾರದಲ್ಲಿ, ಪ್ರಿಯನೊಡನೆ ಸರಸಸಲ್ಲಾಪದಲ್ಲಿ ಸಮಯ ಹೋಗುವದಾದರೂ, ಮಧುವಿನ ಮನಸ್ಸಿಗೆ ನೆಮ್ಮದಿಯಿಲ್ಲ; ಅದೇಕೋ ಮದುವೆಯಾದ ಗೃಹಿಣಿಯ ಸ್ಥಾನ ತನಗಿಲ್ಲವೆಂದು ಅವಳ ನಿಶ್ವಾಸ ! ನಿಟ್ಟುಸಿರು !!

ಆ ಲಕ್ಷಾಧೀಶನಿಗೆ ಅನೇಕ ರೂಪವತಿಯರೂ, ಅಲ್ಲದೆ ಮದುವೆಯಾದ ಹೆಂಡತಿಯೊಬ್ಬಳೂ ಇದ್ದುದನ್ನು ಮಧು ತನ್ನ ದಾಸಿಯಿಂದ ಕೇಳಿ ತಿಳಿದಳು. ಹೆಂಡತಿಯನ್ನೂ, ಅಂತಃ ಪುರವನ್ನೂ ತನಗೊಂದು ಸಲ ತೋರಿಸಬೇಕೆಂದು ಲಕ್ಷಾಧೀಶನನ್ನು ಮಧು ಕೇಳಿಕೊಂಡಳು. " ನೀನು ಹೋಗತಕ್ಕ ಸ್ಥಳವೇ ಅದು ಮಧು ? " ಎಂದು ಅವಳ ಕುರುಳುಗಳನ್ನು ನೇವರಿಸುತ್ತ ಲಕ್ಷಾಧೀಶ ಮರೆಮಾಚಲೆತ್ನಿಸಿದನು. ಮಧುವಿನ ಪ್ರಾರ್ಥನೆ ಎಂದಿಗೂ ಸಫಲವಾಗಲೇ ಇಲ್ಲ.

ಲಕ್ಷಾಧೀಶನು ಊರಲಿಲ್ಲದ ಸಮಯ ಸಾಧಿಸಿ, ಮಧು, ವೇಷಪರಿವರ್ತನೆ ಮಾಡಿ ಮುದುಕಿಯೊಂದಿಗೆ ಅಂತಃಪುರಕ್ಕೆ ಕಾಲಿಟ್ಟಳು. ಸಿರಿವಂತನ ಪತ್ನಿ ತೂಗು ಮಂಚದಲ್ಲಿ ಕುಳಿತಿದ್ದಳು. ಸುತ್ತಲೂ ದಾಸಿಯರಿದ್ದರು; " ಇಂತಹ ರೂಪವತಿಯಾದ ಪತ್ನಿಯಿದ್ದರೂ, ಬೇರೆ ಯುವತಿಯರ ಹಂಬಲೇಕೆ ? " ಮಧುವಿಗೆ ಒಡೆಯಲಾರದ ಒಗಟು.

ಅಂತಃಪುರದಲ್ಲಿ ಸಂಭಾಷಣೆಗೆ ಮೊದಲಾಯಿತು; ಸಿರಿವಂತನ ಪತ್ನಿ ಹೇಳಿದಳು " ನಾನೇಕೆ ಅವಳನ್ನು ನೋಡಲು ಹೋಗುವದು ? ನನ್ನ ಸ್ಥಾನ ನನಗೇ; ತಂದ ಹೆಣ್ಣಿಗೆ ಮದುವೆಯಾದ ಪತ್ನಿಯ ಸ್ಥಾನವೆಂದಿಗಾದರೂ ದೊರೆತೀತೇ ? "

ಮಧುವಿನ ಕಣ್ಣಲ್ಲಿ ನೀರೂರಿತು. ಹಾಗೇ ಹೊರಟು ಬಂದಳು.

ಮರುದಿನ ಲಕ್ಷಾಧೀಶ ಬಂದಾಗ, ಅವನಿಗೆ ಅಂಟಿಕೊಂಡಿದ್ದ ಮಧು ಕತ್ತೆತ್ತಿ ಹೇಳಿದಳು " ನಾನು ತಮ್ಮನ್ನಲ್ಲದೆ ಇನ್ನಾರನ್ನೂ ನೆನೆಯುವದಿಲ್ಲ. "

" ನಾನೆಂದಾದರೂ ಇದಕ್ಕೆ ವಿಪರೀತವಾಗಿ ಹೇಳಿದ್ದೇನೆಯೇ ಮಧು " ಅವಳ ಹಣೆಯನ್ನು ಮುತ್ತಿಟ್ಟ.

“ ನಮ್ಮ ಪ್ರೇಮ ಹೀಗೆ ಅಖಂಡವಾಗಿ, ಅನಂತವಾಗಿ ಇರಬೇಕಲ್ಲವೇ ? ”

“ ಅದಕ್ಕೆ ಬೇಡವೆಂದವರಾರು ? ”

“ ಹಾಗಾದರೆ ನಮ್ಮಿಬ್ಬರ ಮದುವೆಗೆ ಆತಂಕವೇನು ? ”

“ ಮದುವೆ ? ಮದುವೆ ಪ್ರೇಮವಿಲ್ಲದ ಎರಡು ವ್ಯಕ್ತಿಗಳನ್ನು ಕೂಡಿಸುವ ಸಾಮಾಜಿಕ ನಿರ್ಬಂಧ; ಅಖಂಡವಾದ ಅನಂತ ಪ್ರೇಮಕ್ಕೆ ಮದುವೆಯ ನಿರ್ಬಂಧ ವೇಕೆಬೇಕು, ನನ್ನ ಮಧೂ ”

ಮಧು, ಲಕ್ಷ್ಮಾಧೀಶನ ಬಾಹುಪಾಶದಲ್ಲಿದ್ದಳು ; ಅವಳ ಕಣ್ಣಿನಿಂದ ನೀರು ಧಾರೆಗಟ್ಟಿ ಹರಿಯುತ್ತಿತ್ತು.

* * * * *

ಮಧು ಹೊರಗೆ ಬಂದಾಗ, ಅವಳ ನಂಬುಗೆಯ ದಾಸಿ-ಮುದುಕಿಯ ಕಣ್ಣಿನಲ್ಲಿ ನೀರ ಹನಿಗಳು ಮಿಂಚುತ್ತಿದ್ದವು.

“ ಅದೇಕಮ್ಮಾ ಅಳುತ್ತೀ ? ” ಮಧುಕೇಳಿದಳು.

“ ತಂಗೀ ನಿನ್ನ ಮಾತುಗಳನ್ನೆಲ್ಲ ನಾನು ಕೇಳಿದೆ........ ”

“ ಆದರೇನಾಯಿತು ? ಆಡಬಾರದ ಮಾತನ್ನು ನಾನೇನಾಡಿದ್ದೇನೆ ? ”

“ ಹಾಗಲ್ಲ ಮಗೂ, ನಿನ್ನ ಮಾತಿಗೆ ಯಜಮಾನರು ಹೇಳಿದ ಉತ್ತರ ಕೇಳಿದಾಗ, ಯಜಮಾನರ ತಂದೆ ನನಗೂ ಹೀಗೆ ಹೇಳಿದ ನೆನಪು ಬಂತು-ಇಷ್ಟೇ. ”

(ಹಿಂದೀ ಕಥೆಯೊಂದರ ಆಧಾರದಿಂದ)



# ಹೆರವರ ಮನೆಗೆ ಹೋಗುವ ಮಗಳಿಗೆ ಹಿತೋಕ್ತಿ

—ಕುರಾಡಿ ಸೀತಾರಾಮ ಅಡಿಗ ಫಲಿಮಾರು ದ. ಕ.

†*†*†

ಎಲೆ ಮಗುವೆ ನಾ ನಿನ್ನ ಹೆತ್ತು ಹೊತ್ತು
ಸಲಹಿದೆನು ಜೀವದಾ ಹಂಗನಿತ್ತು ।
ಬರಿ ವ್ಯರ್ಥ ಹೆಂಗಳಾ ಹೆತ್ತ ಕರುಳು
ನರ ಜನ್ಮ ಸೈರಿಪುದೆ ಈ ದುಃಖ ಮಗಳೆ ।
ಪೋಡಷಾ ಬರಿಸಗಳ ತನಕ ನಾ ಸಲಹೀ
ನೀಡುವೆನು ಕೈಯೊಡ್ಡಿ ಹೆರವರಾಮನೆಗೆ ।
ಹೊಕ್ಕ ಕುಲ ಹೊರಟ ಕುಲಗಳ ಬೆಳಗು ನೀನು
ಉಕ್ಕಿ ಬಹು ಸಂಪತ್ತುಗಳ ನೊಲಿಸು ನೀನು ।
ಕೈ ಹಿಡಿದ ಭಾಗ್ಯ ದೇವನ ಮನವ ನೊಲಿಸಿ
ಗೃಹದ ಸೌಭಾಗ್ಯ ದೇವತೆಯಾಗಿ ನೆಲೆಸೀ ।
ಕ್ಷಣ ಕ್ಷಣಕು ಅತ್ತೆಮಾವನ ಸೇವೆಸಲಿಸೀ
ಗುಣಭರಿತ ಬಾಳ್ವೆಯಾ ಸವಿ ಜೇನತಿನಿಸೀ ।
ಮೈದುನರ ಅಕ್ಕತಂಗಿಯರ ಮನವನೊಲಿಸಿ
ಮುದ್ದುಮಕ್ಕಳ ನೋಡು ಸ-ದ್ಭಾವವನೆ ಕಲಿಸೀ ।
ಉಡು ರಾಶಿಗಳ ನಡುವೆ ಶಶಿ ಹೊಳೆಯುವಂತೆ ।
ಬೆಡಗು ಸೌಮ್ಯತೆ ತೋಷ ನೀಡಿ ಮೆರೆವಂತೆ ।
ಸ್ಥಬ್ಧ ಸರಸ್ಸಿನ ಮಧ್ಯೆ ಕಮಲವರಳ್ವಂತೆ
ನಾಲ್ದೆಸೆಗೂ ಸೌರಭವು ತೀಡಿ ಹರಡ್ವಂತೆ ।
ಹೊಕ್ಕ ಗೃಹದಲಿ ಮಗಳೆ ಕೈದೀವಿಯಂತೆ ।
ಹೊಕ್ಕಿ ಬಾಳ್ವೆಯ ನಡೆಸು ಗೃಹಲಕ್ಷ್ಮೀಯಂತೆ ।
ನಿನ್ನುಜ್ವಲದ ಭವಿ-ತವ್ಯವನೆ ಬಯಸೀ
ನನ್ನೊಡಲು ತಣಿಯುತಿದೆ ನಿನ್ನನೂ ಹರಸೀ ॥

# ಬಹುಪತ್ನೀಕತ್ವ

**ಲೇಖಕ :— ಸಮತಾವಾದಿ.**

( ತಾ. ೮-೮-೫೨ನೇ ೩ನೇ ಸಂಚಿಕೆಯಿಂದ ಮುಂದೆ ಸಾಗಿದ್ದು. )



ವಿವಾಹಗಳನ್ನು ಬಿಟ್ಟ ಕಥೆ ಕಾದಂಬರಿಗಳು ಸಹಿತ ಯಶಸ್ವಿಯಾದದ್ದು ಕಂಡುಬಂದಿಲ್ಲ. ಸ್ವತಂತ್ರವಿಚಾರಮಾಡಲು ಪ್ರತಿಬಂಧ, ಪಾತಿವ್ರತ್ಯದ ಉಪದೇಶದ ಸುರಿಮಳೆ ಮತ್ತು ಸುದೈವದಿಂದ ಸ್ವಲ್ಪ ಜನರ ಪಾಲಿಗೆ ಬಂದಂಥ ಅನುಕೂಲ ಪರಿಸ್ಥಿತಿ ಅಂದರೆ, ದುಡ್ಡುದುಗ್ಗಾಣಿ, ತಕ್ಕಮಟ್ಟಿಗೆ ಪ್ರೇಮವಿದ್ದ ಗಂಡ, ಆರೋಗ್ಯ, ಸ್ವಭಾವ ಮುಂತಾದವುಗಳ ಮೂಲಕ ಅಲ್ಪಾಂಶದಿಂದ ಪ್ರೀತಿವಿವಾಹ ಅಥವಾ ಗಾಂಧರ್ವ ವಿವಾಹಗಳು ಯಶಸ್ವಿಯಾದಂತೆ ಕಾಣುತ್ತವೆ. ವಿವಾಹದ ಮುಖ್ಯ ಉದ್ದೇಶವೆಂದರೆ, ಸುಸಂತಾನ ಮತ್ತು ಇದಕ್ಕಾಗಿಯೇ ಪಾತಿವ್ರತ್ಯದ ಕಾಯ್ದೆ ಮತ್ತು ಲೋಕರೂಢಿಯ ಬಂಧನ. ಆದರೆ, ಎಲ್ಲಿಯವರೆಗೆ ಗಂಡಸು ಮನಬಂದಂತೆ ನಡೆಯುವನೋ ಅಲ್ಲಿಯ ವರೆಗೆ ಕೇವಲ ಹೆಣ್ಣುಮಕ್ಕಳ ಮೇಲೆ ಹಾಕಿದ ಬಂಧನವು ಯಶಸ್ವಿಯಾಗಲಾರದು. ಗಂಡಸಿನ ಮನಬಂದಂಥ ವರ್ತನೆಗೆ ತಡೆಹಾಕುವ ಉದ್ದೇಶದಿಂದಲೇ ಏಕಪತ್ನೀವ್ರತದ ಕಾಯ್ದೆಯನ್ನು ಮಾಡುವ ಪ್ರಸಂಗವಿದೆ, ಎಂದು ಗೃಹೀತ ಹಿಡಿದರೂ ಕೂಡ, ಮನುಷ್ಯ ಸ್ವಭಾವವಿದು. ಕಾಲಮಾನ ಪರಿಸ್ಥಿತಿಗನುಸಾರವಾಗಿ ಮಿಕ್ಕ ವಿಷಯಗಳಲ್ಲಿರುವಂತೆ ಲೈಂಗಿಕ ವಿಷಯಗಳಲ್ಲಿಯೂ ಕೂಡ ರುಚಿವೈಚಿತ್ರ್ಯ ಪ್ರಿಯವಿರುವದರಿಂದ ಶಾಶ್ವತವಾಗಿ ಸುಖಸಮಾಧಾನದಿಂದ ಒತ್ತಟ್ಟಿಗೆ ಇರಲು ಶಕ್ಯವಿಲ್ಲ. ಆದ್ದರಿಂದ ಜಗಳ-ತಂಟೆ ವಿಶ್ವಾಸಘಾತ, ಪ್ರೇಮಭಂಗ ಡಾಂಭಿಕತನ, ಕೊಲೆ ಮುಂತಾದವುಗಳು ಒದಗಿ, ಜೀವಿತವು ಅಸಹ್ಯವಾಗುತ್ತ ಹೋಗುವದ ತೀರ ಸ್ವಾಭಾವಿಕವಿದೆ. ಇದರ ಉದಾಹರಣೆಗಳು ವ್ಯವಹಾರದಲ್ಲಿ ಮನೆ-ಮನೆಗೆ ನೋಡಲಿಕ್ಕೆ ಸಿಗುತ್ತವೆ. ಇದಕ್ಕೆ ಮದ್ದೆಂದು ಬಿಡುಗಡೆಯ ಕಾಯ್ದೆಯ (Divorce) ಅವಶ್ಯಕತೆ ಅನಿಸಹತ್ತಿತು. ಈ ಪದ್ಧತಿಯು ಮಿಕ್ಕ ದೇಶಗಳಲ್ಲಿ, ಹಿಂದುಸ್ಥಾನದಲ್ಲಿ ಸಹ ಕೆಲವೊಂದು ಧರ್ಮಗಳಲ್ಲಿ ಜಾರಿಯಲ್ಲಿದೆ. ಆದರೆ, ಹಿಂದುಸ್ಥಾನದ ಕೆಲವು ಪ್ರಾಂತಗಳಲ್ಲಿ ಹಿಂದು ಜನರಿಗಾಗಿ ಕಾಯ್ದೆಯಿಂದ ಪಾಸಾಗಿದೆ. ಇದರಿಂದ ಏಕಪತ್ನೀತ್ವ ಮತ್ತು ಏಕಪತೀತ್ವದ ಕಾಯ್ದೆಯಿಂದ ಉಂಟಾಗ ತಕ್ಕದುಷ್ಪರಿಣಾಮಗಳ ಹಾನಿ ತುಂಬಿಬರಲಾರವು. ಈ ಕಾಯ್ದೆಯ ಸದ್ಯದ ಮತವೇನಂದರೆ, ಸುಶಿಕ್ಷಿತರಾದ ಬಹುತೇಕ ಸ್ತ್ರೀಪುರುಷರ ಪ್ರವೃತ್ತಿಯು ಆ ಮರಣ

ಪ್ರೇಮದಿಂದ ಮತ್ತು ಸಲುಗೆಯಿಂದ ಒತ್ತಟ್ಟಿಗೆ ಇರುವದಿರುತ್ತದೆ.ಆದರೆ, ಒಂದೆರಡು ಉದಾಹರಣೆಗಳಲ್ಲಿ ಬಹಳ ನಷ್ಟವಾಗುವ ಸಂಭವವು ಎಲ್ಲಿರುತ್ತದೆಯೋ ಅಲ್ಲಿ ಮಾತ್ರ ಈ ಬಿಡುಗಡೆಯ ಕಾಯ್ದೆಯು ಅವಶ್ಯಕತೆಯಿದೆ. ಈ ಇವರ ಅಭಿಪ್ರಾಯದಲ್ಲಿ ಸತ್ಯಾಂಶ ಸ್ವಲ್ಪ ಭಾಸವಾಗುತ್ತದೆ. ಅದಕ್ಕೆ ಕಾರಣವೆಂದರೆ ಕೃತ್ರಿಮ ಮಾನವೀಯ ಸಂಸ್ಕಾರಗಳ ಮೂಲಕ ಅವಶ್ಯವೆನಿಸುವ ಶಿಷ್ಟಸಂಪ್ರದಾಯ, ಲೈಂಗಿಕಜ್ಞಾನದ ಅಭಾವ ಮತ್ತು ಒತ್ತಾಯದ ಕಾಯ್ದೆಗಳು. ಸ್ತ್ರೀ ಶಿಕ್ಷಣ ಮತ್ತು ಸ್ತ್ರೀ ಸ್ವಾತಂತ್ರ್ಯದ ವಿಕಾಸದ ಪ್ರಮಾಣಕ್ಕನುಗುಣವಾಗಿ ಹಳೇ ಶಿಷ್ಟಾಚಾರದ ಕಟ್ಟಳೆಗಳಿಗೆ ಧಕ್ಕೆ ತಗಲಿ ಹೊಸ ಹೊಸ ಕಟ್ಟಳೆಗಳ ಅವಶ್ಯಕತೆಎನಿಸಹತ್ತಿದೆ. ಇದು ಯುರೋಪ ಅಮೇರಿಕೆ ಮುಂತಾದ ಸ್ವತಂತ್ರ ದೇಶಗಳಲ್ಲಿ ಪ್ರಚಲಿತವಾಗಿದ್ದ ಏಕಪತ್ನೀತ್ವ ಮತ್ತು ಬಿಡುಗಡೆಯ ಕಾಯ್ದೆಯಿಂದ ಆಗತಕ್ಕ ದುಷ್ಪರಿಣಾಮಗಳಿಂದ ಕಂಡು ಬರುತ್ತದೆ. ಅವು ಯಾವವೆಂದರೆ,

ಸೃಷ್ಟಿಧರ್ಮಕ್ಕನುಗುಣವಾಗಿ ಗಂಡಸು ಗರ್ಭಧಾರಣೆ ಮಾಡದಿರುವದರಿಂದ ಕಾಯ್ದೆ ಸತ್ತೆ, ಲೋಕರೂಢಿ ಜ್ಞಾನ, ವ್ಯವಹಾರ ಇವುಗಳೆಲ್ಲ ಸಾಕಷ್ಟು ಗಂಡಸರಿಗೆ ಅನುಕೂಲವಿರುವದರಿಂದ ಜ್ಞಾನಶಕ್ತಿ, ಆರ್ಥಿಕಶಕ್ತಿ ಮತ್ತು ಸ್ವಾತಂತ್ರ್ಯ ಗಂಡಸರಿಗೆ ಬೇಕಾದಷ್ಟು ಇರುವದರಿಂದ ಅಥವಾ ಅವುಗಳನ್ನು ದೊರಕಿಸಲು ಸಾಧನಗಳು ಸಾಕಷ್ಟು ಅನುಕೂಲವಿರುವದರಿಂದ ಗಂಡಸಿನ ವ್ಯಭಿಚಾರಕ್ಕೆ ತಾತ್ವಿಕ ದೃಷ್ಟಿಯಿಂದಂತು ಆತಂಕ ಇಲ್ಲವೇ ಇಲ್ಲ.ವ್ಯವಹಾರಿಕ ದೃಷ್ಟಿಯಿಂದ ತಾತ್ಪೂರ್ತಿಕ ತಡೆಹಾಕುವದು ಕೂಡ ಬಹುಮಟ್ಟಿಗೆ ಅಶಕ್ಯವಿರುತ್ತದೆ.ಇಂಥ ಪರಿಸ್ಥಿತಿಯಲ್ಲಿ ಏಕಪತ್ನೀತ್ವದ ಕಾಯ್ದೆಯನ್ನು, ಅವರ ಮೇಲೆ ಹೇರುವದರಿಂದ, ಕುಟುಂಬ ಜೀವನಕ್ಕೆ ಸ್ವಾಸ್ಥ್ಯಸಿಗುವ ಬದಲು ಹುಳಹತ್ತುತ್ತದೆ. ಕಾಯ್ದೆ ಅಥವಾ ಹಕ್ಕುಯಿದ್ದಲ್ಲಿ ಅದರ ಲಾಭತೆಗೆದುಕೊಳ್ಳುವ ಪ್ರವೃತ್ತಿಯು ಸ್ವಾಭಾವಿಕವಿರುತ್ತದೆ. ಇದಕ್ಕನುಗುಣವಾಗಿ ಹೆಂಗಸು ಗಂಡನೊಡನೆ ಜಗಳಾಡುವಳು. ಅವರ ನಡತೆಗಳನ್ನು ಗುಪ್ತ ರೀತಿಯಿಂದ ನಿರೀಕ್ಷಿಸುವಳು; ತನ್ನಲ್ಲಿ ಸ್ವಾವಲಂಬನದಿಂದ ಗಳಿಸುವ ಶಕ್ತಿ ಇಲ್ಲದ್ದರಿಂದ ಸವತೀಮತ್ಸರದಿಂದ ಬಳಲುವಳು; ಗಂಡನ ವ್ಯಭಿಚಾರದ ವಿಷಯಕ್ಕೆ ಸಂಶಯವು ಬೆಳೆಯುತ್ತಹೋಗಿ, ಕೊನೆಗೆ ವ್ಯಭಿಚಾರ ಸಿದ್ಧವಾಗುವವರೆಗೆ ಮುಟ್ಟಲು ಮುಟ್ಟಿ, ಮನೆ ಮನೆಯೊಳಗೆ ಅಸಂತೋಷದ, ಅವಿಶ್ವಾಸದ ಕಾರಸ್ಥಾನಗಳ ಮತ್ತು ಪ್ರಸಂಗ ವಿಶೇಷಗಳಲ್ಲಿ ಲೈಂಗಿಕ ರೋಗಗಳ ಸಾಮ್ರಾಜ್ಯ ಬೆಳೆದು ಕೌಟುಂಬಿಕ ಸೌಖ್ಯವಿಲ್ಲದಂತಾಗುತ್ತದೆ. ಮತ್ತು ಕೊನೆಗೆ ಬಿಡುಗಡೆಯ ಹೊರ್ತು ಉಪಾಯವೇ ಉಳಿಯುವದಿಲ್ಲ. ಏಕಪತ್ನೀತ್ವದ ಕಾಯ್ದೆ ಮತ್ತು ಬಿಡುಗಡೆಯ ಕಾಯ್ದೆ ಇವೆರಡು ದೇಹ ಮತ್ತು ಜೀವ ಇವುಗಳಂತೆ ನಿಕಟ ಸಂಬಂಧಿಗಳಾಗಿರುತ್ತವೆ. ಬಿಡುಗಡೆಯ ಕಾಯ್ದೆಯಿಂದಾದರೂ ಕೌಟುಂಬಿಕ ಜೀವನವು ಅಷ್ಟು ಸುಖಮಯ ಮತ್ತು ಸ್ವಾಸ್ಥ್ಯಮಯವಾಗುವದು ಶಕ್ಯವಿಲ್ಲ. ಯಾಕಂದರೆ, ಎರಡು ಭಿನ್ನ ಪ್ರವೃತ್ತಿ

ಗಳುಳ್ಳ ವ್ಯಕ್ತಿಗಳ ಸಂಮೇಲನವೆಂದರೆ, ಕೌಟುಂಬಿಕ ಜೀವನ,ಪ್ರತಿಯೊಬ್ಬರ ಶಿಕ್ಷಣ ಸಂಸ್ಕಾರ, ಚಟಗಳಂತೆ, ಸ್ವಭಾವ, ಭಾವನೆ ಮತ್ತು ಯೋಗ್ಯತೆ ಬೇರೆ ಬೇರೆಯಾಗಿರುತ್ತವೆ ಇಂಥ ಪರಿಸ್ಥಿತಿಯಲ್ಲಿ ಕೆಲ ಕೆಲವು ಪ್ರಸಂಗಗಳಲ್ಲಿ ಗಂಡನಿಗೆ ಬಿಡುಗಡೆ ಬೇಕಾಗುತ್ತದೆ. ಆದರೆ ಹೆಂಡತಿಗೆ ಬೇಡಾಗಿರುತ್ತದೆ. ಹೆಂಡತಿಗೆ ಬೇಕಾಗಿದ್ದರೆ, ಗಂಡನಿಗೆ ಬೇಡಾಗಿರುತ್ತದೆ. ಇಂಥ ಪರಿಸ್ಥಿತಿಯಲ್ಲಿ ಒಂದು ವ್ಯಕ್ತಿಯು ಮಾನಸಿಕ, ಶಾರೀರಿಕ ಹಾನಿಮಾಡಿ ಮತ್ತೊಂದು ವ್ಯಕ್ತಿಯ ಕಲ್ಯಾಣವನ್ನು ಈ ಬಿಡುಗಡೆಯ ಕಾಯ್ದೆಯಿಂದ ಮಾಡಿದಂತಾಗಬಾಗ್ಯೂ ಸಮಾಜದ ಕಲ್ಯಾಣವಾದಂತೆ ಆಗಲಿಲ್ಲ! ಮತ್ತು ಕೌಟುಂಬಿಕ ಜೀವನ ಸ್ವಾಸ್ಥ್ಯದ ಪ್ರಶ್ನೆ ಬಿಡಿಸಿದಂತೆಯಾಗಲಿಲ್ಲ. ಈ ಪ್ರಶ್ನೆ ಬಿಡಿಸಲು ಸ್ವಾಭಾವಿಕವಾಗಿ ಗಂಡಸು-ಹೆಂಗಸಿನ ದೇಹದ ರಚನೆ ಮನೋಧರ್ಮ ಇವುಗಳ ವಿಚಾರ ಮೊದಲು ಮಾಡುವದರಿಂದ ಮುಂದೇನು ಮಾಡಬೇಕೆಂಬುದು ನಿಶ್ಚಯಿಸಲು ಅನುಕೂಲ ಮತ್ತು ಯೋಗ್ಯವಾಗುವದು. (೧) ಹುಳ-ಇರುವೆಯಿಂದ ಮನುಷ್ಯ ಕೋಟಿಯವರೆಗೆ ಪ್ರತಿಯೊಂದು ಪ್ರಾಣಿಯು ಬಹುಭಾಗದಿಂದ ಸ್ವಾವಲಂಬಿಯಾಗಿರುವವು. ಕೇವಲ ಸಂತತಿಗಾಗಿ ಗಂಡು, ಹೆಣ್ಣು, ಪರಸ್ಪರ ಅವಲಂಬಿಯಾಗಿರುವವು. ಕೇವಲ ಮನುಷ್ಯ–ವಿಶೇಷವಾಗಿ ಸುಧಾರಿಸಿದ–ಕೋಟಿಯಲ್ಲಿ ಆರ್ಥಿಕ ಪರಿಸ್ಥಿತಿಯ ವ್ಯತ್ಯಾಸದಿಂದ ಗಂಡು, ಹೆಣ್ಣು ಪರಸ್ಪರಾವಲಂಬಿಯಾಗಿರುವರು. ಅದರಲ್ಲಿಯೂ ವಿಶೇಷವಾಗಿ ಸ್ತ್ರೀಯರು ಪುರುಷಾವಲಂಬಿಯಾಗಿರುವವರು. ಇದು ಬಹ್ವಂಶದಿಂದ ಕೌಟುಂಬಿಕ ಸ್ವಾಸ್ಥ್ಯಕ್ಕೆ ಘಾತಕವಾಗಿರುವದು. ಈ ಸ್ವಭಾವಸಿದ್ಧ ಸ್ವಾವಲಂಬನವನ್ನು ಸಿದ್ಧಮಾಡಲು ಅಂದರೆ,–ಸಮತೆಗಾಗಿ, ಕ್ಷಣಕ್ಷಣಕ್ಕೆ ಹೋರಾಟ ನಡೆದಿದೆ. (೨) ಪ್ರತಿಯೊಂದು ವ್ಯಕ್ತಿಯು ಸ್ವಾವಲಂಬಿಯಾಗಿರುವದು ನಿಸರ್ಗ ನಿಯಮವೆಂದು ಒಪ್ಪಿದಲ್ಲಿ ಪ್ರತಿಯೊಂದು ವ್ಯಕ್ತಿಯ ರುಚಿ–ವೈಚಿತ್ರ್ಯ ಪ್ರವೃತ್ತಿಯನ್ನು ಒಪ್ಪಿದಂತಾಯಿತು. ಈ ವ್ಯಕ್ತಿ ಸ್ವಾತಂತ್ರ್ಯವು, ಈ ಕೃತ್ರಿಮವಾದ ಸಮಾಜ ಜೀವನದಲ್ಲಿ ಪರಸ್ಪರರಿಗೆ ವಿಘಾತಕವಾಗಲಿಕ್ಕಿಲ್ಲ. ಮತ್ತು ಇದಕ್ಕೆ ತುಂಬಾ ಅನುಕೂಲವಾಗುವಂತೆ ಸಮಾಜದ ರಚನೆ ಮತ್ತು ಕಾಯ್ದೆ ಮಾಡುವದು, ಇದು ಯೋಗ್ಯ, ಶ್ರೇಯಸ್ಕರ ಮತ್ತು ನಾಲ್ಕು ದಿವಸ ಬಾಳುವಂಥದು ಇರುತ್ತದೆ. ಈ ವ್ಯಕ್ತಿ ಸ್ವಾತಂತ್ರ್ಯವನ್ನು ಲೈಂಗಿಕ ವಿಷಯಗಳಲ್ಲಿ ಸಹ (ವ್ಯವಹಾರತಃ ಇದ್ದಂತೆಯೇ) ಕೇವಲ ಪುರುಷರಿಗೆ ಅಷ್ಟೇ ಅಲ್ಲ, ಹೆಣ್ಣುಮಕ್ಕಳಿಗೂ ಕೂಡ ಕೊಡುವದು ಅಗತ್ಯದ್ದು ಮತ್ತು ಕ್ರಮಪ್ರಾಪ್ತವಾದದ್ದು ಇರುತ್ತದೆ. ಈ ರುಚಿವೈಚಿತ್ರ್ಯ ಪ್ರವೃತ್ತಿಯು ಪರಿಸ್ಥಿತಿಗನುಗುಣವಾಗಿ, ಕ್ಷಣ ಕ್ಷಣಕ್ಕೆ ಬದಲಾಗುವ ಸಂಭವವಿರುತ್ತದೆ.

(೩) ಎರಡು ಭಿನ್ನ ವ್ಯಕ್ತಿಗಳ ಅಂದರೆ ಗಂಡು ಹೆಣ್ಣಿನ ಸಹಕಾರದಿಂದ ಸಂತತಿಯಾಗುತ್ತದೆ. ಗಂಡು ಹೆಣ್ಣಿನ ಉತ್ಪತ್ತಿ ಮತ್ತು ಸಂಪರ್ಕ ಕೇವಲ ಸಂತತಿಗಾಗಿ ಇರುತ್ತದೆ.ಇದರ ಮೇಲಿಂದ ಯಾವಾಗಲೂ ಸಂತತಿಯನ್ನೇ ಹುಟ್ಟಿಸಬೇಕೆಂಬ

ಅರ್ಥವಲ್ಲ. ಆದರೆ, ಸಂತತಿಗಾಗಿಯೇ ಇವರ ಅಗತ್ಯವಿದೆ ಎಂಬ ಮಾತು ಸುಳ್ಳಾಗುವದಿಲ್ಲ. ಮಿಕ್ಕ ಕೃತ್ರಿಮ ಜೀವನವನ್ನು ಸಾಗಿಸದಂತೆ ಕಾಮಶಾಸ್ತ್ರದ ಅಭ್ಯಾಸದ ಬಲದಿಂದ ಹೆಚ್ಚು ಕಡಿಮೆ ನಷ್ಟವನ್ನು ಸಹಿಸಿ, ಸಂತತಿ ನಿರ್ಮಾಣಮಾಡದೆ, ಸುಖ ತೆಗೆದುಕೊಳ್ಳಲು ಬರುವದಿಲ್ಲವೆಂಬ ಮಾತು ನಿಜ. ಆದರೂ ಮೂಲ ಭೂತ ಸಿದ್ಧಾಂತಕ್ಕೆ ಬಾಧೆಯಿಲ್ಲ. ಎರಡು ಭಿನ್ನ ವ್ಯಕ್ತಿಗಳ ಸಹವಾಸದಿಂದ ಸಂತತಿಯಾಗುತ್ತಿರುವದರಿಂದ ಸ್ವಾಭಾವಿಕವಾಗಿಯೇ ಎರಡು ಭಿನ್ನ ವ್ಯಕ್ತಿಗಳ ಜನನೇಂದ್ರಿಯಗಳ ರಚನೆಯು ಬೇರೆಯಾಗಿರುತ್ತದೆ.ಗರ್ಭಧಾರಣೆಯ,ಮಕ್ಕಳ ಪೋಷಣೆಯ, ಮುಂತಾದ ಎಲ್ಲ ಹೊಣೆಯು ಹೆಣ್ಣುಮಕ್ಕಳಮೇಲೆ ಇರುವದರಿಂದ ಅವರ ದೇಹದಲ್ಲಿ ಗರ್ಭಧಾರಣೆಯು ಪೂರ್ಣಸಿದ್ಧತೆಯಾದಲ್ಲಿ ಮಾತ್ರ ಸ್ತ್ರೀಯರಲ್ಲಿ ಕಾಮವಾಸನೆಯು ತೀವ್ರವಾಗಿ ಉಂಟಾಗುವದು. ಅಂದರೆ ವಿಶಿಷ್ಟ ಕಾಲದಲ್ಲಿಯೇ ಅವರಲ್ಲಿ ಕಾಮವಾಸನೆಯು ಉಂಟಾಗುವದು ಮತ್ತು ಅದು ಪ್ರಬಲವಾಗಿರುವದು. ಮತ್ತು ಅದೇ ಕಾಲಕ್ಕೆ ಕಾಮವಾಸನೆಯು ಹುಟ್ಟೀತೀರಬೇಕೆಂಬುದು ಶಕ್ಯವಿಲ್ಲ. ಆದಾಗ್ಯೂ ಸ್ವಲ್ಪ ಹೆಚ್ಚು ಕಡಿಮೆ ಬಾಹ್ಯ ಮತ್ತು ಉತ್ತೇಜಕ ಸಾಧನಗಳಿಂದ ಅಂದರೆ, ವನಪುಒಯ್ಯಾರಗಳಿಂದ, ಆಲಿಂಗನಾದಿ ಉಪಾಯಗಳಿಂದ (ಆರೋಗ್ಯ ಸರಿಯಾಗಿ ಇದ್ದರೆ, ಬೇಕಾದ ವೇಳೆಯಲ್ಲಿ ಕಾಮವಾಸನೆಯು ಹುಟ್ಟುವಂತೆ, ಗಂಡಸರ ಜನನೇಂದ್ರಿಯ ರಚನೆ ಇರುವದು. ಇದು ಸ್ತ್ರೀಯರಲ್ಲಿಯಷ್ಟು ತೀವ್ರವಿರುವದಿಲ್ಲ. ಮತ್ತು ಅದರ ಸಂಯಮನದಿಂದ ಸ್ತ್ರೀಯರಿಗೆ ಉಂಟಾಗುವಷ್ಟು ನಷ್ಟವು ಗಂಡಸರಿಗೆ ಉಂಟಾಗುವದಿಲ್ಲ. ಈ ಕಾರಣದಿಂದ ಗಂಡಸರ ಉತ್ಪತ್ತಿಗಿಂತ ಹೆಣ್ಣುಮಕ್ಕಳ ಉತ್ಪತ್ತಿ ಹೆಚ್ಚಾಗಿರುತ್ತದೆ. ಇದರಿಂದ ಒಬ್ಬ ಗಂಡಸಿಗೆ ಎಷ್ಟೋ ಮಂದಿ ಹೆಂಗಸರು ಎಂಬ ಸೃಷ್ಟಿ ನಿಯಮವಿದೆ. ಈ ಸೃಷ್ಟಿ ನಿಯಮವನ್ನು ಅಲಕ್ಷಿಸಿ, ಏಕಪತ್ನೀತ್ವದ ಕಾಯ್ದೆಯನ್ನು ಜಾರಿಯಲ್ಲಿ ತಂದಲ್ಲಿ ಎಷ್ಟೋ ಹೆಣ್ಣುಮಕ್ಕಳ ಕೆಲಸ ಒಬ್ಬ ಸ್ತ್ರೀಯ ಮೇಲೆ ಬೀಳುವದರಿಂದ ( ಈ ನಿಯಮವನ್ನು ನಿಷ್ಠೆಯಿಂದ ಪಾಲಿಸಿದರೆ) ಅವರ ಪ್ರಕೃತಿಯು ಕೆಡುತ್ತದೆ. ಮತ್ತು ಸ್ತ್ರೀಯ ಜನನೇಂದ್ರಿಯಗಳಿಗೆ ವಿಶಿಷ್ಟ ರೋಗಗಳು ಬೆಳೆದಿವೆ, ಬೆಳೆಯುತ್ತವೆ. ಈ ಸ್ತ್ರೀಯರ ಬೇನೆಯಿಂದ ಮಕ್ಕಳ ಬೇನೆಗಳು ಬೆಳೆಯುತ್ತವೆ. ಈ ಸ್ತ್ರೀಯರ ಮತ್ತು ಮಕ್ಕಳ ರೋಗಗಳಿಂದ ದವಾಖಾನೆಗಳು ತುಂಬಿ ತುಳುಕುತ್ತಿದ್ದು, ಡಾಕ್ಟರರ, ಹಕೀಮರ, ವೈದ್ಯರ ಚೆಲ್ಲಾಟ. ಹೀಗೆ ಇದೆ ಈ ಪರಂಪರೆಯು ಅತೀ ಸಂಘದ ಪರಿಣಾಮ ಸ್ತ್ರೀಯರಿಗೆ ಘಾತುಕವಾಗುವಷ್ಟು ಪುರುಷರಿಗೆ ಆಗುವದಿಲ್ಲ ಎಂಬ ವೈದಿಕ ಶಾಸ್ತ್ರದ ಅನುಭವ.

ಏಕ ಪತ್ನಿತ್ವ ಕಾಯ್ದೆಯನ್ನು ಒತ್ತಾಯದಿಂದ ಹೇರಿದಲ್ಲಿ ಆಗುವ ನಷ್ಟ ತುಂಬಿಕೊಳ್ಳುವದು ಯಾವನಾದರೊಬ್ಬ ಪುರುಷನ ಆದರ್ಶಭೂತ ಗಂಡಿಸಿನ ಬ್ರಹ್ಮಚರ್ಯ ವ್ರತದಿಂದ ಹತ್ತಿರ ಹತ್ತಿರ ಅಶಕ್ಯವಿರುತ್ತದೆ. ಮನೋಬಲದಿಂದ ಅದನ್ನು ಶಕ್ಯಮಾಡಲು ಹೋದರೆ ಎಲ್ಲರಿಗೂ ಇಲ್ಲದಿದ್ದರೂ ಬಹಳ ಜನರಿಗೆ ಅಪಾಯಕರ

ವಾಗುವದು. ಕಾಮಶಾಸ್ತ್ರದ ಅಭ್ಯಾಸದ ಪ್ರಚಾರದಿಂದ ನೈಸರ್ಗಿಕ ಕಾಮವಾಸನೆ ಯಷ್ಟೇ ತಿವ್ರ ವಾಸನೆಯು ಸ್ತ್ರೀಯರಲ್ಲಿ ಕೃತ್ರಿಮತನದಿಂದ ಮೂಡುವದು ಸಾಧ್ಯವಿದೆ. ಆದರೆ ಈ ಮಾತು ಬಾಹ್ಯಜೀವನದ ಕಲಹ ವ್ಯಾಪಾರದಿಂದ ದಿನಾಲು ಸಾಧ್ಯವಾದೀ ತೆಂದು ಅನಿಸುವದಿಲ್ಲ. ಹಾಗೆ ಅದು ಸಾಧ್ಯವಾಗದಿದ್ದಲ್ಲಿ ಹೆಂಗಸರಿಗೆ ಅಸಮಾಧಾನ. ಬಿಳೀಸೆರಗು ಮುಂತಾದ ಸ್ತ್ರೀಯರ ವಿಶಿಷ್ಠ ರೋಗಗಳು ಗರ್ಭ ಪಾತ, ಶಕ್ತಿ ಪಾತ, ಕ್ಷಯ, ದಮ್ಮು, ಬಾಳಂತಿ ಬೇನೆ, ಮುಂತಾದ ಬೇನೆಗಳ ಮಾಲಿಕೆಯು ಬೆನ್ನಟ್ಟದೆ ಇರಲಾರದು.

ಈ ಎಲ್ಲ ಮೇಲಿನ ಸಂಗತಿಗಳನ್ನು ಗೃಹೀತ ಹಿಡಿದಲ್ಲಿ ಅಥವಾ ಒಪ್ಪಿದಲ್ಲಿ ಮುಂದೇನು ಮಾಡಬೇಕೆಂಬುದು ಗೊತ್ತಾಗುವದು. ಏಕ ಪತಿವ್ರತದ ಕಾಯ್ದೆಯನ್ನು ಅನ್ಯಾಯವಾಗಿ ಸ್ತ್ರೀಯರಮೇಲೆ ಹೇರಿರುವರೆಂಬ ಕಲ್ಪನೆಯಿಂದ ಏಕ ಪತ್ನಿವ್ರತದ ಕಾಯ್ದೆಯನ್ನು ಪುರುಷರ ಮೇಲೆ ಹೇರಿದಲ್ಲಿ ಹೆಂಗಸರಿಗೆ ಯಾವ ಲಾಭವೂ ಆಗದೆ ಅವರು ಹೆಚ್ಚು ನಷ್ಟಕ್ಕೆಗುರಿಯಾಗುವರು.ಸಮಾನ ಹಕ್ಕುದೊರಕಿಸುವ ಗೊಂದಲದಲ್ಲಿ ಎಲ್ಲವನ್ನು ಕಳೆದುಕೊಂಡು ಕೂಡುವ ಪ್ರಸಂಗ ಹೆಣ್ಣುಮಕ್ಕಳಿಗೆ ಬರುವದು. ಮತ್ತು ಎರಡನೆಯವರಿಗೆಂದರೆ, ಪುರುಷರಿಗೆ ಪಾರತಂತ್ರ್ಯದಲ್ಲಿ ಹಾಕಿದ ಪಾಪ ಹತ್ತಿ ಅದರ ಪ್ರಾಯಶ್ಚಿತ ಎಲ್ಲರಿಗೂ ಅನುಭವಿಸಬೇಕಾಗುವದು. ಕೌಟುಂಬಿಕ ಸ್ವಾಸ್ಥ್ಯವನ್ನು ಉಂಟುಮಾಡಲು ಹೊರಟ ಈ ಕಾಯ್ದೆಯು ಅದಕ್ಕೆ ಕಾಳಾಗಿ ಪರಿಣಮಿಸುವದು. ಹೀಗಾಗ ಬಾರದೆಂದು ಮತ್ತು ಸ್ವಾತಂತ್ರ್ಯಪೂರ್ಣವಾಗಿ ಉಳಿಯಬೇಕೆಂದು ಅನಿಸು ತ್ತಿದ್ದರೆ, ನಿಸರ್ಗ ನಿಯಮಕ್ಕನುಗುಣವಾಗಿ ನಡೆಯಲು ನಿಶ್ಚಯಿಸಬೇಕು. ಮತ್ತು "ನನ್ನ ದೇಹದಲ್ಲಿ ಗರ್ಭಧಾರಣೆಯ ಸಿದ್ಧತೆಯಾದಲ್ಲಿ ಮಾತ್ರ ನಾನು ಗಂಡಸಿನ ಸಹ ಕಾರವನ್ನು ಸಂತತಿಗಾಗಿ ತೆಗೆದುಕೊಳ್ಳುವೆನು. ಇದು ನನ್ನ ಮತ್ತು ನನ್ನ ಮಕ್ಕಳ ಹಿತದ ಸ್ವಾತಂತ್ರ್ಯದ ಮತ್ತು ಸ್ವಾವಲಂಬನದ ದೃಷ್ಟಿಯಿಂದ ನನ್ನ ಜನ್ಮಸಿದ್ಧ ಹಕ್ಕು ಇರುತ್ತದೆ. ಈ ಹಕ್ಕು ಪ್ರಸ್ಥಾಪಿಸುವದಕ್ಕಾಗಿ ಕಾಯ್ದೆಗಳನ್ನು ಮತ್ತು ಅವುಗಳಿಗ ನುಸಾರವಾಗಿ ಸಮಾಜದ ರಚನೆಯಲ್ಲಿ ಬದಲು ಮಾಡಲು ಯತ್ನಿಸುವದು ಅಗತ್ಯ ವಿದೆ ಅದನ್ನು ನಾನು ಮಾಡುವೆನು. ಇದರಲ್ಲಿ ಯಾರಿಗೂ ನಷ್ಟವಿಲ್ಲ." ಹೀಗೆ ಹೆಣ್ಣುಮಕ್ಕಳುಜಾಹಿರ ಪಡಿಸಬೇಕು.ಇದರಿಂದ ಗಂಡಸು ಕೆಟ್ಟುಹೋದರೆ,ವ್ಯಭಿಚಾರಿ ಯಾದರೆ, ರೋಗಿ ಇದ್ದರೆ, ನಪುಂಸಕನಾದರೆ, ಏನುಮಾಡಬೇಕೆಂಬ ಪ್ರಶ್ನೆಗಳು ತಾವೇ ಬಿಟ್ಟುಹೋಗುವವು.

ಸೃಷ್ಟಿ ನಿಯಮಗಳ ವಿಚಾರ ಮಾಡುತ್ತಿರಲು ಐಚ್ಛಿಕ ಪಾತಿವ್ರತ್ಯ ಕ್ವಚಿ ತವೇ ಸಿಗುವದು. ಮತ್ತು ಹತ್ತಿರ ಹತ್ತಿರ ಲೌಕಿಕ ಪಾತಿವ್ರತ್ಯವು ಅಸ್ಥಿತ್ವದಲ್ಲಿಯೇ ಇಲ್ಲ. ಈ ತೆರನಾದ ಅನಾಹುತಗಳನ್ನು ಲಕ್ಷಕ್ಕೆ ತಂದು ಭಗಿನಿಯರೇ ನೀವು ನಿಮ್ಮ ಲೈಂಗಿಕ ಸ್ವಾತಂತ್ರ್ಯವನ್ನು ಪ್ರಸ್ಥಾಪಿಸಿ, ನೀವು ಸುಖಿಗಳಾಗಿರಿ ಮತ್ತು ಜಗತ್ತನ್ನು ಸುಖಿಯನ್ನಾಗಿ ಮಾಡಿರಿ. ಗಂಡಸರು ನಿಮ್ಮನ್ನು ದಾಸ್ಯದಲ್ಲಿಟ್ಟರೆಂದು ನೀವು ಅವ

ರನ್ನು ದಾಸರನ್ನು ಮಾಡುವದು ತಪ್ಪು. ಇಬ್ಬರೂ ಸ್ವತಂತ್ರ ಸಹಕಾರಿ ಪರಸ್ಪರಾವಲಂಬಿಯಾಗಿ " ಸರ್ವೇ ಸುಖಿನೋ ಭವಂತು " ಎಂಬ ವೇದವಾಣಿಯನ್ನು ಸಾರ್ಥಕವಾಗುವದು ಈ ವಿಷ್ಟಲೀರಲು ನೀವು ಜ್ಞಾನಿಯಾಗುವದು ಆರ್ಥಿಕದೃಷ್ಟಿಯಿಂದ ಸ್ವತಂತ್ರರಾಗುವದು ಅವಶ್ಯವಿದೆ. ಇದಕ್ಕೆ ಸಯ್ಯಮನವು ಹೆಚ್ಚುಬೇಕು. ಇದರಿಂದ ಸ್ವೈರಾಚಾರ ಬೆಳೆಯುವದು ಎಂಬ ಕಲ್ಪನೆಯು ಬಹಳ ಜನರದು ವಿಶೇಷವಾಗಿ ಗಂಡಸರದು ಇರುತ್ತದೆ. ಇದು ಶದ್ಧ ತಪ್ಪು ಇರುತ್ತದೆ.

ನಿಮ್ಮ ಇಚ್ಛೆಯ ವಿರುದ್ಧ ನಿಸರ್ಗ ನಿಯಮದ ವಿರುದ್ಧ, ಮತ್ತೊಬ್ಬರ ಇಚ್ಛೆಯಂತೆ ನಡೆಯುವದದರಲ್ಲಿ ನಿಜವಾದ ಅನೀತಿಯಿರುತ್ತದೆ. ಇದರಲ್ಲಿ ಮಕ್ಕಳ ಘಾತವಿರುತ್ತದೆ. ಲೋಕ ರೂಢಿಯಂತೆ, ಇದು ಅನೀತಿಯೆಂದು ನಿರ್ಧರಿಸಲ್ಪಡದಿದ್ದರೂ, ಈಶಕೃತ ನಿಸರ್ಗನಿಯಮದ ವಿರುದ್ಧವಿರುವದರಿಂದ ಇದಕ್ಕೆ ಅನೀತಿಯೆಂದೆನ್ನ ಬಹುದು. ಒಬ್ಬ ಗ್ರಂಥಗಾರನು ಅಂದಂತೆ, " ಲೋಕ ರೂಢಿ ಅನೀತಿ Legalised licenciousness ಅಂದರೆ, ಕಾಯ್ದೆಶೀರ ವ್ಯಭಿಚಾರವೆಂದನ್ನಬಹುದು. ಇದರ ದುಷ್ಪರಿಣಾಮವು ನಮ್ಮ ಮತ್ತು ನಮ್ಮ ಮಕ್ಕಳ ಅನಾರೋಗ್ಯಕ್ಕೆ ಕಾರಣವಾಗಿದೆ. ಇದರಿಂದ ಲೌಕಿಕ ದೃಷ್ಟಿಯಿಂದ ನೀತಿವಂತ ದಂಪತಿಗಳ ಮಕ್ಕಳಿಗಿಂತ ಲೌಕಿಕ ದೃಷ್ಟಿಯಿಂದ ಅನೀತಿವಂತ ದಂಪತಿಗಳ ಮಕ್ಕಳು ಹೆಚ್ಚು ತೇಜಸ್ವಿಯಾಗುತ್ತಿರಲಿಲ್ಲ. ಈ ಎಲ್ಲ ಸಂಗತಿಗಳ ವಿಚಾರವನ್ನು ಶಾಂತ ರೀತಿಯಿಂದಮಾಡಿ, ಏಕಪತ್ನೀತ್ವದ ಕಾಯ್ದೆಗೆ ಜೋರಿನಿಂದ ವಿರೋಧಮಾಡಬೇಕು. ಇದು ಬಹಳ ಕಷ್ಟದ ಮತ್ತು ಕಾಲಾಂತರದಿಂದ ಆಗತಕ್ಕ ಕೆಲಸವಿದೆ. ಎಲ್ಲ ರೂಢ ಮೂಢ ಕಲ್ಪನೆಗಳನ್ನು ಕಿತ್ತೊಗೆಯಬೇಕಾಗುವದು. ಎಷ್ಟೋ ಜನರು ಬಲಿದಾನ ಕೊಡಬೇಕಾಗುವದು. ಇದು ನಿಜ. ಆದರೆ ಕಷ್ಟದ ಮಾನದಿಂದ ಲಾಭವಾದರೆ ಆಗಬಹುದು. ಸ್ವತಃ ಸಾಯದೆ ಸ್ವರ್ಗಸಿಗಲಾರದು. ಇದು ಎಲ್ಲರಿಗೂ ಗೊತ್ತಿದ್ದ ಮಾತು.

" ಉದ್ಧರೇದಾತ್ಮನಾತ್ಮಾನಂ ಆತ್ಮಾನಂ ಅವಸಾದಯೇತ್ ।
ಆತ್ಮೈವಾತ್ಮನೋ ಬಂಧುಃ । ಆತ್ಮೈವರಿಪುರಾತ್ಮನಃ ॥

ಈ ಗೀತೋಕ್ತಿಯಂತೆ ನಮ್ಮ ಉದ್ಧಾರವನ್ನು ನಾವೇ ಮಾಡಿಕೊಳ್ಳಬೇಕು. ನಮ್ಮ ಪಾಪ ಪುಣ್ಯಗಳಿಗೆ ನಾವೇ ಹೊಣೆಗಾರರಿರುತ್ತೇವೆ. ಈ ಉಚ್ಚತರಗತಿಯ ಸ್ವಾತಂತ್ರ್ಯದ ಹಕ್ಕನ್ನು ದೊರಕಿಸಲು ಯತ್ನಿಸುವದು, ಇದು ಪ್ರತಿಯೊಬ್ಬ ಸ್ತ್ರೀ-ಪುರುಷರ ಕರ್ತವ್ಯವಾಗಿರುತ್ತದೆ.

# ನನ್ನ ಜಾಣೆ ! (ಕವನ)

ಕವಿ : ದೇಸಾಯಿ ದತ್ತಮೂರ್ತಿ, ಹುಬ್ಬಳ್ಳಿ.

[ " ಹೆಣ್ಣು ಗಂಡಿನ ಪರಸ್ಪರ ಐಕ್ಯದ ರೀತಿಯನ್ನು ಪ್ರೀತಿಯ ಅವರ ಣದ ಈ ಕವನದಲ್ಲಿ ಮೂಡಿಸಲಾಗಿದೆ. ಗಂಡು-ಹೆಣ್ಣುಗಳೆರಡೂ ಒಂದಕ್ಕೊಂದು ಪೂರಕ. ಇಲ್ಲದಿದ್ದರೆ ಒಂದೊಂದೂ ಒಂದೊಂದು 'ಅರೆ'ಯೆ " ]

●

( ೧ )

" ಉಕ್ಕಿ ಗೆಲುವು, ಬಾಳೆಲ್ಲ ಹುರುಪು ಸೂಸಾಡಿ ಕುಣಿಯಲಿಕ್ಕೆ
ಮುಕ್ಕು ಮುಗುಳು ನಗೆ ಸಾಕು, ನನ್ನ ಬಗೆಬಳ್ಳಿ ಚಿಗುರಲಿಕ್ಕೆ "
ಎಂದೆನಿಸಿ ಬಂದೆ ನಿನ್ನೆಡೆಗೆನಲ್ಲೆ, ಮೈದುಂಬಿ ನಲುಮೆ ನೀಡು
ಬಂದದ್ದು ಬರಲಿ, ನಿನ ನೆರವು ಇರಲಿ, ತಲೆಯೆತ್ತಿ ನಿಲ್ವೆನೋಡು !

( ೨ )

ಬೇಸತ್ತು ಜಗದ ಜಂಜಾಟದಲ್ಲಿ ಬಾಯೊಣಗಿ ಗಂಟಲಾರಿ
ಮೋಸಕ್ಕೆ ಜೀವ ಹೌಹಾರಿ ಬಾಳೆ ಸಾಕಾಗಿ ಮಂಕು ತೂರಿ
ಎಲ್ಲೆಡೆಗು ಮಬ್ಬೆ ಹಬ್ಬಿವುದು ಬೆಳಕ ಕದಿರೊಂದು ತೋರದಿರಲು
ನಲ್ಲೆಯೇ ! ನಿನ್ನ ನಗೆ ಬೆಳಕು ಎನ್ನ ಬಗೆ ಬೆಳಗದಿರಲು ಉರಲು !

( ೩ )

ಶಿವನು ತನ್ನ ಅರೆಮೈಯ ಶಿವೆಗೆ, ಮಾಧವನು ಎದೆಯ ಸಿರಿಗೆ
ಹವಣವರಿತೆ ನೀಡಿಹರು ಬಾರೆ, ಎದುರೇನು ನಲುಮೆ ಝರಿಗೆ
ನಿನ್ನೊಳಗೆ ನಾನು, ನನ್ನೊಳಗೆ ನೀನು; ನಿನೇನು ನಾನು,ನಾನೀ !
ಎನ್ನುತಿಹೆ ನಂಬಿ ನಾ; ನಂಬು ಅಂತೆ ನೀ ನಂಬು ನನ್ನ ಜಾಣೇ !

# ಸ್ತ್ರೀಯರ ಮೇಲಿನ ಅತ್ಯಾಚಾರದ ವಿಮರ್ಶೆ

ಲೇಖಕಿ :— ಶ್ರೀಮತಿ ವೆಂಕಮ್ಮ ಕೋಯಿಮುತ್ತೂರ.

[ ಹೆಣ್ಣು ಗಂಡನನ್ನು ದೈವವೆಂದು ತಿಳಿದು ಪೂಜಿಸಬೇಕು. ಗಂಡು,ಹೆಣ್ಣನ್ನು ದಾಸಿಯೆಂದು ತಿಳಿದು ನಡೆಸಿಕೊಳ್ಳಬೇಕು. ಇದು ಸಮಾಜದ ರಚನೆ. ರಾಜನಾಗಿ ರಾಮನು ಸೀತೆಯನ್ನು ವನಕ್ಕಟ್ಟಿದನು; ಹದಿನಾಲ್ಕು ವರುಷ ತನ್ನನ್ನು ಅನುಸರಿಸಿದ ಸೀತೆಯನ್ನು ಹಿಂಬಾಲಿಸಲು, ರಾಮನ ಅಹಂಕಾರ ಮುಂದೆ ಬಂದು ಮಾನವತೆಯನ್ನು ಹಿಂದೂಡಿತು. ]

ಜಾತೀಯ ಗೊಂದಲ ದೊಂದಿಗೆ ಸ್ತ್ರೀಯರ ಮೇಲೆ ಅತ್ಯಾಚಾರದ ಗೊಂದಲವೂ ಹೆಚ್ಚಾಗಿ ಈಗ ಅದು ಅಂತಿಮಾವಸ್ಥೆಗೆ ಬಂದು ಮುಟ್ಟಿದೆ. ಸಣ್ಣ ಮಕ್ಕಳು ಅಂದರೆ ೫ ವರ್ಷದ ಮಕ್ಕಳ ಮೊದಲ್ಗೊಂಡು ವಯಸ್ಸಾದ ಮುದುಕಿಯರ ವರೆಗೆ ಎಲ್ಲ ಹೆಣ್ಣೆಂಬ ಹೆಸರುಳ್ಳವರ ಮೇಲೂ ಅಲ್ಲಲ್ಲಿ ಈ ಅತ್ಯಾಚಾರವಾದ ಕೂಗು ಕೇಳಿಬರುತ್ತಲೇ ಇದೆ. ಪ್ರತಿದಿನ ಒಂದಿಲ್ಲ ಒಂದು ರೀತಿಯಿಂದ ಈ ಸುದ್ದಿಯಿಲ್ಲದ ವರ್ತಮಾನಪತ್ರಗಳಿಲ್ಲ. ಈ ರೀತಿ ಹೀಗೆ ಗೊಂದಲವಾಗಲು ಕಾರಣವಾದರೂ ಏನಿರಬಹುದು? ಹೆಣ್ಣುಮಕ್ಕಳ ಹೇಡಿತನವೇ ಇದಕ್ಕೆ ಕಾರಣವೋ ಅಥವಾ ಅವರ ಪ್ರಕೃತಿಧರ್ಮವೊ, ವರ್ಣದ್ವೇಷವೋ, ಜಾತಿದ್ವೇಷವೋ, ಗಂಡಸರ ಹುಂಬತನವೋ ಅಥವಾ ಅವರ ಅತಿಕಾಮದ ದುಷ್ಪರಿಣಾಮವೋ ತಿಳಿಯದಾಗಿದೆ. ಗಂಡಸರೆಲ್ಲರೂ ಅತಿಕಾಮಿಗಳೇ ಎಂದು ಹೇಗೆ ಹೇಳಬೇಕು! ಅವರು ನಿಜವಾಗಿ ಹಾಗಿದ್ದಿದ್ದರೆ ಹೆಣ್ಣಿನ ಜಗತ್ತು ಇಷ್ಟರಲ್ಲೇ ನಿರ್ಮೂಲವಾಗಿ ಜಗತ್ತಿನ ವ್ಯಾಪಾರವೇ ನಿಲ್ಲುವ ಪ್ರಸಂಗ ಬರುತ್ತಿತ್ತು. ಅದರಂತೆ ಹೆಣ್ಣೆಲ್ಲವೂ ಹೇಡಿಗಳೇ ಇರುವರೆಂದರೂ ತಪ್ಪಾಗುವದು. ಕಾರಣವೆಂದರೆ ಹೆಣ್ಣು ಎಷ್ಟೋ ಇಂತಹ ಇಕ್ಕಟ್ಟಿನ ಸಮಯದಲ್ಲಿ ಗಂಡಸರನ್ನು ಕೊಂದ ಉದಾಹರಣೆಗಳೂ ಸಾಕಷ್ಟು ಸಿಗುತ್ತವೆ. ಅವರ ಪ್ರಕೃತಿಧರ್ಮವೇ ಇದಕ್ಕೆ ಕಾರಣವೆನ್ನೋಣವೆಂದರೂ ಅಲ್ಲಿ ತಪ್ಪು ಕಾಣಿಸುತ್ತದೆ. ಯಾವವೇ ಗಂಡಸು ಅಸಹಾಯಕಳಾದ ಹೆಣ್ಣಿನ ಮೇಲೆ ಅತ್ಯಾಚಾರಮಾಡ ಬಂದಾಗ ಹೆಣ್ಣು ತನ್ನ ಮನೋಬಲದಿಂದ ಅವನನ್ನು ಗೆಲ್ಲಬಲ್ಲಳೆಂಬ ಉದಾಹರಣೆಗಳು ಸಹ ಸಿಗುವವು. ಇದಕ್ಕೆ ದಮಯಂತಿ, ಸೀತೆಯರೇ ಸಾಕ್ಷಿಯಾಗಿದ್ದಾರೆ.

ಈಗೀಗ ಅಲ್ಲಲ್ಲಿ ಜಾತಿ ಬೇಧ ವರ್ಣಬೇಧಗಳ ಮೂಲಕವೇ ಈ ಗೊಂದಲವು ಜಾಸ್ತಿಯಾಗಿ ಏಳುತ್ತಿರುವದರಿಂದ ಇದರ ಮೂಲ ಬೀಜವು ಇಲ್ಲೇ ಎಲ್ಲೋ ಉತ್ಪನ್ನವಾಗಿದೆ ಎನ್ನಲು ಯಾವ ಆತಂಕವೂ ಇಲ್ಲ ಜಾತೀಯ ಗೊಂದಲದ ದುರುಪಯೋಗವು ಈ ಹೆಣ್ಣಿನ ಮೇಲೆ ಆಗುತ್ತಿದೆ. ಅದರ ಮರೆಯಲ್ಲಿ ಈ ಹೇಯ ಕೆಲಸ ನಡೆಸಿದ್ದಾರೆ ಕೆಲವು ಕಾಮುಕ ಗಂಡಸರು.

ಹಿಂದಿನ ಹೆಣ್ಮಕ್ಕಳು ಹೇಗಿದ್ದರೆಂಬದನ್ನು ಪ್ರತ್ಯಕ್ಷ ನಾವು ನೋಡಿರದ ಮೂಲಕ ಅವರು ಹೀಗೇ ಇದ್ದರೆಂದು ಹೇಳುವದು ಕಷ್ಟ. ಆದರೆ ಹಿಂದಿನವರ ಇತಿಹಾಸಗಳ ಮೇಲಿಂದ ಪೂರ್ಣ ಸರಿಯಾದ ವಿಚಾರಗಳೇ ತಿಳಿಯದಿದ್ದರೂ ಸಹ ಅದರಲ್ಲಿ ಕೆಲವಾದರೂ ತಿಳಿದೇತಿಳಿಯುವವು ಅವೆಲ್ಲ ನಿಜವೆಂದು ಯಾತರ ಮೇಲಿಂದ ಎಂದೂ ಒಂದು ವಿಚಾರ ಬರಬಹುದು. ಹೌದು, ಎಲ್ಲವೂ ನಿಜವೆಂದು ಹೇಳಲು ಬರದಿದ್ದರೂ ಸಹ ಸುಳ್ಳು ಚರಿತ್ರೆಯನ್ನೇ ಬರೆದಿಟ್ಟಿರುವರೆಂದು ಹೇಳುವದಾದರೂ ಯಾವನ್ಯಾಯ? ಹಿರಿಯರು ಬರೆದಿಟ್ಟಿರುವರೆಂದ ಮೇಲೆ ಅದರಲ್ಲಿ ತಥ್ಯಾಂಶವಿದ್ದೇ ಇರಲು ಸಾಕು. ಇನ್ನು ಅವರ ಈ ವಿಚಾರದ ಮೇಲೆ ನೋಡುತ್ತ ಹೋದರೆ ಹಿಂದಿನ ಹೆಣ್ಮಕ್ಕಳು ಮನೋಬಲ ಉಳ್ಳವರೂ, ನೀತಿ ನಿಪುಣರೂ ಇದ್ದರು. ಆಗಿನ ಪುರುಷ ಸಮಾಜವಾದರೂ ಅದಕ್ಕೆ ಸರಿಹೊಂದುವಂತಹದ್ದೇ ಇತ್ತು. ನಿಯಮನಡಾವಳಿಗಳಾದರೂ ಅವರ ಯೋಗ್ಯತೆಗೆ ಹೊಂದಿಯೇ ಇದ್ದುವೆಂದು ಪ್ರತ್ಯೇಕ ಹೇಳುವ ಪ್ರಮೇಯವಿಲ್ಲ. ಆದರೆ ಬರಬರುತ್ತ ಜಗತ್ತಿನಲ್ಲಿ ಅಂದರೆ ಜನರಲ್ಲಿ ಬದಲಾವಣೆ ಬರಹತ್ತಿತು. ಜನರ ತಲೆಯಲ್ಲಿ ಬೇರೆ ಬೇರೆ ವಿಚಾರಗಳು ಬರಹತ್ತಿ ಶೋಧಗಳು ನಡೆಯಹತ್ತಿದವು. ಇದರಿಂದಾಗಿ ವಾತಾವರಣವೇ ಜನರ ಪ್ರವೃತ್ತಿಯನ್ನು ಬೇರೆ ಕಡೆಗೆ ಒಯ್ಯಲು ಪ್ರಾರಂಭಿಸಿತು. ಗಂಡು ಹೆಣ್ಣುಗಳ ಮನೋಬಲವು ಕಡಿಮೆಯಾಗಲು ಪ್ರಾರಂಭವಾಯಿತು. ಮುಂದೆ ವಿಜ್ಞಾನಯುಗವು ನಡೆದಂತೆ ಹೆಣ್ಣಿನ ದೇಹಬಲ, ಮನೋಬಲ ಎಲ್ಲವೂ ಕಡಿಮೆಯಾಗಹತ್ತಿತು. ಆದರೆ ತದ್ವಿರುದ್ಧ ಗಂಡಸಿನ ವಿಜ್ಞಾನಬಲವು ಹೆಚ್ಚಾಗಹತ್ತಿತು. ಇದರಿಂದಾಗಿ ಅವನು ಬೇರೆ ಬೇರೆ ಶೋಧ,ಹಂಚಿಕೆಗಳನ್ನು ಮಾಡಹತ್ತಿ ತಾನು ಹೆಣ್ಣಿಗಿಂತ ದೊಡ್ಡವನೆನಿಸಿಕೊಳ್ಳಹತ್ತಿದನು. ಹೆಣ್ಣು ತನ್ನ ಬುದ್ಧಿಗೆ ಚಾಲನೆ ಕೊಡದೆ ಸೋಮಾರಿತನದಿಂದ ಹಿಂದೆ ಹಿಂದೆ ಸರಿದು ಮೂಲೆಯ ಕಡೆಗೆ ಮುಖ ತಿರುವಿದಳು. ಹೆಣ್ಣಿನಸ್ಥಳವು ಬಿಡುವಾಗಿ ಬಿದ್ದುದರಿಂದ ಆ ಸ್ಥಳವನ್ನು ಭರ್ತಿಮಾಡಲು ಗಂಡಸು ಅದನ್ನಾಕ್ರಮಿಸಿದ. ಅವಳನ್ನು ಒಂದು ಜೀವಂತ ವಸ್ತುವೆಂದು ತಿಳಿಯಹತ್ತಿದ. ಮುಂದೆ ಆ ಜೀವಂತ ವಸ್ತುವನ್ನು ದೇವರು ತನ್ನ ಸುಖೋಪಭೋಗ ವಸ್ತುವೆಂದು ಹುಟ್ಟಿಸಿರುವನೆಂಬ ಮಟ್ಟಕ್ಕೆ ಬಂದಿತು ಗಂಡಸಿನ ವಿಚಾರ. ಇದರಲ್ಲಿ ಎಳ್ಳಷ್ಟೂ ಗಂಡಸರ ತಪ್ಪಿಲ್ಲ. ಆದರೆ ಹೆಣ್ಣು ತನ್ನ ಅಂತಸ್ಥನ್ನು ತಾನು ಕಾಯ್ದುಕೊಳ್ಳುವ ಪ್ರಯತ್ನಮಾಡದಿದ್ದುದೇ ಅವಳ ತಪ್ಪು. ಕೆಲವೊಮ್ಮೆ ನಮ್ಮ ಭಾರತೀಯರ ಸಲುವಾಗಿ ಹೀಗೆ ವಿಚಾರ ಮಾಡುವದೂ

ಸಹ ಸರಿ ಎನಿಸುವದಿಲ್ಲ. ಕಾರಣವೆಂದರೆ ಯಾವಾಗ ನಮ್ಮಲ್ಲಿಯ ರಾಜರಾಜರುಗಳಲ್ಲಿ ಅಂತಃಕಲಹ ಉತ್ಪನ್ನವಾಯ್ತೋ ಆಗ ಪರಕೀಯರ ದಾಳಿ ನಮ್ಮ ಮೇಲಾಗಲು, ಪ್ರಕೃತ್ಯಾ ಅಬಲೆಯರಿದ್ದ ಸ್ತ್ರೀಯರಿಗೆ ಸ್ವಾಭಾವಿಕವಾಗಿ ಸಂದಿಗ್ಧ ಸಮಯ ಒದಗಿತು. ದೇಶದಲ್ಲಿ ಅನಾಯಕತ್ವವು ಪ್ರಾರಂಭವಾಗಿ ನಮ್ಮವರೇ ನಮಗೆ ಎರಡು ಬಗೆಯುವವರಾಗಲು, ಹೆಣ್ಮಕ್ಕಳು ಹೌಹಾರಿದರು. ಆಗಿನಿಂದ ಅವರು ತಮ್ಮ ಮಾನಮರ್ಯಾದೆಗಾಗಿ ಗಂಡಸರ ಬೆನ್ನುಬೀಳಬೇಕಾಯ್ತು; ಮನಸ್ಸಿನಿಂದ ದುರ್ಬಲರಾಗಲು ಕಾರಣವಾಯ್ತು. ಮುಂದೆ ಅದೇ ದುರ್ಬಲತೆಯು ಬೆಳೆಯುತ್ತ ಬೆಳೆಯುತ್ತ ಈಗಿನ ಮಟ್ಟಕ್ಕೆಂದರೆ, “ ನಾವಾದರೂ ಗಂಡಸಿನ ಒಂದು ಉಪಭೋಗ ವಸ್ತುವೆಂದು ” ಅವರೇ ತಿಳಿದು ಸಮಾಧಾನದಿಂದ ಇರುವವಮಟ್ಟಕ್ಕೆ ಬಂದಿದೆ. ಅವರ ಮನೋದೌರ್ಬಲ್ಯವಂತೂ ಯಾವ ಅಂತಿಮಾವಸ್ಥೆಗೆ ಇಳಿದಿದೆಯೆಂಬದನ್ನು ಲೆಕ್ಕಣಿಕೆಯಿಂದ ಬರೆಯಲು ಸಾಧ್ಯವೇ ಇಲ್ಲ. ಅದನ್ನು ಪ್ರತಿಯೊಬ್ಬ ಹೆಣ್ಣು ತನ್ನ ಮನದಲ್ಲಿ ತಾನೇ ಅಳೆದು ನೋಡಿಕೊಳ್ಳುವದು ಮೇಲು. ಹೆಣ್ಣು ಇದೇ ಮಟ್ಟದಲ್ಲಿದ್ದಿದ್ದರೂ ಈಗಿನಷ್ಟು ವಿಷಮಸ್ಥಿತಿಗೆ ಜಗತ್ತು ಬರುತ್ತಿರಲಿಲ್ಲ. ಆದರೆ ಹೆಣ್ಣು, ಹೆಣ್ಗರುಳ ಗಂಡಸರು ಕೆಲವರ ಉಪದೇಶಕ್ಕೆ ಬಲಿಬಿದ್ದು ಸಂಪೂರ್ಣ ವಿಚಾರ ಮಾಡದೆ ಕೇವಲ ಅರ್ಧಮರ್ಧ ವಿಚಾರಮಾಡಿ ತನ್ನ ಕುತ್ತಿಗೆಗೆ ತಾನೇ ಉರುಲು ಹಾಕಿಕೊಂಡಂತಾಗಿದೆ ಇಂದು. ಹೆಣ್ಣು ತನ್ನ ನಿಜವಾದ ಸ್ಥಾನಮಾನ ಜಗತ್ತಿನಲ್ಲಿ ಯಾವದಿದೆಯೆಂಬದನ್ನು ಹುಡುಕಲು ಮೊದಲು ಆಳವಾಗಿ ವಿಚಾರಮಾಡಬೇಕೇ ಹೊರ್ತು, ತಾನೂ ಜಗತ್ತಿನ ಅರ್ಧಅಂಗ ತನಗೂ ಎಲ್ಲ ಕ್ಷೇತ್ರಗಳಲ್ಲೂ ಪ್ರವೇಶವಿರಬೇಕು. ತಾನಾದರೂ ಗಂಡಸು ಮಾಡುವ ಕೆಲಸವನ್ನೇ ಮಾಡುವೆನೆಂದು ಸಲ್ಲದ ಒಣಹೆಮ್ಮೆಯಿಂದ ಆಡುವ ಮಾತೇ ಅವರನ್ನು ಈ ಮಟ್ಟಕ್ಕೆ ತಂದಿದೆ ಎನ್ನಬಹುದು. ಹೆಣ್ಣಿನ ಈ ಅವಿಚಾರದಿಂದ ಗಂಡಸರು ಕೆಲವರು ಸಿಟ್ಟಿಗೆದ್ದರು, ಮತ್ತೆ ಕೆಲವರು ನಕ್ಕು, ಅಜ್ಞಾನಿಗಳೆಂದು ಸುಮ್ಮನಾದರು, ಮತ್ತೆ ಕೆಲವರು ಎದುರಿಸಲು ಮುಂಬಂದರು. ಆದರೆ ಈ ಎಲ್ಲ ವರ್ಗಗಳಿಂದ ಬೇರೆಯಾದ ಮತ್ತೊಂದು ವರ್ಗವು ಹೆಣ್ಣಿನ ಈ ಅಜ್ಞಾನದ ಲಾಭವನ್ನು ಬೇರೆ ರೀತಿಯಿಂದ ಪಡೆಯಲು ಪ್ರಯತ್ನಿಸಿತು. ಅದೇ ಆ ಕಾಮುಕವರ್ಗ. ಅವರು ಹುಚ್ಚೆದ್ದು ಕುಣಿಯುವ ಹೆಣ್ಣಿನ ಬೆನ್ನುಹತ್ತಿದರು. ಮೊದಮೊದಲು ಅಂತಹ ಹೆಣ್ಣುಗಳ ಬೆನ್ನುಮಾತ್ರ ಹತ್ತುವ ನಟನೆ ಮಾಡಹತ್ತಿದರು ಆದರೆ ಅವರ ಈ ಅತ್ಯಾಚಾರವು ಬರಬರುತ್ತ ಮುಂದೆವರಿದು ಸಾಧಾರಣವಾಗಿ ಅಸಹಾಯಕರಾಗಿ ಹೊರಗೆ ಸಿಕ್ಕ ಹೆಣ್ಣುಗಳಮೇಲೂ ನಡೆಯಹತ್ತಿತು. ಮುಂದೆ ಅದಕ್ಕೂ ಒಂದು ಹೆಜ್ಜೆ ಮುಂದಿಟ್ಟು ಗಂಡಸರಿಲ್ಲದ ಸಮಯಸಾಧಿಸಿ, ಮನೆಗಳಿಗೆ ಹೊಕ್ಕು ಹೆಣ್ಮಕ್ಕಳನ್ನು ಬಲಾತ್ಕರಿಸುವ ಮಟ್ಟಕ್ಕೆ ಬಂದಿತು. ಇಷ್ಟರಲ್ಲೇ ಜಾತಿಯ ಗೊಂದಲ, ಪಾಕಿಸ್ತಾನದ ಪ್ರಾರಂಭ ಸಮಸ್ಯೆಗಳಂತಹ ಪ್ರಸಂಗ. ಕೆಲವು ಧಾಂಬಿಕ ಕಾರ್ಯಕರ್ತರಕೂಟ ಇವು ತಲೆಯೆತ್ತಿ ಈ ಅತ್ಯಾಚಾರಕ್ಕೆ ಪುಷ್ಟಿಕೊಟ್ಟವು. ಎಲ್ಲೋ ಯಾವದೋ ಕೊಳೆಯಲ್ಲಿ ಹುಟ್ಟಿದ ಬೀಜವು ಇಲ್ಲಿ ಮೊಳಕೆಯಾಗಿ ಬೆಳೆದು ಮರವಾಯ್ತು.

ಈ ಎಲ್ಲ ಅನಾಹುತಗಳೂ ಕೇವಲ ಕೃತ್ರಿಮ ಪದ್ಧತಿಯ ಮೂಲಕವೇ ಬಂದದ್ದು. ಪ್ರಜೋತ್ಪಾದನೆಗೆ ಹೆಂಗಸರೇ ಮೂಲ. ಮೊದಲಿನ ಜನರು ದನ, ಕನಕಗಳಂತೆ ಹೆಣ್ಣಿನದಾನವನ್ನಾದರು ಕೊಡುವ ಪದ್ಧತಿ ರೂಢಿಗೆ ತಂದರು. ಲಗ್ನವೆಂಬ ಹೆಸರಿನಲ್ಲಿ ಪಾವಿತ್ರ್ಯ, ಪತಿವ್ರತಾಮಹಿಮೆಗಳ ಮಹತ್ವ ಬೆಳೆಸಹತ್ತಿದರು. ಆದರೆ ಲಗ್ನ ಪದ್ಧತಿಯಿಂದ ಎಷ್ಟೋ ಗಂಡಸರ ಹಸಿವು ನಿವಾರಣೆಯಾಗದಾಯ್ತು. ಅದರಿಂದಾಗಿ ಅವರು ತಮ್ಮ ಹಸಿವನ್ನು ತೀರಿಸಿಕೊಳ್ಳಲು ಬೇರೊಂದು ಮಾರ್ಗ ಹುಡುಕಹತ್ತಿದ್ದು ಸ್ವಾಭಾವಿಕವಿದೆ. ಲಷ್ಕರೀ ಪೋಲೀಸ ಖಾತೆಗಳಲ್ಲಿ ಅಲ್ಲಿನ ಸೈನ್ಯಕರಿಗೆ ಇತರ ವಸ್ತುಗಳನ್ನು ಪೂರೈಸುವಂತೆ ಹೆಣ್ಣೆಂಬ ವಸ್ತುವನ್ನು ಸಹ ಪೂರೈಸಲು ವೇಶ್ಯಾಸ್ತ್ರೀಯರನ್ನು ಇಡಹತ್ತಿದರು. ಕೆಲವು ಗಂಡಸರು ವೇಶ್ಯೆಯರೊಡನೆ ಅತಿ ತೃಪ್ತಿಹೊಂದುವ ವಿಚಾರಮಾಡುವದರಿಂದ ಅಲ್ಲಿ ಸಹ ಅವರಿಗೆ ತೃಪ್ತಿ ಸಿಗದೆ ಪುನಃ ಅವರು ಅತೃಪ್ತಿಗೇ ಒಳಗಾಗಬೇಕಾಯ್ತು. ಮನೆತನಸ್ಥ ಹೆಣ್ಣುಮಕ್ಕಳಿಗೆ ಪಾವಿತ್ರ್ಯದ ಕಲ್ಪನೆಯಿಂದ ಪರಗಂಡಸರ ಮುಖವನ್ನು ಸಹ ನೋಡಬಾರದೆಂಬ ಪದ್ಧತಿಯು ಒಂದಾನೊಂದು ಕಾಲದಲ್ಲಿತ್ತು. ಆಗ ಅವರಿಗೆ ಯಾವ ತರದ ಸ್ವಾತಂತ್ರ್ಯವೂ ಇಲ್ಲದೆ ದೇಹ ಹಾಗೂ ಮನಸ್ಸಿನ ಶಕ್ತಿಗಳು ಕಡಿಮೆಯಾದವು. ಯಾವಾಗಲೂ ಮುಚ್ಚಿಟ್ಟ ವಸ್ತುವನ್ನು ನೋಡುವ ಹಂಬಲ ಬಹಳವೆಂಬದು ನಿಜ. ಆದ್ದರಿಂದಲೇ ಹೆಚ್ಚಾಗಿ ಘೋಷಾಸ್ತ್ರೀಯರನ್ನು ಕೆಡಿಸಬೇಕೆಂಬ ಹುಚ್ಚು ಎಷ್ಟೋ ಕ್ರೂರದೃಷ್ಟಿಯ ಗಂಡಸರಲ್ಲಿ ಕಾಣುತ್ತದೆ.

ಗಂಡಸರು ಹುಟ್ಟು ಬ್ರಹ್ಮಚರ್ಯದಿಂದಿರಲಡ್ಡಿ ಇಲ್ಲ, ಆದರೆ ಹೆಂಗಸರು ಹಾಗಿರಲಾಗದು ಎಂಬ ಧಾರ್ಮಿಕ ನಿಯಮ ಹಾಕಿದರು. ಇದರಿಂದಾಗಿ ಗಂಡಸರು ಲಗ್ನವನ್ನೇ ಬಿಟ್ಟು, ತಮ್ಮ ಹಸಿವಡಗಿಸಲು ಅತ್ಯಾಚಾರ ಮಾಡಲು ಮನಸ್ಸು ಮಾಡಿದರು. ಮೊದಲೇನೋ ಲಗ್ನಪದ್ಧತಿಯು, ಕೆಟ್ಟಪ್ರವೃತ್ತಿಗಳನ್ನು ತಡೆಹಿಡಿಯುವ ಸಲುವಾಗಿ ಎಂದು ಮಾಡಿದರೂ ಸಹ ಅದರಿಂದ ಆ ಕೆಟ್ಟಪ್ರವೃತ್ತಿಗೆ ಪುಷ್ಟಿ ಸಿಕ್ಕಂತಾಯ್ತು. ಬಹಳವಾಗಿ ಯಾವಾಗಲೂ ಇಂತಹ ತಡೆಗಳಿಂದ ಆ ಪ್ರವೃತ್ತಿಗಳು ಸ್ಫೋಟವಾಗುವ ಸಂಭವವಿರುತ್ತದೆ.

ಕೃತ್ರಿಮ ನಿಯಮಗಳ ಒಡೆಯರು ಗಂಡಸರೇ ಆದ್ದರಿಂದ ಅವರು ತಮಗೆ ಲಾಭದಾಯಕವಾದಂತಹ ಕಾಯ್ದೆ ಕಾನೂನುಗಳನ್ನು ಮಾಡಿಕೊಂಡರು. ಇದರಿಂದ ಹೆಣ್ಣು ಮೂಲೆಗೆ ಸೇರಬೇಕಾಯ್ತು. ಮೇಲಾಗಿ ಕೆಲವು ನೈಸರ್ಗಿಕ ನಿಯಮಗಳೂ ಸಹ ಹೆಣ್ಣಿನ ದೇಹರಚನೆಯಿಂದಾಗಿ ಅವಳಿಗೆ ಪ್ರತಿಕೂಲವಿದೆ.

ಪಾವಿತ್ರ್ಯ, ಪಾತಿವ್ರತ್ಯ ಈ ಧರ್ಮಿಕ ನಿಯಮಗಳು ಹೆಣ್ಮಕ್ಕಳಮೇಲೆ ಇಷ್ಟೊಂದು ಪರಿಣಾಮ ಮಾಡಿದೆಯಲ್ಲಾ ಅವರು ಯಾವನೇ ಗಂಡಸು ತನ್ನ ಮೇಲೆ ಅತ್ಯಾಚಾರಮಾಡುವ ದುರುದ್ದೇಶದಿಂದ ಹೊಂಚುಹಾಕಿದಾಗ ಅವನನ್ನು ಸ್ವತಃ ತನ್ನಿಂದ ಹೊಡೆದುಹಾಕುವ ಶಕ್ತಿ ನಿಸರ್ಗತಃ ಇದ್ದರೂ ಸಹ ಅದು ಪಾವಿತ್ರ್ಯ ಕೆಡುವದೆಂಬ ಭೀತಿಯ ಮೂಲಕ ಕಳೆದು ಹೋಗಿದೆ. ಹಾಗೂ ತನ್ನ ಬಗ್ಗೆ

ಮತ್ತೊಬ್ಬ ಗಂಡಸಿಗಿರುವ ಈ ದುರುದ್ದೇಶವನ್ನು ತನ್ನವರೊಡನೆ ಹೇಳಿ ಅವನ ಗುಣವನ್ನು ಬಯಲಿಗೆಳೆಯಲು ಹೆಣ್ಣಿನ ನಾಚಿಕೆ ಅಡ್ಡಬರುತ್ತದೆ. ಒಂದು ವೇಳೆ ನಿರ್ಲಜ್ಜಳಾಗಿ ಹೇಳಿದರೂ ಸಹ ನಾಲ್ಕು ಜನರು ತನಗೇ ಹೆಸರಿಟ್ಟು ಅವಮಾನ ಗೊಳಿಸುವರೆಂಬ ಹೆದರಿಕೆ; ಇದು ಸೀತೆಯ ಉದಾಹರಣೆಯಿಂದಲೇ ಗೊತ್ತಾಗುತ್ತದೆ. ಹೀಗಾಗಿ ತಮ್ಮ ವಿಷಯವನ್ನು ಗುಪ್ತವಾಗಿಡುವದರಿಂದ ಅವರ ದೇಹ, ಮನಸ್ಸು ಅಬಲವಾಗಿ ಇಂದ್ರಿಯಗಳು ಶಿಥಿಲವಾಗುತ್ತವೆ. ಇದರಿಂದ ಗಂಡಸರಿಗೆ ಇವರಮೇಲೆ ಅತ್ಯಾಚಾರ ಮಾಡಲು ಸುಲಭವಾಗುತ್ತದೆ.

ದೇಹ, ಮನಸ್ಸೆರಡರಿಂದಲೂ ಐಚ್ಛಿಕವಾಗಿ ಕೆಡುವದಕ್ಕೇ ಕೆಟ್ಟಿದ್ದೆನ್ನಬೇಕೇ ಹೊರತು ಬಲಾತ್ಕಾರದಿಂದಾಗಲೀ, ಮತ್ತಾವುದೇ ವಿಚಾರದಿಂದಾಗಲೀ, ಮನಸ್ಸಿನ ಇಚ್ಛೆಯವಿರುದ್ಧ ದೇಹದಿಂದ ಕೆಟ್ಟರೂ (ಅದು ಸಹ ಸಾಧ್ಯವಿಲ್ಲ) ಅವರೆಂದೂ ಕೆಟ್ಟಂತಾಗಲಿಲ್ಲ. ಈ ಮಾತನ್ನೇ ಮ. ಗಾಂಧಿಯವರು ಎಷ್ಟೋಸಾರಿ ಉಸುರಿದ್ದಾರೆ.

ನಾವು ಯಾವದೇ ವಿಷಯದ ವಿಚಾರಮಾಡಬೇಕಾದರೂ ಅದರ ಎರಡೂ ಮಗ್ಗಲು ವಿಚಾರಮಾಡಬೇಕು. ಈ ರೀತಿಯಲ್ಲಿ ಹೆಣ್ಣಿನಮೇಲೆ ಅತ್ಯಾಚಾರ, ಅನಾಚಾರಗಳಾಗಲು ಒಂದು ವಿಧದಿಂದ ಗಂಡಸರ ಬುದ್ಧಿಬಲ, ದೇಹಸಾಮರ್ಥ್ಯ, ಮೋಸ ಇವುಗಳೇ ಕಾರಣವೆಂದೂ ಹೇಳಬರುವದಿಲ್ಲ. ಗಂಡೆಂಬುವ ವಸ್ತುವೇ ಕೆಟ್ಟದ್ದೆಂದು ಹೇಳುವ ಮಹಾತ್ಮರೂ ಇದ್ದಾರೆ. ಇದು ಸಂಪೂರ್ಣ ತಪ್ಪು. ನಿಜವಾಗಿ ಈ ರೀತಿಯ ಅನಾಹುತವಾಗಬೇಕಾದರೆ ನಮ್ಮ ಈ ಕೃತ್ರಿಮ ಸಮಾಜರಚನೆಯಲ್ಲೇ ತಪ್ಪಾದದ್ದಿದೆ. ಆ ಮೂಲದಲ್ಲೆ ತಿದ್ದುಪಡಿಮಾಡಿದಲ್ಲಿ ಇಂತಹ ಅನಾಹುತಗಳು ತನ್ನಿಂದ ತಾನೇ ಮಾಯವಾಗಬಹುದು.

ಸಿತಾದೇವಿಯು ರಾವಣನ ಮನೆಯಲ್ಲಿದ್ದಳೆಂದು ರಾಮನು ಅವಳನ್ನು ತ್ಯಜಿಸುವ ಸಾಹಸಮಾಡಿದ. ಆದರೆ ಅವನಿಗೆ ತಾನು ಮಾಡುವದು ತಪ್ಪೆಂದು ಒಂದು ಮನಸ್ಸು ತಿಳಿಸಿಕೊಡುತ್ತಿತ್ತು. ಆದರೆ ಸಮಾಜರೂಢಿಗೆ ಬಲಿಬಿದ್ದು, ತನ್ನ ರಾಜಧರ್ಮಕ್ಕನುಸುಸರಿಸಿ ಆ ಕಾರ್ಯಮಾಡಿದ. ಈಗ ಅದೇ ಅವನ ವಿಚಾರಕ್ಕೆ ನಾವು ಮತ್ತೊಂದುರೀತಿಯಿಂದ ಪ್ರತಿವಿಚಾರ ಹೇಳುವದೆಂದರೆ, ಅವನು ರಾಜನಾಗಿ ರಾಜಧರ್ಮಕ್ಕನುಣನಾಗಿ ಅವಳನ್ನು ಅಡವಿಗಟ್ಟಿದ್ದೇನೋ ಸರಿ, ಆದರೆ ಅವನು ತಾನು ಅವಳ ಗಂಡನಿರುವೆನೆಂಬ ವಿಚಾರವನ್ನು ಮಾಡಿ, ಮಾನವತ್ವವನ್ನು ಲಕ್ಷ್ಯಕ್ಕೆ ತಂದು ಸಹಧರ್ಮಿಣಿ, ಸುಖ ದುಃಖಗಳ ಸಹಭಾಗಿನಿ, ಹದಿನಾಲ್ಕುವರ್ಷ ತನ್ನ ಅರಣ್ಯವಾಸದಲ್ಲಿ ತನಗಾಗಿ ಕಷ್ಟ ಅನುಭವಿಸಿದ ಸೀತೆಯನ್ನು ತಾನೂ ಅನುಸರಿಸಬೇಕಾಗಿತ್ತು ಎಂದು. ಆದರೆ ಸಮಾಜರಚನೆಯ ಪದ್ಧತಿಯಂತೆ ಹೆಣ್ಣು ಗಂಡನನ್ನು ದೈವವೆಂದು ತಿಳಿದು ಪೂಜಿಸಬೇಕು, ಗಂಡು ಹೆಣ್ಣನ್ನು ದಾಸಿಯೆಂದು ತಿಳಿಯಬೇಕೆಂಬದಿರುವದರಿಂದ, ರಾಮನಿಗೆ ಅಲ್ಲಿ ತನ್ನ ಅಹಂಕಾರವು ಮುಂದೆಬಂದು ಮಾನವತೆಯನ್ನು ಹಿಂದೂಡಿತು. ಸಹಧರ್ಮಿಣಿಯನ್ನನುಸರಿಸುವದು ಕೀಳೆನಿಸಿತು.

ಈ ಎಲ್ಲ ವಿಚಾರಗಳನ್ನು ಹೆಣ್ಣುಮಕ್ಕಳೇ ವಿಚಾರಮಾಡಿ ನಿರ್ಣಯಕ್ಕೆ ಕೈ ಹಾಕಬೇಕು. ತಾವು ತಿಳಿದುಕೊಂಡಿರುವ ಧರ್ಮಯಾವದಿದೆ ? ಅದರಲ್ಲಿ ಮೂಢ ಕಲ್ಪನೆಗಳೆಷ್ಟಿವೆ ? ನಿಜವಾದದ್ದೇಸಿದೆ ? ಕೃತ್ರಿಮ ಪದ್ಧತಿಯಿಂದ ತಮ್ಮಮೇಲೆ ಯಾವ ಪೇಚು ಬಂದಿದೆ ? ಇಂತಹ ಸಮಯದಲ್ಲಿ ತಾವು ಧೈರ್ಯಕಳೆದುಕೊಂಡು ಹೀಗೇಕೆ ಕುಳಿತಿರುವೆವು ? ಎಂಬುದನ್ನು ವಿಚಾರಮಾಡಬೇಕು. ಈ ಅತ್ಯಾಚಾರ ತೊಲಗ ಬೇಕಾದರೆ ಮೂಲ ಸಮಾಜರಚನೆಯಲ್ಲೇ ಬದಲಾವಣೆ ಹೇಗೆ ಮಾಡಲು ಸಾಧ್ಯ ವಿದೆ ಯೆಂಬುದನ್ನೂ ಹಾಗೂ ಅತ್ಯಾಚಾರಕ್ಕೆ ಪ್ರತಿ ಕ್ರಿಯೆ ಹೇಗೆ ಮಾಡಬೇಕೆಂಬ ದನ್ನೂ ಮುಂದೆ ವಿಚಾರಮಾಡೋಣ.



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಹೋದ ತಿಂಗಳಲ್ಲಿ ಏಳು ಜನ ತಮ್ಮ ತಂಗಿಯರು ಸದಸ್ಯರಾಗಿದ್ದರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟೆದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರವೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

**ವನಿತಾಸೇವಾ ಸಮಾಜ ಧಾರವಾಡ.**

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು........................................................................

..........................................................................................................

ಪೂರ್ಣ ವಿಳಾಸ..........................................................................................

(ಮನೆ ನಂಬರು ಸಹಿತ) ................................................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯನಾ/ಳಾಗಿದ್ದೇನೆ.

ತಾರೀಖು .............................. ಸಹಿ

## ಅಕ್ಕನ ಪೆಟ್ಟಿಗೆಗೆ ಈ ಸಾರೆ ಸದಸ್ಯರಾದವರು.

| ನಂ. | ಹೆಸರು | ವರ್ಷ | ಊರು | ಪರಿಚಯ |
|---|---|---|---|---|
| ೧. | ನಾಮಗಿರಿ | ೮ | ಪೋತನೂರು. | ಹಾಡೆಂದರೆ ಬಲು ಇಷ್ಟ. ಕೆಲಸ ಅಭ್ಯಾಸವೆಂದರೆ ಬೇಡ. ಮನೆಯಲ್ಲಿ ತನ್ನ ತಾಯಿಯು ಒಬ್ಬಂಟಿಗಳಿದ್ದುದರಿಂದ ತನ್ನ ಪುಟ್ಟ ತಂಗಿ ತಮ್ಮಂದಿರನ್ನು ಆಡಿಸಿ ಆಡಿಸಿ ಬೇಸತ್ತಿದ್ದಾಳಂತೆ! ವೀರಮಾತೆ ಬಂದೊಡನೆ ಅಕ್ಕನ ಪೆಟ್ಟಿಗೆಗೇ ಮೊದಲು ಕೈಹಾಕುತ್ತಾಳಂತೆ ಹೋದ ತಿಂಗಳ "ವೀರಮಾತೆ" ಆತುರದಿಂದ ತೆಗೆದು ನೋಡುವಾಗ, ತುಂಟ ತಮ್ಮ, ಕೇಶವನು ಆ ಹಾಳೆಯನ್ನೇ ಹರಿದದ್ದರಿಂದ, ಅದು ಓದಲು ತನಗೆ ಸಿಗಲಿಲ್ಲವೆಂದು ಅತ್ತಳಂತೆ, ನೋಡಿದಿರಾ! ಅವಳಿಗೆಷ್ಟು ಅಭಿಮಾನ! 'ಅಕ್ಕನ ಪೆಟ್ಟಿಗೆಯ ಮೇಲೆ.' |
| ೨. | ನಲು ಗೋರೆ | ೧೪ | ಧಾರವಾಡ. | ೭ನೇ ತರಗತಿಯಲ್ಲಿದ್ದಾಳಂತೆ. ತನ್ನ ಮಾತೃಭಾಷೆ ಮರಾಠಿಯಾದರೂ ಸಹ ತಾನು ಇಲ್ಲಿಗೆ ಬಂದು ೪/೬ ವರ್ಷಗಳಾದ್ದರಿಂದ, ಕನ್ನಡದಲ್ಲೇ ಶಿಕ್ಷಣ ದೊರೆತದ್ದರಿಂದ, ಕನ್ನಡದ ಬಗ್ಗೆ ಬಹಳ ಅಭಿಮಾನವಂತೆ. ಆದಕ್ಕಾಗಿ ನಮ್ಮ 'ಅಕ್ಕನ ಪೆಟ್ಟಿಗೆ'ಗೆ ಅಭಿಮಾನದಿಂದ ಸದಸ್ಯಳಾಗಿರುವಳಂತೆ. |
| ೩. | ಸರು ಕೊಯಿಮುತ್ತೂರ | ೧೨ | ಧಾರವಾಡ | ಇಂಗ್ಲೀಷ ನಾಲ್ಕನೇ ವರ್ಗದಲ್ಲಿ ಓದುತ್ತಿದ್ದಾಳಂತೆ. ತನಗೆ ಏನೂ ಬಾರದಿದ್ದರೂ ಸಹ ತನ್ನನ್ನು ಪೇಪರ್ ನಿರೀಕ್ಷಕರು (ತಪಾಸ |

| ನಂ. | ಹೆಸರು | ವಯಸ್ಸು | ಊರು | ಪರಿಚಯ |
|---|---|---|---|---|
| | | | | ಕರು) ಮುಲ್ಕಿಯಲ್ಲಿ ಹೇಗೆ ಉತ್ತೀರ್ಣಗೊಳಿಸಿದರೆಂಬದು ಇವಳಿಗೆ ಗೂಢ ಬಿದ್ದಿದೆಯಂತೆ. ಕುಂಟು ಚೇಷ್ಟೆಮಾಡಿ ಬೈಸಿಕೊಳ್ಳುವದರಲ್ಲಿ ಬಲು ಇಷ್ಟವಂತೆ. |
| ೪. | ಎಸ್. ಟಿ. ಪಾಟೀಲ | ೧೫ | ಧಾರವಾಡ | ಹ್ಯಾಸ್ಕೂಲಿನಲ್ಲಿ ಅಭ್ಯಾಸಮಾಡುತ್ತಿದ್ದಾನೆ. ಹಿಂದೀ ಸಾಹಿತ್ಯವೆಂದರೆ ತುಂಬ ಮೆಚ್ಚಿಗೆ. ಕನ್ನಡದ ಕಾವ್ಯಗಳನ್ನು, ಒಗಟುಗಳನ್ನು ಕೊಡುವ ಪ್ರಯತ್ನಮಾಡಿದ್ದಾನೆ. |
| ೫. | ಗಿರಿಜಾ ಭಟ್ಟ | ೯ | ಧಾರವಾಡ | ಕನ್ನಡ ೪ನೇ ತರಗತಿಯಲ್ಲಿ ಓದುತ್ತಿದ್ದಾಳೆ. ಹಾಡು, ನರ್ತನವೆಂದರೆ ಬಲು ಇಷ್ಟ. ಅಭ್ಯಾಸದಲ್ಲಿಯೂ ಅಷ್ಟೇ! ಈಸಾರೆ ಸ್ಕಾಲರ್ ಶಿಪ್ ಪರೀಕ್ಷೆಗೆ ಕೂಡುತ್ತಾಳಂತೆ. |

---

## ಸದಸ್ಯರ ಪತ್ರಕ್ಕೆ ಉತ್ತರ.

(೧) ತಂಗೀ ವಿಮೂ,

ನಿನ್ನೋಲೆ ತಲ್ಪಿ ಬಹಳ ಆನಂದವಾಯಿತು. ನೀನು ನಿನ್ನ ಪತ್ರದಲ್ಲಿ ಬರೆದಂತೆ ಚಿತ್ರಕಲೆಯ ಬಗ್ಗೆ ಇನ್ನೂ ಹೆಚ್ಚು ಪ್ರಯತ್ನಪಟ್ಟಲ್ಲಿ ನಿಜವಾಗಿ ನೀನು ಯಶಸ್ವಿಯಾಗುವಿಯೆಂಬ ನಂಬಿಗೆ ನನಗಿದೆ.

ಇತಿ ನಿನ್ನ ಅಕ್ಕ

(೨) ಪುಟ್ಟ ತಂಗಿ ಲಕ್ಷ್ಮಿಗೆ,

ನಿನ್ನ ಪುಟ್ಟ ಕೈಯಿಂದ ಲೆಕ್ಕಣಿಕೆ ಹೇಗೆ ಹಿಡಿದಿಯೆಂಬದನ್ನು ನಾನು ನಿನ್ನ ಪತ್ರದಿಂದಲೇ ಗ್ರಹಿಸಿದೆ. ನಿನ್ನ ಪತ್ರವನ್ನು ಹಾಗೆಯೇ ನನ್ನ ಬಳಿ ಇಟ್ಟುಕೊಂಡಿದ್ದೇನೆ. ನೀನು ದೊಡ್ಡವಳಾಗಿ ಹೆಚ್ಚಿನ ತರಗತಿಯಲ್ಲಿ ಓದಲುಹೋದಾಗ ನಿನಗದನ್ನು ತೋರಿಸುತ್ತೇನೆ. ನೀನು ಬರೆದ ಕತೆ ಮತ್ತೆಯಾವಾಗಲಾದರು ಪ್ರಕಟಿಸುತ್ತೇನೆ.

ಇತಿ ನಿನ್ನ ಅಕ್ಕ

**ಸೋದರಿ ನಾಮಗಿರಿ.**

ಈ ಸಾರೆ ನೀನು ನಮ್ಮ ಅಕ್ಕನ ಪೆಟ್ಟಗೆಗೆ ಸದಸ್ಯಳಾದದ್ದಲ್ಲದೆ, ಉತ್ತಮ ಪ್ರಶ್ನೆಯೊಂದು ಕೇಳಿದಬಗ್ಗೆ ಬಹಳ ಆನಂದ. ಗಣಪನು ಬಂದೊಡನೆ ಅವನಬಗ್ಗೆ ತಿಳಿದುಕೊಳ್ಳುವ ಆಸೆ ನಿನಗಾದದ್ದು ಬಹಳ ಸಂತೋಷ. ಇದು ನಿನ್ನ ಏಳ್ಗೆಯ ಲಕ್ಷಣ. ಇಲ್ಲಿ ಕೇಳು "ಗಣಪನಿಗೆ ಕಣ್ಣಳೇಕೆ ಸಣ್ಣವು ?" "ಕಿವಿಗಳೇಕೆ ದೊಡ್ಡವು ?" "ಹೊಟ್ಟೆಯೇಕೆ ಮುಂದೆ ಬಂದಿದೆ?" "ಬಾಯಿಯ ಮೇಲೆ ಸೊಂಡಿಲೇಕೆ?" ಮುಂತಾದ ಪ್ರಶ್ನೆ ಕೇಳಿರುವಿ. ಇದರ ಬಗ್ಗೆ ನಿಮ್ಮ "ಅಜ್ಜಿಯು ನಿನಗೆ ತಿಳಿಸಿರುವ ವಿಚಾರವು ಸರಿಯೋ ತಪ್ಪೋ ಎಂದೂ ಕೇಳಿದ್ದಿ. ಹಿರಿಯರ ವಿಚಾರಕ್ಕೆ ಧಕ್ಕೆಕೊಡುವ ಇಷ್ಟ ನನಗಿಲ್ಲದಿದ್ದರೂ ಸಹ,ಕೆಲವೊಮ್ಮೆ ನಿಮ್ಮ ವಿಚಾರವು ವಿಕಾಸ ಹೊಂದಲೆಂಬ ದೃಷ್ಟಿ ಯಿಂದ ನಮ್ಮ ಈಗಿನ ವಿಚಾರವನ್ನು ಹೇಳಬೇಕಾಗುತ್ತದೆ. ಅದಕ್ಕಾಗಿ ನಿಮ್ಮ ಅಜ್ಜಿಗೆ ಕೋಪಿಸಿಕೊಳ್ಳಬೇಡವೆಂದು ಹೇಳು. ಹುಂ. ಹೇಳಿದಿಯಾ ? ಹಾಗಾದರೆ ಹೇಳುತ್ತೇನೆ ಕೇಳು. ಗಣಪತಿಯ ಕಣ್ಣು ಸಣ್ಣಗಿರಲು ಕಾರಣವೆಂದರೆ, ನಿಮ್ಮ ಮನೆಯಲ್ಲಿ ಹಿರಿಯರು ಎಷ್ಟೋ ವೇಳೆ ಸೂಕ್ಷ್ಮವಾಗಿ ನೋಡಿದಲ್ಲಿ ಎಲ್ಲವೂ ತಾನಾಗಿ ತಿಳಿಯುವದು ಎಂದದ್ದನ್ನು ನೀನು ಕೇಳಿರಬಹುದು. ಅಂದರೆ ಇದರರ್ಥ ಕಣ್ಣು ಸಣ್ಣದೆಂದಲ್ಲ. ಆದರೆ ಅವನ ದೃಷ್ಟಿ ಸೂಕ್ಷ್ಮವಿತ್ತೆಂದು. ಅದರಂತೆ ಕಿವಿ ಅಗಲ. ಯಾವದೇ ಮಾತುಗಳನ್ನು ಕೇಳಬೇಕಾದರೆ ಕಿವಿ ಮುಚ್ಚಿ ಕೇಳಿಯೂ ಕೇಳ ದವರಂತೆ ಮಾಡದೆ' ಕಿವಿಯನ್ನು ತೆರದಿಟ್ಟು ಕೇಳಬೇಕೆಂಬ ಉದ್ದೇಶ. ಗಣ ಪನು ಈ ರೀತಿ ಕೇಳುವ ಸ್ವಭಾವದವನಿದ್ದುದರಿಂದ ಅವನ ಕಿವಿ ದೊಡ್ಡದೆನ್ನುತ್ತೇವೆ. ಇನ್ನು ಅವನ ಬಾಯಿಯ ಮೇಲೆ ಸೊಂಡಿಲು. ಇದರರ್ಥವೆಂದರೆ ಕಣ್ಣಿನಲ್ಲಿ ಕಂಡ, ಕಿವಿಯಲ್ಲಿ ಕೇಳಿದ ಯಾವದೇ ವಿಷಯವಿದ್ದರೂ ಸಹ ಅದನ್ನು ಬಡಬಡಿಸದೆ ಬಾಯಿ ಮುಚ್ಚಿಕೊಂಡು ವಿಚಾರ ಮಾಡಬೇಕೆಂಬ ಅರ್ಥ.ಕೊನೆಯದಾಗಿ ಅವನ ಹೊಟ್ಟೆಯ ವಿಷಯ.ಅವನ ಹೊಟ್ಟೆಯು ದೊಡ್ಡದಾಗಲು ಕಾರಣವು ನಿಮ್ಮ ಮನೆಯ 'ಕಡಬು'ಲ್ಲ. ಆದರೆ ನಮ್ಮ ನಿಮ್ಮಂಥವರ ತಪ್ಪೆಲ್ಲವನ್ನೂ ತನ್ನ ಹೊಟ್ಟೆಯಲ್ಲಿ ಮುಚ್ಚಿಕೊಂಡು ಪುನಃ ನಮ್ಮನ್ನು ಒಳ್ಳೇ ಪ್ರೀತಿಯಿಂದ ನೋಡುತ್ತಾನೆ ನಮ್ಮ ಗಣಪ. ನೀನಾದರೂ ಗಣಪನ ಈ ಎಲ್ಲ ಗುಣಗಳನ್ನು ಕಲಿಯುವೆಯಲ್ಲಾ ! ನಿನ್ನ ಅಜ್ಜಿಗೆ ಅವರು ನಿನ್ನೊ ಡನೆ ಉಲ್ಲಾಸದಿಂದ ಹರಟೆ ಹೊಡೆಯುತ್ತಿರುವಾಗ ಈ ವಿಚಾರ ತಿಳಿಸು. ಆದರೆ ಅವರನ್ನು ರೇಗಿಗೆಬ್ಬಿಸಬೇಡ.

ಇತಿ ನಿನ್ನ ಅಕ್ಕ

ಪ್ರತಿಸಾರೆಯಂತೆ ಈ ಸಾರೆಯಾದರೂ 'ಅಕ್ಕನ ಪೆಟ್ಟಿಗೆ'ಗೆ ಸಾಕಷ್ಟು ಕತೆ ಕವನ, ಅನುಭವಗಳು ಬಂದಿವೆ. ಇವುಗಳಲ್ಲಿ ಕೆಲವನ್ನು ಆರಿಸಿ ಪ್ರಕಟಿಸಿದ್ದೇವೆ. ಉಳಿದವರು ತಮ್ಮದನ್ನು ಪ್ರಕಟಿಸಲಿಲ್ಲವೆಂದು ನಿರಾಶರಾಗಬಾರದು. ಮತ್ತು

ಅವರು ಇನ್ನು ಹೆಚ್ಚಿಗೆ ಪ್ರಯತ್ನ ಪಟ್ಟು ತಮ್ಮ ಲೇಖನ ವಿಭಾಗವು ಆದಷ್ಟು ಹೆಚ್ಚು ಸುಂದರವಾಗುವಂತೆ ಮಾಡಬೇಕು. ಚಿಕ್ಕಸಹೋದರ ಸಹೋದರಿಯರೆ, ನಿಮಗೆ ಮತ್ತೂ ಒಂದು ಆನಂದದ ಸಂಗತಿ ಹೇಳುವದೆಂದರೆ, ಕೆಲವು ಎಳೆ ಮನಸ್ಸಿನ ಹಿರಿ ಸೋದರರೂ ಸಹ ನಮ್ಮ 'ಅಕ್ಕನ ಪೆಟ್ಟಿಗೆ' ಯ ನಿಯಮಗಳಿಗೆ ಒಪ್ಪಿ ತಮ್ಮನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬೇಕೆಂಬದಾಗಿ ಕೇಳಿಕೊಂಡಿದ್ದಾರೆ. ಆದರೆ ನಾಳೆ ನೀವು ಸಣ್ಣ ಸೋದರರು, ಹಿರಿಸೋದರರಿಗೆ ಸ್ಥಳಕೊಟ್ಟು ನಮಗೆ ಸ್ಥಳವಿಲ್ಲದಂತೆ ಮಾಡುತ್ತಿರುವಿರೆಂದು ಜಗಳವೆಲ್ಲಿ ತೆಗೆಯುವಿರೋ ಎಂದು ಹೆದರಿ ಅವರಿಗೆ ನಮ್ಮ ಪೆಟ್ಟಿಗೆಗೆ ಸದಸ್ಯರಾಗಲು ಆಸ್ಪದಕೊಡಲಿಲ್ಲ. ಆದರೂ ನೀವು ಆ ಹಿರಿ ಸಹೋದರರಿಗೆ ಅವರು ನಿಮ್ಮ ಬಗ್ಗೆ ತಾಳಿದ ಅಭಿಮಾನಕ್ಕಾಗಿ ಅಭಿನಂದಿಸಬೇಕಲ್ಲವೇ ?

ತಪ್ಪದೆ ಮುಂದಿನಸಾರೆ ಒಗಟಿಗೆ ಉತ್ತರ ಬರೆಯಿರಿ. ಅಕ್ಕನ ನೆನಪಿರಲಿ.

ಇತಿ ನಿಮ್ಮ ಅಕ್ಕ.



**ಮಕ್ಕಳಿಗಾಗಿ ಈ ತಿಂಗಳ ಕಥೆ.**

# ಅಬ್ದುಲ್ ಕಾದರ

ಅಬ್ದುಲ್ ಕಾದರನ ತಾಯಿ ತಂದೆಗಳು ಬಹಳ ಬಡವರು. ಅಬ್ದುಲ್‌ನು ಚಿಕ್ಕವನಿರುವಾಗಲೇ ಅವನ ತಂದೆಯು ತೀರಿಕೊಂಡದ್ದರಿಂದ ತಾಯಿ ಮಕ್ಕಳಿಬ್ಬರಿಗೆ ಜೀವನವನ್ನು ಸಾಗಿಸುವದೇ ಬಹಳ ಕಠಿಣವಾಯಿತು. ಅದೇವೇಳೆಗೆ ಆದೇ ಊರಿನ ಒಬ್ಬ ವ್ಯಾಪಾರಸ್ಥನು ವ್ಯಾಪಾರಕ್ಕಾಗಿ ಪರದೇಶಕ್ಕೆ ಹೋಗುವವನಿದ್ದನು. ಆಗ ಅಬ್ದುಲ್‌ನ ತಾಯಿಯು ವ್ಯಾಪಾರಸ್ಥನ ಸಂಗಡ ತನ್ನ ಮಗನನ್ನು ಕೊಟ್ಟು ಕಳಿಸಬೇಕೆಂದು ಮಾಡಿದಳು. ಬಡತನದ ಬೇಗೆಗಾಗಿ ತಾಯಿಮಕ್ಕಳಿಬ್ಬರೂ ಅಗಲುವ ವೇಳೆ ಬಂದಿತು. ತಾಯಿಯು ಮಗನನ್ನು ಕಳಿಸುವಾಗ "ಮಗು, ನೀನು ಯಾವಾಗಲೂ ಸತ್ಯವನ್ನು ಮಾತಾಡು. ದಯಾಳುವಾದ ದೇವರು ನಿನ್ನನ್ನು ಕಾಪಾಡುವನು. ನಾನು ನಿನಗಾಗಿ ನಾಲ್ವತ್ತು ರೂಪಾಯಿಗಳನ್ನು ನಿನ್ನ ಅರಿವೆಯ ಗಂಟಿನಲ್ಲಿ ಇಟ್ಟಿದ್ದೇನೆ. ಸಮಯ ಬಂದಾಗ ಉಪಯೋಗಿಸಿಕೋ. ನೀನು ಇನ್ನು ದೂರ ದೇಶಕ್ಕೆ ಹೋಗುವೆಯಾದ್ದರಿಂದ ನನ್ನ ನಿನ್ನ ಭೆಟ್ಟಿಯು ಬಹುಶಃ ಇನ್ನು ದೇವರೆಡೆಯಲ್ಲಿಯೇ ಎಂದು ತೋರುತ್ತದೆ." ಎಂದು ಅಳುತ್ತ ಹೇಳಿದಳು. ಅಬ್ದುಲ್‌ನಿಗೂ ತಾಯಿಯನ್ನು

ಅಗಲುವಾಗ ಬಹಳ ದುಃಖವಾಯಿತು. ಆದರೇನು ? ನಿರ್ವಾಹವೇ ಇಲ್ಲ. ತಾಯಿ ನುಡಿದ ಮಾತುಗಳನ್ನು ಹೃದಯದಲ್ಲಿ ಕೊರೆದುಕೊಂಡು ವ್ಯಾಪಾರಸ್ಥನಸಂಗಡ ಪರದೇಶಕ್ಕೆ ಹೊರಟನು. ಆದರೆ ಹಾದಿಯಲ್ಲಿ ಕಳ್ಳರು ಗಂಟುಬಿದ್ದು ವ್ಯಾಪಾರಸ್ಥನನ್ನು ಹೊಡೆದು ಬಡೆದು ಎಲ್ಲವನ್ನೂ ಕೈವಶ ಮಾಡಿಕೊಂಡರು. ಮತ್ತು ಚಿಕ್ಕ ಬಾಲಕನಾದ ಅಬ್ದುಲ್‌ನನ್ನು ಹತ್ತಿರ ಕರೆದು "ನಿನ್ನ ಹತ್ತಿರ ಏನಿದೆ? ಹೇಳು ಎಂದು ಗರ್ಜಿಸಿದರು. ಅಬ್ದುಲ್‌ನು ಹೆದರದೇ ತನ್ನ ಅರಿವೆಯ ಗಂಟಿನಲ್ಲಿ ೪೦ ರೂಪಾಯಿಗಳು ಇರುವವೆಂದು ಹೇಳಿದನು. ಇದನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು. ಅವನು ಹೇಳಿದ್ದು ಸುಳ್ಳೆಂದು ತಿಳಿದು ಮತ್ತೆ ಮತ್ತೆ ಅದೇ ಪ್ರಶ್ನೆಯನ್ನು ಕೇಳಿದರು. ಅವನಿಂದ ಬರುವ ಉತ್ತರ ಅದೊಂದೇ. ಇದರಿಂದ ಅವರು ಸಿಟ್ಟಿಗೆದ್ದು ಅಬ್ದುಲ್‌ನನ್ನು ತಮ್ಮ ಮುಖ್ಯಸ್ಥನೆಡೆಗೆ ಕರೆದುಕೊಂಡು ಹೋದರು. ಅವನೂ ಬಾಲಕನನ್ನು ಒಳ್ಳೇ ಸಿಟ್ಟಿನಿಂದ ಅದೇ ಪ್ರಶ್ನೆಯನ್ನೇ ಕೇಳಿದನು. ಅಬ್ದುಲ್‌ನು ಎಳ್ಳಷ್ಟೂ ಬೆದರದೆ ತನ್ನ ಹತ್ತರ ಅರಿವೆಯ ಗಂಟಿನಲ್ಲಿ ೪೦ ರೂ. ಗಳು ಇರುವವೆಂದೂ ನಿಮ್ಮ ಜನರು ನನ್ನನ್ನು ಕೇಳಿದಾಗಲೇ ಹೇಳಿಬಿಟ್ಟಿರುವೆನೆಂದೂ ಹೇಳಿದನು. ಅವನ ಅರಿವೆಯ ಗಂಟನ್ನು ಬಿಚ್ಚಿ ನೋಡಲಾಗಿ ನಿಜವಾಗಿಯೂ ೪೦ ರೂ. ಗಳು ಇದ್ದವು. ಮುಖ್ಯಸ್ಥನು ಆಶ್ಚರ್ಯಗೊಂಡು ಇಷ್ಟು ಚಿಕ್ಕಬಾಲಕನು ಹೀಗೆ ನಿಜವನ್ನು ನುಡಿದ ಕಾರಣವೇನೆಂದು ಕೇಳಲಾಗಿ ಅಬ್ದುಲ್‌ನು ತಾನು ಹೊರಡುವಾಗ ತನ್ನ ತಾಯಿಯು ಉಪದೇಶಿಸಿದ್ದನ್ನು ಹೇಳಿದನು. ಮುಖ್ಯಸ್ಥನಿಗೆ ಬಹಳ ಆನಂದವಾಗಿ " ಮಗು ನೀನು ಇಷ್ಟು ಸಣ್ಣವನಿದ್ದರೂ ತಾಯಿಯ ಮಾತನ್ನು ಅಕ್ಷರಶಃ ಪಾಲಿಸಿದಿ. ನಾನು ಇಷ್ಟು ದೊಡ್ಡವನಾದರೂ ಬುದ್ಧಿಯಿಲ್ಲ. ಇಂದು ನಿನ್ನಿಂದ ಪಾಠ ಕಲಿತೆ. ಇಂದಿನಿಂದ ಇಂಥ ಕೆಟ್ಟ ಕೆಲಸಗಳನ್ನು ಬಿಡುವೆನೆಂದು ಆಣೆಮಾಡುವೆನು. ತಾ ನಿನ್ನ ಕೈಯನ್ನು " ಎಂದು ಅವನ ಕೈಹಿಡಿದು ಆಣೆಮಾಡಿದನು. ಅವನ ಜೊತೆಗಾರರಿಗೂ ಪಶ್ಚಾತ್ತಾಪವಾಗಿ ಅವರೂ ಅವನಂತೆ ನಡೆಸುವದಾಗಿ ವಚನಕೊಟ್ಟರು. ಎಲ್ಲರೂ ಅಬ್ದುಲ್ ಕಾದರನಿಂದ ಕೆಟ್ಟ ಮಾರ್ಗವನ್ನು ಬಿಟ್ಟು ಒಳ್ಳೆಯ ಮಾರ್ಗವನ್ನು ಹಿಡಿದರು.

—ಪ್ರಭಾ ಬೀ. ಥಿಟೇ ಧಾರವಾಡ.

ഗ ഗ ഗ ഗ ഗ ഗ

## ನಗೆ ಹನಿ

ಒಬ್ಬ:— ಸಮುದ್ರಕ್ಕೆ ಬೆಂಕಿಹತ್ತಿದರೆ ಮೀನ ಏನು ಮಾಡುತ್ತವೆಯೋ ?

**ಮತ್ತೊಬ್ಬ:**— ಸಮುದ್ರಕ್ಕೆ ಬೆಂಕಿಹತ್ತಿದರ ಮೀನ ದಂಡೆಯ ಮೇಲಿನ ಗಿಡ ಏರತಾವ ಇಷ್ಟು ಗೊತ್ತಿಲ್ಲೇನು ನಿನಗೆ ?

**ಇನ್ನೊಬ್ಬ:**— ಆಯ್, ಗಿಡ ಏರಲಾಕ್ಕ ಅವೇನು ಎಮ್ಮೆಯೇನು ?

—ಎಸ್. ಟಿ. ಪಾಟೀಲ, ಧಾರವಾಡ.

## ಒಗಟುಗಳು

೧) ನೀರಿನೊಳಗೆ ಹುಟ್ಟಿ ನೀರಿಗಂಜುವ ವಸ್ತು ಯಾವದು ?

೨) ಘಟ್ಟದ ಮೇಲೆನಿಂತ ಮನುಷ್ಯ ಜುಟ್ಟು ಹಿಡಿದರೆ ಮಾತಾಡುವ. ಇವನಾರು ?

೩) ತಿಂಗಳೂರಿನ ಅಂಗಣದಾಗ ತಿಳಿನೀರು ಹರಿಯುತ್ತವೆ.

ಇವುಗಳಿಗೆ ಉತ್ತರವನ್ನು ಕಳುಹಿಸಿರಿ. ಸರಿಯಾದ ಉತ್ತರವನ್ನು ಪ್ರಕಟಿಸುವೆವು.

ಹೋದ ತಿಂಗಳ ಒಗಟಿನ ಉತ್ತರ:— ಹರಿಜನ.

ಉತ್ತರಿಸಿದವರು:— ಕು. ಪುಷ್ಪಾಪೈ, ಧಾರವಾಡ.

---

## ತೋಟದಲ್ಲಿ

ಶಾಲೆಯ ಎದುರಿನ ಹೂವಿನ ತೋಟದಿ।
ಅರಳಿದ್ದುವು ಬಹು ಹೂವುಗಳು।
ಕೆಂಪಿನ ಸೊಂಪಿನ ವಿಧವಿಧ ಬಣ್ಣದ
ಕಂಪನು ಬೀರುವ ಹೂವುಗಳು।
ಮಂದಿಯ ಮನಕುಲ್ಲಾಸವ ನೀಡುತೆ
ರಂಜಿಸುತಿದ್ದುವು ಹೂವುಗಳು।
ಹೂವಿಂಹೂವಿಗೆ ಹಾರುತ ಕುಣಿಯುತ।
ನಲಿಯುತಲಿದ್ದುವು ಚಿಟ್ಟೆಗಳು।
ಬಣ್ಣದ ಚಿಟ್ಟೆಯು ಸಣ್ಣದು ಚಿಟ್ಟೆಯು
ಮಣ್ಣಿಗೆ ಹೊಳೆಯುವ ಚಲು ಚಿಟ್ಟೆ।
ಕೆಂಪಿನ ಹಳದಿಯ ನೀಲಿಯ ರಂಗಿನ
ಇಂಪನು ಮನಕೀಯುವ ಚಿಟ್ಟೆ।
ಕೋಮಲ ಪುಷ್ಪದ ಮೇಲೆರುಗುತಲೀ।
ಪ್ರೇಮದಿ ಮಧುವನು ಹೀರುವ ಚಿಟ್ಟೆ।
ಹೂವಿನ ಮಧುವನು ಹೀರುತ ಮುದದಲಿ
ಸೊಗಸಿನ ಬಾಳ್ವೆಯ ನಡೆಸುವ ಚಿಟ್ಟೆ।
ನೀಲಾಕಾಶದಿ ಮಿನುಗುವ ತಾರೆಯ।
ಚೆಲುವಿಲಿ ತೋಟದಿ ನೀನಿರುವೆ॥

—ಕುರಾಡಿ ಸೀತಾರಾಮ ಅಡಿಗ
ಫಲಿಮಾರು ದ. ಕ.

# ಎರಡು ಸಂಸ್ಥೆಗಳ ತಿಕ್ಕಾಟ

**ಧಾರವಾಡ ನಗರ ಸಭೆ ಹಾಗೂ ಧಾರವಾಡ ವನಿತಾಸೇವಾ ಸಮಾಜ.**

●

ಮೇಲಿನ ಈ ಎರಡೂ ಸಂಸ್ಥೆಗಳಲ್ಲಿ ಜಾಗ ಕೊಡುವ ವಿಷಯದ ಬಗ್ಗೆ ಈಗ ನಾಲ್ಕಾರು ವರ್ಷಗಳಿಂದ ತಿಕ್ಕಾಟ ನಡೆದಿದೆ. ಇಲ್ಲಿಯ ವನಿತಾ ಸೇವಾ ಸಮಾಜವು ಹೆಣ್ಣುಮಕ್ಕಳ ಹೆಚ್ಚಳವನ್ನು ಬಯಸಿ ಅವರ ಶಾರೀರಕ, ಮಾನಸಿಕ, ಸಾಮಾಜಿಕ, ನೈತಿಕ ಹಾಗೂ ಆರ್ಥಿಕ ಕುಂದುಕೊರತೆಗಳನ್ನು ನಿವಾರಿಸಿ, ಅವರ ದುಃಸ್ಥಿತಿಯನ್ನು ಹೋಗಲಾಡಿಸಲು ಹೆಣಗಾಡುವದಕ್ಕಾಗಿ ಟೊಂಕ ಕಟ್ಟಿ ನಿಂತ ಒಂದು ಹೆಣ್ಣುಮಕ್ಕಳ ಸಂಸ್ಥೆ. ಈ ಸಂಸ್ಥೆಯು ೧೯೨೮ ರಲ್ಲಿ ಒಬ್ಬ ಅನಾಥ ವಿಧವಾ ಹೆಣ್ಣುಮಗಳಿಂದ ಸ್ಥಾಪಿತವಾಗಿದ್ದು ಈವರೆಗೂ 'ಪಿಪಿಲಿಕಾ' ಗತಿಯಿಂದೇಕಾಗಲೊಲ್ಲದು ಅಂತೂ ಇಲ್ಲಿಯ ಮಟ್ಟಕ್ಕೆ ಅಂದರೆ ಪ್ರಸಿದ್ಧ ವ್ಯಕ್ತಿಗಳು ಸಹ ಈ ಸಂಸ್ಥೆಗೆ ಯಾವ ಸಂಕೋಚವೂ ಇಲ್ಲದಂತೆ ಭೆಟ್ಟಿಕೊಟ್ಟು ಸಂಸ್ಥೆಯಲ್ಲಿ ನಡೆದ ಕಾರ್ಯಕಲಾಪಗಳನ್ನು ನೋಡಿ, ಇದೂ ಒಂದು ವಿಧಾಯಕ ಕಾರ್ಯ ನಡೆಸಿದೆ ಎಂದು ಧಾರಳವಾಗಿ ಉದ್ಗಾರ ತೆಗೆಯುವ ಮಟ್ಟಕ್ಕೆ ಬಂದಿದೆ. ಸಧ್ಯಕ್ಕೆ ಈ ಸಂಸ್ಥೆಯ ಬಗ್ಗೆ ಕೆಲವು ಸಂಗತಿ ಹೇಳುವದೆಂದರೆ,

ಈ ಸಂಸ್ಥೆಯ ಕಟ್ಟಡವು ಧಾರವಾಡದ ಹೊಸಯಲ್ಲಾಪುರದಲ್ಲಿ ಅಲ್ಲಿನ ನಗರ ಸಭೆಯವರು ಹೆಣ್ಮಕ್ಕಳ ಹೆಚ್ಚಳವನ್ನು ಮನಸ್ಸಿನ ಮೇಲೆ ತೆಗೆದುಕೊಂಡು ೧೯೩೯ ನೇ ಇಸ್ವಿಯಲ್ಲಿ ಈ ಸಂಸ್ಥೆಗಾಗಿ ಒಂದು ಎಕರೆ ಭೂಮಿಯನ್ನು ಭೂ ಬಾಡಿಗೆಯಿಂದ ಕೊಟ್ಟಿದ್ದು ಆ ಸ್ಥಳದಲ್ಲಿ ಈಗಾಗಲೇ ಸಮಾಜದ ಭವ್ಯವಾದ ಸ್ವಂತ ಕಟ್ಟಡಗಳ ಕೆಲವಂಶಗಳನ್ನು ಕಟ್ಟಿಸಲಾಗಿದೆ. ಈಗ ವಸತಿಗೃಹದ ಕೋಣೆಗಳ, ಅಡುಗೆಮಾಡುವ, ಮಿಂಯುವ, ಬೀಸುವ ಹಾಗೂ ಉಗ್ರಾಣದ ಮನೆಗಳೂ, ಅತಿಥಿ ಗೃಹವೂ ಪ್ರಸೂತಿಗೃಹವೂ ಕಟ್ಟಿ ಮುಗಿದಿವೆ. ಸುಮಾರು ಈ ಎಲ್ಲ ಕಟ್ಟಡಗಳ ಖರ್ಚು ೭೮ ಸಾವಿರ ರೂ. ಬೆಲೆ ಬಾಳುವಷ್ಟಾಗಿದೆ. ಇನ್ನೂ ಶಾಲೆಯ ಕಟ್ಟಡವನ್ನು ಕಟ್ಟಿಸಲು ಸ್ಥಳಾಭಾವದ ಮೂಲಕ ಹಾಗೂ ಈ ಆರ್ಥಿಕ ಮುಗ್ಗಟ್ಟಿನ ಮೂಲಕ ಸಾಧ್ಯವಾಗದೆ ಸುಮಾರು ೫ ಸಾವಿರ ರೂ. ಬೆಲೆಬಾಳುವ ತಾತ್ಪೂರ್ತಿಕ ಗುಡಿಸಲಗಳನ್ನು ಹಾಕಲಾಗಿವೆ

ಇಲ್ಲಿ ಈಗ ಸಧ್ಯಕ್ಕೆ ನಡೆದಿರುವ ಕಾರ್ಯ ಕಲಾಪಗಳೆಂದರೆ, ಈ ಸಂಸ್ಥೆಗೆ ಸಂಬಂಧಿಸಿದ ಒಂದು ವಸತಿಗೃಹವಿದ್ದು, ಅಲ್ಲಿ ಎಲ್ಲ ಬಗೆಯ ಹೆಣ್ಣುಮಕ್ಕಳಿಗೂ ಪ್ರವೇಶದ ಅನುಕೂಲತೆ ಇದ್ದು, ವಿಶೇಷವಾಗಿ ಅನಾಥ, ಬಡವ, ಪರಿತ್ಯಕ್ತ, ವಿಧವಾ ಹಾಗೂ ಪ್ರಚಲಿತ ಸಮಾಜವು ಪತಿತರೆಂದು ತಿಳಿದ ಹೆಣ್ಣುಮಕ್ಕಳ ಕಡೆಗೆ ಹೆಚ್ಚಿನ

ಗಮನ ಕೊಟ್ಟು ಪ್ರವೇಶ ಕೊಡಲಾಗುತ್ತಿದೆ. ಈಗ ಸುಮಾರು ೮೦–೯೦ ವಿದ್ಯಾರ್ಥಿನಿಯರು ವಸತಿಗೃಹದಲ್ಲಿ ಧರ್ಮಾರ್ಥ ವಿದ್ಯಾರ್ಥಿನಿಯರೆಂದು ಪ್ರವೇಶ ಪಡೆದಿದ್ದಾರೆ. ಇಲ್ಲಿ ಹೆಣ್ಣುಮಕ್ಕಳಿಗೆ ಬೇಕಾಗುವ ಎಲ್ಲ ತರದ ಶಿಕ್ಷಣಗಳೂ ಕೊಡಲ್ಪಡುತ್ತವೆ. ಕನ್ನಡ ಏಳನೇ ತರಗತಿಯವರೆಗೆ ಶಾಲೆ ಇದ್ದು ಮುಂದೆ ಶಿಕ್ಷಕ ವಿದ್ಯಾರ್ಥಿನಿಯರ ಶಾಲೆ (Teachers' Training Collage) ಯೊಂದು ಇದೇ ೧೯೫೨ ನೇ ಜೂನ ತಿಂಗಳಲ್ಲಿ ಪ್ರಾರಂಭವಾಗಿದೆ. ಇದಲ್ಲದೆ ಪ್ರೌಢರವರ್ಗ, ಹಾಗೂ ಹೊಲಿಗೆ, ನೇಗಿ ಹಿಂದೀ ವರ್ಗಗಳೂ, ಧರ್ಮಾರ್ಥ ಆಯುರ್ವೇದ ಆಸ್ಪತ್ರೆಯೂ, ಧರ್ಮಾರ್ಥ ಪ್ರಸೂತಿಗೃಹವೂ, ಹೆಣ್ಣುಮಕ್ಕಳ ವಾಚನಾಲಯವೂ ನಡೆದಿವೆ. ಈ ಎಲ್ಲ ಚಟುವಟಿಕೆಗಳಿಗೆ ಜಾಗದ ಕೊರತೆಯು ಬಹಳವಿದೆ. ಈಗ ಸದ್ಯಕ್ಕೆ ಮುಗಿದಿರುವ ಕಟ್ಟಡಗಳನ್ನು ಬಿಟ್ಟು ಉಳಿದ ಶಾಲೆ ಕಾಲೇಜ, ನೇಗಿ, ಹೊಲಿಗೆ, ವಾಚನಾಲಯ, ಆಯುರ್ವೇದೀಯ ಆಸ್ಪತ್ರೆ ಮುಂತಾದ ಖಾಯಂ ಕಟ್ಟಡಗಳಿಗಾಗಿ ಹಾಗೂ ಮಕ್ಕಳ ಆಟದ ಬಯಲು, ತೋಟ-ಪಟ್ಟಿಗಳಿಗಾಗಿ ಒಂದು ಸ್ವಲ್ಪ ಸಹ ಜಾಗ ಇಲ್ಲವಾಗಿದೆ. ಹಾಗೂ ಬರಬರುತ್ತ ಪ್ರಗತಿಮಾರ್ಗದತ್ತ ಸಾಗಿರುವ ಈ ಸಂಸ್ಥೆಯು ಮುಂದಾದರೂ ಇದೇ ತೆರನಾಗಿ ಮುಂದೊರೆದೇತೀರುವದೆಂಬುದು ನಿಶ್ಚಿತವಿದ್ದು ಮುಂದಿನ ಗುರಿಯಾಗಿಟ್ಟುಕೊಂಡ ಇನ್ನೂ ಕೆಲವು ಹೊಸ ಚಟುವಟಿಕೆಗಳಿಗಾಗಿ ಸ್ಥಳಾಭಾವವು ಬಹಳವಿದೆ. ಕಾರಣ ಸಂಸ್ಥೆಯ ಚಾಲಕರು ಈಗ ನಾಲ್ಕಾರು ವರ್ಷಗಳಿಂದ ನಗರ ಪಿತಾಮಹರಿಗೆ ಈಗಿರುವ ಸಮಾಜದ ಸುತ್ತಲಿನ ನಾಲ್ಕು ಎಕರೆ ಸ್ಥಳಗಳನ್ನು ಸಂಸ್ಥೆಗೆ ಭೂಬಾಡೆಯಿಂದ ಕೊಡಬೇಕೆಂದು ವಿನಂತಿ ಅರ್ಜಿಗಳನ್ನು ಮೇಲಿಂದ ಮೇಲೆ ಕಳಿಸುತ್ತಲೇ ಇದ್ದರು. ಆದರೆ ಅವರ ಎಷ್ಟೋ ಅರ್ಜಿಗಳಿಗೆ ಸರಿಯಾದ ಉತ್ತರ ಬಾರದೆ ಕೊನೆಗೊಮ್ಮೆ 'ನ' ಕಾರ ಉತ್ತರ ಬಂದ ಮೂಲಕ ಹಾಗೂ ಆ ಸ್ಥಳವನ್ನು ನಗರ ಸಭೆಯು 'ಪ್ಲಾಟ್ಸ' ಮಾಡಿ ಮಾರುವ ವಿಚಾರದಲ್ಲಿದೆಯೆಂಬ ಸುದ್ದಿ ಕೇಳಿದ ಮೂಲಕ ಸಮಾಜವು ಹೆಚ್ಚು ಎಚ್ಚರಾಗಿ ಆ ಸ್ಥಳವನ್ನು ಈರೀತಿ ಮಾರದೆ ತನ್ನ ಪವಿತ್ರ ಕಾರ್ಯಕ್ಕೆ ಉಪಯೋಗವಾಗುವಂತೆ ಮಾಡಬೇಕೆಂಬ ಉದ್ದೇಶದಿಂದ ನಗರ ಸಭೆಗೆ ಪುನಃ ಅರ್ಜಿ ಮಾಡಿ "ನೀವು ಈ ಸ್ಥಳವನ್ನು ಮಾರುವ ಹಂಚಿಕೆ ಹಾಕಿದ್ದಾದರೆ ನಾವು ಹೆಣ್ಣು ಮಕ್ಕಳು ಸತ್ಯಾಗ್ರಹ ಹೂಡಿ ಆ ಸ್ಥಳದಲ್ಲಿ ಮಲಗುವೆವು. ಕೊನೆಗೆ ನೀವದನ್ನು ತಾಯಿಯ ರಕ್ತ ಚೆಲ್ಲಿಸಿ ಮಾರಬೇಕಾದೀತು !!" ಎಂದು ಹೇಳಿದರಂತೆ. ಆದರೆ ಈ ವರೆಗೂ ಅದಕ್ಕೆ ಯಾವ ಉತ್ತರವೂ ಬಾರದ ಮೂಲಕ ತಾ|| ೨೧-೭-೫೨ ನೇ ದಿನ ಧಾರವಾಡ ನಗರ ಸಭೆಯ ಅಧ್ಯಕ್ಷರಿಗೆ ಕೆಳಗಿನಂತೆ ಸಾರಾಂಶ ಬರುವ ಬಂದ ಅನಾವೃತ್ತ ಪತ್ರ ಕಳಿಸಿದೆಯಂತೆ.

"ವನಿತಾ ಸೇವಾ ಸಮಾಜವು ದಿನಕ್ರಮೇಣ ಬೆಳೆಯುತ್ತಿದ್ದು ಅದಕ್ಕೆ ತನ್ನ ಬೇರೆ ಬೇರೆ ಚಟುವಟಿಕೆಗಳಿಗಾಗಿ ಸ್ಥಳಾಭಾವವು ಬಹಳ ವಿರುವ ಮೂಲಕ ತಮಗೆ ಹಾಗೂ ತಮ್ಮ ಉಳಿದ ಸದಸ್ಯರಿಗೆ ನಮ್ಮ ಸಮಾಜದ ಈಗಿನ ಕಟ್ಟಡದ ಸುತ್ತಲಿನ

ನಾಲ್ಕು ಎಕರೆ ಜಾಗದ ಪೈಕಿ ಕಿಮಾನ್ ಎರಡು ಎಕರೆ ಸ್ಥಳವನ್ನಾದರೂ ಈದ ಸದ್ಯಕ್ಕೆ ಕೊಡಬೇಕಾಗಿ ಕೇಳಿಕೊಂಡಿದೆ. ಅದರ ಆವಶ್ಯಕತೆ ಅಲ್ಲಿ ನಾವು ಮಾಡತಕ್ಕ ಕಾರ್ಯ ಕಲಾಪಗಳನ್ನು ಹಾಗೂ ನಕಾಶ ವಿವರಗಳನ್ನೂ ಕೊಟ್ಟು ನಾಲ್ಕಾರು ಅರ್ಜಿಗಳನ್ನು ಕಳುಹಿಸಲು ಉತ್ತರ ಬಾರದ್ದರಿಂದ ಮ॥ ಕಮಿಶನರ್ ದಕ್ಷಿಣಭಾಗ ಇವರ ಶಿಫಾರಸ ಪತ್ರದೊಡನೆ ಮತ್ತೊಂದು ಅರ್ಜಿ ಕಳುಹಿಸಲು ಅದೂ ಮೊದಲಿನ ಅರ್ಜಿಗಳ ಹಾದಿಯನ್ನೇ ಹಿಡಿದದ್ದರಿಂದ ಮತ್ತು ಒಂದು ಅರ್ಜಿ ಕಳುಹಿಸಿ ನೋಡ ಬೇಕೆಂದು ತಾ॥ ೨೮-೯-೫೦ ರಲ್ಲಿ ಪುನಃ ಅರ್ಜಿ ಮಾಡಲು ಅದಕ್ಕೆ ತಾವು ಸ್ಥಳ ಕೊಡುವದಿಲ್ಲೆಂದು ನ ಕಾರಿಸಿದ ಉತ್ತರ ಬಂದಿತು. ಮುಂದೆ ತಾ॥ ೨೪-೧೦-೫೦ನೇ ದಿನ ತಾವು ಸ್ಥಳ ಕೊಡದಿದ್ದಲ್ಲಿ ಸತ್ಯಾಗ್ರಹ ಹೂಡಬೇಕಾದೀತೆಂಬ ವಿಚಾರ ಮುಂದಿಟ್ಟು ಅರ್ಜಿ ಮಾಡಿಕೊಳ್ಳಲಾಗಿತ್ತು. ಅದಕ್ಕೆ ಇನ್ನೂವರೆಗೂ ತಮ್ಮಿಂದ ಯಾವ ಉತ್ತರವೂ ಬಂದಿಲ್ಲ. ಈಗಂತೂ ನಮ್ಮ ಕಟ್ಟಡಕ್ಕಾಗಿ ಹಾಗೂ ಮಕ್ಕಳ ಆಟಪಾಟಕ್ಕಾಗಿ ಕಾಲೇಜದ ನಿಯಮದ ಪ್ರಕಾರ ಅವರ ವಸತಿಗೃಹ, ತೋಟ-ಪಟ್ಟಿಗಳಿಗಾಗಿ ಸ್ಥಳಾಭಾವವು ಬಹಳೇ ಇರುವ ಮೂಲಕ ಈ ಅರ್ಜಿಯ ಕಡೆ ಈ ಗಾದರೂ ಲಕ್ಷ್ಯಕೊಟ್ಟು ವಿಚಾರ ಮಾಡಿ ಸ್ಥಳ ಮಂಜೂರು ಮಾಡಿದ ಬಗ್ಗೆ "ಹುಕುಂ" ಬೇಗನೇ ಕಳಿಸುವಿರಾಗಿ ನಂಬಿಗೆ. ಅನುಕೂಲ ಉತ್ತರಕ್ಕಾಗಿ ತಾ॥ ೧೪-೮-೫೨ರ ವರೆಗೆ ದಾರಿ ನೋಡಿ ತಮ್ಮಿಂದ ಉತ್ತರ ಬಾರದಿದ್ದರಾಗಲೀ ಅಥವಾ ಪ್ರತಿಕೂಲ ಉತ್ತರ ಬಂದಲ್ಲಾಗಲೀ ಶಾಂತರೀತಿಯಿಂದ ಸತ್ಯಾಗ್ರಹಕ್ಕೆ ಪ್ರಾರಂಭ ಮಾಡಿ ಮುಂದೆ ಆಮರಣ ಉಪವಾಸ ಕೈಕೊಳ್ಳಲಾದೀತು."

ಇದಲ್ಲದೆ ಮುಂದೆ ಧಾರವಾಡದ ಸಾವಿರಾರು ನಾಗರಿಕರಿಂದ (ಅವರಲ್ಲಿ ಸರ್ಕಾರೀ ಅಧಿಕಾರಿಗಳೂ, ನೌಕರರು, ಮುನಸಿಪಲ್ ಮೆಂಬರರೂ, ವಕೀಲರೂ, ಖಾಸಗಿ ಶಾಲೆಗಳ, ಕಾಲೇಜುಗಳ ಮಾಸ್ತರ, ಪ್ರಿನ್ಸಿಪಾಲ, ಪ್ರೊಫೆಸರ್‌ಗಳೂ, ಶಾಲಾಖಾತೆಯ ಅಧಿಕಾರಿಗಳೂ, ಡಾಕ್ಟರ ಮುಂತಾದವರೂ ಸಹ ಇದ್ದರು.) ಸಮಾಜಕ್ಕೆ ಸ್ಥಳಕೊಡುವದು ಯೋಗ್ಯವಿದೆಯೆಂಬ ಅರ್ಜಿಯ ಮೇಲೆ ಅಂಕಿತ ತೆಗೆದುಕೊಂಡು ಅವುಗಳನ್ನು ತಾ ೧೪ ನೇ ದಿನ ಸಂಜೆ ಮುನಸಿಪಲ್ ಪ್ರಸಿಡೆಂಟರಿಗೆ ಒಪ್ಪಿಸಲಾಯ್ತು. ತಾ. ೧೩-೮-೫೨ ನೇ ದಿನ ಮುನಿಸಿಪಲ್ ಅಧ್ಯಕ್ಷರ ಕಡೆಯಿಂದ "ನಾವು ನಿಮ್ಮ ಅರ್ಜಿಯ ಬಗ್ಗೆ ಪೂರ್ಣ ವಿಚಾರ ಮಾಡುವೆವು. ಕಾರಣ ತಾವು ಉಪವಾಸ ಸತ್ಯಾಗ್ರಹವನ್ನು ಕೈಕೊಳ್ಳಲಿಕ್ಕಿಲ್ಲವೆಂದು ಆಶಿಸುತ್ತೇವೆ" ಎಂಬುದಾಗಿ ಸಂದಿಗ್ಧ ಉತ್ತರ ಬಂದ ಮೂಲಕ ಸತ್ಯಾಗ್ರಹಿಗಳಿಗೆ ಎಂದಿಗೂ ಸೋಲಿಲ್ಲ. ಈಗ ಇವರ ವಚನಕ್ಕೆ ಬೆಲೆ ಕೊಟ್ಟು ಸರಿಯಾದ ಉತ್ತರಕ್ಕಾಗಿ ಕೆಲವು ಅವಧಿಯವರೆಗೆ ಕಾಯಬೇಕೆಂಬ ಉದ್ದೇಶದಿಂದ ಸಧ್ಯಕ್ಕೆ ಸತ್ಯಾಗ್ರಹ ತಡೆಹಿಡಿಯಲಾಗಿದೆ ಎಂಬ ವರದಿ ಬಂದಿದೆ.

ಈ ಎರಡು ಸಾರ್ವಜನಿಕ ಸಂಸ್ಥೆಗಳ ತಿಕ್ಕಾಟಗಳಲ್ಲಿ ನಾವು ಮೂರನೇಯವರು ಏನನ್ನು ನೋಡಬೇಕು? ಈ ಎರಡರ ಮಾತಿನಲ್ಲೂ ಯಾವ ಮಾತಿಗೆ

ಹೆಚ್ಚು ಮಹತ್ವ ಕೊಡತಕ್ಕದ್ದೆಂಬುದನ್ನು ಜನತೆಯೇ ವಿಚಾರ ಮಾಡಬೇಕು. ಹಾಗೂ ವಿಚಾರ ಮಾಡುವಾಗ ಯಾವ ಮಾತಿನಲ್ಲಿ ಎಷ್ಟು ತಥ್ಯಾಂಶವಿದೆ ಎಂಬುದನ್ನು ನೋಡಬೇಕು. ಧಾರವಾಡ ವನಿತಾಸೇವಾಸಮಾಜವು, ಧಾರವಾಡ ನಗರ ಸಭೆಯಾಗಲೀ ಅಥವಾ ಸರಕಾರವೇ ಆಗಲಿ ಮಾಡಬೇಕಾಗಿದ್ದ ಕೆಲಸವನ್ನೇ ಮಾಡುತ್ತಿದೆ. ದೊಡ್ಡ ಕ್ಷೇತ್ರದಲ್ಲಿ ಓಡಾಡುವ ಜನರಿಗೆ ಈ ಹೆಣ್ಣಿನ ಆಳವನ್ನರಿತು ಅವರಿಗೊಂದು ಕ್ಷೇತ್ರ ಕಲ್ಪಿಸಿಕೊಡುವ ದೃಷ್ಟಿಯು ಸಹಜವಾಗಿ ಬಾರದಿರುವದು ಸ್ವಾಭಾವಿಕವೇ ಇದೆಯೆಂದು ತಿಳಿದು, ಆ ಕಾರ್ಯವನ್ನು ತನ್ನ ಮೇಲೆ ಹೊಣೆಹೊತ್ತು ಈ ಸಂಸ್ಥೆಯು ಮಾಡುತ್ತಿದೆ. ಸರಕಾರ ಹಾಗೂ ಸ್ಥಾನಿಕ ನಗರಸಭೆಗಳಿಗೆ ಇಂತಹ ಸಂಸ್ಥೆಗಳು ಸಹಕಾರ ನೀಡುತ್ತಿರುತ್ತವೆಯೇ ಹೊರತು ಅವುಗಳಿಗೆ ಈ ಸಂಸ್ಥೆಗಳು ಭಾರವಾಗಿ ನಿಲ್ಲುವದಿಲ್ಲೆಂಬ ಮಾತು ಎಲ್ಲೆಲ್ಲಿ ಇಂತಹ ಸಂಸ್ಥೆಗಳಿವೆಯೋ ಅಲ್ಲಿನವರು ಅದನ್ನು ಅರಿತಿರುತ್ತಾರೆ. ಅಂತೆಯೇ ನಮ್ಮ ನಗರಸಭೆಯಾದರೂ ಅದನ್ನು ಚನ್ನಾಗಿ ಮನಗಂಡಿರಲು ಸಾಕು. ಹೀಗಿದ್ದೂ ಸಹ ಈ ನಗರಸಭೆಯು ವನಿತಾಸೇವಾ ಸಮಾಜಕ್ಕೆ ಸ್ಥಳವನ್ನು ಕೊಡಲೇಕೆ ನಿರಾಕರಿಸುತ್ತಿದೆ? ಕೇವಲ ತಮ್ಮ ಉತ್ಪನ್ನವು ಕಡಿಮೆಯಾಗುವದೆಂಬ ಅವಿಚಾರ ಹಾಕುವಷ್ಟು ಮೂರ್ಖತೆಯನ್ನು ನಗರ ಸಭೆಯು ಮಾಡಲು ಸಾಧ್ಯವಿರುವದೇನು? ಹಾಗೆಂದಿಗೂ ಇರಲಾರದು. ಸಮಾಜವು ಬಾಯ್ಬಿಟ್ಟು ಕೇಳುವ ಮೊದಲೇ ನಗರಸಭೆಯು ತಾನಾಗಿಯೇ ಮುಂದೆಬಂದು, ತನ್ನ ಕೆಲಸದಲ್ಲಿ ಸಹಕರಿಸುತ್ತಿರುವ ಈ ಬೆಳೆಯುತ್ತ ಹೊರಟಿರುವ ಸಂಸ್ಥೆಗೆ ಸ್ಥಳ ವನ್ನು ಪೂರೈಸುವ ಉದಾರತೆ ತೋರಿಸಬೇಕಾಗಿತ್ತು. ಆದರೆ ಅದನ್ನು ಬಿಟ್ಟು ಸಂಸ್ಥೆಯು ತಾನಾಗಿ ಬಾಯ್ಬಿಟ್ಟು ಕೇಳಿದಾಗ ಸಹ ಇಲ್ಲವೆಂಬ ಉತ್ತರವನ್ನಿತ್ತು, ಸಂಸ್ಥೆಯು ಉಪವಾಸ ಸತ್ಯಾಗ್ರಹವನ್ನು ಕೈಕೊಳ್ಳುವ ಮಟ್ಟಕ್ಕೆ ತರುವಂತಹ ಪರಿಸ್ಥಿತಿ ತಂದದ್ದು ಶೋಚನೀಯ ಸಂಗತಿಯೇ ಸರಿ. ಊರಿನ, ಜನತೆಯ ಹೆಣ್ಣು ಮಕ್ಕಳ ಹಿತದೃಷ್ಟಿಯಿಂದ ನೋಡುತ್ತಹೋದಲ್ಲಿ ಈ ರೀತಿಯ ಔಚಿತ್ಯವನ್ನು ನಗರ ಸಭೆಯು ತೋರಿಸಿದ್ದು ಸರಿಯಾಗಲಿಲ್ಲ. ತಮ್ಮ ಸರ್ವಸ್ವವನ್ನು ತ್ಯಾಗಮಾಡಿ, ಸಂಸ್ಥೆಯ ಹಿತಕ್ಕಾಗಿ ದುಡಿಯುತ್ತಿರುವ ಚಾಲಕರಿಗೆ ಈ ಸ್ಥಳದ ಬೇಡಿಕೆಯಲ್ಲಂತೂ ಯಾವ ಸ್ವಾರ್ಥವೂ ಇಲ್ಲವೆಂಬದಂತೂ ಈಗಿನವರೆಗೆ ಅಲ್ಲಿ ನಡೆದಿರುವ ಚಟುವಟಿಕೆಗಳಿಂದ ಸ್ಪಷ್ಟವಾಗಿ ಕಾಣುತ್ತಿವೆ. ಇಂತಹ ಸಮಯದಲ್ಲಿ ನಗರಸಭೆಯು ತನ್ನ ಉತ್ಪನ್ನದ, ಲಾಭದ ಕಡೆಗೇ ಹೆಚ್ಚು ದೃಷ್ಟಿಯಿಟ್ಟು ಈ ಸಂಸ್ಥೆಯ ಕಡೆಗೆ ದುರ್ಲಕ್ಷಿಸುವದು ನ್ಯಾಯವಾದೀತೇನೆಂಬ ಬಗ್ಗೆ ಸಾರ್ವಜನಿಕರು ವಿಚಾರಮಾಡುವಂತಹದ್ದಿದೆ. ಸಂಸ್ಥೆಗೆ ಸ್ಥಳಕೊಟ್ಟರೆ ನಗರಸಭೆಯ ಉತ್ಪನ್ನಕ್ಕೆ ಧಕ್ಕೆಬರುಬಹುದೆಂಬ ಕೂಗು ಕೇಳಿಬರುತ್ತಿದೆ. ಇದು ನಿಜವಿದ್ದಲ್ಲಿ ನಗರಸಭೆಯ ದೃಷ್ಟಿಯು ಇಷ್ಟು ಆಕುಂಚಿತವಿರಲು ಸಾಧ್ಯವಿದೆಯೇ ಹೇಗೆ?

—ಓರ್ವ ಅವ್ಯಾಪಾರೇಶು ವ್ಯಾಪಾರಿ.

# ಅಭಿನಂದನೆಗಳು ~ ~ ~ ~

ಕನ್ನಡ ಸೋದರಿ ಶ್ರೀಮತಿ ವತ್ಸಲಾ ಪಾಟೀಲರು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಮ್ಯಾಂಚೆಸ್ಟರಕ್ಕೆ ಹೋಗುತ್ತಿರುವದು ನಮಗೆಲ್ಲ ತುಂಬ ಅಭಿಮಾನದ ಸಂಗತಿ, ಆನಂದದ ವಿಷಯ; ಸುಶಿಕ್ಷಿತ ಸೋದರಿಯರ ಸಂಖ್ಯೆ ಬೆರಳಮೇಲೆಣಿಸುವಷ್ಟಿರುವ ಇಂದಿನ ಕಾಲದಲ್ಲಿ, ಶ್ರೀಮತಿ ಪಾಟೀಲರು ತಮ್ಮ ಉಚ್ಚ ಶಿಕ್ಷಣದ ಆದರ್ಶದಿಂದ ನಾಡಿನ ಸೋದರಿಯರಿಗೇ ಮೇಲ್ಪಙ್ತಿಯಾಗಿದ್ದಾರೆ.

ಶ್ರೀಮತಿ ಪಾಟೀಲರು ತುಂಬಾ ಮೇಧಾವಿಗಳು; ಗಣಿತ ಅವರ ಮೆಚ್ಚಿಕೆಯ ವಿಷಯ. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಹೆಚ್ಚು ಗುಣಗಳನ್ನು ಪಡೆದು ಅನೇಕ ಶಿಷ್ಯವೃತ್ತಿಗಳನ್ನೂ ಬಹುಮಾನಗಳನ್ನೂ ದೊರಕಿಸಿದರು. ಮುಂದೆ ಬಿ. ಎ. ದಲ್ಲಿ ಗಣಿತವನ್ನೇ ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಪ್ರಥಮ ಶ್ರೇಣಿಯನ್ನು ಸಂಪಾದಿಸಿದರು. ಬಳಿಕ ೧೯೪೪ ರಲ್ಲಿ, ಎಮ್. ಎ. ದಲ್ಲಿಯೂ ಮೇಲಿನ ಸ್ಥಾನವನ್ನು ಪಡೆದು, ಅಲ್ಲಿಂದ ಕಳೆದ ಎರಡು ಮೂರು ವರುಷಗಳಿಂದೀಚೆ ಧಾರವಾಡ ಕರ್ನಾಟಕ ಕಾಲೇಜಿನಲ್ಲಿ ಗಣಿತದ ಪ್ರಾಧ್ಯಾಪಕರಾಗಿದ್ದಾರೆ.

ಯೋಗ್ಯತೆಯುಳ್ಳ ಇವರಿಗೆ ಉಚ್ಚ ಶಿಕ್ಷಣದಲ್ಲಿ ಸಕಲ ಸೌಕರ್ಯಗಳೂ ದೊರೆಯಲಿ; ಇವರ ಬುದ್ಧಿಮತ್ತೆಯ ಉಪಯೋಗ ಕನ್ನಡನಾಡು ನುಡಿಗಳಿಗಾಗಲಿ; ಪರಮಾತ್ಮನು ಅವರ ಕಾರ್ಯದಲ್ಲಿ ಯಶಸ್ಸನ್ನು ದಯಪಾಲಿಸಲಿ, ಎಂಬುದೇ 'ವೀರಮಾತೆ' ಯ ಹರಕೆ !

* * * * * *

ಶ್ರೀಮತಿ ಪ್ರಮೀಲಾಬಾಯಿ ದೇಶಪಾಂಡೆಯವರು ಹುನಗುಂದದಲ್ಲಿ ಸರಪಂಚರಾಗಿ ನಿಯುಕ್ತರಾದುದು ಕನ್ನಡ ಸಮಾಜದಲ್ಲಿ ಒಂದು ಕ್ರಾಂತಿಯಾದಂತೆಯೇ! ಅದೂ ಹುನಗುಂದದಂತಹ ಊರಿನಲ್ಲಿ; ತಮ್ಮ ಯೋಗ್ಯತೆಯ ಮೂಲಕ ಈ ಸ್ಥಾನವನ್ನು ಗಳಿಸಿಕೊಂಡ ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

* * * * * *

ಕರ್ನಾಟಕದ ಸಾಂಸ್ಕೃತಿಕ ರಂಗದಲ್ಲಿ ಧಾರವಾಡದ ಜೊತೆಯಾಗಲೆಳಿಸುವ ಸ್ಥಾನ ಬೆಳಗಾವಿ; ಅಲ್ಲಿಯ ಮುನಿಸಿಪಾಲಿಟಿಗೆ ಶ್ರೀಮತಿ ಶಾಂತಾಬಾಯಿ ನರಗುಂದಕರರು ಅಧ್ಯಕ್ಷರಾದುದು ಸೋದರೀ ವರ್ಗಕ್ಕೆಲ್ಲ ಹೆಮ್ಮೆಯ ವಿಷಯ. ಅವರು ತಮ್ಮ ಕಾರ್ಯದಕ್ಷತೆಯಿಂದ, ಯೋಗ್ಯತೆಯಿಂದ ನಾಡಿಗೆ ಆದರ್ಶಪ್ರಾಯರಾಗಿರಲಿ ಎಂಬುದೇ ನಮ್ಮ ಆಶೆ !

* * * * * *

# ಪ್ರಜಾಪ್ರಭುತ್ವವುಳ್ಳ ಚೀನಾದಲ್ಲಿ ವಿವಾಹ ಕಾನೂನು

ಲೇ: ಶಾಯು ಲಿಯಾಂಗ ನ್ಯಾಯಮಂತ್ರಿ

ಬಂಡವಲಗಾರರು, ಜಮೀನದಾರರು ಬಹಳವಾಗಿದ್ದ ಚೀನಾದೇಶದ ಸಮಾಜದಲ್ಲಿ ಮದುವೆ ಒಂದು ವ್ಯಾಪಾರ; ತಂದೆ-ತಾಯಿಗಳೇ ಅದನ್ನು ಮಾಡು ವವರು. ಮನಮೆಚ್ಚಿದ ವಧುವನ್ನಾಗಲಿ, ವರನನ್ನಾಗಲಿ ಆರಿಸುವ ಸ್ವಾತಂತ್ರ್ಯ ಅಲ್ಲಿಯ ಸಮಾಜದಲ್ಲಿರಲಿಲ್ಲ; ಹೀಗಾಗಿ ಎಷ್ಟೋ ಕನ್ಯೆಯರು ತೀರ ಅಪರಿಚಿತನನ್ನು ಅಥವಾ ಮುದುಕನನ್ನು ಮದುವೆಯಾಗುವ ಪ್ರಸಂಗ ಬರುತ್ತಿತ್ತು; ಎಷ್ಟೋ ಸಲ ವರನು ವಧುವಿಗಿಂತ ತೀರ ಚಿಕ್ಕವನಾಗಿರುತ್ತಿದ್ದ. ಆ ವಧುವು ಚಿಕ್ಕವನಿರುವಾಗ ಯಾವದೇ ಹುಡುಗನನ್ನು ಪೋಷಿಸಿದ್ದರೆ, ಅವನ ತಾಯ್ತಂದೆಗಳು ಅವನನ್ನು ಅವಳಿಗೇ ಮದುವೆ ಮಾಡಿಕೊಟ್ಟುಬಿಡುತ್ತಿದ್ದರು; ಇದರಿಂದ ದಾಂಪತ್ಯ ಜೀವನ ಇಬ್ಬರ ದೃಷ್ಟಿಯಿಂದಲೂ ಸುಖಕರವಾಗುತ್ತಿರಲಿಲ್ಲ.

ಬಂಡವಲಶಾಹಿಯಲ್ಲಿ ಪುರುಷನ ಸ್ಥಾನ ಹೆಚ್ಚು. ಸ್ತ್ರೀ ಒಬ್ಬ ದಾಸಿ ಮಾತ್ರ; ಚೀನಾದಲ್ಲಿ ಒಬ್ಬ ಸಿರಿವಂತ ಅನೇಕ ಕನ್ಯೆಯರನ್ನು ಮದುವೆಯಾಗಬಹುದಲ್ಲದೆ ಜೊತೆಗೆ ವೇಶ್ಯೆಯರ ಸಹವಾಸವನ್ನೂ ಮಾಡಬಹುದು. ಆದರೆ ಸ್ತ್ರೀ ಮಾತ್ರ ಜೀವಾವಧಿ ತನಗಾಗಿ ಆರಿಸಿದ ಒಬ್ಬನೊಡನೇ ಇರಬೇಕು. ಅವನ ಮರಣದ ತರುವಾಯವೂ ಬೇರೊಬ್ಬನನ್ನು ಅವಳು ಮದುವೆಯಾಗುವಂತಿಲ್ಲ; ಆದರೆ ಸಮಾಜ ಅವಳನ್ನು ಕೊಲ್ಲದೆ ಬಿಡದು! ಇದಕ್ಕೆ ಒಂದೆರಡು ನಿದರ್ಶನಗಳನ್ನೂ ಹೇಳ ಬಹುದು. ಫಾಯೂಂಗ ಜಿಲ್ಲೆಯಲ್ಲಿ ಮೊನ್ನೆ ಮೊನ್ನಿನವರೆಗೆ ಒಬ್ಬ ಸಿರಿವಂತನಿಗೆ ಎಪ್ಪತ್ತು ಜನ ಹೆಂಡಂದಿರಿದ್ದರು. ಮನೆಯಲ್ಲಿ ಬೀಸುವದು, ಕುಟ್ಟುವದು, ಇತ್ಯಾದಿ ಎಲ್ಲ ದುಡಿಮೆಯೂ ಅವರದೇ ಆಗಿತ್ತು. "ಹಣಕೊಟ್ಟು ಇಷ್ಟೊಂದು ಜನ ದಾಸಿ ಯರನ್ನಿಡುವದಕ್ಕಿಂತ, ಹೆಂಡಂದಿರು ಇರುವದೇ ಹೆಚ್ಚು ಲಾಭದಾಯಕ," ಎಂದು ಅವನು ಪದೇಪದೇ ಹೇಳುತ್ತಿದ್ದ. ಇಂಥ ಉದಾಹರಣೆಗಳು ಇನ್ನೂ ಎಷ್ಟೋ ಇವೆ!

ಭೂಸುಧಾರಣೆಯ ಚಳವಳಿ ಪ್ರಾರಂಭವಾದ ಮೇಲೂ, ಈ ಪದ್ಧತಿ ಸಂಪೂರ್ಣ ಅಳಿಸಿಹೋಗಲಿಲ್ಲ. ಹೊನನ್ ಪ್ರಾಂತದ ಒಬ್ಬ ವಿಧವೆ, ಪತಿಯ ಮರಣದ ನಂತರ ಎಂಟು ವರ್ಷಗಳನ್ನು ಕಳೆದಿದ್ದರೂ, ವಿವಾಹಕ್ಕೆ ಆಸ್ಪದ ದೊರೆ ತಿರಲಿಲ್ಲ. ಆದರೆ ಪ್ರಾಂತ ಮುಕ್ತವಾದೊಡನೆಯೇ ಅವಳ ಆಶೆ ಸಫಲವಾಯಿತು. ಅವಳ ಆಪ್ತೇಷ್ಟರು ಮಾತ್ರ ಇದಕ್ಕೆ ವಿರುದ್ಧವಾಗಿದ್ದರು. 'ಅವಳು ಎಲ್ಲ ರೀತಿ ನೀತಿಗಳನ್ನು ಬಿಟ್ಟವಳು,' ಎಂದು ಒಬ್ಬರೆಂದರು. 'ಕುಲಕ್ಕೆ ಕಲಂಕ,' ಎಂದರು ಇನ್ನೊಬ್ಬರು. ಮತ್ತೊಬ್ಬರು ಅವಳನ್ನು ಆತ್ಮಹತ್ಯೆಗೆ ಪ್ರೇರೇಪಿಸಿದರು. ಅವಳು ಕೊನೆಗೂ ಒಪ್ಪದಿರಲು ಅವಳನ್ನು ತಾವೇ ಕೊಂದರು!

ಆದರೆ ಇಂದಿನ ಚೀನಾದಲ್ಲಿ ಇವುಗಳಿಗೆ ಆಸ್ಪದವಿಲ್ಲ.

ಪ್ರಜಾಪ್ರಭುತ್ವನಿಷ್ಠ ಚೀನಾದಲ್ಲಿ ಮದುವೆಯ ಹೊಸ ಕಾನೂನು ೧೯೫೦ರ ಮೇ ತಿಂಗಳಿನಿಂದಲೇ ಬಳಕೆಯಲ್ಲಿ ಬಂದಿದೆ. ಇದರಿಂದ ಸಾವಿರಾರು ಕೂಲಿಕಾರ ಸ್ತ್ರೀಯರ ಹಿತಸಾಧನೆಯಾಗುವದಲ್ಲದೆ, ಜಮೀನದಾರಿಯ ಅವಶೇಷಗಳೂ ನಷ್ಟ ವಾಗಬಹುದೆಂದು ಆಶಿಸಲಾಗಿದೆ. ಬರುವ ಪೀಳಿಗೆಯ ಭವಿತವ್ಯವನ್ನೇ ಉದ್ದೇಶ ವನ್ನಾಗಿಟ್ಟುಕೊಂಡು ಈ ಕಾಯ್ದೆಯನ್ನು ರಚಿಸಲಾಗಿದೆ. ಜಮೀನದಾರಿ ಪದ್ಧತಿಯ ಸಾಮಾಜಿಕ ತಳಹದಿಯನ್ನೇ ಕಿತ್ತಿಹಾಕಿ ಹೊಸದನ್ನು ರಚಿಸುವತ್ತ ಈ ಕಾಯ್ದೆ ಹೊರಟಿದೆ.

ಈ ಹೊಸ ಕಾನೂನಿನಲ್ಲಿ ವಧೂ-ವರರು ಮನಮೆಚ್ಚಿದ ಸಂಗಾತಿಯನ್ನು ಆರಿಸಬಹುದು. ಅವರಿಬ್ಬರಿಗೂ ಅಷ್ಟೇ ಅಧಿಕಾರವಿದೆ; ಸ್ತ್ರೀಯ ಅಧಿಕಾರದತ್ತ ವಿಶೇಷ ಲಕ್ಷ್ಯ ಕೊಡಲಾಗಿದೆ; ಅಲ್ಲದೆ ಏಕಪತ್ನಿ ಅಥವಾ ಪತಿಯ ನಿರ್ಬಂಧವೂ ಇದೆ. ವಧೂವರರು ಪರಸ್ಪರ ಪ್ರೀತ್ಯಾದರಗಳಿಂದ, ಸಹಕಾರ ಭಾವನೆಯಿಂದ ಕಾರ್ಯ ಮಾಡುತ್ತಿದ್ದು, ಮಕ್ಕಳ ಪಾಲನೆ ಮಾಡುವದರ ಜೊತೆಗೆ ಹೊಸ ಸಮಾಜದ ರಚನೆ ಯನ್ನೂ ಮಾಡುವದಿರತ್ತದೆ.ಇದರಿಂದಲೇ ಆರ್ಥಿಕ,ರಾಜಕೀಯ, ಸಾಂಸ್ಕೃತಿಕ ದೃಷ್ಟಿ ಯಿಂದ ಸಮಾಜದ ಪುನರ್ರಚನೆಯಾಗುವದು.

ಹಳೆಯ ಭಾವನೆಗಳನ್ನು ಸಮಾಜದಿಂದ ಕಿತ್ತಿಹಾಕಿ, ಈ ಹೊಸ ಕಾನೂನಿನ ಬಗ್ಗೆ ಜನತೆಯಲ್ಲಿ ಸರಿಯಾದ ತಿಳುವಳಿಕೆಯನ್ನುಂಟುಮಾಡಲು ಅಧಿಕೃತ ಜನರೂ ನಿಯಮಿಸಲ್ಪಟ್ಟರು; ಲೇಖಗಳು ಪತ್ರಿಕೆಗಳು, ಚಲಚ್ಚಿತ್ರಗಳು, ಗೀತೆಗಳು, ಭಾಷಣ ಗಳು, ಅಲ್ಲಲ್ಲಿ ಉತ್ಸವಗಳು, ಈ ಕಾನೂನನ್ನು ಜನತೆಯಲ್ಲಿ ಸರಿಯಾಗಿ ಬಿತ್ತರಿಸ ತೊಡಗಿದವು. ಒಟ್ಟಿನಲ್ಲಿ ಸಾಮಾನ್ಯ ಜನರನ್ನು ಹೊಸ ಕಾನೂನಿಗೆ ಪರಿಚಿತರನ್ನಾಗಿ ಮಾಡುವದೇ ಇವುಗಳ ಉದ್ದೇಶವಾಗಿತ್ತು.

ಬಳಿಕ ಈ ಕಾಯ್ದೆ ಎಷ್ಟುಮಟ್ಟಿಗೆ ಜನತೆಯಲ್ಲಿ ಪ್ರಸಾರವಾಗುತ್ತದೆ ಎಂದು ಪರೀಕ್ಷಿಸಲು ಪರೀಕ್ಷಕರ ಸಮಿತಿಯೊಂದು ಏರ್ಪಾಡಾಯಿತು; ಪ್ರಚಾರ ಪರೀಕ್ಷೆಗಳ ಕಾರ್ಯ ಜೊತೆಯಾಗಿಯೇ ನಡೆದಿತ್ತು. ಸ್ತ್ರೀಪುರುಷರಿಬ್ಬರಿಗೂ ಸಮಾನ ಅಧಿಕಾರವಿದೆ; ಅವರಿಬ್ಬರೂ ತಮ್ಮ ಮನಬಂದ ಜೊತೆಗಾರ-ಜೊತೆಗಾರ್ತಿ ಯನ್ನಾರಿಸಬಹುದು ಎಂಬ ಮಾತನ್ನು ಜಮೀನದಾರಿಯ ಸಮಾಜರಚನೆಯಲ್ಲಿ ಮನೆ ಮನೆಗೆ ಮುಟ್ಟಿಸುವದು ಸಾಮಾನ್ಯ ಮಾತಲ್ಲ.

ಕಾಯ್ದೆ ಪ್ರಚಾರದಲ್ಲಿ ಬಂದು ಇದೀಗ ಎರಡು ವರುಷಗಳುರುಳಿದವು. ಅದರ ಲಾಭವನ್ನು ಕಂಡ ಸ್ತ್ರೀಯರನೇಕರು ಜಮೀನದಾರಿ ಪದ್ಧತಿಯ ವಿರುದ್ಧ ಬಂಡೆಬ್ಬಿಸುತ್ತಲಿದ್ದಾರೆ. ಮನಮೆಚ್ಚಿದ ಪತಿಯನ್ನು ಆರಿಸುವ ಸ್ವಾತಂತ್ರ್ಯದಿಂದ ಅವರಿಗೆ ತುಂಬ ಸಂತೋಷವಾಗಿದೆ. ಪ್ರಸಿದ್ಧವಾದ ನಾಲ್ಕು ಜಿಲ್ಲೆಗಳನ್ನೇ ತೆಗೆದು ಕೊಂಡು ಲೆಕ್ಕಹಾಕಿದರೆ, ವಿವಾಹ ವಿಚ್ಛೇದನೆಗಾಗಿ ಬಂದ ಅರ್ಜಿಗಳ ಸಂಖ್ಯೆ ಹಿಂದೆ

ಇರುತ್ತಿದ್ದ ಸಂಖ್ಯೆಯ ಇಮ್ಮಡಿಯಾಗಿದೆ ಇವುಗಳಲ್ಲಿ ನೂರಕ್ಕೆ ೭೦-೦ ಸ್ತ್ರೀಯರು ಕಳಿಸಿದ ಅರ್ಜಿಗಳೇ ! ವಿವಾಹ ವಿಚ್ಛೇದನೆಯ ಬೇಡಿಕೆಗೆ ಕಾರಣಗಳೆಂದರೆ ವಧುವಿನ ಮಾರಾಟ, ವರನ ಪಾಶವೀ ಪ್ರವೃತ್ತಿ,ಅಥವಾ ಬಹುಪತ್ನೀಕತ್ವ ಇವೇ ಆಗಿವೆ. ವಿಚ್ಛೇದನೆಯ ಸಮ್ಮತಿ ದೊರೆತರೆ ಅವರ ಜೀವನ ಸುಖಮಯವಾಗುವದೆಂಬಲ್ಲಿ ಸಂಶಯವೇ ಇಲ್ಲ. ಒಂದು ಉದಾರಹರಣೆ ಹೇಳುವದಾದರೆ ಚೆಉ. ಸಿಯೋಲಿನಿ ಎಂಬವಳು 'ಶಾಂಸಿ' ಜಿಲ್ಹೆಯ ಯುವತಿ; ಬಾಲಿಕೆಯಿರುವಾಗಲೇ ಅವಳ ವಿವಾಹವಾಗಿತ್ತು. ಆದರೆ ಪತಿಯ ತೊಂದರೆಯನ್ನು ಸಹಿಸುವದು ದೊಡ್ಡವಳಾದ ಮೇಲೆ ತುಂಬ ಕಷ್ಟವಾಗಿ,ಈ ಕಾಯ್ದೆ ಬಂದೊಡನೆಯೇ ವಿವಾಹ ವಿಚ್ಛೇದನೆಗೆ ಅರ್ಜಿ ಹಾಕಿದಳು. ಅವಳಿಗೆ ಸಮ್ಮತಿ ದೊರೆತಿತು; ಅವಳೀಗ ತನ್ನ ಮೆಚ್ಚಿಕೆಯ ಯುವಕನನ್ನು ವರಿಸಿ ಸುಖವಾಗಿದ್ದಾಳೆ. ತಾನೂ ಅವನೊಡನೆ ಮನಸ್ಸಿನಿಂದ ದುಡಿಯುವದಲ್ಲದೆ ಸಮಾಜದ ಅನೇಕ ಬಡ ಹೆಣ್ಣುಮಕ್ಕಳಿಗೂ ಅವಳು ಸಹಾಯ ಮಾಡುತ್ತಾಳೆ.

ಅಂತೂ ಹೊಸ ಕಾನೂನು ಸಮಾಜದಲ್ಲಿ ಒಂದು ಬಗೆಯ ಉತ್ಸಾಹವನ್ನು ಬಿತ್ತಿದೆ. "ಒಂದು ಜೊತೆ ದುಃಖದಲ್ಲಿ ಕಾಲ ನೂಕುವದಕ್ಕಿಂತ, ಎರಡು ಜೊತೆ ಸುಖವಾಗಿರಬಹುದಲ್ಲ," ಎಂಬ ಮಾತು ಮನೆ ಮನೆಯ ಮಾತಾಗಿದೆ.

ವಿವಾಹ ವಿಚ್ಛೇದನೆಯ ಸಂಖ್ಯೆ ಹೆಚ್ಚಾದಂತೆ, ಸ್ವಾತಂತ್ರ್ಯದಿಂದ ಜರುಗುವ ಮದುವೆಗಳ ಸಂಖ್ಯೆಯೂ ಹೆಚ್ಚಾಗಿದೆ; ಇವುಗಳ ಸರಾಸರಿ ಅಳತೆನೋಡಿದರೆ ಈ ಮದುವೆಗಳಲ್ಲಿ ವಧೂವರರು ತಾವೇ ಆರಿಸಿದವರೊಡನೆಯೇ ಆದವುಗಳು ಹೆಚ್ಚು. ಈ ಮದುವೆಗಳಲ್ಲಿ, ಧನ, ಕುಲಕ್ಕಿಂತ ವಿಚಾರದ ಪ್ರಗತಿ, ಕಾರ್ಯಕ್ಷಮತೆ ದಕ್ಷತೆ ಇವುಗಳಿಗೇ ಹೆಚ್ಚು ಮಹತ್ವವನ್ನು ಕೊಡಲಾಗುತ್ತದೆ. ತಂದೆ ತಾಯಿಗಳ ವಿರೋಧ ಲೆಕ್ಕಿಸದೆಯೂ ಅನೇಕ ಕನ್ಯೆಯರು ಈ ರೀತಿಯಾಗಿ ವಿವಾಹವನ್ನು ಮಾಡಿಕೊಂಡ ಉದಾಹರಣೆಗಳಿವೆ. ಹೊಸ ಕಾಯ್ದೆಯಿಂದ ಕುಟುಂಬದಲ್ಲಿ ಸುಖಸಮಾಧಾನ ಒಕ್ಕಟ್ಟು, ಸತತೋದ್ಯೋಗಗಳು ನೆಲೆಯೂರಿವೆ. ಸಮಾಜದ ಹೊಸರಚನೆ ಹೊಸ ಘಟನೆಗಳಿಂದ ಆಗುತ್ತಿದೆ.

ಜಮೀನದಾರಿ ಸಮಾಜರಚನೆಯನ್ನೂ ವಿವಾಹಪದ್ಧತಿಯನ್ನೂ ಸಮೂಲವಾಗಿ ಒಮ್ಮೆಲೆ ನಷ್ಟಗೊಳಿಸುವದು ಸಾಧ್ಯವಿಲ್ಲವೇನೋ ನಿಜ; ಆದರೆ ಕ್ರಮೇಣವಾಗಿಯೇ ಆಗಲಿ, ನಾವು ಮಾಡಬೇಕಾದ ವಿಧಾಯಕ ರಾಜಕೀಯ ಕಾರ್ಯಗಳಲ್ಲಿ ಇದೊಂದು ಮಹತ್ವವಾದದ್ದು.



# ಸಾದರ ಸ್ವೀಕಾರ

**ಪ್ರಗತಿ:—** ಪ್ರಗತಿಪರ ಮಾಸಪತ್ರಿಕೆ, ಸಂಪಾದಕರು:—ಬೆಳೂರ ಮಲ್ಲಪ್ಪ. (ಸೋಮವಾರಪೇಠೆ ಉತ್ತರ ಕೊಡಗು) ವಾರ್ಷಿಕ ಚಂದಾ

**ವಿಶ್ವಬಂಧು:—** ಮಾಸಪತ್ರಿಕೆ. ಚಂದಾ ವಾರ್ಷಿಕ ೪ ರೂ.
ಸಂಪಾದಕರು:— ಡೋಣಿಗಾಲ್ ನಂಜಪ್ಪ, ಸಕಲೇಶಪುರ,
ಹಾಸನ ಡಿಸ್ಟ್ರಿಕ್ಟ ಮೈಸೂರ.

**ವ್ಯಾಕರಣ ವಿವಿಧ ಸಾಹಿತ್ಯಮಾಲೆ:—** ಭಾಗ ೪, ೫, ೬.
ಬರೆದವರು:— ಪಂಡಿತ ಜೆ. ಎ. ಕವಲಿ. ಬೆಲೆ: ಕ್ರಮವಾಗಿ ೧-೦-೦
೧-೪-೦ ಮತ್ತು ೨-೦-೦

**ಶಕುಂತಲಾ:—** ಸಾಮಾಜಿಕ ಕಾದಂಬರಿ. ಮೂಲ ಲೇಖಕರು:— ಪ್ರೊ. ನಾ. ಸಿ. ಫಡಕೆ, ಎಂ. ಎ. ಅನುವಾದಕರು: ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ. ಬೆಲೆ: ೨-೧೨-೦.

**ಗರತಿ:—** ಲೇಖಕರು: ಆತ್ಮರಾಮ. ಬೆಲೆ: ೨-೪-೦.

**ಭಾರತದಲ್ಲಿ ಪ್ರಜಾಪ್ರಭುತ್ವ:—** ಲೇ: ಶ್ರೀ. ನೆಗಳೂರ ರಂಗನಾಥರು. ಎಂ.ಎ. ಸಂಪಾದಕರು:— ಶ್ರೀ. ಶಿವಾನಂದರು. ಬೆಲೆ: ೦-೪-೦

**ಅಂಕುಶ:—** ವಾರಪತ್ರಿಕೆ. ವಾರ್ಷಿಕ ವರ್ಗಣಿ ೬ ರೂ.
ಸಂಪಾದಕರು:— ಗ. ಶಿ. ಹುರಳಿ, ಧಾರವಾಡ.



**ಮನೆಯಲ್ಲಿ ಹೊಲಿಗೆ:— ಪುಟ ೧೧೮ ಬೆಲೆ :— ೧-೮-೦**

**ಲೇ:— ಶ್ರೀ ಹಳಪೇಟ ಚಿಂತಾಮಣಿಯರು; ಶ್ರೀ ಹಳಪೇಟ ಸುಶೀಲಾದೇವಿ.**

ಪ್ರಕಾಶಕರು:— **ಕರ್ನಾಟಕ ಟೇಲರಿಂಗ ಕಾಲೇಜ. ಧಾರವಾಡ.**

ಹೊಲಿಗೆಯ ಕಲೆಯನ್ನು ಅರಿತುಕೊಳ್ಳುವ ಆಶೆ ಪ್ರತಿಯೊಬ್ಬ ಭಗಿನಿಗೂ ಇದ್ದೇ ಇರುತ್ತದೆ. ಆ ದೃಷ್ಟಿಯಿಂದ ಹೊಲಿಗೆಯ ಕಲೆಯ ಪ್ರಾಥಮಿಕ ಜ್ಞಾನವಾದರೂ ಅವರಿಗೆ ಅವಶ್ಯವಾಗಿ ಬೇಕು. ಈ ಒಂದು ಕೊರತೆಯನ್ನು ಹೋಗಲಾಡಿಸಲು ಧಾರವಾಡದ ಕರ್ನಾಟಕ ಟೇಲರಿಂಗ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಹಳಪೇಟ ಚಿಂತಾಮಣಿರಾಯರು ಮತ್ತು ಅವರ ಪತ್ನಿ ಶ್ರೀಮತಿ ಸುಶೀಲಾದೇವಿಯವರು ಪ್ರಯತ್ನಮಾಡಿ ಯಶಸ್ಸನ್ನು ಪಡೆದಿದ್ದಾರೆ; ಅವರ ಪ್ರಯತ್ನದ ಫಲವೇ, "ಮನೆಯಲ್ಲಿ ಹೊಲಿಗೆ." ಕನ್ನಡ ಸಾಹಿತ್ಯದ ಸಿರಿಯನ್ನು ಬೆಳಗಿಸುವದರಲ್ಲಿ ಅದೂ ತನ್ನ ನೆರವನ್ನು ನೀಡಿದೆ.

ಹೊಲಿಗೆಯ ಕಲೆಯಲ್ಲಿ, ಬಟ್ಟೆ ಕತ್ತರಿಸುವ ವಿಧಾನ ಬಹು ಮಹತ್ವದ್ದು; ಅದಕ್ಕೆ ಬೇಕಾಗುವ ಆಕೃತಿಗಳನ್ನು ಭಿನ್ನ ಭಿನ್ನ ಪದ್ಧತಿಗಳಿಂದ ಹಾಕಬಹುದು; ಆದರೆ ಯಾವ ಪದ್ಧತಿಯನ್ನೇ ಸ್ವಿಕರಿಸಿದರೂ ಕೂಡ, ಹೊಲಿಗೆಯ ಕಲೆಯ ಕೆಲವೊಂದು ಅವಶ್ಯಕ ತತ್ವಗಳನ್ನು ಮೊದಲು ತಿಳಿದುಕೊಳ್ಳಲೇ ಬೇಕು; "ಮನೆಯಲ್ಲಿ ಹೊಲಿಗೆ,'' ಈ ತತ್ವಗಳನ್ನು ಸ್ಪಷ್ಟವಾಗಿ ವಿಶದಪಡಿಸುತ್ತದೆ.

ಕೈಹೊಲಿಗೆಯಲ್ಲಿ ಎಳೆ, ದುಂಡು, ಟಿಬ್ಬಿ, ಅಳತೆಯನ್ನು ತೆಗೆದುಕೊಳ್ಳುವ, ಆಕೃತಿಗಳನ್ನು ತೆಗೆಯುವ ರೀತಿಗಳು, ಹೊಲಿಗೆ ಯಂತ್ರದ ಪರಿಚಯ, ವುಲನ್ ಹೆಣಿಕೆಯ ಬೇರೆ ಬೇರೆ ರೀತಿಗಳು ಪ್ರಮಾಣಬದ್ಧ ಬಟ್ಟೆಗಳನ್ನು ಹೆಣೆಯುವ ರೀತಿ— ಇತ್ಯಾದಿ ವಿಷಯಗಳೆಲ್ಲ ತಿಳಿಯಾದ ಭಾಷೆಯಲ್ಲಿ ಪುಸ್ತಕದಲ್ಲಿ ಬಂದಿವೆ.

ಶ್ರೀಹಳಪೇಟಿಯವರು ಕರ್ನಾಟಕ ಟೇಲರಿಂಗ ಕಾಲೇಜಿನಲ್ಲಿ ಪ್ರಿನ್ಸಿಪಾಲರಿದ್ದ ಮೂಲಕ, ಕಲಿಸುವಾಗ ಬರುವ ತೊಂದರೆಗಳೇನು ಅವುಗಳನ್ನು ದೂರಮಾಡುವ ಬಗೆ ಹೇಗೆ ಎಂಬುದರ ಪರಿಚಯ ಅವರಿಗಿದೆ; ತಮ್ಮ ಈ ಪ್ರತ್ಯಕ್ಷ ಅನುಭವದ ಲಾಭವನ್ನು ಈ ಪುಸ್ತಕದ ಮೂಲಕ ಅವರ ಭಗಿನಿಯರಿಗೆ ಮಾಡಿಕೊಟ್ಟದ್ದಾರೆ.

**ನಾ. ರಾ. ಬುಲಬುಲೆ**ಫರ್ಸ್ಟ್‌ಕ್ಲಾಸ ಸಿ. ಟಿ ಸಿ. (ಮುಂಬಯಿ)

ಡಿ. ಎಮ್. ಟಿ.ಸಿ. ಎ. (ಲಂಡನ್)

ವೀರ ಸಾಧ್ವೀ ಶಿರೋಮಣಿ

# ಶ್ರೀ ತಿಮ್ಮಮ್ಮನವರ ಚರಿತ್ರೆಯು

ಲೇಖಕ:— ಶ್ರೀ ನಾರಾಯಣ ಶ್ರೀ ರಾಜಪುರೋಹಿತ.

ಇತಿಹಾಸ ಸಂಶೋಧಕರು, ಧಾರವಾಡ.

ತುರಡಗಿ ಗ್ರಾಮದ ತಪೋಧನರಾದ ಜ್ಯೋತಿಷಿ ಶ್ರೀ ನರಸಿಂಹಾಚಾರ್ಯರು ಹಾಗೂ ಅವರ ಧರ್ಮಪತ್ನಿಯರಾದ ಶ್ರೀಮತಿ ಚಂದ್ರಲಾದೇವಿಯರು ಪರಮಪಾವನ ಚರಿತೆಯುಳ್ಳವರು ಇಂಥ ಸತ್ವಶಾಲಿಗಳಾದ ದಂಪತಿಗಳ ಮಗಳೇ ಸಾಧ್ವಿಮಣಿ ಶ್ರೀ. ತಿಮ್ಮಮ್ಮನವರು. ಶ್ರೀ. ತಿಮ್ಮಮ್ಮನವರ ತಾಯ್ತಂದೆಯರು ತಮ್ಮ ಮಗಳ ವಿವಾಹವನ್ನು ಪ್ರಾಚೀನ ಸಂಪ್ರದಾಯದ ಪ್ರಕಾರ ಅವಳ ಎಂಟನೆಯ ವರ್ಷದಲ್ಲಿಯೇ ಮಾಡಬೇಕೆಂದು ಮುದ್ದಲಗುಂದಿ ಗ್ರಾಮವಾಸಿಗಳಾದ ಶ್ರೀ ವೆಂಕಟ ನರಸಿಂಹ ನಾಯಕ ಚಿನಿವಾಲ ಇವರ ಪುತ್ರರಾದ ಚಿ|| ಅಶ್ವತ್ಥ ಎಂಬವರನ್ನು ವರನನ್ನಾಗಿ ನಿಶ್ಚಯಿಸಿದರು.

* * * * * *

ಹಿಂದಿನ ಜೂನ, ಜುಲೈ, ಅಗಸ್ಟ ತಿಂಗಳುಗಳ ಸಂಚಿಕೆಗಳಲ್ಲಿನ 'ನ್ಯಾಯಕ್ಕೆ ಗಲ್ಲು' ಎಂಬ ನಾಟಕದ ಕಥಾಸಾರಾಂಶವನ್ನಾದರೂ ಇಲ್ಲೇಕೊಡಲಾಗಿದೆ.

## 'ನ್ಯಾಯಕ್ಕೆ ಗಲ್ಲು'

ಲೇ :—ಶ್ರೀ. ಎಂ. ಸತ್ಯವಂತರಾವ, ಬಿ. ಎಸ್. ಸಿ.ಬಿ. ಎಲ್. ವಕೀಲ,ಬಳ್ಳಾರಿ.

ಸಮಶೀಲನು ಸಮತಾವಾದದ ವಿಚಾರಗಳಿಂದ ಕೂಡಿದ ಯುವಕ! ಸುತ್ತಲಿನ ದಾರಿದ್ರ್ಯ ಐಶ್ವರ್ಯಗಳ ಏರಿಳಿತಗಳನ್ನೂ ಅವುಗಳ ದುಷ್ಪರಿಣಾಮಗಳನ್ನೂ ಕಂಡು ಅವನು ತಳಮಳಿಸುವನು. ನಾಟಕದಲ್ಲಿ ಬರುವ ಭಾಗ್ಯವತಿಯೂ ಪದವೀಧರೆ. ಅವಳ ಮುಂದೊಂದು ಸಮಸ್ಯೆ! ತನ್ನ ಜೀವನದಲ್ಲಿ ನಿಜವಾದ ಪಾಲುಗಾರನಾಗಬಲ್ಲ ಸಮಶೀಲನನ್ನು ವರಿಸುವದೋ ಅಥವಾ ಬಾಹ್ಯಕೊರತೆಗಳನ್ನೆಲ್ಲ ಪೂರೈಸಿ, ಐಶ್ವರ್ಯದಲ್ಲಿ ತೇಲಿಸಬಲ್ಲ ರತಿಲಾಲ ಶೇಠರನ್ನು ಮದುವೆಯಾಗುವದೋ! ಭೀಮಪ್ಪನು, ಬಡತನದ ಬೇಗೆ ತಾಳಲು ಹೆಂಡದ ಚಟಹಚ್ಚಿಕೊಂಡ ಬಡಕೂಲಿಕಾರ. ಅವನ ಹೆಂಡತಿಯೇ ರಾಮಕ್ಕ. ಹೆಂಡಕುಡಿದು ಹೆಂಡತಿಯನ್ನು ಹೊಡೆಯುತ್ತಿರುವಾಗ, ಬುದ್ಧಿಹೇಳಬಂದ ಡಾಕ್ಟರನಿಗೆ ತನಗೆ ಬಡತನದಿಂದ ಕುಡುಕತನ ಬಂದಿದೆ ಎಂಬದನ್ನು ಸ್ಪಷ್ಟವಾಗಿ ಹೇಳಿದ್ದಾನೆ.

ಮಾಡಲಾರಂಭಿಸಿದವು ! ಹೀಗೆ ಒಳ್ಳೆಯ ಉತ್ಸವದಿಂದ ಮೆರವಣಿಗೆಯು ಹೊರಟು ಊರೊಳಗೆ ಪ್ರವೇಶಿಸಿ, ಅಲ್ಲಲ್ಲಿಗೆ ಮಜಲು ಮಾಡುತ್ತ ಬೀಗರ ಸಲುವಾಗಿ ಮೊದಲೇ ಏರ್ಪಡಿಸಿ ಶೃಂಗರಿಸಲ್ಪಟ್ಟ ಮನೆಯ ಎದುರಿಗೆ ಬಂದು ನಿಂತಿತು. ಆಗ ವರನು ಕುದುರೆಯ ಮೇಲಿನಿಂದ ಕೆಳಗೆ ಇಳಿಯಲು, ಸುವಾಸಿನಿ ಸ್ತ್ರೀಯರು ಆತನಿಗೆ ಕದಲಾರತಿಯನ್ನು ಮಾಡಿದರು. ಇಷ್ಟಾದ ಬಳಿಕ ವರನ ಸಹಿತ ಎಲ್ಲ ಬೀಗರೂ ಆ ಮನೆಯಲ್ಲಿ ಇಳಿದುಕೊಂಡರು.

ವಿವಾಹದ ಮುನ್ನಾದಿವಸ ಎಂದರೆ ದೇವರೂಟದ ದಿವಸ ವರಪಕ್ಷದವರೂ ವಧೂಪಕ್ಷದವರೂ ಪುಣ್ಯಾಹವಾಚನ, ಗ್ರಹಯಜ್ಞ, ನಾಂದೀಸ್ಥಾಪನೆ ಮೊದಲಾದ ವಿಧಿಗಳನ್ನು ಮಾಡಿ,–ದೇವ,–ಗ್ರಹ,–ಪಿತೃಗಳನ್ನು ಸಂತುಷ್ಟಪಡಿಸಿದರು. ಮರುದಿವಸ ಎಂದರೆ ವಿವಾಹದ ದಿವಸ ವಧುಪಕ್ಷದವರು ಲಗ್ನ ಸಮಾರಂಭದ ಎಲ್ಲ ಸಿದ್ಧತೆಯನ್ನು ಮಾಡಿ, ವರನನ್ನು ಕರೆದುಕೊಂಡು ಬರುವುದಕ್ಕಾಗಿ ಬಹು ವಿಜೃಂಭಣೆಯಿಂದ 'ರುಖವತ' ತೆಗೆದುಕೊಂಡು ಹೊರಟರು. ವರನ ಮನೆಗೆ ಬಂದಬಳಿಕ ಕನ್ಯೆಯ ಮಾತಾಪಿತೃಗಳು ಆ ವರನನ್ನು ಪೂಜಿಸಿದರು. ಹಾಗೂ ಆ ಮದುಮಗ, ವರಮಾತಾ ಮೊದಲಾದವರಿಗೆಲ್ಲ ಭೂಮಾಹಾಕಿ 'ರುಖವತ' ಬಡಿಸಿದರು. ಈ ಕಾರ್ಯವೆಲ್ಲ ನೆರವೇರಿದ ಕೂಡಲೆ ವರನು ವಸ್ತ್ರಪ್ರಾವರಣಗಳಿಂದ ಭೂಷಿತನಾಗಿ ಕುದುರೆಯನ್ನೇರಿ, ಕನ್ಯಾಮಂದಿರವನ್ನು ಕುರಿತು ಪ್ರಯಾಣ ಮಾಡಲು ಸಿದ್ಧನಾದನು. ಈ ಪ್ರಕಾರ ವರಪ್ರಸ್ಥಾನವು ನಡೆಯಲು, ಅದರ ಸಂಗಡ ಮಂಗಲವಾದ್ಯಗಳೊಡನೆ ಎಲ್ಲರೂ ಉತ್ಸಾಹದಿಂದ ಹೊರಟು, ಕನ್ಯಾಮಂದಿರಕ್ಕೆ ಬಂದರು. ತದನಂತರ ಪ್ರಥಮತಃ ವಾಙ್ನಿಶ್ಚಯ (ವಾಕ್+ನಿಶ್ಚಯ) ಆದಬಳಿಕ ಕನ್ಯೆಯ ತಂದೆಯುವರಾದ ನರಸಿಂಹಾಚಾರ್ಯರು ವರನಿಗೆ ಮಧುಪರ್ಕ ಪೂಜೆಯನ್ನು ಮಾಡಿದರು. ಆ ತರುವಾಯ ಲಗ್ನಕ್ಕೆ ಆರಂಭವಾಯಿತು. ಆಗ ಲಕ್ಷ್ಮೀನಾರಾಯಣರಂತೆ ಶೋಭಿಸುತ್ತಿರುವ ಆ ವಧೂವರರನ್ನು ಇದಿರು-ಬದರು ನಿಲ್ಲಿಸಿ, ನಡುವೆ ಅಂತಃಪಟವನ್ನು ಹಿಡಿದು, ಪುರೋಹಿತರು ಮಂಗಲಾಷ್ಟಕಗಳನ್ನು ಅನ್ನಲಾರಂಭಿಸಿದರು. ಮುಹೂರ್ತವು ತಪ್ಪಬಾರದೆಂದು ಪ್ರತಿಯೊಂದು ಮಂಗಲಾಷ್ಟಕದ ಕೊನೆಗೆ "ಸುಮುಹೂರ್ತ! ಸಾವಧಾನ!" (ಎಂದರೆ ಮುಹೂರ್ತವು ಸಮೀಪ ಸಮೀಪಕ್ಕೆ ಬರಲಾರಂಭಿಸಿತು. ಎಲ್ಲರೂ ಎಚ್ಚರಿಕೆಯಿಂದ ಇರತಕ್ಕದ್ದು) ಎಂದು ಜಾಗೃತಿದಾಯಕ ಸೂಚನೆಯನ್ನು ಮಾಡುತ್ತಿದ್ದರು. ಮುಹೂರ್ತವು ಬಂದೊದಗಿದಾಕ್ಷಣವೇ ಪುರೋಹಿತರು ಮಂಗಲಾಷ್ಟಕಗಳನ್ನು ಮುಗಿಸಿ,

"ತದೇವ ಲಗ್ನಂ ಸುದಿನಂ ತದೇವ ।
ತಾರಾಬಲಂ ಚಂದ್ರಬಲಂ ತದೇವ ॥
ವಿದ್ಯಾಬಲಂ ದೈವಬಲಂ ತದೇವ ।
ಲಕ್ಷ್ಮೀಪತೇ ಕೇಽಂಘ್ರಿಯುಗಂ ಸ್ಮರಾಮಿ ॥

ಎಂಬ ಶ್ಲೋಕವನ್ನು ಅನ್ನುತ್ತ ಘಂಟಾನಾದವನ್ನು ಮಾಡುತ್ತಿರಲು, ಮಂಗಲವಾದ್ಯಗಳು ಧ್ವನಿಗೈಯುತ್ತಿರಲು, ಆ ವಧೂವರರು ಪ್ರೇಮಭಾವದಿಂದ ಒಬ್ಬರ ಮೇಲೊಬ್ಬರು ಅಕ್ಷತೆಗಳನ್ನು ಒಗೆದರು. ಹಾಗೂ ತತ್ಸಮಯದಲ್ಲಿಯೇ ವಿಪ್ರಶ್ರೇಷ್ಠರೂ ಆಪ್ತರೂ ಇಷ್ಟರೂ ಮೊದಲಾದ ಸರ್ವ ಜನರೂ ಆ ವಧೂವರರ ಮೇಲೆ ಅಕ್ಷತೆಗಳನ್ನು ಒಗೆದು ಆಶೀರ್ವದಿಸಿದರು. ಇಷ್ಟಾದ ಬಳಿಕ ನರಸಿಂಹಾ ಚಾರ್ಯರು ಮತ್ತು ವೆಂಕಟನರಸಿಂಹನಾಯಕರು ಈ ಉಭಯತರೂ ಈ ಸಮಾ ರಂಭಕ್ಕೆ ಆಗಮಿಸಿದ್ದ ಜನಸಮುದಾಯವನ್ನು ತಾಂಬೂಲ, ಸುಗಂಧದ್ರವ್ಯ, ಪುಷ್ಪ, ಮೊದಲಾದವುಗಳಿಂದ ಸತ್ಕರಿಸಿದರು. ತದನಂತರ ಅಲ್ಲಿ ಕನ್ಯಾದಾನ, ಕನ್ಯಾ ಪ್ರತಿಗ್ರಹ, ಕಂಕಣಬಂಧನ, ಮಂಗಲಸೂತ್ರಬಂಧನ, ಲಾಜಾಹೋಮ, ಸಪ ಪದಿ ಮೊದಲಾದ ಕಾರ್ಯಗಳು ಯಥಾವಿಧಿಯಾಗಿ ಕ್ರಮದಿಂದ ಸಾಗಿ, ವಿವಾಹ- ಮಹೋತ್ಸವವು ಸಂತೋಷದಿಂದಲೂ ವೈಭವದಿಂದಲೂ ನೆರವೇರಿತು. ಈ ಉತ್ಸವ ದಲ್ಲಿ ಬ್ರಾಹ್ಮಣರು ಸುಗ್ರಾಸಭೋಜನದಿಂದಲೂ ದಕ್ಷಿಣೆಗಳಿಂದಲೂ ಬಹು ತೃಪ್ತ ರಾಗಿ ಉಭಯವಂಶಕ್ಕೂ ಅಭಿವೃದ್ಧಿಯುಂಟಾಗಲಿ, ಎಂದು ಹರಸಿದರು.

ಈ ಪ್ರಕಾರ ಲಗ್ನಕಾರ್ಯವೆಲ್ಲ ಉತ್ತಮ ರೀತಿಯಿಂದ ನೆರವೇರಿತು. ಕಳೂಟವಾದ ಬಳಿಕ ವೆಂಕಟ ನರಸಿಂಹ ನಾಯಕರು ಸೊಸೆಯನ್ನು ಕರೆದುಕೊಂಡು ಸಹಕುಟುಂಬ, ಸಹಪರಿವಾರ ಹೊರಡಲು ಸಿದ್ಧರಾದರು. ಆಗ್ಗೆ ನರಸಿಂಹಾಚಾ ರ್ಯರು ಬಂದು, "ವೆಂಕಟ ನರಸಿಂಹ ನಾಯಕರೇ, ನಮಗೆ ಈ ತಿಮ್ಮಮ್ಮನು ಒಬ್ಬಳೇ ಹೆಣ್ಣುಮಗಳಾದ್ದರಿಂದ ಈಕೆಯನ್ನು ಈವೊತ್ತಿನ ತನಕ ಬಹು ಮಮತೆ ಯಿಂದ ಸಂರಕ್ಷಿಸಿದ್ದೇವೆ; ಈಕಗೆ ಮನೆಯ ಯಾವ ದೊಡ್ಡ ಕೆಲಸಗಳನ್ನೂ ಮಾಡಲು ಹಚ್ಚಿರುವುದಿಲ್ಲ. ಅರ್ಥಾತ್ ಗೃಹಕೃತ್ಯಗಳನ್ನೇನೂ ಅರಿಯಳು. ಇಷ್ಟಕ್ಕೂ ಈಕೆಯು ಬಹುಕೋಮಲ ಸ್ವಭಾವದ ಹುಡಿಗೆಯು. ಆದ್ದರಿಂದ ಈಕೆಯ ಕೈಯಿಂದ ಒಳ್ಳೆಯ ಮಾತುಗಳಿಗಿಂತಲೂ, ಕಾರ್ಯಕ್ಷಮತೆಯಿಂದಲೂ ಕೆಲಸಮಾಡಿಸಿಕೊಳ್ಳ ಬೇಕು." ಎಂದು ಹೇಳಿಕೊಂಡರು. ಆ ಬಳಿಕ ತನ್ನ ಮಗಳನ್ನು ಕರೆದು "ತಿಮ್ಮಮ್ಮಾ, ನೀನು ಈಗ ಕನ್ಯಾವಸ್ಥೆಯನ್ನು ದಾಟಿ, 'ಗೃಹಿಣಿ' ಎಂಬ ನೂತನ ವಾದ ದಶೆಯನ್ನು ಹೊಂದಿರುತ್ತೀ. ಆದುದರಿಂದ ಇನ್ನುಮೇಲೆ ಬಾಲಲೀಲೆಗಳನ್ನು ಬಿಟ್ಟು, ಸುಶೀಲ ಗೃಹಿಣಿಗೆ ಶೋಭಿಸುವಂತೆ ಗೃಹಕೃತ್ಯದಲ್ಲಿ ಬುದ್ಧಿವಂತಳಾಗಿರು. ಅತ್ತೆ, ಮಾವಂದಿರು ಹೇಳಿದಂತೆ ಕೇಳಿಕೊಂಡು,ಬಹುವಿನಯದಿಂದಲೂ ಮರ್ಯಾದೆ ಯಿಂದಲೂ ಆಚರಿಸು. ಪತಿಯೇ ದೇವರೆಂಬುವುದನ್ನು ಲಕ್ಷ್ಯದಲ್ಲಿಟ್ಟು, ಪತಿಸೇವೆ ಯಲ್ಲಿಯೂ, ಅತಿಥಿ, ಅಭ್ಯಾಗತರನ್ನು ಸತ್ಕರಿಸುವುದರಲ್ಲಿಯೂ ಯಾವಾಗಲೂ ಆಸಕ್ತಳಾಗಿರು." ಎಂದು ಉಪದೇಶಮಾಡಿದರು. ತಂದೆಯು ಹೇಳಿದ ಈ ಸದ್ಬೋಧವನ್ನು ತಿಮ್ಮಮ್ಮನು ಭಕ್ತಿಪುರಸ್ಸರವಾಗಿ ತನ್ನ ಹೃದಯದಲ್ಲಿಟ್ಟುಕೊಂಡು, ಪ್ರೇಮದಿಂದ ಹಾಗೂ ಸದ್ಗದಿತ ಅಂತಃಕರಣದಿಂದ ತಾಯಿ-ತಂದೆಗಳಿಗೆ ನಮಸ್ಕರಿಸಿ,

ಅತ್ತೆಯ ಮನೆಗೆ ಹೊರಟಳು. ಆಗ ಅಳಿಯನಾದ ಅಶ್ವತ್ಥರಾಯನು ತನ್ನ ಅತ್ತೆ ಮಾವಂದಿರಿಗೆ ನಮಸ್ಕರಿಸಿ, ಪತ್ನಿಸಹವರ್ತಮಾನ ತಾಯಿ-ತಂದೆ, ಬಂಧುಬಳಗದವರೊಡನೆ ತುರಡಗಿ ಗ್ರಾಮದಿಂದ ಹೊರಟು, ಮುದ್ದಲಗುಂದಿ ಗ್ರಾಮಕ್ಕೆ ಬಂದು ತಲುಪಿದನು. ಆ ಕ್ಷಣವೇ ಮುದ್ದಲಗುಂದಿ ಗ್ರಾಮದ ಸಮಸ್ತ ಮಹಾಜನರಾದ ಸದ್ಗೃಹಸ್ಥರೂ, ಸದ್ಗೃಹಿಣಿಯರೂ ವೆಂಕಟನರಸಿಂಹ ನಾಯಕರ ಸೊಸೆಯಾದ ಈ ಕುಂಕುಮ ಸೌಭಾಗ್ಯವತಿ ತಿಮ್ಮಮ್ಮನನ್ನು ನೋಡುವುದಕ್ಕೆಂದು ಕುತೂಹಲದಿಂದ ಬಂದು ನೆರೆದರು. ಇಷ್ಟು ಮಾತ್ರವೇ ಅಲ್ಲ ಈ ನೂತನ ಪತಿ-ಪತ್ನಿಯರನ್ನು ಹಸೆಯ ಮೇಲೆ ಕುಳ್ಳಿರಿಸಿ, ಸುವಾಸಿನಿ ಸ್ತ್ರೀಯರು ಆರತಿಯನ್ನು ಮಾಡಿ ಆಶೀರ್ವದಿಸಿದರು. ಮತ್ತು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಈ ದಂಪತಿಗೆ ಉಡುಗೊರೆಗಳನ್ನೂ ಕೊಟ್ಟರು.

ಸೌ॥ ತಿಮ್ಮಮ್ಮನು ೮ ವರ್ಷದ ವಯಸ್ಸಿನ ಚಿಕ್ಕ ಹೆಣ್ಣುಮಗಳಾಗಿದ್ದರೂ ಕೂಡ ತವರು ಮನೆಯಲ್ಲಿ ಉತ್ತಮವಾದ ಗೃಹಶಿಕ್ಷಣವನ್ನು ಪಡೆದು ಸುಸಂಸ್ಕೃತವಾದ ಹೃದಯವುಳ್ಳವಳಾಗಿದ್ದುದರಿಂದ ಪತಿಸೇವೆಯನ್ನೂ ಅತ್ತೆ ಮಾವಂದಿರ ಸೇವೆಯನ್ನೂ ಭಕ್ತಿಪುರಸ್ಸರವಾಗಿ ಮಾಡುತ್ತಿದ್ದಳಲ್ಲದೆ ಶ್ರೀಹರಿಯನ್ನು ಸ್ಮರಿಸುತ್ತ ಗೃಹಕೃತ್ಯಗಳನ್ನೂ ಆಸ್ಥಾಪೂರ್ವಕವಾಗಿ ಓರಣದಿಂದ ಮಾಡುತ್ತಿದ್ದಳು.

---

೩ ನೆಯ ಅಧ್ಯಾಯ

## ವೈಧವ್ಯ



ಪ್ರಾರಬ್ಧಕರ್ಮಣಾಂ ಭೋಗಾದೇವಕ್ಷಯಃ ॥

ಸೌ॥ ತಿಮ್ಮಮ್ಮನು ಅತ್ತೆಯ ಮನೆಯಲ್ಲಿ ಪತಿವರ್ಯರ ಸೇವೆಯನ್ನು ಮಾಡುತ್ತ ಸುಗೃಹಿಣಿಯಾಗಿ, ಧೀರೋದಾತ್ತ ಮನೋವೃತ್ತಿಯಿಂದ ಎರಡು ವರ್ಷ ಕಾಲಕ್ರಮಣ ಮಾಡುತ್ತಿರಲು, ಒಮ್ಮಿಂದೊಮ್ಮೆ ಪ್ರಾರಬ್ಧಕರ್ಮಾನುಸಾರವಾಗಿ ಈ ಚಿಕ್ಕ ಮುತ್ತೈದೆಯ ಪತಿದೇವರಾದ ಅಶ್ವತ್ಥರಾಯರು ವೈಕುಂಠವಾಸಿಗಳಾದರು! ತಿಮ್ಮಮ್ಮನು ೧೦ ನೆಯ ವರ್ಷದ ವಯಸ್ಸಿನಲ್ಲಿದ್ದಾಗೇನೇ ಈ ದುರ್ಘಟನೆಯುಂಟಾಯಿತು !! ದೈವದುರ್ವಿಲಾಸದಿಂದ ತಿಮ್ಮಮ್ಮನಿಗೆ ಬಾಲ್ಯದಲ್ಲಿಯೇ ವೈಧವ್ಯವು ಪ್ರಾಪ್ತವಾಯಿತು !!!

ಈ ದುರ್ಘಟನೆಯಿಂದ ಸ್ವತಃ ತಿಮ್ಮಮ್ಮನಿಗೂ ಹಾಗೂ ಆಕೆಯ ತಾಯಿ ತಂದೆಗಳಿಗೂ, ಅತ್ತೆ–ಮಾವಂದಿರಿಗೂ ಅತಿಶಯ ದುಃಖವಾಯಿತೆಂಬುದನ್ನು ಎಷ್ಟು ವರ್ಣಿಸಿ ಹೇಳಿದರೂ ತೀರದು.

ಆದರೆ ಈ ತಿಮ್ಮಮ್ಮನು ಬಾಲ್ಯದಿಂದಲೂ ಉಜ್ವಲವಾದ ಧಾರ್ಮಿಕ ಮನೋವೃತ್ತಿಯುಳ್ಳವಳು ಆಗಿದ್ದುದರಿಂದ ಆಕೆಯ ಹೃದಯದಲ್ಲಿ ಇಂಥ ಚಿಕ್ಕ ವಯಸ್ಸಿನಲ್ಲಿಯೇ ಈ ದುಃಖದಿಂದ ಲೋಕೋತ್ತರವಾದ ವೀರ ವೈರಾಗ್ಯವು ನಿರ್ಮಾಣವಾಯತು! ಶ್ರೀ ಪುರಂದರದಾಸರು "ಆದದ್ದೆಲ್ಲ ಒಳಿತೇ ಆಯಿತು, ನಮ್ಮ ಶ್ರೀಧರ ಸೇವೆಗೆ" ಎಂದು ನುಡಿದಂತೆ, ಶ್ರೀ ತಿಮ್ಮಮ್ಮನವರು ವೆಂಕಟಾಚಲ ಪತಿಯಾದ ಶ್ರೀ ಹರಿಯ ಧ್ಯಾನದಲ್ಲಿಯೇ ತಮ್ಮ ಆಯುಷ್ಯವನ್ನೆಲ್ಲ ಸಮರ್ಪಿಸ ಬೇಕೆಂದು ದೃಢನಿಶ್ಚಯ ಮಾಡಿದರು.

ಪುರಾಣ, ಪುಣ್ಯಕಥೆಗಳಲ್ಲಿ ಮತ್ತು ಆಧ್ಯಾತ್ಮಿಕ ಜ್ಞಾನದಲ್ಲಿ ಹೇಳಿದ ಧಾರ್ಮಿಕ ಉದಾತ್ತ ತತ್ವಗಳನ್ನು ಕೇವಲ ಅಂತರಿಕ್ಷದಲ್ಲಿ ಹಾರಾಡಿಸುತ್ತ ಕುಳಿತು ಕೊಳ್ಳದೆ, ಎಂದರೆ ವೇದಾಂತದ ಶ್ರೇಷ್ಠತತ್ತ್ವಗಳನ್ನು ಶುಷ್ಕವಾಕ್ಪಾಂಡಿತ್ಯದಿಂದ ಹರಟೆಹೊಡೆಯುತ್ತ ಕುಳಿತುಕೊಳ್ಳದೆ, ಆ ಶ್ರೇಯಸ್ಕರವಾದ ತತ್ತ್ವಗಳನ್ನು ಮನುಷ್ಯನು ತನ್ನ ದೈನಂದಿನ ಜೀವನದಲ್ಲಿ ಪ್ರತ್ಯಕ್ಷವಾಗಿ ಹೇಗೆ ಆಚರಿಸಬೇಕೆಂಬುದೇ ಶ್ರೇಷ್ಠವಾದದ್ದೆಂಬುದನ್ನು ಶ್ರೀ ತಿಮ್ಮಮ್ಮನವರು ಶೀಘ್ರದಲ್ಲಿಯೇ ತಿಳಿದುಕೊಂಡರು. ಮತ್ತು ಅದೇ ಮೇರೆಗೆ ಶ್ರೇಯಸ್ಕರವಾದ ದೈವಿಕ ಜೀವನವನ್ನು ನಿಷ್ಠೆಯಿಂದ ಆಚರಿಸಲಾರಂಭಿಸಿದರು.

ಸ್ತ್ರೀಯರಿಗೆ ವೈಧವ್ಯವೆಂದರೆ ಸನ್ಯಾಸಾಶ್ರಮವೇಸರಿ! ಸನ್ಯಾಸಿಯ ಹಾಗೆ ಒಪ್ಪೊತ್ತು ಊಟವನ್ನು ಮಾಡುವುದು; ಹಾಗೂ ಕಾಷಾಯ ವಸ್ತ್ರವನ್ನು ಧಾರಣ ಮಾಡುವುದು; ಇಷ್ಟು ಮಾತ್ರವೇ ಅಲ್ಲ, ಸದಾಕಾಲವೂ ಶ್ರೀ ಪರಮಾತ್ಮನ ಧ್ಯಾನದಲ್ಲಿಯೇ ಮಗ್ನರಾಗಿರುವುದು.

ಇದೇ ರೀತಿಯಾಗಿ ಶ್ರೀ ತಿಮ್ಮಮ್ಮನವರು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಎಂದರೆ ೧೦ ನೆಯ ವರ್ಷದ ವಯಸ್ಸಿನಲ್ಲಿಯೇ ವೈಧವ್ಯರೂಪವನ್ನು ಅರ್ಥಾತ್ ಸನ್ಯಾಸಿಯ ರೂಪವನ್ನು ಧಾರಣಮಾಡಿದರು! ಇಷ್ಟೇ ಅಲ್ಲ,ಶ್ರೀಹರಿಯ ಧ್ಯಾನದಲ್ಲಿ ತಲ್ಲೀನರಾದರು!!

ಶ್ರೀ ತಿಮ್ಮಮ್ಮನವರು ಶ್ರೀಹರಿಯನ್ನು ಸ್ಮರಿಸುತ್ತ ತಮ್ಮ ಅತ್ತೆಯ ಮನೆಯ ಕೆಲಸಗಳನ್ನೆಲ್ಲ ಶ್ರೀ ಪರಮಾತ್ಮನ ಪೂಜೆಯೆಂದು ತಿಳಿದು, ಭಕ್ತಿಪುರಸ್ಸರವಾಗಿಯೂ ಮಾಡುತ್ತಿದ್ದರು. ಯಾಕೆಂದರೆ, ತಿಮ್ಮಮ್ಮನವರು ಬಾಲ್ಯದಲ್ಲಿ ತವರು ಮನೆಯಲ್ಲಿದ್ದಾಗ್ಗೆ ತಮ್ಮ ತಂದೆಯವರಿಂದ ಹೇಳಿಸಿಕೊಂಡು ಬಾಯಿಪಾಠ ಕಲಿತಂಥ 'ಶ್ರೀಹರಿ ಕಥಾಮೃತಸಾರ' ಗ್ರಂಥದಲ್ಲಿಯ ಈ ಕೆಳಗಿನ ಪದ್ಯವು ಇವರ ಜ್ಞಾಪಕದಲ್ಲಿ ಸ್ಥಿರವಾಗಿದ್ದಿತು.

ಡಾಕ್ಟರ:—ಈ ಹಾಳು ಹರಟೆ ಬಿಟ್ಟುಬಿಡು. ಕುಡಿಯುವುದನ್ನು ಬಿಟ್ಟು ನೋಡು.

ಭೀಮಪ್ಪ:— ನನ್ನ ಜೀವ ಬಿಟ್ಟುನೋಡಾಂಗ್ ಆಯಿತು! ಈ ಮನಿವಳಗೆ ಹೊರಗೆ ಹೊಲ್ಸು, ಮಕ್ಕಳು, ಮರಿ, ನಾನು ಹೊಲ್ಸು, ಬಟ್ಟೆ ಹೊಲ್ಸು. ಹೆಂಡತಿ ಬ್ಯಾನಿಬ್ಯಾಸರ,ಮಕ್ಕಳು ಬಾನ ಬಾನ ಅನ್ನೋದು, ಬೆಳಗ್ಗಿನಿಂದ ಬೇಗಿನತನಕ ಧಗ ಧಗ ಮಾಡುವ ಗಿರಿಣ್ಯಾಗಿನ ಕೆಲ್ಸ. ಇದೆಲ್ಲಾ ಇದ್ದು ಹೆಂಡಿಲ್ಲದಾಂಗ ನಾನ್ಯಾಂಗ ಬದಕಲಿ ?

ಡಾಕ್ಟರ:— ನಿನ್ನ ಕೂಡ ಮಾತನಾಡುವುದು, ಕತ್ತಿಗೆ ಹೂರ್ಣ ತಿನ್ನಿಸುವುದು ಒಂದೇ.

ಸಮಶೀಲ :— ಡಾಕ್ಟರ! ಇವನ ಹೆಂಡತಿ ಬಾಣಂತಿ ಆಗಿ ಸ್ವಲ್ಪ ದಿನವೆ ಆದಹಾಗೆ ಕಾಣಿಸುತ್ತದೆ. ನೀನು ಅವಳಿಗೆ ಉಚಿತಾರ್ಥವಾಗಿ ಔಷಧಕೊಟ್ಟರೆ ಬಹಳ ಒಳ್ಳೇದಾದೀತು.

ಡಾಕ್ಟರ:—ಸಮಶೀಲಾ! ನೀನು ಎಂಥಾ ಹುಚ್ಚುಮಾತನಾಡುತ್ತಾ ಇರುವಿ. ಸದ್ಯದ ಪರಿಸ್ಥಿತಿಯೊಳಗೆ ದ್ರವ್ಯಾರ್ಜನವಿನಃ ಬೇರೆ ಪರೋಪಕಾರವಿಲ್ಲ.

"Charity begins at home" ಮನೆಗೆದ್ದು ಮಾರುಗೆಲ್ಲ ಬೇಕಂತೆ. ನಮ್ಮ ಹೊಟ್ಟೆ ತುಂಬಿದ ನಂತರ ಬೇರೆ ವಿಚಾರಮಾಡತಕ್ಕದ್ದು. ಮಾನವ ಪ್ರಾಣಿಗಳಲ್ಲಿ, ನನ್ನ ದೃಷ್ಟಿಯಿಂದ ಎರಡೇ ಜಾತಿಗಳು. ಒಂದು ಬಡವರದು, ಮತ್ತೊಂದು ಶ್ರೀಮಂತರದು. ಮಿಕ್ಕಜಾತಿಗಳು, ಪಂಗಡಗಳು; ಧರ್ಮಗಳು ಕೇವಲ ಮೇಲಿನ ಡೌಲಿನ ಮಾತುಗಳು.

ಸಮಶೀಲ:— ನೀನು "Charity begins at home" ಅನ್ನುವುದರ ಅರ್ಥವಾಗಲೊಲ್ಲದು ನನಗೆ. ಅದರ ಅರ್ಥವು "Charity ends at home" ಎಂದು ನೀನು ಮಾಡುವ ಹಾಗೆ ಕಾಣಿಸುತ್ತದೆ. ಸ್ವಾರ್ಥಕ್ಕೆ ತ್ರಿಲೋಕದಲ್ಲಿಯ ಐಶ್ವರ್ಯವು ಸಾಲದು. ನೀನು ಹೇಳಿದ ಎರಡು ಜಾತಿಗಳಿಂದ ಉತ್ಪನ್ನವಾಗಿರುವ ಮೂರನೆ ಸಮ್ಮಿಶ್ರ ಜಾತಿಯು ವಕೀಲರದು ಮತ್ತು ಡಾಕ್ಟರರದು. ಹಲವರು ಹೆಚ್ಚು ಶ್ರೀಮಂತರಿರುವುದರಿಂದ ಬಹು ಜನರು ಬಡವರಿರಬೇಕಾಗುವುದು. ಹೆಚ್ಚು ಶ್ರೀಮಂತಗಿರಿಯಿಂದ ಉತ್ಪನ್ನವಾಗುವ ಗೌಟ್, ರ್ಯುಮ್ಯಾಟಿಸಮ್ ಮುಂತಾದ ಬೇನೆಗಳೂ ಬಡತನದಿಂದ ಉತ್ಪನ್ನವಾಗುವ ಪ್ಲೇಗ್, ಕಾಲರಾ ಮುಂತಾದ ಬೇನೆಗಳೂ ಡಾಕ್ಟರ್‌ರನ್ನು ಉತ್ಪನ್ನಮಾಡಿ ಪೋಷಣೆಮಾಡುವವು. ಶಿರಿವಂತಿಕೆ ಮತ್ತು ಬಡತನ ಇದರ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ವಿರೋಧದಿಂದ ವಕೀಲರ ಬಾಳ್ವೆಯಾಗುವುದು. ಈ ವರ್ಗವ್ಯತ್ಯಾಸವನ್ನು ವರ್ಗಭಾವನೆಗಳನ್ನು ಅದರಿಂದಾಗಿ ಹುಟ್ಟುವ ವಿಷಮತೆಯನ್ನು ಕೊನೆಗಾಣಿಸಿ ಒಂದೇ ಭಾವನೆಯ ಸುಖ-ಸಂಪತ್ತಿಯ ಸಮಾಜವನ್ನು ನಿರ್ಮಾಣಮಾಡಬೇಕಾದರೆ ಸಮತಾವಾದದ ದಾರಿಯೇ ನಿಜವಾದ ದಾರಿಯು.

(ರಾಮುಕ್ಕನ ಕಡೆಗೆ ತಿರುಗಿ ತನ್ನ ಹತ್ತಿರವಿದ್ದ ಒಂದು ರೂಪಾಯಿಯನ್ನು ಆಕೆಗೆ ಕೊಡುವನು.)

(ಸಮುಶೀಲ ಮತ್ತು ಡಾಕ್ಟರ್‌ರು ಹೋಗುವರು. ಭೀಮಪ್ಪನು ಅವರು ಹೋಗುವುದನ್ನೇ ನೋಡುತ್ತ ನಿಲ್ಲುವನು—ತೆರೆಯಲ್ಲಿ ಯಾರೋ ಒಬ್ಬರು ಹಾಡುತ್ತ ಹೋಗುವರು.)

**ಹಾಡು:—** ("ಶಿವ ಶಿವ ಜನ್ಮ ಇದು ವ್ಯರ್ಥವೊ" ಎಂಬಂತೆ.)

ಸಲಹುನೀ ದೇವಾ ಸಮುಶೀಲನ।
ಲೋಕೋಪಕಾರಾರ್ಥ ಜೀವಿಸುವ, ಪೊರೆಯ ನೀ
ಸಲು....॥ ೧ ॥

ಸ್ವಾರ್ಥಪ್ರೀತಿಯು ಬೇಡೆಂದು ನೀ
ಸಕಲ ಸಿರಿಯುತ ಜನರಿಗೆ ಬೋಧಮಾಡುತ ॥ ೧ ॥
ಸಾಮ್ಯದಭಾವವ ಬೆಳೆಯಿಸುತಾ।
ಶಾಂತಿ-ಸಾಮ್ಯದ ಭಾವವ ಬೆಳೆಯಿಸುತಾ ಸಲುಹು ॥ ೨ ॥



## ಅಂಕ ೨. [ದೃಶ್ಯ ೨]

(ಶ್ರೀಧರಲಾಲನ ಮನೆ: ಟೀ ಗಾಯನ ಪಾರ್ಟಿಯ ವ್ಯವಸ್ಥೆ ನಡೆಯುತ್ತಿದೆ.)

**ಭಾಗ್ಯವತಿ:—** ರತಿಲಾಲ್‌ಶೇಟರ ಸಂಗಡ ನನ್ನ ವಿವಾಹ ಮಾಡುವುದನ್ನು ತಂದೆಯವರು ಪೂರ್ಣವಾಗಿ ನಿಶ್ಚಯ ಮಾಡಿರುವರು. ವಾಗ್ದಾನದ ಸಲುವಾಗಿ ಈದಿನ ಅವರಿಗೆ ಟೀ ಮತ್ತು ಗಾಯನ ಪಾರ್ಟಿ ಇಡಲಾಗಿದೆ. ಆದರೆ ನನ್ನ ತಲೆಯಲ್ಲಿ ವಿವಿಧ ವಿಚಾರದ ಗದ್ದಲವು ಆಗುವುದು. ಒಂದು ಕಡೆ ಇದುವರೆಗೂ ತಾಯಿ ಇಲ್ಲದ ಒಬ್ಬಳೆ ಮಗಳೆಂದು ಚಿಕ್ಕಂದಿನಿಂದ ಒಳ್ಳೇ ಪ್ರಿತಿಯಿಂದ ತನ್ನ ಆಯುಷ್ಯದ ಎಲ್ಲ ಆಶೆಗಳನ್ನು ನನ್ನಲ್ಲಿಟ್ಟು ನನ್ನನ್ನು ಬೆಳೆಸಿದ ತಂದೆಯವರ ಬಗ್ಗೆ ಇದ್ದ ಕೃತಜ್ಞತಾ ಬುದ್ಧಿ. ಇನ್ನೊಂದು ಕಡೆ ಸೇಠರ ಸಂಪತ್ತಿಯ ಮೇಲಿರುವ ವ್ಯಾಮೋಹ, ಮತ್ತೊಂದು ಕಡೆ ಸಮುಶೀಲನ ಮೇಲಿದ್ದ ನೈಸರ್ಗಿಕ ಪ್ರೇಮ. ಆದರೆ ಸಮುಶೀಲನ ಸಂಗಡ ವಿವಾಹ ಮಾಡಿಕೊಂಡರೆ ತಂದೆಯವರಿಗೆ ನನ್ನ ಮೇಲಿನ ಕೋಪ, ಸೇಠರ ರೋಷ ಬಡತನದ ತಾಪ-ಇವುಗಳ ಭೀತಿ! ಶಿವ! ಶಿವ! ಇಂಥ ಅಂತಃಕರಣದಿಂದ ಆದ ತಾಪವನ್ನು ನನ್ನಿಂದ ಸಹಿಸಲಾಗದು ಭಗವಂತಾ! ನನ್ನನ್ನು ಯಃಕ್ಕಶ್ಚಿತ ಒಬ್ಬ ಬಡಪ್ರಾಣಿಯನ್ನಾಗಿ ಹುಟ್ಟಿಸಿದರೆ ಯಾವನೋ ಒಬ್ಬ ಬಡವನ ಕೈಹಿಡಿದು ಸುಖದಿಂದ ಕಾಲಹಾಕುತ್ತಿದೆ. ಈ ಕೃತಜ್ಞತಾ ಬುದ್ಧಿಯು ನನಗೆ ಇಲ್ಲದಿದ್ದರೆ

ತಂದೆಯು ಸುಖದ ಸಲುವಾಗಿ ಬೇಪರ್ವಾಯಿಯಿಂದ ಪ್ರೇಮವಿನಾಹದ ಡೌಲನ್ನು ಹೇಳುತ್ತಾ ನಟನಮಾಡುತ್ತಿದ್ದೆ. ಸಮಃಶೀಲ ಮತ್ತು ಅವನ "ಆತ್ಮವತ್ ಸರ್ವ ಭೂತೇಷು" ಇದರ ಆಚರಣೆ. ಇವುಗಳ ಬಗ್ಗೆ ನನ್ನಲ್ಲಿ ಆದರ ಭಾವವು ಇಲ್ಲದಿದ್ದರೆ ಸೇಠರ ಸಂಗಡ ವಿವಾಹಮಾಡಿಕೊಂಡು ಬಂಗಾರ ಮತ್ತು ವಜ್ರದ ಆಭರಣದಿಂದ ಶೋಭಿಸಿ ಬಡಜನರ ಸಾವಿರಾರು ಗುಡಿಸಲುಗಳನ್ನು ಭೂಮಿಪಾಲುಮಾಡಿ ಉನ್ಮತ್ತ ಗಜದಂತೆ ನಿಂತಿರುವ ಭೀಷ್ಮ ಬಂಗಲೆಯಲ್ಲಿ ಹಸಿದಿರುವ ಶ್ರಮಜೀವಿಗಳ ಹಂಬಲದ ಸ್ವರವನ್ನು ತಿಲಮಾತ್ರ ಸಹಾ ಲಕ್ಷಿಸಿದೆ, ಮೃಷ್ಟಾನ್ನವನ್ನು ಭೋಜನ ಮಾಡುತ್ತ, ಆಲಸ್ಯದಿಂದ ಕಾಲಹಾಕುತ್ತಿದ್ದೆ. ನನ್ನ ವೈಭವದ ಡೌಲನ್ನು ತೋರಿಸ ಲಿಕ್ಕೆ ಸಾಯಂಕಾಲ ಮೋಟಾರು ಕಾರಿನಲ್ಲಿ ಮೆರೆಯುತ್ತಿದ್ದೆ.

ಬ್ರಹ್ಮನು ಈ ಆರಾಮದ ಸುಖವನ್ನು ಹಣೆ ಬರಹದ ಮೇಲೆ ಕಾಣಿಸಿಲ್ಲ! ಇನ್ನು ನಾನೇನು ಮಾಡಲಿ? ಈ ದಿನ ಏನು ಹೇಳಲಿ? ಸೇಠರನ್ನು ಇಂದು ತಂದೆ ಯವರು ಕರೆತರಲಿರುವರು. ನಾನು ವಿಶೇಷಮಾತನಾಡದೆ ಮೌನಧರಿಸುವೆ. "ಮೌನಂ ಸರ್ವಾರ್ಥಸಾಧನಂ"

(ಶ್ರೀಧರಲಾಲ ಮತ್ತು ರತಿಲಾಲರ ಪ್ರವೇಶ)

(ಶೇಕ್‌ಹ್ಯಾಂಡ ಮಾಡುವರು. ಒಬ್ಬರಿಗೊಬ್ಬರು "How do you do?" ಎಂದು ಕೇಳುವರು. ತಮ್ಮ ತಮ್ಮ ಸ್ಥಾನಗಳನ್ನು ಅಲಂಕರಿಸುವರು.)

(ಶ್ರೀಧರಲಾಲರು "ಬಾಯ್" ಎಂದು ಕರೆಯುವರು. ನಳನು ತಿಂಡಿಯ ಸಾಮಾನುಗಳನ್ನು ತರುವನು. ಎಲ್ಲರು ಟಫಿನ್ ಪ್ರಾರಂಭಮಾಡುವರು.)

ಶ್ರೀಧರಲಾಲ:— ನನ್ನ ಮಗಳ ಅಂತಃಕರಣವು ಬಹಳ ಕೋಮಲವಾಗಿರು ವುದು. ಅವಳ ಪ್ರವೃತ್ತಿಯು ಪರೋಪಕಾರ ಮುಂತಾದವುಗಳ ಕಡೆಗೆ ಇರುವುದು. ತನ್ನ ವಿಚಾರಕ್ಕೆ ಅನುಕೂಲವಾದವರನ್ನೆ ವರಿಸಬೇಕೆಂದು ಅವಳ ಅಭಿಪ್ರಾಯ. ಇದರ ಬಗ್ಗೆ ನಿಮ್ಮ ಅಭಿಪ್ರಾಯವೇನು.

ರತಿಲಾಲ:— "ಪರೋಪಕಾರಂ ಪುಣ್ಯಾಯ ಪಾಪಾಯ ಪರಪೀಡನಾಂ" ಇದೇ ಎಲ್ಲಾ ಧನಿಕರ ಗುರುಮಂತ್ರವು: ಪರೋಪಕಾರ ಬಿಟ್ಟರೆ ನಮ್ಮ ಐಶ್ವರ್ಯ ದಿಂದೇನು ಮಾಡುವುದು. "ನನ್ನ ಚೆಕ್‌ಬುಕ್" ಅವಳ ಕೈಯಲ್ಲಿಯೇ. ನನ್ನ ಎಲ್ಲಾ ಐಶ್ವರ್ಯವು ಅವಳ ಅಧೀನದಲ್ಲಿಯೇ. ಧನಿಕರೆ ನಿಜವಾದ ಪರೋಪಕಾರ ವನ್ನು ಸಾಧಿಸುವವರು. ಮಿಕ್ಕವರೆಲ್ಲ ಬರೇ ಡೌಲದ ಮಾತನ್ನಾಡುವವರು.

ಎಷ್ಟೋ "ಲಾಯಬ್ರರಿಗಳು" ವಿಶ್ವವಿದ್ಯಾಲಯಗಳು 'ಡಿಸ್‌ಪೆನ್ಸರಿಗಳು' ಹರಿಜನ ಸೇವಾ ಸಂಘಗಳು ಖಾದೀ ಭಾಂಡಾರಗಳು, ಮಹಿಳಾ ಹಿತೈಷೀ ಮಂಡಳ ಗಳು, ಕಾಂಗ್ರೆಸ್ಸಗಳು, ಕಾನ್ಫರೆನ್ಸಗಳು ಮುಂತಾದ ಸಾಮಾಜಿಕ, ರಾಜಕೀಯ ಸಂಸ್ಥೆಗಳು ಧನಿಕರ ಧನಸಹಾಯದ ಮೇಲೆ ಆಧಾರ ಪಟ್ಟಿರುವವು.

ಶ್ರೀಧರಲಾಲ:— ಇನ್ನೇನು ಭಾಗ್ಯವತಿ. ನಿಜವಾಗಿಯೂ ನಿನ್ನ ಭಾಗ್ಯೋದಯವಾದಂತಾಯಿತು. ಶಿರಿವಂತರಿಗೆ ಪರೋಪಕಾರ ಭಾವನೆ ಇರುವದೆಂದರೆ ಭಂಗಾರಕ್ಕೆ ಸುವಾಸನೆ ಇದ್ದಹಾಗೆ. ಆಗತ್ಯ ನಿನ್ನ ವಚನವನ್ನು ಕೊಟ್ಟುಬಿಡು.

ಭಾಗ್ಯವತಿ:— ರತಿಲಾಲ್ ಶೇಠರೆ, ನನಗೊಂದು ಅನುಮಾನ ಬರುವುದು. ನನ್ನನ್ನೂ ಕ್ಷಮಿಸಬೇಕು. ನಾನು ನಿಮ್ಮೊಡನೆ ವಿವಾಹ ಮಾಡಿಕೊಳ್ಳುವದಿಲ್ಲವೆಂದು ಭಾವಿಸಬೇಡಿರಿ. ಕಷ್ಟದಿಂದ ಸಂಪತ್ತಿಯನ್ನು ಉತ್ಪನ್ನಮಾಡಿ ಬೆಳೆಸುವ ಶ್ರಮಜೀವಿಗಳ ಶ್ರಮದಿಂದ ಅನಾಯಾಸವಾಗಿ ಲಾಭವನ್ನು ಪಡೆದು ಧನಿಕರಾಗುವರು. ಕಾರಣ ನೀವು ಹೇಳಿದ ಆ ಸಮಾಜಸೇವೆ-ಸಂಸ್ಥೆಗಳಿಗೆ ಮಾಡುವ ಸಹಾಯವೆಂದರೆ ಬಡ ವಿಧವೆಯೊಬ್ಬಳು ಕಷ್ಟದಿಂದ ಸಂಪಾದಿಸಿದ ಹಣವನ್ನು ಕಳ್ಳನು ಅಪಹರಿಸಿ ಅದರ ಅಲ್ಪಾಂಶವನ್ನು ವಿಧವಾಶ್ರಮಕ್ಕೆ ಕೊಟ್ಟಂತಾಗುವುದು.

ಶ್ರೀಧರಲಾಲ:— (ಕೊಂಚ ಸಿಟ್ಟಿನಿಂದ) ಈ ಕುಶಂಕೆಗಳನ್ನೆಲ್ಲ ಬಿಟ್ಟು ಬಿಡು. ಕ್ಷಣ ಸಹ ವಿಲಂಬನೆಮಾಡದೆ ನಿನ್ನ ವಚನವನ್ನು ಕೊಟ್ಟು ಬಿಡು. ಹೂಂ. ಮಾತನಾಡು.

( ಭಾಗ್ಯವತಿ ಮೌನ ತಾಳುವಳು )

ಶ್ರೀಧರಲಾಲ:— ಏನು ಹೇಳು. ಬಾಯಿತೆರೆ. ನೀನಿನ್ನು ಸಣ್ಣ ಕೂಸಲ್ಲ.

ಭಾಗ್ಯವತಿ:— [ ಭಾಗ್ಯವತಿ ಏನನ್ನು ಹೇಳದೆ ವಿಕಟ ಹಾಸ್ಯಮಾಡುವಳು ]

ಶ್ರೀಧರಲಾಲ:—ಏನು ಹೀಗೆ ಮಾಡಿದರೆ? ನಕ್ಕರೆ ? ಸ್ಪಷ್ಟವಾಗಿ ಹೇಳು. ಹೂಂ-ಮಾತನಾಡು.

ಭಾಗ್ಯವತಿ :— [ ಲಜ್ಜೆಯಿಂದ ಮುಖ ತಿರುಗಿಸುವಳು]

ರತಿಲಾಲ:— ಅವಳಿಗೆ ಲಜ್ಜೆ ಎನಿಸುವುದು. ಅವಳಿಗೆ ಜಾಸ್ತಿ ಒತ್ತಾಯ ಮಾಡಬೇಡಿರಿ. ಅವಳ ಲಜ್ಜೆಯ ಅರ್ಥವನ್ನು ನಾವು ಮಾಡಬಹುದು.

ಶ್ರೀಧರಲಾಲ:— ನಿನ್ನ ಲಜ್ಜೆಯ ಅರ್ಥವನ್ನು ನಾವು ಸಮ್ಮತಿ ಎಂದು ತಿಳಿಯುತ್ತೇವೆ. ಈ ಸಂತೋಷ ಪ್ರಸಂಗದಲ್ಲಿ ಒಂದಿಷ್ಟು "ಗಾನಾ ಬಜಾನಾ" ಆದರೆ ಒಳ್ಳೆಯದಾದೀತು.

[ ಗಾನಾ ಬಜಾನಾ ನಡೆಯುವುದು. ಒಬ್ಬಿಬ್ಬರು ಸಿನಿಮಾ ಹಾಡುಗಳನ್ನು ಹಾಡುವರು. ]

ಶ್ರೀಧರಲಾಲ:—[ಅವರ ಹಾಡು ಮುಗಿದ ಮೇಲೆ ಭಾಗ್ಯವತಿಯ ಕಡೆಗೆ ತಿರುಗಿ] ಭಾಗ್ಯವತಿ ನೀನು ಒಂದು ಹಾಡನ್ನು ಹೇಳಿ ರತಿಲಾಲ ಶೇಠರ ಮನಸ್ಸನ್ನು ರಮಿಸು.

ಭಾಗ್ಯವತಿ:— [ ಶಾಸ್ತ್ರೀಯ ಹಾಡೊಂದನ್ನು ಪ್ರಾರಂಭಮಾಡುವಳು. ಅಷ್ಟರಲ್ಲಿ ಒಳಗಿನಿಂದ ಹೆಣ್ಣು ಧ್ವನಿಯೊಂದು " ಅಯ್ಯೋ ಅಮ್ಮಾ " ಎಂದು ಕೂಗಿದಂತಾಗುವುದು. ಭಾಗ್ಯವತಿಯು ಹಾಡುವುದನ್ನು ಬಿಟ್ಟು ದಿಗಿಲೆದ್ದು " ಏನಾಯಿತು ರಾಮಕ್ಕಾ ?" ಎಂದು ತೆರೆಯೊಳಕ್ಕೆ ಓಡುವಳು ]

# ವೀರಮಾತೆ



**ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ**
**ಕನ್ನಡ ಮಾಸಪತ್ರಿಕೆ.**

ಸಂಪುಟ ೧ } ಆಶ್ವಿನ ಪೌರ್ಣಿಮಾ ಅಕ್ಟೋಬರ ೧೯೫೨ { ಸಂಚಿಕೆ ೫

## ಸಂಪಾದಕೀಯ

ನಾಡಹಬ್ಬ ಕನ್ನಡನಾಡಿನ ಜೀವನದಲ್ಲಿಯೇ ಒಂದಾದ ಹಬ್ಬ: ಜಾತಿ ಮತಗಳ, ಪಕ್ಷಪಂಗಡಗಳ ಭೇದಗಳನ್ನು ಮರೆತು, ಎಲ್ಲರೂ ಸೇರಿ ಸಾಮೂಹಿಕವಾಗಿ ಆಚರಿಸುವ ಹಬ್ಬ ಅದು. ಇಂದು ಕನ್ನಡನಾಡಿನಲ್ಲಿ ನಾಡಹಬ್ಬವನ್ನಾಚರಿಸಿ, ಜನತೆಯ ಹರಡಿದ ಮನಸ್ಸನ್ನು ಮತ್ತೆ ಒಂದುಗೂಡಿಸುವದಿದೆ; ಭಾರತದಲ್ಲಿ ನಾಡ ಹಬ್ಬವನ್ನಾಚರಿಸಿ, ರಾಷ್ಟ್ರೀಯತೆಯ ವಿಶಾಲಭಾವನೆಯನ್ನು ಮನವರಿಕೆಯಾಗುವಂತೆ ಮೂಡಿಸುವದಿದೆ !

ಕನ್ನಡನಾಡು ಹೆಣ್ಣು ದೇವತೆಗಳದು; ಇದರ ಗುರುತಾಗಿ ಮಾತೃಪ್ರಧಾನ ಕುಂಟುಂಬ ಪದ್ಧತಿ ಇನ್ನೂ ಅಲ್ಲಲ್ಲಿ ಕಂಡು ಬರುತ್ತದೆ. ಅಷ್ಟಮಿಯ ದಿನ ಶಕ್ತಿಯ ಪೂಜೆಯನ್ನು ಮಾಡಿ, ಮಹಾನವಮಿಯ ದಿನ ತಮ್ಮ ಶಸ್ತ್ರಾಸ್ತ್ರಗಳನ್ನು ಪೂಜಿಸಿ ಕನ್ನಡ ರಾಜರು ದಿಗ್ವಿಜಯಕ್ಕೆ ತೆರಳುತ್ತಿದ್ದರಂತೆ! ಪಾಂಡವರು ತಮ್ಮ ಅಜ್ಞಾತವಾಸ ದಲ್ಲಿ, ಶಸ್ತ್ರಾಸ್ತ್ರಗಳನ್ನು ಶಮೀವೃಕ್ಷದಲ್ಲಿ ಬಚ್ಚಿಟ್ಟದ್ದರಿಂದ ವಿಜಯದಶಮಿಯ ದಿನ ಶಮೀವೃಕ್ಷದ ಎಲೆಗಳನ್ನು ಆಪ್ತೇಷ್ಟರಿಗೆ ಹಂಚುವದು ಪರಿಪಾಠವಾಗಿದೆ. ಹಿಂದಿದ್ದ

ಪರಿಸ್ಥಿತಿ ಇಂದಿಲ್ಲ; ಎಷ್ಟೋ ವ್ಯತ್ಯಾಸಗಳಾಗಿವೆ; ಇದರ ಅವಶೇಷವಾಗಿ, ದಕ್ಷಿಣದಲ್ಲಿ ಸಂಸ್ಥಾನಗಳ ಪ್ರಮುಖರು ತಮ್ಮ ಪರಿವಾರದೊಡನೆ ಊರಗಡಿಯನ್ನು ದಾಟ ಬರುತ್ತಿರುವದನ್ನು ನಾವಿನ್ನೂ ಕಾಣಬಹುದು.

ಕಾಲ ಉರುಳಿದಂತೆ, ಯಾವುದೇ ಪದ್ಧತಿಯು ಹಿಂಬದಿಗಿದ್ದ ತತ್ವ ಹಿಂದೆ ಬಿದ್ದು, ಹುರುಳಿಲ್ಲದ ಮೇಲಿನ ಕವಚ ಮಾತ್ರ ಉಳಿಯುವ ಪದ್ಧತಿ; ನಾಡಹಬ್ಬದಲ್ಲಾದರೂ ಹಾಗೇ ಆಗಿದೆ. ನಾಡಹಬ್ಬ ಜನತೆಯಲ್ಲಿ ರಾಷ್ಟ್ರೀಯತೆಯ ಭಾವನೆಯನ್ನು ಹುಟ್ಟಿಸಲು ಪ್ರೇರೇಪಕವಾಗಿರಬೇಕು, ಆದರೆ ಇದಕ್ಕೆ ವಿಪರೀತವಾಗಿ ನಾವು ಇಂದು ಸಮಾಜದಲ್ಲಿ ಕಾಣುವದೇನು ? ಜಾತಿ ಜಾತಿಗಳ ತಿಕ್ಕಾಟ, ಮತ ಮತಗಳ ಸಂಘರ್ಷಣೆ, ಹಿರಿದು—ಕಿರಿದು, ಕಪ್ಪು—ಕೆಂಪು ಎಂಬ ಭೇದ ಭಾವ ಹೀಗಾಗಲು ಕಾರಣವೇನಂದರೆ ಸ್ತ್ರೀ ಜನಾಂಗದ ಕಡೆಗೆ ಅನಾದರಭಾವ, ಅವರ ಭಾವುಕ ತಲೆಯಲ್ಲಿ ಧರ್ಮದ ಹಾಗೂ ಕರ್ತವ್ಯದ ಬಗ್ಗೆ ಮೂಢಭಾವನೆ ಹುಟ್ಟಿಸಿದ್ದು, ಅವರ ದಾಸ್ಯತ್ವ ಪರಕೀಯರ ದಾಳಿ, ಹಾಗೂ ಸ್ತ್ರೀಶಿಕ್ಷಣದ ಅಭಾವ ಈ ಭೇದ ಭಾವವಳಿದು ಸಾಮೂಹಿಕವಾಗಿ ಜನಾಂಗದ ಪ್ರಗತಿಯಾಗಬೇಕಾದರೆ, ಸ್ವತಂತ್ರವಾದ ಸ್ತ್ರೀ ಶಿಕ್ಷಣವು ತೀರ ಅವಶ್ಯವಾದುದು; ಸಾಂಸ್ಕೃತಿಕ ಶಿಕ್ಷಣದ ಜೊತೆಗೆ ವೃತ್ತಿ-ಶಿಕ್ಷಣದ-ರಾಷ್ಟ್ರದ ಎಲ್ಲ ಪ್ರಜೆಗಳಿಗೂ ಅವಶ್ಯಕತೆಯು ಉಂಟು.

ಭಾರತವು ಹಳ್ಳಿಗಳ ದೇಶ; ಪ್ರತಿಹಳ್ಳಿಗೂ ಶಿಕ್ಷಣದ ಗಾಳಿ ಬೀಸಬೇಕಾದರೆ, ಇಂದಿನ ಸಮಾಜದ ಋಣದಿಂದ ಬೆಳೆದ ಸುಶಿಕ್ಷಿತರು ಮಾಡಬೇಕಾದ ಕಾರ್ಯ ಬಹಳವಾಗಿದೆ. ಶರೀರಶ್ರಮ ಕೀಳ್ಮಟ್ಟದ್ದೆಂಬ ಭಾವನೆಯಾಗಲಿ. ತನ್ನ ಸಮಾಜಕ್ಕಾಗಿ, ನಾಡಿಗಾಗಿ ಸೇವೆಸಲ್ಲಿಸುವ ಪ್ರಸಂಗ ಬಂದಾಗ, ಅದು ತನ್ನ ಮರ್ಯಾದೆಗೆ ಸಲ್ಲದೆಂಬ ಭಾವನೆಗಳು ಬಂದರೆ ಶಿಕ್ಷಣದ ಪರಿಣಾಮ ಒಳ್ಳೆಯದಾಗಿಲ್ಲವೆಂದೇ ಅನಿರ್ವಾಹವಾಗಿ ಹೇಳಬೇಕಾಗುವದು. ಇಂದು ನಮ್ಮ ಜನರ ಮನೋವೃತ್ತಿ ಕೊಂಚ ಓದಿಕಲಿತು, ಒಂದು ಪರೀಕ್ಷೆಗೆ ಕಟ್ಟಿ ಕಾರಕೂನನಾಗುವದರ ಕಡೆಗಿದೆಯೇ ಹೊರತು, ಹೊಲದಲ್ಲಿ ದುಡಿವ ಸ್ವಾವಲಂಬಿ ರೈತನಾಗುವ ಕಡೆಗಿಲ್ಲ ! ಇದು ನಮ್ಮ ದೇಶದ ಹಿತದದೃಷ್ಟಿಯಿಂದ ಬಹಳ ಶೋಚನೀಯ !! ದಾಸ್ಯದ ಮನೋವೃತ್ತಿ ಕಳಚಿಹೋಗಲು ಇನ್ನೂ ಕೆಲಕಾಲಬೇಕಾದರೂ, ಕಳಚಿಹೋಗುವ ಮಾರ್ಗದಲ್ಲಾದರೂ ಇದೆ, ಎಂದರೆ ಎಷ್ಟೋ ಸಮಾಧಾನ !!

ಪ್ರಜಾಪ್ರಭುತ್ವವುಳ್ಳರಾಜ್ಯದಲ್ಲಿ ನಾಡಿನ ಹಬ್ಬಕ್ಕೆ ಬಹುಮಹತ್ವದ ಸ್ಥಾನ; ಈ ಹಬ್ಬದ ಆಚರಣೆ ಸಾಹಿತ್ಯೋತ್ಸವದ ರೂಪದಲ್ಲಿ ಕೊನೆಗಾಣದೆ, ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸಿ, ಅದರ ಆರೋಗ್ಯವನ್ನು ಕಾಯ್ದುಕೊಳ್ಳುವ ಚಟುವಟಿಕೆಗಳಿಂದ ಕೂಡಿರಬೇಕು. ಆದಕ್ಕಾಗಿ ಈ ಹಬ್ಬ ನಮ್ಮ ಸ್ವಾತಂತ್ರ್ಯ ದಿನವಾದ ಅಗಸ್ಟ ೧೫ ರೊಂದಿಗೇ ಬಂದರೆ, ನಾಡಹಬ್ಬ ಇನ್ನೂ ಅರ್ಥಪೂರ್ಣವಾದೀತು !

* * * * * *

ಕನ್ನಡನಾಡಿನ ಮೂಲೆ ಮೂಲೆಗಳಲ್ಲೂ ನಾಡಹಬ್ಬದ ಇಂಪಾದ ಧ್ವನಿ ಕೇಳಿಬರುತ್ತಿರುವದು, ನಾಡಿನ ಸಾಂಸ್ಕೃತಿಕ ಚಟುವಟಿಕೆಗಳ ಕುರುಹಾಗಿದೆ!

† † † † † †

ದಿಲ್ಲಿಯಲ್ಲಿ ಅಖಿಲಭಾರತ ಪತ್ರಿಕಾ ಸಂಪಾದಕರ ಹತ್ತನೆಯ ಅಧಿವೇಶನ ವನ್ನು ಉದ್ಘಾಟಿಸುತ್ತ ವಿಖ್ಯಾತ ತತ್ವಜ್ಞಾನಿ ಸರ್ ರಾಧಾಕೃಷ್ಣನ್ನರು ಹೇಳಿದರು; ಪತ್ರಿಕೆಗಳು ಜನತೆಯ ಅಭಿಪ್ರಾಯವನ್ನು ಪ್ರತಿಬಿಂಬಿಸುವ ಕನ್ನಡಿ ಇದ್ದಹಾಗೆ; ಇಷ್ಟೇ ಅಲ್ಲ ಜೊತೆಗೆ ಜನತೆಯ ಅಭಿಪ್ರಾಯವನ್ನು ಒಳ್ಳೆಯದರತ್ತ ಹೊರಳಿಸುವ ಶಕ್ತಿಯೂ ಪತ್ರಿಕೆಗಳ ಕೈಯಲ್ಲಿಯೇ ಇದೆ; ಪತ್ರಿಕೆಗಳು ಸಮಾಜದಲ್ಲಿ ಹೊರ ಬೇಕಾದ ಹೊಣೆ ಬಹಳ; ಭಾರತದಲ್ಲಿ ಪತ್ರಿಕೆಗಳ ಸಂಖ್ಯೆ ಇನ್ನೂ ಹೆಚ್ಚಾಗಬೇಕು, ಎಂದು; ಈಗಾಗಲೇ ಪತ್ರಿಕೆಗಳನ್ನು ಕೊಂಡು ಓದುವ ಓದುಗರ ಸಂಖ್ಯೆ ಕಡಿಮೆ ಯಾಗಿದೆ, ಇನ್ನೂ ಹೆಚ್ಚಾದರೆ ಗತಿಯೇನು?

* * * * * *

ಶ್ರೀಮತಿ ವಿಜಯಲಕ್ಷ್ಮಿ ಪಂಡಿತರು ಭಾರತ ಶಿಷ್ಟಮಂಡಳದ ಧುರೀಣತ್ವ ವನ್ನು ವಹಿಸಿ, ಸಂಯುಕ್ತರಾಷ್ಟ್ರ ಸಂಘಕ್ಕೆ ಹೋಗುತ್ತಿರುವದು ಅಭಿನಂದನೀಯ. ಹಿಂದೆ ದಕ್ಷಿಣ ಆಫ್ರಿಕದ ಪ್ರಶ್ನೆ ಎದುರು ಬಂದಾಗ ಜನರಲ್ ಸ್ಮಟ್ಸ ಶ್ರೀಮತಿ ಪಂಡಿತರು ಎಂತಹ ವ್ಯಕ್ತಿ ಎಂಬುದನ್ನು ಆಡಿತೋರಿಸಿದ್ದಾರೆ. ತಮಗೆ ಸರಿಕಾಣ ದ್ದನ್ನು ವಿರೋಧಿಸುವ ಶಕ್ತಿ ಅವರಲ್ಲಿ ಅಪಾರವಾಗಿದೆ; ಅವರು ತುಂಬಾ ಪ್ರಸಂಗಾವ ಧಾನಿ; ಅವರ ವಾಣಿ ಮಿಂಚಿನಂತೆ ತೇಜಃಪೂರ್ಣವಾದುದು. ಗಂಭೀರ ಪ್ರವಾಹ ದಂತೆ ಅಡೆತಡೆಗಳಿಲ್ಲದೆ ಹರಿಯುವಂತಹದು!

* * * * * *

ಆಚಾರ್ಯ ವಿನೋಬಾರವರ ಭೂದಾನಯಜ್ಞಕ್ಕೆ ಕನ್ನಡಿಗರೂ ಉದಾರ ಅಂತಃಕರಣದಿಂದ ಸಹಕಾರ ತೋರಿಸುತ್ತಿದ್ದುದು, ಕನ್ನಡಿಗರ ಮನೋವೃತ್ತಿ ಯಲ್ಲಿಯೂ ಪ್ರಸಂಗಕ್ಕೆ ಹೊಂದಿಕೊಂಡು ಹೋಗುವ ಮಾರ್ಪಾಟನ್ನು ತೋರಿಸುತ್ತದೆ.

* * * * * *

ಸಪ್ಟೆಂಬರ ತಿಂಗಳ ಪ್ರಾರಂಭದಲ್ಲಿ ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘದ ಆಶ್ರಯದಲ್ಲಿ ಜ್ಞಾನವರ್ಧಕ ಸಂಘದವರು ಏರ್ಪಡಿಸಿದ ಚಿತ್ರಗಳ ಪ್ರದ ರ್ಶನ ಅಂದವಾಗಿತ್ತು. ಹಿಂದುಸ್ತಾನದ ಒಳಹೊರಗಿನ ಪ್ರಸಿದ್ಧ ಚಿತ್ರಕಾರರ ಚಿತ್ರ ಗಳ ಪರಿಚಯ ಪ್ರೇಕ್ಷಕರಿಗೆ ದೊರೆಯುತ್ತಿತ್ತು. ಹಿಂದೂ ಸಂಸ್ಕೃತಿಯನ್ನು ರೂಪಿ ಸುವ ಚಿತ್ರಗಳು ಒಂದೆಡೆ, ಬೌದ್ಧಧರ್ಮ, ಪ್ರಸಾರಗಳಿಗೆ ಹೊಂದಿಕೊಂಡ ಚಿತ್ರಗಳು ಒಂದೆಡೆ, ಅಜಂತಾ ಗುಹೆಗಳ ಕೆತ್ತನೆಯ ಕೆಲಸವನ್ನು ನಿರೂಪಿಸುವ ಚಿತ್ರಗಳು ಒಂದೆಡೆ, ಪ್ರೇಕ್ಷಕರ ಮನವನ್ನು ಸೆಳೆಯುತ್ತಿದ್ದವು.

ಭಿನ್ನ ಭಿನ್ನ ಕ್ಷೇತ್ರಗಳಲ್ಲಿ ಪ್ರಾವೀಣ್ಯ ಪಡೆದ ವಿದ್ವಾಂಸರ ವ್ಯಾಖ್ಯಾನಗಳ ಮೂಲಕ, ಚರ್ಚಾಕೂಟ ಪ್ರದರ್ಶನಗಳ ಮೂಲಕ, ಜನತೆಯಲ್ಲಿ ಜ್ಞಾನವನ್ನು ಹರಡುವ ಜ್ಞಾನವರ್ಧಕ ಸಂಘದವರ ಉಪಕ್ರಮ ನಿಜವಾಗಿಯೂ ಸ್ತುತ್ಯವಾದುದು.

* * * * *

## ಅಭಿನಂದನೆಗಳು

ಭಾರತದ ಗಣ್ಯ ಶಿಲ್ಪಿ ಸರ್. ಎಮ್. ವಿಶ್ವೇಶ್ವರಯ್ಯನವರು ೯೧ ವರ್ಷಗಳನ್ನು ದಾಟ, ಹೊಸವರುಷದಲ್ಲಿ ಕಾಲಿಡುತ್ತಿರುವದು ಅಭಿನಂದನೀಯ ! ಭಾರತದ ಅಭಿವೃದ್ಧಿಯ ಬಗ್ಗೆ ಆದರಲ್ಲಿಯೂ ಮೈಸೂರಿನ ಆರ್ಥಿಕ ಪ್ರಗತಿಗಾಗಿ ಅವರು ಕೈಕೊಂಡ ಉಪಕ್ರಮಗಳು ಅಂದು ಫಲಪ್ರದವಾಗಿ ಕಾಣದಿದ್ದರೂ, ಇಂದು ತುಂಬು ಫಲವನ್ನು ನೀಡುತ್ತಲಿವೆ: ಫಲಪ್ರದವಾದ ಒಂದೊಂದು ನೀರಾವರಿ ಯೋಜನೆಯೂ ವಿಶ್ವೇಶ್ವರಯ್ಯನವರ ಹೆಸರನ್ನು ಹೇಳುತ್ತಲಿದೆ.

ಸರ್ ವಿಶ್ವೇಶ್ವಯ್ಯನವರ ಉತ್ಸಾಹ ಇಂದಿಗೂ ತರುಣರನ್ನು ನಾಚಿಸುವಂತಹದು; ದಿನಕ್ಕೆ ಹದಿನೆಂಟು ತಾಸು ಪರಿಶ್ರಮವನ್ನವರು ಮಾಡುವರಂತೆ ! "ಮಿತವಾದ ಆಹಾರ, ಸರಿಯಾದ ಮೃದು ವ್ಯಾಯಾಮ, ಆರು ತಾಸಿಗೆ ಕಡಿಮೆಯಲ್ಲದಷ್ಟು ನಿದ್ರೆ ನನ್ನ ದೀರ್ಘಜೀವನದ ರಹಸ್ಯ" ಎಂದು ಹೇಳಿದರಂತೆ !

ನಾಡಿನ ಈ ಶಿಲ್ಪಿಗೆ ದೇವರು ಇನ್ನೂಹೆಚ್ಚಿನ ಆಯುರಾರೋಗ್ಯಗಳನ್ನು ದಯಪಾಲಿಸಲಿ ಎಂದು ನಮ್ಮ ಪ್ರಾರ್ಥನೆ !



## ಕಂಬನಿ

ಮಹಾತ್ಮಾ ಗಾಂಧೀಜಿಯವರ ಊರುಗೋಲಾಗಿದ್ದ ಶ್ರೀ ಕಿಶೋರಿಲಾಲ ಮಶ್ರೂವಾಲಾರು ಜಗತ್ತಿನ ರಂಗಭೂಮಿಯಿಂದ ಮರೆಯಾದರೆಂಬ ಸುದ್ದಿಯನ್ನು ಕೇಳಿ, ನಾಡಿಗೆ ನಾಡೇ ದುಃಖಪಟ್ಟಿತು. ಶ್ರೀ ಮಶ್ರೂವಾಲಾ ಗಾಂಧೀಜಿಯವರ ಆದೇಶದ ಮೇರೆಗೆ ಕಳೆದ ನಾಲ್ಕೈದು ವರುಷಗಳಿಂದ, 'ಹರಿಜನ' ಪತ್ರಿಕೆಯ ಸಂಪಾದಕರಾಗಿ ದುಡಿಯುತ್ತಲಿದ್ದರು. ಗಿಡದ ಮರೆಯಲ್ಲಿಯೇ ಇದ್ದುಕೊಂಡು ಸುಗಂಧವನ್ನು ನೀಡುವ ಹೂವಿನಂತೆ ಅವರ ಸೇವೆ ! ಅವರೊಬ್ಬ ನಿಷ್ಕಾಮಕರ್ಮಜೀವಿ ! ಪರಮಾತ್ಮನು ಮೃತರ ಆತ್ಮಕ್ಕೆ ಶಾಂತಿಯನ್ನೀಯಲಿ !

# ನಮ್ಮ ಮಾತು

ವೀರಮಾತೆಯ ವಿಚಾರವು ಕೇವಲ ಹೆಣ್ಮಕ್ಕಳ ವಿಕಾಸಕ್ಕಾಗಿಯೇ ಇರುವ ಮೂಲ. ಅದು ರಾಜಕಾರಣದತ್ತ ಹೊರಳುವದು ಸರಿಯಲ್ಲವೆಂದೂ ಇಂತಹ ವಿಷಯಗಳ ಕಡೆಗೆ ಹೆಣ್ಮಕ್ಕಳು ಹೆಚ್ಚು ಲಕ್ಷ್ಯಕೊಡದಿರುವದರಿಂದ 'ವೀರಮಾತೆ'ಯು ಆ ಹಾದಿಯನ್ನು ಹಿಡಿದರೆ ಅದರಿಂದ ಸ್ತ್ರೀಯರಿಗೆ ಯಾವ ಲಾಭವೂ ಇಲ್ಲವಾದ್ದರಿಂದ ಈ ಪತ್ರಿಕೆಯಲ್ಲಿ ಹೆಣ್ಣುಮಕ್ಕಳ ಗೃಹಕರ್ತವ್ಯ, ಮಕ್ಕಳ ಪಾಲನೆ ಪೋಷಣೆ, ಪಾಕಶಾಸ್ತ್ರ ಇವುಗಳಿಗೇ ಹೆಚ್ಚು ಪ್ರಾಧಾನ್ಯತೆ ಕೊಡಬೇಕೆಂದೂ ಕೆಲವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ; ಇದರರ್ಥವೇನು ? ಇಷ್ಟುದಿನಗಳ ವರೆಗೆ ಹೆಣ್ಣು ಮಕ್ಕಳಿಗೆ ಇದೇ ಬೋಧೆಮಾಡಿ ಅವರನ್ನು ಮೂಲೆಗೊತ್ತಿದ್ದಾಯ್ತು. ಇನ್ನಾದರೂ ಅವರು ಸ್ವಲ್ಪ ಮುಂದೆ ಬರಬೇಕೆಂಬ ವಿಚಾರ ನಡೆಸಿರುವಾಗ ತಿರುಗಿ ಅವರನ್ನು ಬದಿಗೊತ್ತುವದು ಯಾವ ನ್ಯಾಯ ? ರಾಜಕಾರಣದಲ್ಲಿ ಭಾಗವಹಿಸುವದೇ ಅವರ ಅಂತಿಮ ಗುರಿಯೆಂದೂ ನಾವು ತಿಳಿದಿಲ್ಲ. ಆದರೆ ರಾಜಕಾರಣಕ್ಕೂ ಸ್ತ್ರೀಯರಿಗೂ ಸಂಬಂಧವೇ ಇಲ್ಲವೇ ಹೇಗೆ? ಇಂದು ಸ್ತ್ರೀಯು ರಾಜಕಾರಣದ ಬೆನ್ನು ಹತ್ತಿದ್ದರೂ, ರಾಜಕಾರಣವೇ ಅವಳ ಬೆನ್ನುಹತ್ತಿ ಬರುತ್ತಿದೆ. ಪ್ರಜಾಪ್ರಭುತ್ವ ರಾಜ್ಯದಲ್ಲಿ ಹೀಗಾಗುವದು ಅನಿವಾರ್ಯ.

* * * * *

'ವೀರಮಾತೆ'ಗೆ ಲೇಖಗಳನ್ನು ಕಳಿಸುವವರು ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ, ಎಡಬದಿಗೆ ಸ್ಥಳವನ್ನು ಬಿಟ್ಟು ಬರೆಯಬೇಕು ; ಇಬ್ಬದಿಗೂ ಬರೆದರೆ ಅಸಂಖ್ಯ ಲೇಖಗಳಲ್ಲಿ ಅವನ್ನು ಓದುವದೇ ಕಷ್ಟವಾಗಿ ಬಿಡುತ್ತದೆ.

ಹೋದಸಲದ ಸಂಚಿಕೆಯಲ್ಲಿ ಸೂಚಿಸಿದಂತೆ, ನಮ್ಮ ಬಿನ್ನಹಕ್ಕೆ ಮಾನ್ಯತೆ ಕೊಟ್ಟು ಅನೇಕರು ಚಂದಾಹಣವನ್ನು ಮನಿಯಾರ್ಡರಿನಿಂದ ಕಳಿಸಿಕೊಟ್ಟಿದ್ದಾರೆ; ಅವರಿಗೆ ನಾವು ಕೃತಜ್ಞರಾಗಿದ್ದೇವೆ.

ಈ ಸಲ ಸಂಚಿಕೆಗೆ ತಮ್ಮ 'ಪರಿಚಯ'ವನ್ನು ಮಾಡಿಕೊಟ್ಟ ಶ್ರೀಮತಿ ಪ್ರಮಿಲಾಬಾಯಿ ದೇಶಪಾಂಡೆಯವರಿಗೂ, ಮೊಂಟೆಸೊರಿ ಶಿಕ್ಷಣದ ರಹಸ್ಯವನ್ನು ಹೇಳಿದ ಶ್ರೀಮಾನ್ ಬಬಲೇಶ್ವರ ಅವರಿಗೂ ನಮ್ಮ ಕೃತಜ್ಞತೆಗಳು.

ನಮ್ಮ 'ವೀರಮಾತೆ' ಸಂಚಿಕೆಯ ವಿಮರ್ಶೆಯನ್ನು ಮಾಡಿದ ಎಲ್ಲ ಸಂಪಾದಕ ಮಹಾಶಯರಿಗೂ ವೀರಮಾತೆಯು ಉಪಕೃತಳಾಗಿದ್ದಾಳೆ.

---

# ಪಾತರಗಿತ್ತಿಯ ಉಪದೇಶ

( ‘ ಒಂದು ಕಪೋತವು ’ ಎಂಬಂತೆ )

ಲೇಖಕ :— ಶ್ರೀ. ಚಿ. ವ. ಜಯತೀರ್ಥ. ಚಿಕ್ಕಮಗಳೂರು.

ಮಾನವನು ತನ್ನ ಎಷ್ಟೋ ವರ್ಷಗಳ ಆಯುಷ್ಯದಲ್ಲಿ ಸಹ ಸುಖ ಆನಂದಗಳ ಸವಿಕಾಣುವ ಸರಳ ಹಾದಿ ಕಾಣದೆ ತನ್ನ ಅಮೌಲ್ಯವಾದ ಜೀವನವನ್ನು ದೂಷಿಸಿಕೊಳ್ಳುತ್ತಾನೆ. ಆದರೆ ಸಣ್ಣ ಹುಳುವಾದ ಪಾತರಗಿತ್ತಿಯು ತನ್ನ ಎರಡೇ ದಿನಗಳ ಆಯುಷ್ಯದಲ್ಲಿ ಸಹಾ ಸವಿಯಾದ ಮಧುವನ್ನು ಹುಡುಕುತ್ತ, ಆನಂದದಿಂದ ದಿನಗಳೆಯುತ್ತದೆ. ಆಯುಷ್ಯದ ಪ್ರಮಾಣವು ಎಷ್ಟೇ ಇದ್ದರೂ ಸಹ ಅದರಲ್ಲೇ ಹೊಸತನ್ನು ಹುಡುಕಬೇಕಾದದ್ದು ಜೀವಿಗಳ ಕರ್ತವ್ಯ, ಜಗತ್ತಿನ ಕಲ್ಯಾಣ. ಆತ್ಮಕ್ಕೆ ಆನಂದ.

೧

ಹೂವ್ವಿಂದ ಹೂವ್ವಿಗೆ
ಹೂವ್ವಿಂದ ಹೂವ್ವಿಗೆ
ಮಧುವನ್ನು ಅರಸುತ್ತ ಹಾರುತಲಿದ್ದ
ಪಾತರಗಿತ್ತಿಯು ಉಸುರಿತು “ ಏಳಯ್ಯ
ಏಳಯ್ಯ ಮೂರ್ಖನೆ ಏಳೇಳು ”

೨

“ ಏಳಯ್ಯ ಏಳಾ
ಏಕಿಂತು ಕುಳಿತಿಹೆ
ಹೇಳಯ್ಯ ಏನಾಯ್ತು ಹೇಳಯ್ಯ ನೀ”
ನಾನಂದೆ “ ಕೀಟ ನಿನಗರಿವಾದೀತೆ
ಮಾನವನನಗುಂಟು ಬಲು ಚಿಂತೆ ”

೩

“ ಜೀವನವೆನಗೊಂದು
ಬೇಸರ ಮಯವಾಗಿ
ಸಾವನೆ ಬಯಸುತ್ತ ಕಾದಿರುವೆ ನಾ
ಬರಿಕಷ್ಟ ತೃಣಸುಖವಿಲ್ಲವು ಬಾಳೊಳು
ದುಃಖವೆ ಹೊರತು ಮತ್ತೇನಿಲ್ಲ ”

೪

" ಮೂರ್ಖ ಮನುಜಾ ಕೇಳು
ಕ್ಲೇಶಕ್ಕೆ ಬೆದರುತ್ತ
ಬಾಳನ್ನು ಎಂದೆಂದು ದೂಷಿಸಬೇಡ"
ಪಾತರಗಿತ್ತಿ ಹೀಗೆಂದು ಉಸುರಿತು
" ಮೂರ್ಖನೆ ಬಾಳಲ್ಲಿ ಸುಖವುಂಟು "

೫

" ಬಾಳಲಾರದ ಹೇಡಿ
ಬಾಳನ್ನು ಹಳಿಯುವಿ
ಹರಿಸಯ್ಯ ನಿನದಿಟ್ಟಿ ಇಗೋ ಇತ್ತಿತ್ತ
ಕಂಡೆಯ ನವಿರಾದ ಬಣ್ಣದ ರೆಕ್ಕೆಯ
ಕಂಡೆಯೇನೋ ನನ್ನ ಹಾರಾಟ ?"

೬

" ಮೊಟ್ಟೆಯ ನೊಡೆದು ನಾ
ಹೊರಬಂದೆ ಹುಳುವಾಗಿ
ಈಗಿನಂತಿರಲಿಲ್ಲ ಆವಾಗ ನಾ
ಮಲಗಿಮತ್ತೊಮ್ಮೆ ಹೊರಬಿದ್ದ ಕಾಲಕೆ
ಬಣ್ಣ ಬಣ್ಣದ ರೆಕ್ಕೆ ಮೂಡಿತ್ತು"

೭

" ಇಂದು ತಾನೆ ನನಗೆ
ಹೊಸ ಜನ್ಮ ಬಂತೈ
ನಾಳೆಯೆಂಬೊದೆನ್ನ ಕಡೆದಿನವಯ್ಯ
ಇಂತಾದರು ನಾನು ಎದೆಗೆಡಲಾರೆನು
ಹೇಡಿ ಮಾನವನೆ ನಿನ್ನಂತೆ"

೮

ಹುವ್ವಿಂದ ಹುವ್ವಿಗೆ
ಹುವ್ವಿಂದ ಹುವ್ವಿಗೆ
ಮಧುವನ್ನು ಅರಸುತ್ತ ಪಾತರಗಿತ್ತಿ
ದೂರಕ್ಕೆ ಹೋಯಿತು ಹಾಡುತ್ತ ಹಾಡೊಂದು
ಆತ್ಮಕೆ ನೀಡಿ ಹೊಸಬೆಳಕೊಂದು.

# ಮಧ್ಯಮ ತರಗತಿಯ ಕುಟುಂಬಗಳ ಬಗ್ಗೆ ಒಂದು ಅಗತ್ಯದ ಸೂಚನೆ

●

ಲೇಖಕ:— ಬಿ. ನಾ. ಬೈಚವಾಳ.

ಮಧ್ಯಮ ತರಗತಿಯ ಕುಟುಂಬಗಳು ಎಂದರೆ ಜೀವನದ ಮಟ್ಟದಲ್ಲಿ ಮೇಲೂ ಅಲ್ಲ, ಕೆಳಗೂ ಅಲ್ಲ, ನಡುವಿನ ಅವಸ್ಥೆಯಲ್ಲಿ ಇರುವ ಕುಟುಂಬಗಳು. ಹೊಟ್ಟೆಬಟ್ಟೆಗಳನ್ನೇ ಕಷ್ಟಪಟ್ಟಾದರೂ ದೊರಕಿಸಿಕೊಂಡು ತಿಂಗಳಿನ ಆದಿ ಅಂತ್ಯಗಳ ಆದಾಯ ವೆಚ್ಚಗಳನ್ನು ಬಾಯಿಗೂಡಿಸಿಕೊಂಡು ಹೊಳೆಯ ನೀರು ಹೊಳೆಗೆ ಹಾಕಿ ದಂಡೆಯ ಮೇಲೆ ನಿಂತಿರುವ ಜನಸಮುದಾಯ ಎಂದು ಸಾಮಾನ್ಯವಾಗಿ ಅರ್ಥ ಮಾಡಿಕೊಳ್ಳಬಹುದು. ಅವರ ದೈನಂದಿನ ಜೀವನವೇ ಹೀಗಿದೆ. ಜಾತಿಧರ್ಮಗಳ ಬಗೆಯನ್ನು ಅನುಲಕ್ಷಿಸದೆ ಇಲ್ಲಿ ಕೇವಲ ಆರ್ಥಿಕ ಸ್ಥಿತಿಯನ್ನಷ್ಟೇ ಗಮನಿಸಲಾಗಿದೆ.

ಮನೆಯ ಯಜಮಾನನು ಯಾವುದಾದರೊಂದು ನೌಕರಿ ಚಾಕರಿ ಮಾಡಿಕೊಂಡು ಅಥವಾ ಉದ್ಯೋಗ ವ್ಯವಹಾರಗಳನ್ನು ಸಾಗಿಸಿ ಕುಟುಂಬದ ಜೀವನಕ್ಕೆ ಅವಶ್ಯವಿರುವ ಹಣವನ್ನು ಗಳಿಸಬೇಕು. ತಾಯಿಯು ಮನೆಗೆಲಸದಲ್ಲಿ ತೊಡಗಿ, ಮಕ್ಕಳುಮರಿಗಳ ವಿದ್ಯಾಭ್ಯಾಸದಲ್ಲಿಯೋ ಇನ್ನಾವದೋ ಚಿಕ್ಕಪುಟ್ಟಕೆಲಸಗಳಲ್ಲಿಯೊ ತೊಡಗುವರು. ಮಕ್ಕಳು ತಾಯ್ತಂದೆಗಳಿಗೆ ನೆರವು ನೀಡುವರು.ಆದರೆ ಮುಖ್ಯ ಪ್ರಶ್ನೆಯಾದ ಆರ್ಥಿಕ ದೃಷ್ಟಿಯಲ್ಲಿ ಅವರಾರೂ ಅವನಿಗೆ ಪ್ರತ್ಯಕ್ಷ ನೆರವು ಕೊಡಲಾರರು. ಈ ಬಗೆಯ ಸಾಂಪ್ರದಾಯಿಕ ಜೀವನವು ಬಹುಕಾಲದಿಂದ ನಡೆದು ಬಂದಿದ್ದು ಇದರಲ್ಲಿ ಯೋಗ್ಯ ಮಾರ್ಪಾಡು ಮಾಡಬೇಕೆಂಬ ಭಾವನೆಯೂ ನಮ್ಮಲ್ಲಿ ಇನ್ನೂ ಸಾಕಷ್ಟು ಜಾಗೃತವಾಗಿಲ್ಲ. ಇದರಿಂದ ಎಷ್ಟೋ ಕುಟುಂಬಗಳಲ್ಲಿ ಅನಿರೀಕ್ಷಿತ ಅನರ್ಥ ಪರಂಪರೆಗಳುಂಟಾಗುವದನ್ನು ನಾವು ಕಾಣುತ್ತೇವೆ, ಕೇಳುತ್ತೇವೆ. ಸಾವು ನೋವು ಅಪಘಾತ ಅನಾಹುತಗಳು ಪ್ರಪಂಚದ ಧರ್ಮ. ಅವನ್ನು ಯಾರೂ ಮೀರಿ ನಡೆಯಲಾರರು. ಆದುದರಿಂದ ಯಜಮಾನನು ಯಾವದೇ ಕಾರಣದಿಂದ ಇಂಥ ಆಪತ್ತಿಗೆ ಗುರಿಯಾದರೆ ದಂಡೆಯ ಮೇಲೆನಿಂತ ಇಡಿಯ ಕುಟುಂಬವು ಹೊಳೆಯಲ್ಲಿ ಮುಳುಗಿ ಹೋಗುವದು. ಇದಕ್ಕೇನು ಉಪಾಯ ? ಇಂಥ ಆಪತ್ತಿನಿಂದ ಅಂಥ ಕುಟುಂಬಗಳನ್ನು ಉಳಿಸುವ ಸಾಧನಗಳೇನು ? ಇವನ್ನು ಯಾರಾದರೂ ನಿರ್ದೇಶಿಸಿ ಹೇಳಬಹುದೇ ?

ಯಜಮಾನನು ಹಣ ಗಳಿಸಿ ಕುಟುಂಬ ಸಾಗಿಸುವಾಗ ಇತರರು ಅವನಿಗೆ ಹೇಗೆ ನೆರವಾಗಬಹುದು ? ಮನೆಗೆಲಸಗಳು ಅನವಶ್ಯಕ ಅಥವಾ ಅಪ್ರಯೋಜಕವೆಂದು ನಮ್ಮ ಅಭಿಪ್ರಾಯವಲ್ಲ. ಅವುಗಳ ಜೊತೆಗೆ ಕುಟುಂಬದ ಆರ್ಥಿಕ ಗಳಿಕೆಯಲ್ಲಿಯೂ ಮಿಕ್ಕವರು ಆ ಯಜಮಾನನಿಗೆ ನೆರವು ಕೊಡಬಹುದೇ ? ಎಂಬದೇ ನಮ್ಮ ಮುಂದಿನ ಮುಖ್ಯ ಪ್ರಶ್ನೆ.

"ತಂದು ಹಾಕುವ ಗಂಡ,ತಿಂದು ಹಾಕುವ ಹೆಂಡತಿ,ಮಕ್ಕಳು,""ಹೆಂಡತಿ ಗಂಡನ ಜೀವ ಹಿಂಡುತಿ"ಮುಂತಾದ ಕುಚೇಷ್ಟೆಯ ಮಾತುಗಳು ಸಮಾಜ ಜೀವನದಲ್ಲಿ ಕೇಳಿಬರುತ್ತಿವೆ.ಮಧ್ಯಮ ವರ್ಗದ ಕುಟುಂಬದಲ್ಲಿಯೇ ಹೆಚ್ಚಾಗಿವೆ, ಇಂತಹ ಮಾತುಗಳು ಹೆಣ್ಣುಮಕ್ಕಳು ದ್ರವ್ಯಾರ್ಜನೆಯ ಕಾರ್ಯದಲ್ಲಿ ಪ್ರತ್ಯಕ್ಷ ಭಾಗ ವಹಿಸುವದಿಲ್ಲವೆಂಬದೇ ಈ ಮಾತಿಗೆ ಸರ್ವಸಾಮಾನ್ಯವಾದ ಅರ್ಥವೆಂದು ಗ್ರಹಿಸಬೇಕು ಹೆಣ್ಣುಮಕ್ಕಳಿಗೆ ತಕ್ಕ ಶಿಕ್ಷಣವಿಲ್ಲದೆ ಹಳೆಯ ಸಂಪ್ರದಾಯ ಹಾಗು ರೂಢಿ, ಆಚಾರಗಳು ವ್ಯವಹಾರ ಇವುಗಳ ಜಾಲದಲ್ಲಿ ಸಿಲುಕಿ ಅವರು ತಮ್ಮ ದಿನದ ಜೀವನಾವಶ್ಯಕ ಕಾರ್ಯಗಳನ್ನು,ಅಡುಗೆ ನೀರು ಕಸಮುಸರೆ ಇವನ್ನು, ಬೆಳಿಸಿ ಹಬ್ಬಿಸಿ ಇಡಿಯದಿನವನ್ನು ಅದರಲ್ಲಿಯೇ ಕಳೆಯುವರು; ಇಲ್ಲವೆ ಹಾಳುಹರಟೆ ಅನವಶ್ಯಕ ಆಡಂಬರದ ಆಚರಣೆ ಇವುಗಳಲ್ಲಿ ತೊಡಗಿ ಮುಂದಿನ ಅರಿವಿಲ್ಲದೆ ದಿನಕಳೆಯುವರು. ಇದನ್ನು ಸರಿಯಾಗಿ ನಿರೀಕ್ಷಣೆ ಮಾಡಿ ಗೃಹಕೃತ್ಯಗಳನ್ನು ಸಂಕ್ಷೇಪಿಸಿ ಸಮಯವನ್ನು ಉಳಿಸಿಕೊಂಡು ಅದನ್ನು ಕುಟುಂಬದ ಆರ್ಥಿಕ ಸಮಸ್ಯೆಯನ್ನು ಬಿಡಿಸುವ ಕಾರ್ಯಕ್ಕೆ ವಿನಿಯೋಗಿಸುವದು ಇಂದಿನ ಕಾಲದಲ್ಲಿ ಅಗತ್ಯವಾಗಿದೆ.

ಶ್ರೀಮಂತರು ಏನುಮಾಡಿದರೂ ಚೆಂದ. ಅವರನ್ನು ಅನುಕರಣೆ ಮಾಡುವ ಮಧ್ಯಮವರ್ಗದ ಕುಟುಂಬಗಳು ದಿನದಿನಕ್ಕೆ ಕೆಳಗಿಳಿಯ ಹತ್ತಿವೆ ಅವರು ಇನ್ನೂ ಕೆಳತರಗತಿಯ ಜನರ ಜೀವನ ಕ್ರಮವನ್ನು ಅವಲೋಕಿಸಬೇಕು. ಬಡವನಾದ ಗಂಡನು ಕೂಲಿ ಕುಂಬಳಿ ಮಾಡುವನು. ಅವನ ಹೆಂಡಿರು ಮಕ್ಕಳು ತಮ್ಮ ಮನೆಗೆಲಸಗಳನ್ನು ಮುಗಿಸಿಕೊಂಡು ಅವನ ಜೀವನ ಸಾಧನ ಕಾರ್ಯದಲ್ಲಿ ನೆರವಾಗುವರು. ಮಧ್ಯಮ ವರ್ಗದವರು ಈ ಬಡ ಕುಟುಂಬದವರನ್ನೇಕೆ ಅನುಸರಿಸಬಾರದು ? ಆಡಂಬರದ ಆಚಾರಗಳನ್ನೇಕೆ ಬಿಡಬಾರದು ? ಇದೇ ನಮ್ಮ ಪ್ರಶ್ನೆ.

ಒಮ್ಮೆಲೆ ಈ ಕಾರ್ಯ ನಡೆಯಲಾರದು. ಹೆಣ್ಣುಮಕ್ಕಳಿಗೆ ಆ ಬಗೆಯ ಶಿಕ್ಷಣಬೇಕು. ಹೀಗೆ ಹೆಣ್ಣುಮಕ್ಕಳನ್ನು ಅವರ ಗೌರವಕ್ಕೆ ಕುಂದು ಬರದಂತೆ ತಕ್ಕ ಗೃಹ ವ್ಯವಸಾಯ( Cottage Industry)ಗಳಲ್ಲಿತೊಡಗಿಸುವ ಸಾಮೂಹಿಕ ಕಾರ್ಯಕಲಾಪಗಳು ನಡೆಯಬೇಕು. ಹೊತ್ತು ಉಳಿಸಿ ನೂಲು ತೆಗೆಯಿರಿ ಎಂದು ಹೇಳುವಂಥ ಸಾಮಾನ್ಯ ಕೆಲಸಕ್ಕೂ ಇದುವರೆಗೆ ಯಾರ ಲಕ್ಷ್ಯವೂ ಆಳವಾಗಿ ಇಳಿದಿಲ್ಲ. ದಿನದಿನಕ್ಕೆ ಪರಿಸ್ಥಿತಿ ಕೆಡುತ್ತ ನಡೆದಿದೆ. ಅವರು ಕೊಂಡುಕೊಳ್ಳುವ ವಸ್ತುಗಳ ಬೆಲೆ ಒಂದಕ್ಕೆ ನಾಲ್ಕಾಗಿದೆ, ಆರಾಗಿದೆ, ಹತ್ತಾಗಿದೆ.ಆ ಮಾನದಿಂದ ಅವರ ಉತ್ಪನ್ನ

ಬೆಳೆದಿಲ್ಲ. ಕೆಳತರಗತಿಯವರ ಕೂಲಿ ಕುಂಬಳಿ ಒಂದಕ್ಕೆ ಎರಡು ಮೂರರಷ್ಟಾದರೂ ಹೆಚ್ಚಿದೆ ಆದ್ದರಿಂದ ಈಗಲೇ ಎಚ್ಚತ್ತು ಹೆಣ್ಣುಮಕ್ಕಳಿಗೆ ತಕ್ಕ ಉದ್ಯೋಗ ವ್ಯವಸಾಯಗಳನ್ನು ಒದಗಿಸಿಕೊಟ್ಟು, ಅದಕ್ಕೆ ಅವಶ್ಯವಿರುವ ಶಿಕ್ಷಣಕೊಟ್ಟು, ಮಧ್ಯಮವರ್ಗದ ಕುಟುಂಬಗಳನ್ನು ಬದುಕಿಸುವ ಯೋಜನೆಯನ್ನು ಸುಧಾರಕರು ಬೇಗನೆ ಕೈಕೊಳ್ಳಲಿ ಎಂದು ಬಿನ್ನವಿಸುವೆವು.

---

# ಜೀವನ

**ಲೇಖಕಿ :— ಸರೋಜಿನಿ ಮಹಿಷಿ.**

(೧)

" ಈಗಿನ ಹುಡುಗರಿಗೆ ಬುದ್ಧಿಯೇ ಕಡಿಮೆ. ತಮಗೂ ತಿಳಿಯುವಂತಿಲ್ಲ; ಹಿರಿಯರು ಹೇಳಿದ್ದನ್ನೂ ಕೇಳುವಂತಿಲ್ಲ. ಯಾರ್ಯಾರ ಮಾತನ್ನೋ ಕೇಳಿಕೊಂಡು ಏನೇನನ್ನೋ ತಲೆಯಲ್ಲಿ ತುಂಬಿಕೊಳ್ಳುತ್ತವೆ ತೀರಿತು. ಮ್ಯಾಟ್ರಿಕ್ಕಿನಲ್ಲಿ ನಪಾಸಾದರೆ ಆದಿ; ಕಲಿತಾದರೂ ನಮಗೇನು ಮಾಡುವದಿದೆ ? ನಾನು ನಾಲ್ಕನೇ ಇಯತ್ತೆಯಲ್ಲಿಯೇ ನಾಪಾಸಾದೆ, ಸುಮ್ಮನೆ ಕಷ್ಟಪಟ್ಟು, ಮೈಯ್ಯೊಳಗಿನ ರಕ್ತವನ್ನೆಲ್ಲ ಸುಟ್ಟುಕೊಂಡು ಯಾತಕ್ಕೆ ಓದುವದು? ಇಷ್ಟೇ ಸಾಕು, ಬಿಟ್ಟು ಬಿಡು" ಎಂದು ನಮ್ಮ ಹಿರಿಯರು ಹೇಳಿದರು; ನಾನು ಅವರ ಮಾತನ್ನು ಉಗುಳು ಹಾಕಿ ದಾಟಲಿಲ್ಲ; ಶಾಲೆ ಬಿಟ್ಟು ಬಿಟ್ಟೆ; ನಾನು ನಾಲ್ಕು ಇಯತ್ತೆಯ ವರೆಗೆ ಓದಿದ್ದರೆ ನೀನು ಮ್ಯಾಟ್ರಿಕ್ಕಿನ ವರೆಗೆ ಓದ್ದಿದ್ದೀ, ನಿಮ್ಮಪ್ಪನಿಗಿಂತ ಒಂದು ಕೈ ಹೆಚ್ಚೇ ಆಗಿದ್ದೀ; ಇನ್ನು ಶಾಲೆಬಿಟ್ಟು ಬಿಡು; ಹೆಚ್ಚಿನ ಓದಿನ ಹವ್ಯಾಸಕ್ಕೆ ಬೀಳಬೇಡ" ಎಂದು ಅದೇಷ್ಟೊ ಸಲ ಹೇಳಿದೆ; ಒಳ್ಳೇ ಮಾತಿನಿಂದ ಹೇಳಿ ನೋಡಿದೆ, ಅವನೇನು ಹಾದಿಗೆ ಬರುವ ಲಕ್ಷಣವಿಲ್ಲ; ಹೀಗಾಗಿ ಒಂದೆರಡು ಸಲ ಸಿಟ್ಟಿಗೆದ್ದು ಬೈಯ್ದು ನೋಡಿದೆ; ಹೀಗೆಲ್ಲಾ ವರುವರುಷವೂ ದೇವರಿಗೆ ಮುಡಿಪಿಟ್ಟಂತೆ ಶಾಲೆಗೆ ಹಣ ಬಡಿದರೆ ಏನು ಬಂದಂತಾಯಿತು ? ನನ್ನ ಮಾತು ಕೇಳುವದಾದರೆ ಇನ್ನುಮೇಲೆ ನೀನು ಮನೆಯಲ್ಲಿರು, ಇಲ್ಲದಿದ್ದರೆ ನಿನ್ನ ಮನಬಂದಲ್ಲಿಗೆ ಹೋಗು ಎಂದು ಸ್ಪಷ್ಟವಾಗಿ ಒಂದು ದಿನ ಹೇಳಿಬಿಟ್ಟೆ; ನಾನು ಹೇಳುವದೇ ತಡ – ಈಗಿನ ಹುಡುಗರ ಮನಸ್ಸಿನ ಧೈರ್ಯವಾದರೂ ಎಷ್ಟುನೋಡಿ ! — ಮನೆ ಬಿಟ್ಟು ಹೊರಟೇ ಬಿಟ್ಟ ಭೂಪ; ಹೋಗಲಿ, ಎಲ್ಲಿ ಹೋಗುವನೋ ನೋಡೋಣ, ಎಂದು ನಾನೂ ಸುಮ್ಮನೇ ಇದ್ದೆ.

ಮಗನನ್ನು ಮನೆಬಿಟ್ಟು ಹೊರಗೆ ಕಳಿಸಿದೆ; ಆದರೆ ತಂದೆಯ ಕರಳು ಒಳಗೊಳಗೇ ಮಿಡಿಯುತ್ತಿತ್ತು. ಮನೆಯಲ್ಲಿ ಇವಳೂ ಕೇಳಿದಳು; ಸೂಟಿಗಾಗಿ

ನಾಲ್ಕುದಿನ ತನ್ನ ಕಕ್ಕನ ಮನೆಗೆ ಹೋಗಿದ್ದಾನೆ ಎಂದು ಅವಳನ್ನೂ ಸಮಾಧಾನ ಪಡಿಸಿದೆ. ಆದರೆ ನನ್ನ ಮನಸ್ಸಿಗೆ ಮಾತ್ರ ನೆಮ್ಮದಿಯಿಲ್ಲ; ಭೆಟ್ಟಿಯಾದ ಅವನ ಗೆಳೆಯರನ್ನೆಲ್ಲ ಅವನ ಬಗ್ಗೆ ಸೂಕ್ಷ್ಮರೀತಿಯಿಂದ ಕೇಳಿಕೊಳ್ಳುತ್ತಿದ್ದೆ: ಆದರೆ ಯಾರಿಂದಲೂ ಏನೂ ದೊರೆಯಲಿಲ್ಲ ಹೀಗೆಯೇ ಎರಡು ದಿನಗಳುರುಳಿದ್ದವು, ಮೂರನೆಯ ದಿನವೂ ಉರುಳಿತು.

ನಾಲ್ಕನೆಯ ದಿನ ಬೆಳಗಿನ ಬೆಳಕು ಮತ್ತೆ ಮೂಡಿತು; ಅದಕ್ಕಾತರ ಚಿಂತೆ? ಈ ಭೂಪನನ್ನು ಹುಡುಕಲು ಹತ್ತಿರದ ಹಳ್ಳಿಯಲ್ಲಿದ್ದ ಅವನ ಗೆಳೆಯನ ಮನೆಗೆ ಹೋಗಲೋ ಅಥವಾ ಅವನ ಕಕ್ಕನ ಮನೆಗೇ ಹೋಗಿ ನೋಡಲೋ ಎಂದು ಯೋಚನೆಯಲ್ಲಿದ್ದೆ ನಾನು: ಅಷ್ಟರಲ್ಲಿಯೇ ನಮ್ಮ ನೆರೆಹಳ್ಳಿಯ ರೈತ ಬಂದ– ಅವನಿಗೊಳ್ಳೇ ಆಶ್ಚರ್ಯ– ಬಂದವನೇ ಹೇಳತೊಡಗಿದ "ಏನ್ರೀ ದಣ್ಯಾರ, ದರ ವರಸ ನೀವು ಬರೋದು– ಈ ಬ್ಯಾರಿಗೆ ಸಣ್ಣ ದಣೇರ್ನ ಒಳೇ ಕಳಿಸಿಕೊಟ್ವೇರಿ ? "
ಅವನ ಮಾತನ್ನು ಕೇಳುತ್ತಲೇ ನನಗೆ ಎಲ್ಲಿಲ್ಲದ ಆನಂದವಾಯಿತು; ನಾನೂ ಮಾತು ಮುಂದುವರಿಸಿದೆ, "ಹೌದು ಗೌಡ, ನನಗೂ ದಿನ ಆಗ್ತ ಬಂದವೇನಪಾ ಮತ್ತ ಅವಗರ ಎಂದ ತಿಳೀಬೇಕು ? ಪರೀಕ್ಷಾ ಆಗಿ ಮನ್ಯಾಗ ಕೂತಿದ್ದ ಹ್ಯಾಂಗಾದರೂ; ಅತ್ತಲಾಗ ಇತ್ತಲಾಗ ಇಷ್ಟ ಆಡ್ಡಾಡಿ ದೇಖರೇಕಿ ಮಾಡಿಕೊಂಡು ಬರವಲ್ಲನ್ಯಾಕ ಅಂತ ನಾನ ಕಳಿಸಿಕೊಟ್ಟನೆಪಾ

ಗೌಡನೂ ಹೇಳತೊಡಗಿದ; ಬೇಶ್ಯಾತ ಬಿಡ್ರಿ, ಸಣ್ಣ ದಣೇರ ಸುದ್ದ ನಿಮ್ಮಂಗ ನೋಡ್ರಿ; – ಮತ್ತ ವ್ಯಾಗ ದೊಡ್ಡ ಪರೀಕ್ಸೆ ಕೊಟ್ವಾರಲ್ರೆ ?

" ಹೌದು, ಈಸರೆ ಮ್ಯಾಟ್ರಿಕ್ಕಕ್ಕ ಕೂತಾನ "

" ಬಲೆ, ಬಲೆ, ಆತೆಪ್ಪಾ ಇನ್ನ ಸಣ್ಣ ದಣೇರಿಗೆ, ಒಂದು ದೋಡ ಮನೆ ತನದ ಹೆಣ್ಣ ತಂದ ಬಿಡೆಪ್ಪಾ. ನಿಮ್ಮಂದ್ಯಾಗೇನ, ಬೇಡಿದಷ್ಟ ವರದಕ್ಸಿಣೆ ಕೊಟ್ಟು ನಾ ಮುಂದ ನೀ ಮುಂದ ಅಂತ ಬರತಾರು ಈ ವರಸ ಮದಿವಿ ಮಾಡಿಬಿಡೆಪ್ಪ "

" ನಾನೂ ಅದವಿಚಾರದಾಗ ಇದ್ದೀನಿ ಗೌಡ, ಈ ವರುಸ ಮದಿವಿ ಮಾಡಿಬಿಡಬೇಕು ಅಂತ ಮಾಡೀನಿ ನಾನು ಗೌಡನೊಂದಿಗೆ ಮಾತಾಡುತ್ತಿದ್ದರೂ, ಮಗನು ಎಲ್ಲಿಯೂ ಹೋಗದೆ ಹೊಲವನ್ನು ನೋಡಲು ಹೋಗಿರುವನಲ್ಲ, ಎಷ್ಟೊಂದು ವಿವೇಕಿಯಾಗಿದ್ದನಲ್ಲ ಎಂದು ನನಗೆ ಒಳಗೊಳಗೆ ಅಪರಿಮಿತ ಆನಂದ. ಗೌಡ ಹಿಂತಿರುಗಿ ಹೋಗುವಾಗ ನಾನೂ ಅವನ ಜೊತೆಗೆ ಹೋಗಿ, ಮಗನ ವಿವೇಕಕ್ಕೆ ತಲೆ ದೂಗಿ ಅವನನ್ನು ಮನೆಗೆ ಕರೆದುಕೊಂಡು ಬಂದೆ ಜೀವನದಲ್ಲಿಯೇ ಸೋಲನ್ನು ಕಾಣದ ನಾನು ಮಗನಿಂದೆಲ್ಲಿ ಸೋಲು ಪಡೆಯುವೆನೋ ಎಂದು ಧೈರ್ಯಗುಂದಿದ್ದೆ; ಆದರೆ ಅಲ್ಲಿಯೂ ಗೆಲವು.

ಮಗನಿದ್ದರೆ; ಇಂತಹ ಮಗನಿರಬೇಕು– ರಾಮಚಂದ್ರನಂತಹ ಮಗ; ಸುಮ್ಮನೆ ತನ್ನ ಹಟವನ್ನೇ ಸಾಧಿಸುತ್ತೇನಂದರೆ ಏನು ಬಂತು ? ಜೀವಮಾನವೆಲ್ಲ

ಹಾಳು; ಉದ್ದಕ್ಕೆ ಒಂದು ಹೊರೆಪುಸ್ತಕಗಳನ್ನೋದಿದರೆ ಜೀವನದಲ್ಲೇನಾದರೂ ಸುಖ ಸಿಗುವದೇ ? ಆ ಹೊರೆ ಪುಸ್ತಕಗಳನ್ನೋದಿ ಮತ್ತೆ ಒಬ್ಬರ ಆಳಾಗಿ ಬರ ಕೊಳ್ಳಬೇಕು. ಅವರು ಹೇಳಿದ್ದನ್ನ 'ಜೀ' ಎಂದು ಮಾಡಬೇಕು; ರಾತ್ರಿ ಹಗಲು ದುಡಿಯಬೇಕು; ಸುಖ ಎನ್ನುವದು ಕನಸಿನಲ್ಲಿಯೇ ಇವರಿಗೆ; ಇದನ್ನೆಲ್ಲ ಯಾರು ಮಾಡಹೇಳಿದ್ದಾರೆ ? ಉಳಿದವರಿಗೆ ಇದು ಬಿಡಲಾರದ ಕರ್ಮವಾದರೆ ಇವನಿಗೂ ಬಿಡಲಾರದ ಕರ್ಮವೇ ? ಮನೆಯಲ್ಲಿ ಕುಳಿತು ತಿಂದರೂ ತೀರದಷ್ಟು ಅಪ್ಪ ಗಳಿಸಿಟ್ಟ ಹೊನ್ನು ಬಿದ್ದಿದೆ; ಹೊರೆ ಪುಸ್ತಕ ಓದಿ ಎಷ್ಟು ಗಳಿಸುತ್ತಾರೋ ಈ ಹುಡುಗರು ! ಹೆಂಡರು ಮಕ್ಕಳ ಹೊಟ್ಟೆಗಾದರೂ ಸಾಲುತ್ತದೋ ಇಲ್ಲವೋ ! ಆದರೆ ಕೂತಲ್ಲಿಯೇ ಬಡ್ಡಿಯವ್ಯವಹಾರ ಮಾಡಿ, ನಮ್ಮಪ್ಪ ಗಳಿಸಿದ್ದರ ದುಪ್ಪಟ್ಟು ರಕಮು ನಾನು ಗಳಿಸಿದ್ದೇನೆ. ಈ ನನ್ನ ಜೀವಮಾನದಲ್ಲಿಯೇ! ಬೇಕಾದಷ್ಟು ವರದಕ್ಷಿಣೆ ಕೊಟ್ಟು ಮಗಳ ಮದುವೆ ಮಾಡಿದ್ದೇನೆ. ಮಗನಿಗೆ ಕಲಿಸಿದ್ದೇನೆ; ಇನ್ನು ಅವನ ಮದುವೆಯನ್ನಷ್ಟು ಮಾಡಿಬಿಟ್ಟರೆ, ನನ್ನ ಕೆಲಸ ಮುಗಿಯಿತು; ಅದನ್ನೂ ಬೆಳಗಾಗುವದರೊಳಗೇ ಮಾಡುತ್ತೇನೆ.

ನಾಲ್ಕೊಪ್ಪತ್ತು ಹಾಯಾಗಿ ಉಂಡು ಬಾಳಿ ಬದುಕಿದರೆ ಅದು ಜೀವನ; ಸುಖವನ್ನು ಕಾಣದೆ ಹಗಲೂ ಇರುಳೂ ಮೈಯ್ಯೊಳಗಿನ ರಕ್ತವನ್ನು ಸುಟ್ಟುಕೊಳ್ಳುತ್ತ ದುಡಿದರೆ ಅದೇನಾದರೂ ಬದುಕೇ ? ಅಂತಹ ಬದುಕನ್ನು ನಡೆಸುವ ಮನುಷ್ಯ ಇದ್ದೂ ಸತ್ತಂತೆಯೇ !



# ಪ್ರಾಂತದಲ್ಲಿಯೇ ಪ್ರಥಮ ಮಹಿಳಾ ಸರಪಂಚರಾದ

## ಶ್ರೀಮತಿ ಪ್ರಮೀಲಾಬಾಯಿ ದೇಶಪಾಂಡೆಯವರು



" ಹುನಗುಂದ ಗ್ರಾಮಪಂಚಾಯತಿಯ ಸರಪಂಚರಾಗಿ ಬಹುಮತದಿಂದ ಆರಿಸಲ್ಪಟ್ಟವರೆಂದೂ ಪ್ರಥಮ ಮಹಿಳಾ ಸರಪಂಚರಾದ ಶ್ರೀಮತಿ ಪ್ರಮೀಲಾಬಾಯಿ ದೇಶಪಾಂಡೆಯವರು ಕಳೆದ ಆರು ವರ್ಷಗಳಿಂದ ಹುನಗುಂದ ಗ್ರಾಮಪಂಚಾಯತಿಯ ಸದಸ್ಯರಾಗಿರುವರೆಂದೂ, ಮತ್ತು ವಿಜಾಪುರ ಜಿಲ್ಲಾ ಲೋಕಲ್ ಬೋರ್ಡಿಗೆ ಕಾಂಗ್ರೆಸ್ ಪರವಾಗಿ ಪ್ರಚಂಡ ಬಹುಮತದಿಂದ ಆರಿಸಲ್ಪಟ್ಟವರೆಂದೂ, ಮುಂಬೈ ಪ್ರಾಂತದಲ್ಲಿಯೇ ಇವರು ಮೊದಲನೇ ಮಹಿಳಾ ಸರಪಂಚರೆಂದೂ" ತಾರೀಖು ೨೯–೮–೫೨ ನೇ ಕನ್ನಡ ದೈನಿಕ ವೃತ್ತಪತ್ರಗಳಲ್ಲಿ ಓದಿಕೊಂಡಾಗ ಅವರನ್ನು ಭೆಟ್ಟಿಯಾಗಿ ಅವರಿಗೆ ಅಭಿನಂದನೆಗಳನ್ನು ಸಲ್ಲಿಸಿದೆ.

ಶ್ರೀಮತಿ ಪ್ರಮೀಲಾಬಾಯಿಯವರಿಗೆ ಸುಮಾರು ೨೬–೨೭ ವರ್ಷ ಇನ್ನೂ ದಾಟಿರಲಿಕ್ಕಿಲ್ಲ. ಕರ್ನಾಟಕಕ್ಕೆ ಕೀರ್ತಿಯನ್ನು ತರಬಲ್ಲ ಓರ್ವ ಕತ್ರೃತ್ವಶಾಲಿಯಾದ ಮಹಿಳೆಯು ಮತ್ತು ಎಲ್ಲ ಬಗೆಯ ಅನುಕೂಲತೆ ಹಾಗೂ ಪ್ರೋತ್ಸಾಹಗಳು ದೊರೆತಲ್ಲಿ ಕರ್ನಾಟಕದ ಪರವಾಗಿ ಇವರು ಭಾರತದ ಪ್ರಮುಖ ಸ್ತ್ರೀ ಕಾರ್ಯಕರ್ತರಲ್ಲಿ ಶೀರ್ಷದಲ್ಲಿಯೇ ಗಣಿಸಲ್ಪಡುವರೆಂದು ನನ್ನ ಬಲವಾದ ನಂಬಿಗೆ ಆಯಿತು. ಇಂಥ ಉನ್ನತ ಸ್ಥಾನದಲ್ಲಿದ್ದ ಮಹಿಳೆಯ ಪರಿಚಯವನ್ನು 'ವೀರಮಾತೆ' ಯ ವಾಚಕರಿಗೆ ಮಾಡಿಕೊಡುವದು ನನ್ನ ಕರ್ತವ್ಯವಲ್ಲವೆ ?

ಶ್ರೀಮತಿ ಪ್ರಮೀಲಾಬಾಯಿಯವರು ಬಾಗಲಕೋಟೆಯ ನಾಮಾಂಕಿತ ಶ್ರೀ ತಿರುಮಲರಾಯ ದಾತಾರ ವಕೀಲರ ಮನೆತನದಲ್ಲಿ ಹುಟ್ಟಿದವರು. ಕೇಂದ್ರ ಸರಕಾರದ ಗೃಹಶಾಖೆಯ ಉಪಮಂತ್ರಿಗಳಾದ ಮಾನ್ಯ ಶ್ರೀ ಬಳವಂತರಾಯರೂ ಹಾಗೂ ಪ್ರಸಿದ್ಧ ಗೋಸೇವಿಕಾ ಹಾಗೂ ದೇಶಭಕ್ತ ಶ್ರೀ ಅಂಬಕ್ಕಾ ದಾತಾರ ಇವರೂ ಇವರ ಸಂಬಂಧಿಕರು. ಶ್ರೀಮತಿಯವರು ಬಾಗಲಕೋಟೆಯಲ್ಲಿಯ ಶ್ರೀ. ಸಕ್ರಿ ಹಾಯಸ್ಕೂಲಿನ ಮ್ಯಾಟ್ರಿಕ್ಯುಲೇಟರು, ಹಿಂದೀಭಾಷೆಯ ಎರಡು ಪರೀಕ್ಷೆಗಳನ್ನು ಮುಗಿಸಿದ್ದಾರೆ. ಇವರಿಗೆ ಕಸೂತಿ ಹೆಣಿಕೆ, ಚಿತ್ರಕಲೆ, ಫೋಟೋಗ್ರಾಫಿಗಳಲ್ಲಿಯೂ ಬಹಳ ಆಸಕ್ತಿ. ಅಂತೆಯೇ ಇವರು ಮೂರು ನಾಲ್ಕು ವರ್ಷ ಹಿಂದೀ ಹಾಗೂ ಡ್ರಾಯಿಂಗುಗಳ

ಶಿಕ್ಷಕಿಯರಾಗಿ ವಿದ್ಯಾರ್ಥಿ ಪ್ರಿಯರಾಗಿದ್ದರು. ಇವರು ಸಾಹಿತ್ಯ ಪ್ರೇಮಿಗಳು. ಈಗಾಗಲೇ ಇವರ ೨-೩ ನಾಟಕಗಳು ಧಾರವಾಡ ಆಕಾಶವಾಣೀ ಕೇಂದ್ರದಿಂದ 'ಗೃಹಲಕ್ಷ್ಮೀ' ಕಾರ್ಯಕ್ರಮದಲ್ಲಿ ಬಿತ್ತರಿಸಲ್ಪಟ್ಟಿರುವದು.

ಇವರಿಗೆ ಸಾರ್ವಜನಿಕ ಜೀವನದ ಇತರ ಚಟುವಟಿಕೆಗಳಲ್ಲಿ ಒಳ್ಳೇ ಆಸ್ಥೆ, ಉತ್ಸಾಹ ಬೆಳೆದದ್ದರಿಂದ ಇವರು ಶಿಕ್ಷಕಿಯ ವೃತ್ತಿಯನ್ನು ಮುಂದೆ ಕೈಕೊಳ್ಳಲು ನಿರಾಕರಿಸಿದರಂತೆ. "ನೀವು ಯಾವ ಉದ್ದೇಶದಿಂದ ಈ ಸಾರ್ವಜನಿಕ ಕೆಲಸದಲ್ಲಿ ಭಾಗತೆಗೆದುಕೊಂಡಿರಿ" ಎಂದು ನಾನು ಅವರನ್ನು ಕೇಳಿದಾಗ್ಗೆ, ಶ್ರೀಮತಿ ಪ್ರಮೀಲಾ ಬಾಯಿಯುವರು "ಹಳ್ಳಿಗಳ ಉದ್ಧಾರವೇ ನಮ್ಮ ನಾಡಿನ ಉದ್ಧಾರವೆಂಬುದನ್ನು ನಾವು ಮರೆಯುವಂತಿಲ್ಲ. ಸ್ವಾರ್ಥಕ್ಕಾಗಿ, ಪ್ರತಿಷ್ಠೆಗಾಗಿ ಕ್ಷುಲ್ಲಕ ಕಾರಣಗಳಿಗೆ ಬಣಗಳನ್ನು ಕಟ್ಟಿಕೊಂಡು ನಿಂತು ಸಾರ್ವಜನಿಕ ಸಂಸ್ಥೆಗಳ ಮಹತ್ವವನ್ನು ಕೆಡಿಸುವಂಥ ಜನರಿಗೆ ಗ್ರಾಮಪಂಚಾಯತಿಗಳ ಮಹತ್ವ ತೋರಿಸುವದಕ್ಕಾಗಿ" ಎಂದು ಉತ್ತರವಿತ್ತರು. "ನೀವು ಈ ಗ್ರಾಮಪಂಚಾಯತಿಯ ಕೆಲಸದಲ್ಲಿ ಸೇರುವ ಉದ್ದೇಶವೇನೆ"ಂದು ನಾನು ಪುನಃ ಕೇಳಿದೆ ಅದಕ್ಕೆ ಶ್ರೀಮತಿಯುವರು. "ನಾನಂತೂ ಈಗ ಗೃಹಿಣಿಯಾಗಿ ನನ್ನ ಮನೆತನದ ಆದಾಯ, ಖರ್ಚಿಗೆ ಅನುಸರಿಸಿ ಮನೆಯನ್ನು ರೂಪುಗೊಳಿಸುವಂತೆ ದೊಡ್ಡ ಪ್ರಮಾಣದಲ್ಲಿ ಅಂದರೆ ಗ್ರಾಮಪಂಚಾಯಿತಿಗಳು, ಗೃಹಕೃತ್ಯಗಳನ್ನು ಸಾಗಿಸಿಕೊಂಡು ಹೋಗುವಂಥ ಸಮರ್ಥ ಮಹಿಳೆಯರಿಂದಲೇ ಸರ್ವತಂತ್ರಗಳಿಂದಲೂ ಸುಸೂತ್ರವಾಗಿ ಸಾಗಿಸಬೇಕು. ಮತ್ತು ನಮ್ಮ ರಾಜ್ಯದಲ್ಲಿಯ ಪ್ರತಿಯೊಂದು ಹಳ್ಳಿಯನ್ನು ಆದರ್ಶಹಳ್ಳಿಯಾಗುವಂತೆ ಸುಧಾರಿಸಿ ಪಟ್ಟಣವಾಸಿಗಳನ್ನು 'ಮರಳಿ ಹಳ್ಳಿಗೆ' ಅನ್ನುವಂತೆ ಮಾಡಬೇಕು ಎಂಬ ಉದ್ದೇಶದಿಂದ" ಎಂದರು. "ಸ್ತ್ರೀ ಸರಪಂಚರಿಂದ ಗ್ರಾಮಪಂಚಾಯಿತಿಗಳ ಕಾರ್ಯಕ್ರಮಗಳನ್ನು ಸಾಗಿಸಿಕೊಂಡು ಹೋಗುವದು ಸಾಧ್ಯವೇ ?" ಎಂದು ನಾನು ಅವರನ್ನು ಪುನಃ ಕೇಳಿದೆ.

ಮಧ್ಯ ಪ್ರದೇಶದ ನಿವೃತ್ತ ಗವರ್ನರರಾದ ಮಾನ್ಯ ಶ್ರೀ ಮಂಗಲದಾಸ ಪಕ್ವಾಸಾ ಇವರು ಮೊನ್ನೆ ಮೊನ್ನೆ ಹೇಳಿದಂತೆ ಭಾರತದ ಪ್ರಜಾರಾಜ್ಯದಲ್ಲಿ ಪ್ರತಿಯೊಬ್ಬ ಸ್ತ್ರೀಪುರುಷರಿಗೂ ಸಮಾನ ಹಕ್ಕುಬಾಧ್ಯತೆಗಳು ಇವೆ. ಈ ವರ್ಷ ನಮ್ಮ ರಾಜ್ಯದಲ್ಲಿ ಮೊದಲನೇ ಬಾರಿಯೇ ಪ್ರೌಢಮತದಾನ ಪದ್ಧತಿಯು ಪ್ರಾರಂಭವಾಯಿತಲ್ಲದೆ ಮತದಾರರ ಪತ್ರಿಕೆಗಳಲ್ಲಿ ಪುರುಷರಿಗಿಂತ ಸ್ತ್ರೀ ಮತದಾರರೇ ಹೆಚ್ಚು ಸಂಖ್ಯೆಯಲ್ಲಿದ್ದಾರೆಂದು ಕಂಡು ಬಂದಿದೆ. ಹೀಗಾದ್ದರಿಂದ ಇನ್ನೂ ಸ್ವಲ್ಪ ವರ್ಷಗಳಲ್ಲಿಯೇ ಮಂತ್ರಿಮಂಡಲಗಳು, ಕೇಂದ್ರ ಪಾರ್ಲಿಮೆಂಟು, ಅಸೆಂಬ್ಲಿ, ಲೋಕಲ್ ಬೋರ್ಡು, ಮುನಸಿಪಾಲ್ಟಿ ಹಾಗೂ ಗ್ರಾಮಪಂಚಾಯಿತಿ ಮುಂತಾದ ಸಂಸ್ಥೆಗಳಲ್ಲಿ ಕೇವಲ ಮಹಿಳಾ ಸದಸ್ಯರೇ ಆರಿಸಿ ಬಂದು ಆಡಳಿತವನ್ನು ಸಾಗಿಸಿಕೊಂಡು ಹೋಗಬಹುದು" ಇದು ಒಂದು ನಮ್ಮ ಸುದೈವವೆಂದೇ, ಹೇಳಬೇಕು. ಏಕೆಂದರೆ

ಪುರುಷರು ಯಾವಾಗಲೂ ಸ್ವಾರ್ಥಿಗಳು, ಪ್ರತಿಷ್ಠೆಗಾಗಿ ಬಡಿದಾಡುವವರು. ದೇಹ ಶಕ್ತಿಯಿಂದಾಗಲೀ ಇಲ್ಲವೆ ಪುರುಷರೆಂಬ ಅಹಂಕಾರದಿಂದಾಗಲೀ ರಾಜ್ಯದಾಡಳಿತ ವನ್ನು ಸಾಗಿಸಿಕೊಂಡು ಹೋಗುವ ಇಂದಿನವರೆಗಿನ ಆಡಳಿತ ಸಂಸ್ಥೆಗಳಲ್ಲಿ ಪಕ್ಷ-ಪಂಗಡಗಳೂ, ದ್ವೇಷಾಸೂಯೆಗಳೂ ಇವೇ ತುಂಬಿವೆ. ಆದರೆ ಸ್ತ್ರೀಯರ ಆಡಳಿತ ಯಿಂದ ಇದಾವ ಆತಂಕಗಳೂ ಬರುವದು ಸಾಧ್ಯವಿಲ್ಲ. ಏಕೆಂದರೆ ಬುದ್ಧಿಶಕ್ತಿ ಯಿಂದಲೂ, ಆತ್ಮವಿಶ್ವಾಸದಿಂದಲೂ ನಿಸ್ವಾರ್ಥಿಗಳಾಗಿ, ಲಂಚರುಷುವುಗಳ ಆಶೆಗೆ ಬಲಿಬೀಳದೆ ದೇಶದ ಕಲ್ಯಾಣಕ್ಕಾಗಿ ದುಡಿಯಬೇಕೆಂದರೆ ಮಹಿಳೆಯರೊಬ್ಬ ರಿಂದಲೇ ಸಾಧ್ಯ! ಸ್ತ್ರೀಯರಿಗೆ ಇದ್ದಷ್ಟು ಸಹನಶೀಲತೆ, ಶಾಂತಸ್ವಭಾವ, ಮಮತೆ ಪುರುಷರಲ್ಲಿ ಇರುವುದಿಲ್ಲ. ಇದು ನೈಸರ್ಗಿಕ ಸ್ವಭಾವ.

ಈಗಿನ ಯುದ್ಧೋತ್ತರ ಪ್ರಸಂಗದಲ್ಲಿ ಪರಿಸ್ಥಿತಿಯನ್ನು ಹತೋಟಿಯಲ್ಲಿಟ್ಟು ಕೊಂಡು ಸಾಮಾನ್ಯ ಪರಿಸ್ಥಿತಿಯು ಬರುವವರೆಗೆ ರಾಜ್ಯದಾಡಳಿತವನ್ನು ಸುಗಮ ವಾಗಿ ಸಾಗಿಸಿಕೊಂಡು ಹೋಗುವದಕ್ಕೂ, ಅಂತರ್‍ರಾಷ್ಟ್ರೀಯ ಸಂಬಂಧಗಳಲ್ಲಿ ಜಾಗ ರೂಕತೆಯಿಂದ ವಿದೇಶಧೋರಣವನ್ನು ವಹಿಸಿಕೊಳ್ಳಲಿಕ್ಕೂ ಸ್ತ್ರೀಯರೇ ಸಮರ್ಥರು. ಪುರುಷರಿಂದ ಯುದ್ಧ, ಅಶಾಂತತೆ, ಹಿಂಸೆ, ಅನಾಹುತಗಳು ಸಂಭವಿಸುವವು. ಆದರೆ 'ವಿಶ್ವಶಾಂತಿಗೆ' ಸ್ತ್ರೀಯರ ಉದಾತ್ತವಾದ ತತ್ವಧ್ಯೇಯಗಳೇ ಮೂಲಾ ಧಾರಗಳು. ಮಹಾತ್ಮಾಜಿಯವರು ಸಹ ಇದನ್ನೇ ಉಸುರಿದ್ದಾರೆ. ಕಾರಣ ಇವೆಲ್ಲ ಧ್ಯೇಯಗಳನ್ನು ನನ್ನ ಕಣ್ಣು ಮುಂದೆ ಇಟ್ಟುಕೊಂಡಿದ್ದೇನೆ. ನಮ್ಮ ಭಾರತದ ಆಡಳಿತಕ್ಕೆ ಮೊದಲಿನ ಮೆಟ್ಟಲಾದ ನಮ್ಮ ಗ್ರಾಮಪಂಚಾಯತಿಯ ಸಲುವಾಗಿ ಅದರ ಉತ್ಪನ್ನವನ್ನು ಹೆಚ್ಚಿಸಿ ನಾನು ನಿಸ್ವಾರ್ಥದಿಂದ ದುಡಿದು ಒಂದು ಆದರ್ಶ ಗ್ರಾಮಪಂಚಾಯತಿಯನ್ನು ಮಾಡಬೇಕೆಂಬ ಲವಲವಿಕೆಯು ಬಹಳವಿದೆ" ಎಂದರು.

ಶ್ರೀಮತಿ ಪ್ರಮೀಲಾಬಾಯಿಯವರು ಸರಪಂಚಕಿಯ ಅಧಿಕಾರವಹಿಸಿ ಕೊಂಡಾಗಲೇ ಗ್ರಾಮಸುಧಾರಣೆಯನ್ನು ಕೈಕೊಂಡಿದ್ದಾರೆ. ಕುಡಿಯುವ ನೀರನ್ನು ಶುದ್ಧಮಾಡಿಸಿದ್ದಾರೆ. ಸಾರ್ವಜನಿಕ ರಸ್ತೆಗಳನ್ನು ದುರಸ್ತಿ ಮಾಡಿಸಿದ್ದಾರೆ. ಈಗ ಹತ್ತು, ಹನ್ನೆರಡು ವರ್ಷಗಳಿಂದ ಇಲ್ಲಿಯ ಸಾರ್ವಜನಿಕ ಕುಡಿಯುವ ನೀರಿನ ಭಾವಿ ಗಳಿಗೆ ಕೆಲವು ಗಡಗಡಿಗಳು ಇಲ್ಲದ್ದರಿಂದ ಎಲ್ಲ ಗಡಗಡಿಗಳನ್ನು ಹೊಸದಾಗಿ ಹಾಕಿಸಿ ತಯಾರು ಮಾಡಿಸಿದ್ದಾರೆ.

ಊರಲ್ಲಿಯ ದೀವಿಗೆಯ ಸುವ್ಯವಸ್ಥೆ ಮಾಡಿಸಿದ್ದಾರೆ. ಊರ ಸ್ವಚ್ಛತೆಯ ಬಗ್ಗೆ ಈಗಾಗಲೇ ಮಲೇರಿಯಾ ಹುಳ ಹೊಡೆಯುವ ಡಿ. ಡಿ. ಟಿ. ದಾಬಿನ ಪಂಪು ಮತ್ತು ಡಿ. ಡಿ. ಟಿ. ಪಾವಡರ ತಯಾರಿಸಿದ್ದಾರೆ. ಇಷ್ಟು ಅಲ್ಪಾವಧಿಯಲ್ಲಿಯೇ ಈ ತರದ ಸಾರ್ವಜನಿಕ ಕೆಲಸಗಳನ್ನು ಕೈಕೊಂಡಿದ್ದು ಪ್ರಶಂಸನೀಯವಾಗಿದೆ. ಸಾರ್ವಜನಿಕ ಹಿತ-ಸೇವೆಯ ಸಲುವಾಗಿ ಇನ್ನೂ ಹೆಚ್ಚು ಸುಬುದ್ಧಿಯನ್ನು ಶ್ರೀಮತಿ ಯವರಿಗೆ ಪರಮಾತ್ಮನು ದಯಪಾಲಿಸಲೆಂದು ಹಾರೈಸಿ ಹೊರಹೊರಟೆನು.

[ "ಪ್ರೇಕ್ಷಿತ ಪ್ರತಿನಿಧಿಯಿಂದ." ]

# ಸಾಯದಿಹಳು ಮೊದಲ ಮಡದಿ

ಮತ್ತೆ ಮದುವೆಯಾಗು ಎಂದು
ಬೋಧಮಾಡುತಿರುವರು
ಅವಳು ಸತ್ತರಾದುದೇನು ?
ಕನ್ಯೆಕೊಡುವರೆನುವರು

ಸಾಯದಿಹಳು ಮೊದಲ ಮಡದಿ
ಎನಲು ಹುಚ್ಚನೆನುವರು
" ಮದುವೆ ಎನುವುದಿನ್ನು ಮಸಣ "
ಎನಲು ಬೈಯುತಿರುವರು.

" ಹೀಗೆ ಹಟವ ಹಿಡಿದರೇನು
ಒಲ್ಲೆನೆನ್ನಬಾರದು,
ಹಿರಿಯರೆಂದ ಮಾತ ನಡೆಸಿ
ಏಕೆ ಒಪ್ಪಬಾರದು ? "

ಬಾಹ್ಯಕಿಲ್ಲವಾದರೇನು
ಆತ್ಮದಲ್ಲಿ ಇರುವಳು
ಅವಳ ನೆನಹ ತುಂಬಿಕೊಳಲು
ಪ್ರೇಮ ಪೂಜೆಗೈವಳು !

ಎಲ್ಲಿ ಅಲೆಯುತಿರುವೆನಲ್ಲಿ
ಮೂಡಿನಿಲ್ಲುತಿರುವಳು;
ನನಗೆ ಕಷ್ಟ-ನಷ್ಟವಾಗ
ದಂತೆ ನೋಡಿಕೊಳುವಳು !

ನನ್ನ ಉಸಿರೊಳವಳ ಉಸಿರು
ಒಂದೆ ಗೂಡಿ ಬರುವದು
' ಅವಳೆ ನಾನು-ನಾನೆ ಅವಳು '
ಎಂಬ ಭಾವವಿರುವದು ?

ನಿತ್ಯ ಧರ್ಮರಕ್ಷೆಯಾಗಿ
ನನ್ನ ಕಾಯುತಿರುವಳು
ನನ್ನ ಬೆನ್ನ ನೆರಳಿನಂತೆ
ಸನಿಹ ಸುಳಿಯುತಿರುವಳು

ಎನ್ನಲೆಲ್ಲರೊಂದುಗೂಡಿ
ಹುಚ್ಚುಹಿಡಿಯಿತೆನುವರು,
ಮತ್ತೆ ಮದುವೆಯಾಗು ಎಂದು
ಬೋಧ ಮಾಡುತಿರುವರು!

( ಶೀಘ್ರದಲ್ಲಿಯೇ ಪ್ರಕಟನಾಗಲಿರುವ "ಬಣ್ಣದ ಕಾರಂಜಿ" ಯಿಂದ)

—ಮಹಾದೇವ ಬಣಕಾರ
ಹುಬ್ಬಳ್ಳಿ.

# ಕೆಂಚಣ್ಣನ ಮುಂಬಯಿ ಯಾತ್ರೆ

ಲೇಖಕ:—ಎನ್. ಎಸ್. ಗದಗಕರ ಬಿ.ಎ. ಕರ್ನಾಟಕ ಹ್ಯಾಸ್ಕೂಲ ಧಾರವಾಡ

[ ನಾಟ್ಯಛಟ ]

[ ಕೆಂಚಣ್ಣನು ಹಳ್ಳಿಯ ಕನ್ನಡ ಶಾಲೆ ಪೂರ್ಣ ದಾಟದವನಲ್ಲ. ಅವನು ಮೊದಲು ಸಲ + + + ಗೌಡರ ಸಂಗಡ ಮುಂಬಯಿಗೆ ಹೋದದ್ದು ತೀರ ಮೊನ್ನೆ ಮೊನ್ನೆ. ಅವನು ಮರಳಿ ಬಂದದ್ದು ತಿಳಿದೊಡನೆಯೇ ಉಳಿದ ಅವನ ಹಳ್ಳಿಯ ಬಂಧುಗಳಿಗೆ ಅವನನ್ನು ಕಂಡು ಮಾತಾಡಿಸಬೇಕೆಂಬ ಆಕಾಂಕ್ಷೆ ಉತ್ಕಟವಾಯಿತು. ಅಂತೇ ಅವರು ಊರವಿಸ್ತಾರವಾದ ಆಲದ ಮರದಡಿಯಲ್ಲಿ ಕೂಡಿದರು. ಆಗ ಸಂಜೆಯು ೫ ಗಂಟೆ. ಹೂಬಿಸಿಲಲ್ಲಿ ಹಾಯಾಗಿ ಬೀಸುತ್ತಿರುವ ತಂಗಾಳಿ ಶ್ರೋತೃವರ್ಗಕ್ಕೆಲ್ಲ ನವಚೈತನ್ಯ ಒದಗಿಸಿತಲ್ಲದೆ ಕೆಂಚಣ್ಣನಿಗೂ ಕತೆ ಬೀಸಾಗಿ ಹೇಳಲು ಅಪೂರ್ವ ಸ್ಫೂರ್ತಿ ತಂದಿತು. ಆಗ ಅವನು ಹಾವಭಾವದೊಡನೆ ತನ್ನ ಯಾತ್ರೆಯ ಸಮಗ್ರ ವೃತ್ತಾಂತವನ್ನು ಬಣ್ಣಿಸ ತೊಡಗಿದನು. ]

ಬಸವಂತಾ ನಿನಗ ಗೊತ್ತಿಲ್ಲ, ನನ್ನ ಒಂದs ಒಂದು ಪ್ರವಾಸ ಇದಕ್ಕೂ ಮೊದಲಿಂದು – ಅಳಣಾವರಕ್ಕ ಗಾಡ್ಯಾಗ ಕುಂತು ಹೋದದ್ದು ? ಇನ್ನೇನು ? ಆದಕ್ಕೂ ಮುಕ್ಕಾಟ ಯಮನೂರ ಉರಸಿಗೆ, ಎಲ್ಲಮ್ಮನ ಗುಡ್ಡಕ್ಕ ಹೋಗಿದ್ದೆ. ಅದು ಮೋಟಾರಿನ್ಯಾಗ ! ನಮ್ಮ ಗೌಡರು ನನ್ನ ಮುಂಬಯಿಗೆ ಕರಕೊಂಡು ಹೋಗತೇವಿ ಅಂದ ದಿವಸದಿಂದ ಉಬ್ಬs ಅನಿಸಿತು. ಊರಿಗೆ ಹೋಗೊ ಹಿಂದಿನ ದಿನಾ ಅಂತೂ ಕಣ್ಣಿಗೆ ಕಣ್ಣs ಹತ್ತಲಿಲ್ಲ. ಯಾವಾಗ ನಸಕು ಹರಿದೀತು ಅಂತ ದಾರಿ ನೋಡತಿದ್ದೇನಪಾ. ಅಂತೂ ಒಮ್ಮೆ ಹೊಂಟೆ. ಏನು ಹಾದ್ಯಾಗ ಜಂಗಲ್ಲೋಪಾ ! ಎಂಥಾ ದೆವ್ವ ದೆವ್ವನಂಥಾ ಕೊಳ್ಳಾ ! ಕಣ್ಣೆತ್ತಿ ಮ್ಯಾಲೆ ಗುಡ್ಡಾ ನೋಡಾಕ ಹೋದಾಗ ತಲಿ ಮ್ಯಾಗಿನ ಪಾವಡಾ ಗಾಡಿಯ ಹೊರಗ ಬೀಳತಿತ್ತು. ಪುಣ್ಯಕ್ಕ ಹತ್ತರದವಾ ಗಪ್ಪಂತ ಹಿಡಿದು ಉಳಿಸಿದ. ಇಲ್ಲದಿದ್ದರ ಪ್ರವಾಸದಾಗ ಅದೂ ಆsಟ ಲಾಭನs !

ಆತಪಾ ತಮ್ಮಾ, ಪುಣೆ ಠೇಶಣ್ಣ ಬಂತು. ಮುಂದಿ ಜನಜಾತ್ರಿ. ಹೊಸಾ ಗಾಡ್ಯಾಗ ಅಂತೂ ಕುಂತಿವಿ ನಸಕಿನ್ಯಾಗ. ಅದೆಂಥಾ ಗಾಡಿನೊ ನಿನ್ನ ಮುಂಜಾಳ ಹೋಗಾ. ಸುರುವು ಆಗೊ ಪುರಸೊತ್ತಿಗಿಲ್ಲದ ಭರ್ರಾಂಡಿ ಬಿಟ್ಟಿತು. ಅದೇನೊ ದೀಪದ ತಂತೀಲೆ ನಡಿಯೊ ಗಾಡಿ ಅಂತ! ಗಾಡಿ ಹೊಂಟಾಗ ಎರಡು ಸಾರಿ ಗೌಡರು ನಾವು ಫಾ ಪರಾಳಾ ಮಾಡಿದಿವಿ. ಎಂಥಾ ಫಾನಲೇ ಅದು? ನಮ್ಮೂರ ಬೆಲ್ಲದ ಫಾದ್ದು ಕಾನ ನಿವಾಳಿಸಿ ದೂರ ಛಲ್ಲಬೇಕು ನೋಡು ಅದರ ಮುಂದ. ಗುಲಾಬಿ ಬಣ್ಣದ್ದು ಇತ್ತು. ಸಕ್ಕರೀನು ನಿವಳ ಹಾಕಿದ್ದ. ಗಾಡ್ಯಾಗಾರ ಏನು ಗದ್ದಲಯಣ್ಣಾ! ನನ್ನ ಹುಚ್ಚs ಬಿಟ್ಟಿತು ನೋಡು ಕಲ್ಲಣ್ಣಾ. ಒಂದು ಹೊಸ ಪರಪಂಚಪಾ ಅದೆಲ್ಲಾ. ಆತು, ಒಮ್ಮೆ ಹೀಂಗ ಮುಂಬಯಿಗೆ ಬಂದು ಮುಟ್ಟಿದಿವಿ. ಬದುಕಿದೆ ಅಂತ ಉಶ್ ಅಂದೆ. ಮೂರು ನಾಲ್ಕು ದಿನ ಇದ್ದಿವೇನಪಾ ಅಲ್ಲೆ. ಆಟರಾಗs ಊರಾಗ ತಿರು ಗಿದಿವಿ ಅಲ್ಲಲ್ಲೆ. ಎಂಥೆಂಥಾ ಬಂಗ್ಲೇವೊ ಯಪ್ಪಾ! ಹಳ್ಳಿಯವ ನಾ ನೋಡಿ ದಂಗಾದೆ. ಮಲ್ಲಣ್ಣೆ, ಬಾಯಿ ತಕ್ಕೊಂಡು ನಿಂತಬಿಟ್ಟಿದ್ದೆ. ಆಗ ಗೌಡರು ಏ ಹುಚ್ಚ ಮಂಗಾ. ಬಾಯಿ ಮುಚ್ಕೊ, ನೊಣಾ ಹೋದಗೀದಾವು, ಅಂತ ಸಿಟ್ಟುಮಾಡಿದರು. ಮುಚ್ಚಿದೆ. ಆದರ ನೋಡೋದು ಏನೂ ಬಿಡಲಿಲ್ಲ ಹಾಂ ಮತ್ತ! ಮುಂದಿ ನನ್ನ ನೋಡಿ ನಕ್ಕಿ ದ್ದೀತು. ನಾ ಕಾಳಜಿ ಮಾಡಿದೆ ಅವರಿಗೆ ಅಂತೀ ಏನು? ಛೆ ಕೇಳಬ್ಯಾಡ. ಹೌದನ್ನೋ ಹಾಂಗ ನೂರಾರು ರೂಪಾಯಿ ಖರ್ಚಾಗಿತ್ತು ಗೌಡರದು, ಅಂದ ಮ್ಯಾಗ ನಾ ಯಾಕ ದರಕಾರ ಮಾಡಬೇಕು ಮುಂಬಯಿ ಜನಕ್ಕ?

"ಏನು ಏನು ನೋಡಿದೆ ಗಡಾ ಗಡಾ ಹೇಳಲ್ಯಾ?" ಹೇಳೀ ಹೇಳತೇನಿ. ಸನ್ಮತ ಹಿಡಿರಿ. ಆದಕs ನಿಮುಗ ಬರ್ರಿ ಇಲ್ಲೆ ಅಂದಿದ್ದೆ. ಎರಡನೇ ದಿನ ಚಂಜಿ ಕಾಟ ರಾಣೀ ಬಗೀಚಿಗೆ ಹೋಗಿದ್ದಿವಿ. ಏನು ಛಂದಾನ ಛಂದ ಪ್ರಾಣಿ ಅಲ್ಲೀವು. ಹಕ್ಕಿ, ಮಂಗ, ಆನಿ, ಹಾವು, ಚಿಗರಿ, ಸಿಂಹಾ, ಉದ್ದಗೋಣಿನ ಚಿಗರಿ! ಹುಬ್ಬಳ್ಳಿಗೆ ಬಂದ ದೊಡ್ಡ ಸರ್ಕಸ್ ಝುಕ್ಕಿಸಿತು ಅದರ ಮುಂದ. ಆ ಮ್ಯಾಗ ಸಮುದ್ರದ ಕಡ್ಯಾಕ ಹೋದಿವಿ. ಜನಜಾತ್ರಿ ಅಲ್ಲೀನೂ. ಸಮುದ್ರದ ದಂಡಿ ಮ್ಯಾಗ ಮೋಜು ಮಾಡಿಕೊಂತ ಕೂತ ಗಂಡು ಹೆಣ್ಣು ನೋಡಿ ಹೌಹಾರಿ ಹೋದೆ. ನೋಡಾಕ ದೇವರು ಯಾಡs ಕಣ್ಣು ಯಾಕ ಕೊಟ್ಟಿದ್ದಾನು ಅಂತ ಕೆಟ್ಟ ಅನಸಿತು. ಅಷ್ಟು ಅವರ ಸಡಗರ! ಅಲ್ಲೆ ರಸ್ತೆ ಎಷ್ಟು ಝುಳ ಝುಳ ಅಂತೀದಿ ತಮ್ಮಾ, ಕನಡಿ ಹಳ್ಳು ಬ್ಯಾರೆ ಅಲ್ಲಾ! ರಾತ್ರಿ ಅಂತೂ ನೋಡಿದಲ್ಲೆ ಝಗ ಝಗ ದೀಪಾ ಖಂಬಕ್ಕ. ಸಿನೇ ಮಾಕ್ಕ ಹೋಗಿದ್ದಿವಿ ಮರುದಿನ. ಆದರ ಹಗಲು ಆಟ ಇತ್ತು. ಹಾಡು ಅಷ್ಟು ನನಗೆ ಪಾಡ ಅನಿಸಲಿಲ್ಲ. ಹೌದು ಮತ್ತ, ನಮ್ಮೂರ ದೊಟ್ಟಾಟದ ಮ್ಯಾಳದ ಪದ ಗೋಳು ಅವಕ್ಕೂ ನೆಟ್ಟಗ. ಅಂದ್ಯಾ ಬಸವಂತಾ? ನಿನ್ನ ಮಾತು ಖರೇನs. ಹೋದಲ್ಲೆ ಬಂದಲ್ಲೆ ಟಿಸ್ ಪಿಸ್ ಇಂಗ್ಲೀಶಿ ಮಾತು. ಅದೊಂದು ಪೀಡಾ. ಸಿಟ್ಟು ಬೆಂಕಿ ಆಗತಿದ್ದೆ ಅವರ ಮ್ಯಾಲೆ. ಸಂಗತೀಲೆ ಗೌಡರು ಇದ್ದರು ಅಂತನ ಪೂರೈ

ಸಿತು. ಅವರs ಎಲ್ಲಾ ನೋಡಿಕೊಂಡು ಆಗೀಗ ತಿಳಿಸಿ ಹೇಳತಿದ್ದರು- ಗಿಳಿಗೆ ಹೇಳಿದ್ಹಾಂಗ ! ಇಲ್ಲದಿದ್ದರ ಆ ಗಾಡಿ, ಆ ತಂತಿ ಮೋಟಾರು, ಆ ಹರದಾರಿ ಉದ್ದ ರಸ್ತೇದ ಗದ್ದಲದಾಗ ನಾ ಎಲ್ಲೆ ತಿರುಗಿ ಬಂದು ಊರು ಕಾಣತಿದ್ದೆ, ನಿಮ್ಮ ಮುಂದ ಹೀಂಗ ತಾರೀಫು ಹೇಳತಿದ್ದೆ ? ಮುಂಬಯ್ಯಾಗ ನೋಡು, ಮಲ್ಲೇಶಿ, ನೋಡಿದಲ್ಲೆ ಡಬರಿ ಟೊಪಿಗಿ ಬೂಟೇಸಿನ ಸಾಹೇಬರು. ಎಲ್ಲರೂ ತಮ್ಮ ತಮ್ಮ ಕೆಲಸದಾಗ. ಮತ್ತೊಬ್ಬರ ಮಕಾ ಕಾರಣ ಇಲ್ಲದೆ ತಪ್ಪಿ ಸಹಾ ನೋಡೋವರಲ್ಲಾ. ಅಲ್ಲಿಯ ಹೆಂಗಸರ ? ರಸ್ತೆದಾಗ ನಾವs ಅವರನ್ನು ನೋಡಿ ಸರೀಬೇಕು. ಅವರು ತಮ್ಮ ದಾರಿಗುಂಟ ಹೋಗವರು. ಜನ್ಮದಾಗ ಇನ್ನೊವ್ಮೆ ಇಂಥಲ್ಲೆ ಹೋಗೋಣಾದೀತ....? ಆದರೂ ಒವ್ಮೆ ಹೋಗಬಾರದು ಹೋಗಿ ಫಜೀತ ಆದೆ. ಮುಂಬಯಿ ಯಾತ್ರಾದ ನೆನಪು ಏಕದಮ್ ಆಗೂದಿಲ್ಲ. ಕೂಡಿಸಿಕೊಂಡು ಹೇಳತೀನಿ ಕೇಳ್ರಿ. ನಿಮಗಾದರೂ ಏನು ಯಾವ ಹ್ವಾರೆವು ಇಲ್ಲ ಇಂದ. ನೋಡಪಾ, ಹೊರಡೊ ದಿನ ಒಂದು ಮೋಜ ಆತು. ಒಬ್ಬ ಹಳ್ಳಿಯವಾ. ತಂತಿ ಮೋಟಾರಿನ್ಯಾಗ ಕುಂತು ಇನ್ನ ಗಾಡಿ ಹತ್ತಲಿಕ್ಕೆ ಟೀಕೀಟ ಕೊಳ್ಳವಾ. ರೊಕ್ಕಾ ತೆಗಿಯಾಕ ಹೊಕ್ಕಾನು, ತನ್ನ ಚೀಲಾನs ಇಲ್ಲಾ ! ಮೋಟರಿನ್ಯಾಗ ಕಿಸೆಕಳ್ಳರು ಗಪ್ಪ ಅನಿಸಿಬಿಟ್ಟಿದ್ದರು ! ಪಾಪ ! ಹಳ್ಳಿಯವನ ಮೋತಿ ನೋಡೋಣ ಆಗದೆ ಸುತ್ತು ಮುತ್ತಲಿನ ಮಂದಿ ಒಟ್ಟು ರೊಕ್ಕಾ ಕೂಡಿಸಿ ಕೊಟ್ಟರು. ಅವನ ಕೆಟ್ಟ ಮೋತಿ ನೋಡಿ ನನಗೂ ಕಣ್ಣಾಗ ನೀರು ಬಂದುವು. ಏನು ? ಕುರುಡು ಕುಂಟರಿಗೆ ದುಡ್ಡು ಕೊಡವರು ಹಳ್ಳಿಯವಗ ಹ್ಯಾಂಗ ರೊಕ್ಕ ಬಿಚ್ಚಿದರು ಅಂತಿಯಾ ಶಿವಣ್ಣ ? ಛೀ ನಿನ ಒಂದು ವ್ಯಾಳ್ಯಾಪ್ಪಾ ಅದು. ಪುಣ್ಯಾತ್ಮರು ಕೊಡುವರು ಕೊಡತಾರ. ಎಲ್ಲರೂ ಹರಿಶ್ಚಂದ್ರ ಆದರ ಜಗತ್ತು ಹ್ಯಾಂಗ ನಡೆದೀತು ? ಖರೆ ಹರಿಶ್ಚಂದ್ರ ಅನ್ನಲಿಲ್ಲೊ ಮತ್ತ ! ಈಗಿನವರು ಸುಳ್ಳು ಹರಿಶ್ಚಂದ್ರರು !

ಹಾದ್ಯಾಗ ನೋಡಪಾ, ಬಂಗ್ಲೇದ ಮ್ಯಾಲೆ ದೊಡ್ಡ ಗಡಿಯಾಳ ನಡಿಯೋದು- ನೋಡಿದಿವಿ; ನಮ್ಮೂರಾಗ ಸಣ್ಣ ಗಡಿಯಾಳ ದೇಸಾಯಿ ದೇಶಪಾಂಡೇರ ಮನ್ಯಾಗ ಅಷ್ಟs ಇರೋವು. ಎಂಥೆಂಥಾ ಮುಳ್ಳು ಅಕ್ಷರಾ ಅದರುವು ! ಎಲ್ಲಾ ವರಕಿಂತ ನೋಡ್ರಿ, ಮುಂಬಯಿ ಖಾನಾವಳಿ ಕೆಟ್ಟ. ಅಲ್ಲಿಯ ತುಪ್ಪಾ ನಮ್ಮ ಹಳ್ಳಿಯ ಸುಮಾರು ಕುಸುಬಿ ಯಂಣಿಕಿಂತ ಅತತ್ತ ! ಎಷ್ಟು ಪಲ್ಯಾ-ಕಾಯಿ ಗೋದಿ ರೊಟ್ಟಿ ಕೂಡಾ ತಿಂದರೂ ರುಚಿ ಅನಿಸಲಿಲ್ಲ, ಹೆಸರೂ ಗೊತ್ತಾಗಲಿಲ್ಲ. ಮಿಠಾಯಿ ಅಂಗಡಿ ಅರಿವಿ ಅಂಗಡಿ ನಾ ಅಂತೂ ಎಣಿಸಾಕ ಹೋಗಿ ಸೋತೆ. ಅಲ್ಲೆ ದುಮ್ಮ ಜಲ ಮನೀನs ನೋಡಪಾ ಎಲ್ಲೆ ನೋಡಿದರೂ. ಗಿರಣಿ ಕೆಲಸದವರು ಇರೊ ಮನಿ ಅತಿ ಸಣ್ಣವು ಯಣ್ಣಾ.ಪಾರಿವಾಳದ ಗೂಡು ನೋಡು! ಒಂದು ಮಜಲಿನಿಂದ ಮತ್ತೊಂದಕ ಹೋಗಾಕ ಯಂತ್ರಾ. ಒಂದು ಅಣೆ. ಮತ್ತ ಗಾಡ್ಯಾಗ ಹತ್ತಾಕ ಮ್ವೋಟರ ಹತ್ತಾಕ ಪಾಳಿ. ಹೆಂಗಸರು ಇರಲಿ ಗಂಡಸರು ಇರಲಿ ಎಲ್ಲಾರೂ ಸಾಲಾಗಿ ನಿಂದರಾಕ ಬೇಕು. ಯಾರಪ್ಪನ ಇಚ್ಛಿ, ಕಾಯಿದೇನs ಐತಿ ಹಾಂಗ ! ಪೋಲಿಸ ನಿಂತಿರತಾನ. ಒಟ್ಟು ಏನಪಾ ಯಜ್ಜಾ, ಮುಂಬಯಿ ನಾಕು ದಿನ ಛಂದಾ.

ಅಲ್ಲಿ ಗಾಡಿ ಮೋಟಾರಿನ ಸಪ್ಪಳಕ್ಕ ರಾತ್ರಿ ಮಲಗೋದು ಕಠಿಣ. ಕಡೀಕ ನಮ್ಮೂ ರಿಗೆ ಬರೋ ಮುಂದ ಗಾಡಿ ಹತ್ತೋ ವ್ಯಾಳ್ಯಾಕ್ಕ ಕುತ್ತಗಿ ಕುತ್ತಗಿ ಹಿಚಕ್ಯಾಟ. ಅಂಥಾ ಗದ್ದಲ ನೋಡಿ ನಮ್ಮೂರಿಗೆ ಯಾವಾಗ ಮುಟ್ಟೇನೆಪಾ ಅನಿಸಿತು. ........

ಹೀಗೆ ಕೆಂಚಣ್ಣನು ಉದ್ಗಾರ ತೆಗೆದು ತನ್ನಪ್ರವಾಸವನ್ನು ಮನಮುಟ್ಟ ವಿವರಿಸುವಾಗ ಮಬ್ಬುಗತ್ತಲಾಗಹತ್ತಿತು. ಆದ್ದರಿಂದ ಎಲ್ಲರೂ ಹರಯುತ್ತ ಮನೆಯ ಕಡೆಗೆ ನಡೆದಾಗ.

— ತೆ ರೆ —



# ಮೊಂಟೆಸೋರಿ ಶಿಕ್ಷಣದ ರಹಸ್ಯ

ಲೇ :— ಹ. ಮ. ಬಬಲೇಶ್ವರ

ಡಾ. ಮೇರಿ ಮೊಂಟೆಸೊರಿಯರಿಗೆ ಶಿಕ್ಷಣ ಪ್ರಪಂಚದಲ್ಲಿ ಬಹು ದೊಡ್ಡ ಸ್ಥಾನವಿದೆ. ಪ್ರಪಂಚದ ಶಿಕ್ಷಣ ಕ್ಷೇತ್ರದಲ್ಲಿಯೇ ಇವರು ಮೊದಲನೆಯ ವಿದುಷಿ; ಇವರನ್ನು ಸರಿಗಟ್ಟುವ ವಿದುಷಿ ಆ ಪ್ರಪಂಚದಲ್ಲಿ ಬೇರಿಲ್ಲ. ಈ ಮೊದಲು, ಪುರುಷರೇ ಆ ಪ್ರಪಂಚದಲ್ಲಿ ನುಗ್ಗಿ ತಮ್ಮ ಅಗಾಧ ಪರಿಶ್ರಮದಿಂದ ಅನೇಕ ಪ್ರಯೋಗಗಳನ್ನು ಕೈಕೊಂಡು ಬೇರೆ ಬೇರೆ ಸಿದ್ಧಾಂತಗಳನ್ನು ಮಂಡಿಸಿದರು.

ಡಾ. ಮೊಂಟಿಸೋರಿಯವರು ತಮ್ಮ ಸಿದ್ಧಾಂತಗಳೊಂದಿಗೆ ಪ್ರಯೋಗಶಾಲೆಯನ್ನು ಪ್ರಾರಂಭಮಾಡಿದಾಗ ಇಡೀ ಪ್ರಪಂಚವೇ ಅವರನ್ನು ಆವರಿಸಿ ಅವರ ಸಿದ್ಧಾಂತಗಳಿಗೆ ತಲೆದೂಗಿ ಜಗತ್ತಿನ ಎಲ್ಲ ದೇಶಗಳಲ್ಲಿ ಅವರ ಹೆಸರಿನಲ್ಲಿ ಶಾಲೆಗಳು ಪ್ರಾರಂಭವಾಗಿ ಶಿಕ್ಷಣದಲ್ಲಿ ಒಂದು ಕ್ರಾಂತಿಯನ್ನೇ ಉಂಟುಮಾಡಿತು. ಇಂಥ ಮಹಾನ್ ವ್ಯಕ್ತಿ ಈಗ ಕೆಲವು ತಿಂಗಳುಗಳ ಹಿಂದೆ ತಮ್ಮ ಭೌತಿಕ ಶರೀರವನ್ನು ಬಿಟ್ಟು ನಮ್ಮೆಲ್ಲರಿಂದ ಕಣ್ಮರೆಯಾದರೂ ಅವರು ಹಾಕಿಕೊಟ್ಟ ಪಾಠ ಉಪದೇಶಮಾಡಿದ ಮಂತ್ರ ಈಗ ನಮಗೆ ಮಾದರಿಯಾಗಿವೆ.

೧೮೭೦ ಅಗಸ್ಟ ೩೧ ನೇ ತಾರೀಖಿನ ದಿನ ಡಾ. ಮೊಂಟಿಸೋರಿಯವರು ಇಟಲಿದೇಶದ ಒಂದು ಚಿಕ್ಕ ಪಟ್ಟಣದಲ್ಲಿ ಜನ್ಮತಾಳಿದರು. ತಂದೆತಾಯಿಗಳಿಗೆ ಒಂದೇ ಮಗುವಾದ ಇವರು ಬಹು ಮುದ್ದಾಗಿ ಮನೆಯಲ್ಲಿ ಬೆಳೆದರು. ಪ್ರಾರಂಭದಲ್ಲಿಯೇ ಸೌಂದರ್ಯ ಮತ್ತು ಶಿಕ್ಷಣ ಸಂಸ್ಕೃತಿಗಳ ಆಗರವಾದ ಡಾ. ಮೊಂಟಿಸೋರಿಯವರು ಬಹುಬೇಗ ತಮ್ಮ ಸಂಗಡಿಗರನ್ನು ಹಿಮ್ಮೆಟ್ಟಿಸಿ ತಮ್ಮ ದೇಶಕ್ಕೆ ಮೊದಲನೆಯ ಸ್ತ್ರೀ ಡಾಕ್ಟರರಾಗಿ ವಿಜಯಹೊಂದಿದರು. ಈ ಪದವಿಯೇ ಇವರಿಗೆ ರೋಮ ವಿಶ್ವವಿದ್ಯಾಲಯದಲ್ಲಿ ಇವರನ್ನು ಮಾನಸಶಾಸ್ತ್ರದ ಡೈರೆಕ್ಟರರನ್ನಾಗಿ ಮಾಡಿತು. ಈ ಹುದ್ದೆಯಲ್ಲಿ ಇವರ ಕಾರ್ಯತತ್ಪರತೆಯನ್ನು ಕಂಡು ಯುರೋಪಖಂಡದ ಉಳಿದ ದೇಶಗಳು ಇವರನ್ನು ಅನೇಕ ಸಭೆ ಪರಿಷತ್ತುಗಳಿಗೆ ಆಹ್ವಾನಿಸಿ ಅಧ್ಯಕ್ಷಪದವನ್ನು ಮತ್ತು ಬೇರೆ ಬೇರೆ ದೇಶಗಳಲ್ಲಿ ಅವರ ದೇಶದ ಪ್ರಾತಿನಿಧ್ಯವನ್ನೂ ಕೊಟ್ಟು ಗೌರವಿಸಿದವು. ಇವರು ತಮ್ಮ ಸಂಶೋಧನೆಯ ಕಾರ್ಯದಲ್ಲಿ ಬುದ್ಧಿಯಲ್ಲಿ ಹಿಂದುಳಿದ ಮಕ್ಕಳ ಪ್ರಗತಿಯ ಬಗ್ಗೆ ಬಹು ಪ್ರಯಾಸದ ಸಂಶೋಧನೆಗಳನ್ನು ಕೈಕೊಂಡು ಇಂಥ ಮಕ್ಕಳನ್ನು ಸಾಮಾನ್ಯ ಮತಿಯ ಮಕ್ಕಳು ಕೂಡ್ರುವ ಪರೀಕ್ಷೆಗಳಿಗೆ ಕೂಡ್ರಿಸಿದರು. ಈ ಪರೀಕ್ಷೆಗಳಲ್ಲಿ ಅಲ್ಪಮತಿಯ ಮಕ್ಕಳೂ ಉಳಿದವರಂತೆ ಪರೀಕ್ಷೆಯಲ್ಲಿ ತೇರ್ಗಡೆಹೊಂದಿದಾಗ ಅವರಲ್ಲಿಯ ಅಲ್ಪಬುದ್ಧಿಮತ್ತೆಯು ಪರೀಕ್ಷಕರ ದೃಷ್ಟಿಗೆ ಬಾರದಿರುವದು ಡಾ. ಮೊಂಟಿಸೋರಿಯರಿಗೆ ಆಶ್ಚರ್ಯವನ್ನುಂಟುಮಾಡಿತು. ಈ ಬಗ್ಗೆ ಮತ್ತೆ ಸಂಶೋಧನೆ ನಡೆಸಿದರು. ಹೀಗೆ ಪ್ರಯೋಗಗಳನ್ನು ನಡೆಸುತ್ತಿರುವಾಗ ಅವರಿಗೆ ತೀರ ಚಿಕ್ಕಮಕ್ಕಳ ವಿಷಯದಲ್ಲಿ ಪ್ರಪಂಚದಲ್ಲಿ ಆಗುತ್ತಿರುವ ಅನ್ಯಾಯಗಳನ್ನು ಕಂಡು ಮನನೊಂದು ಆ ಕ್ಷೇತ್ರದಲ್ಲಿ ಕಾಲಿಟ್ಟರು.

ಈವರೆಗೂ ಈ ವಿಷಯದಲ್ಲಿ ಸಾಕಷ್ಟು ಪ್ರಯೋಗಗಳಾಗಲೀ ಇಲ್ಲವೆ ಮಕ್ಕಳ ವಿಷಯದಲ್ಲ ಅದರಲ್ಲಿಯೂ ತೀರ ಚಿಕ್ಕ ಮಕ್ಕಳ ವಿಷಯದಲ್ಲಿ ಆಸ್ಥೆಯಾಗಲೀ ತೋರಿಸಿದ್ದುದು ಎಲ್ಲಿಯೂ ಕಂಡು ಬರಲಿಲ್ಲ. ಸಾವಿರಾರು ವರ್ಷಗಳಲ್ಲಿ ಮಕ್ಕಳ ಮಾನಸಿಕ ಶಿಕ್ಷಣದ ಬಗ್ಗೆ ಸಹಾಯನೀಡುವದಿರಲಿ ಅವರನ್ನು ತಿಳಿದುಕೊಂಡ ಜನರೂ ಸಾಕಷ್ಟಿಲ್ಲ. ಮುಂದಿನ ಪೀಳಿಗೆಯ ಅಡಿಗಲ್ಲು ಚಿಕ್ಕಮಕ್ಕಳನ್ನವಲಂಬಿಸಿದೆ ಎನ್ನುವ ವಿಷಯ ಬಹುಜನರಿಗೆ ತಿಳಿದಿರಲಿಲ್ಲ. ಮಕ್ಕಳೆಂದರೆ ಉಳಿದ

ಜಂಗಮ ವಸ್ತುಗಳಂತೆ ಮಾನವನ ಸೊತ್ತಾಗಿ ಗುಲಾಮರು ಧನಿಯಲ್ಲಿ ಇಟ್ಟಿರುವ ವಿಧೇಯತೆಯಿಂದಲೇ ಸಾಗಬೇಕು. ಮಕ್ಕಳ ಮೇಲೆ ತಂದೆತಾಯಿ ಗುರುಹಿರಿಯರು ಆಪ್ತೇಷ್ಟರು ಶಿಕ್ಷಕರು ಸೇವಕರೂ ಕೂಡ ಅಧಿಕಾರ ಸ್ವಾತಂತ್ರ್ಯ ನಡೆಸಬಲ್ಲರು. ಆದರೆ ಮಕ್ಕಳಿಗೇ ಆ ಸ್ವಾತಂತ್ರ್ಯವಿಲ್ಲ. ದಿನದ ಪ್ರತಿಗಳಿಗೆಯೂ ಹಿರಿಯರ ಗುಲಾಮನಾಗಿಯೇ ಮಗು ದಿನಗಳೆಯಬೇಕು. ಎಂಥ ವಿಚಿತ್ರವರ್ತನೆ! ಮಾನವನ ಅಧಿಕಾರ ಸ್ವಾತಂತ್ರ್ಯಕ್ಕೆ ಹೋರಾಡಲು ಗುಡ್ಡಗಾಡು ಜನರಲ್ಲಿ ಮೊದಲುಮಾಡಿಕೊಂಡು ಅತಿ ಹಿಂದುಳಿದ ಕಪ್ಪು ಜನರಲ್ಲಿಯೂ ಸಭೆಸಂಸ್ಥೆಗಳು ಹುಟ್ಟಿಕೊಂಡು ತಮ್ಮ ಜನ್ಮಸಿದ್ಧ ಹಕ್ಕನ್ನು ಪಡೆದುಕೊಂಡವು. ಆದರೆ ಪ್ರಪಂಚದ ಪ್ರಾರಂಭದಿಂದ ಗುಲಾಮಗಿರಿಯಲ್ಲಿರುವ ಮತ್ತು ಈ ಎಲ್ಲ ಜನಾಂಗದ ಮಕ್ಕಳು ತಮ್ಮ ಕಣ್ಣೆದುರಿನಲ್ಲಿಯೇ ಅನುಭವಿಸುತ್ತಿರುವುದನ್ನು ಯಾವ ಮಹಾಪುರುಷನೂ ತನ್ನ ಗಮನಕ್ಕೆ ತರದಿರುವದು ಡಾ. ಮೊಂಟೆಸೋರಿಯವರಿಗೆ ಇನ್ನೂ ಆಶ್ಚರ್ಯವನ್ನುಂಟು ಮಾಡಿತು.

ಮಗುವಿಗೆ ಸ್ವಾತಂತ್ರ್ಯವೆಲ್ಲಿಯದು ? ಮನೆಯಲ್ಲಿ ಸ್ವಾತಂತ್ರ್ಯವಿಲ್ಲ. ಆಡುವ ಮಗುವನ್ನು ತಂದೆ ತಾಯಿ ಕರೆದಾಗ ಅದು ಆಟವನ್ನು ಅರ್ಧಕ್ಕೆ ಬಿಟ್ಟು ಬಿಡಬೇಕು. ತಂದೆ ತಾಯಿ ಮನೆಯಲ್ಲಿ ಜಗಳಾಡಿದಾಗ ಅದರ ಕಟು ಅನುಭವ ಮಗುವಿಗೆ. ಹಿರಿಯರಿಗೆ ಸರಿಬೀಳುವ ಬಟ್ಟೆ ಅಲಂಕಾರ, ಮಗುವಿಗೆ. ಶಾಲೆಯಲ್ಲಿ ಶಿಕ್ಷಕನ ಸೇವಕನಾಗಿ ಆತ ಹೇಳಿದ್ದನ್ನು ಅರ್ಥವಾಗಲಿ ಆಗದಿರಲಿ ವೇದವಾಕ್ಯವೆಂದು ಅರಗಿಸುವ ಪ್ರಯತ್ನಮಾಡಿ ಆತನ ಬೆತ್ತದ ತುದಿಯ ಚಲನವಲನವನ್ನನುಸರಿಸಿ ಡೊಂಬರಾಟವಾಡಬೇಕು. ಇನ್ನು ಸಮಾಜದಲ್ಲಿಯೂ ಅಷ್ಟೇ ! ಎಲ್ಲಿಯೂ ಮಕ್ಕಳಿಗೆ ಪ್ರವೇಶವಿಲ್ಲ; ಸ್ವಾತಂತ್ರ್ಯವಿಲ್ಲ.

ಹಿರಿಯರಂತೆ ಮಗುವಿಗೂ ಆತ್ಮವಿದೆ; ಜೀವಮನಸ್ಸುಗಳಿವೆ ಎಂಬ ಪರಿವೆ ಹಿರಿಯರಿಗಿಲ್ಲ. ಎಲ್ಲರಿಗೂ ಸ್ವಾಭಾವಿಕವಾಗಿ ಇರುವಂತೆ ಮಕ್ಕಳಿಗೂ ಅನೇಕ ದಿವ್ಯಶಕ್ತಿಗಳಿವೆ ಮತ್ತು ಆ ಶಕ್ತಿಗಳ ಬಲದಿಂದಲೇ ಮಗು ಹಿರಿಯನಾಗುತ್ತಾನೆಂಬ ಕಲ್ಪನೆಯೂ ಕೂಡ ಹಿರಿಯರಿಗಿಲ್ಲ. ಹೀಗೆ ಬೆಳೆಯುವ ಮಕ್ಕಳಿಗೆ ಸ್ವಾತಂತ್ರ್ಯದ ಅನುವು ಮಾಡಿ ಕೊಡದಿದ್ದರೆ ಮತ್ತು ಅವರ ಬೆಳವಣಿಗೆಗೆ ಬೇಕಾಗುವ ಸಾಧನಗಳನ್ನು ಸಕಾಲಕ್ಕೆ ಒದಗಿಸಿಕೊಡದಿದ್ದರೆ ಅವರು ಬೆಳವಣಿಗೆಯಲ್ಲಿ ಸರಿಯಾದ ಪ್ರಗತಿ ಹೊಂದದೆ ಹೆಚ್ಚು ಕಡಿಮೆ ರೀತಿಯಲ್ಲಿ ಸಮಾಜಕ್ಕೆ ಬಾಹಿರರಾದ ಇಲ್ಲವೆ ಸಮಾಜಕ್ಕೆ ಅಯೋಗ್ಯರಾದ ಮನುಷ್ಯರಾಗಿ ಸಮಾಜದ ಸರ್ವತೋಮುಖವಾದ ಪ್ರಗತಿಯಲ್ಲಿ ಅತಿಬಲಿಷ್ಠವಾದ ಕಂಟಕವಾಗುತ್ತದೆ. ಇದನ್ನು ತಪ್ಪಿಸಲು ಒಂದೇಒಂದಾದ ಉಪಾಯ: ಮಕ್ಕಳಲ್ಲಿಯ ಸ್ವಾಭಾವಿಕವಾಗಿಯೇ ಇರುವ ಶಕ್ತಿಗಳನ್ನು ಮರ್ಯಾದಿಸುವುದು ಮತ್ತು ಅವುಭರದಿಂದ ಬೆಳೆಯುವಂತೆ ಸುತ್ತಲಿನ ಪರಿಸ್ಥಿತಿಯನ್ನು ಸೂಕ್ತವಾದ ರೀತಿಯಲ್ಲಿ ಅನುವುಗೊಳಿಸುವುದು. ಮತ್ತು ಮಕ್ಕಳಿಗೆ ಸಂಪೂರ್ಣ ಸ್ವಾತಂತ್ರ್ಯವಿತ್ತು ಅವರು ತಮ್ಮ ದೈವಾಯತ್ತ ಶಕ್ತಿಗಳನ್ನು ತಮ್ಮದೇ ಆದ ರೀತಿಯಲ್ಲಿ ಹೂ

ಅರಳುವಂತೆ ಒಂದೊಂದೇ ದಳಗಳನ್ನು ಬಿಡಿಸುವಲ್ಲಿ ನೆರವಾಗುವದು. ಇವೇ ಮೊಂಟೆಸೋರಿ ಪದ್ಧತಿಯ ಗುಟ್ಟಾಗಿದೆ. ಅವರ ಹೇಳಿಕೆಯಂತೆ, "ಅನವಶ್ಯಕವಾಗಿ ಮಗುವಿಗೆ ನೀಡುವ ಪ್ರತಿಯೊಂದು ಸಹಾಯವೂ ಮಗುವಿನ ಸರ್ವತೋಮುಖವಾದ ಬೆಳವಣಿಗೆಯನ್ನು ಕುಗ್ಗಿಸುತ್ತಿದೆ."

ಈ ಮುಂದೆ ಡಾ. ಮೊಂಟೆಸೋರಿಯವರು ಸಾಮಾನ್ಯ ಮಕ್ಕಳ ವಿದ್ಯಾಭ್ಯಾಸಗಳಲ್ಲಿ ಬಹುಮುಖವಾಗಿ ಪ್ರಯೋಗ ನಡೆಸಿ ಯಶಸ್ವಿಯಾದರು. ವಿಜ್ಞಾನ ಪ್ರಪಂಚಕ್ಕೇ ಹೊಸದಾದ ಮಕ್ಕಳಲ್ಲಿಯ "ಜ್ಞಾನೇಂದ್ರಿಯಗಳ ಉದಯಕಾಲ"ಗಳನ್ನು ಕಂಡು ಹಿಡಿದು ಅವುಗಳ ಸಹಾಯದಿಂದ ಮಕ್ಕಳಿಗೆ ಯಾವಕಾಲದಲ್ಲಿ ಯಾವ ವಿಷಯಗಳಲ್ಲಿ ಆಸ್ಥೆಯುಂಟಾಗುವದೆಂಬುದನ್ನು ಅರಿತು ವಿದ್ಯಾಭ್ಯಾಸ ಮಾಡಿಸಿದರೆ ಮಕ್ಕಳು ಸಲೀಸಾಗಿ ವಿದ್ಯಾಭ್ಯಾಸ ಮಾಡಬಲ್ಲರು ಎಂಬುದನ್ನು ಪ್ರಾಯೋಗಿಕವಾಗಿ ಮಂಡಿಸಿದರು. ಇವರ ಶಾಲೆಗಳಲ್ಲಿ ಐದುವರುಷದ ಕೆಳಗಿನ ಮಕ್ಕಳು ಸಲೀಸಾಗಿ ಓದಬಲ್ಲರು; ಲೆಕ್ಕ ಮಾಡಬಲ್ಲರು. ಏಳುವರುಷದ ಮಕ್ಕಳು ಸಲಕರಣೆಗಳ ಸಹಾಯದಿಂದ ಬಹುದೊಡ್ಡ ಸಂಖ್ಯೆಗಳ ಲೆಕ್ಕ ಮತ್ತು ಭೂಮಿತಿ ಸಿದ್ಧಾಂತಗಳನ್ನು ಬಿಡಿಸಬಲ್ಲರು; ಭೂಗೋಲ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ ಮುಂತಾದ ವಿಷಯಗಳನ್ನು ತೀವ್ರವಾಗಿ ಗ್ರಹಿಸಬಲ್ಲರು. ಇವೆಲ್ಲಕ್ಕೂ ಡಾ. ಮೊಂಟೆಸೋರಿಯವರು ಕಂಡುಹಿಡಿದ ಜ್ಞಾನೋದಯಕಾಲಗಳ ಅರಿವು ಮತ್ತು ಅವರು ನಿರ್ಮಿಸಿದ ಸೂಕ್ತ ಸಲಕರಣೆ ಮತ್ತು ಮಕ್ಕಳಿಗೆ ಕೊಡುವ ಸ್ವಾತಂತ್ರ್ಯ– ಇವೇ ಅವರ ಶಿಕ್ಷಣ ಪದ್ಧತಿಯ ರಹಸ್ಯವಾಗಿದೆ.



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಹೋದ ತಿಂಗಳಲ್ಲಿ ಏಳು ಜನ ತಮ್ಮ ತಂಗಿಯರು ಸದಸ್ಯರಾಗಿದ್ದರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರವೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ **ಧಾರವಾಡ.**

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು.......... ..........................................

.............................. ..... ...................................... ..........

ಪೂರ್ಣ ವಿಳಾಸ...................... .................................

(ಮನೆ ನಂಬರು ಸಹಿತ) ............................. ............... .........

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು.............................. ಸಹಿ

## ಅಕ್ಕನ ಪೆಟ್ಟಿಗೆಗೆ ಈ ಸಾರೆ ಸದಸ್ಯರಾದವರು

೧. **ವಿಶಾಲ (ಶಿವಶಂಕರ) ಬ. ಕಣಜನವರ.** ೧೨ ವ. ೬ ತಿಂ. ಧಾರವಾಡ. ನಾಲ್ಕನೇ ವರ್ಗ. ಕತೆ, ಕವನ ರಚಿಸುವದರಲ್ಲೂ, ವಿದಾಭ್ಯಾಸದಲ್ಲೂ ಆಸಕ್ತಿ ಬಹಳ. ಇವನ ತೊಟ್ಟಿಲ ಹೆಸರು ಶಿವಶಂಕರನಾದರೂ ಇವನು ತನ್ನ ಕಾವ್ಯ ನಾಮವನ್ನು 'ವಿಶಾಲ'ನೆಂದಿಟ್ಟು ಕೊಂಡಿರುವನಂತೆ.

೨. **ವಿಮಲ ನೀ. ಕುಲಕರ್ಣಿ.** ವ. ೧೧ ಪುಣೆ. ಕನ್ನಡ ೬ನೇ ವರ್ಗ. ಇವಳ ಮೂಲ ಸ್ಥಳ ಧಾರವಾಡ ಜಿಲ್ಲೆಯ ಹಂದಿಗನೂರು. ಅವಳು ಪುಣೆಯಂತಹ ಮಹಾರಾಷ್ಟ್ರ ಪ್ರಧಾನ ಊರಿನಲ್ಲಿದ್ದರೂ ಸಹ ಕನ್ನಡವನ್ನೇ ಕಲಿಯಬೇಕೆಂಬ ಉದ್ದೇಶದಿಂದ ಅಲ್ಲಿ ಕನ್ನಡ ಶಾಲೆಗೇ ಸೇರಿದ್ದಾಳಂತೆ. ಆದರೆ ಉಳಿದ ಭಾಷೆಗಳನ್ನು ಕಲಿಯಬಾರದೆಂಬ ವಿಚಾರವು ಅವಳದಿಲ್ಲವಾದ್ದರಿಂದ ಮರಾಠಿಯನ್ನು ಸಹಾ ತಕ್ಕಮಟ್ಟಿಗೆ ಅಭ್ಯಾಸಮಾಡುತ್ತಿರುವಳಂತೆ. ಹಾಡು ಅಭ್ಯಾಸ, ಆಟ, ಪಾಟಗಳ ಕಡೆಗೂ ಬಹಳ ಲಕ್ಷಕೊಡುತ್ತಾಳಂತೆ. ನೋಡಿದಿರಾ; ಮಾತೃಭಾಷಾಭಿಮಾನಿ ವಿಮಲಳನ್ನು!

೩. **ವೃಂದಾ ಪುರಾಣೀಕ** ವ. ೬. ಧಾರವಾಡ. ಕನ್ನಡ ೨ನೇ ತರಗತಿ. ಮಾತಿನ ಮಲ್ಲಿ, ವರ್ಗದಲ್ಲಿ ಕುಳಿತುಕೊಳ್ಳುವದೇ ಅಪರೂಪ. ಇದಕ್ಕಾಗಿ ದಿನವೂ ಅವರ ಅಜ್ಜಿ, ತಾಯಂದಿರ ತಕರಾರು ಒಂದೇಸಮನೆ ನಡೆದಿದೆಯಂತೆ. ಆದರೆ ಇವಳದೊಂದು ವೈಶಿಷ್ಟ್ಯವೆಂದರೆ ಯಾವದೇ ಒಂದು ವಿಷಯ ಹೇಳಿದೊಡನೆ ಗ್ರಹಿಸುವದು. ನಿರೀಕ್ಷಣಬುದ್ಧಿ ಬಹಳ. ಇವಳೊಬ್ಬ ಆದರ್ಶ ವ್ಯಕ್ತಿಯಾಗುವ ಹಂಬಲಪಡುವದೊಳಿತಲ್ಲವೆ?

೪. **ನಲಿನಿ ಕೃಷ್ಣಾಚಾರ್ಯ ಅವಧಾನಿ.** ಹುಬ್ಬಳ್ಳಿ. ವಯಸ್ಸು ತಿಳಿಸಿಲ್ಲ. ಹಾಗೂ ತನ್ನ ಪರಿಚಯವೇನನ್ನೂ ಮಾಡಿಕೊಟ್ಟಿಲ್ಲ. ಕೇವಲ ಪೂರ್ಣ ವಿಳಾಸ ಮಾತ್ರ ಕೊಟ್ಟಿದ್ದಾಳೆ; ಹಾಗೂ ನಗೆಯಿಂದ ಕೂಡಿದ ಸಣ್ಣ ಕತೆ ಕಳುಹಿಸಿದ್ದಾಳೆ.

ಬಾಕಿ ಸದಸ್ಯರಾದರೂ ಈ ರೀತಿ ಪರಿಚಯ ತಿಳಿಸದೆ ಇರಬೇಡಿ. ಇದರಿಂದ ಕುತೂಹಲವುಳ್ಳ ನಿಮ್ಮ ಸಹ ಸದಸ್ಯರಿಗೆ ನಿಮ್ಮ ಪೂರ್ಣ ಪರಿಚಯವಾಗದೆ ವ್ಯಥೆಯಾಗುವದು.

೫. **ಗಿರಿಜಾ ಚೋಳನ್** ವ. ೯. ಧಾರವಾಡ. ಕನ್ನಡ ೪ನೇ ತರಗತಿಯಲ್ಲಿದ್ದಾಳೆ. 'ಓದುವದೆಂದರೆ ಬಲು ಇಷ್ಟ. ಗೂಗೆಯ ಹಾಗೆ ಕೂಡುವದೆಂದರೆ ತುಂಬಾ ಸಿಟ್ಟು ನನಗೆ' ಎಂದು ಬರೆದಿದ್ದಾಳೆ. ಹಾಗೂ ಅಕ್ಕನ ಪೆಟ್ಟಿಗೆಗೆ ಒಂದು ಸಣ್ಣಕತೆ ಹಾಗೂ ಒಂದು ಚುಟುಕು ಬಹಳ ಅಭಿಮಾನದಿಂದ ಕಳುಹಿಸಿದ್ದಾಳೆ.

೬. ಸೀತಾ ಚೋಳನ್ ವ. ೭. ಧಾರವಾಡ. 'ಶಾಲೆಗೆ ಹೋಗುವ ದೆಂದರೆ ಬಲು ಬೇಸರ ಅಜ್ಜನ ಹಾಗೆ ನೂಲುತೆಗೆಯಲು ಬಲು ಇಷ್ಟ'ವೆಂದು ತಿಳಿಸಿದ್ದಾಳೆ. 'ಬೆಕ್ಕು ಇಲಿಯ ಬಾಲವನ್ನು ಹಿಡಿದುಕೊಂಡಿದ್ದು' ಎಂಬ ಒಂದು ಸಣ್ಣಕತೆ ಕಳುಹಿಸಿದ್ದಾಳೆ. ಆದರೆ ಅವರ ಪುಟ್ಟ ಕೈಗಳಿಂದ ಬರೆದ ಮುದ್ದಾದ ಅಕ್ಷರ ಓದಲು ಅಕ್ಕನಿಗೆ ಬಹಳ ಆತುರವಾದರೂ ಸಹ ನಮ ಗಾರಿಗೂ ತಿಳಿಯಬಾರದಂತೆ ಅವಳು ತನ್ನ ವಿಚಾರವಮೂಡಿಸಿರುವ ಮೂಲಕ ಇನ್ನೆರಡು ವರ್ಷದನಂತರ ಅವಳಿಂದಲೇ ಓದಿಸಿಹಾಕಬೇಕೆಂಬ ವಿಚಾರವಿದೆ.

## ಸದಸ್ಯರ ಪತ್ರಕ್ಕೆ ಉತ್ತರ

ತೆವ್ಮಾ ವಿಶಾಲಾ, ನಿನ್ನನ್ನು ನಿನ್ನ ಕಾವ್ಯನಾಮದಿಂದಲೇ ಕರೆಯುತ್ತೇನೆ. ಕಾರಣವೆಂದರೆ ನನಗಾಹೆಸರು ಬಲುರುಚಿಸಿದೆ. ನಿನ್ನ ಎಲ್ಲ ಸುಗುಣಗಳೂ ವಿಶಾಲ ವಾಗಿ ಜಗತ್ತಿನಲ್ಲಿ ಹಬ್ಬಲೆಂದೇ ನಿನ್ನಕ್ಕನ ಬಯಕೆ. ನಿನ್ನ ಕವನ, ನಗೆಹನಿಗಳು ಚನ್ನಾಗಿವೆ. ಈ ಸಾರೆ ನಿನ್ನ ಪತ್ರ ತಲ್ಪಲು ಬಹಳ ವೇಳೆಯಾದ್ದರಿಂದ ನಮ್ಮ ಪ್ರಕಟಣೆಯ ವಿಷಯಗಳ ತಯಾರಿಕೆಯು ಪೂರ್ಣ ಮುಗಿದದ್ದರಿಂದ ಮುಂದಿನ ಸಾರೆ ಹಾಕುವೆ. ನೀನೆಂದಂತೆ ನಮ್ಮ ಪೆಟ್ಟಿಗೆಗೆ 'ಬಾಲಸಂಘ' ವೆಂಬ ಹೆಸರೇನೋ ಚನ್ನಾಗಿ ಒಪ್ಪಿದರೂ ಸಹ, ನಮ್ಮ ಮಾತೃಭಾಷೆಯಾದ ಅಕ್ಕನಪೆಟ್ಟಿಗೆ ಎಂಬ ಹೆಸರೇ ಬಹಳ ರುಚಿಯಾದಂತೆ ತೋರುತ್ತಿದೆ. ಇದಕ್ಕೆ ನಿನ್ನಭಿಪ್ರಾಯವೇನೆಂಬ ದನ್ನು ತಿಳಿಸುವಿಯಾ ? ನಿನ್ನ ಕವಿಶಕ್ತಿಗೆ ಹೆಚ್ಚು ಅನುಕೂಲ ಪರಿಸ್ಥಿತಿ ಸಿಕ್ಕು ಅದು ಅಭಿವೃದ್ಧಿ ಹೊಂದಬೇಕೆಂದು ಸದಾ ಹಾರೈಸುವ,

ನಿನ್ನ ಪ್ರೀತಿಯ ಅಕ್ಕ.

---

ಮಕ್ಕಳಿಗಾಗಿ ಈ ತಿಂಗಳ ಕಥೆ

# ಇಬ್ಬರು ಸಹೋದರಿಯರು

ಲೇಖಕಿ:— ಕು. ನಲಿನಿ ಕೃ. ಅವಧಾನಿ.

ರಾಮಶಾಸ್ತ್ರಿಗಳು ಕನ್ನಡಶಾಲೆಯ ಉಪಾಧ್ಯಾಯರು. ತಮಗೆಬಂದ ಸಂಬಳದಲ್ಲಿ ಮಾನದಿಂದ ಬದುಕು ಮಾಡುತ್ತಿದ್ದರು.

ಅವರಿಗೆ ಇಬ್ಬರು ಹೆಣ್ಣುಮಕ್ಕಳಿದ್ದರು. ಹಿರಿಯಳ ಹೆಸರು ಸುಶೀಲ. ಕಿರಿಯಳ ಹೆಸರು ಸುಂದರ. ಸುಶೀಲ, ಸುಂದರರು ಹೆಸರಿಗೆ ತಕ್ಕಂತೆ ಸುಶೀಲರೂ, ಸುಂದರರೂ ಆಗಿದ್ದರು. ಅವರಿಗೆ (ಸುಶೀಲ, ಸುಂದರರಿಗೆ) ಮನೆಯಲ್ಲಿಯೇ ರಾಮಾಶಾಸ್ತ್ರಿಯವರಿಂದ ಶಿಕ್ಷಣವು ದೊರೆಯಿತು.

ಸುಶೀಲ ಸುಂದರರು ಎಲ್ಲದರಲ್ಲಿಯೂ ಜಾಣರೂ, ಬುದ್ಧಿವಂತರೂ ಆಗಿದ್ದರು. ಆದರೆ ಅವರಿಗೆ ' ರ, ಲ ' ಅನ್ನಲು ಮಾತ್ರ ಬರುತ್ತಿದ್ದಿಲ್ಲ. ಶಾಸ್ತ್ರಿಗಳು ಏನು ಮಾಡಿದರೂ ಅವರಿಗೆ ' ರ, ಲ ' ಕಡೆಗೂ ಬರಲಿಲ್ಲ. ಕಡೆಗೆ ಶಾಸ್ತ್ರಿಗಳೇ ಬೇಸತ್ತು ಬಿಟ್ಟುಬಿಟ್ಟರು.

ಸುಶೀಲ, ಸುಂದರರಿಗೆ ಯೌವನವು ಬಂದಿತು. ವರಗಳು ಕನ್ನೆಗಳನ್ನು ನೋಡಲುಬಂದರು.

ನೋಡಲು ಚಲುವರು, ಜಾಣರು, ಬುದ್ಧಿವಂತರು ಎಂದು ಶಾಸ್ತ್ರಿಗಳು ಹೊಗಳುತ್ತಿದ್ದರು. ಆದರಂತೆ ನೋಡಲು ಚಲುವರು, ಅವರನ್ನು (ಸುಶೀಲ, ಸುಂದರರನ್ನು) ಪ್ರಶ್ನೆ ಕೇಳಿದೊಡನೆ ಶಾಸ್ತ್ರಿಗಳು ತಾವೇ ಉತ್ತರಕೊಡುತ್ತಿದ್ದರು. ಓದಿಸಿದೊಡನೆ ತಿಳಿಯುತ್ತಿದ್ದಿತು. ' ರ, ಲ ' ಅನ್ನಲು ಬರುವದಿಲ್ಲ ಎಂದು. ಹೀಗಾಗಿ ಎಲ್ಲರೂ ಬಿಟ್ಟುಹೋದರು. ಕಡೆಗೆ ಶಾಸ್ತ್ರಿಗಳು ಬೇಸತ್ತು ಎಲ್ಲಿಂದೋ ಎರಡು ವರಗಳನ್ನು ತಂದರು ಶಾಸ್ತ್ರಿಗಳು.

ಮಕ್ಕಳಿಗೆ ಈ ಸಲ ಮಾತ್ರ ನೀವು ಓದಬೇಡರಿ. ನಾನು ಹೇಳುತ್ತೇನೆ. ನಮ್ಮ ಹುಡುಗರಿಗೆ ಓದು ಬರುವದಿಲ್ಲ. ಎಂದು ಶಾಸ್ತ್ರಿಗಳು ಅಪ್ಪಣೆ ಮಾಡಿದರು.

ಬೀಗರು ಮನೆಗೆ ಬಂದರು. ಕನ್ನೆಯರು ಬಂದು ಕುಳಿತರು. ಚಹದ ಕಪ್ಪುಗಳು ಬೀಗರ ಮುಂದೆ ಬಂದವು. ಚಹದ ಜೋಡಿ ತಿನ್ನಲಿಕ್ಕೆಂದು ಪ್ಲೇಟಿನಲ್ಲಿ ' ಬುರಬುರಿ ' ಗಳು ಬಂದಿದ್ದವು

ಒಬ್ಬ ವರನು ಅವುಗಳನ್ನು ತಿನ್ನುತ್ತ ಈ ಬುರಬುರಿ ಬಹಳ ರುಚಿಯಾಗಿವೆ. ಯಾರು ಕರದಾರ ? ಎಂದು ಶಾಸ್ತ್ರಿಗಳನ್ನು ಪ್ರಶ್ನೆಮಾಡಿದನು.

ಇದನ್ನು ಕೇಳಿ ಸುಶೀಲ ಆನಂದದಿಂದೂಬ್ಬಿ ' ಈ ಬುಯುಬುಯಿ ನಾ ಕಯ್ದೆನಿ.' ಎಂದು ಹೇಳಿ ತನ್ನ ಮಾತನ್ನು ಮುಗಿಸಿದಳು. ಇದನ್ನು ಕೇಳಿ ಸುಂದರ ತನ್ನದೂ ಒಂದು ಜಾಣತನವನ್ನು ಹೇಳಬೇಕೆಂದು ' ಬುಯುಬುಯಿಯ ಹಿಟ್ಟ ನಾ ಕಯ್ಸೆನಿ.' ಎಂದು ಹೇಳಿದಳು.

ಆದನ್ನು ಕೇಳಿ ಬೀಗರು ಎದ್ದು ಶಾಸ್ತ್ರಿಗಳನ್ನು ಕರೆದು ನೀವು ನಮಗೆ ಮೋಸಮಾಡಬೇಕೆಂದು ಮಾಡಿದ್ದಿರಿ. ಎಂದು ಹೇಳಿ ಹೊರಟು ಬಿಟ್ಟರು. ಶಾಸ್ತ್ರಿಗಳು ನಿರುಪಾಯರಾಗಿ ನೆಲಕ್ಕೆ ಕುಸಿದುಬಿದ್ದರು.

## ನಗೆ ಹನಿ

**ಪೋಲೀಸ:—** (ರಾತ್ರಿಯಲ್ಲಿ ಓಡಾಡುವ ಕಳ್ಳನನ್ನು ನೋಡಿ) ಏ ! ರಾತ್ರಿಯಲ್ಲಿ ಅಲ್ಲಿ ಹೋಗುವವರು ಯಾರು ?

**ಕಳ್ಳ:—** ನಾನರೀ, ನೀವು ಮಲಕೊಂಡೀರೋ ಅಥವಾ ಗಸ್ತೀ ಮಾಡಾಕ ಹತ್ತೀರೋ ಅನ್ನೂದನ್ನ ನೋಡಾಕ ಬಂದೇನ್ರಿ.

ಗುರು:—ಏ ರಾಮಾ, ನಿನಗ ಯಾರ ಇತಿಹಾಸ ಚಲೋತ್ನಾಂಗ ಬರತೈತಿ ?

ರಾಮು:— ನನಗ ಸಿನೆಮಾ ಆ್ಯಕ್ಟ್ರೆಸ್ಸಿನ ಇತಿಹಾಸ ಬಹಳ ಚಲೋಬರ್ತೈತಿ. ಹೇಳ್ಲೇನ್ರಿ ?

— ಕು. ಶಾಂತಾ ಧಾರವಾಡ.

* * * * * *

ಶಾರದೆ:— ಇಂದು ಯಾವಾರ ? ಶನಿವಾರವೋ ?

ಪದ್ಮಾ:— ಅಲ್ಲಲ್ಲ. ಇಂದು ' ಆವಾರ '

— ಕು. ಸುನಂದಾ ಮುನ್ನೂರಾಯ ಧಾರವಾಡ.

* * * * * *

ಮುದುಕ:— ಏ. ಕಿಟ್ಯಾ, ಬೆಣ್ಣಿ ಹೆಂಗಿತ್ತೋ ?

ಕಿಟ್ಯಾ:— ಬೆಳ್ಳಗಿತ್ರೀ ಯಜ್ಜಾ

ಮುದುಕ:— ಅಲ್ಲೋ ಕಿಟ್ಯಾ, ಹ್ಯಾಂಗ ತಂದಿ ? ಅಂತ ಕೇಳಿದೆ.

ಕಿಟ್ಯಾ:— ಮುತ್ಯಾ, ಕೈಯ್ಯಾಗ ಹಿಡಕೊಂಡು ತಂದೀನ್ರೀ.

— ಶ್ರೀ. ಸರೋಜನಿ ಅ. ಜೇರೆ. ಧಾರವಾಡ.

† † † † † †

## ಒಗಟಗಳು

(೧) " ನಾನು ನಾಲ್ಕು ಅಕ್ಷರದವಳು ಇದ್ದೇನೆ; ಒಂದು ಎರಡನೆಯ ಅಕ್ಷರಗಳನ್ನು ಸೇರಿಸಿದರೆ ' ಶೂರ ' ಎಂಬರ್ಥವಾಗುವದು. ಎರಡನೆಯ ಮೂರನೆಯ ಅಕ್ಷರಗಳನ್ನು ಸೇರಿಸಿದರೆ ' ಲಕ್ಷ್ಮಿಯ ' ಹೆಸರು ಆಗುತ್ತದೆ. ಮೂರು ನಾಲ್ಕನೆಯ ಅಕ್ಷರಗಳನ್ನು ಸೇರಿಸಿದರೆ ಸೂರ್ಯ ಎಂಬರ್ಥವಾಗುವದು. ಹಾಗಾದರೆ ನಾನಾರು ? "

(೨) " ನಾನು ಮೂರು ಅಕ್ಷರದ ದೇವರ ನಾಮವಿರುತ್ತೇನೆ. ಒಂದು ಎರಡನೆಯ ಅಕ್ಷರಗಳನ್ನು ಸೇರಿಸಿದರೆ ಕೂದಲು ಎಂಬರ್ಥವಾಗುವದು. ಎರಡನೆಯ ಮೂರನೆಯ ಅಕ್ಷರಗಳನ್ನು ಸೇರಿಸಿದರೆ ' ಹೆಣ ' ಎಂಬರ್ಥವಾಗುವದು. ಹಾಗಾದರೆ ನನ್ನನ್ನು ಬಲ್ಲಿರಾ ? "

(೩) " ನಾನು ನಾಲ್ಕು ಅಕ್ಷರದವನಿದ್ದೇನೆ. ಒಂದು ಎರಡನೆಯ ಅಕ್ಷರಗಳನ್ನು ಸೇರಿಸಿದರೆ ' ಮನುಷ್ಯ ' ಎಂಬರ್ಥವಾಗುವದು. ಮೂರನೆಯ ನಾಲ್ಕನೆಯ ಅಕ್ಷರಗಳನ್ನು ಸೇರಿಸಿದರೆ ' ವಿಷ್ಣು ' ಎಂಬರ್ಥವಾಗುವದು. ಮೊದಲನೆಯ ನಾಲ್ಕನೆಯ ಅಕ್ಷರಗಳನ್ನು ಸೇರಿಸಿದರೆ. ' ಪ್ರಾಣಿ ' ಎಂಬರ್ಥವಾಗುವದು. ಆದರೆ ನಾನಾರು ? "

ಲೇಖಕಿ:— ಸರೋಜನಿ ಅ. ಜೇರೆ.

**ಹೋದ ತಿಂಗಳ ಒಗಟುಗಳ ಉತ್ತರಗಳು:—**

(೧) ಉಪ್ಪು (೨) ಗಂಟೆ (೩) ಲಾಲಾರಸ.

ಉತ್ತರಿಸಿದವರು:— ಕು. ಕಪಿಲಾ ಮತ್ತು ಕು. ರಮಾದೇವಿ

[ಒಗಟುಗಳಿಗೆ ಸರಿಯಾದ ಉತ್ತರಗಳನ್ನು ಕಳುಹಿಸಿದವರ ಹೆಸರುಗಳನ್ನು ಪ್ರಕಟಿಸಲಾಗುವದು.]

---

# ದೀಪಾವಳಿ

ಲೇ:— ಫತ್ತೇಪೂರ ಶಾಮಣ್ಣ ಬೆಳವಣಿಕಿ

ದಶದೆಸೆ ಪಸರಿಸು
ಹಬ್ಬವು ಬಂದಿದೆ
ಒಲುಮೆಯ ಹಿರಿಮೆಯು
ದೀಪಾವಳಿಯು (೧)

ಅತುದಿ ಈತುದಿ
ಭಾರತ ತುತ್ತುದಿ
ವರೆಗೂ ನಡೆಯುವ
ಸಂಭ್ರಮ ಹಬ್ಬ (೨)

ಸಂತಸರಸವನು
ಮನಸಿಗೆ ಹನಿಸುತ
ಯಾವುದೊ ಶಾಂತಿಯ
ಮನಸಿಗೆ ಸಾರುತ (೩)

ಹೃದಯದ ಕಂಗಳ
ತೆರಯಿಸ ಬಂದಿದೆ
ಮೋಹದ ಕತ್ತಲು
ಬೆಳಗಲು ಬಂದಿದೆ (೪)

ಬಲ್ಲಿದ ಬಡವನು
ಭೇದವ ಮೂಡದೆ
ಮನದಲಿ ಜ್ಯೋತಿಯ ಬೆಳಗನು
ಮೂಡಿಸ ಬಂದಿದೆ (೫)

ಸೋದರ ಸೋದರಿಯರಾ, ಈ ಸಾರೆ ದೀಪಾವಳಿಯಲ್ಲಿನ ನಿಮ್ಮ ಅನುಭವಗಳನ್ನು ಬರೆದು ಅಕ್ಕನ ಪೆಟ್ಟಿಗೆಗೆ ಕಳುಹಿಸಿರಿ. ಈ ಸಾರೆ ಸ್ಥಳಾಭಾವದ ಮೂಲಕ ಕೆಲವು ಸದಸ್ಯರ ಪತ್ರಕ್ಕೆ ಉತ್ತರಿಸಲಾಗದ್ದರಿಂದ ಮುಂದಿನ ಸಾರೆ ಉತ್ತರಿಸಲಾಗುವದು.

# ಸ್ತ್ರೀಯರ ಮೇಲೆ ಅತ್ಯಾಚಾರವೇಕೆ ನಡೆದಿದೆ?

[ ಕಳೆದ ಸಂಚಿಕೆಯ ಸ್ತ್ರೀಯರ ಮೇಲಿನ ಅತ್ಯಾಚಾರದ ಮೀಮಾಂಸೆಯ ಮುಂದಿನ ಮಾತು. ]

ಲೇ :— ವೆಂಕಮ್ಮ ಕೋಯಿಮುತ್ತೂರ.

ಯಾವದೇ ವಿಷಯದ ವಿಚಾರಮಾಡಬೇಕಾದರೂ, ಆ ವಿಷಯದ ಎಲ್ಲ ಮಗ್ಗಲುಗಳನ್ನು ಪರಿಶೀಲಿಸಿ ವಿಚಾರ ಮಾಡಬೇಕೆಂಬುದು ಮೊದಲಮಾತು. ಅಂತೆಯೇ ಸ್ತ್ರೀಯರಮೇಲೆ ಈ ರೀತಿ ಅತ್ಯಾಚಾರವಾಗಲು ಪುರುಷರೇ ಕಾರಣರೆಂದು ಹೇಳುವದು ಸಂಪೂರ್ಣತಪ್ಪು. ಇದಕ್ಕೆ ಪುರುಷರಷ್ಟೇ ಸ್ತ್ರೀಯರ ದೋಷವೂ ಇದೆ; ಆದರೂ ಸಹ ಅದರಲ್ಲಿ ಸದ್ಯದ ವಾತಾವರಣದಲ್ಲಿನ ದೋಷವೇ ಜಾಸ್ತಿಯೆಂದು ಹೇಳಬಹುದು. ಈ ವಾತಾವರಣದ ನಿರ್ಮಾಣಕರು ನಾವು ಮಾನವರೇ. ಅದರಲ್ಲೂ ಪುರುಷಸಮಾಜವೇ. ಸ್ವಭಾವತಃ ಸ್ತ್ರೀಯರು ದುರ್ಬಲರೂ, ಹೇಡಿಯರೂ ಅಲ್ಲದಿದ್ದರೂ ಸಹ ಅವರಮೇಲೆ ಈವರೆಗಾದ ಕೃತ್ರಿಮ ಸಂಸ್ಕಾರವು ಅವರನ್ನು ಹೇಡಿಗಳನ್ನಾಗಿಮಾಡಿದೆ. ಅವರಿಗೆ ತಮ್ಮಮೇಲೆ ಅತ್ಯಾಚಾರ ಮಾಡಬಂದ ಗಂಡಸನ್ನು ಎದುರಿಸುವ ಶಕ್ತಿ ನಿಸರ್ಗತಃ ಇದ್ದರೂ ಸಹ ಕೃತ್ರಿಮ ರೂಢಿಗಳ ಮೂಲಕ ಅದು ಮಾಯವಾಗಿದೆ. ಇಂದು ಹೆಣ್ಣಿನ ತಪ್ಪಿರಲಿ, ಇರದಿರಲಿ, ಅಂತೂ ಅವಳ ಮೇಲೆ ಸಂಶಯ ಬಂತೆಂದರೆ ಸಾಕು, ಸ್ವಜನರಿಂದಲೇ ಅವಳಿಗೆ ಬಹಿಷ್ಕಾರ, ಎಲ್ಲರೂ ಅವಳಿಗೆ ಹೆಸರಿಡುವವರೇ, ಬೊಟ್ಟುಮಾಡಿ ತೋರಿಸುವವರೇ, ಹೀಗಾಗಿ ತನ್ನ ಮನದ ವಿರುದ್ಧ ಅವಳು ತನ್ನ ಸ್ತ್ರೀತ್ವವನ್ನು ಬಲಿಕೊಟ್ಟಿದ್ದರೂ ಸಹ ಅವಳು ಬಹಿಷ್ಕೃತಳೇ. ಆದ್ದರಿಂದ ನಮ್ಮ ಸಮಾಜವು ದಿನದಿನಕ್ಕೆ ಅಧೋಗತಿ ಹೊಂದುತ್ತಿದೆ. ಲಗ್ನಪದ್ಧತಿಯೇನೋ ಆಗಿನ ಸಮಾಜವನ್ನು ಒಂದು ಸುಸ್ಥಿತಿಗೆ ತರುವಮಾರ್ಗವಾಗಿದ್ದರೂ ಸಹ ಈಗ ಅದು ಹದಗೆಟ್ಟಿದೆ. ಹಿಂದಿನ ಆಚಾರ ವಿಚಾರಗಳೆರಡರಲ್ಲೂ ಹೆಂಡತಿ ಎಂಬವಳು ಅರ್ಧಾಂಗಿಯೆಂದಿತ್ತು. ಆದರೆ ದಿನಗಳೆದಂತೆ ಅಲ್ಲಿ ಆಚಾರಕ್ಕೆ ಮಹತ್ವ ಉಳಿಯದೆ ವಿಚಾರಕ್ಕೆ ಮಾತ್ರ ಬೆಲೆ ಉಳಿಯುವಂತಾಯ್ತು. ಇನ್ನೂ ಮುಂದೆ ಕಾಲ ಗತಿಸಿದಂತೆ ಆಚಾರ ವಿಚಾರಗಳೆರಡೂ ಮಾಯವಾಗಿ ಅದೊಂದು ಭೂಷಣಪ್ರದ ವಾಕ್ಯವಾಗುಳಿಯಿತು. ಹಿಂದಿನ ಸಂಸ್ಕೃತಿಯೊಳಗಿನ ಸತ್ವವು ಹೋಗಿ ಮೇಲಿನ ಮುಸುಕುಮಾತ್ರ ಉಳಿಯಿತು. ಹೂರಣ ವಿಲ್ಲದ ಹೋಳಿಗೆಯ ಮೇಲ್ಮುಸುಕಾಯಿತು. ಲಗ್ನಸಮಯದಲ್ಲಿ ಹೇಳುವ ಮಂತ್ರಘೋಷಣೆಯ ಮರ್ಮವನ್ನರಿಯುವ ಬುದ್ಧಿಯೂ ಇಲ್ಲದ ಈಗಿನ ನಮ್ಮ ವಿಚಾರವೆಲ್ಲಿ ! ಮಂತ್ರ ಘೋಷಣೆಯಿಂದಲೇ ವಧೂವರರು ತಾವಿನ್ನುಮುಂದೆ ಹೇಗೆ ಕೂಡಿ ನಡೆದು, ಜೀವನದಲ್ಲಿ ಸಮರಸವನ್ನುಂಟುಮಾಡಬೇಕೆಂಬದನ್ನು ತಿಳಿಯುವ ಉದ್ದೇಶದಿಂದ ಕಲ್ಪಿಸಿದ ಆಗಿನ ಜನರ ವಿಚಾರವೆಲ್ಲಿ ! ಅಜಗಜಾಂತರ. ಇರಲಿ, ಆದರೂ ಆಗಿನ ವಾತಾವರಣಕ್ಕನುಸರಿಸಿ, ಆಗಿನ ಜನರ

ಮಾನಸಿಕ ಬೆಳವಣಿಗೆಗನುಸರಿಸಿ ಈ ಪದ್ಧತಿ ಹಾಕಿದ್ದೇನೋ ಸರಿಯಾದದ್ದೇ,ಆದರೆ ಈಗ ಬದಲಾದ ಪರಿಸ್ಥಿತಿಯನ್ನು ಅರಿಯದೆ ಇನ್ನೂ ಅದೇ ಮಟ್ಟಿನಲ್ಲುಳಿಯುವದೆಂದರೆ ಎಷ್ಟು ಹಾಸ್ಯಾಸ್ಪದ ! ಪುರಾಣಕಾಲಕ್ಕೂ, ವೇದಕಾಲಕ್ಕೂ ಹಿಂದೆ ನೋಡುತ್ತ ಹೋದರೆ ಮಾನವರೂ ಸಹ ಈಗಿನ ಕಾಡು ಮೃಗಗಳ ಪರಿಸ್ಥಿತಿಯಲ್ಲಿದ್ದುದೇ ಕಂಡು ಬರುತ್ತಿದೆ. ಈಗ ಇತರ ಪ್ರಾಣಿವರ್ಗಗಳು ಹೇಗೆ 'ಆಹಾರ ನಿದ್ರಾಭಯ ಮೈಥುನಾನಿ' ಎಂಬ ನಾಲ್ಕು ನೈಸರ್ಗಿಕ ವಿಕಾರಗಳಿಗೆ ತಲೆಬಾಗುತ್ತವೆಯೋ ಹಾಗೆ ಮಾನವನಾದರೂ ಒಂದಾನೊಂದು ಕಾಲದಲ್ಲಿದ್ದ; ಆದರೆ ಬರಬರುತ್ತ ಮಾನವನು ತನ್ನ ಬುದ್ಧಿಮತ್ತೆಯಿಂದ, ತಾನು ಇತರ ಪ್ರಾಣಿಗಳಿಗಿಂತ ಬೇರಿರುವೆನೆಂಬದನ್ನು ತಿಳಿದು ಅದರಂತೆ ತನ್ನ ವ್ಯವಹಾರದಲ್ಲಿ ಬದಲ್ಮಾಡಹತ್ತಿದ. ಆದರೆ ಬದಲಾಗುವ ನಡುವಿನ ಪರಿಸ್ಥಿತಿಯಲ್ಲಿ ಕೆಲವೊಂದು ಬುದ್ಧಿವಂತ ಋಷಿಗಳೆನ್ನಿ ಅಥವಾ ಉಪದೇಶಕರೆನ್ನಿ, ಯಾವದೊಂದು ಪದ್ಧತಿಯನ್ನು ಹೆಣುಮಕ್ಕಳ ಸಲುವಾಗಿ ಹಾಕಿಕೊಟ್ಟು ಅದಕ್ಕೆ ಧಾರ್ಮಿಕ ಕಲ್ಪನೆ ಕೊಟ್ಟರೋ ಆ ಮಟ್ಟವು ಮಾತ್ರ ಬದಲಾಗಬಾರದೆಂಬ ವಿಚಾರವು ಸುಧಾರಣೆಹೊಂದಿದ ಈ ವೈಜ್ಞಾನಿಕ, ಯಾಂತ್ರಿಕಯುಗದಲ್ಲೂ ಉಳಿದಿದೆ. ಹೀಗಾಗಲು ಕಾರಣವೇನು ? ಎಲ್ಲ ನಿಯಮ; ನಿರ್ಬಂಧಗಳನ್ನು ಮಾಡಿದವರು ಪುರುಷರೇ. ಆದ್ದರಿಂದ ಸ್ವಾಭಾವಿಕವಾಗಿ ಅವರಿಗೆ ಸ್ತ್ರೀಯರ ಕುಂದುಕೊರತೆಗಳು ತಿಳಿಯದಿರುವದು ಸಹಜವಿದೆ. ಕಾರಣ ಈ ತಮ್ಮ ತೊಂದರೆ ತೊಡಕುಗಳು ನಿವಾರಣೆಯಾಗಬೇಕಾದರೆ ಸ್ತ್ರೀಯರೇ ಮುಂದೆ ಬಂದು ತಮ್ಮ ಮೇಲಿನ ನಿಯಮಗಳಲ್ಲಿ ಪುರುಷರು ತಮ್ಮ ಸಲುವಾಗಿ ಬದಲ್ಮಾಡಿಕೊಂಡಂತೆ ಬದಲ್ಮಾಡಿಕೊಳ್ಳಬೇಕು. ಆದರೆ ಅವರಿಗೆ ಹಾಗೆ ಮುಂದೆ ಬರಲು ಧೈರ್ಯವಿಲ್ಲ ನಿಸರ್ಗತಃ ಅವರ ದೇಹರಚನೆಯು ಪುರುಷರಿಗಿಂತ ಬೇರೆ ಇದ್ದರೂ ಸಹ ಅವರೂ ಸಾಹಸಿಗಳೂ ದೃಢಮನಸ್ಸಿನವರೂ ಇದ್ದಾರೆ. ಆದರೆ ಯಾವದೋ ಕಾರಣದಿಂದಾಗಿ ಒಮ್ಮೆ ಹಿಂದೆಬಿದ್ದ ಅವರ ಮನಸ್ಸು ಇನ್ನೂ ಸ್ಥಿಮಿತಕ್ಕೆ ಬರಲೊಲ್ಲದಾಗಿದೆ. ಒಮ್ಮೆ ಮನಸ್ಸಿನಲ್ಲಿ ಕೂತ ಧಕ್ಕೆಯು ತೊಲಗಬೇಕಾದರೆ ಬಹಳ ಕಷ್ಟದ್ದಿದೆ. ಇದನ್ನು ಮಾನಸಶಾಸ್ತ್ರ ಬಲ್ಲವರು ಒಪ್ಪಲೇಬೇಕಾಗುವದು. ಸಣ್ಣಂದಿನಲ್ಲಿ ಮಕ್ಕಳ ಮನಕ್ಕೆ ಏನಾದರೂ ಅಘಾತ ಕೂತಿತೆಂದರೆ ಮುಂದೆ ಅವರು ದೊಡ್ಡವರಾದರೂ ಸಹ ಆ ಅಘಾತವು ಹಾಗೇ ಉಳಿದು ಅವರು ಹೇಡಿಗಳಾಗುವರು.

ನಮ್ಮ ಭಾರತವು ಎಷ್ಟೋ ವರ್ಷಗಳವರೆಗೆ ಪರತಂತ್ರಕ್ಕೆ ಸಿಲುಕಿ ಬಳಲಬೇಕಾದ ಪ್ರಸಂಗ ಬಂದದ್ದಾದರೂ ಇದೇ ಕಾರಣದಿಂದ. ಆದರೆ ನಮ್ಮಲ್ಲೂ ಅಲ್ಲಲ್ಲಿ ಕೆಲವೇ ಮಹಾತ್ಮರು ಉದಯಿಸಿ,ಸ್ವಾತಂತ್ರ್ಯದ ಬೀಜಬಿತ್ತಿ ಅದರ ಮಹತ್ವ ತಿಳಿಸಿ ಅದು ಮರೆಯಾಗುತ್ತಿದ್ದುದರಿಂದಲೇ ನಮಗೆ ಈಗ ಸ್ವತಂತ್ರಭಾರತ ಕಾಣುವ ಪ್ರಸಂಗ ಬಂದಿತು. ಇದರಂತೆಯೇ ಸ್ತ್ರೀಯರಲ್ಲಾದರೂ ಕೆಲವೇ ವ್ಯಕ್ತಿ

ಗಳು ಮುಂದೆ ಬಂದು ತಮ್ಮ ಕುಂದುಕೊರತೆಗಳನ್ನು ಜಗತ್ತಿನ ಮುಂದಿಟ್ಟು ಅದರ ನಿವಾರಣೆಗಾಗಿ ತಾವು ಹೋರಾಡಿ, ತಮ್ಮ ಹೆಣ್ಣು ಸಮಾಜದಲ್ಲಿ ವಿಚಾರವು ಜಾಗೃತ ವಾಗುವಂತೆ ಮಾಡಿದರೇ ಅವರಿಗೆ ಜಗತ್ತಿನಲ್ಲಿ ಒಂದು ಸ್ಥಾನವು ಸಿಗುವದು. ಇಲ್ಲ ವಾದರೆ ಜಗತ್ತಿನಲ್ಲಿ ಹುಟ್ಟಿ, ಸಾಯುವ ಎಷ್ಟೋ ಕ್ರಿಮಿಕೀಟಗಳಲ್ಲಿ ಇವರೂ ಒಬ್ಬ ರಾಗುವರೆಂಬಲ್ಲಿ ಸಂಶಯವೇನು ? ಅನಾಥ ಬಡಹೆಣ್ಣುಮಕ್ಕಳು ತಮ್ಮ ಬಡತನದ ನಿವಾರಣೆಗಾಗಿ ಶ್ರೀಮಂತರ ಮನೆಗಳಲ್ಲಿ ದುಡಿಯಲು ನಿಂತಾಗ ಅಲ್ಲಿ ಅವರಿಗಾಗುವ ಮಾನಹಾನಿ, ದೇಹಹಾನಿಗಳ ಕಡೆಗೆ ಯಾರು ಲಕ್ಷಿಸುತ್ತಿದ್ದಾರೆ ? ಅದೇ ಮನೆಯಲ್ಲಿ ಬೇಕಾದಷ್ಟು ಹೆಣ್ಣುಮಕ್ಕಳಿದ್ದರೂ ಸಹ, ಅಡಿಗೆ ಕೆಲಸಕ್ಕಾಗಿ ನಿಂತ ಬಡ ಹೆಣ್ಣು ಮಗಳೊಬ್ಬಳು ತನ್ನ ಧನಿಯ ಮನೆಯ ಗಂಡಸರಿಂದಲೇ ತನ್ನ ಮನದ ವಿರುದ್ಧ, ಬಲಾತ್ಕಾರದಿಂದಾಗಲೀ ಅಥವಾ ಅವರು ಹೇಳಿದಂತೆ ಕೇಳದಿದ್ದಲ್ಲಿ ತನ್ನ ಮಕ್ಕಳು ಮರಿಗಳ ಗತಿಯೇನೆಂಬ ವಿಚಾರದಿಂದ ಅಪರಿಹಾರ್ಯ ಪರಿಸ್ಥಿತಿಯಿಂದಾಗಿಯಾಗಲಿ, ಕೆಟ್ಟಾಗ, ಅವಳನ್ನು ಹೊರಹಾಕುವರು, ಹೆಸರಿಡುವರು, ಅವಳಿಂದ ತಮ್ಮ ಗಂಡಸರು ಹಾಳಾದರೆನ್ನುವರು, ಇನ್ನೂ ಬಾಯಿಗೆ ಬಂದದ್ದನ್ನು ಬೊಗಳುವರು. ಇದಾರ ತಪ್ಪೆಂಬದನ್ನು ಇನ್ನುವರೆಗೆ ಯಾರಾದರೂ ಒಬ್ಬಾನೊಬ್ಬ ವ್ಯಕ್ತಿಯಾದರೂ ವಿಚಾರಿಸಿದ ಉದಾಹರಣೆಗಳಿವೆಯೇನು ? ಹೆಣ್ಣಿನ ಪಕ್ಷಹಿಡಿದು ಬಡಿದಾಡುವ ಏಕ ಪಕ್ಷೀ ವಿಚಾರವಲ್ಲವಿದು. ಆದರೆ ನಿಜವಾದ ಸಂಗತಿಯನ್ನು ಜನರ ಮುಂದಿಟ್ಟು, ಅವರಲ್ಲಾಗಿರುವ ತಪ್ಪುಭಾವನೆಗಳನ್ನು ತಿದ್ದಿ, ಎರಡೂ ಪಕ್ಷಗಳನ್ನು ಸಮವಾಗಿಸ ಬೇಕೆಂಬ ವಿಚಾರದಿಂದ ಹೊರಟ ಹೃದ್ಗತ ಬಡಬಡಿಕೆಯಿದು. ಇಂತಹ ಘಟನೆ ಗಳನ್ನು ನಾವು ದಿನದಿನವೂ ಎಷ್ಟು ಕೇಳುತ್ತಿಲ್ಲ ! ಇದರದ್ದೇ ಆಧಾರ ಹಿಡಿದು ಪುರು ಷರೇ ಎಷ್ಟು ಕತೆ ಕಾದಂಬರಿಗಳನ್ನು ರಚಿಸಿ, ಜನರ ಮನ ತಿರುಗಿಸುವ ಪ್ರಯತ್ನ ಪಟ್ಟಿಲ್ಲ ? ಆದರೂ ಈಗ ಜಗತ್ತಿನಲ್ಲಿ ನಡೆದಿರುವದೇನು ? ಹೆಣ್ಣೆಂಬದೊಂದು ಮಾನವವರ್ಗದಿಂದ ದೂರವಾದ ವಸ್ತುವೆಂದಲ್ಲವೇ? ನಡೆದ ಸಂಗತಿಯು ನವ ಶಕ್ತಿ ಎಂಬ ಮರಾಠಿಪತ್ರಿಕೆಯಲ್ಲಿ ಮೊನ್ನೆ ಮೊನ್ನೆ ಸಾತಾರೆಯಲ್ಲಿ ೪ ವರ್ಷದ ಹೆಣ್ಣು ಹಸುಗೂಸೊಂದರ ಮೇಲೆ ೪೫ ವರ್ಷದ ಮುದುಕನೊಬ್ಬನು ಅತ್ಯಾಚಾರಮಾಡಿದ ನೆಂದು ಸುದ್ದಿಬಂದಿದೆ.ಇದರಂತೆಇನ್ನೂಎಷ್ಟೋಪತ್ರಿಕೆಗಳು ಇಂತಹಸುದ್ದಿಸಾರುತ್ತಿವೆ. ಹಾಗೂದಿನವೂ ನಾವು ಪ್ರತ್ಯಕ್ಷನೋಡುತ್ತಿದ್ದೇವೆ.ಇವರಿಗೆ ಏನೆನ್ನಬೇಕು? ನರರಾಕ್ಷಸ ರಲ್ಲವೇ ಇವರು. ಹೀಗಾಗಲು ಕಾರಣವೆಂದರೆ ಹೆಣ್ಣುಮಕ್ಕಳಲ್ಲಿ ಒಕ್ಕಟ್ಟಿಲ್ಲ. ಸಹಕಾರವಿಲ್ಲ, ಸಹನಗುಣವಿಲ್ಲ. ಧೈರ್ಯವಿಲ್ಲ, ನಮ್ಮವರು, ತಮ್ಮವರೆಂಬ ಆಪ್ತ ಭಾವನೆ ಇಲ್ಲ. ತಮ್ಮಂತೆ ಇತರರೆಂಬ ವಿಚಾರವಿಲ್ಲ. ನಾವು ಹೇಡಿಗಳು, ಭೀರು ಗಳು, ಈರ್ಷಾಸ್ವಭಾವದವರು, ಅಸಹಕಾರಿಗಳು, ವೈಯ್ಯಕ್ತಿಕ್ಕಷ್ಟೇ ಮಹತ್ವ ಕೊಡುವವರಾಗಿದ್ದುದೇ ಕಾರಣವಲ್ಲವೇ ? ಹಳೆಯ ಪಾವಿತ್ರ್ಯದ ಕಲ್ಪನೆಯ ವಿರುದ್ಧ ಹೋರಾಡುವದೆಂದರೇ ನಮ್ಮ ಮಾನಹಾನಿ ಎಂಬುವವರು, ನಮ್ಮ ಈ ವರ್ತನೆ

ಯಿಂದಲೇ ನಮ್ಮ ಅವಹೇಳನವಾಗುತ್ತಿದೆ. ಹೆಣ್ಣುಮಕ್ಕಳಲ್ಲಿ ಒಕ್ಕಟ್ಟಿನ ಗುಣವಿಲ್ಲವೆಂದೇ ಗಂಡಸರು ಧೈರ್ಯದಿಂದ ಅವರ ಮೇಲೆ ಕೈಮಾಡಲು ಅನುವು ದೊರೆತಿದೆ. ಈಗ ಅವರು ಒಂದಾಗಿ, ಯಾವದೇ ಒಂದು ಹೆಣ್ಣುಜೀವಿಯು ಮೇಲೆ ಒಬ್ಬ ಗಂಡಸಿನಿಂದ ಅತ್ಯಾಚಾರವಾದ ಸುದ್ದಿ ಕೇಳಿದೊಡನೆ; ಆ ಗಂಡಸನ್ನು ಎದುರಿಸಿದಲ್ಲಿ ತಿರುಗೊಮ್ಮೆ ಅವನೆಂದೂ ಹೀಗೆ ಮಾಡಲಾರನಿಷ್ಟೇ ಅಲ್ಲ ಸುತ್ತಲಿನ ಜನರೂ ಇಂಥಹ ಕಾರ್ಯಕ್ಕೆ ಹೆದರುವರು.ಯಾರ ಮನೆಯಲ್ಲೇ ಆದರೂ, ಮನೆಯಲ್ಲಿ ಅಡಿಗೆ,ಕೆಲಸಕ್ಕಾಗಿ ನಿಂತ ಅನಾಥಳಾದ ಹೆಣ್ಣೊಬ್ಬಳ ಮೇಲೆ ಅತ್ಯಾಚಾರ ನಡೆದ ಆಮನೆಯ ಹೆಣ್ಮಕ್ಕಳು ಆ ಅನಾಥಳನ್ನು ಹೊರಹಾಕದೆ, ಅವಳ ಸುಖದುಃಖ ಕೇಳಿಕೊಂಡು, ಅವಳ ನಿಜಪರಿಸ್ಥಿತಿಯನ್ನು ಸಹಾನುಭೂತಿಯಿಂದ ವಿಚಾರಿಸಿ, ಅವಳ ಬೆನ್ನುಕಟ್ಟಿಕೊಂಡು ಅತ್ಯಾಚಾರ ನಡೆಸಿದ ಆ ಗಂಡಸಿನ ವಿರುದ್ಧ ನಿಲ್ಲಲಿ,(ಅವನು ಮನೆಯ ಯಜಮಾನ, ಮಗ, ಅಥವಾ ತಮ್ಮ ಯಾರೇ ಇರಲಿ) ಮುಂದೇನು ಪರಿಣಾಮವಾಗುವದು ನೋಡಿರಿ! ನಿಜವಾಗಿ ಹೆಣ್ಣುಮಕ್ಕಳು ಸ್ವತಃ ಇವೆಲ್ಲವನ್ನು ವಿಚಾರಮಾಡಿ ಸಂಘಟಿತರಾದಲ್ಲಿ ಈಗ ನಡೆದಿರುವ ಅತ್ಯಾಚಾರ, ಅನಾಚಾರಗಳು ನೂರಕ್ಕೆ ೯೦ ರಷ್ಟು ಕಡಿಮೆಯಾದೀತು.

ನಿಸರ್ಗ ನಿಯಮದ ಪ್ರಕಾರ ಹೆಣ್ಣುಗಂಡುಗಳ ಸೃಷ್ಟಿಯು ಪ್ರಜೋತ್ಪಾದನೆಗಾಗಿ ಇದೆ. ಇದರಲ್ಲಿ ನಿಸರ್ಗ ನಿಯಮಕ್ಕೆ ಧಕ್ಕೆಬಾರದೆ ಸುಪ್ರಜಾ ಜನನವಾಗಬೇಕೆಂದೇ ಲಗ್ನಪದ್ಧತಿಯು ಉತ್ಪನ್ನವಾಗಿದೆ. ಇದರ ಹೆಚ್ಚಿನ ವಿವರಕ್ಕಾಗಿ ಡಾ. ಜಾನ್ ಕಾವೆನ್ ಕೃತ Scince of new Life ಪುಸ್ತಕ ನೋಡಿರಿ. ಈಗಿನ ಜನಾಂಗದಲ್ಲಿ ಇದರ ಅರ್ಥವು ವಿಪರೀತವಾಗಿದೆ. ಸುಧಾರಿಸಿದ ಜನರು ಲಗ್ನವೆಂದರೆ ಸುಖೋಪಭೋಗದ ಸಾಧನವೆಂದು ತಿಳಿದಂತಿದೆ. ಲಗ್ನವೆಂಬುದು ಕಾಯ್ದೆಶೀರ ವೇಶ್ಯಾವೃತ್ತಿಯಲ್ಲಿ ಪರ್ಯವಸಾನ ಹೊಂದಿದೆ. ಪಾವಿತ್ರ್ಯದ ಉಚ್ಚ ಕಲ್ಪನೆಯು ಅತಿ ನೀಚ ಮಟ್ಟಕ್ಕಿಳಿದಿದೆ. ಇದರಿಂದಾಗಿ ಹೆಣ್ಣಿನ ಮನಸ್ಸು ಅತಿ ಹೇಡಿಯಾಗಿ ಈಗಿನ ಅವರ ಪಾವಿತ್ರ್ಯದ ಕಲ್ಪನೆಯು, ಯಾವನೊಬ್ಬ ಗಂಡಸಿನ ಸಂಪರ್ಕವಾದರೂ ಸಹ ತನ್ನ ಸತೀತ್ವಕ್ಕೆ ಧಕ್ಕೆ ತಗಲಿದೆಂಬಷ್ಟು ಕೀಳ್ಮಟ್ಟಕ್ಕಿಳಿದಿದೆ. ಹೀಗಾಗಿ ಹೆಣ್ಣು ತಾನು ಗಂಡಸರ ಸನಿಹಕ್ಕೆ ಸಹಾ ಹಾಯ್ದು ಹೋಗುವದು ತಪ್ಪೆಂದು ಭಾವಿಸುತ್ತಾಳೆ.ಇದಕ್ಕೂ ಮೊದಲು ಗಂಡಸರ ಎದುರು ಸುಳಿಯುವದು ತಪ್ಪೆಂದುಭಾವಿಸಿ ಘೋಷಾಪದ್ಧತಿ ರೂಢಿಗೆ ಬಂದಿದೆ. ಹೀಗಾಗಿ ಪರಗಂಡಸೆಂದರೆ ತನ್ನಿಂದ ದೂರವಿರಬೇಕಾದ ಜೀವಿಯೆಂಬ ಭಾವನೆ ಹೆಣ್ಣಿನಲ್ಲಿ ಘಟ್ಟಿಯಾಗಿ ಮೂಡಿಬಿಟ್ಟಿದೆ. ಇದರ ಪರಿಣಾಮವು ಹಿಂದೆ ಲಗ್ನಪದ್ಧತಿಯು ಬರುವ ಮೊದಲಿದ್ದ ವಾಡಿಕೆಗಿಂತ ಅಂದರೆ ಬಾಕಿ ಇತರ ಪ್ರಾಣಿಗಳಂತೆ ಹೆಣ್ಣು ಗಂಡುಗಳು ಕೇವಲ ನೈಸರ್ಗಿಕ ನಿಯಮದ ಪ್ರಕಾರ ತಮ್ಮಲ್ಲಿ ವಿಷಯದ ಹಸಿವು ಹುಟ್ಟಿದಾಗ ಮಾತ್ರ ಒಬ್ಬರಿಗೊಬ್ಬರ ಸಾಮೀಪ್ಯವನ್ನು ಬಯಸುವದಕ್ಕಿಂತ ಕೆಳಮಟ್ಟಕ್ಕಿಳಿದಿದೆ. ಹೀಗಾಗಿ ಹೆಣ್ಣು ಅಧೈ

ರ್ಯವಂತಳಾಗಿದ್ದಾಳೆ. ಇದರಿಂದ ಅವಳಿಗೆ ಗಂಡಸಿನ ಸಂಪರ್ಕವಾದೊಡನೆ ಕಾಮುಕ ಕಲ್ಪನೆಗಳು ಉತ್ಪನ್ನವಾಗಿ ಇಂದ್ರಿಯಗಳು ಶಿಥಿಲವಾಗಿ ಹಿಡಿತದಲ್ಲಿ ನಿಲ್ಲದೆ ಇರುವದರಿಂದ ಗಂಡಸರಿಗೆ ಅವರ ಮೇಲೆ ಸಹಜವಾಗಿ ಅತ್ಯಾಚಾರ ಮಾಡಲು ಅನುಕೂಲ ದೊರಕಿಸಿ ಕೊಡುತ್ತದೆ. ಕಾರಣ ಇದನ್ನು ತಪ್ಪಿಸ ಬೇಕಾದರೆ ಹೆಣ್ಣು ಮೊದಲು ಗಂಡಸರೆಂಬವರು ತಮಗಿಂತ ಬೇರೆಯ ಜೀವಿಗಳೆಂದೂ, ತಾವು ಅವರ ಉಪಭೋಗದ ವಸ್ತುವೆಂದೂ ತಿಳಿದಿರುವದನ್ನು ಬೇರು ಸಹಿತ ಕಿತ್ತೊಗೆದು, ಅವರಾದರೂ ನಮ್ಮಂತೆ ಸೃಷ್ಟಿಯಲ್ಲಿಯ ಒಂದು ಜೀವಿ. ಅವರಿಗೆ ಎಷ್ಟು ಅನುಕೂಲತೆಗಳನ್ನು ಸೃಷ್ಟಿಯು ಕಲ್ಪಿಸಿಕೊಟ್ಟಿರುವದೋ ಅಷ್ಟೇ ತನಗೂ ಕಲ್ಪಿಸಿಕೊಟ್ಟಿರುವದು. ಈ ಜಗತ್ತಿನಲ್ಲಿ ತಾವಿಬ್ಬರೂ ಒಬ್ಬರಿಗೊಬ್ಬರು ಸಹಕಾರಿಗಳೇ ಹೊರತು ತಾವು ಅವರ ದಾಸಿಯರಲ್ಲವೆಂಬುದನ್ನು ಮನದಟ್ಟು ಮಾಡಿಕೊಂಡು ಹೆಜ್ಜೆ ಇಡಬೇಕು. ತನ್ನ ಮೇಲೆ ಯಾವದೇ ಗಂಡಸು ಅತ್ಯಾಚಾರ ಮಾಡಬಂದಾಗ ಅವನ ಅಂಡಕೋಶಕ್ಕೆ ಧಕ್ಕೆ ಕೊಡುವದರಿಂದ ವಿಷಯ ವಾಸನೆಯಿಂದ ಬಂದ ಅವನ ಕಾಮುಕ ಶಕ್ತಿಯು ನೋವಿನ ಕಡೆಗೆ ಪರ್ಯವಸಾನ ಹೊಂದಿ ಅವನು ನಿಸ್ತೇಜನಾಗುವನು. ಇದನ್ನು ಎಷ್ಟೋ ದೊಡ್ಡ ದೊಡ್ಡ ಗ್ರಂಥಗಳು ಹೇಳಿವೆ. ಹಿಂದೆ ಯಾರೇ ಹೆಣ್ಣುಮಕ್ಕಳು ತಮ್ಮ ಮೇಲೆ ಅತ್ಯಾಚಾರ ಮಾಡಬಂದ ಗಂಡಸರನ್ನು ಎದುರಿಸಿದ್ದರೆ ಅವರು ಇದೇ ಉಪಾಯದಿಂದ ಎದುರಿಸಿರಬೇಕೆಂದು ಮಾನಸ ಶಾಸ್ತ್ರಜ್ಞರು ಹೇಳಿದ್ದಾರೆ. ಸೃಷ್ಟಿನಿಯಮಕ್ಕನುಸರಿಸಿ ತನ್ನಿಚ್ಛೆ ಇಲ್ಲದೆ ಗಂಡಸು ಎಂದಿಗೂ ತನ್ನ ಮೇಲೆ ಅತ್ಯಾಚಾರ ಮಾಡಲು ಸಾಧ್ಯವಿಲ್ಲೆಂಬ ದೃಢನಂಬಿಕೆಯಿಂದ ಯಾವದೇ ಗಂಡಸು ಅತ್ಯಾಚಾರ ಮಾಡಬಂದಾಗ ಹೆಣ್ಣು ಧೈರ್ಯಗೆಡಬಾರದು. ಈ ಧೈರ್ಯವು ಈಗ ಒಮ್ಮೆಲೇ ಹೆಣ್ಣುಮಕ್ಕಳಿಗೆ ಬರುವದು ಸಾಧ್ಯವಿಲ್ಲದಿದ್ದರೂ ದಿನಕಳೆದಂತೆ ಇದರ ಸುಮರ್ಯವಿತಲ್ಲಿ ಆ ಧೈರ್ಯವು ಬಂದೇ ತೀರುವದೆಂಬುದರಲ್ಲಿ ಸಂಶಯವಿಲ್ಲ.

## ಸುದ್ದಿ-ಸಮಾಚಾರ

### ಅಂತರ್ ಜಾತೀಯ ವಿವಾಹ ಶ್ರೀ. ರಾಜಾಜಿಯವರ ಬೆಂಬಲ.

ಕಾಡಲೂರ:— ೨೧. ಮದ್ರಾಸದ ಮುಖ್ಯ ಮಂತ್ರಿಗಳಾದ ಶ್ರೀ. ಸಿ. ರಾಜಗೋಪಾಲಾಚಾರಿಯವರು ಇಂದು ಕಡಲೂರು ರಾಜಕೀಯ ಪರಿಷತ್ತಿನಲ್ಲಿ ಭಾಷಣ ಮಾಡುತ್ತ ಜಾತಿಪಂಗಡಗಳ ಪದ್ಧತಿಯು ನಿರ್ಮೂಲವಾಗಬೇಕಾದರೆ ಅಂತರ್ ಜಾತೀಯ ವಿವಾಹವೊಂದೇ ಉಪಾಯವೆಂದು ಹೇಳಿದರು.

"ದಕ್ಷಿಣಭಾರತದಲ್ಲಿ ಜಾತಿಪಂಗಡಗಳ ವಿಷವುಬೇರೂರಿದ್ದು ಇದರಿಂದ ಪ್ರಗತಿಗೆ ತೊಡಕುಂಟಾಗಿದೆ. ಜಾತಿ ಭೇದ ಭಾವಗಳ ವಿರುದ್ಧ ಬರೆಯುವದಾಗಲಿ ಇಲ್ಲವೇ ಹೆಸರನ್ನು ಬದಲಿಸುವದಾಗಲಿ, ಇಲ್ಲವೇ ಸಹಭೋಜನಮಾಡುವದಾಗಲಿ ಇದಕ್ಕೆ ಯೋಗ್ಯಉಪಾಯವಾಗಲಾರವು. ಇದರಿಂದ ಜಾತೀಯತೆಯ ಸಮಸ್ಯೆಯು ತೃಣಮಾತ್ರವೂಬಗೆಹರಿಯಲಾರದು–" ಎಂದರು.

### ೪ ವರ್ಷದ ಬಾಲಿಕೆಯಮೇಲೆ ಬಲಾತ್ಕಾರ ಮಾಡಿದ್ದಕ್ಕಾಗಿ
### ೭ ವರ್ಷ ಕಠಿಣಶಿಕ್ಷೆ

ಸಾತಾರಾ:— ೨೦. ಇಲ್ಲಿಯ ಸದು-ಕೋಳಿ ಎಂಬ ೪೫ ವರ್ಷದ ಗೃಹಸ್ಥನು ೪ ವರ್ಷದ ಬಾಲಿಕೆಯಮೇಲೆ ಬಲಾತ್ಕಾರ ಮಾಡಿದ ಆರೋಪಕ್ಕಾಗಿ ಇಲ್ಲಿಯ ಸೆಶನ್ ಜಜ್ಜರು ೭ವರ್ಷ ಕಠಿಣಶಿಕ್ಷೆಯನ್ನು ವಿಧಿಸಿದರು. ಆರೋಪಿಯ ಈ ಪಶುವರ್ತನಕ್ಕಾಗಿ ಈತನಿಗೆ ಫಟಕಿ ಶಿಕ್ಷೆಯನ್ನು ಕೊಡಬೇಕಾಗಿತ್ತು. ಆದರೆ ಆತನ ಬಡಕಶರೀರ ಹಾಗೂ ವಯಸ್ಸಿನ ಕಡೆಗೆನೋಡಿ ಇದಕ್ಕಿಂತಲೂ ಹೆಚ್ಚಿನ ಶಿಕ್ಷೆಯನ್ನು ಕೊಟ್ಟಿಲ್ಲ ಎಂದು ಕಡುತರ ಶಬ್ದದಿಂದ ನಿಷೇಧಿಸಿದರು.

### ವಿಶೇಷ ವಿವಾಹ ಕಾಯ್ದೆ

ಹೈದ್ರಾಬಾದ್ ಸೆ. ೯- ಹೈದರಾಬಾದ ಸರಕಾರವು ವಿಶೇಷ ವಿವಾಹ ಕಾಯ್ದೆಯನ್ನು ಪ್ರಕಟಿಸಿದೆ. ಇದರಲ್ಲಿ ವಿವಾಹದಬಗ್ಗೆ ರಜಿಸ್ಟ್ರೇಶನ್ ಮಾಡಿಕೊಳ್ಳುವದರ ಬಗ್ಗೆ ಕಾಯ್ದೆಮಾಡಲಾಗಿದೆ. ಈ ಬಗ್ಗೆ ಸಾರ್ವಜನಿಕರ ಅಭಿಪ್ರಾಯವನ್ನು ಕೋರಲಾಗಿದೆ.

### ಅನಾಥ ಹಸುಗೂಸು !

ರೇವಾ:— ೨೦. ನಿನ್ನೆ ನಸುಕಿನಲ್ಲಿ ಇಲ್ಲಿಯ ಅನಾಥ ಆಶ್ರಮದ ಎದುರಿಗೆ ಒಂದು ಬುಟ್ಟಿ ಇದ್ದದ್ದು ಕಂಡುಬಂತು. ಆಬುಟ್ಟಿಯಿಂದ ಅಳುವಸ್ವರ ಕೇಳಬರುತ್ತಿತ್ತು. ಬುಟ್ಟಿಯ ಸುತ್ತಲೂ ನಾಯಿಗಳು ಬೊಗಳುತ್ತ ನಿಂತಿದ್ದವು. ಹಾದಿ ಹಿಡಿದು ಹೋಗುವವರು ಬುಟ್ಟಿಯನ್ನು ತೆಗೆದು ನೋಡಲಾಗಿ ಅದರಲ್ಲಿ ಒಂದು ತಿಂಗಳ ಹೆಣ್ಣುಕೂಸುಇತ್ತು. ಆದರ ಮಗ್ಗಲಿಗೆ ಒಂದು ಸೀಶೆಯಲ್ಲಿ ಹಾಲುಹಾಗೂ

ಒಂದು ಚಿಕ್ಕ ಹವ್ಮಿಣ್ಣೆ ಇದ್ದವು. ಹಿಂದಿನಿಂದ ಆ ಕೂಸನ್ನು ಸ್ತ್ರೀಯರ ಆಸ್ಪತ್ರೆಗೆ ಕಳುಹಿಸಿಕೊಡಲಾಯಿತು.

## ಕಾರವಾರದಲ್ಲಿ ಶಿಶುಕಲ್ಯಾಣ ಕೇಂದ್ರ

೨೦. ಕಾರವಾರ ಸಿವ್ಹಿಲ್ ಆಸ್ಪತ್ರೆಯ ಹಿರಿಗೆಯ ವಾರ್ಡಿನಲ್ಲಿ ಶಿಶುಕಲ್ಯಾಣ ಕೇಂದ್ರವೊಂದು ತೆರೆಯಲ್ಪಟ್ಟಿದ್ದು ಅಲ್ಲಿ ದಿನಾಲು ಸಂಜೆಯ ೪ ರಿಂದ ೬ವರೆಗೆ ೫ವರ್ಷದ ಕೆಳಗಿನ ಹುಡುಗರಿಗೆ ಉಚಿತ ವೈದ್ಯಕೀಯಸಲಹೆ ಹಾಗೂ ಉಪಚಾರ ದೊರೆಯುತ್ತದೆ. ಸಾರ್ವಜನಿಕರು ಕೇಂದ್ರದ ಲಾಭ ಪಡೆಯಬಹುದು.

## ಗಂಡನಿಗೆ ವಿಷಹಾಕಿದ ಹೆಂಡತಿ.

ಪುಣೆ:— ಗುಂಗವಣಿಯಲ್ಲಿ ಭಾಗುತುಕಾರಾಮ ಕಚರೆ ಎಂಬವಳು ತನ್ನ ಗಂಡನಿಗೆ ಅನ್ನದಲ್ಲಿ ಕಾಜು ಹಾಕಿ ಅವನನ್ನು ಕೊಲ್ಲುವಸಾಹಸ ಮಾಡಿದ್ದರಿಂದ ಅವಳಿಗೆ ೬ತಿಂಗಳ ಕಠಿಣಶಿಕ್ಷೆ ವಿಧಿಸಲಾಯಿತು.

## ಡಾಕ್ಟರನ ಹೆಂಡತಿಯೇ ಕೂಸು ಕದ್ದಳು.

ಹೊಸದಿಲ್ಲಿ:— ಇಲ್ಲಿಯ ಆಸ್ಪತ್ರೆಯಲ್ಲಿದ್ದ ಡಾಕ್ಟರನ ಹೆಂಡತಿಯೊಬ್ಬಳು ೩ದಿನಗಳ ಒಂದು ಮಗುವನ್ನು ಕದ್ದದ್ದರಿಂದ ವಿಚಾರಣೆಗೆ ಒಳಪಟ್ಟಿದ್ದಾಳೆ. ಮ್ಯಾಜಿಸ್ಟ್ರೇಟರು ಅವಳ ಹೇಳಿಕೆಯನ್ನು ಕೇಳಿಕೊಂಡು ಒಂದು ವರ್ಷದ ಸದ್ವರ್ತನದಬಗ್ಗೆ ಮುಚ್ಚಳಿಗೆ ಬರೆದು ಕೊಡಬೇಕೆಂದು ವಿಧಿಸಿದ್ದಾರೆ. ಅವಳು ತನ್ನ ಅಪರಾಧವನ್ನು ಒಪ್ಪಿಕೊಂಡು ತನಗೆ ಮಕ್ಕಳಿಲ್ಲದ್ದರಿಂದ ಗಂಡನು ಬೇರೆ ಮದುವೆ ಮಾಡಿಕೊಳ್ಳಬಹುದೆಂದು ಮಗು ವನ್ನು ಕದ್ದುದಾಗಿಯೂ, ತನನ್ನು ಕ್ಷಮಿಸಬೇಕೆಂದೂ ಕೇಳಿಕೊಂಡಳು.

## ಹಳ್ಳಿಯ ಹುಡುಗಿಗೆ ೫೦೦ ರೂ. ಬಹುಮಾನ.

ಜೋಧಪುರ ರಾಜಾಸ್ಥಾನದ ಪೋಲೀಸ್ ಮುಖ್ಯಾಧಿಕಾರಿಗಳು ಈ ದಿನ ಢಕಾಯಿತರನ್ನು ನಿರ್ಮೂಲ ಮಾಡುವ ಕಾರ್ಯದಲ್ಲಿ ಸಹಾಯ ನೀಡಿದವರಿಗೆ ತಲಾ ೫೦೦ ರೂ. ಗಳ ಬಹುಮಾನವನು ಹಂಚಿದರು. ಒಟ್ಟು ೮೦೦೦ ರೂ. ಗಳ ಬಹು ಮಾನವನ್ನು ಹಂಚಿದರು. ಬಹುಮಾನಪಡೆದವರಲ್ಲಿ ಸೈರಿಯು ಬಾಯ್ ಎಂಬ ಹಳ್ಳಿಯ ಹುಡುಗಿಯೂ ಒಬ್ಬಳು. ಆಕೆಯು ಡಕಾಯಿತರು ಅಡಗುತ್ತಿದ್ದ ಸ್ಥಳ ವೊಂದಕ್ಕೆ ಬೆಂಕಿ ಇಟ್ಟು ಸುಟ್ಟುಹಾಕಿದಳಂತೆ

## ಪ್ರೇಮಯಾಚನೆಯ ಕರಾರುಗಳು.

ತರುಣ ತರುಣಿಯರ ಪ್ರೇಮ ಸಂಪಾದನೆ ವ್ಯವಹಾರದಲ್ಲ ಮಧ್ಯಬ್ರಹ್ಮದೇಶದ ಮಿಯಾಂಗಯಾನ ಮತ್ತು ಪಾಕೋಕು ಪ್ರದೇಶವನ್ನು ತಮ್ಮ ಆಧೀನದಲ್ಲಿಟ್ಟು ಕೊಂಡಿರುವ ಕಮ್ಯುನಿಷ್ಟರು ಕೆಲವೊಂದು ನಿಯಮಗಳನ್ನು ಮಾಡಿದ್ದಾರೆಂದು ತಿಳಿಯುತ್ತದೆ.

ಮೂರುಪ್ರೇಮ ಪತ್ರಗಳನ್ನು ಉತ್ತರವೀಯದೆ ಓರ್ವತರುಣಿ ನಿರಾಕರಿಸಿದಾಗ ಆ ತರುಣನಿಗೆ ಆಕೆಯಮೇಲೆ ಪ್ರೇಮ ಮಾಡುವ ಅಧಿಕಾರಉಳಿಯುವದಿಲ್ಲ. ಈ ನಿಯಮಭಂಗ ಮಾಡುವವರಿಗೆ ವಿಶೇಷ ತರಹದ ಶಿಕ್ಷೆ ವಿಧಿಸಲ್ಪಡುವದು. ಆದರೆ ಈ ಶಿಕ್ಷೆಯ ಸ್ವರೂಪವೇನು ? ಎಂಬುದು ಮಾತ್ರ ತಿಳಿದು ಬಂದಿಲ್ಲ.

### ವಿಚಿತ್ರ ರೂಢಿ

### ತನ್ನ ಹೆಂಡತಿಯನ್ನೇ ಮತ್ತೊಮ್ಮೆ ಲಗ್ನ ಮಾಡಿಕೊಳ್ಳುವಿಕೆ

ರಾಯಪೂರದ ಹತ್ತಿರ ಇದ್ದ ದೇವರಿ ಎಂಬಲ್ಲಿ ಶ್ರೀ ವಾರೇರ ರಾಹುತ ಎಂಬ ೫೦ ವರ್ಷದ ಗೃಹಸ್ಥನು ತನ್ನ ಧರ್ಮಪತ್ನಿಯನ್ನೇ ಮತ್ತೊಮ್ಮೆ ಈಗ ಲಗ್ನವಾದನು. ಆ ರಾಹುತರಿಗೆ ಈಗ ೧೧ ಜನ ಮಕ್ಕಳಿದ್ದಾರೆ. ಇಂಥ ವಿಚಿತ್ರ ರೂಢಿಯು ಈ ಭಾಗದಲ್ಲಿ ಇನ್ನೂ ಅದೆ.

### ಕಳ್ಳನ ಕುತ್ತಿಗೆ ಕೊಯ್ದ ವೀರಮಹಿಳೆ

ಜಬ್ಬಲಪೂರದಲ್ಲಿ ಕಮಲಾಬಾಯಿ ಎಂಬುವಳು ತನ್ನ ಗಂಡನೊಡನೆ ವಾಸಿಸುತ್ತಿದ್ದಳು. ಗಂಡನು ಒಂದು ಕಾರಖಾನೆಯಲ್ಲಿ ಕೆಲಸಮಾಡುತ್ತಿದ್ದಾನೆ. ಕಮಲಾಬಾಯಿಯನ್ನು ಈಗ ೨ ತಿಂಗಳ ಹಿಂದೆ ಅವಳ ತವರುಮನೆಯವರು ತಮ್ಮೂರಾದ ಗದಗವಾರಕ್ಕೆ ಕರೆದೊಯ್ದರು. ಹೋದವಾರದಲ್ಲಿ ಕಮಲಾಬಾಯಿಯನ್ನು ಕರೆಯಲಿಕ್ಕೆಂದು ಆಕೆಯ ಮೈದುನನು ಹೋಗಲು, ಅವನೊಡನೆ ಮರುದಿನ ಹೊರಟಳು. ಜಬ್ಬಲಪೂರದಿಂದ ಗದಗವಾರ ಅಷ್ಟೇನೂ ದೂರ ಇಲ್ಲದ್ದರಿಂದ ಕಾಲ್ನಡಿಗೆಯಿಂದಲೇ ಹೊರಟರು. ದಾರಿಯು ಸ್ವಲ್ಪ ಕಾಡುಪ್ರದೇಶ. ಕಳ್ಳಕಾರರ ಭಯವು ಹೆಚ್ಚಾಗಿತ್ತು. ಆದರೂ ಧೈರ್ಯದಿಂದ ಹೊರಟರು. ಸ್ವಲ್ಪದೂರ ಹೋಗುವಷ್ಟರಲ್ಲಿ ಒಬ್ಬ ಕಳ್ಳನು ಕೈಯಲ್ಲಿ ಚೂರಿ ಹಿಡಿದು ಕೊಂಡು ಬೆದರಿಸುತ್ತ ಬಂದು ಮೈದುನನನ್ನು ಚೂರಿಯಿಂದ ಇರಿದು ಕೆಡವಿದನು. ಆ ಕಳ್ಳನ ಮೈಯೆಲ್ಲ ರಕ್ತಮಯವಾಯಿತು. ಆ ಕಳ್ಳನು ಮತ್ತೆ ಕಮಲಾಬಾಯಿಯ ಹತ್ತಿರಬಂದು ನಿನ್ನ ಬಂಗಾರವಡವೆಗಳನ್ನೆಲ್ಲ ಕೊಡು ಎಂದು ಕೇಳಿದನು. ಆಗ ಅವಳು ಧೈರ್ಯತಾಳಿ ಎದೆಗುಂದದೆ ನಿನ್ನ ಬಟ್ಟೆಗಳೆಲ್ಲ ರಕ್ತದಿಂದ ತೊಯ್ದಿವೆ ಚೂರಿಯೂ ರಕ್ತಮಯವಾಗಿದೆ. ಈ ಸ್ಥಿತಿಯಲ್ಲಿ ನೀನು ನನ್ನನ್ನು ಮುಟ್ಟಿದರೆ ನನ್ನ ಮೈಯೂ ರಕ್ತಮಯವಾಗುತ್ತದೆ, ನೀನೂ ಸಿಕ್ಕಿಕೊಳ್ಳಬಹುದು. ಆದ್ದರಿಂದ ನಿನ್ನ ರಕ್ತಹತ್ತಿದ ಬಟ್ಟೆಗಳನ್ನೂ, ಚೂರಿಯನ್ನೂ ಇಟ್ಟು ಬಾ ಎಂದಳು ಆಗ ಆ ಕಳ್ಳನು ಬಟ್ಟೆಗಳನ್ನು ಕಳೆದು ಚೂರಿಯನ್ನು ಕೆಳಗಿಟ್ಟು ಆಕೆಯ ಹತ್ತಿರ ಬರಹತ್ತಿದನು. ಕಮಲಾಬಾಯಿ ಸಮಯ ಸಾಧಿಸಿ ಆ ಚೂರಿಯನ್ನೂ ಕೈಯಲ್ಲಿ ತಕ್ಕೊಂಡು ಆತನ ಕುತ್ತಿಗೆಗೆ ಎರಡು ಸಾರೆ ಇರಿದಳು. ಕಳ್ಳನು ಅಲ್ಲೆ ಒದ್ದಾಡಿ ಬಿದ್ದನು. ಅವಳು ಮೈದುನನನ್ನು ಕರೆದುಕೊಂಡು ಸಾವಕಾಶ ಮನೆಗೆ ಹೋದಳು.

## ವಿಚಿತ್ರ ವಿವಾಹ ಸಂಬಂಧಃ ಹಿಂದೂ ವರನೂ, ಫಾರ್ಸಿ ವಧುವೂ ಮಾಡಿಕೊಂಡ ಕರಾರು

ನವದೆಹಲಿ:— ವಿಚಿತ್ರ ನಿಬಂಧನೆಯುಳ್ಳ ವಿವಾಹದ ಕರಾರೊಂದನ್ನು ಪ್ರಾಂತ್ಯಗಳ ಸಭೆಯಲ್ಲಿ ನ್ಯಾಯಾಂಗ ಸಚಿವರಾದ ಶ್ರೀ. ಸಿ. ಸಿ. ವಿಶ್ವಾಸರವರು ಈದಿನ ಓದಿಹೇಳಿದರು. ಹೈದ್ರಾಬಾದದ ಶ್ರೀ. ವಿ. ಕೆ. ಧಾಗೇ ಪಿ. ಡಿ. ಎಫ್‌ರವರು ಫಾರ್ಸಿ ಯುವತಿಯೊಬ್ಬಳನ್ನು ಮದುವೆಯಾಗಲು ಹವಣಿಸಿ ಆಕೆಯಹತ್ತಿರ ಒಂದು ಕರಾರನ್ನು ಮಾಡಿಕೊಂಡಿದ್ದರು. ವರನು ಹಿಂದೂ ಮತವನ್ನಾಗಲೀ, ವಧುವು ಫಾರ್ಸಿಮತವನ್ನಾಗಲೀ ಬಿಡಬೇಕೆಂಬ ನಿಬಂಧನೆಯಿರಲಿಲ್ಲ.

ವಿವಾಹಕ್ಕೆ ಅಗತ್ಯವಾದ ನ್ಯಾಯ, ಧರ್ಮ ಮತ್ತು ಸ್ವಭಾವ ಸಿದ್ಧವಾದ ನಿಯಮಗಳಿಗನುಗುಣವಾಗಿ ನಾವಿಬ್ಬರೂ ಮದುವೆ ಮಾಡಿಕೊಳ್ಳಲು ಒಪ್ಪಿ, ಈ ಕೆಳಗೆ ಕಂಡ ನಿಯಮಗಳಿಗೆ ಬದ್ಧರಾಗಿರುತ್ತೇವೆ.

"ನಾವಿಬ್ಬರೂ ದೈಹಿಕ ಮತ್ತು ಮಾನಸಿಕ ವಿಶ್ವಾಸದಿಂದ ವರ್ತಿಸುತ್ತೇವೆ. ನಮ್ಮ ನಮ್ಮ ಆಸ್ತಿಪಾಸ್ತಿಗಳು ಬೇರೆ ಬೇರೆಯಾಗಿರಲು ಒಪ್ಪಿದ್ದೇವೆ. ನಮ್ಮ ನಮ್ಮ ಗೋತ್ರನಾಮಗಳನ್ನು ಹಾಗೆಯೇ ಇಟ್ಟುಕೊಳ್ಳುತ್ತೇವೆ."

ನಮ್ಮ ತರುವಾಯ ನಮ್ಮ ಆಸ್ತಿಪಾಸ್ತಿಗಳು ನಮ್ಮ ಮಕ್ಕಳನ್ನು ೨೫ ವರ್ಷಗಳವರೆಗೂ ಸಾಕಿಸಲಹುವ ಮತ್ತು ಓದಿಸುವ ಹೊರೆಯನ್ನು ಹೊತ್ತು ಕೊಳ್ಳುವ ಧರ್ಮದರ್ಶಿಗಳ ಸಮಿತಿಗಾಗಲೀ ಅಥವಾ ಸರಕಾರಕ್ಕಾಗಲೀ ಹೋಗ ಬಹುದು.

ನಮ್ಮ ನಿಧನದ ನಂತರ ನಮ್ಮ ಕಳೇಬರಹಗಳನ್ನು ಮೆಡಿಕಲ್ ಕಾಲೇಜದ ವಿದ್ಯಾರ್ಥಿಗಳಿಗೆ ಪರಿಶೀಲನೆಗೆ ಕೊಡಬೇಕು. ಪರಿಶೀಲನೆಯ ನಂತರ ಕಳೇಬರಹ ಗಳಿಗೆ ಅಂತ್ಯಕ್ರಿಯೆಯು ನಡೆಯಬೇಕು. ಎಂದು ಅದರಲ್ಲಿ ವಿವರಿಸಲಾಗಿತ್ತು"

ನ್ಯಾಯಾಂಗ ಸಚಿವರು ವಿಶೇಷ ವಿವಾಹಗಳ ಮಸೂದೆಯನ್ನು ಮಂಡಿಸಿ ದಾಗ ಅವರಿಗೆ ಸದಸ್ಯರೊಬ್ಬರು ಮೇಲ್ಕಂಡ ಕರಾರನ್ನು ಕೊಟ್ಟರು.

## ವಿಶ್ವವೈಚಿತ್ರ್ಯ

ಕೊಯಮತ್ತೂರು ೫. ಆಸಾಮದ ಗುಡ್ಡಗಾಡಿನಲ್ಲಿರುವ ಒಂದು ಜನಾಂಗ ದಲ್ಲಿ ಗಂಡಸರ ಬದಲು ಹೆಂಗಸರೇ ದುಡಿಯುವರೆಂದು ಈ ಹಿಂದೆ ಆಸಾಮದ ಗವ್ಹರ್ನರರಾಗಿದ್ದ ಶ್ರೀ. ಶ್ರೀಪ್ರಕಾಶರು ಇಲ್ಲಿಯ ವಣಿಕ್ ಸಂಘದಲ್ಲಿ ಹೇಳಿದರು.

ಅವರು ಮುಂದೆಸಾಗಿ "ಆ ಭಾಗದಲ್ಲಿಯ ಗಂಡಸರಿಗೆ ಜಗತ್ತಿನ ಉಳಿದ ಭಾಗದಲ್ಲಿಯ ಗಂಡಸರೂ ಕೂಡ ದುಡಿಯುವರೆಂದು ಕೇಳಿ ಆಶ್ಚರ್ಯ ವಾಯಿತು. ನಾನು ಆಸಾಮದ ಗವ್ಹರ್ನರನಾಗಿದ್ದಾಗ ಅಲ್ಲಿಯ ಗುಡ್ಡಗಾಡಿನ ದೇವಾಲಯ ಒಂದಕ್ಕೆ ಹೋಗಿದ್ದೆನು. ಆದರೆ ಅಲ್ಲಿಯ ದೇವಾಲಯದಲ್ಲಿ ಹೆಂಗಸರೇ ಕಂಡುಬರಲಿಲ್ಲ. ಹಾಗೇಕೆಂದು ನಾನು ಕೇಳಿದ್ದಕ್ಕೆ ಆಭಾಗದಲ್ಲಿ ಗಂಡಸರ ಬದಲು ಹೆಂಗಸರೇ ದುಡಿಯುವರೆಂದು ಹೇಳಲಾಯಿತು." ಎಂದರು.



# ಸಾದರ ಸ್ವೀಕಾರ

೧. **ಬಾಣಂತಿ ಉಪಚಾರ ಮತ್ತು ಕೆಲವು ಸ್ತ್ರೀರೋಗಗಳು :—**

ಲೇಖಕರು:–ಶ್ರೀ. ಗುಂಡಾಚಾರ್ಯ ಸವಣೂರ. L. A. M. S. ಹುಬ್ಬಳ್ಳಿ. ಬೆಲೆ ೧-೬-೦

೨. **ಬಡವರ ಹೆಣ್ಣು:—** ಕಥಾ ಸಂಕಲನ. ಲೇಖಕರು ಶ್ರೀ. ಹ. ರಾ. ಕಿದಿಯೂರು. ಬೆಲೆ ಎಂಟಾಣೆ.

೩. **ಅಮರವಾಣಿ:—** ಮಾಸಪತ್ರಿಕೆ. ಸಂಪಾದಕರು : ಶ್ರೀ. ಬಿ. ಎಂ ವಿಶ್ವೇಶ್ವರ ಶಾಸ್ತ್ರಿ ವಿದ್ವಾನ. ಬಿಡಿಸಂಚಿಕೆ ೮ ಆಣೆ. ವಾರ್ಷಿಕ ಚಂದಾ ೬ ರೂ

**ವಿಮರ್ಶೆ :—**

**ವ್ಯಾಕರಣ —** ವಿವಿಧ ಸಾಹಿತ್ಯ ಮಾಲೆ ಕುಸುಮ ೪–೫–೬

ಬರೆದವರು:— ಪಂಡಿತ ಚ. ಎ. ಕವಲಿ.

ಪ್ರಕಾಶಕರು:— ರಾಮಾಶ್ರಯ ಬುಕ್ ಡಿಪೋ, ಧಾರವಾಡ.

ಇದು ಮಾಧ್ಯಮಿಕ ಶಾಲೆಗಳ ೮–೯–೧೦–೧೧ ತರಗತಿಗಳ ವಿದ್ಯಾರ್ಥಿಗಳ ಅಭ್ಯಾಸಕ್ಕಾಗಿ ಬರೆದ ಪುಸ್ತಕ. ಆಯಾತರಗತಿಗಳಿಗೆ ಗೊತ್ತುಪಡಿಸಲಾದ ಅಭ್ಯಾಸ ಕ್ರಮವನ್ನು ಅನುಸರಿಸಿದ ವ್ಯಾಕರಣ, ಛಂದಸ್ಸು, ಅಲಂಕಾರವು ವಿವಿಧ ಸಾಹಿತ್ಯ ಶಬ್ದವೃತ್ತಿ, ರಸವಿಚಾರ, ಸಾಹಿತ್ಯದ ಸಮಾಲೋಚನೆ, ಪ್ರಬಂಧದ ಪರಿವಾರ ಮುಂತಾದ ಹಲವು ವಿಷಯಗಳ ಕಲಬೆರಕೆಯ ಈ ಗ್ರಂಥಗಳನ್ನೆ ವ್ಯಾಕರಣದ– 'ಶಾಸ್ತ್ರ' ದ ಒರೆಗಲ್ಲಿಗೆ ತಿಕ್ಕಿ ವಿಮರ್ಶೆ ಮಾಡಿದರೆ ಅದು ಯಾವ ಮಟ್ಟಕ್ಕೆ ನಿಲ್ಲ ಬಹುದೋ ಹೇಳಲಾಗುವದಿಲ್ಲ. ಮೇಲಿನವರು ಗೊತ್ತುಪಡಿಸಿದ ಅಭ್ಯಾಸಕ್ರಮ ಅನುಸರಿಸುವದು ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ಅನಿವಾರ್ಯವಾದ ಮಾತು. ಮತ್ತು ಅವರು ಅಂಥ ಸಂಗ್ರಹ ಗ್ರಂಥಗಳನ್ನು ಅಪೇಕ್ಷಿಸುವದೂ ಕೂಡ ಅಷ್ಟೇ ಅನಿವಾರ್ಯವಾಗಿದೆ. ಈ ದೃಷ್ಟಿಯಿಂದ ಪ್ರಸ್ತುತ ಪುಸ್ತಕಗಳು ರಚಿತವಾಗಿದ್ದು ಅವರ ಕೋರಿಕೆಗಳನ್ನು ಅವು ಪೂರೈಸಬಹುದು.

' ಇವು ವಿದ್ಯಾರ್ಥಿಗಳಿಗಾಗಿ ರಚಿತವಾದವು, ಶಾಲಾಧಿಕಾರಿಗಳಿಂದ ಪಾಠ ಪುಸ್ತಕದಂತೆ ಸ್ವೀಕೃತವಾದಾಗ ಎಲ್ಲರೂ, ಬಡವರು ಹಣವುಳ್ಳವರು ಎಂಬ ಭೇದ ವಿಲ್ಲದೆ ಅಗತ್ಯವಾಗಿ ಕೊಳ್ಳಬೇಕಾದ ಪುಸ್ತಕ, ಎಂಬ ದೃಷ್ಟಿಯಿಂದ ನೋಡಲಾಗಿ ನ್ಯೂಸಪ್ರಿಂಟ ಕಾಗದದ ಈ ಪುಸ್ತಕಗಳಿಗಿಟ್ಟ ಬೆಲೆಯು ಹೆಚ್ಚು ಎಂದು ಹೇಳಲೇ ಬೇಕಾಗುವದು. ಪ್ರಕಾಶಕರು ಮುಂದಣ ಮುದ್ರಣಕಾಲದಲ್ಲಿ ಇವುಗಳೊಳಗೆ ನುಸುಳಿಕೊಂಡ ಲೋಪದೋಷಗಳನ್ನೂ ಬೆಲೆಯ ವಿಚಾರವನ್ನೂ ವಿಮರ್ಶಿಸ ಬೇಕೆಂದು ಸೂಚಿಸುವೆವು.



## ಶ್ರೀ. ತಿಮ್ಮಮ್ಮನವರ ಚರಿತ್ರೆಯು

ಲೇಖಕು:— ಶ್ರೀ. ನಾ. ಶ್ರೀ. ರಾಜಪುರೋಹಿತ

ಇತಿಹಾಸ ಸಂಶೋಧಕರು ಧಾರವಾಡ.

ತುರಡಗಿಗ್ರಾಮದ ತಪೋಧನರಾದ ಜ್ಯೋತಿಷಿ ಶ್ರೀ. ನರಸಿಂಹಾಚಾರ್ಯ ಹಾಗೂ ಸಾಧ್ವೀಶಿರೋಮಣಿ ಶ್ರೀಮತಿ ಚಂದ್ರಲಾದೇವಿ ಎಂಬ ಸತ್ವಶಾಲಿಗಳಾದ ದಂಪತಿಗಳ ಮಗಳೇ ನಮ್ಮ ಕಥಾನಾಯಕಿಯಾದ ಸಾಧ್ವೀಮಣಿ ಶ್ರೀ. ತಿಮ್ಮಮ್ಮ ನವರು. ಪ್ರಾಚೀನ ಸಂಪ್ರದಾಯದ ಪ್ರಕಾರ ಅವರ ಎಂಟನೆಯ ವರ್ಷದಲ್ಲಿಯೇ ಮುದ್ದಲಗುಂದಿಗ್ರಾಮವಾಸಿಗಳಾದ ಶ್ರೀ. ವೆಂಕಟನರಸಿಂಹ ನಾಯಕ ಚಿನಿವಾಲರ ಮಕ್ಕಳಾದ ಚಿ॥ ಅಶ್ವತ್ಥ ಎಂಬ ವರನೊಡನೆ ಲಗ್ನವಾಯಿತು. ಅದರೆ ದೈವದಾಟದ ಮುಂದೆ ಯಾರು ? ತಿಮ್ಮಮ್ಮನವರು ಲಗ್ನವಾಗಿ ಅತ್ತೆಯಮನೆಗೆ ಹೋದ ೨ ವರ್ಷ ಗಳಲ್ಲೇ ಅವಳಿಗೆ ವೈಧವ್ಯಾವಸ್ಥೆಯು ಪ್ರಾಪ್ತವಾಯಿತು. ಆದರೆ ಬಾಲ್ಯದಿಂದಲೂ ಉಜ್ವಲ ಮನೋವೃತ್ತಿಯುಳ್ಳ ತಿಮ್ಮಮ್ಮನವರು ತಮ್ಮ ಮುಂದಿನ ಆಯುಷ್ಯ ವನ್ನೆಲ್ಲಾ ವೆಂಕಟಾಚಲ ಪತಿಯ ಧ್ಯಾನದಲ್ಲಿಯೇ ಸಮರ್ಪಿಸುವ ದೃಢನಿಶ್ಚಯ ಮಾಡಿದರು.

# ಸ್ತ್ರೀಯರೂ ಮತ್ತು ಚುನಾವಣೆಗಳೂ

ಸ್ತ್ರೀಯರು ರಾಜಕಾರಣಗಳಲ್ಲಿ ಭಾಗವಹಿಸಿದರೇ ರಾಜ್ಯವು ಸುಖದಿಂದಿರಲು ಸಾಧ್ಯವುಂಟು, ಹಾಗೂ ಅವರ ವ್ಯವಸ್ಥೆಯಿಂದ ರಾಜ್ಯಗಳಲ್ಲಿ ಈಗ ಆಗುತ್ತಿರುವ ಯುದ್ಧ, ಜಗಳಗಳ ವಾತಾವರಣಗಳಾದರೂ ಕಡಿಮೆಯಾಗಬಹುದೆಂದು ಬಹುಜನರ ಮನವರಿಕೆಯಾಗಿದೆ. ನಗರ ಸಭೆಗಳ ಕಾರ್ಯಗಳಾದರೂ ರಾಜಕಾರಣಗಳಿಗೆ ಸಂಬಂಧಪಟ್ಟದ್ದಿವೆ. ಆದಕ್ಕೆ ಸ್ಥಾನಿಕಸ್ವರಾಜ್ಯ (Local self Government) ವೆಂದೇ ಅನ್ನುತ್ತಾರೆ.

ಮನೆಗಳಲ್ಲಿ ಸ್ತ್ರೀಯರು ಪ್ರತಿದಿನ ಮಾಡುವ ಕೆಲಸಗಳನ್ನೇ ನಗರ ಸಭೆಗಳು ದೊಡ್ಡಪ್ರಮಾಣದಲ್ಲಿ ಮಾಡುತ್ತಿವೆ. ಇಂತಹ ಕಾರ್ಯಗಳಲ್ಲಿ ಸ್ತ್ರೀಯರಿಗಿರುವಷ್ಟು ಅನುಭವವು ಪುರುಷರಿಗಿಲ್ಲವಾದ್ದರಿಂದ ಊರು ಊರುಗಳಲ್ಲಿನ ಸ್ವಚ್ಛತೆ, ಸೌಕರ್ಯ, ಶಿಸ್ತು ಅಷ್ಟು ಚೆನ್ನಾಗಿ ನಡೆದಿಲ್ಲವೆಂಬದು ಪ್ರತ್ಯಕ್ಷಕಂಡುಬರುತ್ತಿದೆ. ಕಾರಣ ಈ ಕಾರ್ಯದಲ್ಲಿ ಭಾಗವಹಿಸಲು ಹೆಣ್ಣುಮಕ್ಕಳೇ ಮುಂದೆಬರುವದೊಳಿತು. ಅರ್ಥಾತ್ ಪ್ರಚಲಿತ ಅಧಿಕಾರಿ ವರ್ಗಗಳಲ್ಲಿರುವ ಪುರುಷರು ಸ್ತ್ರೀಯರಿಗೆ ತಾವೇ ತತ್ವಶಃ ಕಾಯ್ದೆಯಿಂದ ಸಮಾನ ಹಕ್ಕಿದೆಯೆಂದು ಒಪ್ಪಿದಂತೆ ಸ್ಥಳಗಳನ್ನು ಕಲ್ಪಿಸಿಕೊಡುವದು ಒಳ್ಳೆಯದು. ಗೃಹಶಿಕ್ಷಣದ ಮರ್ಮವರಿತ ಗೃಹಿಣಿಯರಿಂದಲೇ ಕಾರ್ಯವು ಸುಲಭವಾಗಿ ಸಾಗಬಹುದು. ಈ ವರೆಗೆ ನಗರಸಭಾಸದರಾದವರಿಗೆ ಮನವರಿಕೆಯಾಗಲು ಸಾಕು.

ನಗರಸಭೆಗಳ ಸದಸ್ಯರ ಸಂಖ್ಯೆಗಳ ಎಷ್ಟೋ ಸ್ಥಳಗಳ ಪೈಕಿ ಒಂದೇ ಒಂದು ಸ್ಥಳವನ್ನು ಮಾತ್ರ ಸ್ತ್ರೀಯರ ಸಲುವಾಗಿ ಕಾಯ್ದಿಟ್ಟದ್ದಿದೆ. ಇದು ಒಂದು ದೃಷ್ಟಿಯಿಂದ ಹೆಣ್ಣಿನ ಅಪಹಾಸ್ಯವೇ ಸರಿ. ಈಗ ಮತಾಧಿಕಾರದ ಪ್ರಮಾಣದಲ್ಲಿ ಸ್ತ್ರೀಯರ ಸಂಖ್ಯೆಯು ಇಡೀ ಜನಸಂಖ್ಯೆಯ ಅರ್ಧದಷ್ಟಿದೆ. ಆ ಪ್ರಮಾಣದಲ್ಲಾದರೂ ಹೆಣ್ಣುಮಕ್ಕಳಿಗೆ ಪ್ರತ್ಯೇಕ ಸ್ಥಳ ಕಾಯ್ದಿಡದೆ ಸರ್ವಸಾಮಾನ್ಯವಾಗಿ ಗಂಡಸರಂತೆ ಅವರೂ ಉಮೇದವಾರರಾಗಿ ನಿಲ್ಲುವಂತಾಗಬೇಕಾದ್ದು ಯೋಗ್ಯವಿದೆ. ಕಿಮಾನ್ ಪಕ್ಷ ವಾರ್ಡಿಗೆ ಒಬ್ಬ ಮಹಿಳೆಯಾದರೂ ನಿಲ್ಲಲೇಬೇಕು.

ಉಮೇದುವಾರರಾಗಿ ನಿಲ್ಲುವವರು ಡಿಪಾಜಿಟ ಹಣವಿಡಬೇಕೆಂಬ ಪದ್ಧತಿ ಇದೆ. ಆದರೆ ಇದು ಹೆಣ್ಣುಮಕ್ಕಳಿಗೆ ಈಗ ಸದ್ಯದ ಪರಿಸ್ಥಿತಿಯಲ್ಲಿ ಸಾಧ್ಯವಿಲ್ಲ. ಕಾರಣವೆಂದರೆ ಈಗಂತೂ ಅವರು ಹಣಗಳಿಸಲು ಸ್ವತಃ ಸಮರ್ಥರಿಲ್ಲ. ಗಂಡಸರ ಬಳಿಹಣ ಬೇಡುವದೆಂದರೆ ಕೆಲವು ಅಭಿಮಾನಿ ಹೆಣ್ಣುಮಕ್ಕಳಿಗೆ ಅಪಮಾನವೆನಿಸುವ ಸಂಭವವೂ ಇದೆ. ಹಾಗೂ ಗಂಡಸರಿಗೂ ತಮ್ಮ ಅಧಿಕಾರಬಿಟ್ಟು ಮೇಲೆ ದಕ್ಷಿಣಿಯಾಗಿ ಹಣ ಕೊಡುವದಾದರೂ ಜೀವದ ಸುತ್ತ ಬರುವದು ಸ್ವಾಭಾವಿಕವಿದೆ. ಹೀಗಾಗಿ ಸಮರ್ಥರಿದ್ದ ಸ್ತ್ರೀಯರಿಗೆ ಆಸ್ಪದ ಸಿಗದೆ, ಪುನಃ ಶ್ರೀಮಂತ ಸ್ತ್ರೀಯರ ಪದರಿಗೇ ಆ ಸ್ಥಳವು ಕಾಯ್ದಿಟ್ಟಂತಾಗುವದು. ಅವರು ಒಂದುವೇಳೆ ಈ ಕಾರ್ಯಕ್ಕೆ ಅಸಮರ್ಥರಿದ್ದಲ್ಲಿ ಈಗಿನ ಪರಿಸ್ಥಿತಿಯು

ಹಾಗೇ ಉಳಿಯುವದು. ಸದ್ಯದ ಪರಿಸ್ಥಿತಿಯಲ್ಲಂತೂ ಈ ಕಾರ್ಯಕ್ಕೆ ವಿಧವಾ, ಕುಮಾರಿಯರೇ ಉಮೇದುವಾರರಾಗಿ ನಿಲ್ಲುವ ಪ್ರಸಂಗವಿರುವದರಿಂದ ಶ್ರೀಮಂತ ವಿಧವೆಯರ ಹೊರತು ಉಳಿದವರಿಗೆ ಹಣದಬಗ್ಗೆ ದೊಡ್ಡ ಸಮಸ್ಯೆಯೇ ಏಳುವಂತಾಗಿದೆ.

ಡಿಪಾಜಿಟ ಹಣದ ಪ್ರಶ್ನೆ ಬದಲಾಗುವವರೆಗೆ ಅಥವಾ ಹೆಣ್ಮಕ್ಕಳಿಗೆ ಸತಃ ಕೊಡುವ ಯೋಗ್ಯತೆ ಬರುವವರೆಗೆ ಹೆಣ್ಣುಮಕ್ಕಳು ಯೋಗ್ಯ ಉಮೇದುವಾರರಿದ್ದಲ್ಲಿ ಅವರ ಡಿಪಾಜಿಟ್ ಹಣವನ್ನು ಸಹಾನುಭೂತಿಯುಳ್ಳ, ಕಾರ್ಯದಲ್ಲಿ ಕಲ್ಪನೆಯುಳ್ಳ ಗಂಡಸರು ಅಥವಾ ಸಂಘಸಂಸ್ಥೆಗಳು ಪೂರೈಸಬೇಕು.

ನಗರ ಸಭೆಯ ಈ ಕಾರ್ಯಕ್ಕೆ ಶಾಲೆಯ ಕ್ರಮಿಕ ಶಿಕ್ಷಣದ ಅವಶ್ಯಕತೆ ಇಲ್ಲ. ಆದರೆ ಸಾಕ್ಷರಿಗಳಿದ್ದು ವ್ಯವಹಾರ ಜ್ಞಾನವು ಚನ್ನಾಗಿದ್ದರೆ ಸಾಕು. ನಗರ ಸಭೆಗಳಲ್ಲಿ ಈಗಿರುವ ಎಷ್ಟೋ ಸದಸ್ಯರೂ, ಅಧ್ಯಕ್ಷರೂ (ಪುರುಷರು) ಇದೇ ಪರಿಸ್ಥಿತಿಯವರಿದ್ದು ಕಾರ್ಯವನ್ನು ಸಾಗಿಸಿಕೊಂಡು ಬರುತ್ತಿರುವ ಉದಾಹರಣೆಗಳನ್ನು ಪ್ರತ್ಯಕ್ಷ ನೋಡುತ್ತಿದ್ದೇವೆ.

ಈಗಿನ ನಮ್ಮ ಈ ಹೋರಾಟವು ಸ್ತ್ರೀಯರದ್ದೇ ರಾಜ್ಯವಾಗಬೇಕು ಅವರು ಗಂಡಸರೊಡನೆ ಸ್ಪರ್ಧಿಸಬೇಕೆಂಬ ವಿಚಾರವಲ್ಲ. ನಮಗೆ ಬೇಕಾದದ್ದು ಪುರುಷರ ಅಸಹಕಾರವಲ್ಲ. ಆದರೆ ಅವರೊಡನೆ ಸಹಕಾರದಿಂದ ಕಾರ್ಯಮಾಡಿ ರಾಜ್ಯದಲ್ಲಿ ನಡೆದಿರುವ ಗೊಂದಲಗಳನ್ನು ಆದಷ್ಟು ಕಡಿಮೆಮಾಡಿ ಜಗತ್ತಿನಲ್ಲಿ ಶಾಂತಿ, ಸುಖ, ಸಮಾಧಾನ ಬಿತ್ತಲು ಪ್ರಯತ್ನಿಸುವದು.

ನಮ್ಮ ಧಾರವಾಡ ನಗರ ಸಭಾ ಚುನಾವಣೆಯು ಮುಂದಿನ ನವ್ಹಂಬರ ತಿಂಗಳಲ್ಲಿಯೇ ಇರುವಕಾರಣ ಈಸಾರೆಯ ಚುನಾವಣೆಯಲ್ಲಿ ಸಮರ್ಥ ಸ್ತ್ರೀಯರನ್ನು ಪ್ರತಿಯೊಂದು ವಾರ್ಡಿನಲ್ಲೂ ಉಮೇದುವಾರರನ್ನಾಗಿ ನಿಲ್ಲಿಸಿ ಮಹಿಳಾ ಮಂಡಳ, ಭಗಿನಿ ಸಮಾಜ, ಅಕ್ಕನ ಬಳಗ ಮುಂತಾದ ಸಂಘದವರು ಪದ್ಧತಿಶೀರ ಪ್ರಚಾರ ಮಾಡಿದಲ್ಲಿ ಸ್ತ್ರೀ ಉಮೇದವಾರರು ಸಹಜವಾಗಿ ಆರಿಸಿಬರುವದರಲ್ಲಿ ಯಾವ ಸಂದೇಹವೂ ಇಲ್ಲ. ಇದರ ವಿಚಾರಮಾಡಲು ಹೆಣ್ಣುಮಕ್ಕಳದ್ದೊಂದು ಸಮಿತಿ ಏರ್ಪಡಿಸಲು ಸ್ತ್ರೀಯರು ಸಾರ್ವಜನಿಕರ ಸಭೆಯೊಂದನ್ನು ವಿವಿಧ ಸ್ತ್ರೀಸಂಘಗಳವರು ಕರೆಯಬೇಕು. ಇದಕ್ಕೆಶಕ್ಯವಿದ್ದಷ್ಟು ಸಹಾಯ ನೀಡಲು ವೀರಮಾತೆಯು ಸಿದ್ಧಳಿರಬಹುದೆಂದು ನನ್ನ ನಂಬಿಗೆ.

ಕರ್ತವ್ಯಚ್ಯುತರಾದ ಹೆಣ್ಣುಮಕ್ಕಳನ್ನು ಕರ್ತವ್ಯದಕ್ಷರನ್ನಾಗಿ ಮಾಡುವ ಹೊಣೆಯನ್ನು ಹೊತ್ತ ವೀರಮಾತೆಯೊಬ್ಬಳಿಂದಲೇ ಈ ಕಾರ್ಯವಾಗುವದೆಂಬ ಭರವಸೆಯಿಂದ ನಾನು ಈ ಲೇಖ ಬರೆದಿದ್ದೇನೆ.

ಇತಿ ಸ್ತ್ರೀ ಹಿತೈಷಿ.

---

## § ಕಾಯದೆ-ಕಾನೂನು §

ಪ್ರಶ್ನೆ:—ನಾನೊಬ್ಬಳು ಅನಾಥ ಅಸ್ಪೃಶ್ಯರ ಪೈಕಿ ಕೂಲಿ ಹೆಣ್ಣುಮಗಳು. ನನ್ನ ವಯಸ್ಸು ಹದಿನೇಳು. ನನ್ನ ಜನ್ಮ ಹಾಗೂ ಲಗ್ನ ಹುಬ್ಬಳ್ಳಿಯಲ್ಲಿಯೇ ಆಗಿವೆ. ಗಂಡನ ಮನೆಯಲ್ಲಿ ನಾನು ಒಂದು ವರ್ಷ ಇದ್ದೆ. ನನ್ನ ಗಂಡ ಹೊರಚಾಳಿಯವ ಮತ್ತು ಹೆಡ್ಡ ಆಡುವವನಿರುತ್ತಾನೆ. ಅವನು ತನ್ನ ಮನೆಮಾರುಗಳನ್ನು ಕಳೆದು ಕೊಂಡಿದ್ದಾನೆ. ಹೊಟ್ಟೆ ಬಟ್ಟೆ ವ್ಯವಸ್ಥೆ ಇಲ್ಲದ್ದರಿಂದ ನಾನು ಅವನನ್ನು ನನ್ನ ತವರು ಮನೆಗೆ ಕರೆದುಕೊಂಡು ಹೋದೆನು. ಅವನ ಆಟವು ಅಲ್ಲಿಯೂ ಕೂಡ ಹಾಗೆ ನಡೆಯಿತು. ಅವನು ಏನೂ ಗಳಿಸುತ್ತಿರಲಿಲ್ಲ. ಮುಂದೆ ಅವನು ನಮ್ಮ ಊರನ್ನೂ ಬಿಟ್ಟು ಎಲ್ಲಿಯೋ ಹೋದ ೪-೫ ವರ್ಷಗಳಾದವು. ಪತ್ತೆ ಇಲ್ಲ. ಮೊದಲು ನನ್ನ ಬಿಡುಗಡೆ ಸಂಬಂಧಿ ಹೂತ ನಡೆದಾಗ ಅವನು ಅದನ್ನು ಕೊಡಲು ಸಿದ್ಧನಿದ್ದನು. ಆದರೆ ಸದ್ಯಕ್ಕೆ ಅವನ ಪತ್ತೆಯಾಗದ್ದರಿಂದ ಇಂಥ ಪರಿಸ್ಥಿತಿಯಲ್ಲಿ ಎರಡನೇ ಸಂಬಂಧ ಮಾಡಿ ನನಗೆ ಇರಲು ಬರಲಿಕ್ಕಿಲ್ಲವೇ ?

ಉತ್ತರ:— ನಿಮ್ಮ ಪ್ರಶ್ನೆ ಕಾಯದೇ ದೃಷ್ಟಿಯಿಂದ ಬಿಗಿಯಿರುತ್ತದೆ. ಇದು ನಿಜ. ಯಾಕಂದರೆ ಗಂಡ ಸಾಯದ ವಿನಾ ಅಥವಾ ಅವನಿಂದ ಬಿಡುಗಡೆ ಪತ್ರ ತೆಗೆದುಕೊಳ್ಳದ ವಿನಾ ಎರಡನೇ ಲಗ್ನವಾಗುವದು ಗುನ್ಹೆಯಿರುತ್ತದೆ. ಇದರಲ್ಲಿಯೂ ಪಾರಾಗಲು ಒಂದು ಮಾರ್ಗವಿದೆ. ಅದೇನೆಂದರೇ, ಏಳು ವರ್ಷದ ವರೆಗೆ ಗಂಡನ ಪತ್ತೆ ಇಲ್ಲವೆಂದು ನಮಗೆ ತೋರಿಸಲು ಬಂದರೆ ಅವನು ಜೀವಂತ ಇರುವದಿಲ್ಲವೆಂದು ತಿಳಿದು ನಿಮಗೆ ಬೇಕಾದ್ದು ಮಾಡಲು ಸ್ವಾತಂತ್ರವಿದೆ. ಆದರೆ ಈ ಪ್ರಶ್ನೆಯ ಕಡೆಗೆ ವ್ಯವಹಾರದ ದೃಷ್ಟಿಯಿಂದಲೂ ನೋಡಬೇಕಾಗಿದೆ. ಅದೇನೆಂದರೆ ನೀವು ಎರಡನೇ ಸಂಬಂಧ ಮಾಡಿದಲ್ಲಿ ನಿಮ್ಮ ಗಂಡನ ಹೊರತು ಮಿಕ್ಕ ಯಾರಿಗೂ ತಕರಾರು ಮಾಡಲು ಬರುವದಿಲ್ಲ. ಈ ಕಾಯದೇ ಸಿದ್ಧಾಂತವನ್ನು ಲಕ್ಷದಲ್ಲಿಟ್ಟುಕೊಂಡು ಲಗ್ನ ವಾಗತಕ್ಕಂಥ ಗಂಡನಿಗೆ ಮುಂದೆ ಒದಗತಕ್ಕ ತೊಂದರೆಯ ಕಲ್ಪನೆಯನ್ನು ಕೊಟ್ಟು ಏನು ಮಾಡತಕ್ಕದನ್ನು ಮಾಡಬೇಕು. ಇದಕ್ಕೂ ಹೆಚ್ಚಿಗೆ ಏನೂ ಹೇಳಲುಬರಲಾರದು.

ಪ್ರಶ್ನೆ:— ನಾನೋರ್ವ ವಿವಾಹಿತ ಸ್ತ್ರೀ. ನನಗೆ ನಾಲ್ಕು ಮಂದಿ ಹುಡುಗೆಯರು ಮತ್ತು ಇಬ್ಬರು ಹುಡುಗರಿರುತ್ತಾರೆ. ಒಂದು ವರ್ಷದ ಹಿಂದೆ ಮನೆಯಲ್ಲಿ ನ್ಯಾಜ್ಯವಾಗಿ ನನ್ನ ತಲೆಕೆಟ್ಟು ನಾನು ಆತ್ಮಹತ್ಯ ಮಾಡಿಕೊಳ್ಳಲು ಪ್ರಯತ್ನ ಮಾಡಿ ಸಾಯುತ್ತಾ ಸಾಯುತ್ತಾ ಉಳಿದೆ. ನನ್ನ ತವರು ಮನೆಯವರಿಗೆ ಈ ಸುದ್ದಿ ತಿಳಿದ ಕೂಡಲೆ ನನ್ನ ಗಂಡನು ಕಳಿಸಲು ಸಿದ್ಧನಿರದಿದ್ದರೂ ಅವರು ನನ್ನನ್ನು ಒತ್ತಾಯದಿಂದ ಕರೆದುಕೊಂಡು ಹೋಗಿರುವರು. ಅತ್ತೆ ಮನೆಯವರು ನನ್ನನ್ನು ಕರೆದುಕೊಂಡು ಹೋಗಲು ಸಿದ್ಧರಿಲ್ಲ. ನನ್ನ ಗಂಡನು ಎರಡನೇ ಲಗ್ನವಾಗುವ ವಿಚಾರ ಮತ್ತು ಪ್ರಯತ್ನದಲ್ಲಿರುತ್ತಾನೆ. ತವರುಮನೆ ಮುಂಬಯಿ ಪ್ರಾಂತದಲ್ಲಿ. ಗಂಡನು ಸಂಸ್ಥಾ

ನದ ನಾಗರಿಕನಿದ್ದು ಅಲ್ಲಿಯೂ ಉತ್ಪನ್ನವಿರುತ್ತದೆ. ಮುಂಬಯಿ ಪ್ರಾಂತದಲ್ಲಿಯೂ ಇರುತ್ತದೆ. ಹೊಸ ಕಾಯದೆಯಂತೆ ಅವನಿಗೆ ಎರಡನೇ ಲಗ್ನ ಮಾಡಲು ಬರುತ್ತದೆಯೋ ? ನನಗೆ ಆತಂಕ ಮಾಡಲು ಬರುವದೋ ? ನಾನು ಕಾಯದೆಯ ಉಪಯೋಗ ಮಾಡಿಕೊಳ್ಳಲು ಹೋದರೆ ಆತ್ಮಹತ್ಯೆಯ ಪ್ರಶ್ನೆಯನ್ನು ಮುಂದೆ ಮಾಡಿ ಅವರಿಗೆ ಲಗ್ನಮಾಡಿಕೊಳ್ಳಲು ಪರವಾನಿಗೆ ಸಿಗುವದೋ? ಆತ್ಮಹತ್ಯೆಯ ಪ್ರಶ್ನೆಯನ್ನು ಮುಂದೆ ಮಾಡಿ ನನ್ನ ಹತ್ತಿರವಿದ್ದ ಎಲ್ಲ ಮಕ್ಕಳನ್ನು ಅವರು ಬಯ್ಯಬಹುದೋ ?

**ಉತ್ತರ:—** ಮುಂಬಯಿ ಪ್ರಾಂತದೊಳಗಿದ್ದ ದೇಶೀಯ ಸಂಸ್ಥಾನಗಳೆಲ್ಲಾ ವಿಲೀನವಾಗಿವೆ. ಆದುದರಿಂದ ದ್ವಿಭಾರ್ಯಾ ಪ್ರತಿಬಂಧಕ ಕಾಯದೆಯು ಎಲ್ಲ ಸಂಸ್ಥಾನದಳಿಗೆ ಹತ್ತುತ್ತದೆ ನಿಮ್ಮಗಂಡನಿಗೆ ಎರಡನೇ ಲಗ್ನವಾಗಲು ಬರಲಾರದು. ಆತ್ಮಹತ್ಯೆಯ ಪ್ರಶ್ನೆಯನ್ನು ಮುಂದೆ ಮಾಡಿದ್ದರಿಂದ ಲಗ್ನಕ್ಕೆ ಪರವಾನಿಗೆ ಕೊಡಬೇಕೆಂದು ಕಾಯಿದೆ ಇಲ್ಲ. ನಿಮ್ಮ ಮಕ್ಕಳು ತಮ್ಮ ಹತ್ತಿರ ಇರಬೇಕು ನೀವು ಹೇಳಿದಂಥ ಪರಿಸ್ಥಿತಿಯಲ್ಲಿ ಹೀಗೆ ಬೇಡಿಕೆ ಮಾಡಲಿಕ್ಕೆ ನಿಮ್ಮ ಗಂಡನಿಗೆ ಅಧಿಕಾರವುಂಟು. ನಿಮಗೆ ಮಕ್ಕಳು ಇರುತ್ತವೆ. ಮತ್ತು ಅತ್ತೆ ಮನೆಯ ಕೂಡ ಸಂಬಂಧ ಇಟ್ಟುಕೊಳ್ಳಲು ಆಧಾರವಿರುತ್ತದೆ. ಈ ಆಧಾರದ ಉಪಯೋಗ ಮಾಡಿಕೊಂಡು ಸ್ವಲ್ಪ ಸೋತು ನಡೆಯುವದರಿಂದ ನಿಮ್ಮ ಆಯುಷ್ಯದ ಸಾರ್ಥಕವಾಗಿ ನಿಮ್ಮ ಕಲ್ಯಾಣವಾಗುವದು.

---

## ಲೇಖಕರಿಗೆ ಸೂಚನೆಗಳು

(೧) ಸ್ತ್ರೀಯರ ಪ್ರಗತಿಯೇ ವೀರಮಾತೆಯ ಧ್ಯೇಯ. ಅದಕ್ಕಾಗಿ ಸ್ತ್ರೀಯರ ಪ್ರಗತಿಗೆ ಸಂಬಂಧಿಸಿದ ಯೋಗ್ಯ ಲೇಖನಗಳಿಗೆ ತುಂಬ ಮಹತ್ವವಿದೆ. ಅಂಥ ಲೇಖನಗಳು ಹೆಣ್ಣುಮಕ್ಕಳೇ ಬರೆದವಿದ್ದರಂತೂ ಅವಕ್ಕೆ ಮೊದಲು ಸ್ಥಳ ಕೊಡಲಾಗುವದು.

(೨) ಲೇಖನಗಳನ್ನು ಕಾಗದದ ಒಂದೇ ಮಗ್ಗಲು ಸುವಾಚ್ಯವಾಗಿ ಬರೆದು ಕಳುಹಿಸಬೇಕು.

(೩) ಸಂಪಾದಕರಿಗೆ ಆವಶ್ಯಕವೆನಿಸುವ ಅಲ್ಪಸ್ವಲ್ಪ ಬದಲಾವಣೆಗಳನ್ನು ಮಾಡಲು ಲೇಖಕರು ಒಪ್ಪಬೇಕು.

(೪) ಸ್ವೀಕೃತವಾಗದ ಲೇಖಗಳನ್ನು ತಿರುಗಿ ಕಳುಹಿಸಲು ನಾವು ಬಾಧ್ಯರಲ್ಲ ಅಂಥ ಲೇಖಗಳನ್ನು ತಿರುಗಿ ಬಯಸುವವರು ಮೊದಲೇ ತಿಳಿಸಿ ಅಂಚೆಯ ವೆಚ್ಚಕ್ಕೆ ಸಾಕಷ್ಟು ಟಿಕೀಟು ಕಳಿಸಿರಬೇಕು.

(೫) ಲೇಖಕರಿಗೆ ಸಂಭಾವನೆ ಕೊಡುವ ಸುಯೋಗವು ಈಗ ನಮಗಿಲ್ಲವೆಂದು ತಿಳಿಸಲು ಸಂಕೋಚವೆನಿಸುತ್ತದೆ. ಆದರೂ ಅದು ಅಪರಿಹಾರ್ಯವಾಗಿದೆ.

**—ಸಂಪಾದಕ ಮಂಡಲ.**

# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ
ಕನ್ನಡ ಮಾಸಪತ್ರಿಕೆ.

ಸಂಪುಟ ೧ | ಕಾರ್ತಿಕ ನವ್ಹಂಬರ ೧೯೫೨. | ಸಂಚಿಕೆ ೬

## ಸಂಪಾದಕೀಯ

ಅನ್ಯರನ್ನು ಬಡವರನ್ನಾಗಿ ಮಾಡಿ ತಾನು ಬಲ್ಲದನಾಗಿರುವಲ್ಲಿ ಮಾನವನಿಗೊಂದು ಹೆಮ್ಮೆ. ಈ ಹೆಮ್ಮೆ, ತಾನು ಗಳಿಸಿದ ವಸ್ತುವಿನಲ್ಲಿಯೂ ಉಂಟು, ಗಳಿಸದೆ ತಾನಾಗಿ ಬಂದುದರಲ್ಲಿಯೂ ಉಂಟು; ಎರಡನೆಯ ವಸ್ತುವಿನಲ್ಲಿಯ ಹೆಮ್ಮೆಯನ್ನು ತಾಳಲಾರದೆ.

ಸೂತೋ ವಾ ಸೂತಪುತ್ರೋ ವಾ ಯೋವಾ ಕೋವಾ ಭವಾಮ್ಯಹಂ ।
ದೈವಾಯತ್ತಂ ಕುಲೇ ಜನ್ಮ ಮದಾಯತ್ತಂ ತು ಪೌರುಷಂ ॥

[ ನಾನು ಸಾರಥಿಯಾಗಿರಬಹುದು, ಅಥವಾ ಅವನ ಮಗನಾಗಿರಬಹುದು; ಒಳ್ಳೇ ಕುಲದಲ್ಲಿ ಜನ್ಮವೆತ್ತುವದು ದೈವಾಧೀನ, ಆದರೆ ಪುರುಷಾರ್ಥ ಮಾತ್ರ ನನ್ನಾಧೀನ ] ಎಂದು ಕರ್ಣನಂತೆ ಹೇಳುವವರು ಅಂದಿನಿಂದ ಇಂದಿಗೂ ಇದ್ದಾರೆ; ಅವರಿರವನ್ನು ಲೆಕ್ಕಿಸದೆ, ಜಾತಿ-ಮತಗಳ ತಿಕ್ಕಾಟ, ವರ್ಣದ್ವೇಷ ಇನ್ನೂ ಅವ್ಯಾಹತವಾಗಿ ನಡೆದೇ ಇವೆ. "ಕುಡಿಯಲು ಒಂದೇ ನೀರು, ನಡೆಯಲು ಒಂದೇ ಭೂಮಿ, ಬೆಳಗಲು ಒಂದೇ ಜ್ಯೋತಿ," ಎಂದು ಹೇಳಿ ಮಾನವ ಜಾತಿಯನ್ನು

ಒಂದು ಗೂಡಿಸುವ ಪ್ರಯತ್ನವನ್ನು ಮಹಾಪುರುಷರು ಕಾಲಕಾಲಕ್ಕೂ ಮಾಡಿದಾಗ ಮಾನವನ ಹಕ್ಕುಬಾಧ್ಯತೆಗಳ ವಿಚಾರವಾಗಿ ಜನತೆಯಲ್ಲಿ ಕ್ರಾಂತಿಯನ್ನುಂಟು ಮಾಡಿದಾಗ ಈ ಪರಿಸ್ಥಿತಿ! ಅಥವಾ ಸ್ಥಿತಿಸ್ಥಾಪಕತ್ವವುಳ್ಳ ರಬ್ಬರಿನಂತೆ ಎಳೆದಾಗಷ್ಟೇ ಮುಂದೆ ಬಂದು ಮತ್ತೆ ಹಿಂದೆ ಹೋಗುವದು ಸಮಾಜದ ಧರ್ಮವೋ? ಅಂತೂ ಇಪ್ಪತ್ತನೆಯ ಶತಮಾನದಲ್ಲಿಯೂ ಜಾತಿ-ಮತಗಳ ತಿಕ್ಕಾಟ, ವರ್ಣದ್ವೇಷ ಜಗತ್ತಿನಲ್ಲಿ ಅಲ್ಲಲ್ಲಿ ಅವಿತುಕೊಂಡಿರುವದು ಬಹು ವಿಷಾದದ ಸಂಗತಿ. ಭಾರತದಲ್ಲಿ ಮಹಾತ್ಮಾಜಿಯವರ ಆಗಮನದಿಂದ ಉಚ್ಚನೀಚ ಜಾತಿಗಳ ತಿಕ್ಕಾಟ ಇದೀಗ ಕೊಂಚ ವಿಶ್ರಾಂತಿಯನ್ನು ಪಡೆಯುತ್ತಿದೆ ಎನ್ನುವಷ್ಟರಲ್ಲಿ, ಈ ಚಳವಳಿಯ ಬೀಜವನ್ನು ಮಹಾತ್ಮಾಜಿ ಮೊದಲು ಬಿತ್ತಿದ ದ. ಆಫ್ರಿಕೆಯಲ್ಲಿಯೇ ಅದು ಮತ್ತೆ ತಲೆಯೆತ್ತಬೇಕೇ? ಜಾತಿ-ಮತಗಳ ಕ್ಷೇತ್ರದಲ್ಲಿ ಸಾಮಾಜಿಕ ಅರಾಜಕತೆಯುಂಟಾದಾಗ, ಮಾನವನು ತನ್ನ ಕರ್ತವ್ಯದ ಅರಿವನ್ನು ಮರೆತು ನಡೆದಾಗ ಮಹಾಪುರುಷರ ಉದಯವಾಗುವದಂತೆ!

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ।

ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ॥ ಎಂದು ಹೇಳಿದ ಭಗವಂತನು ಆಗ ಅವತರಿಸುವನು; ಅಂತೂ ಇದೀಗ ಹನ್ನೊಂದನೆಯ ಅವತಾರಕ್ಕಾಗಿ ಕಾಯಬೇಕಾಗಿದೆ.

ಸಮಾಜದಲ್ಲಿ ಕೃತ್ರಿಮವಾಗಿ ನಿರ್ಮಿತವಾದ ಉಚ್ಚ ನೀಚ ಭೇದವನ್ನು ಬಾಹ್ಯ ಸಾಧನಗಳಿಂದಲೇ ನಿರ್ಮೂಲಗೊಳಿಸಬಹುದು. ನಿಷ್ಠುರವಾದ ಆಜ್ಞೆಯನ್ನು ಹೊರಡಿಸಿ ಆರ್ಥಿಕ ಸಮಾನತೆಯನ್ನು ಕೆಲಕಾಲವಾದರೂ ತರುವ ಪ್ರಯೋಗವನ್ನು ಮಾಡಬಹುದು. ಆದರೆ ಇತರರೂ ನಮ್ಮ ಸ್ಥಾನಕ್ಕೆ ಧಕ್ಕೆಯೋ ಎಂದು ಒಳಗೊಳಗೇ ಕುದಿಯುತ್ತಿರುವ ನಮ್ಮ ಮನೋವೃತ್ತಿಗೆ ಸರಕಾರವು ಯಾವ ನಿಯಮವನ್ನು ತಾನೇ ಹಾಕಲು ಸಾಧ್ಯವಾದೀತು ?

ಇಷ್ಟುಮಾತ್ರ ನಿಜ, ಇಷ್ಟು ದಿನಗಳ ಚಳವಳಿಯ ನಂತರ ಕಪ್ಪು ವರ್ಣದವರೂ ಮಾನವರು ಎಂಬ ಭಾವನೆ ಇಂದು ಅನೇಕರಲ್ಲಿ ಮೂಡಿದೆ; ಅಲ್ಲದೆ ಅವರೂ ತಮ್ಮ ಹಕ್ಕು ಬಾಧ್ಯತೆಗಳಿಗಾಗಿ ಹೊರಾಡಲು ಸಿದ್ಧರಾಗಿದ್ದಾರೆ. ‘ ನಾವು ಅವರನ್ನು ಮನುಷ್ಯರಂತೆ ಕಾಣದಿದ್ದರೆ ಅವರೂ ದಂಗೆ ಎಬ್ಬಿಸಬಹುದು ’ ಎಂಬ ಭೀತಿ ಇನ್ನಿತರರಲ್ಲಿ ತೋರುತ್ತಿದೆ!!

* * * * * *

ಆಹಾರಧಾನ್ಯಗಳ ವಿನಿಯಂತ್ರಣದ ವಿಚಾರವಾಗಿ ಅಲ್ಲಲ್ಲಿ ಕೇಳುತ್ತಿದ್ದಾಗ ನಮ್ಮ ಬಾಯಿಗೆ ನೀರೂರುತ್ತಿತ್ತು; ಇದೀಗ ಮುಂಬಯಿ ಪ್ರಾಂತದಲ್ಲಿಯೇ ಅದು ಬಳಕೆಯಲ್ಲಿ ಬರಲಿದೆ ಎಂಬುದನ್ನು ಕೇಳಿ ತುಂಬಾ ಸಂತೋಷವಾಯ್ತು. ಅಡುಗೆ ಮನೆಯಲ್ಲಿ ಪರಿಶ್ರಮಕ್ಕೂ, ಕಷ್ಟಕರವಾದ ಶೋಧಗಳಿಗೂ ಎಡೆಗೊಟ್ಟಿದ್ದ ಈ ನಿಯಂತ್ರಣ

ತೊಲಗುವದನ್ನು ನೋಡಿ ಸೋದರಿಯರಿಗೆ ಇನ್ನೂ ಹೆಚ್ಚಿನ ಸಂತೋಷ !! ಪರಿಸ್ಥಿತಿಯ ತಕ್ಕಡಿಯಲ್ಲಿ ನಿಯಂತ್ರಣವನ್ನು ತೂಗಿ ನೋಡದ ಜನರಿಗೆ, ವಿನಿಯಂತ್ರಣ ಸ್ವಾತಂತ್ರ್ಯದ ಗಾಳಿಯಲ್ಲಿ ಸಂಚರಿಸಿದಂತೆ ! ವಿನಿಯಂತ್ರಣ ಮಾಡಿ, ಹಲವರನ್ನು ಉಪವಾಸ ಕೊಲ್ಲುವದಕ್ಕಿಂತ, ನಿಯಂತ್ರಣ ಮಾಡಿ ಎಲ್ಲರನ್ನೂ ಅರಹೊಟ್ಟೆ ಬದುಕಿಸುವದಾದರೂ ಒಳ್ಳೆಯದು ಎಂಬ ತತ್ವದ ಮೇಲೆಯೇ ನಿಯಂತ್ರಣ ಇಷ್ಟು ದಿನಗಳ ವರೆಗೂ ತಡೆದು ನಿಂತದ್ದು ! ರಾಜ್ಯದ ಪ್ರಮುಖರು, ಮುತ್ಸದ್ದಿಗಳು, ದೇಶದ ಆಹಾರ ಪರಿಸ್ಥಿತಿಯನ್ನು ಪರೀಕ್ಷಿಸಿ, ಇನ್ನೂ ಈ ನಿಯಂತ್ರಣದ ಯಶಸ್ವಿ ಪ್ರಯೋಗದಲ್ಲಿ ಸಾಂಶಕರಾಗಿದ್ದಾರೆ. ಸಾರ್ವಜನಿಕ ಅಭಿಪ್ರಾಯವನ್ನು ಪ್ರತಿನಿಧೀಕರಿಸುವ ಮತವಾದರೂ ಇದೇ ಆಗಿದೆ. ಆದ್ದರಿಂದ ಪೂರ್ಣ ವಿನಿಯಂತ್ರಣವನ್ನು ಒಮ್ಮೆಲೇ ಸಾಧಿಸುವದು ಎಷ್ಟು ಮಟ್ಟಿಗೆ ಜಾಣತನದ್ದೋ ಹೇಳಲು ಬಾರದು. ಒಮ್ಮೆ ವಿನಿಯಂತ್ರಣ ಮಾಡಿ ಮತ್ತೆ ನಿಯಂತ್ರಣವನ್ನು ಕೈಕೊಳ್ಳುವದು ದೂರದೃಷ್ಟಿಯ ಕೊರತೆಯನ್ನು ತೋರಿಸುವದು. ಇದ್ದಕ್ಕೆಂದೇ, ದೇಶದ ಎಲ್ಲ ಭಾಗಗಳು ವಿನಿಯಂತ್ರಣಕ್ಕೆ ಹಾಗೂ ಹೀಗೂ ಒಪ್ಪಿದರೂ ಮೈಸೂರು ಒಪ್ಪದಿರುವದು.

ಯೋಜನಾಮಂಡಳದ ಸಲಹಾ ಸಮಿತಿಯಾದರೂ ವಿನಿಯಂತ್ರಣವನು ಕೆಲವೊಂದು ವಸ್ತುಗಳಲ್ಲಿ ಸಾಧಿಸುತ್ತ ಕ್ರಮೇಣ ಪೂರ್ಣ ಸಾಧಿಸುವ ಸಲಹೆಯನ್ನೇ ಕೊಟ್ಟದೆ. ಅಲ್ಲದೆ, ರಾಷ್ಟ್ರದ ಸರ್ವತೋಮುಖ ಅಭ್ಯುದಯದ ದೃಷ್ಟಿಯಿಂದ ಚಿತ್ರಿಸಲ್ಪಟ್ಟ ಪಂಚವಾರ್ಷಿಕಯೋಜನೆ, ನಿಯಂತ್ರಣವನ್ನೇ ಅವಲಂಬಿಸಿದ್ದರಿಂದ ಒಮ್ಮೆಲೇ ನಿಯಂತ್ರಣವನ್ನು ತೆಗೆದುಹಾಕುವದೂ ಅರ್ಥವಿಲ್ಲದ್ದು, ಎಂದು ಅವರ ಅಭಿಪ್ರಾಯ. ಯುದ್ಧ ನಡೆದಾಗಿದ್ದ ಪರಿಸ್ಥಿತಿಗಿಂತಲೂ, ಯುದ್ಧ ಮುಗಿದ ಮೇಲಿರುವ ಪರಿಸ್ಥಿತಿ ಬಲು ಭೀಕರವಂತೆ ! ಈ ಪರಿಸ್ಥಿತಿಯ ಬಳುವಳಿಯೇ ನಿಯಂತ್ರಣ; ಸುಮಾರು ಹನ್ನೆರಡು ವರ್ಷಗಳ ಕಾಲ ಈ ಪರಿಸ್ಥಿತಿ ಜನತೆಯು ಮೈಯ್ಯುಂಡದ್ದರಿಂದ, ಒಮ್ಮೆಲೇ ಅದನ್ನು ಬಿಟ್ಟುಕೊಡಲು ವಿಚಾರವುಳ್ಳ ಜನತೆಯೂ ಸಿದ್ಧವಾಗಲಾರದು. ಹಾಗೆ ಬಿಟ್ಟುಕೊಟ್ಟಲ್ಲಿ ಮುಕ್ತ ಪೇಟೆಯಲ್ಲಿ ಧಾನ್ಯದ ಬೆಲೆ ವಿಪರೀತವಾಗಿ ಏರಬಹುದೆಂಬ ಅಂಜಿಕೆ ಇದ್ದದ್ದೇ. ಆದ್ದರಿಂದಲೇ ಇಂದು ವಿನಿಯಂತ್ರಣ ಜೋಳ, ಗೋವಿನಜೋಳಗಳಿಂದ ಪ್ರಾರಂಭವಾಗಿ ಅಕ್ಕಿ, ಗೋದಿಯವರೆಗೂ ಮುಟ್ಟತಕ್ಕದ್ದಿದೆ; ಈ ಪ್ರಯೋಗವಾದರೂ, ಬರಬಹುದಾದ ಎಡರುಗಳನ್ನು ಎದುರಿಸುವ ಪೂರ್ವತಯಾರಿಯಿಂದ !

ಬೆಳೆಯುತ್ತಿರುವ ಭಾರತದ ಜನತೆಗೆ, ' ಹೆಚ್ಚು ಆಹಾರ ಬೆಳೆಯಿರಿ, ' ಎಂಬ ಬರೀ ಕೂಗಿನಿಂದ ಪ್ರಯೋಜನವಾಗಲಾರದು. ಔದ್ಯೋಗಿಕ ರಾಷ್ಟ್ರಗಳಿಗೆ ಆಹಾರಧಾನ್ಯಕ್ಕಾಗಿ ಪರರಾಷ್ಟ್ರಗಳನ್ನವಲಂಬಿಸುವ ಪ್ರಸಂಗ ಬರುವಂತೆ ಭಾರತಕ್ಕೆ ಬಂದರೆ ಅದು ಹಾಸ್ಯಾಸ್ಪದ ; ಇಲ್ಲದ ವಸ್ತುಗಳನ್ನು ಪರರಿಂದ ಎರವಲಾಗಿ ತರಬಹುದು ; ಆದರೆ ಅದಕ್ಕೆ ಬದಲಾಗಿ ನಮ್ಮಲ್ಲಿ ಹೆಚ್ಚು ಪ್ರಮಾಣದಲ್ಲಿದ್ದ ವಸ್ತುಗಳನ್ನು ನಾವೂ ಕೊಡಬೇಕಾಗುವದೆಂಬುದನ್ನು ನೆನಪಿನಲ್ಲಿಡಬೇಕು.

ಕೃಷಿ ಪ್ರಧಾನ ದೇಶವಾದ ಭಾರತದಲ್ಲಿ, ಕೃಷಿ ಶಾಸ್ತ್ರದಲ್ಲಿ ಸಂಶೋಧನೆ ನಡೆದು, ಆಹಾರ ಧಾನ್ಯಗಳನ್ನು ಹೆಚ್ಚು ಪ್ರಮಾಣದಲ್ಲಿ ಮತ್ತು ವಿವಿಧ ಬಗೆಯಲ್ಲಿ ಉತ್ಪಾದನೆ ಮಾಡಲು, ಜನತೆಗೆ ಪ್ರೋತ್ಸಾಹ ದೊರೆಯಬೇಕಾದ್ದು ಉಚಿತವೇ !

* * * * * *

## ಕೃತಜ್ಞತೆ

ಇಲ್ಲಿಯ ಸುಪ್ರಸಿದ್ಧ ವಕೀಲರಾದ ಶ್ರೀಮಾನ್. ಎನ್. ಕೆ. ದೀಕ್ಷಿತರು 'ವೀರಮಾತೆ'ಯ ಕಾರ್ಯವನ್ನು ಪ್ರೋತ್ಸಾಹಿಸಿ ೫೦ ರೂಪಾಯಿಗಳನ್ನು ಕಾಣಿಕೆಯಾಗಿ ಸಲ್ಲಿಸಿದ್ದಾರೆ. ಸೋದರೀವರ್ಗದ ಉನ್ನತಿಯನ್ನು ಅಂತಃಕರಣದಿಂದ ಆಶಿಸುವ ಅವರು 'ವೀರಮಾತೆ' ಚಿರಕಾಲ ಬಾಳಿ ಬೆಳಗಲಿ ಎಂದು ಹಾರೈಸುವಲ್ಲಿ ಔಚಿತ್ಯವಿದೆ. ಈ ಬಗೆಯ ಪ್ರೋತ್ಸಾಹ ಅವರಿಂದ ಇನ್ನೂ ಹೆಚ್ಚಾಗಿ ದೊರೆಯಲೆಂದಾಶಿಸಿ, ಅವರಿಗೆ ಅಭ್ಯುದಯವನ್ನು ಕೋರಿ, 'ವೀರಮಾತೆ' ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾಳೆ.

**ಉದಾರ ಕನ್ನಡಿಗರಿಗೆ ಇದೊಂದು ಮಾದರಿಯ ದಾರಿ !**

---

## ನಮ್ಮ ಮಾತು

ಈ ಸಲದ ಸಂಚಿಕೆಯನ್ನು ಸಿಂಗರಿಸಲು ಅನುವು ಮಾಡಿಕೊಟ್ಟ, ಬಳ್ಳಾರಿಯ ಶ್ರೀಮಾನ್ ಸತ್ಯವಂತರಾವ, ಭುಜಂಗ ಹೆಗಡೆ, ಸುಶೀಲ ಚಿಂತಾಮಣಿ, ಕು. ಸೋನುಬಾಯಿ ಆನೆಖಿಂಡಿ, ಶ್ರೀ. ಹುಚ್ಚಪ್ಪ, ಶ್ರೀಮತಿ ಪ್ರಭಾ ಥಿಟೆ– ಈ ನಮ್ಮ ಲೇಖಕ ಬಳಗಕ್ಕೆಲ್ಲ ನಾವು ಆಭಾರಿಯಾಗಿದ್ದೇವೆ. ಜೂನ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ಡಾ. ಶಾಂತಾಬಾಯಿ ಸಪ್ತರ್ಷಿಯವರ ಲೇಖವನ್ನು ಕುರಿತು, ಮತ್ತು ಜುಲೈ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ ದಾದಾ ಧರ್ಮಾಧಿಕಾರಿಯವರ ಲೇಖವನ್ನು ಕುರಿತು ಜಿಜ್ಞಾಸುಗಳಿಂದ ಹೆಚ್ಚಿನ ವಿಚಾರಪೂರಿತ ಲೇಖಗಳು ಈ ಸಲ ಬಂದಿರುವದು ಅಭಿನಂದನೀಯ.

---

ಸ್ವತಂತ್ರ ಭಾರತದಲ್ಲಿ

# ಸ್ತ್ರೀಯರ ದಾಸ್ಯ ವಿಮೋಚನೆ

ಲೇಖಕರು:— **ಸುಶೀಲ ಚಿಂತಾಮಣಿ.**



**[ ಕೇವಲ ರಾಜಕೀಯ ಸ್ವಾತಂತ್ರ್ಯದಿಂದ, ಅಥವಾ ಆರ್ಥಿಕ ಸ್ವಾತಂತ್ರ್ಯದಿಂದ, ಅಥವಾ ಎರಡನ್ನೂ ಸೇರಿಸುವದರಿಂದ ಮಾನವ ಜನಾಂಗದ ಪ್ರಗತಿಯಾಗಲಾರದು. ನಿಜವಾದ ಪ್ರಗತಿಯನ್ನು ಸಾಧಿಸಲು ಮಾನವನ ಹೃದಯದಲ್ಲಿಯೇ ಪರಿವರ್ತನೆಯಾಗಬೇಕು. ]**

ಪರರಾಷ್ಟ್ರದವರ ರಾಜಕೀಯ ದಾಸ್ಯದಿಂದ ಮುಕ್ತವಾದ ಭಾರತವು ಇಂದು ತಲೆತಲಾಂತರಗಳಿಂದ ನಡೆದು ಬಂದ ಸಾಮಾಜಿಕ ದಾಸ್ಯದಿಂದ ತನ್ನನ್ನು ತಾನು ಮುಕ್ತ ಮಾಡಿಕೊಳ್ಳಬೇಕಾಗಿದೆ. ಸಾಮಾಜಿಕ ದಾಸ್ಯದಿಂದ ಮುಕ್ತವಾದಾಗಲೇ ಭಾರತೀಯರು ನೈಜ ಪ್ರಗತಿ ಸಾಧಿಸಲು ಸಾಧ್ಯವಿದೆ. ಆದರೆ ಪರರ ರಾಜಕೀಯ ಸತ್ತೆಯಿಂದ ವಿಮೋಚನ ಪಡೆಯುವಾಗ ಇದ್ದ ರಾಜಕೀಯ ಜಾಗೃತಿಯಂತೆ ಇಂದು ಬೇಕಾದ ಸಾಮಾಜಿಕ ಜಾಗೃತಿ ಇಲ್ಲದ್ದರಿಂದ ರಾಜಕೀಯ ಸ್ವಾತಂತ್ರ್ಯದ ಫಲವು ಒಗರುಒಗರಾಗಿ ಹತ್ತುತ್ತಲಿದೆ. ಅದು ಪಕ್ವವಾಗಿ ನಿಜವಾದ ಸ್ವಾತಂತ್ರ್ಯದ ಸಿಹಿ ಅದಕ್ಕೆ ಬರಲಾರದೇ ? ಬರಲಿಕ್ಕಿಲ್ಲವೇ ? ಎಂದು ಬಂದೀತು ? ಇವೇ ಪ್ರಶ್ನೆಗಳು ವಿಚಾರಿಗಳ ತಲೆತಿನ್ನುತ್ತಲಿವೆ. ಆದಕ್ಕೆಲ್ಲ ಕಾರಣ ಭಾರತೀಯರ ದಾಸ್ಯ ಮನೋವೃತ್ತಿ.

ಸಮಾಜ ಜೀವನದ ಪ್ರಗತಿಗೆ ಎರಡು ಮುಖಗಳು. ಒಂದು ದಾಸ್ಯದಿಂದ ಪಾರಾಗುವದು, ಇನ್ನೊಂದು ದಾಸ್ಯಮನೋವೃತ್ತಿಯಿಂದ ಪಾರಾಗುವದು. ಇವು ಒಂದನ್ನೊಂದು ಬಿಟ್ಟು ಬೇರೆ ಇಲ್ಲ. ಮನೋವೃತ್ತಿಬದಲಾಗದೇ ಇದ್ದಾಗ ಯಾವದೇ ಸ್ವಾತಂತ್ರ್ಯವಿದ್ದರೂ (ರಾಜಕೀಯ ಸ್ವಾತಂತ್ರ್ಯವಿರಲಿ, ಆರ್ಥಿಕ ಸ್ವಾತಂತ್ರ್ಯವಿರಲಿ,) ಆದರಿಂದ ಯಾವ ಪ್ರಗತಿಯೂ ಸಾಧಿಸಲಾರದು. ಮನೋವೃತ್ತಿ ಬದಲಾಗಬೇಕಾದರೆ ಹೃದಯ ಪರಿವರ್ತನೆಯಾಗಬೇಕು. ವಿಶಾಲವಾಗಬೇಕು. ಶುದ್ಧವಾಗಬೇಕು.

ಯಾವದೊಂದು ಜನಾಂಗದ ಮನೋವೃತ್ತಿಯನ್ನು ಅರಿತುಕೊಳ್ಳಬೇಕಾದರೆ ಆಯಾ ಜನಾಂಗದ ಮಹಿಳೆಯರ ಮನಸ್ಥಿತಿ ಹೇಗಿದೆ ಅರ್ಥಮಾಡಿಕೊಳ್ಳಬೇಕು. ವ್ಯಕ್ತಿಯ ದೇಹ ಸ್ಥಿತಿ ತಿಳಿದುಕೊಳ್ಳಬೇಕಾದರೆ ಅವನ ಹೃದಯ ಪರೀಕ್ಷೆಮಾಡುವಂತೆ, ಸಮಾಜ ದೇಹಸ್ಥಿತಿ ತಿಳಿದುಕೊಳ್ಳುವದಕ್ಕಾಗಿ ಸ್ತ್ರೀ ಹೃದಯ ತಿಳಿಯಬೇಕು. ಯಾಕೆಂದರೆ ಸಮಾಜ ದೇಹಕ್ಕೆ ಸ್ತ್ರೀ, ಹೃದಯವಿದ್ದಂತೆ

ಹೃದಯ ದುರ್ಬಲವಾದರೆ ದೇಹಬಾಳಲಾರದು. ಸ್ತ್ರೀ ದುರ್ಬಲಳಾದರೆ ಸಮಾಜ ಬಾಳಲಾರದು. ದುರ್ಬಲ ದೇಹದಲ್ಲಿ ದುರ್ಬಲ ಮನಸ್ಸು ವಾಸವಾಗುತ್ತದೆ. ದುರ್ಬಲ ಮನಸ್ಸಿನಿಂದ ದೇಹ ನಾಶ. ದುರ್ಬಲ ಸ್ತ್ರೀಯಿಂದ ಸಮಾಜ ನಾಶ. ಆದಕ್ಕಾಗಿ ಭಾರತದ ರಾಜಕೀಯ ಸ್ವಾತಂತ್ರ್ಯದೊಂದಿಗೆ ಕೈಕೊಳ್ಳಬೇಕಾದ ಮೊಟ್ಟಮೊದಲ ಕೆಲಸವೆಂದರೆ ಸ್ತ್ರೀ ದಾಸ್ಯ ವಿಮೋಚನೆ.

ಸ್ತ್ರೀ ದಾಸ್ಯವಿಮೋಚನೆಯು ಸ್ತ್ರೀಯರಮೇಲಿನ ಉಪಕಾರಕ್ಕಲ್ಲ. ಹೃದಯ ಬಲಗೊಳಿಸ ಬಯಸುವದು ಹೃದಯದ ಉಪಕಾರಕ್ಕಾಗಿರದೆ ದೇಹದ ಬಲಕ್ಕಾಗಿ ಇರುವಂತೆ, ಸ್ತ್ರೀ ದಾಸ್ಯವಿಮೋಚನೆಯು ಮಾನವ ಕುಲದ ಉದ್ಧಾರ ಕ್ಕಾಗಿ ಇರುತ್ತದೆ. ಮಹಾತ್ಮಾಗಾಂಧಿಯವರು ಹೇಳುತ್ತಿದ್ದರು. " ಭಾರತೀಯರ ರಾಜಕೀಯ ದಾಸ್ಯವಿಮೋಚನೆಯಾದರೆ ಮಾನವ ಕುಲವೇ ರಾಜಕೀಯ ದಾಸ್ಯ ದಿಂದ ಮುಕ್ತವಾದಂತೆ " ಎಂದು. ಅದರಂತೆ ಭಾರತೀಯ ಮಹಿಳೆಯರ ದಾಸ್ಯವಿ ಮೋಚನೆಯಾದರೆ ಮಾನವ ಕುಲದ ಮನೋದೌರ್ಬಲ್ಯವನ್ನೇ ತೊಡೆದೊಗೆದಂತೆ ಎಂಬ ಮಾತನ್ನು ಅರ್ಥಮಾಡಿಕೊಂಡು ಆಚರಣೆಯಲ್ಲಿ ತರಬೇಕಾಗಿದೆ.

ಒಟ್ಟಾರೆ ಸ್ತ್ರೀಯರ ಉನ್ನತಿ ಎಂದರೆ ಸಮಾಜದ ಉನ್ನತಿ ಎಂದು ಹೇಳ ಬಹುದಾದರೂ, ಓರ್ವಸ್ತ್ರೀಯ ಉನ್ನತಿಯೇ ಹೆಣ್ಣುಕುಲದ ಉನ್ನತಿಯ ಅಳೆಗೋ ಲಾಗಿರುತ್ತದೆಂಬದನ್ನು ಮರೆಯುವಂತಿಲ್ಲ. ಸಾಮಾಜಿಕ ಮನಸ್ಸಿನ ಅಂದರೆ ಸ್ತ್ರೀ ಯರ ಬಂಧಮುಕ್ತತೆಯಾಗಬೇಕಾದರೆ ಒಬ್ಬ ಸ್ತ್ರೀಯೂ ಬಂಧನದಲ್ಲಿ ಉಳಿಯಬಾರ ದಷ್ಟೇ? ಆದರೆ ದಾಸ್ಯದ ಫಲವಾಗಿ ಬಂದ ಒಕ್ಕಟ್ಟನ್ನು ಭೇದಿಸುವ ಒಡಕಿನ ಪ್ರಭಾವದಿಂದ ಕೆಲವೇ ಸ್ತ್ರೀಯರು ರೂಢಿಯ ದಾಸ್ಯದಿಂದ ಮುಕ್ತರಾಗಿರಬಹುದು. ಹಲಕೆಲವರು ಆರ್ಥಿಕ ದಾಸ್ಯದಿಂದ ಪಾರಾಗಿರಬಹುದು; ಇಷ್ಟು ಮಾತ್ರದಿಂದ ಒಟ್ಟಾರೆ ಸ್ತ್ರೀಯರ ಬಂಧವಿಮೋಚನೆಯಾದಂತೆ ಎಂದು ತಿಳಿಯಬರುವದಿಲ್ಲ.

ಪ್ರತಿಯೊಬ್ಬ ಸ್ತ್ರೀಯೂ ಮಾನಸಿಕ ದಾಸ್ಯದಿಂದ ಪಾರಾಗಬೇಕು. ಅಂದರೆ ಸಾಮೂಹಿಕ ಮನಸ್ಸೂ ಬಂಧಮುಕ್ತವಾಗುತ್ತದೆ. ಹಾಗಾದಾಗಲೇ ಭಾರತೀಯರ ದಾಸ್ಯಮನೋವೃತ್ತಿ ನಿರ್ನಾಮವಾಗುತ್ತದೆ.

ಮನಸ್ಸು ಬಂಧಮುಕ್ತವಾಗಬೇಕೆಂದರೆ ಆದಕ್ಕಾಗುವ ಒಂದೇ ಒಂದು ತೊಡಕು ಭೀತಿ. ಭೀತಿಯ ಅಸ್ತಿತ್ವವು ಸಂರಕ್ಷಣೆಯ ಮೇಲಿರುತ್ತದೆ. ಭೀತಿಯನ್ನು ರಕ್ಷಿಸುವ ಸುರಕ್ಷಿತತೆಯನ್ನು ಅಪೇಕ್ಷಿಸದಿದ್ದರೆ ಭೀತಿಯು ತಂತಾನೇ ಓಡಿಹೋಗು ತ್ತದೆ. ಸಾವಿರಾರು ವರುಷಗಳಿಂದ ಭಾರತೀಯ ಮಹಿಳೆ ಪರರ ಸಂರಕ್ಷಣೆಯಲ್ಲಿಯೇ ಬೆಳೆದಿದ್ದಾರೆ. ಬಹಳ ದಿವಸಗಳವರೆಗೆ ಅನ್ಯಾಯದಲ್ಲಿ ಬಾಳಿದವನಿಗೆ ಅನ್ಯಾಯವೇ ನ್ಯಾಯವೆಂಬ ಮನೋವೃತ್ತಿ ಬರುವಂತೆ ಮಹಿಳೆಯರಿಗೂ ಈ ಪರಸಂರಕ್ಷಣೆಯ ಲ್ಲಿರುವದುಹಿತಾವಹವೆನ್ನಿಸಿರಬೇಕು. ಆದರೆ ಮಾನವಕುಲದ ಹಿತದ ದೃಷ್ಟಿಯಿಂದ ಅವಳ ಈ ಹಿತದ ಕಲ್ಪನೆಗೆ ತೀವ್ರ ಆಘಾತವಾದರೂ ಚಿಂತೆಯಿಲ್ಲವೆಂಬ ರೀತಿಯಲ್ಲಿ ಭೀತಿಯನ್ನು ತೊರೆಯಹಚ್ಚಬೇಕಾಗಿದೆ.

ಮಹಿಳೆಯು ಆಯುಷ್ಯದುದ್ದಕ್ಕೂ ಪಿತ, ಪತಿ, ಪುತ್ರರ ಸಂರಕ್ಷಣೆಯಲ್ಲಿಯೇ ಬೆಳೆಯುವಂತೆ ನಮ್ಮ ಸಮಾಜ ರಚನೆಯಿದೆ. ಈ ಕೃತ್ರಿಮ ರಚನೆಯನ್ನು ಅಥವಾ ಇಂದಿನ ಪರಿಸ್ಥಿತಿಗೆ ಹೊಂದಿಕೆಯಾಗದ ಈ ವ್ಯವಸ್ಥೆಯನ್ನು ಬದಲುಗೊಳಿಸಬೇಕು. ಮೊದಲು ಮಹಿಳೆಯ ಮಾನವೀಕರಣವಾಗಬೇಕು. ಆ ಮೇಲೆ ಮಾನವ ಮಾನವರಲ್ಲಿನ ಭೇದಭಾವಗಳನ್ನು ಅಳಿಸಿಹಾಕಬೇಕು. ಕೇವಲ ರಾಜಕೀಯ ಘಟನೆಯಲ್ಲಿ ಸಮಾನತೆ ತೋರಿದರಾಗದು ಅಥವಾ ಸಮಾನತೆಯ ಮಾರ್ಗದಲ್ಲಿನ ತೊಂದರೆಗಳನ್ನು ಕಾಯಿದೆಯಿಂದ ನಿವಾರಿಸುವದರಿಂದಾಗದು. ಸಾಮಾಜಿಕ ಸಂಘಟನೆಯಲ್ಲಿಯೇ ಸಮಾನತೆಮೂಡಿಬರುವಂತೆ ಆಚರಣೆಬೇಕು. ಈ ಬಗೆಯ ಆಚರಣೆಗೆ ಕಾಯಿದೆಯು ಬೆಂಬಲಬೇಕು.

ಪಾತಿವ್ರತ್ಯದಂತಹ ಸಂಸ್ಕಾರಜನ್ಯ ಸದ್ವ್ರತದ ಮೇಲಿನ ಶ್ರದ್ಧೆಯನ್ನೂ ಅಲುಗಾಡಿಸಿ ಬಿಡುವಂತಹ ಅನಿವಾರ್ಯ ದುರ್ಘಟನೆಗಳು ಸಮಾಜ ಜೀವನದಲ್ಲಿ ತಾಂಡವವಾಡುತ್ತಿರುವಾಗ ಹಳೆಯ ನೈತಿಕ ಮೂಲ್ಯಗಳಿಗೇ ಅಂಟಿಕೊಂಡು ಬದಲಾಗುತ್ತಿರುವ ನೈತಿಕ ಮೂಲ್ಯಗಳ ಕಡೆಗೆ ಕಣ್ಣುಮುಚ್ಚಿದರೆ ಪ್ರಗತಿ ಸಾಧಿಸುವದಿಲ್ಲ. ಮಹಿಳೆಯ ಮಾನವೀಕರಣಮಾಡುವಲ್ಲಿ ನೈತಿಕಮೂಲ್ಯಗಳ ಪರಿವರ್ತನೆಯ ಕಡೆಗೆ ಹೆಚ್ಚು ಲಕ್ಷ ಕೊಡಬೇಕಿರುತ್ತದೆ. ಆರ್ಥಿಕ ದಾಸ್ಯಕ್ಕೆ ಲೈಂಗಿಕ ಸಂಬಂಧ ಜೋಡಿಸಿ ನಿಸರ್ಗಕ್ಕೆ ವಿರೋಧವಾಗಿ ನಡೆದು ಜೀವನಕ್ಕೆ ದಾರಿತೋರಿಸುವದು ಸಾಧ್ಯವಿಲ್ಲ. ಆರ್ಥಿಕ ವ್ಯವಸ್ಥೆಗೆ ಕೃತಿಯಲ್ಲಿಳಿಯಬಹುದಾದ ರಾಜಕೀಯ ನೀತಿಯನ್ನು ಹಚ್ಚಿ, ಲೈಂಗಿಕ ಸಂಬಂಧಕ್ಕಾಗಿ ನಿಸರ್ಗವನ್ನೇ ಮೊರೆಹೋಗಬೇಕಲ್ಲದೆ ಕಾಮಪ್ರೇಮಗಳ ಕಲಸು ಮೇಲೋಗರಮಾಡುವದರಿಂದ ಯಾವ ಬಗೆಯ ದಾಸ್ಯದಿಂದಲೂ ಮುಕ್ತಿಯಿಲ್ಲ. ಈ ಕೃತ್ರಿಮಕ್ರಮದಿಂದ ದಾಸ್ಯವಿಮೋಚನೆಯಾದ ಉದಾಹರಣೆಯೂ ಜಗತ್ತಿನ ಯಾವ ಜನಾಂಗದಲ್ಲಿಯೂ ಕಂಡುಬರುವದಿಲ್ಲ.

ಪುರುಷ ವರ್ಗಕ್ಕೇ ಅಶನಕ್ಕಿಲ್ಲದಂತೆ ಮಾಡುವ ಅಕ್ಷರ ಶಿಕ್ಷಣದಿಂದಲೂ ಸ್ತ್ರೀದಾಸ್ಯ ವಿಮೋಚನೆಗೆ ಸಹಾಯವಾದೀತೆಂದು ಬಯಸುವದು ಮೃಗಜಲವನ್ನು ನಂಬಿದಂತೆಯೇ ಸರಿ. ಭಾರತದಲ್ಲಿ ಶಿಕ್ಷಣದ ಧ್ಯೇಯವು ಆತ್ಮಿಕ ಮುಕ್ತಿ ಇದ್ದರೆ, ಅದರ ತಳಹದಿ ಜಾತೀಯ ವಿರುತ್ತದೆ. ಶಿಕ್ಷಣ ಸಂಸ್ಥೆಗಳಲ್ಲಿನ ಬಹುಭಾಗ ಜಾತೀಯ ಸಂಘಟನೆಗಳ ಕೈಯಲ್ಲಿರುವದೇ ಇದಕ್ಕೆ ಪ್ರತ್ಯಕ್ಷನಿದರ್ಶನ. ಇದರಿಂದಾಗಿ ಅಸಾಧ್ಯ ಧ್ಯೇಯಕ್ಕೆ ಅವ್ಯವಹಾರ್ಯ ಸಾಧನವನ್ನುಪಯೋಗಿಸಿದಂತಾಗುತ್ತಿದೆ. ಮೇಲಾಗಿ ಶಿಕ್ಷಣವೇ ಇಂದು ಪರಿವರ್ತನೆಯ ಕುಲುಮೆಯಲ್ಲಿ ಬೇಯುತ್ತಿರುವಾಗ ಅದರಿಂದ ಏನನ್ನಾದರೂ ಅಪೇಕ್ಷಿಸುವದು ಅನ್ಯಾಯವೇ ಆದೀತು.

ಒಟ್ಟಾರೆ ಹೇಳಬೇಕೆಂದರೆ ಯುಗ ಯುಗಗಳಿಂದ ಇಂದಿನವರೆಗೂ ಶಾಪಗ್ರಸ್ತಳಾದವರಂತೆ ಶಿಲೆಯಾಗಿ ಬಿದ್ದುಕೊಂಡ ಭಾರತೀಯ ಮಹಿಳೆ, ಅವತಾರೀ ಪುರುಷನ ರಾಜಕೀಯ ಸ್ವಾತಂತ್ರ್ಯರೂಪಪಾವ ಸ್ಪರ್ಶದಿಂದ ಸಜೀವಳಾಗಿದ್ದಾಳೆ.

ಇಂದಿನ ಪರಿಸ್ಥಿತಿಯಿಂದಾಗಿ ಅವಳು ದಿಗ್ಭ್ರಾಂತಳಾಗದಂತೆ ಅವಳ ಮಾನಸಿಕ ದಾಸ್ಯ ವಿಮೋಚನೆಯನ್ನೂ ಸಾಧಿಸಿದಾಗ ಭಾರತೀಯನ ದಾಸ್ಯಮನೋವೃತ್ತಿಯೇ ನಾಮ ಶೇಷವಾಗುವದು. ಆದುದರಿಂದ ಇದೆಲ್ಲಕ್ಕೂ ಕಾರಣವಾದ ಸ್ತ್ರೀಯರ ದಾಸ್ಯ ವಿಮೋಚನೆಯು ಅತ್ಯಂತ ಅಗತ್ಯದ್ದೂ ಆಗಿದೆ.

---

# ನಗರಸಭೆ ಹಾಗೂ ಚುನಾವಣೆ

ಪ್ರಜಾಸತ್ತೆಯುಳ್ಳ ರಾಜ್ಯದಲ್ಲಿ, ಹಳ್ಳಿಗಳಲ್ಲಿರುವ ಗ್ರಾಮಪಂಚಾಯಿತಿಯಿಂದ ಹಿಡಿದು ಕೇಂದ್ರ ಪಾರ್ಲಿಮೆಂಟಿನವರೆಗೂ, ಪ್ರಜೆಗಳ ಪ್ರತಿನಿಧಿಗಳೇ ಇರುತ್ತಾರೆಂಬ ಮಾತು ಬಳಕೆಯಲ್ಲಿ ಬಂದು ನಮಗೆ ಪೂರ್ಣ ಮನವರಿಕೆಯಾಗಬೇಕಾಗಿದೆ. ಈ ಪ್ರತಿನಿಧಿಗಳು ನಿಯುಕ್ತರಾದವರಲ್ಲ ಜನರಿಂದ ಆರಿಸಲ್ಪಟ್ಟವರು. ಇಂದು ವಯಸ್ಕರಾದವರಿಗೆಲ್ಲ ಮತದಾನದ ಅಧಿಕಾರವಿದೆ. ಅವರಲ್ಲಿ ಮಹಿಳೆಯರೂ ಅಸಂಖ್ಯರಾಗಿದ್ದಾರೆ ಎಂದು ಬೇರೆ ಹೇಳುವ ಕಾರಣವಿಲ್ಲ. ತಮ್ಮ ತಮ್ಮ ಹಕ್ಕು ಬಾಧ್ಯತೆಗಳ ಸಂರಕ್ಷಣೆ ಮಾಡಲು, ತಮ್ಮ ವತಿಯಿಂದ ಹೋರಾಡಲು ಬೇರೆ ಬೇರೆ ಜನಾಂಗಗಳು ತಮ್ಮ ಪ್ರತಿನಿಧಿಗಳನ್ನು ಕಳಿಸುವದುಂಟು. ಆದರೆ ಮಹಿಳೆಯರು ತಮ್ಮ ಮತದಾನದ ಅಧಿಕಾರವನ್ನುಪಯೋಗಿಸಿ, ಸ್ವತಂತ್ರವಾಗಿ ತಮ್ಮ ಪ್ರತಿನಿಧಿಯನ್ನಾರಿಸಿ ಇದುವರೆಗೂ ಕಳಿಸಿದ್ದಾರೆಯೇ ? ಸ್ತ್ರೀಯರು, ವೈಶ್ಯರು, ಶೂದ್ರರು, ಎಂದು ಎಲ್ಲರನ್ನು ಒಂದೆಡೆ ಸೇರಿಸಿ ಹೇಳುವ ಕಾಲ, ಒಂದಿತ್ತು ಆದರೆ ಅದು ಇಂದಿಲ್ಲ. ಎಲ್ಲರೂ ಪ್ರತ್ಯೇಕವಾಗಿ ಮುನ್ನಡೆಯುತ್ತಿರುವಾಗ, ಒಂದು ಕಾಯ್ದಿಟ್ಟಸ್ಥಳವನ್ನು ನಿರ್ವಾಹವಿಲ್ಲದೆ ತುಂಬುವ ಹೊಣೆಯನ್ನು ಮಾತ್ರ ಮಹಿಳೆಯರು ಹೊರುತ್ತೇವೆನ್ನುವದು ಅಭಿಮಾನ ಶೂನ್ಯ ಕಾರ್ಯ ಅಲ್ಲದೆ ನಮ್ಮ ಅನುಕೂಲಕ್ಕಾಗಿ ಹೋರಾಡಲು ನಮ್ಮವರೇ ಆದ ವಿಚಾರವಂತ ಪ್ರದಿನಿಧಿಗಳು, ಸಾರ್ವಜನಿಕ ಸಂಸ್ಥೆಗಳಲ್ಲಿ, ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಲ್ಲಿ— ಅಂತೂ ಎಲ್ಲೆಡೆಗಳಲ್ಲಿಯೂ ಬೇಕು.

ಇಂದು ಸಾಮಾನ್ಯ ಮಹಿಳೆ ಯಾವುದೇ ಚುನಾವಣಿ ತನ್ನ ಕ್ಷೇತ್ರದ ಹೊರಗಿನದೆಂದು ಭಾವಿಸುತ್ತಾಳೆ. ಚುನಾವಣೆಯಲ್ಲಿ ಹೋರಾಡುವದು ಅವಳ ಸಾಹಸಕ್ಕೆ ಮೀರಿದ ಮಾತು. ಅವಳ ಈ ಭಾವನೆ, ಅಂಜಿಕೆ ಹೋಗಬೇಕಾದರೆ, ಮಹಿಳೆಯರು ಪ್ರತ್ಯಕ್ಷ ಕಾರ್ಯರಂಗಕ್ಕಿಳಿಯುವದು ಅವಶ್ಯವಾಗಿದೆ. ' ಪಕ್ಕದ ಮನೆಯ ಸೀತಮ್ಮ ಈ ಸಲ ಮುನ್ನುಗ್ಗಿದರೆ ಈಚೆ ಮನೆಯ ಶಾಂತಮ್ಮ ಮುಂದಿನ ಸಲ ' ಎನ್ನುವ ಹಾಗೆ ಒಬ್ಬರಿಂದೊಬ್ಬರಿಗೆ ಸಾರ್ವತ್ರಿಕ ವಿಚಾರಕ್ರಾಂತಿಯ ಝುಳ ತಾಗಬಹುದು.

( ೪೬ ನೇ ಪುಟ ನೋಡಿರಿ. )

ಅಣ್ಣನು ತನ್ನ ಪ್ರಿಯ ತಂಗಿ ಕಲಾವತಿಯನ್ನುದ್ದೇಶಿಸಿ
ಸತ್ಯ ನುಡಿಯಲು ಹೇಳಿರುವನು.

ಹೇಳಿದವರು :— ಶ್ರೀ. ಮೋರ್ಡಿ ಭುಜಂಗ ಹೆಗಡೆ, ಪ್ರಗತಿ.

ವಿಧಿಯೆ ವೈರಿಯು ಆಗಿ ನಿಲ್ಲಲಿ
ತಂದೆ ತಾಯಿಯೆ ತ್ಯಜಿಸಲಿ
ಹೃದಯವೇ ನಿನಗಿದಿರು ಬಂದರು
ಲೋಕವೇ ನಿನ್ನ ಜರೆಯಲಿ

ಹೇಳು ' ಕಲೆ 'ಯೇ ಸತ್ಯ ಒಂದನೆ
ನಿನ್ನ ಜೀವಿತ ಕಾಲದಿ
ಹಿಂಗದೆಂದಿಗೂ ಸತ್ಯಹೇಳಲು
ಮುಗ್ಧೆ ಸೀ ತಿಳಿ ಬುದ್ಧಿಯ

ಜಗದ ಜೀವಿಗಳೊಂದೆ ಕ್ಷಣದಲಿ
ನಾಶಹೊಂದಿತೆಯಾದರೂ
ನಿನ್ನ ಸತ್ಯವು ನಿತ್ಯ ವಂದ್ಯವು
ಅಮರ ತಾನಾಗಿರುವುದು

ವಿಶೇಷವಾಗಿ ಸ್ತ್ರೀತ್ವಕ್ಕೆ ಮಾನವತೆಗೇ ಲಾಂಛನವಾದ

# ಸಂತತಿನಿಯಮನದ ತತ್ವ



ಮುಂಬಯಿಯ ಭಗಿನಿಯರ ಸಮಾಜವೊಂದರಲ್ಲಿ ಆರೋಗ್ಯ ಸಪ್ತಾಹದ ಪ್ರಸಂಗದಲ್ಲಿ ಡಾ. ಶಾಂತಾಬಾಯಿ ಸಪ್ತರ್ಷಿಯವರು ವಿವಾಹಿತ ಸ್ತ್ರೀಯರ ಆರೋಗ್ಯ ವನ್ನು ಕುರಿತು ಮಾಡಿದ ಮಾರ್ಮಿಕ ಭಾಷಣದಲ್ಲಿ ಸಂತತಿ ನಿಯಮನದ ಬಗ್ಗೆ ಹಲವು ಉದ್ಗಾರಗಳನ್ನು ತೆಗೆದಿರುವರು. ಈ ಮಾದರಿಯ ಉದ್ಗಾರಗಳು ಈಗಿನ ರೇಶನಿಂಗ್ ಕಾಲದಲ್ಲಂತು ಹೆಚ್ಚಾಗಿವೆ. ಈ ವಿಚಾರದ ಮೂಲ ಕರ್ತ ಒಬ್ಬ ಪಾಶ್ಚಾತ್ಯ ಸುಪ್ರಸಿದ್ಧ ಅರ್ಥಶಾಸ್ತ್ರಜ್ಞ "ಮಾಲ್‌ಥೂಸ ಮಹರ್ಷಿ!" ಈ ಮಹರ್ಷಿಯ ನಂತರ ಎಷ್ಟೋ ಸಪ್ತರ್ಷಿಗಳು ಆ ವಿಚಾರದ ಗಿಳಿಪಾಠಗಳನ್ನು ಹೇಳಹತ್ತಿರುವರು. ಭಾಂಡವಳ ಶಾಹಿಯಿಂದ ಉತ್ಪನ್ನವಾಗಿರುವ ಸಾವಿರಾರು ಅನೈತಿಕ ಮತ್ತು ಅನೈಸ ರ್ಗಿಕ ವಿಚಾರದೊಳಗಿನ ಇದೊಂದು ಮಹತ್ವದ ಲಾಂಛನಾಸ್ಪದವಿಚಾರ. ರಶಿಯಾ ದಂಥ ವಿದೇಶದಿಂದ ಬರತಕ್ಕ ಸಮತಾ ತತ್ವವು ನಮಗೆ ಬೇಕಾಗಿಲ್ಲವೆಂದು ಉಪ

ದೇಶಿಸುವ ಸ್ವದೇಶೀಮಂತ್ರಿಗಳು, ಉಪಮಂತ್ರಿಗಳು, ಪಾಶ್ಚಾತ್ಯ ಮಹರ್ಷಿ 'ಮಾಲ ಥೂಸ' ನ ತತ್ವವನ್ನು ಮಾತ್ರ ತಮ್ಮದಾಗಿ ಮಾಡಿಕೊಂಡಿರುವರು. ರಾಜಕೀಯ ಸ್ವಾತಂತ್ರ್ಯ ಸಿಕ್ಕರೂ ಭಾಂಡವಳಶಾಹಿಯ ದಾಸ್ಯತ್ವವು ತಪ್ಪಿಲ್ಲವೆನ್ನಲಿಕ್ಕೆ ಇದೇ ಉದಾಹರಣೆ ಸಾಕು. ಸಂತತಿ ನಿಯಮನ ತತ್ವದ ಮೂಲ ಕಾರಣದ ವಿಚಾರ ಮಾಡುವಮೊದಲು ಆ ತತ್ವವನ್ನು ಪ್ರಚಾರಮಾಡಬೇಕೆನ್ನುವವರಿಗೆ ಒಂದು ಕಿವಿ ಮಾತು ಹೇಳಬೇಕಾಗಿದೆ. ಆ ಮಾತು ಸರಕಾರಕ್ಕೆ ತಿಳಿಯುವ ಹಾಗೆ ಹೇಳಲಿಕ್ಕೆ ಬರುವದಿಲ್ಲ. ರೇಶನಿಂಗ ಕಾಲದಲ್ಲಿ ಸಂತತಿ ನಿಯಮನ ಮಾಡಿ ಇದ್ದವರಿಗೆ ಅನ್ನ ಸಿಗುವ ಹಾಗೆ ಮಾಡಬೇಕೆಂಬುವ ಪರೋಪದೇಶೀ ಪಾಂಡಿತ್ಯತೋರಿಸುವ ಋಷಿಗಳು ತಮ್ಮ ಆಸ್ತಿಯನ್ನೆಲ್ಲಾ ಬಡವರಿಗೆ ಹೋಗುವಂತೆ ಮೃತ್ಯುಪತ್ರವನ್ನು ಬರೆದಿಟ್ಟು ಆತ್ಮ ಹತ್ಯ ಮಾಡಿಕೊಳ್ಳಬೇಕು. ಅಂದರೆ ತಮಗೆ ಬರತಕ್ಕ ರೇಶನ್‌ವನ್ನು ಬಡವರಿಗೆ ಕೊಟ್ಟ ಪುಣ್ಯವು ಅವರಿಗೆ ಲಭಿಸುವದು. ಆದರೆ ದಯವಿಟ್ಟು ಆತ್ಮಹತ್ಯೆ ಮಾಡಿ ಕೊಂಡಿರುವೆವೆಂದು ಬರೆಯಬಾರದು. ಯಾಕಂದರೆ ಆತ್ಮಹತ್ಯೆ ಮಾಡಿಕೊಂಡವರಿಗೆ ಸರಕಾರವು ಶಿಕ್ಷೆಯನ್ನು ವಿಧಿಸಲಾರದು. ಆತ್ಮಹತ್ಯಕ್ಕೆ ಪ್ರೋತ್ಸಾಹಮಾಡಿದ್ದಕ್ಕಾಗಿ ನಮ್ಮ ಮೇಲೆ ಸರಕಾರವು ಕೇಸುಮಾಡುವದು.

## ಸಂತತಿ ನಿಯಮನ ತತ್ವದ ತೋರಿಕೆಯ ಮುಖ್ಯ ಕಾರಣ:—

ಭೂ ಸಂಪತ್ತಿ ವಿಶೇಷವಾಗಿ ಬಾಧ್ಯತೆಯ ಪದಾರ್ಥಗಳನ್ನು ಉತ್ಪನ್ನ ಮಾಡುವ ಭೂದೇವಿಯು ಶಕ್ತಿಯು ನಿಯಮಿತ ಇರುವದು. ಪರಂತು ಮಾನವ ಸಂಖ್ಯೆಯು ೧೦ ವರ್ಷಕ್ಕೆ ೨೫°/ₒ ಹೆಚ್ಚಾಗುವದು. ಹೀಗೆ ಬೆಳೆಯುವ ಮಾನವ ಜಾತಿಗೆ ಭೂದೇ ವಿಯು ಹುಲ್ಲು ಸಹಾ ಮೇಯಿಸಲಾರಳು. ಆದ್ದರಿಂದ ಕ್ರಮೇಣ ಮನುಷ್ಯನು ಜೀವನ ಮಟ್ಟವು (Standard of Living) ಕಮ್ಮಿ ಆಗುವದು. ಎಲ್ಲರಿಗೂ ಕ್ಷೀಣ ಜೀವನವನ್ನು ಕಳೆಯಬೇಕಾಗುವದು. ಭಾಗ್ಯವಂತರು ತಮ್ಮ ಜೀವನವನ್ನು ಹೇಗಾ ದರೂ ಸಾಗಿಸಬಹುದು. ಆದರೆ ಬಡವರಿಗೆ ಮಾತ್ರ ಕ್ರಮ ಕ್ರಮೇಣ ಹೆಚ್ಚು ಹೆಚ್ಚು ಕ್ಷೀಣ ಜೀವನವನ್ನು ಹಾಕಬೇಕಾಗುವದು. ಬಡತನದ ಬೇನೆಯನ್ನು ಅನುಭವಿಸಿ ಅದರಿಂದ ಉಂಟಾಗುವ ಸಾವಿರಾರು ಬೇನೆಗಳಿಗೆ ತುತ್ತಾಗಿ ರಸವಿರಹಿತ ದುಃಖಿತ ಜೀವನ ಹಾಕಲಿಕ್ಕೆ ಮಕ್ಕಳನ್ನು ಹುಟ್ಟಿಸುವದಕ್ಕಿಂತ ಸಂತತಿ ನಿಯಮನವೇ ಒಳಿತಾ ಗುವದು. ಯಾಂತ್ರಿಕ ವಿದ್ಯುತ್ತ ಮತ್ತು ಅಣುಶಕ್ತಿಯ ಯುಗದಲ್ಲಿ ಮನುಷ್ಯನ ಕಾರ್ಯಶಕ್ತಿಗೆ ಬೆಲೆ ಇಲ್ಲದ ಹಾಗೆ ಆಗಿ ಅವನನ್ನು ಶ್ರಮಜೀವಗಳ ಶಕ್ತಿ ಮಾರುವ ಬಜಾರಿನಲ್ಲಿ ಕೇಳುವರೇ ಇಲ್ಲ. ಇದರಿಂದ ಸಮಾಜಕ್ಕೆ ನಿರುದ್ಯೋಗದ ಸಮಸ್ಯೆಯ ಮತ್ತು ನಾಳಿನ ಚಿಂತೆಯ ಕ್ಷಯರೋಗವು ಹತ್ತುವದು. ಇವೇ ಮುಂತಾದ ಆರ್ಥಿಕ ಕಾರಣಗಳಿಂದ ಸಂತತಿನಿಯಮನದ ತತ್ವವನ್ನು ಸಮರ್ಥಿಸಲಾಗುವದು.

ಮೇಲೆ ಕಾಣಿಸಿದ ಆರ್ಥಿಕದ ಕಾರಣ ಹೊರತು ಇನ್ನೂ ಕೆಲವರು ವೈಯುಕ್ತಿಕ ಕಾರಣದಿಂದ ಸಂತತಿ ನಿಯಮಕ್ಕೆ ಬೆಂಬಲವನ್ನು ಕೊಡುವರು. ಈ ವೈಯುಕ್ತಿಕ ಕಾರಣಗಳನ್ನು ಎರಡು ವರ್ಗದಲ್ಲಿ ಸೇರಿಸಬಹುದು.

೧ ವೈಯಕ್ತಿಕ ಸುಖ ಸೌಕರ್ಯವು ಹೆಚ್ಚು ಮಕ್ಕಳನ್ನು ಹುಟ್ಟಿಸಿ ಮಕ್ಕಳು ಮರಿಗಳ ಸಲುವಾಗಿಯೇ ತನ್ನ ಜೀವನವನ್ನು ಹಾಳುಮಾಡಿಕೊಳ್ಳುವದಕ್ಕಿಂತ ಬೀಜಕ್ಕಾಗಿ ಒಂದೆರಡು ಮಕ್ಕಳನ್ನು ಹುಟ್ಟಿಸಿ ತನ್ನ ಆಯುಷ್ಯದ ಮುಖ್ಯಾಂಶವನ್ನು ತನ್ನ ಏಳಿಗೆ ತನ್ನ ಕಾರ್ಯ ತನ್ನ ಸುಖ ಸೌಕರ್ಯ ಇದರೊಳಗೆ ಖರ್ಚುಮಾಡುವದಕ್ಕೆ ವೈಯಕ್ತಿಕ ಹಕ್ಕುಇರುವದು. ಆ ವೈಯಕ್ತಿಕ ಹಕ್ಕನ್ನು ಅನುಭವಿಸುವದರೊಳಗೇ ಮನುಷ್ಯನ ಜಾಣತನ ಮತ್ತು ಜೀವಿತ ಕರ್ತವ್ಯವು ಇರುವದು.

೨ ವೈಯಕ್ತಿಕ ಅವಾಂತರ ಕಾರಣಗಳು:—

ಹಲವು ಸ್ತ್ರೀಯರಿಗೆ ಗರ್ಭವತಿ ಆಗುವದು ಅವರ ಶರೀರ ರಚನೆಯ ದೋಷದಿಂದ ಅವರ ಜೀವಕ್ಕೆ ಅಪಾಯಕರವಾಗುವದು.

ಮತ್ತು ಕೆಲವು ವ್ಯಕ್ತಿಗಳಿಗೆ ವಂಶ ಪರಂಪರಾಗತ ರೋಗವು ಇರುವದು. ಇವರು ಸಂತತಿನಿಯಮನ ಮಾಡದೇ ಹೋದ ಪಕ್ಷದಲ್ಲಿ ಸಮಾಜದಲ್ಲಿ ರೋಗವನ್ನು ಬೆಳಿಸಲು ಕಾರಣೀ ಭೂತರಾಗುವರು.

೩ ಮೇಲ್ಕಾಣಿಸಿದ ಕಾರಣಗಳ ಕ್ರಮಶಃ ಯೋಗ್ಯಾಯೋಗ್ಯ ವಿಚಾರ :—

ವೈಯಕ್ತಿಕ ಆಸ್ತಿ ಪ್ರಧಾನ ದೇಶದಲ್ಲಿ ಭೂಸಂಪತ್ತಿಯು ಎಲ್ಲರಿಗೂ ಸಾಕಾಗುವದಿಲ್ಲವೇನೋ ನಿಜ.ಆದರೆ ಇದಕ್ಕೆ ವೈಯಕ್ತಿಕ ಆಸ್ತಿ ಪದ್ಧತಿ ಕಾರಣವಾಗಿರುವದೋ ಅಥವಾ ಜನಸಂಖ್ಯೆಯ ಬೆಳವಣಿಗೆ ಕಾರಣವಾಗಿರುವದೋ ಇದನ್ನು ಯಾವದೂ ಪೂರ್ವಗ್ರಹ ಇಟ್ಟುಕೊಳ್ಳದೇ ವಿಚಾರಮಾಡಬೇಕು. ತಾನು ಮಾಡಿದ್ದು ಮೇಲು ಆಳು ಮಾಡಿದ್ದು ಹಾಳು ಎಂಬ ಗಾದೆಯಮಾತನ್ನು ಎಲ್ಲರೂ ಒಪ್ಪುವರು. ಅದರಲ್ಲಿ ಏನೂ ಸಂಶಯವಿಲ್ಲ.ಸರ್ವಸಾಮಾನ್ಯ ಒಂದು ಕುಟುಂಬಕ್ಕೆ ಐವತ್ತು ಎಕರೆ ಭೂಮಿ ಮಾಡಲು ಸಾಧ್ಯ ಇರುವದು. ಐವತ್ತು ಎಕರೆಗೆ ಮೇಲ್ಪಟ್ಟ ಭೂಮಿ ಇದ್ದ ಭೂ ಸ್ವಾಮಿಗಳು ಕೂಲಿ ಇಟ್ಟು ಮಾಡಿಸಿದ ಭೂಮಿಯಿಂದ ಬರುವ ಆದಾಯಕ್ಕಿಂತ ಸ್ವಯಂ ಕಷ್ಟ ಮಾಡಿದ ರಯತನು ತನ್ನ ಸ್ವಂತಭೂಮಿಮೇಲೆ ಬೆಳಿಸಿದ ಆದಾಯವು ಎಷ್ಟೋ ಪಟ್ಟು ಹೆಚ್ಚಾಗುವದು. ಜಾಸ್ತಿ ಭೂಮಿಯಿದ್ದ ಭೂ ಸ್ವಾಮಿಗಳು ಬಡವರ ಹಾಗೂ ಮಕ್ಕಳ ಜೀವನಕ್ಕೆ ಬೇಕಾಗುವ ಆಹಾರದ ಬದಲು ತಮಗೆ ಜಾಸ್ತಿ ಲಾಭವನ್ನು ಕೊಡುವ ಪದಾರ್ಥಗಳನ್ನೇ ಬೆಳೆಸುವವರು. ಎಷ್ಟೋಸಲ ಬೆಳೆದ ವಸ್ತುವಿನಿಂದ ಲಾಭಇಲ್ಲವೆಂದು ಕಾಣಿಸಿದರೆ ಅವನ್ನು ಸುಟ್ಟು ಸಹಬಿಡುವರು. ಇದೂ ಅಲ್ಲದೇ ಕಮ್ಮಿಲಾಭ ಬರುವ ಅಥವಾ ಲಾಭ ಇಲ್ಲದ ಭೂಮಿಯನ್ನು ಸಾಗುಮಾಡಿಸಲು ಸಹಾ ಪ್ರಯತ್ನ ಪಡದೇ ಅದನ್ನು ಹಾಗೆ ಬೀಳು ಅಥವಾ ಬಂಜರಬಿಡುವರು. ಜೀವನದ

ಮುಖ್ಯ ಸಾಧನಗಳು ಭೂಸ್ವಾಮಿಗಳು ಅದನ್ನು ತಮ್ಮ ಕೈಯೊಳಗೆ ಇದ್ದುದರಿಂದ ಇವರಿಗೆ ಬೇಡಾದ ಯಾವ ವ್ಯವಸಾಯವೂ ಜರುಗುವಹಾಗಿಲ್ಲ. ನಮ್ಮ ದೇಶದಲ್ಲಿ ಇನ್ನು ಸಾಗಮಾಡಲಿಕ್ಕೆ ಲಾಯಕ ಇದ್ದು ಬಂಜರ ಬಿದ್ದ ಭೂಮಿಯೂ ಎಷ್ಟೋ ಇರುವದು. ಅದನ್ನು ಸಾಗಿನಲ್ಲಿ ತಂದರೆ ಈಗಿದ್ದಕ್ಕಿಂತ ದುಪ್ಪಟ್ಟ ತಿಪ್ಪಟ್ಟು ಜನರು ಸುಖವಾಗಿ ಜೀವಿಸಬಲ್ಲರು. ನಮ್ಮ ದೇಶದ ಸಾಮಾನ್ಯ ರೈತರು ಉಪಯೋಗಿಸುವ ಸಾಧನಗಳಿಂದ ಲೇನೇ ದುಡಿಯುವವನದೇ ಭೂಮಿ ಆದರೆ ಮತ್ತು ಎಲ್ಲಾ ಸಾಗಯೋಗ್ಯಕಭೂಮಿ ಯನ್ನು ಸಾಗಿನಲ್ಲಿ ತಂದರೆ ಈಗಿದ್ದ ಜನಸಂಖ್ಯೆಯ ೫/೧೦ ರಷ್ಟು ಜನರು ಸಂರಕ್ಷಣೆ ಹೊಂದಬಹುದೆಂದು ಧಾರಳವಾಗಿ ಹೇಳಬಹುದು.

ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲವೆಂಬ ಗಾದೆಯಮಾತಿನಲ್ಲಿ ಒಂದು ಆಧ್ಯಾತ್ಮಿಕ ಸತ್ಯವು ಗುಂಫಿತವಾಗಿರುವದು. ಅನ್ನ ಉತ್ಪಾದನ ಮಾಡುವ ಭೂದೇವಿಯ ಶಕ್ತಿಗೆ ಪರಿಮಿತಿ ಇರುವದೆಂಬುವ ವಿಚಾರವು ತಪ್ಪು ಇರುವದು. ಯಾಂತ್ರಿಕ ವಿದ್ಯುತ್ತು ಮತ್ತು ಅಣುಶಕ್ತಿಯ ಸಹಾಯದಿಂದಲೂ ಮತ್ತು ವನಸ್ಪತಿ ಶಾಸ್ತ್ರದಲ್ಲಿಯ ಆಧುನಿಕ ಶೋಧದಿಂದಲೂ ಅನ್ನ ಉತ್ಪನ್ನ ಮಾಡುವ ಭೂದೇವಿಯ ಶಕ್ತಿಯು ಅಪರಿಮಿತ ಇರುವದೆಂದು ಶಾಸ್ತ್ರಜ್ಞರು ಘಂಟಾಘೋಷ ಮಾಡುತ್ತಿರು ವರು. ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲವೆಂಬುದು ಸೋಮಾರಿ ಜನರ ತತ್ವಜ್ಞಾನವಲ್ಲ. ನಿಸರ್ಗದೇವಿಯ ಎಲ್ಲಾ ಶಕ್ತಿ ಸಾಧನಗಳ ಉಪಯೋಗಮಾಡ ಬಲ್ಲ ಉದ್ಯಮ ಶೀಲರ ಮಾತಿದು. ಆದರೆ ಈ ಶಕ್ತಿ ಸಾಧನಗಳನ್ನು ಮಾನವ ಜಾತಿಯ ಏಳ್ಗೆಗಾಗಿ ಉಪಯೋಗ ಮಾಡದೆ ತಮ್ಮ ಸ್ವಾರ್ಥಕ್ಕಾಗಿ, ಮಾನವ ಜಾತಿಯ ಹಿಂಸೆಗಾಗಿ, ಉಪಯೋಗ ಮಾಡಿದರೆ ಅದು ಯಾರತಪ್ಪು ? ಹಲವು ಜನರಿಗೆಮಾತ್ರ ಈ ಶಕ್ತಿಸಾಧನಗಳ ಮಾಲಿಕರನ್ನು ಮಾಡಿದ್ದರಿಂದ ವೈಯಕ್ತಿಕ ಆಸ್ತಿಪದ್ಧತಿಯ ಮೂಲಕ ಈ ತಪ್ಪು ಜರುಗುತ್ತಿರುವದು. ಈ ತಪ್ಪುಗಳನ್ನು ತಿದ್ದುವ ಯೋಗ್ಯತೆ ಇಲ್ಲದ ಅಥವಾ ಈ ತಪ್ಪುತಿದ್ದಲಿಕ್ಕೆಬೇಕಾಗುವ ಸ್ವಾರ್ಥತ್ಯಾಗ ಮಾಡಿ ಹೋರಾಡುವ ತ್ರಾಣ ವಿಲ್ಲದ ಸೋಮಾರಿ ಜನರು ಲೋಕ ಸಂಖ್ಯೆಯ ಬೆಳವಣಿಗೆಯನ್ನು ಕಮ್ಮಿ ಮಾಡಬೇ ಕೆಂದು ಮುಂದೆ ಬರುವ ಸಂತತಿ ಹಿಂಸೆಯನ್ನು ಮಾಡುವವರು ಆಸ್ತಿಯ ವಿಷಯ ವಿಭಾಗದಿಂದ ಆಗುವ ಪರಿಣಾಮವನ್ನು " ಸೂಳೆಯ ಪಾಪ ಸಂನ್ಯಾಸಿಯ ಮೇಲೆ ಹಾಕಿದಂಥ ಜನರು ಈ ಸಂತತಿನಿಯಮನವನ್ನು ಸೂಚಿಸುತ್ತಿರುವರು. ಈ ಹಿಂಸಾವಾದಿಗಳಿಗೆ ದೇಹಾಂತ ಪ್ರಾಯಶ್ಚಿತ್ತದ ವಿನಹಾ ಬೇರೆ ಶಿಕ್ಷೆ ಇಲ್ಲ. ಒಂದು ವೇಳೆ ಸಾಕಷ್ಟು ಅನ್ನವನ್ನು ಉತ್ಪನ್ನಮಾಡುವ ಯೋಗ್ಯತೆ ನಮ್ಮಲ್ಲಿ ಇಲ್ಲವೆಂದು ಸಿದ್ಧವಾದರೂ ಸಂತತಿ ನಿಯಮನ ತತ್ವವು ಯೋಗ್ಯವೆಂದು ಅನ್ನಲಾಗದು. ಸಮಾ ಜದ ಮುಂದು ಸಾಗುವಣಿಯಮತ್ತು ಏಳಿಗೆಯ ದೃಷ್ಟಿಯಿಂದ ಮುದುಕರು ಜಾಸ್ತಿ ಯೋಗ್ಯರೋ ಅಥವಾ ಹುಟ್ಟಬರುವ ಮಕ್ಕಳು ಯೋಗ್ಯರೋ ಇದನ್ನು ನಿರ್ಣಯಿಸು ವದು ಸ್ವಾರ್ಥಬಿಟ್ಟರೆ ಕಠಿಣ ಪ್ರಶ್ನವಲ್ಲ. ಹುಟ್ಟುವ ಮಕ್ಕಳು ಸಂತತಿನಿಯಮನ

ಮಾಡಬೇಕೆನ್ನುವ ಪಂಡಿತರಿಗಿಂತ ಜಾಸ್ತಿ ಪ್ರತಿಭಾ ಶಾಲಿ ಮತ್ತು ಕಾರ್ಯಕ್ಷಮ ರಾಗಲಿಕ್ಕಿಲ್ಲೆಂದು ಯಾರು ಹೇಳಬಲ್ಲರು?ಹಾಗೂ ದೇಶದನಿಸ್ಸತ್ವಕಾಲದಲ್ಲಿ ಮುದುಕ ರಿಗಿಂತ ತರುಣರೇ ಹೆಚ್ಚು ಉಪಯೋಗಕ್ಕೆ ಬೀಳುವರು. ಮುದುಕರಿಗಿಂತ ತರುಣರೆ ಅಂಥ ಸಮಾಜದಲ್ಲಿ ಸಂಪತ್ತು ಬೆಳಿಸುವವರು. ಇವೇ ಮುಂತಾದ ಕಾರಣಗಳಿಂದ ಸಂತತಿನಿಯಮನಕ್ಕಿಂತ ಮುದುಕರ ಪ್ರಾಣಹಾನಿ ಸಮಾಜಕ್ಕೆ ಜಾಸ್ತಿ ಹಿತಕರ ವಾಗುವದು. ಐದೈದುವರ್ಷಕ್ಕೆ ಭೂಮಿಯಿಂದ ಬರುವ ಆದಾಯದ ಸರಾಸರಿ ಮಾಡಿ ಅದಕ್ಕೆ ಸಾಕಷ್ಟು ಜನರಿಗೆ ಮಾತ್ರ ಜೀವಂತಇಟ್ಟು ಮಿಕ್ಕ ಮುದಿ ಹದ್ದು ಗಳನ್ನುಪರಲೋಕಯಾತ್ರೆಗೆ ಕಳಿಸಬೇಕು. ಪರಲೋಕಯಾತ್ರೆಗೆ ಯಾರನ್ನು ಕಳಿಸ ಬೇಕೆಂಬುದನ್ನು ನಿರ್ಣಯಿಸುವಾಗ ಅತಿ ಮುದುಕರಿಂದ ಪ್ರಾರಂಭಮಾಡಬೇಕು. ಸ್ಪಾರ್ಟದಲ್ಲಿ ಈ ಪದ್ಧತಿ ಇತ್ತೆಂದು ಇತಿಹಾಸಜ್ಞರು ಹೇಳುತ್ತಾರೆ. ಇದು ನನ್ನ ವಿಚಾರವಲ್ಲ. ಮಾನವೇತರ ಮಿಕ್ಕ ಪ್ರಾಣಿಗಳಲ್ಲಿ ನಡೆಯುವ ಅಸ್ತಿತ್ವದ ಹೋರಾಟ ವನ್ನು ನೋಡಿದರೆ ಮುದುಕರನ್ನು ಕೃತಜ್ಞತಾ ಬುದ್ಧಿಯಿಂದಾಗಲಿ ಕನಿಕರತೆಯಿಂದಾ ಗಲಿ ಬದುಕಿಸಬೇಕೆನ್ನುವವರು ಯಾರೂಇರುವದಿಲ್ಲ.ತನ್ನ ಶಕ್ತಿಯಿಂದ ಬದುಕಬೇಕು. ಸಂತತಿನಿರ್ಮಾಣ ಮಾಡಬೇಕು. ಶಕ್ತಿಇಲ್ಲದಿದ್ದರೆ ಮೂಲೆಯಲ್ಲಿಬಿದ್ದು ಸಾಯ ಬೇಕು. ಜೀವಂತ ಇದ್ದವರ ಕೈಯಲ್ಲಿ ಕಾನೂನು ಮಾಡುವ ಮತ್ತು ಹಣಕಾಸಿನ ಖರ್ಚುಮಾಡುವ ಅಧಿಕಾರ ಇದ್ದ ಕಾರಣ ಮುಂದೆ ಬರುವ ಮಕ್ಕಳು ಅಸಹಾಯ ರಿದ್ದದರಿಂದ ಜೀವಂತಇದ್ದವರು ತಮ್ಮ ಪರಲೋಕಯಾತ್ರೆಯ ಕಾನೂನಿಗಿಂತ ಸಂತತಿನಿಯಮನದ ಕಾನೂನನ್ನೇ ಸುಲಭವಾಗಿ ಪಾಸುಮಾಡುವವರು. ನಮ್ಮ ಡಾಕ್ಟರ ಸಪ್ತರ್ಷಿ ಅವರ ಸೂಚನೆ ಪ್ರಕಾರ ಹೆರಿಗೆ ಆಸ್ಪತ್ರೆ ಬದಲು ಸಂತತಿನಿಯಮ ನಾಲಯಗಳು ಹೆಚ್ಚಾಗುವವು. ಈ ಸಂತತಿನಿಯಮನದ ಕಲ್ಪನೆಯನ್ನು ಸಹ ನಿರ್ಮೂಲ ಮಾಡಲು ಎಲ್ಲಾ ಸಮಾಜದ ಪ್ರೇಮಿಗಳು ಅಖಂಡ ಅವಿಶ್ರಾಂತ ಪ್ರಯತ್ನ ಮಾಡಬೇಕು. ರಾಷ್ಟ್ರದ ಸಂತತಿ ಸಂಪತ್ತು ಎಲ್ಲಾ ಇತರ ಸಂಪತ್ತಿಗಿಂತ ಹೆಚ್ಚಿನದು. ನಿರುದ್ಯೋಗ ಮತ್ತು ನಾಳಿನ ಚಿಂತೆ ಈ ಎರಡು ರೋಗಗಳಿಗೆ ವೈಯ ಕ್ತಿಕ ಆಸ್ತಿ ಪದ್ಧತಿ ಮತ್ತು ಸಂಪತ್ತು ನಿರ್ಮಾಣಮಾಡುವ ಸಾಧನಗಳಮೇಲೆ ವೈಯ ಕ್ತಿಕ ಮಾಲಕಿ ಇವೇ ಕಾರಣಗಳು ಇರುವವು.

ವೈಯಕ್ತಿಕ ಆಸ್ತಿ ಪದ್ಧತಿ ಮತ್ತು ಸಮಾಜ ಸತ್ತಾವಾದ ಇದರ ಕನಿಷ್ಠತೆ ಶ್ರೇಷ್ಠತೆಯ ಬಗ್ಗೆ ಇದೇ ಲೇಖಕನ “ ನ್ಯಾಯಕ್ಕೆ ಗಲ್ಲು ” ಎಂಬ ನಾಟಕದಲ್ಲಿಯ ರತಿಲಾಲ ಮತ್ತು ಸಮಶೀಲ ಇವರ ಸಂವಾದವನ್ನು ಓದಬೇಕು.

ವೈಯಕ್ತಿಕ ಶ್ರೇಯಸ್ಸು ಮತ್ತು ಪ್ರೇಮ ಇವುಗಳಿಗಿಂತ ಸಮಾಜದ ಶ್ರೇಯಸ್ಸು ಮತ್ತು ಪ್ರೇಮ ಇವಕ್ಕೆ ಜಾಸ್ತಿ ಬೆಲೆ ಕೊಟ್ಟು ತಮ್ಮ ಸಕಲಸೌಕರ್ಯದ ಮೇಲೆ ತಿಲಾಂಜಲಿ ಕೊಡುವದು ಬೇಕಿಲ್ಲವೆಂದು ಹಲವು ವ್ಯಕ್ತಿವಾದಿಗಳು. ( Indipendent )ಅನ್ನುವರು. ವ್ಯಕ್ತಿಯು ಸಲುವಾಗಿ ಸಮಾಜದ ಹಿತವನ್ನು ಬದಿಗಿಡ

ಬೇಕೆಂಬುವ ವ್ಯಕ್ತಿವಾದಿಗಳು ಮತ್ತು ಸಮಾಜದ ಸಲುವಾಗಿ ವ್ಯಕ್ತಿಯು ಬಲಿದಾನ ಮಾಡಬೇಕೆಂಬುವ ಸಮಾಜವಾದಿಗಳು ಇವರಿಬ್ಬರು ಆ ಒಂದು ಆಧ್ಯಾತ್ಮಿಕ ನಿತ್ಯ ತತ್ವವನ್ನು ಬಿಟ್ಟು ನಡಿದಿರುವರೆಂದು ನನ್ನ ಅಭಿಪ್ರಾಯ "ಆತ್ಮಾನಂ ಸರ್ವಭೂತೇಷು ಸರ್ವಭೂತಾಚ ಆತ್ಮನಿ" ಈ ಉಪನಿಷತ್ ವಾಕ್ಯ ಮತ್ತು ಗೀತಾಬೋಧ ಆತ್ಮಾನುಭವಿಗಳ ಈ ಮಾತಿನಲ್ಲಿ ಅಡಕವಾದ ನಿತ್ಯಸತ್ಯವನ್ನು ನಾವು ಬಿಟ್ಟು ಹೋಗುತ್ತೇವೆ. "ತ್ಯಜೇತ ಏಕಂ ಕುಲಸ್ಯಾರ್ಥೇ"..........ಆತ್ಮಾರ್ಥೇ ಪೃಥ್ವೀಂ ತ್ಯಜೇತ್" ಎಂಬ ಉಕ್ತಿಯಲ್ಲಿ ತೋರಿಕೆಗೆ ಪರಸ್ಪರ ವಿರೋಧಿ ಕಾಣಿಸಿದ ಮಾತಿನಲ್ಲಿ ಸಹ ವ್ಯಕ್ತಿಮತ್ತು ಸಮಷ್ಟಿ ಇವುಗಳೊಳಗಿನ ಪರಸ್ಪರಾವಲಂಬಿತವು ತೋರಿಬರುವದು. ವ್ಯಕ್ತಿಹಿತ ಮತ್ತು ಸಮಾಜ ಹಿತ ಇದರೊಳಗೆ ವಿರೋಧವೇ ಇಲ್ಲ. ವಿರೋಧಾಭಾಸ ಇರುವದು. ಆ ಆಭಾಸವು ಸಹ ಸಮಾಜರಚನೆಯ ದೋಷದಿಂದ ಉಂಟಾಗಿರುವದು. ಜಾಸ್ತಿ ಮಕ್ಕಳಿದ್ದರೆ ವೈಯಕ್ತಿಕ ಸೌಕರ್ಯ ಹಾಳಾಗುವ ಪರಿಸ್ಥಿಯು ಆಸ್ತಿಯ ವಿಷಮ ವಿಭಾಗದಿಂದ ಬಂದಿರುವದು. ಮಕ್ಕಳನ್ನು ಸಾಕುವ ಆರ್ಥಿಕ ಚಿಂತೆಯಿಂದ ಈ ಪರಿಸ್ಥಿತಿ ಬಂದಿರುವದು. ಜಾಸ್ತಿ ಮಕ್ಕಳು ಆಡುವ ಮನೆಯು ನಂದನವನಕ್ಕಿಂತ ಆನಂದಮಯ ಇರುವದು. ಆದರೆ ಹೊಟ್ಟೆತಾಪತ್ರಯದ ದುಡಿಮೆಯಿಂದ ಶೋಷಿಸಿಕೊಂಡ ತಂದೆತಾಯಂದಿರಿಗೆ ಮಕ್ಕಳ ಆಟವು ಸಹ ತಲೆ ಕೆಡಿಸುವ ಸಂಗತಿಯಾಗುವದು. ಮಕ್ಕಳ ಆಟದ ಆನಂದವು ಮನೆಯಲ್ಲಿಯ ಬೇನೆಯನ್ನು ಓಡಿಸುವದು. ಅಕಾಲ ಮುಪ್ಪನ್ನು ದೂರಮಾಡುವದು. ಈ ಆನಂದಕ್ಕೆ ಸಮಾಜವನ್ನು ದೂರಮಾಡಿದ್ದು ವಿಪುಲ ಆಸ್ತಿಯ ಸಂಪತ್ತನ್ನು ಸರಿಯಾಗಿ ಬಳಸದಿರುವ,ಬಳಸಿ ಸರಿಯಾಗಿ ಹಂಚದಿರುವ,ಈ ಸಮಾಜ ರಚನೆ. ಒಂದು ಸರ್ವಸಾಮಾನ್ಯ ಕುಟುಂಬದಲ್ಲಿ ಪುರುಷರಿಗೆ ದೊರಕಿಸುವ ಕಾಟ ಮಾತ್ರ ಒಂದಿದ್ದರೆ, ಹೆಂಗಸರಿಗೆ ಮನೆಕೆಲಸದ ಭಾರವಹಿಸಿ ಮಕ್ಕಳನ್ನು ಜನಿಸಿ ಪೋಷಿಸುವದು ಈ ಎರಡು ಅತಿಭಾರಗಳು ಇರುವವು. ಅದರಿಂದ ಹೆಂಗಸರಿಗೆ ಜೀವಿಸಲು ಬೇಸರವಾಗಿ ಹೆಣ್ಣಾಗಿ ಹುಟ್ಟಬಾರದೆಂಬ ಒಂದು ಗಾದೆಯಮಾತು ಪ್ರಚಾರದಲ್ಲಿ ಬಂದಿರುವದು. ಹೆಂಗಸರಿಗೆ ಸಮಾಜದ ತಾಯಿಗೆ, ಈ ವಿಧವಾಗಿ ನಡಿಸುವ ಸಮಾಜಪದ್ಧತಿಯೂ ನರಕಕ್ಕಿಂತ ಕೀಳೆನ್ನಬಹುದು. ಬಡಕೂಲಿಕಾರರ ಹೆಂಗಸರ ಸ್ಥಿತಿಯು ಇವರಿಗಿಂತ ಕೀಳಾಗಿರುವದು. ಸಂಸಾರದ ಆರ್ಥಿಕ ಅನಿರ್ವಾಹಕತೆಗಾಗಿ ಹೊರಗೆ ಕೂಲಿ ಮಾಡಬೇಕು. ಮನೆಯೊಳಗೆ ದುಡಿಯಬೇಕು. ಅಜ್ಞ ಮತ್ತು ಆಡಾಣಿ ಗಂಡನ ಕೂಡ ಬಾಳಬೇಕು. ಮಕ್ಕಳನ್ನು ಜನಿಸಿ ಪೋಷಿಸಬೇಕು. ಮಕ್ಕಳ ಆಯುರಾರೋಗ್ಯ ನೋಡಲಿಕ್ಕೆ ಸಮಯವಿಲ್ಲ. ಮಕ್ಕಳ ಆಟಪಾಟದ ಆನಂದವನ್ನು ಅನುಭವಿಸಿ ತಮ್ಮ ಜೀವನವನ್ನು ರಸಭರಿತ ಮಾಡಲಿಕ್ಕೆ ಪುರಸತ್ತು ಇಲ್ಲ. ಈ ಪರಿಸ್ಥಿತಿ ಉಂಟಾದದ್ದು ಆಸ್ತಿಯ ವಿಷಮ ವಿಭಾಗದಿಂದಲೇ ಹೊರ್ತು ಜನಸಂಖ್ಯೆಯ ಬೆಳವಣಿಗೆಯಿಂದ ಅಲ್ಲ. ಆರ್ಥಿಕ ಸುಸ್ಥಿತಿಯಲ್ಲಿ ಹೆಚ್ಚು ಮಕ್ಕಳ

ತಾಯಿಯು ಹೆಚ್ಚು ಆರೋಗ್ಯ ಮತ್ತು ಸ್ವಾಸ್ಥ್ಯವುಳ್ಳವಳಾಗಿ ಇರುವಳು. ಅನಾರೋಗ್ಯ ಮತ್ತು ಬಂಜರಿಕೆ ಇವು ಅನ್ಯೋನ್ಯಾಶ್ರಯಿಗಳು. ಸಮಾಜಸುಧಾರಣೆಗೆ ಮೂಲಭೂತವಾದ ಸಂತತಿನಿರ್ಮಾಣದ ಕರ್ತವ್ಯವನ್ನು ನೆರವೇರಿಸಿದ ನಂತರವೇ ಮಾನವನ ಮನಸ್ಸು ಉಲ್ಲಸಿತವಾಗಿ ಅವನ ದೇಹವು ಸುಧೃಡವಾಗಿ ಅವು ಹೆಚ್ಚು ಕಾರ್ಯಕ್ಷಮವಾಗುವವು. ಜಗತ್ತಿನಲ್ಲಿ ಅವಿವಾಹಿತರಿಗಿಂತ ವಿವಾಹಿತರೇ ಜಾಸ್ತಿ ಸಮಾಜಸೇವೆಯನ್ನು ಮಾಡಿರುವರು. ಆರ್ಥಿಕ ಮತ್ತು ಲೈಂಗಿಕ ಹಸಿವೆಯಿಂದ ಪೀಡಿತ ಸಮಾಜದಿಂದ ಯಾವದೂ ಮಹತ್ತ್ವದ ಕಾರ್ಯವಾಗದೆ ಅದರಲ್ಲಿ ಅನೈಸರ್ಗಿಕ ಟೊಳ್ಳು ಡಂಗು ಮಾತ್ರ ಹೆಚ್ಚಾಗುವದು.

ವೈಯಕ್ತಿಕ ಸುಖ ಸೌಕರ್ಯ ಮತ್ತು ಏಳಿಗೆ ದೃಷ್ಟಿಯಿಂದಲೂ ಸಹ ಹೆಚ್ಚು ಮಕ್ಕಳ ತಂದೆ, ವಿಶೇಷವಾಗಿ ತಾಯಿ, ಆಗುವದು ಅತ್ಯವಶ್ಯಕ ಇರುವದು.

ಪರಕೀಯರ ದಾಸ್ಯದಲ್ಲಿ ನಮ್ಮ ದೇಶವು ಇದ್ದಾಗ ಅವರಿಗೆ ಬೇಕಾದಷ್ಟು ಜನರಿಗೆ ಮಾತ್ರ ಕಾರಕೂನಿ ವಿದ್ಯಾವನ್ನು ಕೊಟ್ಟು ನಮ್ಮ ದೇಶದ ಆಡಳಿತೆಯನ್ನು ನಡಿಸುತ್ತಿದ್ದರು. ಈಗ್ಯೂ ಸಹಾ ಸ್ವ ಮತ್ತು ಪರ ಭಾಂಡವಳಶಾಹೀಯ ದರ್ಪವು ನಮ್ಮ ದೇಶದಲ್ಲಿ ಇದ್ದಮೂಲಕ ಆ ಪರಿಸ್ಥಿತಿ ಬದಲಾಗಿಲ್ಲ. ದೇಶದ ಆಡಳಿತೆಗಾಗಿ ಮಾಡಿದ ವಿಚಾರವು ಜನತೆಯ ಇಡೀ ಜೀನಕ್ಕೆ ವಿಸ್ತರಿಸಿ ತಮಗೆ ಬೇಕಾಗುವಷ್ಟು ಮಾತ್ರ ಕೂಲಿಕಾರರ ಜನಸಂಖ್ಯೆ ಇರಲಿ, ಮಿಕ್ಕವರದು ಅವಶ್ಯಕತೆಯಿಲ್ಲವೆಂದು ಅಸಂತುಷ್ಟ ಬಹುಜನರ ಹೋರಾಟದಲ್ಲಿ ಈ ಭಾಂಡವಲಿಗಾಗಿ ಅವರು ಮತ್ತು ಅವರ ದಾಸರು ಹೇಳುವರು. ಬಂಧು ಭಗಿನಿಯರೇ ! ಭಾಂಡವಲಶಾಹಿಯ ಸೌಕರ್ಯಕ್ಕಾಗಿ ಸಾಮಾನ್ಯ ಜನರನ್ನು ಬಲಿಯಾಗಿ ಕೊಡುವ ವಿಚಾರದೊಳಗಿನ ಸಂತತಿನಿಯಮನ ಇದೊಂದು ಭೀಕರ ರಾಕ್ಷಸೀ ವಿಚಾರ, ಶತಮುಖ ರಕ್ಕಸನಂತೆ ಬೆಳೆದಿರುವ ಭಾಂಡವಲಶಾಹಿಯೊಡನೆ ಈ ಸಂತತಿ ನಿಯಮನದ ವಿಚಾರವನ್ನು ಸಹ ನಿರ್ಮೂಲಮಾಡಲಿಕ್ಕೆ ಎಲ್ಲರೂ ಅಹರ್ನಿಶ ಪ್ರಯತ್ನ ಮಾಡಬೇಕೆಂದು ನನ್ನ ಪ್ರಾರ್ಥನೆ.

ನಿಸರ್ಗದಲ್ಲಿ ಸಂತತಿ ಪ್ರಚಾರಕ್ಕಾಗಿ ವೈಯಕ್ತಿಕ ಆಹುತಿಕೊಡುವ ಪದ್ಧತಿಯು ಕಂಡು ಬರುತ್ತದೆ. ಹೆಣ್ಣು ಚೇಳಿನ ಬೆನ್ನುಹರಿದು ಅದರ ಮರಿಗಳು ಹೊರಗೆ ಬರುವವು. ಅದರೊಡನೆ ಬಹುಶಃ ಅದು ಸಾಯುತ್ತದೆ. ಸಂತತಿ ಪ್ರಚಾರ ಕಾರ್ಯವು ಬಹಳೇ ಮಹತ್ತ್ವದ ಇದ್ದಕಾರಣ ನಿಸರ್ಗದೇವಿಯು ತನ್ನ ಚಿರಕಾಲತ್ವಕ್ಕೆ ಭಂಗಬರಬಾರದೆಂದು ಸಂಗಮ ಸುಖದ ಆಶೆಯನ್ನು ಅತಿ ಬಲಿಷ್ಠಮಾಡಿರುವಳು. ಆ ಬಲದ ಮುಂದೆ ಎಲ್ಲಾ ಪ್ರಾಣಿಗಳು ವಶವಾಗಿರುವವು. ಕೃತ್ರಿಮ ಸಮಾಜದ ಭಯಕ್ಕಾಗಿ ಮನುಷ್ಯ ಪ್ರಾಣಿ ಮಾತ್ರ ಆ ಆಶೆಗೆ ತಾನು ಬಲಿ ಬಿದ್ದಿಲ್ಲವೆಂದು ಡಂಗು ಮಾಡುವನು. ಆ ಡಂಗನ್ನು ಕೊನೆಗಾಣಿಸಲಿಕ್ಕೆ ಮನುಷ್ಯನು ಕಳ್ಳತನದಿಂದ ಸಂತತಿ

ನಿಯಮನ ಸಾಧನಗಳನ್ನು ಅವಲಂಬಿಸುವನು. ಗರ್ಭಹತ್ಯಾ ಬಾಲಹತ್ಯಾ ಮಾಡುವನು. ಸಮಾಜ ಪ್ರೇಮಕ್ಕೆ ಆಧ್ಯಾತ್ಮಿಕತತ್ವವು ತಳಹದಿಯಾಗಿದ್ದರೂ ಆ ಪ್ರೇಮದ ಪರ್ಯವಸಾನ ಮಾತ್ರ ಸಮಾಜದ ಕೃತ್ರಿಮತೆಯಿಂದ ಅಘೋರಪಾತಕದಲ್ಲಿ ಆಗುವದು. ಇದರಲ್ಲಿ ಮನುಷ್ಯನ ನೀಚತನಕ್ಕಿಂತ ಕೃತ್ರಿಮ ವಿಚಾರ ದಾಸ್ಯವು ಹೆಚ್ಚಾಗಿ ಕಂಡು ಬರುವದು. ಸಮಾಜ ಪ್ರೇಮ ಮತ್ತು ವ್ಯಕ್ತಿಕ ಬಲಿಷ್ಠ ಸಂತತಿ ವಿಚಾರ ಪ್ರವೃತ್ತಿ ಈ ಎರಡು ವಿಚಾರದಿಂದ ಹತಬಲ ಅಥವಾ ಪರಾಧೀನರಾದ ದುರ್ಬಲರು ಮೇಲ್ಮಾಣಿಸಿದ ಪಾಪಕೃತ್ಯಗಳನ್ನು ಮಾಡಲು ಪ್ರವೃತ್ತರಾಗುವರು. ವೀರಮಾತೆಗೆ ಇದು ಒಪ್ಪುವದಿಲ್ಲ. ಸಂತತಿ ಜನನ ಇದೊಂದು ವೀರಮಾತೆಯ ಕರ್ತವ್ಯವು. ಆ ಜನನವು ಸಮಾಜದ ಕಟ್ಟಡದ ಒಳಗಿನಿಂದಾಗಲಿ ಹೊರಗಿನಿಂದಾಗಲಿ ಅದು ಮುಖ್ಯಮಾತಲ್ಲ. ಸಂತತಿಪ್ರಚಾರ ಪ್ರವೃತ್ತಿಯ ಒತ್ತಡೆಯು ಇನ್ನೊಂದು ವಿಧವಾಗಿ ಕಂಡುಬರುವವು. ಈ ಪ್ರವೃತ್ತಿಯ ಸಮಾಧಾನಕ್ಕಾಗಿ ಮನುಷ್ಯನು ತನ್ನ ಆಸ್ತಿ ತನ್ನ ಆರೋಗ್ಯ ಸಮಾಜದೊಳಗಿನ ಗೌರವ ಇವೆಲ್ಲಕ್ಕೂ ತಿಲಾಂಜಲಿ ಕೊಡುವನು. ನೈಸರ್ಗಿಕ ಪ್ರವೃತ್ತಿಯೇ ಹೀಗಿರುವಾಗ ಅವಾಂತರ ಶಾರೀರಿಕ ಕಾರಣಗಳಿಂದ ಮನುಷ್ಯನು ಸಂತತಿನಿಯಮನ ಮಾಡಬೇಕಾಗುವದೆನ್ನುವ ಮಾತಿನಲ್ಲಿ ಏನೂ ಸ್ವಾರಸ್ಯವಿಲ್ಲ. ಎಷ್ಟೋಸಲ ಡಾಕ್ಟರರಿಗೆ ತಾಯಿಯನ್ನು ಉಳಿಸಿ ಕೂಸನ್ನು ಕೊಲ್ಲಬೇಕೋ ಅಥವಾ ಕೂಸನ್ನು ಉಳಿಸಿ ತಾಯಿಯ ಜೀವಕ್ಕೆ ಅನಿವಾರ್ಹವಿದ್ದಲ್ಲಿ ಅಪಾಯ ತಗಲಿಸಬೇಕೋ ಈ ನಾಜೂಕ ನೈತಿಕ ಪ್ರಶ್ನೆಯನ್ನು ಬಿಡಿಸಬೇಕಾಗುವದು. ಯಾವಾಗಲೋ ವಿರಳವಾಗಿ ಬರುವ ಈ ಪ್ರಶ್ನೆಯನ್ನು ಡಾಕ್ಟರಿಗೆ ಬಿಟ್ಟು ಬಿಡಬೇಕು. ಅದರಸಲುವಾಗಿ ಸಂತತಿನಿಯಮನ ತತ್ವದ ಪ್ರಚಾರವು ಬೇಕಿಲ್ಲ. ಈ ವಿಚಾರ ಪ್ರಚಾರದಿಂದ ವ್ಯಭಿಚಾರಕ್ಕೆ ಮಾತ್ರ ಒಳ್ಳೇ ಅನುಕೂಲತೆಯುಂಟಾಗುವದು. ವ್ಯಭಿಚಾರವೆಂದರೆ ಸಂತಾನಪ್ರೇಮ ಇಲ್ಲದೆ ಮಾಡುವ ಸಂಬಂಧ. ಹೀಗೆ ದುಷ್ಪರಿಣಾಮ ಆಗಬಾರದೆಂಬ ವಿಚಾರ ಪ್ರಚಾರ ಮಾಡಬಾರದೆಂದು ಈ ಲೇಖಕನು ಅನ್ನುವದಿಲ್ಲ. ಇಲಿ, ಹೆಗ್ಗಣ ಬರುತ್ತವೆ ಎಂದು ಯಾರೂ ಮನೆಕಟ್ಟಿಸುವದು ಬಿಡುದೆದಿಲ್ಲ. ಸಂತತಿನಿಯಮನದ ಮೂಲಭೂತ ತತ್ವವೇ ಮಹಾಹೀನ ಇರುವದೆಂದೂ ಸಮತಾವಾದ ಬೆಳೆಸುವ ಯೋಗ್ಯತೆ ಇಲ್ಲದ ಭಾಂಡವಲಶಾಹಿಯ ದಾಸತ್ವದಿಂದ ಅದು ಬಂದಿರುವದೆಂದೂ ಈ ಲೇಖಕನ ಅಭಿಪ್ರಾಯ.

ಮುಂದಿನ ಸಂತತಿ ಸಂಪತ್ತನ್ನು ಹಾಳುಮಾಡುವದಕ್ಕಿಂತ, ವೀರಮಾತೆ! ನೀನು ಪ್ರಪಂಚದಲ್ಲಿ ಸಮತಾತತ್ವವನ್ನು ಹಬ್ಬಿಸಿ ಚಿಕ್ಕಮಕ್ಕಳ ತುಷ್ಟಿಪುಷ್ಟಿಗಳಿಂದ ತುಂಬಿದ ಸಂತುಷ್ಟನನಾದದಿಂದ ಆನಂದವನ್ನು ಬೀರುವ ನಂದನವನದಲ್ಲಿ ಈ ಲೋಕವನ್ನು ಪರಿಣಮಿಸು!

ಪರಂಪರಾಗತ ರೋಗ ಇದ್ದ ತಂದೆತಾಯಿಯರು ರೋಗಿಷ್ಟ ಪ್ರಜೆ ಹುಟ್ಟಿಸಬಾರದೆಂಬುವ ಪ್ರಶ್ನವನ್ನು ಸಹ ಡಾಕ್ಟರರಿಗೆ ಒಪ್ಪಿಸಬೇಕಾಗುವದು. ಆದರೆ ಅವರ

ಸಂಬಂಧದ ಹಲವು ವಿಚಾರಗಳು ಸಾಮಾಜಿಕ ಮಹತ್ವದ್ದು ಇರುವವು. ಜನನ ಶಾಸ್ತ್ರದ ದೃಷ್ಟಿಯಿಂದ ವಿಚಾರಮಾಡಿ ನೋಡಿದರೆ ಹೊರಗಿನ ಜಂತು ಮೂಲಕ ಆಗುವ ರೋಗಗಳು ಪರಂಪರಾಗತ ಆಗಲಾರವು. ಸ್ತ್ರೀಪುರುಷರ ಸಮರ್ಥ ಬೀಜ ಆಗುವ ಒಂದೇ ಒಂದು ಪೆರಿಯಪೂರ್ಣ ಬೀಜದಿಂದ ಮುಂದಿನ ಪೀಡಿಯು ನಿರ್ಮಾಣ ವಾಗುವದು. ಅದರಲ್ಲಿ ಪ್ರವೇಶಿಸಲು ಹೊರಗಿನ ರೋಗಜಂತುಗಳಿಗೆ ಅವಕಾಶವೇ ಇಲ್ಲ. ತಜ್ಞರು ಹೇಳುವದೇನೆಂದರೆ ಬೇನೆಗಳು ಪರಂಪರಾಗತವಲ್ಲ. ಬೇನೆಗಳಿಗೆ ತುತ್ತಾಗುವ ಬಲಹೀನತೆಯುಳ್ಳ ಶರೀರ ಧರ್ಮವು ಮಾತ್ರ ಪರಂಪರಾಗತ ಇರುವದು. ಆ ಬಲಹೀನತೆಯನ್ನು ತೆಗೆದು ಹಾಕುವದು ಮನುಷ್ಯನ ಇಚ್ಛೆಗೆ ಸಾಧ್ಯವಾಗಿ ಇರುವದೋ ಅಥವಾ ನಿಸರ್ಗದೇವಿಯು ಗುಟ್ಟಾಗಿರುವದೋ ಅದೊಂದು ಚರ್ಚಾಸ್ಪದ ವಿಷಯವಾಗಿ ಇರುವದು. ಮನುಷ್ಯ ಪ್ರಯತ್ನ ಮತ್ತು ನಿಸರ್ಗ ಅಥವಾ ಈಶಸಂಕಲ್ಪ ಇದರೊಳಗೆ ವಿರೋಧವಿಲ್ಲ. ವಿರೋಧಾಭಾಸ ಮಾತ್ರ ಇರುವದು. ಈ ದುರ್ಬಲತೆಯನ್ನು ( Weakness ) ಹೋಗಲಾಡಿಸಲು ಹೋರಾಡುವದು ವೀರಮಾತೆಯ ಕರ್ತವ್ಯವು. ಅದರಲ್ಲಿ ವೀರಮಾತೆಯ ವೀರತ್ವವೂ ಜೀವಶಕ್ತಿಯ ಅಟ್ಟಹಾಸವೂ ಕಂಡು ಬರುವವು. ಒಂದು ವಿಧವಾಗಿ ದುರ್ಬಲ ಇದ್ದ ಮತ್ತೊಂದು ವಿಧವಾಗಿ ಬಲವಿದ್ದ ವ್ಯಕ್ತಿಯಿಂದ ಸಮಾಜಕ್ಕೆ ಸಹಾಯ ಆಗುತ್ತದೆ. ಈ ಲಾಭ ಹಾನಿಗಳ ತೂಕಮಾಡುವದು ಡಾಕ್ಟರರ ಕೆಲಸ.

---

# ಪರಿವರ್ತನ

ಲೇಖಕಿ:— **ಕು. ಸೋನು ಅನೇಖಿಂಡಿ.**

[ ಸುಸಂಸ್ಕೃತ ಜೀವನದ ಹಿನ್ನೆಲೆ ಇದ್ದರೆ,ಪರಿವರ್ತನೆಯಾಗಲು ಜೀವನದಲ್ಲಿಯ ಒಂದು ಕ್ಷುದ್ರ ಘಟನೆಯೇ ಸಾಕಲ್ಲವೇ ? ]

' ಅಮ್ಮಾ ಹಸಿವೆ ' ಎಂದು ಶ್ರೀಕಾಂತ ಅಳತೊಡಗಿದನು. ಶ್ರೀಕಾಂತನು ತಂದೆಯನ್ನು ಕಳೆದುಕೊಂಡು ಐದು ವರ್ಷ ಕಾಲವಾಗಿತ್ತು. ಈಗ ಅವನಿಗಿರುವ ವಯಸ್ಸು ಎಂಟು ವರ್ಷ. ಶ್ರೀಕಾಂತನ ತಾಯಿ ಸೀತಾಬಾಯಿ. ಅದೇ ಊರಲ್ಲಿ ಓರ್ವ ಸಿರಿವಂತರ ಮನೆಯಲ್ಲಿ ಅಡಿಗೆ ಮೇಲ್ಗೆಲಸಕ್ಕೆಂದು ನಿಂತಿದ್ದಳು.

ಮಗು ಹಸಿವೆಯೆಂದಾಗ ಅವಳಿಗೆ ಸಿಡಿಲು ಬಡಿದಂತಾಯಿತು. ತಾನು ಕೆಲಸಕ್ಕಾಗಿ ಬೇರೆಯವರ ಮನೆಯಲ್ಲಿ ನಿಂತಾಗ ತನ್ನ ಮಗುವಿಗಾಗಿ ತಾನು ಕೈ ಎತ್ತಿ ಏನು ಕೊಡುವದಿದೆ ? ಯಜಮಾನಿಯ ಅಪ್ಪಣೆ ಮೀರಿ ಅದಾವ ಕೆಲಸ ಮಾಡ ಲಾದೀತು ?

ಬೇಡ ಮಗು, ಈಗ ಅಳಬೇಡ. ಅಡಿಗೆಯಾದಕೂಡಲೆ ಊಟ ಮಾಡುವಿಯಂತೆ; ಎಂದು ಸಮಾಧಾನ ಹೇಳಿದರೂ ಶ್ರೀಕಾಂತ ಅಳು ನಿಲ್ಲಿಸಲಿಲ್ಲ. ಹಿಂದಿನ ರಾತ್ರಿ ಹೊಟ್ಟೆಗೆ ಹಿಟ್ಟು ಇದ್ದಿಲ್ಲ. ಹಿರಿಯರಾದರೆ ತಡೆದುಕೊಂಡಾರು; ಆದರೆ ಮಕ್ಕಳ ಗತಿ ಏನು ? ಆದರಲ್ಲಿಯೂ ಯಜಮಾನಿಯು ಸುಮ್ಮನೆ ಕೂಡುವವಳೇ ? ಮನೆಯಲ್ಲಿ ಚಿಕ್ಕ ಪುಟ್ಟ ಕೆಲಸಗಳನ್ನು ಎಡೆಬಿಡದೆ ಶ್ರೀಕಾಂತನಿಂದ ಮಾಡಿಸಿಯೇ ಮಾಡಿಸುತ್ತಿದ್ದಳು. ಶ್ರೀಕಾಂತ ಒಡತಿಯ ಮಾತು ಕೇಳಿ ಕೇಳಿ ದಣಿದನು. ಮೇಲೆ ಹೊಟ್ಟೆ ಹಸಿವು ಬೇರೆ. ಅಳುವದು ಇನ್ನೂ ಜೋರಾಯಿತು. ಮನೆಯ ಒಡತಿಗೆ ಇದನ್ನು ಕೇಳಿ ಸಹಿಸುವದಾಗಲಿಲ್ಲ.

‘ ಏನೇ ಅದು ! ತುಂಬಿದ ಮನೆಯಲ್ಲಿ ನಿನ್ನ ಮಗುವನ್ನು ಅಳಿಸುವದು ? ಎರಡೇಟು ಕೊಡು, ತಾನೇ ಸುಮ್ಮನಾಗುವನು. ನೀನು ಹೊಡೆಯದಿದ್ದರೆ ನಾನು ಹೊಡೆಯುತ್ತೇನೆ. ’

ಮೂರು ವರುಷ ಕಾಲದಿಂದ ಸೀತಾಬಾಯಿ ಅವರಲ್ಲಿ ಕೆಲಸಮಾಡುತ್ತಿದ್ದಾಳೆ. ಒಡತಿಯ ಸ್ವಭಾವದ ಪರಿಚಯ ಅವಳಿಗೆ ತುಂಬಾ ಆಗಿತ್ತು. ಒಡತಿಯ ಸ್ವಭಾವ ಯಾವಾಗಲೂ ಕೊಂಚ ಬಿಗುವಿನದು. ಮಾತು ಮೀರಿದರೆ ‘ ಮನೆಬಿಟ್ಟು ಹೊರಕ್ಕೆ ಹೋಗು ’ ಎನ್ನುವವಳು. ಇನ್ನು ತನಗೂ ಮಗುವಿಗೂ ಒಂದು ತುತ್ತು ಕೂಳು ಯಾರು ಕೊಡಬೇಕು? ಹೊಟ್ಟೆ ಹಸಿದಾಗ ಹಸಿವು ಅನ್ನುವದು ಅದಾವ ತಪ್ಪು ? ಶ್ರೀಕಾಂತನ ಸಮವಯಸ್ಸಿನವನಾದ ತನ್ನ ಒಡತಿಯ ಮಗ ಮೂರು ಬಾರೆ ಮುಂಜಾವಿನಿಂದ ತಿಂದಾಗ ತನ್ನ ಮಗುವಿಗೆ ಒಮ್ಮೆಯಾದರೂ ತಾನು ಕೈಎತ್ತಿ ಕೊಡುವ ಭಾಗ್ಯ ತನಗೆ ಇಲ್ಲದಾಯಿತಲ್ಲ !

‘ ಹೂಂ ಹೊಡೆ, ನೀನು ನಿಂತು ನೋಡುವೆಯೇನು ? ತಾಯಿ ಮಗಾ ಕೂಡಿ ತಿಂದು ಸೊಕ್ಕಿರುವಿರಿ. ನಡೆ, ನಮ್ಮ ಮನೆ ಬಿಟ್ಟು’ ಎಂಬ ಒಡತಿಯ ಸಿಂಹ ಗರ್ಜನೆ ಸೀತಾಬಾಯಿಯ ವಿಚಾರಕ್ಕೆ ತಡೆ ತಂದಿತು.

ತಾನು ಬಡವೆಯಾಗಿ ಹುಟ್ಟಿದ್ದು ತಪ್ಪೇ ? ಒಡತಿಯ ನುಡಿ ಅದೆಷ್ಟು ಸಹಿಸಬೇಕು ? ಮಗು ಶ್ರೀಕಾಂತ ಅಳದಿದ್ದರೆ ತನಗೆಲ್ಲಿ ಈ ಸ್ಥಿತಿ ಬರುತ್ತಿತ್ತು ? ಸೀತಾಬಾಯಿ ಸಿಟ್ಟು ಹೊಡೆತದಲ್ಲಿ ಪರಿಣಮಿಸಿತು. ಶ್ರೀಕಾಂತನ ಗಲ್ಲ ಕೆಂಪೇರಿತು.

ಶ್ರೀಕಾಂತ ಅಭಿಮಾನಿ. ಅವನಿಗೆ ಈ ಅಪಮಾನ ಸಹಿಸಲಾಗಲಿಲ್ಲ. ಮನೆಯತ್ತ ಸಾಗಿದನು. ‘ ಅವನು ಸೊಕ್ಕಿದ್ದಾನೆ, ಅವನ ಹಿಂದೆ ನೀನು ಹೋಗಬೇಡ ’ ಎಂದು ಸೀತಾಬಾಯಿಯನ್ನು ಒಡತಿಯು ತಡೆಗಟ್ಟಿದಳು. ಮಗು ಈಗ ಆಡಿ ಬರಬಹುದೆಂದು ಮನಸ್ಸಿಗೆ ಸಮಾಧಾನ ತಂದುಕೊಂಡು ಸೀತಾಬಾಯಿ ತನ್ನ ಕೆಲಸದಲ್ಲಿ ತೊಡಗಿದಳು.

ಶ್ರೀಕಾಂತ ಇಂಥ ಅನೇಕ ಪ್ರಸಂಗಗಳಿಗೆ ಒಳಗಾಗಿದ್ದನು. ಇನ್ನು ಮುಂದೆ ತನ್ನ ಒಡತಿಯ ನುಡಿ ತಾಯಿ ಇಷ್ಟೇಕೆ ಶಿರಸಾವಹಿಸಬೇಕು ? ಇದೆಲ್ಲವೂ ಅವನಿಗೆ

ತಿಳಿಯದು. ಅತ್ತು ಅತ್ತು ದಣಿದನು. ಅವನಿಗೆ ಸಂತೈಸಲೆಂದು ನಿದ್ರೆ ಅವನನ್ನು ಆವರಿಸಿತು.

ಪ್ರತಿದಿನ ದಿನಕರನ ಉದಯದಿಂದ ರಾತ್ರಿ ೧೦ರವರೆಗೆ ಸೀತಾಬಾಯಿ ತನ್ನ ಒಡತಿಯ ಮನೆಯಲ್ಲಿ ದುಡಿಯಬೇಕಾಗುತ್ತಿತ್ತು. ಮಗು ಎಲ್ಲಿಹೋಗಿರಬಹುದೆಂದು ಅವಳಿಗೆ ಬಗೆಹರಿಯದ ವಿಚಾರವಾಯಿತು. ಮನೆಯತ್ತ ಸಾಗಿದಳು. ಕದ ನೂಕಿದಳು. ಮಲಗಿದ ಮಗುವಿನ ಮುಖದರ್ಶನ ಅವಳ ಮನದ ದುಗುಡವನ್ನು ಮಾಯ ಮಾಡಿತು. ತನಗಾಗಿ ತಾಯಿ ಊಟಮಾಡಿಲ್ಲವೆಂದು ತಿಳಿದಾಗ ಶ್ರೀಕಾಂತ ತಾಯಿಗಾಗಿ ಊಟಮಾಡಿದನು. ತಾಯಿ ಮಕ್ಕಳಿಬ್ಬರೂ ಸುಖವಾಗಿ ನಿದ್ರೆ ಹೋದರು. ಎಂದಿಲ್ಲದ ಶಾಂತತೆ ಅಂದು ಅವರ ಕುಟೀರದಲ್ಲಿ ಆವರಿಸಿತ್ತು.

ಮರುದಿನ ದಿನಕರನು ಉದಯಕ್ಕೆ ಬಂದನು. ಹಿಂದಿನ ದಿನದ ದುಃಖ ಮರೆತು ಸೀತಾಬಾಯಿ ಕೆಲಸಕ್ಕೆ ಅಣಿಯಾದಳು. ಶ್ರೀಕಾಂತ ಮಾತ್ರ ತನ್ನ ನಿರ್ಧಾರದಿಂದ ಚಲಿಸಲಿಲ್ಲ. ಸುಮಾರು ಎಂಟು ಗಂಟೆಯಾಗಿರಬಹುದು, ಪೇಟೆಯತ್ತ ತಿರುಗಾಡಲು ಹೊರಟನು. ದಾರಿಯಲ್ಲಿ ರಮೇಶ ಭೆಟ್ಟಿಯಾದನು. ರಮೇಶ ಒಡತಿಯ ಮಗ. ಅವನಿಗೆ ಶ್ರೀಕಾಂತನನ್ನು ಕಂಡು ಹಿಡಿಸಲಾರದಷ್ಟು ಹಿಗ್ಗು ಆಯಿತು.

'ಏನು ಶ್ರೀಕಾಂತ ನಿನ್ನೆ ನಮ್ಮ ಮನೆಗೆ ಬಂದೇ ಇಲ್ಲ. ನನ್ನ ಬಾಬಾ ನನಗೆ ಹೊಸ ಗಾಡಿ, ಮೋಟಾರಗಾಡಿ ತಂದಿದ್ದಾರೆ. ಬಾ ಆಡೋಣ.'

'ಇಲ್ಲ, ನಾನು ಬರುವದಿಲ್ಲ' ಶ್ರೀಕಾಂತನ ಕಣ್ಣುಗಳಲ್ಲಿ ಅವನ ನಿಶ್ಚಯ ಸೂಚಿತವಾಗತ್ತಿತ್ತು. ಆದರೆ ರಮೇಶ ಕೇಳಲೇ ಇಲ್ಲ. ಶ್ರೀಕಾಂತನನ್ನು ಒಲಿಸಲು ಒಂದೇ ಒಂದು ಉಪಾಯ ಹೂಡಿದನು.

'ನೋಡು ಶ್ರೀಕಾಂತ, ಮೋಟರಗಾಡಿ ಕೆಂಪ ಅದ. ಪಾಂ. ಪಾಂ. ಹಾರ್ನ ಅದ. ಬಾ ನಾನು ನೀನು ಆಡೋಣ ಬಾ' ಈ ಮಾತುಗಳಿಂದ ಶ್ರೀಕಾಂತನ ಮನೋಗ್ರಹ ವಿಚಲವಾಯಿತು. ಅವನ ಹೆಜ್ಜೆಗಳು ಅರಿಯದೆಯೇ ರಮೇಶನ ಮನೆಯತ್ತ ಸಾಗಿದವು.

ಪ್ರತಿದಿನದಂತೆ ರಮೇಶನಿಗಾಗಿ ಮಸಾಲೆಹಾಲು ಸಿದ್ಧವಾಗಿದ್ದಿತು. 'ಪ್ರತಿದಿನ ನಾನು ಕುಡಿಯುತ್ತೇನೆ, ಇಂದು ನೀನು ಕುಡಿ ಶ್ರೀಕಾಂತ' ಎಂದ ರಮೇಶ. ಶ್ರೀಕಾಂತ ಒಪ್ಪಲಿಲ್ಲ. 'ಹಾಗಾದರೆ ನೀನು ಅರ್ಧ ನಾನು ಅರ್ಧ ಕುಡಿಯುವಾ' ಎಂದು ರಮೇಶ ಬಟ್ಟಲದಿಂದ ಶ್ರೀಕಾಂತನಿಗೆ ಮಸಾಲೆಹಾಲು ಕುಡಿಸತೊಡಗಿದನು. ಎಂಥ ಸುಸಮಯ ಇದು! ಶ್ರೀಕಾಂತನ ಆಯುಷ್ಯದಲ್ಲಿಯೇ ಮೊದಲನೆಯದೆನ್ನಬಹುದು. ಒಂದೇ ಒಂದು ಗುಟುಕು ಕುಡಿದು ಹಾಲಿನ ರುಚಿನೋಡಿದ್ದನು. ರಮೇಶನ ತಾಯಿ ಮರೆಗೆ ನಿಂತು ಎಲ್ಲವನ್ನು ನೋಡಿದ್ದಳು. ಇನ್ನು ಆ ಬಡವನ ಮಗನ ಎಂಜಲ ತನ್ನ ಮಗ ಕುಡಿಯುವನೆಂದು ತಡಯದೆ ಓಡಿಬಂದು ಒಂದೇಟು ಕೊಟ್ಟಳು.

'ಶನಿ ನಿನ್ನೆ ತೊಲಗಿದ್ದಿ ಇಂದೇಕೆ ಬಂದೆ ಮತ್ತೆ?' ಶ್ರೀಕಾಂತ ಅರಕ್ಷಣ ಅಲ್ಲಿ ನಿಲ್ಲದೆ ಮನದಲ್ಲಿ ಮೋಟರಗಾಡಿ ಶಪಿಸುತ್ತ ಮನೆಗೆ ಬಂದನು.

ರಮೇಶ ಅದೆಷ್ಟೋ ಸುದೈವಿ. ತನ್ನ ತಂದೆಯಿದ್ದರೆ ತಾನೂ ಅವನಂತೆ ಇರಬಹುದಾಗಿತ್ತಲ್ಲ! ಮೋಟರಗಾಡಿ ಮಸಾಲೆಹಾಲು ತನಗೂ ಸಿಗಬಹುದಾಗಿತ್ತು. ಆದರೆ ತನಗೆ ತಂದೆಯಿಲ್ಲ. ತಾಯಿ ಮುಂಜಾವಿನಿಂದ ರಾತ್ರಿ ಹತ್ತು ಗಂಟೆಯ ವರೆಗೆ ದುಡಿದರೆ ಊಟ. ಪತಿ ತೀರಿಕೊಂಡಾಗ ಸೀತಾಬಾಯಿಗೆ ಕೆಲಸಮಾಡ ಬೇಕಾಗಿ ಪ್ರಸಂಗ ಬಂದಿತು. ಮದುವೆಯಾಗಿ ಏಂಟುವರ್ಷ ಕಾಲ ಹೂವಿನಂತೆ ಅವಳ ಸಂಸಾರ ಸಾಗಿದ್ದಿತು. ಮಕ್ಕಳಿಲ್ಲವೆಂಬ ಕೊರಗು ಇತ್ತಿತ್ತಲಾಗಿ ಅವರಿಗೆ ಕಾಡುತ್ತಿತ್ತು. ಆದರೆ ದೇವರು ದಯ ತೋರಿಸಿದನು. 'ಶ್ರೀಕಾಂತ' ರತ್ನವು ಅವರಿಗೆ ದೊರಕಿತು. ಅವರಿಗೆ ಅತ್ಯಾನಂದವಾಯಿತು. ಆದರೆ ಈ ಸುಖಸಮಯ ಕೇವಲ ಮೂರು ವರ್ಷಗಳವರೆಗೆ ಮಾತ್ರ. ಈ ಮೂರು ವರ್ಷದ ಕಾಲ ಮೂರು ಕ್ಷಣದಂತೆ ದಾಟಿತು.

ಶ್ರೀಕಾಂತನ ತಂದೆ ಹೃದಯವಿಕಾರದಿಂದ ಅಕಾಲದಲ್ಲಿ ಇಹಲೋಕ ದಿಂದ ದಾಟಬೇಕಾಯಿತು.ಅಂದಿನಿಂದ ಶ್ರೀಕಾಂತ ತಬ್ಬಲಿ. ಸೀತಾಬಾಯಿ ವಿಧವೆ. ಅಂದು ತಂದೆ ಮರಣಹೊಂದುವಕ್ಕಿಂತ ಒಂದುದಿನ ಮೊದಲು ತಾಯಿಯೂ ತಾನೂ ಅವನ ಹಾಸಿಗೆಯ ಬಳಿಗೆ ಕುಳಿತಿದ್ದಾರೆ. ತಂದೆಯ ಕಣ್ಣಲ್ಲಿ ಕಣ್ಣೀರು ತುಂಬಿತ್ತು,ಗಂಟಲ ಗದ್ಗದಿಸುತ್ತಿತ್ತು,ದುಃಖ ಉಕ್ಕೇರಿ ಬಂದಿತ್ತು. 'ತಾನು ಒಂದೆರಡು ದಿನಗಳಲ್ಲಿ ಇವರಿಂದ ಅಗಲುವವನಿದ್ದೇನೆಂದು ಗೊತ್ತಾಗಿತ್ತು ಅವನಿಗೆ. ಆದರೆ ವಿಧಿಯ ಕೈವಾಡ ಮೀರಲಿಕ್ಕೆ ಯಾರಿಗೆ ತಾನೇ ಸಾಧ್ಯ?

ತಂದೆಯು "ಮಗು, ನೀನು ಕಲಿತು ದೊಡ್ಡವನಾಗು ಒಬ್ಬರ ಜೀತದಾಳಾಗ ಬೇಡ. ವಿದ್ಯೆಗಳಿಸಿ ಸ್ವತಂತ್ರ ಜೀವಿಯಾಗಿ ಬಾಳು. ನಿನ್ನ ಹೆತ್ತ ತಾಯಿಗೆ ಸುಖ ಕೊಡು." ಎಂಬ ನುಡಿಯೊಂದನ್ನು ಮಾತ್ರ ಹೇಳಿ; ಹೆಂಡತಿಗೆ ಮಗುವನ್ನು ಒಪ್ಪಿಸಿ ದನು. ಬಡತನದ ಬಾಳುವೆ ಇದ್ದುದರಿಂದ ತನ್ನ ಹಿಂದೆ ಆಸ್ತಿಗಳಿಸಿಟ್ಟು ಹೋಗಲು ಅವನಿಗೆ ಸಾಧ್ಯವಾಗಲಿಲ್ಲ.

ಶ್ರೀಕಾಂತನಿಗೆ ತಂದೆ ಹೇಳಿದ ಮಾತು ಅಂದು ಅರ್ಥವಾಗಿರದಿದ್ದರೂ ಇಂದು ಅರ್ಥವಾಯಿತು. ಅಂದೇ ನಿರ್ಧಾರ ಮಾಡಿದನು. ತಾನು ಬೆಳೆದು ಎಂಟು ವರ್ಷದವನಾಗಿದ್ದೇನೆ. ಉಂಡು ಅಡ್ಡಾಡುವ ದಿನ ತನಗಿಂದು ಉಳಿದಿಲ್ಲ. ತಾನು ಕಲಿಯಬೇಕು, ಮುಂದೆ ಬರಬೇಕು, ತಂದೆಯ ಮಾತು ನಡಿಸಿ ತಾಯಿಗೆ ಕೀರ್ತಿ ತರಬೇಕು.

ಎಂದಿಲ್ಲದ ಗೆಲವು ಅವನ ಮುಖದ ಮೇಲೆ ಮೂಡಿತ್ತು. ಎದ್ದು, ಕಣ್ಣೀರು ಒರಿಸಿ ತನ್ನ ಇಚ್ಛೆಯು ಈಡೇರಲೆಂದು ದೇವರಿಗೆ ನಮಿಸಿದನು. ಮೂಲೆಯಲ್ಲಿ ಬಿದ್ದಿದ್ದ ಪಾಟಿ ಅಂಕಲಿಪಿ ಹುಡುಕಿ ಬರೆಯತೊಡಗಿದನು. ಅವನ ಮನಸ್ಸಿನ ನಿಶ್ಚಯವೇ ಅವನನ್ನು ಬರೆಯಲು ಉದ್ಯುಕ್ತಗೊಳಿಸಿತು.

ಎಂದಿನಂತೆ ತಾಯಿ ಮನೆಗೆ ಬಂದಾಗ ಅವಳ ಹೃದಯ ಬೆಂದಿತ್ತು. ಹಿಂದಿನ ಸವಿನೆನಪು ಕಣ್ಣೆದುರು ಬಂದು ನಿಂತು ನಕ್ಕು ನಗಿಸಿ, ಅಣಕಿಸಿ ಮಾಯ ವಾಗುತ್ತಿದ್ದವು. ಮಗುವಿಗಾಗಿ ಕೂಗಿದಳು. ಶ್ರೀಕಾಂತ ಎದ್ದು ಬಂದು ತಾಯಿಯ ಪಾದಗಳಿಗೆ ಎರಗಿದನು. ತನ್ನನ್ನು ಆಶೀರ್ವದಿಸಲು ಕೇಳಿಕೊಂಡನು. ತನ್ನ ದೃಢ ನಿಶ್ಚಯ ತಿಳಿಯಪಡಿಸಿದನು. ಮಗ ಕಲಿತು ಮುಂದಾಗುವೆನೆಂದಾಗ, ತಾಯಿಗೆ ಸಂತೋಷವಾಗದೆ ಇನ್ನಾರಿಗೆ ಆಗಬೇಕು ?

ಅಂದೇ ಅವರ ದುಃಖದ ಕೊನೆಯದಿನವೆನ್ನಬಹುದು. ಶ್ರೀಕಾಂತ ಅಂದಿನಿಂದ ಹಸಿವೆಗಾಗಿ ಬೇಡಲಿಲ್ಲ, ಕಾಡಲಿಲ್ಲ, ಹಟವಿಲ್ಲ, ತಂದೆಯ ಉಪದೇಶ ಅವನಿಗೆ ಅಮೃತ ಉಣಿಸಿದ್ದಿತು.

ಕಾಲಚಕ್ರ ತಿರುಗುವದು ತಡವೇ ! ಇಂದು ಹಸಿವೆಗಾಗಿ ಹಟಮಾಡುವ ಹಸುಗೂಸು ಶ್ರೀಕಾಂತನಾಗಿರಲಿಲ್ಲ. ಒಳ್ಳೆಯ ವಿದ್ಯಾವಂತನೆನಿಸಿದ ನಾಗರಿಕ ನಾಗಿದ್ದನು. ಪತಿಯು ತೀರಿಕೊಂಡಾಗ ಸೀತಾಬಾಯಿಗೆ ಆದ ಗಾಯ ಇಂದು ತುಂಬಿಕೊಂಡಿತ್ತು.



# ಈ ಜಗತ್ತಿನಲ್ಲೇನಿಹುದು ?

**ಲೇಖಕಿ:— ಕು. ಪ್ರಭಾ ಥಿಟೇ ಧಾರವಾಡ.**

[ ಮನುಷ್ಯ ಬುದ್ಧಿಜೀವಿ, ಭಾವಜೀವಿಯೂ ಅಹುದು. ತನ್ನ ಬುದ್ಧಿಭಾವನೆಗಳ ಸದುಪಯೋಗವನ್ನು ತನಗೂ ಪರರಿಗೂ ಮಾಡಿಕೊಳ್ಳುವಲ್ಲಿಯೇ ಅವನ ವೈಶಿಷ್ಟ್ಯವಿದೆ. ]

ಯಾಕೆ ? ಮೇಲಿನ ತಲೆಬರಹವನ್ನು ನೋಡಿದೊಡನೇ ನಿಮಗೆ ಆಶ್ಚರ್ಯ ವಾಯಿತಲ್ಲವೇ ? " ಜಗತ್ತಿನಲ್ಲೇನಿಹುದು ! ಅಂತೆ, ಅಲ್ಲಾ, ವಿಜ್ಞಾನದ ಈ ಯುಗ ದಲ್ಲಿ ಇವಳು ಏನನ್ನು ಕಾಣಲಾರಳು ? ವಿಚಾರಕ್ಕೂ ನಿಲುಕದ ಕೆಲಸಗಳನ್ನು ಮಾನವನು ಮಾಡುತ್ತಿದ್ದಾನೆ. ಅವನು ಹುಡುಕಿ ತೆಗೆದ ಒಂದೊಂದು ವಸ್ತುಗಳನ್ನು ನೋಡಿದರೆ ದೇವರ ಸೃಷ್ಟಿಯನ್ನೇ ತನ್ನ ಕೈಯಲ್ಲಿ ತೆಗೆದುಕೊಳ್ಳುತ್ತಿರುವನೇನೋ ಎನ್ನಿಸುತ್ತದೆ. ಅಂದಬಳಿಕ ಇವಳು ಈ ಪ್ರಶ್ನೆ ಕೇಳಲು ಇವಳಿಗೇನು ಹುಚ್ಚು ತಗಲಿ ದೇಯೋ ಅನಿಸುತ್ತದೆ." ಎಂದು ನೀವು ಅನ್ನಬಹುದಲ್ಲವೇ ?

ನಿಜ ನೀವು ಅಂದಂತೆ ಮನುಷ್ಯನು ತನ್ನ ಬುದ್ಧಿ ಮತ್ತೆಯ ಪ್ರಭಾವದಿಂದ ವಿಚಿತ್ರವಾದ ವಸ್ತುಗಳನ್ನು ಹುಡುಕಿ ತೆಗೆದದ್ದು ನಮ್ಮಂಥವರು ಬೊಟ್ಟು ಕಚ್ಚುವ ಸಂಗತಿಯೇ ಸರಿ. ದೂರ ದೂರದ ಪ್ರವಾಸವನ್ನು ಕ್ಷಣಾರ್ಧದಲ್ಲಿ ಮುಗಿಸುವ ಉಗಿ

ಬಂಡಿ, ಮೋಟಾರು, ನೀರಿನಮೇಲೆಯೂ ಸ್ವಲ್ಪವೂ ತೊಂದರೆಯಿಲ್ಲದೆ ಪ್ರವಾಸ ಮಾಡಲು ಬರುವ ಉಗಿ ಹಡಗ, ಕುಳಿತಲ್ಲಿಯೇ ದೂರ ದೂರಿನ ಜನರ ಸಂಗೀತ, ಮನೋರಂಜಕ ಕಾರ್ಯಗಳನ್ನು ಕೇಳುವ ರೇಡಿಯೋ, ಬಟ್ಟೆ ಮುಂತಾದವುಗಳನ್ನು ಕಣ್ಣು ಮುಚ್ಚಿ ಕಣ್ಣು ತೆಗೆಯುವದರೊಳಗೆ ರಾಶಿ ರಾಶಿಯಾಗಿ ಒಟ್ಟುವ ಯಂತ್ರ ಮುಂತಾದವುಗಳ ಬಗ್ಗೆ ವಿಚಾರಿಸಿದರೆ ನಮಗೆ ಆಶ್ಚರ್ಯವಾಗದೇ ಇರದು. ಹೋ! ಮರೆತೆ ನಮಗೆ ನಮ್ಮ ದೂರದಲ್ಲಿ ವಾಸಿಸುವ ಆಪ್ತೇಷ್ಟರ ಸುದ್ದಿಗಳನ್ನು ಮುಟ್ಟಿಸುವ ತಾರು ಟೆಲಿಫೋನ ಮುಂತಾದವುಗಳನ್ನು ಹುಡುಕಿ ತೆಗೆದದ್ದು ನಮ್ಮ ಬುದ್ಧಿಗೆ ನಿಲುಕದಂಥವಾಗಿವೆ. ಇವೆಲ್ಲವುಗಳು ನಮ್ಮ ಹಿತಕ್ಕಾಗಿಯಲ್ಲವೇ ? ಎಂದುನೀವು ಕೇಳಬಹುದು. ಅಹುದು. ತಮ್ಮ ಜೀವನವನ್ನೇ ಒತ್ತಿಟ್ಟು ಸುಖ ದುಃಖಗಳನ್ನು ಲೆಕ್ಕಿಸದೇ ಹಗಲಿರುಳು ಶ್ರಮಬಟ್ಟು ಇಂಥ ಅಗಾಧ ವಸ್ತುಗಳನ್ನು ಶೋಧಿಸಿದ್ದು ನಮ್ಮ ಹಿತಕ್ಕಾಗಿಯೇ ಆದರೆ ?

ಆದರೆ ಇಂಥ ಬುದ್ಧಿ ಶಕ್ತಿಯು ಅವರಿಗೆ ಎಲ್ಲಿಂದ ಬಂತು ? ಎಂಬ ವಿಚಾರವನ್ನು ಮಾಡುವದು ಮಾನವನ ಆದ್ಯಕರ್ತವ್ಯವಲ್ಲವೇ ? ಅವನ ಬುದ್ಧಿಯು ಇಷ್ಟು ತೀಕ್ಷ್ಣವಾದದ್ದು ಹೇಗೆ ಅಂದರೆ? ಅಂದರೇನು! ಅವನು ಹೆಚ್ಚು ವಿಚಾರಿಸಿದ್ದರಿಂದ ! ಒಬ್ಬೊಬ್ಬರ ಬುದ್ಧಿಯು ಚುರುಕಾಗಿರುತ್ತದೆ. ಅವರು ವಿಚಾರಿಸಿದಂತೆ ವಿಚಾರವು ಇನ್ನೂ ತೀಕ್ಷ್ಣವಾಗಿ ಎಲ್ಲರೂ ಆಶ್ಚರ್ಯಬಡುವಂಥ ಕೆಲಸಗಳನ್ನು ಅವರು ಮಾಡಬಲ್ಲರು ಎಂದು ಕೆಲವರು ಅನ್ನಬಹುದು.ಮಾನವನೆಂದರೇನು? ಸೃಷ್ಟಿಯೆಂದರೇನು? ಅವನ್ನು ಹುಟ್ಟಿಸಿದವರಾರು ? ಎಂಬ ಪ್ರಶ್ನೆಗಳಿಗೆ ಅಂದೊಂದು ಅಗಾಧವಾದ ಶಕ್ತಿ ಎಂದೂ ನಾಸ್ತಿಕರು ಅನ್ನಬಹುದು. ಆದೇ ಶಕ್ತಿಗೇ ನಾವು ದೇವರೆನ್ನುವದು. ಆ ದೇವರಿಗೇರಾಮ ಕೃಷ್ಣ ಮುಂತಾದ ಹೆಸರುಗಳನ್ನಿಟ್ಟು ಕರೆಯುವದು. “ಮಾನವನು ಪರಮಾತ್ಮನ ಒಂದು ಅಣು” ಎಂದು ವೇದಗಳು ಸಾರುತ್ತವೆ. ಅಂದರೆ ಅಗಾಧ ಶಕ್ತಿಯ ಒಂದು ಅಣು ಎಂದಂತಾಯಿತಲ್ಲವೇ ? ಯಾವದಾದರೂ ಒಂದು ಪದಾರ್ಥವನ್ನು ನಾವು ತುಂಡು ತುಂಡಾಗಿ ಮಾಡಿದರೆ ಒಂದೊಂದು ತುಂಡಿನಲ್ಲಿಯೂ ಆ ಪದಾರ್ಥದ ಗುಣಗಳನ್ನು ನಾವು ಕಾಣುವದಿಲ್ಲವೇ ? ಆದರಂತೆ ಪರಮಾತ್ಮನ ಶಕ್ತಿಯು ಮಾನವನಲ್ಲಿ ಮೂಡಿ ಬರುವದೆಂದರೆ ತಪ್ಪಾಗಲಿಕ್ಕಿಲ್ಲವಷ್ಟೇ ? ಅಂದ ಬಳಿಕ ಮಾನವನು ಅಂಥ ಅಗಾಧವಸ್ತುಗಳನ್ನು ಹುಡಿಕಿ ತೆಗೆಯುವದು ಆಶ್ಚರ್ಯದ ಮಾತೇನೂ ಅಲ್ಲ.

ಪರಮಾತ್ಮನ ಅಣುವಾದ ಮಾನವನು ಅವನ ಅಗಾಧ ಲೀಲೆಗಳನ್ನೇ ಮರೆತು ತಾನೇ ಶ್ರೇಷ್ಠನೆಂದೆಣಿಸುವದು ಎಂಥ ಅಪರಾಧ! “ಎಲೈ ಮಾನವನೇ ಎಲ್ಲ ಧರ್ಮಗಳನ್ನು ತ್ಯಜಿಸಿ ನನ್ನನ್ನು ಮರೆ ಹೊಗು” ಎಂದು ಭಗವದ್ಗೀತೆಯು ಸಾರುತ್ತದೆ. ಶಕ್ತಿಯ ಒಂದು ತುಣುಕಾದ ಮಾನವನು ಆ ಅನಂತ ಶಕ್ತಿಯನ್ನೇ ಮರೆತು ತಾನೇ ಶ್ರೇಷ್ಠನೆಂದು ತಿಳಿದು ಸುಖೋಪಭೋಗಗಳಲ್ಲಿಯೇ ಕಾಲಕಳೆಯುತ್ತಾನೆ. “Man must eat to live but not live to eat” ಎಂದು

ಆಂಗ್ಲ ಕವಿಯೊಬ್ಬನು ಹೇಳಿದ್ದಾನೆ. ಮನುಷ್ಯನು ಜೀವಿಸಲು ತಿನ್ನಬೇಕು ಆದರೆ ತಿನ್ನಲಿಕ್ಕೆ ಜೀವಿಸಬಾರದು ಎಂದು. ಅವನ ಆದ್ಯ ಕರ್ತವ್ಯ ಆ ಪರಮಾತ್ಮನ ಅಗಾಧ ಲೀಲೆಗಳನ್ನು ಕೊಂಡಾಡುವದು. ಅದನ್ನೇ ಅವನು ಮರೆತ ಬಳಿಕ ಈ ಜಗತ್ತಿನಲ್ಲೇನಿಹುದು ? ಎಂದರೆ ತಪ್ಪಾಗಲಿಕ್ಕಿಲ್ಲವಷ್ಟೇ ?

ಈ ಮಾತು ಎಲ್ಲರ ನಿದರ್ಶನಕ್ಕೂ ಬಂದಿರಲು ಸಾಕು. ಆದರೆ ಮೊದಲಿನ ಜನರಂತೆ ಎಲ್ಲವೂ ದೇವರೆಂದು ಕೂಡುವದು ತಪ್ಪು. ಕರ್ತವ್ಯವನ್ನು ಮಾಡಿ ಅದರ ಫಲಾಫಲಗಳನ್ನು ದೇವರಿಗೆ ಬಿಡುವದು ನಮ್ಮ ಕರ್ತವ್ಯ. ಅದನ್ನು ನಮ್ಮ ಕರ್ಮಕ್ಕೆ ತಕ್ಕಂತೆ ಅವನು ಕೊಟ್ಟೇ ಕೊಡುವನು. ನಮಗೆ ಸ್ವಾತಂತ್ರ್ಯವನ್ನು ತಂದು ಕೊಟ್ಟ ಗಾಂಧೀಜೀಯವರು ಎಂಥೆಂಥ ಕಾರ್ಯಗಳನ್ನು ಮಾಡಿದರು ? ಆದರೆ ಅವರು ದೇವರನ್ನು ಬಿಟ್ಟು ಮಾಡಿದರೆ? ದೇವರಿಲ್ಲ ಎಂದು ಅವರು ಅಂದರೆ? ದೇವರ ಸ್ವರೂಪವೇ ಅವರಾಗಿದ್ದರೂ ದೇವರೊಬ್ಬ ಬೇರೆ ಇರುವನೆಂದು ದಿನವೂ ರಾಮ ನಾಮದ ಜಪವನ್ನು ಮಾಡದೇ ಅವರು ಯಾವ ಕಾರ್ಯಗಳನ್ನೂ ಕೈಕೊಳ್ಳುತ್ತಿದ್ದಿಲ್ಲ. ಇಂಥ ಎಷ್ಟೋ ಉದಾಹರಣೆಗಳನ್ನು ನಾವು ಕಾಣಬಹುದು. ಅಲ್ಲದೆ ಪ್ರತಿಯೊಬ್ಬನ ಜೀವನದಲ್ಲಿಯೂ ಇಂಥ ಎಷ್ಟೋ ಸಂಗತಿಗಳು ಸಂಭವಿಸಿರಲೇ ಬೇಕು. ಆದರೂ ಸಣ್ಣ ಮಗು ತಪ್ಪುಹೆಜ್ಜೆಯನ್ನಿಡುವಂತೆ ಮಾನವನು ಒಮ್ಮೊಮ್ಮೆ ಅದನ್ನು ಮರೆಯುತ್ತಾನೆ. ಹಾಗೆ ಆಗಬಾರದೆಂದೇ ಮೊದಲಿನ ಜನರು ಹಬ್ಬಹುಣ್ಣಿಮೆಗಳ ನಿಮಿತ್ಯ ದೇವನ್ನು ನಿರಂತರವೂ ನಮ್ಮ ನೆನಪಿನಲ್ಲಿಡುವಂತೆ ದಾರಿ ಹಾಕಿ ಕೊಟ್ಟಿದ್ದಾರೆ. ಆದ್ದರಿಂದ ಸಂಕಟ ಬಂದಾಗ ವೆಂಕಟ ರಮಣ ಅನ್ನದೇ ದಿನವೂ ಅವನ ನಾಮಸ್ಮರಣೆಯನ್ನು ಮಾಡುವದೇ ಅವನ ಸೃಷ್ಟಿಯಲ್ಲಿ ಹುಟ್ಟಿ ಬಾಳುವ ನಮ್ಮ ಕರ್ತವ್ಯ.



# ಫ್ಲಾರೆನ್ಸ ನೈಟಿಂಗೇಲ

**ಲೇಖಕಿ :— ಸರೋಜಿನಿತಾಯಿ ಚೌಕಿ.**

—❧—

[ ಹೆಣ್ಣುಮಕ್ಕಳು ಸಹಾ ತಮ್ಮದೊಂದು ಗುರಿ ಇಟ್ಟು ನಡೆದಲ್ಲಿ, ಜಗತ್ತಿಗೆ ಆದರ್ಶರಾಗಬಲ್ಲರು. ವಿರುದ್ಧವಾತಾವರಣದಲ್ಲಿ ಸಹಾ ತನ್ನ ಧ್ಯೇಯಸಾಧನೆಗಾಗಿ ಹೋರಾಡಿ, ಜನಸೇವಾಲಾಭವನ್ನು ಪಡೆದ ಪ್ಲಾರೆನ್ಸಳು ಇದನ್ನು ಜಗತ್ತಿಗೆ ತೋರಿಸಿಕೊಟ್ಟಿದ್ದಾಳೆ. ಜನಸೇವೆಯೇ ಪರಮಾತ್ಮನ ಸೇವೆಎಂಬದನ್ನು ಸಂಪೂರ್ಣ ಮನಗೆಂಡು, ರೋಗಿಗಳ ಸತತ ಸೇವೆಯಲ್ಲೇ ತನ್ನ ಇಡೀ ಆಯುಷ್ಯವನ್ನು ಕಳೆದ ಮಹಾತ್ಮಳಿವಳು. ]

೧೯ನೇ ಶತಮಾನದ ಮಧ್ಯದಲ್ಲಿ ಇಂಗ್ಲಂಡ್ ದೇಶದಲ್ಲಿ ಫ್ಲಾರೆನ್ಸ್ ನೈಟಿಂಗೇಲಳೆಂಬೊಬ್ಬ ಹೆಣ್ಣುಮಗಳು ಆಗಿಹೋದಳು. ನಮ್ಮಲ್ಲಿ ಬುದ್ಧ ಬಸವಾದಿಗಳು ಅವತರಿಸಿದ್ದು ದೇವರ ಅನುಗ್ರಹದಿಂದ, ಜಗತ್ಕಲ್ಯಾಣಕ್ಕಾಗಿ ಎಂದು ನಾವು ಹೇಗೆ ನಂಬುತ್ತೇವೋ ಹಾಗೆ ಇವಳನ್ನು ದೇವರು ತನ್ನ ಹಾಗೂ ಜಗತ್ತಿನ ಬಾಂಧವರ ಕರ್ತವ್ಯಕ್ಕಾಗಿ ಕಳುಹಿದನೆಂಬುದನ್ನು ಅಲ್ಲಿಯ ಜನರು ನಂಬುತ್ತಾರೆ.

~~೧೮೨೦ನೇ ಇಸ್ವಿಯಲ್ಲಿ~~ ಇಂಗ್ಲಂಡದ ಒಂದು ಹಳ್ಳಿಯಲ್ಲಿ ' ನೈಟಿಂಗೇಲ ' ಎಂಬ ಒಂದು ಶ್ರೀಮಂತ ಮನೆತನದ ಸಾದಾಸ್ವಭಾವದ ದಂಪತಿಗಳ ಒಬ್ಬಳೇ ಒಬ್ಬಳಾದ ಮಗಳೇ ನಮ್ಮ ಫ್ಲಾರೆನ್ಸಳು. ಇವಳ ಜನ್ಮವು ೧೮೨೦ ರಲ್ಲಿ ಆಗಿದೆ. ತಂದೆ ತಾಯಿಗಳು ಮಗಳಿಗೆ ಯಾವದೇರೀತಿಯಿಂದಾದರೂ ಸುಖಪಡಿಸಿ ಅವಳನ್ನು ಸದಾ ಸಂತೋಷದಲ್ಲಿಡಲು ಸತತ ಪ್ರಯತ್ನಿಸುತ್ತಿದ್ದರು. ಫ್ಲಾರೆನ್ಸಳು ದೊಡ್ಡವಳಾದಂತೆ ಅವಳಿಗೆ ತನ್ನ ತಾಯಿಯ ಈ ಯಾವ ಪ್ರಯತ್ನಗಳಿಂದಲೂ ಸಂತೋಷ ಸಿಗುತ್ತಿರಲಿಲ್ಲ. ಅವರು ಇವಳನ್ನು ಕರೆದೊಯ್ಯುತ್ತಿದ್ದ ಯಾವದೇ ನೃತ್ಯ, ನಾಟ್ಯ, ಚಹಾ ಪಾರ್ಟಿ ಹಾಗೂ ಶ್ರೀಮಂತರಿಗಾಗಿ ಏರ್ಪಡಿಸಿದ ಯಾವದೇ ತರಹದ ಸಂತೋಷ ಕೂಟಗಳಿಂದಲೂ ಇವಳಿಗೆಂದೂ ಸುಖವಾಗಲೀ, ಸಮಾಧಾನವಾಗಲೀ ಸಿಗುತ್ತಿರಲಿಲ್ಲ. ಕೇವಲ ಅವಳಿಗೆ ಸಂತೋಷ ಸಮಾಧಾನಗೊಳಿಸುವ ಸಂಗತಿಯೊಂದೇ ಒಂದೆಂದರೆ ರೋಗಿಗಳ ರುಗ್ಣಾಲಯ ಹಾಗೂ ರೋಗಿಗಳ ಸತತಸೇವೆ. ಆದ್ದರಿಂದ ಅವಳು ತನ್ನ ತಾಯಿಯು ಮೆಚ್ಚುತ್ತಿದ್ದ ಶ್ರೀಮಂತರ ಸಹವಾಸ, ಸಂತೋಷಕೂಟ, ಆಟನೋಟಗಳನ್ನು ಹೇಗೋ ತಪ್ಪಿಸಿಕೊಳ್ಳುತ್ತಿದ್ದಳು. ಹಾಗೂ ಆ ಸಮಯವನ್ನು

ವಳು ಲಂಡನದ ಪ್ರಸಿದ್ಧ ರುಗ್ಣಾಲಯ ಒಂದರಲ್ಲಿ ರೋಗಿಗಳ ಶುಶ್ರೂಷೆ ಮಾಡುವ ಡಾಕ್ಟರ್ ಹಾಗೂ ನರ್ಸರೊಡನೆ ಕಳೆದು ಅವರ ಕಾರ್ಯವನ್ನು ನೋಡಿಕೊಳ್ಳುತ್ತಿದ್ದಳು. ಮತ್ತು ಅವಳು ಕೆಲವು ಸಾರೆ ತನ್ನ ಸ್ವಂತ ಹಳ್ಳಿಯಲ್ಲಿ ರುಗ್ಣಾಲಯಗಳಾಗಲೀ, ಔಷಧಾಲಯಗಳಾಗಲೀ ಇಲ್ಲದ್ದರಿಂದ ಅಲ್ಲಿಯ ರೋಗಿಗಳಿಗೆ ಔಷಧೋಪಚಾರಗಳನ್ನು ಮಾಡುವದರಲ್ಲಿ ವೇಳೆಯ ಸದುಪಯೋಗ ಮಾಡಿಕೊಳ್ಳುತ್ತಿದ್ದಳು. ಅವಳಿಗೆ ದೊಡ್ಡ ದೊಡ್ಡ ರುಗ್ಣಾಲಯಗಳಲ್ಲಿ ಕಂಡುಬಂದ ಪರಿಸ್ಥಿತಿಗಳಿಂದ ಬಹಳ ನೋವಾಗುತ್ತಿತ್ತು. ಕೆಲವು ಕಡೆಗಳಲ್ಲಿ ಅಲ್ಲಿಯ ರೋಗಿಗಳಲ್ಲಿ ಬಹುತೇಕ ಬಡರೋಗಿ ಜನರನ್ನು ಒಳ್ಳೇರೀತಿಯಲ್ಲಿ ನಡೆಸಿಕೊಂಡದ್ದು ಕಂಡು ಬರುತ್ತಿರಲಿಲ್ಲ. ಅಲ್ಲಿಯ ನರ್ಸರು ರೋಗಿಗಳ ಶುಶ್ರೂಷಾಕ್ರಮವನ್ನು ಕೇವಲ ಸ್ವಲ್ಪವೇ ಅರಿತಿದ್ದರು. ಹೀಗಾಗಿ ಅಲ್ಲಿಯ ರೋಗಿ ಜನರಿಗೆ ಯಾರಿಗೂ ಸಮಾಧಾನ ಸಿಗುತ್ತಿರಲಿಲ್ಲ. ಈ ಪರಿಸ್ಥಿತಿಯನ್ನು ಹೋಗಲಾಡಿಸಬೇಕಾದರೆ ಮೊದಲು ತಾನು ಶುಶ್ರೂಷೆಯಲ್ಲಿ ತರಬೇತಿ ಹೊಂದುವದು. (ಟ್ರೇಂಡ ನರ್ಸ ಆಗುವದು.) ತನ್ನ ಕರ್ತವ್ಯವೆಂದು ಮನಗಂಡಳು. ಆದರೆ ಈ ಕಾರ್ಯವು ಹಾಗೆ ಸಹಜವಾಗಿ ಆಗುವಷ್ಟು ಸುಲಭವಿರಲಿಲ್ಲ. ಕಾರಣವೆಂದರೆ ಅವಳ ತಾಯಿಯು ಮಗಳಿಗೆ ಒಳ್ಳೇ ವೈಭವದಿಂದ ಲಗ್ನಮಾಡಬೇಕೆಂಬ ಆಶೆಯಲ್ಲಿದ್ದಳು. ಫ್ಲಾರೆನ್ಸಳು ರೋಗಿಗಳ ಸೇವೆಗಾಗಿ ನರ್ಸಳಾಗುವ ವಿಚಾರವನ್ನು ಕೇಳಿ ತಾಯಿಯು ನಕ್ಕಳು. ಹಾಗೂ ಇದು ಕೇವಲ ಬಾಲ್ಯತನದ ಹಂಬಲವೆಂದು ತಿಳಿದಳು. ಆದ್ದರಿಂದ ಫ್ಲಾರೆನ್ಸಳು ಈ ವಿಷಯದ ಬಗ್ಗೆ ತಾಯಿಯ ಮನ ಒಲಿಸಿ ಇದು ಬಹಳ ಮುಖ್ಯ ವಿಷಯವೆಂಬದನ್ನು ಕೂಡಲೇ ತಿಳಿಸುವ ಹವ್ಯಾಸಕ್ಕೆ ಹೋಗದೆ ಕೆಲವು ಕಾಲ ಘಟ್ಟಿ ಮನಸ್ಸುಮಾಡಿ ತನ್ನ ವಿಚಾರವನ್ನು ತಡೆಹಿಡಿದಳು. ಕಾರಣವೆಂದರೆ ಆಗಿನ ದಿವಸದಲ್ಲಿ ಈಗಿನಂತಹ ಪರಿಸ್ಥಿತಿ ಇದ್ದಿಲ್ಲ. ಹೆಣ್ಣುಮಕ್ಕಳು ಇಂತಹ ಕಾರ್ಯಮಾಡುವದೆಂದರೆ ಕೀಳುತನದ್ದೆಂದು ಇಂಗ್ಲಂಡದಲ್ಲಿ ಸಹಾ ತಿಳಿಯುವ ಪರಿಸ್ಥಿತಿ ಇತ್ತು. (ಈಗಾದರೂ ಈ ಪರಿಸ್ಥಿತಿಯು ನಮ್ಮ ಭಾರತದಲ್ಲಿ, ವಿಶೇಷವಾಗಿ ಕರ್ನಾಟಕದಲ್ಲಿ ಇನ್ನೂ ಇದ್ದೇ ಇದೆ. ನೀತಿಯ ದೃಷ್ಟಿಯಿಂದ ಸಹಾ ನರ್ಸಳಾಗಿ ಪರಪುರುಷರ ಸೇವೆಮಾಡುವದು ತಮ್ಮ ಅಧಃಪಾತಕ್ಕೆ ಕಾರಣವೆಂದು ಜನರು ತಿಳಿಯುತ್ತಾರೆ. ಈ ಕಾರ್ಯವು ಸ್ವೈರಾಚಾರಕ್ಕೆ ಪುಷ್ಟಿಕೊಡುವದೆಂದು ಎಷ್ಟೋ ಜನರ ಮನ ವರಿಕೆಯಾಗಿಬಿಟ್ಟದೆ. ಕೆಲವೊಂದುವೇಳೆ ಕೆಲವೆಡೆ ಇದು ಅಪವಾದಾತ್ಮಕವಾಗಿ ಇರಬಹುದು. ಆದರೆ ಅದೇ ನಿಯಮವೆಂದು ನಾವು ಗ್ರಹೀತಹಿಡಿಯುವದು ತಪ್ಪು. ನಮ್ಮ ಪೂರ್ವಜರು ಹೆಣ್ಣುಮಕ್ಕಳನ್ನು ಎಷ್ಟೇ ಹೊಗಳಿದರೂ ಸಹ ಅವರು ಹೀಗೆ ಗ್ರಹಿಸುವದು ಹೆಣ್ಣಿನ ಮೇಲಿನ ಅಪನಂಬಿಕೆಯ ದ್ಯೋತಕವೇ ಆಗಿದೆ.) ಹಾಗೂ ತಾಯ್ತಂದೆಯವರ ಮನದ ವಿರುದ್ಧ ಹೋಗುವದಾದರೂ ಒಂದುರೀತಿಯಿಂದ ಫ್ಲಾರೆನ್ಸಳಿಗೆ ಕಠಿಣವಾಗಿ ಕಂಡಿತು. ಆದರೆ ತನ್ನ ಕರ್ತವ್ಯಚ್ಯುತಿಗಾಗಿ ಅವಳಿಗೆ ಮೇಲಿಂದ ಮೇಲೆ ಬಹಳ ನೋವಾಗುತ್ತಿತ್ತು. ತನ್ನ ತಂದೆ ತಾಯಂದಿರಿಗೆ ಅದರಲ್ಲೂ ವಿಶೇಷ

ವಾಗಿ ತಾಯಿಗೆ ಈ ಶುಶ್ರೂಷೆಯು ಎಷ್ಟು ಮುಖ್ಯ ವಿಷಯ ಎಂಬುದು ಏಕೆ ಗೊತ್ತಾಗುವದಿಲ್ಲವೋ ಎಂಬದು ಅವಳಿಗೆ ಮತ್ತಷ್ಟು ನೋವನ್ನುಂಟುಮಾಡುತ್ತಿತ್ತು. ಆದರೆ ಅವಳಿಗೆ ಇದ್ದದ್ದರಲ್ಲೇ ಸಂತುಷ್ಟತೆ ಸಿಗುತ್ತಿದ್ದ ಒಂದೇ ಒಂದು ವಿಷಯವೆಂದರೆ ಅವಳ ಕೆಲವು ಮಿತ್ರರು ವಿಶೇಷವಾಗಿ ಶ್ರೀಯುತ ಸಿಡ್ನಿ ಹರ್ಬರ್ಟ ಎಂಬ ನವ ರಾಜಕಾರಣಿಯು ಅವಳ ಈ ವಿಚಾರವನ್ನು ಚನ್ನಾಗಿ ಗ್ರಹಿಸಿದ್ದಲ್ಲದೆ ಅವಳು ಈ ಕಾರ್ಯದಲ್ಲಿ ಎಷ್ಟು ಯೋಗ್ಯತಾವಾನಳಿರುವಳೆಂಬದನ್ನು ಕಂಡುಕೊಂಡದ್ದು.

ಎಷ್ಟೋ ಜನರು ಇವಳನ್ನು ಲಗ್ನವಾಗಲು ಹಾತೊರೆಯುತ್ತಿದ್ದರು. ಕಾರಣವೆಂದರೆ ಅವಳು ಶ್ರೀಮಂತಳಿದ್ದದ್ದಷ್ಟೇ ಅಲ್ಲದೆ ವಿದ್ಯಾವತಿಯೂ, ರೂಪವತಿಯೂ, ಗುಣವತಿಯೂ ಆಗಿದ್ದಳು. ಆದರೆ ಅವಳ ಈ ಗುಣಗಳೇ ಬಂದ ವರರನ್ನು ನೀವು ಅವಳಿಗೆ ಯೋಗ್ಯರಿಲ್ಲವೆಂಬದನ್ನು ಎತ್ತಿತೋರಿಸುತ್ತಿದ್ದುದರಿಂದ ಅವರು ಹಿಂಜರಿಯುತ್ತಿದ್ದರು. ಕೆಲವೊಮ್ಮೆ ಅವರನ್ನು ಇವಳೇ ನಿರಾಕರಿಸಿದ್ದೂ ಉಂಟು. ಆದರೆ ಅವರಲ್ಲಿ ಒಬ್ಬನನ್ನು ಇವಳು ಪ್ರೀತಿಸುತ್ತಿರುವಳೆಂದೂ ಹಾಗೂ ಅವನೊಡನೆ ಹತ್ತಿರ ಹತ್ತಿರ ಮದುವೆಯಾದಂತೆಯೇ ಎಂದೂ ತಾಯ್ತಂದೆಯರು ಭಾವಿಸಿದ್ದರು. ಆದರೆ ಫ್ಲಾರೆನ್ಸಳು ತಾನು ಮದುವೆಯಾಗುವದರಿಂದ ದೇವರು ತನ್ನನ್ನು ಯಾವ ಕಾರ್ಯಕ್ಕಾಗಿ ಹುಟ್ಟಿಸಿರುವನೋ ಆ ಕಾರ್ಯಕ್ಕೆ ತುಂಬಾ ಅಡ್ಡಿಬರುವದೆಂದು ತಿಳಿದಿದ್ದಳು. ಅವಳಿಗಾದರೂ ತನ್ನ ಮನೆ ಎಂಬುದೊಂದು ಬೇಕಾಗಿತ್ತು. ಗಂಡ ಮಕ್ಕಳುಗಳು ಬೇಕಾಗಿದ್ದರು. ಆದರೆ ತಾನೇನು ಒಂದು ಕಾರ್ಯಮಾಡುವ ನಿರ್ಧಾರಮಾಡಿದ್ದಳೋ ಅದಕ್ಕಾಗಿ ಈ ಮದುವೆಯನ್ನು ನಿರಾಕರಿಸುತ್ತಿದ್ದಳು. ಈ ನಿರಾಕರಣೆಯಿಂದ ಅವಳ ತಾಯ್ತಂದೆಯರು ಬಹಳ ನಿರಾಶರಾದರು. ಈ ರೀತಿಯ ನಿರಾಕರಣೆಯಿಂದಲೇ ಎರಡು ಮೂರು ವರ್ಷಗಳು ಸಂದ ನಂತರ ಹೇಗೋ ಒಮ್ಮೆ ಅವಳು ತಾನು ನರ್ಸ ಟ್ರೇನಿಂಗಿಗೆ ಹೋಗುವ ಬಗ್ಗೆ ತನ್ನ ತಾಯ್ತಂದೆಯರ ಮನ ಒಲಿಸಿ ಅನುಮತಿಯನ್ನು ದೊರಕಿಸಿಕೊಂಡಳು. ತನ್ನ ಮೊದಲನೇ ಹೆಜ್ಜೆಯಲ್ಲಿ ಅವಳು ಜಯಗಳಿಸಿದಳು. ( ನಿಜವಾಗಿ ಧ್ಯೇಯ ನಿಷ್ಠೆ ಇದ್ದಲ್ಲಿ, ತಮ್ಮ ಗುರಿಗೆ ಪ್ರತಿಕೂಲವಿದ್ದವರ ಮನಸ್ಸಿನ ವಿರುದ್ಧ ಹೋಗಿ ಅಲ್ಲಿ ವಿಷಮತೆ ಹುಟ್ಟುವಂತೆ ಮಾಡುವದಕ್ಕಿಂತ ಅವರ ಮನ ಒಲಿಸಿ ಕಾರ್ಯ ಸಾಧಿಸಿಕೊಳ್ಳುವದು ಶ್ರೇಯಸ್ಕರ ಹಾಗೂ ನಿಜವಾದ ಧ್ಯೇಯವಾದಿಗಳಿಗೆ ಇದರಲ್ಲಿ ಜಯವು ಶಿಕ್ಕೇ ಸಿಗುತ್ತದೆ. ಇದೇ ಹಳೆ ಹೊಸ ವಿಚಾರಗಳ ಸಮ್ಮಿಲನದಿಂದ ಉತ್ಕ್ರಾಂತಿಹೊಂದುವ ಸಾಧನೆ. ) ಅವಳ ಮುಂದಿನ ಎರಡನೇ ಹೆಜ್ಜೆ ಎಂದರೆ ಅವಳು ಅಲ್ಲೇ ಒಂದು ರುಗ್ಣಾಲಯದಲ್ಲಿ "ಮ್ಯಾಟ್ರನ್" ಎಂದು ಕೆಲಸಕ್ಕೆ ನಿಯಮಿಸಿಕೊಳ್ಳಲ್ಪಟ್ಟಳು. ಮುಂದೆ ಅವಳು ತನ್ನ ಅಚ್ಚುಕಟ್ಟುತನ ಶಿಸ್ತಿನಿಂದ ಅಲ್ಲಿ ಅವ್ಯವಸ್ಥೆಯಲ್ಲಿದ್ದುದೆಲ್ಲವನ್ನು ನಿಯಂತ್ರಣಕ್ಕೆ ತಂದು ಎಲ್ಲರ ಮೇಲೂ ತನ್ನ ಪ್ರಭಾವ ಬೀಳುವಂತೆ ( ಎಲ್ಲರಿಗೂ ತನ್ನ ಮೇಲೆ ನಂಬಿಕೆ, ಹೆದರಿಕೆ ಕೂಡುವಂತೆ ) ಮಾಡಿದಳು

ಫ್ಲಾರೆನ್ಸಳು ಕೇವಲ ಯೋಗ್ಯತೆಯುಳ್ಳ ನರ್ಸಳಷ್ಟೇ ಆಗಿರದೆ ಸದಾ ಕರ್ತವ್ಯದಕ್ಷಳಿರುವಳೆಂಬದನ್ನು ಅಲ್ಲಿಯ ಇತರ ಕಾರ್ಯಕರ್ತರು ತಿಳಿದುಕೊಳ್ಳುವಂತೆ ತನ್ನ ವರ್ತನೆಯಿಂದ ತೋರಿಸಿಕೊಟ್ಟಿದ್ದಳು. ಹಾಗೂ ಅಲ್ಲಿಯ ಪ್ರತಿಯೊಬ್ಬ ಕೆಲಸಗಾರರೂ ತಮ್ಮ ತಮ್ಮ ಕೆಲಸಗಳನ್ನು ಹೇಗೆ ದಕ್ಷತೆಯಿಂದ ಮಾಡಿಕೊಳ್ಳಲೇಬೇಕೆಂಬುದನ್ನು ಸ್ಪಷ್ಟವಾಗಿ ಹೇಳುತ್ತಿದ್ದಳು. ಇದರಿಂದ ಕೆಲವರು ಇವಳು ಕಠಿಣ ಹೃದಯದವಳೆಂದೂ, ಗರ್ವಿಷ್ಠಳೆಂದೂ ಇವಳ ನಾಲಿಗೆಯು ಬಹಳ ಹರಿತವಾದದ್ದೆಂದೂ ಅಂದುಕೊಳ್ಳುತ್ತಿದ್ದರು. ಹೀಗಿದ್ದರೂ ಸಹ ಅವಳ ಈ ರೀತಿಯ ವರ್ತನೆಯಿಂದ ಅವಳಿದ್ದ ರುಗ್ಣಾಲಯವು ಆದರ್ಶವಾಗಿತ್ತು. ಅಲ್ಲಿಯ ನರ್ಸಜನರು ಹೊಣೆಗಾರಿಕೆಯುಳ್ಳವರಾಗಿದ್ದರು. ಅಲ್ಲಿಯ ಪ್ರತಿಯೊಂದು ಸ್ಥಳವೂ ಚೊಕ್ಕವಾಗಿರುತ್ತಿದ್ದವು. ಇದರಿಂದ ಅಲ್ಲಿಗೆ ಬಂದ ರೋಗಿಗಳಿಗೆ ಒಳ್ಳೆಯ ವ್ಯವಸ್ಥೆಯಾಗಿ ಅವರು ತೃಪ್ತರಾಗುತ್ತಿದ್ದರು. ರೋಗಿಗಳ ಮನಸ್ಸಿಗೆ ಸಮಾಧಾನ ಸಿಗುವದರಿಂದಲೇ ಅವರ ರೋಗದ ಎಷ್ಟೋ ಭಾಗವು ಗುಣವಾಗುವದೆಂಬ ತತ್ವವನ್ನು ಸಂಪೂರ್ಣ ಅರಿತಿದ್ದಳವಳು.

ಫ್ಲಾರೆನ್ಸಳು ಕೇವಲ ಆರೋಗ್ಯ ವಿಭಾಗದ ಕೆಲಸಕ್ಕಷ್ಟೇ ಮಹತ್ವಕೊಡುವದಲ್ಲದೆ ರಾಜಕಾರಣದ ಕಡೆಗೂ ಲಕ್ಷ್ಯಹಾಕಹತ್ತಿದಳು. ಇದರಿಂದ ಜನರಲ್ಲಿ ಅವಳ ಬೆಲೆಯು ಹೆಚ್ಚಿಗೆ ಆಯಿತು. ಆದರೆ ಅವಳ ತಾಯ್ತಂದೆಯರು ಮಾತ್ರ ಇನ್ನೂ ಕುರುಡರಾಗಿಯೇ ಉಳಿದಿದ್ದರು. ಹಾಗೂ ಅವರು ಇನ್ನಾದರೂ ಅವಳ ಈ ಕಾರ್ಯವು ಕೇವಲ ಹುಡುಗತನದ ಚಲ್ಲಾಟವೆಂದೇ ತಿಳಿದಿದ್ದರು. ಅವರು ತಮ್ಮ ಮಗಳು ಬೆಳೆದು ದೊಡ್ಡವಳಾಗಿ ಯೋಗ್ಯತಾವಾನ ಹೆಣ್ಣುಮಗಳಾಗಿರುವಳೆಂಬದನ್ನು ಗ್ರಹಿಸಿರಲಿಲ್ಲ.

ಇದೇ ಸಮಯದಲ್ಲಿ ೧೮೫೪ರಲ್ಲಿ ರಶಿಯಾದೊಡನೆ ಇಂಗ್ಲಂಡ ಮತ್ತು ಫ್ರಾನ್ಸಗಳಿಗೆ 'ಕ್ರಿಮಿಯನ್' ಯುದ್ಧವು ಪ್ರಾರಂಭವಾಗಿದ್ದು, ಈ ಯುದ್ಧವು ಇಂಗ್ಲಂಡದಿಂದ ಬಹಳ ದೂರದಲ್ಲಿರುವ ಅನಾರೋಗ್ಯಕರವಾದ ಸ್ಥಳದಲ್ಲಿ ಕಪ್ಪು ಸಮುದ್ರದ ದಂಡೆಯ ಮೇಲೆ ನಡೆದಿತ್ತು. ಯುದ್ಧವು ಒಳ್ಳೇ ಭಯಂಕರ ಪರಿಸ್ಥಿತಿಗೆ ಬಂದಿದ್ದು ಅಲ್ಲಿ ಅಸಂಖ್ಯಜನರು ಘಾಯಗಳಿಗೆ ತುತ್ತಾಗಿ ನರಳುವ ಪ್ರಸಂಗ ಬಂದಿತ್ತು. ಆದರೂ ಸಹ ಅಲ್ಲ ಆ ಘಾಯಾಳು ಸೈನಿಕರಿಗೆ ಶುಶ್ರೂಷೆಮಾಡುವ ವ್ಯವಸ್ಥೆ ಇರಲಿಲ್ಲ. ಅವರಿಗೆ ಹಾಸಲು ಹೊದೆಯಲು ಬಟ್ಟೆಗಳಿಲ್ಲ. ಘಾಯಕ್ಕೆ ಸಹಾ ಸುತ್ತಲು ಒಂದು ತುಂಡು ಬಟ್ಟೆಗೆ ಬರಗಾಲವಾದಂತಾಗಿತ್ತು. ಅನ್ನಾನ್ನಗತಿಗೆ ಬಂದಿತ್ತು ಯುದ್ಧದ ವಾತಾವರಣದಿಂದ. ಒಟ್ಟಾರೆ ಹೇಳುವದೆಂದರೆ ಅಲ್ಲಿ ಕೇವಲ ಕ್ವಚಿತವೆಂದು ಹೇಳುವಷ್ಟು ಡಾಕ್ಟರರ ಹೊರತಾಗಿ ನರ್ಸರಿರಲಿಲ್ಲ ವಿಷ್ಟೇ ಅಲ್ಲ, ಹೊಲಸು ಗಟಾರವನ್ನು ಗುಡಿಸಲು ಆಳುಮಕ್ಕಳು ಸಹಾ ಇರಲಿಲ್ಲ.

ಈ ಸಮಯದಲ್ಲಿ ಫ್ಲಾರೆನ್ಸಳು ಲಂಡನ್ನಿನ ರುಗ್ಣಾಲಯದಲ್ಲಿ ಮುಖ್ಯ ನರ್ಸಳೆಂದು ಕೆಲಸಮಾಡುತ್ತಿದ್ದಳು.

ಈ ಸುದ್ದಿಯು ವಾರ್ತಾಪತ್ರಿಕೆಗಳಿಂದ ಇಂಗ್ಲಂಡದ ಮೂಲೆ ಮೂಲೆಗೆ ಮುಟ್ಟಿತು. ಹಾಗೂ ಘಾಯಾಳುಗಳು ಹುಳಗಳಂತೆ ಸಾಯುತ್ತಿರುವರೆಂದು ವರ್ತಮಾನಪತ್ರಗಳು ಸಾರತೊಡಗಿದವು. ಆಗ ಅಲ್ಲಿಯ ಪ್ರೈಮ ಮಿನಿಸ್ಟರನಾದ ಲಾರ್ಡ ಪಾಮರ್ಸ್ಟನ್ ಹಾಗೂ ಯುದ್ಧಮಂತ್ರಿಯಾದ ಸಿಡ್ನಿಹರ್ಬರ್ಟರು ಇದಕೆ ಕೂಡಲೇ ಯೋಗ್ಯ ಉಪಾಯಮಾಡುವ ವಿಚಾರಮಾಡಿದರು. ಅವರು ಫ್ಲಾರೆನ್ಸಳನ್ನು ಚನ್ನಾಗಿಬಲ್ಲವರಿದ್ದರು. ಕ್ರೀಮಿಯಾ ಯುದ್ಧದಲ್ಲಿನ ಘಾಯಾಳುಗಳ ಶುಶ್ರೂಷೆ ಮಾಡಲು ಹಾಗೂ ಅಲ್ಲಿಯ ಹೊಲಸು ವಾತಾವರಣವನ್ನು ಸರಿಪಡಿಸಲು ಫ್ಲಾರೆನ ಳೊಬ್ಬಳ ಹೊರತಾಗಿ ಮತ್ಯಾರೂ ಸಮರ್ಥರಿಲ್ಲವೆಂಬುದನ್ನು ಚನ್ನಾಗಿ ತಿಳಿದು ಅವಳಿಗೆ ಇದನ್ನು ತಿಳಿಸಿದರು. ಇಂಥಹ ಸುಸಂಧಿಯನ್ನೇ ಕಾಯುತ್ತಿದ್ದ, ಜನ ಸೇವೆಯ ಮಹತ್ವವನ್ನರಿತ ಫ್ಲಾರೆನ್ಸಳು ಇದಕ್ಕೆ ಸಂಪೂರ್ಣಮನ್ನಣೆ ಇತ್ತು ತನ್ನ ಕೆಲವು ನರ್ಸಜನರ ಗುಂಪಿನೊಡನೆ ಘಾಯಾಳುಗಳಿದ್ದ ಸ್ಥಳಕ್ಕೆ ಹೊರಟಳು. ಇವರು ಎಂದೆಂದೂ ಯುದ್ಧಭೂಮಿಯನ್ನು ಕಂಡವರಿರಲಿಲ್ಲ. ಯಾವಾಗ ಈ ರೀತಿಯ ದೊಡ್ಡ ಕರೆಯು ಫ್ಲಾರೆನ್ಸಳಿಗೆ ಬಂದಿತೋ ಆಗ ಅವಳ ತಾಯ್ತಂದೆಯರು ತಮ್ಮ ಮಗಳ ಯೋಗ್ಯತೆಯನ್ನು ಕಂಡರು. ಹಾಗೂ ತಾವು ಬಾತುಕೋಳಿ ಎಂದು ತಿಳಿದು ನಿರಾಕರಣೆಯ ದೃಷ್ಟಿಯಿಂದ ನೋಡಿದ ಮಗುವು ರಾಜಹಂಸವಾದದ್ದನ್ನು ಕಂಡು ಆನಂದಿಸಿದರು. (ನಿಜವಾದ ತತ್ವನಿಷ್ಠರು ತಮ್ಮ ವಿಚಾರವು ಜಗತ್ತಿಗೆ ಮನವರಿಕೆಯಾಗುವವರೆಗೂ ದುಡುಕಬಾರದೆಂಬ ಪಾಠವು ಇಲ್ಲಿ ಸ್ಪಷ್ಟವಾಗುತ್ತದೆ. ಎಳೆಯ ವಿಚಾರವಿದ್ದಾಗ ಅದರ ಮರ್ಮವರಿಯದೆ ವಿರೋಧಕರು ವಿರೋಧಿ ಸಿದರೂ, ಅದರಲ್ಲೂ ತಮ್ಮ ತಾಯ್ತಂದೆಯರು ವಿರೋಧಿಸಿದರೂ ಸಹ ಅಲ್ಲಿ ಧ್ಯೇಯಚ್ಯುತರಾಗದೆ ಗುರಿಮುಟ್ಟಲು ಒಂದಿಲ್ಲ ಒಂದು ರೀತಿಯಿಂದ ಹವಣಿಸಿದರೆ ಮುಂದೆ ಅದೇ ಜಗತ್ತಿನ ಮುಂದೆ ಬಂದು ಇವರ ಕಾರ್ಯಕ್ಕೆ ತಾಯ್ತಂದೆಯರೂ ಸಹ ನೆರವಾಗುವರು.)

ಫ್ಲಾರೆನ್ಸಳೂ ಹಾಗೂ ಅವಳ ಸಹೋದ್ಯೋಗಿಗಳೂ ಯುದ್ಧಭೂಮಿಗೆ ಮುಟ್ಟಿದ ನಂತರ ಅವರಿಗೆ ಇಂಗ್ಲಂಡದಲ್ಲಿ ತಿಳಿದದ್ದಕ್ಕಿಂತ ಇಲ್ಲಿಯ ಪರಿಸ್ಥಿತಿಯು ಬಹಳೇ ಶೋಚನೀಯವಿದ್ದದ್ದು ಕಂಡು ಬಂದಿತು. ಅಲ್ಲಿ ಅಗತ್ಯವುಳ್ಳ ಸಾಮಾನು ಗಳ ಕೊರತೆಯು ಬಹಳವಾಗಿತ್ತು. ರೋಗವು ಘಾಯಾಳುಗಳಲ್ಲಿ ಒಂದೇಸವನೆ ಭರದಿಂದ ಹಬ್ಬಹತ್ತಿತ್ತು. ಆದರೆ ಇವೆಲ್ಲಕ್ಕಿಂತಲೂ ಶೋಚನೀಯ ಸಂಗತಿಯೊಂದು ಅಲ್ಲಿ ನಡೆದಿತ್ತು. ಅದೆಂದರೆ ಸೈನ್ಯದಲ್ಲಿಯ ಕೆಲವು ಡಾಕ್ಟರರು ಹಾಗೂ ಸೈನ್ಯಾಧಿಕಾರಿಗಳೇ ಅಲ್ಲಿಯ ವಾತಾವರಣವು ಈ ರೀತಿ ಕೆಡಲು ಕಾರಣರಾಗಿದ್ದರು. ಅವರು ಫ್ಲಾರೆನ್ಸಳಿಗೆ ಕೊರತೆಯನ್ನು ಪೂರೈಸಿಕೊಡಲು ನಿರಾಕರಿಸುತ್ತಿದ್ದರಿಷ್ಟೇ ಅಲ್ಲ,

ಇವಳ ವಿರುದ್ಧ ಕೃತಿಮಾಡುತ್ತಿದ್ದರು. ಆದರೆ ಸುದೈವದಿಂದ 'ಲಾರ್ಡ್‌ಪಾಮರ್ಸ ಟನ್ನನು' ಇವಳಿಗೆ ವಿಶೇಷಾಧಿಕಾರ ಕೊಟ್ಟನು. ಮೇಲಾಗಿ ಸ್ವತಃ ಫ್ಲಾರೆನ್ಸಳು ಅಷ್ಟು ಯೋಗ್ಯತಾವಾನಳೇ ಇದ್ದು ವಿರುದ್ಧ ವಾತಾವರಣವನ್ನು ಸಹಾ ಅನುಕೂಲ ವನ್ನಾಗಿ ಮಾರ್ಪಡಿಸ ಬಲ್ಲ ಹೆಣ್ಣು ಮಗಳಿದ್ದಳು. ಆದ್ದರಿಂದ ಅವಳು ಆ ಅಧಿಕಾರಿ ಗಳಿಗೆ ದರ್ಪದಿಂದಾಗಲೀ, ಮನವೊಲಿಸಿಯಾಗಲೀ ಹೇಗೋ ಧೃಡಮನಸ್ಸಿನಿಂದ ತನ್ನದೊಂದು ಸ್ವಂತ ಹಾದಿ ಕಂಡುಕೊಂಡು ಅಲ್ಲಿಯ ಘಾಯಾಳುಗಳಿಗೆ ಬೇಕಾದ ಬಟ್ಟೆ ಬರೆಗಳನ್ನೂ ಹಾಸಿಗೆ ಹೊದಿಕೆಗಳನ್ನೂ ಔಷಧಗಳನ್ನೂ ದೊರಕಿಸಿಕೊಂಡು ಶುಶ್ರೂಷೆಮಾಡಹತ್ತಿದಳು. ಇದರಿಂದ ಇವಳು ತಾನು ಬರುವ ಮೊದಲು ಸಾಯುುವ ಪರಿಸ್ಥಿತಿಯಲ್ಲಿದ್ದ ಸಾವಿರಾರು ರೋಗಿಗಳ ಘಾಯಾಳುಗಳ ಸಾವಿನೊಡನೆ ಹೋರಾಡಿ ಗೆದ್ದಳು. ಆದರೆ ಅದರಲ್ಲಿ ಒಂದುಜೀವಿ, ಯಾರನ್ನು ಇವಳು ನಿಜವಾಗಿ ಪ್ರೇಮಿ ಸುತ್ತಿದ್ದಳೋ ಆ ಒಂದು ಜೀವಿಯ ಸಾವಿನೊಡನೆ ಮಾತ್ರ ಹೋರಾಡಿ ಜಯ ಹೊಂದಲು ಇವಳು ಸಮರ್ಥಳಾಗಲಿಲ್ಲ. ಆವನು ತನ್ನ ಘಾಯದ ನೋವಿನಿಂದ ಇವಳ ಕಣ್ಣೆದುರಿನಲ್ಲೇ ಸಾವಿಗೀಡಾದನು. ಆದರೆ ತನ್ನ ಕರ್ತವ್ಯದ ಮುಂದೆ ಈ ನೋವು ಅವಳನ್ನು ಕರ್ತವ್ಯಚ್ಯುತಳನ್ನಾಗಿ ಮಾಡಲಿಲ್ಲ. ತನ್ನ ಗುರಿಯ ಕಡೆಗೇ ಇವಳ ಲಕ್ಷ್ಯವಿತ್ತು.

ಕೊನೆಗೆ ಇವಳ ಎಷ್ಟೋ ದಿನಗಳ ಶ್ರಮದಿಂದ ಅಲ್ಲಿಯ ರುಗ್ಣಾಲಯದ ಹೊಲಸು ವಾತಾವರಣವು ಒಮ್ಮೆ ಶುದ್ಧವಾಯ್ತು. ಅಲ್ಲಿಯ ದುರ್ಗಂಧ, ಬೇನೆ ಯಿಂದ ಸಾಯುವ ಸ್ಥಿತಿ, ನೀರಿನ ರಾಡಿಯಿಂದುಂಟಾದ ರೋಗದ ವಾತಾವರಣ ಇವೆಲ್ಲವೂ ಮಾಯವಾಗಿ ಅದೊಂದು ಒಳ್ಳೇ ಪವಿತ್ರ ಸ್ಥಳವಾಗಿ ಮಾರ್ಪಟ್ಟಿತು. ಅವಳ ಈ ಮಾರ್ಗದಿಂದ ಅವಳು ಕೇವಲ "ಕ್ರಿಮಿಯನ್" ಯುದ್ಧದಲ್ಲಿನ ಘಾಯಾಳುಗಳ ಸೇವೆ ಮಾತ್ರ ಮಾಡಿದಂತಾಗಲಿಲ್ಲ. ಅವಳು ಸೇವೆಯ ಮಾರ್ಗ ದರ್ಶಕಳಾಗಿದ್ದದರಿಂದ ಮುಂದೆ ಬರುವ ಎಷ್ಟೋ ಯುದ್ಧ ಘಾಯಾಳುಗಳ ಸೇವೆ ಯನ್ನು ಸಹ ಮಾಡಿದಂತಾಗಿದೆ. ಅವಳು ಘಾಯಾಳುಗಳನ್ನು ಶುಶ್ರೂಷೆ ಮಾಡು ವವರು ಹೇಗೆ ಮಾಡಬೇಕೆಂಬ ಪದ್ಧತಿಯನ್ನು ಜಗತ್ತಿಗೇ ಕಲಿಸಿಕೊಟ್ಟಿದ್ದರಿಂದ ಅವಳು ಕೇವಲ ಬ್ರಿಟಿಷ ಸರಕಾರಕ್ಕೆ ಮಾತ್ರ ಸೇವೆ ಮಾಡದೆ ಎಲ್ಲ ಸರಕಾರಗಳಿಗೂ ನಿಷ್ಪಕ್ಷಪಾತಬುದ್ಧಿಯಿಂದ ಸೇವೆಸಲ್ಲಿಸಿದಂತಾಗಿದೆ. ಹಾಗೂ ಅವಳು ರುಗ್ಣಾಲಯ ಗಳು ಶಾಂತ ವಾತಾವರಣದ ದಿನಗಳಲ್ಲಿ ಮತ್ತು ಯುದ್ಧ ವಾತಾವರಣದ ದಿನ ಗಳಲ್ಲಿ ಯಾವ್ಯಾವ ರೀತಿಯಿಂದ ವರ್ತಿಸಬೇಕೆಂಬುದನ್ನು ವಿರುದ್ಧ ವಾತಾವರಣದಲ್ಲಿ ಸಹ ಹೋರಾಡಿ ಜಗತ್ತಿಗೆ ತೋರಿಸಿಕೊಟ್ಟಿದ್ದಾಳೆ. ಕೊನೆಯದಾಗಿ ಅವಳು ಜಗ ತ್ತಿಗೆ ನೀಡಿದ ಒಂದು ಶುಭ ಸಂದೇಶವೆಂದರೆ ಹೆಣ್ಣುಮಕ್ಕಳು ಸಹ ಅಧಿಕಾರಿಗಳಾಗಿ ಸದಸದ್ವಿವೇಕ ಬುದ್ಧಿಯಿಂದ ಅಧಿಕಾರ ನಡೆಸಬಲ್ಲರು. ಮಾರ್ಗದರ್ಶಕರಾಗಬಲ್ಲರು. ಹಾಗೂ ವಿಧೇಯತೆಯಿಂದ ಇತರರನ್ನು ನಡೆಸಿಕೊಳ್ಳಬಲ್ಲರು.

ಅವಳು ಈ ಯುದ್ಧ ಮುಗಿದ ನಂತರ ' ಮಿಲಿಟರಿ ' ಹಾಗೂ ಸಿವ್ಹಿಲ್ ಆಸ್ಪತ್ರೆಗಳ ಸುಧಾರಣೆಗಾಗಿ ಹಗಲು ರಾತ್ರಿ ಅವಿಶ್ರಾಂತವಾಗಿ ದುಡಿದಳು. ಹಾಗೂ ಎಲ್ಲ ಕಡೆಗಳಲ್ಲೂ ಒಂದು ಸಮಾಧಾನ ಪರಿಸ್ಥಿತಿಯು ನೆಲಸುವಂತೆ ಮಾಡಿದಳು. ಫ್ಲಾರೆನ್ಸಳು ತನ್ನ ಕೈಕೆಳಗಿನ ನರ್ಸರು ಯಾರು ಸತತ ದುಡಿಯುವರೋ, ನಿಷ್ಕಾಮ ಪ್ರೇಮದಿಂದ ದುಡಿಯುವರೋ ಅಂತಹವರನ್ನು ತಾನೂ ಪ್ರೀತಿಸುತ್ತಿದ್ದಳು. ಅವರಿಗೆ ಹುರಿದುಂಬಿಸಿ ಧೈರ್ಯತಂದುಕೊಡುತ್ತಿದ್ದಳು. ತನ್ನ ಮುಪ್ಪಿನಕಾಲದಲ್ಲಿ ಸಹ ಫ್ಲಾರೆನ್ಸಳು ಎಲ್ಲೆಡೆಯಿಂದಲೂ ಮರ್ಯಾದೆ ಸಿಗುವಂತೆ ಕೆಲಸ ಮಾಡುತ್ತಿದ್ದಳು. ಅವಳು ೯೦ ವರ್ಷಗಳವರೆಗೆ ರೋಗಿಗಳ ಆರೈಕೆಯಲ್ಲಿ ತನ್ನ ಅವಿಶ್ರಾಂತ ಸೇವೆ ಸಲ್ಲಿಸಿ ೧೯೧೦ ರಲ್ಲಿ " ಬೆಳಕಿನ ಮಹಿಳೆ " ಎಂಬ ಬಿರುದು ಪಡೆದು ತನ್ನ ಇಹವ್ಯಾಪಾರವನ್ನು ಮುಗಿಸಿ ಮಹಿಳೆಯರಿಗೊಂದು ಆದರ್ಶಸೇವಾಮಾರ್ಗ ತೋರಿಸಿ ಮರೆಯಾಗಿದ್ದಾಳೆ.

---

# ಗೃಹಗಳು ಮತ್ತು ಮನುಷ್ಯನ ಜೀವಿತದ ಮೇಲೆ ಅವುಗಳ ಪರಿಣಾಮ

**ಲೇಖಕ :— ಹುಚ್ಚಪ್ಪ.**

" A wise man rules the stars while the fool obeys them." ಈ ಪ್ರಕಾರವಾಗಿ ಇಂಗ್ಲೀಷಿನಲ್ಲಿ ಒಂದು ಗಾದೆಯುಂಟು. ಪ್ರತ್ಯಕ್ಷವಾಗಿ ಕಾರ್ಯಕಾರಣ ಸಂಬಂಧ ಗೊತ್ತಾಗದಿದ್ದರೂ ಬಹಳ ದಿನಗಳಿಂದ ಬಂದ ಅನುಭವದಿಂದ ಇಡೀ ಜಗತ್ತಿನ ಪ್ರತಿಯೊಂದು ವಸ್ತುಗಳು ಪರಸ್ಪರ ವಸ್ತುಗಳ ಮೇಲೆ ಪರಿಣಾಮ ಮಾಡುತ್ತವೆ ಎಂಬುದು ಪ್ರಕೃತಿ ನಿಯಮವಿರುತ್ತದೆ. ಇದರಂತೆ ಆಕಾಶದೊಳಗಿನ ಗೃಹಗಳು ಮನುಷ್ಯನ ಜೀವಿತದ ಮೇಲೆ ಆರೋಗ್ಯದ ದೃಷ್ಟಿಯಿಂದ, ಸ್ವಭಾವ ನಿರ್ಮಾಣ ದೃಷ್ಟಿಯಿಂದ, ಪ್ರವೃತ್ತಿಯನ್ನುಂಟುಮಾಡುವ ದೃಷ್ಟಿಯಿಂದ ಒಂದೇ ಸಮನೆ ಪರಿಣಾಮ ಮಾಡುತ್ತಲಿವೆ. ಆದ್ದರಿಂದ ಪ್ರಾಚೀನ ಕಾಲದ ಋಷಿಗಳು ಮಕ್ಕಳು ಹುಟ್ಟಿದ ಕೂಡಲೇ ಜಾತಕವನ್ನು ಬರೆಯುತ್ತಿದ್ದರು. ಅವರ ಕಲ್ಪನೆಗಳು ಗೃಹಗಳು ಪ್ರವೃತ್ತಿಗಳನ್ನು ತೋರಿಸುತ್ತವೆ ಹೊರತು ಆ ತೆರನಾದ ಪರಿಣಾಮವನ್ನು ಮಾಡಿಯೇ ತೀರುತ್ತವೆಯೆಂತಲ್ಲ. ಅಂದರೆ ಶನಿಕಾಟವಿದ್ದಾಗ ದುಷ್ಪರಿಣಾಮಗಳು ಆಗಬಹುದು ಎಂಬ ಯೋಚನೆಯಿಂದ ಮನುಷ್ಯನು ಎಚ್ಚರಿಕೆಯಿಂದ, ಮುಂದಾಲೋಚನೆಯಿಂದ ನಡೆದರೆ ಬರುವ ದುಃಖಗಳನ್ನು ಎದುರಿಸುವ ಪೂರ್ವ ಸಿದ್ಧತೆ ಮಾಡಲು ಬರುತ್ತದೆ. ಈ ತೆರನಾಗಿ ವರ್ತಿಸುವದು ಜಾಣರ ಲಕ್ಷಣ. ಆದರೆ

ಅಜ್ಞಾನಿಗಳು ಮುಂದೆ ಸಂಕಟ ಬರುವದೆಂದು ಗೊತ್ತಾದ ಕೂಡಲೇವಿಚಾರಶೂನ್ಯರೂ ಮತ್ತು ಬಲಹೀನರೂ ಆಗುವರು ಹಿಂದೂದೇಶದೊಳಗಿನ ಕತೃತ್ವಶಕ್ತಿ ನಷ್ಟವಾಗುತ್ತ ಹೋದಂತೆ ಮತ್ತು ಹೆಣ್ಣುಮಕ್ಕಳನ್ನು ಹೆಚ್ಚಾಗಿ ಅಜ್ಞಾನ ದೆಸೆಯಲ್ಲಿ ಇಡುತ್ತ ಬಂದಂತೆ ಗ್ರಹಗಳ ಸಲುವಾಗಿ ಒಂದು ಮೂದರಿ ಹೆದರಿಕೆಯುಂಟಾಗಿದೆ. ಕುತೂಹಲದಿಂದ ಫಲ, ಜ್ಯೋತಿಷ ಕೇಳುವದು ಬಿಡುವಂತಿಲ್ಲ. ಕೇಳಿದ ಮೇಲೆ ಹೇಡಿತನ ಬಿಡುವಂತಿಲ್ಲ. ಇದರಿಂದ ಗ್ರಹಗಳ ಅಭ್ಯಾಸಗಳ ಚಟವು ತಪ್ಪಿಹೋಗಿ ಢೋಂಗೀ ಮತ್ತು ಸ್ವಾರ್ಥೀ ಜ್ಯೋತಿಷ್ಯವಾದಿಗಳ, ಕೊರವಂಜಿಯರ, ಬುಡಬುಡಕಿಯರ ಹಾವಳಿಯು ಹೆಚ್ಚಾಗಿ ಹೋಗಿದೆ. ಇದನ್ನು ಹೋಗಲಾಡಿಸಲು ಗ್ರಹಗಳ ಪರಿಣಾಮ ಆರೋಗ್ಯದ ದೃಷ್ಟಿಯಿಂದ ಮತ್ತು ಸ್ವಭಾವ ನಿರ್ಮಿತ ದೃಷ್ಟಿಯಿಂದ ಅಭ್ಯಾಸ ಮಾಡಿ ತಮ್ಮ ಮಕ್ಕಳ ಪ್ರವೃತ್ತಿಗಳನ್ನು ಕಂಡುಹಿಡಿದು ಅವರಲ್ಲಿ ಸುಧಾರಣೆಯಾಗುವಂತೆ ಮಾಡಿದರೆ ಅವರೊಂದು ದೊಡ್ಡ ರಾಷ್ಟ್ರಕಾರ್ಯಮಾಡಿದಂತಾಗುವದು. ಇದರಿಂದ ತಾವು ಸುಖಿಗಳಾಗುವರಲ್ಲದೆ ರಾಷ್ಟ್ರವನ್ನೂ ಸುಖಿಯನ್ನಾಗಿ ಮಾಡುವರು. ಉದಾಹರಣಾರ್ಥವಾಗಿ, ತುಲಾ ರಾಶಿಗೆ ಅಭ್ಯಾಸ ಮಾಡುವಾ:— ತುಲಾ ರಾಶಿಯಲ್ಲಿ ಹುಟ್ಟಿದ ಜನರು ಅತಿಶಯ ಯೋಚನೆ ಮಾಡುವವರು ಮತ್ತು ಅಧೈರ್ಯಶಾಲಿಗಳಿರುವರು. ಇದರಿಂದ ಜಠರಾಗ್ನಿ ಮಂದವಾಗಿ ಜ್ಞಾನತಂತುಗಳು ನಿರ್ಬಲವಾಗುವವು. ಇದರಿಂದ ಎಷ್ಟೋ ವ್ಯಾಧಿಗಳು ಬರುವವು. ಈ ವ್ಯಾಧಿಗಳು ಮನುಷ್ಯನು ಎಲ್ಲಿಯ ವರೆಗೆ ತನ್ನ ಪಶು ಸ್ವಭಾವವನ್ನು ಗೆಲ್ಲುವದಿಲ್ಲ ಮತ್ತು ವಿಷಯ ಸುಖದಲ್ಲಿಯೇ ಆಸಕ್ತನಾಗಿರುವನು ಅಲ್ಲಿಯ ವರೆಗೆ ಇರುವವು. ಈ ರಾಶಿಯಲ್ಲಿ ಹುಟ್ಟಿದವರು ಪ್ರಯತ್ನಪೂರ್ವಕವಾಗಿ ಅಷ್ಟು ಹಚ್ಚಿಕೊಳ್ಳದೆ ಇರುವ ಮತ್ತು ಅಚ್ಚುಕಟ್ಟಾಗಿ ಪ್ರತಿಯೊಂದು ಕೆಲಸ ಮಾಡುವ ಚಟವನ್ನು ಬುದ್ಧಿಪೂರ್ವಕವಾಗಿ ಹಚ್ಚಿಕೊಳ್ಳಬೇಕು. ಎರಡನೆಯವರಿಗೆ ಸುಖ ಮತ್ತು ಶಾಂತಿ ಸಿಗುವಂಥ ಯಾವದೇ ಕಾರ್ಯವನ್ನು ಅವರು ಅಲ್ಲಗಳೆಯತಕ್ಕದ್ದಲ್ಲ. ತನ್ನ ಸ್ವಂತದ ಅಶಾಂತಿಮಯ ಸ್ವಭಾವದಿಂದ ಮತ್ತು ಚಂಚಲತ್ವದಿಂದ ಎರಡನೆಯವರಿಗೆ ಅಶಾಂತಿ ಮತ್ತು ಅಸುಖ ಆಗುವಂತೆ ಮಾಡಕೂಡದು. ಇದಕ್ಕಾಗಿ ಶಾಂತ ಮತ್ತು ಆನಂದ ಸ್ವಭಾವ ಉಳ್ಳವರಾಗಿರಬೇಕು. ಎರಡನೆಯವರ ಗುಣಗಳಿಗೆ ಮಹತ್ವ ಕೊಡಬೇಕು. ಅವರ ಸ್ತುತಿ ಮಾಡಿ ತನ್ನ ಪ್ರತಿಷ್ಠೆಯನ್ನು ಬೆಳೆಸುವ ಇಚ್ಛೆಯನ್ನು ಹತ್ತಿಕ್ಕಿ ಹೊಡೆಯಬೇಕು. ತಮ್ಮ ಸ್ವಂತದ ಪ್ರತಿಷ್ಠೆಗಾಗಿ ಯಾವದೇ ಪರೋಪಕಾರ ಕೃತ್ಯವನ್ನು ಎಂದಿಗೂ ಮಾಡಕೂಡದು. ಹಟದಿಂದ, ಉತ್ಸಾಹದಿಂದ ದೊಡ್ಡ ದೊಡ್ಡ ದನಿಗಳಿಂದ ಮಾತಾಡುವದನ್ನು ಬಿಡಲು ಯತ್ನಿಸಬೇಕು. ಮತ್ತು ಮನಸ್ಸಿನಲ್ಲಿ ಹುಟ್ಟತಕ್ಕ ಪ್ರತಿಯೊಂದು ವಿಚಾರದ ಮೇಲೆ ಮತ್ತು ಬಾಯಿಂದ ಹೊರಡತಕ್ಕ ಪ್ರತಿಯೊಂದು ಶಬ್ದದ ಮೇಲೆ ಸಕ್ತಕಾವಲನ್ನಿಡಬೇಕು. ಏಕಾಂತ ಸ್ಥಳದಲ್ಲಿ ಕೂತು ಧ್ಯಾನ ಮಾಡುವದು ಅಗತ್ಯವಿದೆ. ಇದರಿಂದ ಅಂತಃ

ಕರಣದಲ್ಲಿ ದೈವೀಜ್ಞಾನ ಸ್ಫುರಣವಾಗುವ ಸಂಭವವಿದೆ. ಸಂಗೀತದ, ಅಧ್ಯಾತ್ಮದ ವಿದ್ಯೆಯು ಈ ರಾಶಿಯುವರಿಗೆ ಬಹಳ ಲಾಭಕರವಿರುತ್ತದೆ. ಮಹತ್ವದ ವಿಷಯಗಳ ನಿರ್ಣಯವನ್ನು ಈ ರಾಶಿಯಲ್ಲಿ ಹುಟ್ಟಿದವರು ಯಾವಾಗಲೂ ಏಕಾಂತದಲ್ಲಿ ಮಾಡಬೇಕು. ಯಾಕಂದರೆ ಯಾರ ಸಹವಾಸದಲ್ಲಿ ಇವರು ಇರುವರೋ ಅವರ ಪ್ರಬಲವಾದ ವಿಚಾರಗಳ ಪರಿಣಾಮ ಹೆಚ್ಚುಕಡಿಮೆ ಪ್ರಮಾಣ ಇವರ ಮೇಲೆ ಆಗದೇ ಉಳಿಯದು. ತುಲ ಮತ್ತು ಧನ ರಾಶಿಯಲ್ಲಿ ಹುಟ್ಟಿದ ಜನರ ಲಗ್ನದಿಂದ ಆಗತಕ್ಕ ಪ್ರಜೆಯು ಬಹಳ ಬುದ್ಧಿಶಾಲಿಯಾಗುವರು. ತುಲ ಮತ್ತು ಕುಂಭ ರಾಶಿಯಲ್ಲಿ ಹುಟ್ಟಿದವರ ಲಗ್ನದಿಂದ ಆದ ಪ್ರಜೆಯು ಸಶಕ್ತ ಮತ್ತು ಚುರುಕು ಬುದ್ಧಿಯುವರಾಗುವರು. ತುಲಾರಾಶಿಯುವರು ಮೀನರಾಶಿಯುವರ ಕೂಡ ಎಂದಿಗೂ ಲಗ್ನವಾಗಕೂಡದು.ಮೀನರಾಶಿಯುವರು ಯಾವಾಗಲೂಯಾವದೇಕಾರ್ಯದ ಉದ್ದೇಶವೇನೆಂದುಕೇಳುತ್ತಿರುವರು. ತುಲಾರಾಶಿಯುವರಿಗೆ ಉದ್ದೇಶ ಹೇಳುವದೆಂದರೆ ಬೇಸರಿಕೆ. ತುಲಾ, ಕನ್ಯಾ ಈ ರಾಶಿಯಲ್ಲಿ ಹುಟ್ಟಿದವರ ಸಂಬಂಧ ಎಂದಿಗೂ ಮಾಡಬಾರದು. ಯಾಕಂದರೆ ಕನ್ಯಾರಾಶಿಯೊಳಗೆ ಹುಟ್ಟಿದ ಸುಶಿಕ್ಷಿತ ಮನುಷ್ಯನು ಯಾವಾಗಲೂ ಎರಡನೆಯುವರ ದೋಷಗಳನ್ನು ಕ್ಷಣಕ್ಷಣಕ್ಕೆ ಎಣಿಸುವ ಸ್ವಭಾವದವನಿರುತ್ತಾನೆ. ಮೇಷ ಮತ್ತು ತುಲಾರಾಶಿಯುವರು ಅತ್ಯಂತ ಗಾಢ ಪ್ರೇಮಿಗಳಾಗಿರುತ್ತಾರೆ.

ತುಲಾರಾಶಿಯುಲ್ಲಿ ಹುಟ್ಟಿದ ಮಕ್ಕಳ ನಿಜ ಸ್ವರೂಪವನ್ನು ಬಹಳಸ್ವಲ್ಪೇ ಜನರು ತಿಳಿಯ ಬಲ್ಲರು. ಅವರು ಅತಿಶಯ ಪ್ರಾಮಾಣಿಕರು ಮತ್ತು ಒಳ್ಳೆಯುವರಿರುವರು. ಅಥವಾ ಅವರು ಬಹಳ ಅವಿಶ್ವಾಸಕ್ಕೆ ಪಾತ್ರರು ಜುಬಕೊಚ್ಚುವವರು ಮತ್ತು ದುರಾಚಾರಿಗಳಾಗಿರುತ್ತಾರೆ. ಅವರ ಮೇಲೆ ಆಧ್ಯಾತ್ಮಿಕ ವಿಷಯಗಳ ಪರಿಣಾಮ ಬಹಳ ತೀವ್ರವಾಗಿರುತ್ತವೆ. ತಾರುಣ್ಯಾವಸ್ಥೆಯಲ್ಲಿ ಸೇರುವದಕ್ಕಿಂತ ಪೂರ್ವದಲ್ಲಿಯೇ ಪ್ರಜೋತ್ಪಾದನೆಯ ನಿಯುಮಗಳನ್ನು ಸಂಪೂರ್ಣವಾಗಿ ಅವರಿಗೆ ತಿಳಿಸಿಡುವದು ಅಗತ್ಯವಿದೆ. ಖೊಟ್ಟಿ ತಿಳಿವಳಿಕೆಯಿಂದ, ಖೊಟ್ಟಿ ಲಜ್ಜೆಯಿಂದ ಅವರಿಗೆ ಈ ಜ್ಞಾನಕೊಡದೆ ಅವರನ್ನು ದುರ್ದೈವಿಗಳನ್ನಾಗಿ ಮಾಡಕೂಡದು. ಯಾವಾಗ ಅವರು ಬಹಳ ಸಿಟ್ಟಿಗೆದ್ದಿರುತ್ತಾರೆ ಆವಾಗ ಅವರಿಗೆ ಏನಾದರೂ ಆಸೆ ಹಚ್ಚಿ ಮೋಸಮಾಡುವ ಪ್ರಯತ್ನ ಎಂದಿಗೂ ಮಾಡಕೂಡದು. ಅವರು ಶಾಂತ ಆಗುವ ವರೆಗೆ ದಾರಿ ನೋಡಬೇಕು. ಮತ್ತು ಆ ಮೇಲೆ ಬಹಳ ಪ್ರೇಮದಿಂದ, ಮೃದುಸ್ವರದಿಂದ ಅವರ ದೋಷಗಳನ್ನು ಅವರಿಗೆ ತಿಳಿಸಿ ಹೇಳಬೇಕು. ಈ ತೆರನಾದ ಪ್ರೇಮಳ ಸ್ವಭಾವದಿಂದ ಅವರ ಮೇಲೆ ಬಹಳ ಉತ್ತಮ ಪರಿಣಾಮವಾಗುತ್ತದೆ.ಇದರಿಂದ ಅವರು ಸುಧಾರಿಸಲು ದೃಢನಿಶ್ಚಯಮಾಡಿ ಅದರಂತೆ ಪ್ರಯತ್ನ ಮಾಡಿದ ವಿನಃ ಎಂದಿಗೂ ನಿಲ್ಲರು. ಈ ರಾಶಿಯ ಬಾಲಕರಲ್ಲಿ ಹೊಸ ಹೊಸ ಶೋಧಗಳನ್ನು ಮಾಡುವ ಸ್ವಾಭಾವಿಕಬುದ್ಧಿ ಇರುತ್ತದೆ. ಇವರಲ್ಲಿ ಹೊಸ ಹೊಸ ವಿಚಾರ ಮಾಡುವ ಮತ್ತು ಹೊಸ ಹೊಸ ಯೋಜನೆಗಳನ್ನು ಮಾಡುವ ಸಾಮರ್ಥ್ಯವಿರು

ತ್ತದೆ. ಇಷ್ಟೇ ಅಲ್ಲ. ಆದರೆ ಬೇರೆ ರಾಶಿಯ ಹುಡುಗರಿಗಿಂತ ಇವರಲ್ಲಿ ಯಾಂತ್ರಿಕ ಶಕ್ತಿಯು ಖಂಡಿತವಾಗಿ ಹೆಚ್ಚಿರುತ್ತದೆ. ಎಲ್ಲಿಯ ವರೆಗೆ ಇವರು ಅಡ್ಡ ಮಾರ್ಗಕ್ಕೆ ಹತ್ತಿರುವದಿಲ್ಲವೋ ಅಲ್ಲಿಯ ವರೆಗೆ ಅವರ ಒಲವಿನಂತೆ ಅವರಿಗೆ ಮಾಡಿಕೊಡುವದು ಹೆಚ್ಚು ಒಳ್ಳೆಯದು. ತುಲಾರಾಶಿಯ ಹುಡುಗರ ದೋಷಗಳನ್ನು ಆಗಾಗ್ಗೆ ಎಣಿಸುವದು ಅಥವಾ ಅವರಿಗೆ ಶಿಕ್ಷಿಸುವದೆಂದರೆ ಅವರಲ್ಲಿ ಇದ್ದಂಥಾ ಅಸಾಧಾರಣ ಬುದ್ಧಿಶಕ್ತಿಯನ್ನು ಕುಗ್ಗಿಸುವದೇ ಸರಿ. ಎಷ್ಟೋ ಪ್ರಸಂಗಗಳಲ್ಲಿ ಈ ರಾಶಿಯ ಹುಡುಗರಿಗೆ ಅವರ ತಾಯಿ ತಂದೆಗಳ ಅಥವಾ ಹಿರಿಯರಿಗಿಂತ ಹೆಚ್ಚಿನ ಒಳ್ಳೆ ಜ್ಞಾನವಿರುತ್ತದೆ. ಈ ಮಕ್ಕಳ ಮೇಲೆ ಹುಟ್ಟಿದಾಗಿನಿಂದಲೇ ಸೂರ್ಯನ ಹಾಗೂ ಗ್ರಹಗಳ ಸೂಕ್ಷ್ಮಪ್ರವಾಹ ಯಾವಾಗಲೂ ಹರಿಯುತ್ತ ಇರುತ್ತದೆ. ಇದರಿಂದ ಅವರ ತಿಳಿವಳಿಕೆಯಲ್ಲಿ ಯಾವ ಯಾವ ಅನುಭವಗಳು ಬರುತ್ತವೆಯೋ ಅವುಗಳ ಅರಿವು ಸ್ವಲ್ಪ ಮಾತ್ರವು ಎಡಬಲಕ್ಕಿನ ಜನರಿಗೆ ಇರುವದಿಲ್ಲ. ಯಾವಾಗ ಅವರ ಮನಸ್ಸಿನ ಕಲ್ಪನೆಯು ನಮಗಾಗದೆ ನಾವು ಅವರ ಕಲ್ಪನೆಗಳನ್ನು ನೋಡಿ ಹಾಸ್ಯ ಮಾಡುತ್ತೇವೋ ಆವಾಗ ಅವರು ಡಾಂಭಿಕತನವನ್ನು ಕಲಿಯುತ್ತಾರೆ.ಪ್ರೇಮದಿಂದ ಮತ್ತು ವಿವೇಕದಿಂದ ಅವರ ಮಾತುಗಳನ್ನು ಲಾಲಿಸಿ, ಅವರ ಸಂಬಂಧವಾಗಿ ಕಠೋರವಾಗಿ ಉಪಾಯಗಳನ್ನು ಯೋಚಿಸದೆ ಪ್ರೇಮಳ ಹಾಗೂ ವಿವೇಕಯುಕ್ತ ಉಪಾಯಗಳನ್ನು ಯೋಚಿಸಬೇಕು. ತುಲಾರಾಶಿಯಲ್ಲಿ ಹುಟ್ಟಿದವರ ಬುದ್ಧಿಸಾಮರ್ಥ್ಯವು ಅಮರ್ಯಾದಿತವಾಗಿರುತ್ತದೆ. ಅವರನ್ನು ಯೋಗ್ಯರೀತಿಯಿಂದ ಸಂಭಾಳಿಸಿದ್ದಾದರೆ ಅವರಿಂದ ಸರ್ವೋತ್ಕೃಷ್ಟ ಫಲೋತ್ಪತ್ತಿಯಾಗುವದು. ಈ ರಾಶಿಯಲ್ಲಿ ಹುಟ್ಟಿದ ಮನುಷ್ಯರು ಯೋಗ್ಯತಾವಾನರಾಗಲು ಯತ್ನಿಸದಿದ್ದರೆ ನಿಜವಾಗಿ ಅವರು ಮೂರ್ಖ ಶಿರೋಮಣಿಗಳೇ.

ಈ ರಾಶಿಯ ಸ್ವಾಮಿ ಶುಕ್ರನಿರುವನು. ಇದರ ಬಣ್ಣ ಆಕಾಶದ್ದಿರುವದು ತುಲಾರಾಶಿಯಲ್ಲಿ ಹುಟ್ಟಿದವರು ಹಿತ ನುಡಿಗಳನ್ನಾಡುವರು. ಸ್ವಭಾವದಿಂದಲೆ ಕರ್ತೃತ್ವಶಾಳಿಗಳು ಇರುವರು ಮತ್ತು ಸಂಸಾರದಲ್ಲಿ ಸರ್ವೋತ್ಕೃಷ್ಟ ಉತ್ಕರ್ಷವನ್ನು ಮಾಡಿಕೊಡಲು ಸಮರ್ಥರಿರುವರು. ಇವರಲ್ಲಿ ಧೀರ್ಘದೃಷ್ಟಿ ಮತ್ತು ವಿವೇಕ ಶಕ್ತಿ ಉತ್ತಮ ತರಗತಿಯಲ್ಲಿ ಇರುವವು. ಶಕ್ಯವಿದ್ದಷ್ಟು ಈ ರಾಶಿಯವರಾದ ನೀವು ಜ್ಞಾನಗಳಿಸಬೇಕು.,ಈ ರಾಶಿಯವರು ಹೆಡ್ಡ ಆಡುವ ಪ್ರವೃತ್ತಿಯವರಿರುವರು. ಕಾರಣ ಇದರಿಂದ ಎಚ್ಚರಾಗಿರಬೇಕು. ವಾಸನೆಗಳನ್ನು ಮತ್ತು ವಿಕಾರಗಳನ್ನು ಸಂಯಮಿತವಾಗಿ ಇಟ್ಟಷ್ಟು ಅದ್ಭುತ ಪ್ರತಾಪ ತೋರಿಸುವಿರಿ. ಅತಿ ಸಾಹಸಿಗರಾಗಬೇಡಿ. ನೀವು ಯೋಚನೆ ಮಾಡದೆ ಇದ್ದಷ್ಟು ನಿಮಗೆ ಹಣ ಸಿಗುವದು .ಆದ್ದರಿಂದ ದುಡ್ಡಿನ ವಿಚಾರವನ್ನು ಬಹಳ ಮಾಡಬೇಡಿ. ಚಂಚಲತ್ವ, ಮತ್ತು ಸ್ತುತಿಪ್ರಿಯತೆ ನಿಮ್ಮಲ್ಲಿ ದೊಡ್ಡ ದೋಷವಿರುವದು. ಕಾರಣ ಇದನ್ನು ಗೆಲ್ಲಲು ಯತ್ನಿಸಿ. ನೀವು ಅವಿವಾಹಿತರಾಗಿ ಎಂದೂ ಉಳಿಯಬೇಡಿರಿ

ಕನ್ಯಾರಾಶಿಯು ಮತ್ತು ತುಲಾರಾಶಿಯು ಸಂಧಿಸಮಯದಲ್ಲಿ ಹುಟ್ಟಿದವರಿಗೆ ಮನೆಬಿಟ್ಟು ಹೊರಡುವದು ಬಹಳ ಸೇರುತ್ತದೆ. ಇವರು ರಮ್ಯ ಮತ್ತು ಚಿತ್ತಾಕರ್ಷಕ ಸ್ವಭಾವದವರಾಗುತ್ತಾರೆ. ಅವರು ಬಹಳ ನಿಃಸ್ವಾರ್ಥಿಗಳು ಮತ್ತು ಬಹಳ ಮಾಯಾಳು ಸ್ವಭಾವದವರಿರುತ್ತಾರೆ. ಇವರಿಂದ ಬೇರೆಯವರು ತಮ್ಮ ಸ್ವಾರ್ಥವನ್ನು ಸಹಜವಾಗಿ ಸಾಧಿಸಿಕೊಳ್ಳಲಾರರು. ಇವರು ಯಾರ ಮೇಲಾದರೂ ಸಹ ಗಂಡನಂತೆ ಅಥವಾ ಹೆಂಡತಿಯಂತೆ ಅಮರ್ಯಾದಿತ ಪ್ರೇಮ ಮಾಡುವರು. ಪ್ರತಿಕೂಲ ಲಗ್ನವಾದಲ್ಲಿ ಅವರು ಇದನ್ನು ತಮ್ಮ ಮನಸ್ಸಿನಲ್ಲಿಯೇ ಇಟ್ಟುಕೊಳ್ಳುವರು. ಮತ್ತು ಶಕ್ಯವಿದ್ದಷ್ಟು ಪ್ರತಿಕೂಲ ಸ್ವಭಾವದವರ ಕೂಡ ಸಾಧಿಸಿಕೊಂಡು ಹೋಗಬಹುದು.ತಮ್ಮ ಸ್ವಂತ ದಂಧೆಯಲ್ಲಾಗಲೀ, ವಿದ್ಯಾವಿಷಯಕ ಪ್ರವೃತ್ತಿಗಳಲ್ಲಾಗಲೀ ತಮ್ಮ ಒಲವಿನಂತೆ ಹೋಗುವರು. ಅವರ ದುಃಖ ಅಥವಾ ನಿರಾಸೆ ಮರವೆಯಾಗಲು ಪ್ರವಾಸವು ಅವರಿಗೆ ಸಹಕಾರಿಯಾಗುವದು. ಜಗತ್ತಿನಲ್ಲಿಯ ಸೌಂದರ್ಯವು ಅವರ ದೃಷ್ಟಿಗೆ ಬಿದ್ದಕೂಡಲೆ ಅವರೂ ಅದರ ಸ್ವಾರಸ್ಯವನ್ನು ಹೀರಿ ಕೊಳ್ಳುವರು. ಮನೆಯು ಮತ್ತು ವಸ್ತು ವ್ಯವಸ್ಥೆಯನ್ನು ಮನೋಹರವಾಗಿ ಮಾಡುವ ಉತ್ತಮ ಶಕ್ತಿಯು ಅವರಲ್ಲಿ ಇರುತ್ತವೆ.

---

# ಸ್ತ್ರೀಜೀವನದ ಮೂಲ ಭೂತ ಸಮಸ್ಯೆ

ಲೇಖಕಿ — ವೆಂಕವ್ಮಾ ಕೊಯ: ಮತ್ತೂರ.

[ ಇಲ್ಲಿ ಸ್ತ್ರೀಜೀವನದ ಮೂಲಭೂತ ಸಮಸ್ಯೆಯನ್ನು ನೈಸರ್ಗಿಕವಾದ ರೀತಿ ಯಲ್ಲಿ ಲೇಖಕರು ಎತ್ತಿ ತೋರಿಸಿದ್ದಾರೆ; ಹಳೆಯದನ್ನು ನೋಡುವ ದೃಷ್ಟಿ ಕೋನ ಹೊಸದಾಗಿದೆ. ]

ಆಚಾರ್ಯ ದಾದಾ ಧರ್ಮಾಧಿಕಾರಿಯವರು, ' ಅಮರ ಹಿಂದ ಮಂಡಳ, ದಾದರ ' ದಲ್ಲಿ ಸ್ತ್ರೀಜೀವನದ ಮೂಲಭೂತ ಸಮಸ್ಯೆ ಎಂಬ ವಿಷಯವನ್ನು ಕುರಿತು ಎಪ್ರಿಲ ೩೦ರಂದು ಭಾಷಣ ಮಾಡಿದ್ದು ಅದರ ಸಾರಾಂಶವನ್ನೇ ಜುಲೈ ತಿಂಗಳ ವೀರವಾತೆ ಸಂಚಿಕೆಯಲ್ಲಿ ಪ್ರಕಟಿಸಲಾಗಿತ್ತು. ಅದರಲ್ಲಿ ಧರ್ಮಾಧಿಕಾರಿಯವರು " ಸ್ತ್ರೀಜೀವನದ ಮೂಲಭೂತ ಸಮಸ್ಯೆ"ಯು ವಿಚಾರ ಮಾಡುವವರು ಬಹಳ ವಿರಳವೆಂದು ಹೇಳಿ ದ್ದಾರೆ. ಹಾಗೂ ತಾವು ಅದರ ವಿಚಾರಕ್ಕೆ ಕೈಹಾಕಿದ್ದಾರೆ. ಆದರೆ ಅವರು ಅಲ್ಲಿ ಸ್ತ್ರೀಯರ ಈಗಿನ ಪರಿಸ್ಥಿತಿಯನ್ನು ಕುರಿತು ವಿಚಾರಮಾಡಿ ಅದೇ ಅವರ ಕಠಿಣ ಸಮಸ್ಯೆಯೆಂದು ಹೇಳಹೊರಟಂತಿದೆ. ಸ್ತ್ರೀಯರ ನಿಜವಾದ ಮೂಲಭೂತ ಸಮಸ್ಯೆ ಯಾವದು ? ದೇವರ ನಿಯಮದ ಪ್ರಕಾರ ಸ್ತ್ರೀಯರ ಮೂಲ ಸಮಸ್ಯೆ ಏನಿದೆ ? ಕೇವಲ ಕೃತ್ರಿಮ ಮಾನವೀ ಜಗತ್ತಿಗನುಸರಿಸಿ ಸ್ತ್ರೀಯರ ಬಗ್ಗೆ ವಿಚಾರ ಮಾಡು ವದು ಅವರ ಹಿತದ ದೃಷ್ಟಿಯಿಂದ ಸಮಂಜಸವಾಗಬಹುದೇನು ? ಸ್ತ್ರೀಯು ಮನಸ್ಸು ಮಾಡಿದಲ್ಲಿ ಪುರುಷರ ಸರಿಸಮವೇಕೆ ? ಹೆಚ್ಚಿನ ಭೂಮಿಕೆಯನ್ನು ಸಹ ತಯಾರಿಸಬಲ್ಲಳು. ಇದುವರೆಗೂ ಯಾವ ಸ್ಮೃತಿಕಾರರೂ ಈ ಪ್ರಶ್ನೆಯನ್ನು ಎತ್ತಿ ಹಿಡಿಯದಿರಲು ಕಾರಣವೆಂದರೆ ಪುರುಷ ನಿರ್ಮಿತ ಕೃತ್ರಿಮ ಸಮಾಜ ರಚನೆ. ಸ್ತ್ರೀಜೀವನವು ಸ್ವತಂತ್ರವಾದುದೆ ? ಎಂಬ ಪ್ರಶ್ನೆಗೆ ಉತ್ತರ ದೊರೆಯದಿರುವ ಕಾರಣವೆಂದರೆ, ಸ್ತ್ರೀಯು ಕಾರಣಾಂತರಗಳಿಂದ ಯಾವದೋ ಒಂದು ಪರಿಸ್ಥಿತಿಯ ಓಘಕ್ಕೆ ಸಿಕ್ಕು ತನ್ನ ಬುದ್ಧಿಯನ್ನು ಮಂಕಾಗಿಸಿ, ತಾನು ಗಂಡಸಿನ ದಾಸಿಯೆಂಬ ದನ್ನು ನಂಬಿದ್ದೇ ಸರಿ.

ಸರಂಜಾಮಿ, ಬಂಡವಾಳಶಾಹಿ ಸಮಾಜ ವ್ಯವಸ್ಥೆಯಲ್ಲಿ ಸ್ತ್ರೀಗೆ ಸ್ವತಂತ್ರ ಅಸ್ತಿತ್ವವಿಲ್ಲದಿರಲು ಕಾರಣವೆಂದರೆ ಅವಳು ಹಣಗಳಿಸುವದಿಲ್ಲವೆಂದು ಹಾಗೂ ಗಂಡಸರ ನೀತಿನಿಯಮಕ್ಕೆ ಒಳಪಟ್ಟು, ತಮ್ಮ ಸರ್ವಸ್ವತ್ಯಾಗ ಮಾಡಿದ್ದರಿಂದ ಯಾವ ಪುರಾಣಗಳಲ್ಲಿಯೂ ಪುರುಷನು ಸ್ತ್ರೀಯಿಂದ ತನ್ನ ಜನ್ಮವೆಂದು ಒಪ್ಪಿ ಕೊಂಡಿಲ್ಲವಂತೆ. ಇದು ಸಹಜವೇ. ಯಾರೇ ಆದರೂ ತಮ್ಮ ಅಸ್ತಿತ್ವವನ್ನು ಕಡಿಮೆ ಮಾಡಿಕೊಂಡು ಎರಡನೇಯವರಿಗೆ ಮಾನದೊರಕಿಸಿಕೊಡುವದು ಅಸಹಜ.ಆದರೂ

ಸಹ ಬೇಡವೆಂದರೂ ಕೂಡ ಸಹಜವಿದ್ದದ್ದು ತಾನಾಗಿಯೇ ಬಾಯಿಂದ ಹೊರಡುವ ದೆಂಬದು ಸತ್ಯವಿರುವದರಿಂದಲೇ ಜಗದಾದಿಗೆ ಮೊದಲೊಂದು ಶಕ್ತಿಬೇಕೇಬೇಕು, ಶಕ್ತಿಯನ್ನು ಹೆಣ್ಣೆಂದೇ ಜನರು ಆರಾಧಿಸುತ್ತಾರೆ. ಮುಂದೆ ನಿಸರ್ಗದೇವತೆ– ಇವಳನ್ನಾದರೂ ಹೆಣ್ಣೆಂದೇ ಭಾವಿಸುತ್ತಾರೆ. ಆ ಮುಂದೆಯೇ ಬ್ರಹ್ಮಾದಿಗಳ ಜನನ ಅಂದಮೇಲೆ ಜಗತ್ತಿಗೆ ಮೊದಲಾರು? ಹೆಣ್ಣಲ್ಲವೆ? ಇದನ್ನು ಹೇಗೆ ಅಲ್ಲ ಗಳೆಯಲು ಸಾಧ್ಯ? ಸ್ತ್ರೀಗಾಗಿ ಪುರುಷನು ತಪಶ್ಚರ್ಯಮಾಡದಿರಲು ದೊಡ್ಡ ಕಾರಣ ವೆಂದರೆ, ಪುರುಷನು ತನ್ನ ನರಿಯ ಬುದ್ಧಿಯಿಂದ ಸರಳೆಯಾದ ಸ್ತ್ರೀಯ ಹೃದಯ ದಲ್ಲಿ, ತಾನು ಪುರುಷನ ದಾಸಿಯೆಂಬದನ್ನು ಸ್ಪಷ್ಟವಾಗಿ ಮೂಡಿಸಿಬಿಟ್ಟಿದ್ದಾನೆ. ಇದರಿಂದ ಅವಳು ಅವನನ್ನು ದೇವರೆಂದು ಭಾವಿಸಿ ಆರಾಧಿಸುತ್ತಾಳೆ. ಆದರೆ ಪುರುಷನಿಗೆ ಆದರ ಪರಿವೆ ಇಲ್ಲ. ಅವಳನ್ನು ತೊತ್ತೆಂದು ತಿಳಿದಿರುವದರಿಂದ ತಾನು ಅವಳಿಗಾಗಿ ತಪಶ್ಚರ್ಯಮಾಡುವದು ಹೇಯವೆಂದೆಣಿಸಿದ್ದಾನೆ.

ರಾಷ್ಟ್ರಕ್ಕಾಗಿ ಸ್ತ್ರೀಪ್ರೇಮವನ್ನು ಬಿಟ್ಟವರು ಮಾನ್ಯರಾದರು, ಸ್ತ್ರೀಗಾಗಿ ರಾಷ್ಟ್ರಪ್ರೇಮವನ್ನು ಬಿಟ್ಟವರು ಅಮಾನ್ಯರಾದರು! ಇದು ಯಾರ ತಪ್ಪು? ಕೃತ್ರಿಮ ಸಮಾಜದ ರಚನೆಯ ತಪ್ಪು. ಈಶ್ವರ ನಿರ್ಮಿತ ಸೃಷ್ಟಿಯನ್ನು ಬದಲಿಸಿ ಅಲ್ಲಿ ಮಾನ ವನು ತನ್ನದೇ ಆದ. ತನಗೆ ಅನುಕೂಲವಾಗುವಂತಹ ಪರಿಸ್ಥಿತಿಯನ್ನು ಹೊಂದಿಸಿ ಕೊಂಡಿದ್ದುದರ ತಪ್ಪು. ಆದರೆ ಇಲ್ಲಾದರೂ ಸಹ ಮಾನಸಶಾಸ್ತ್ರವನ್ನು ಆಳವಾಗಿ ಬಲ್ಲವರು ಈ ವಿಚಾರವನ್ನು ಸರಿಎನ್ನಲಾರರು. ರಾಮನು ಸೀತೆಯನ್ನು ಅರಣ್ಯಕ್ಕಟ್ಟಿದ ಮೇಲೆ ತಾನೆಷ್ಟು ಸುಖಿಯಾಗಿದ್ದ? ಆದರಂತೆ ನೆಪೋಲಿಯನ್ನನು ಲೌಕಿಕ ಪ್ರತಿಷ್ಠೆಗೆ ಬಲಿಬಿದ್ದು, ತನ್ನ ಪ್ರೀತಿಯ ಜೋಸೆಫಳನ್ನು ಬಿಟ್ಟು ಯಾವಗತಿಗೀಡಾದನೆಂಬದು ಇತಿಹಾಸ ಪ್ರಸಿದ್ಧವಿದೆ. ಸ್ತ್ರೀಪುರುಷರು ಜಗತ್ತಿನ ನಡೆಗೆ ಒಬ್ಬರಿಗೊಬ್ಬರು ಪೂರ ಕರು. ಹೀಗಿರುವಾಗ ಧರ್ಮಾಧಿಕಾರಿಗಳೆಂದಂತೆ ಸ್ತ್ರೀಪುರುಷರು ದೇವರ ನಿಯಮ ದಂತೆ ಯಾವಾಗಲೂ ಒಬ್ಬರನ್ನು ಸಂಪೂರ್ಣ ತ್ಯಜಿಸಿ ಮತ್ತೊಬ್ಬರು ಇರಲಾರರು. ಈ ಉದಾಹರಣೆಗಳನ್ನು ನಾವು ಮಾನವೇತರ ಪ್ರಾಣಿಗಳಲ್ಲಿ ಕಾಣುತ್ತೇವೆ. ಆದರೆ ಮಾನವರು (ಗಂಡಸರು) ತಮ್ಮದೇ ಆದ ಒಂದು ಸಮಾಜರಚನೆಮಾಡಿಕೊಂಡು ತಮಗನುಕೂಲವಾಗುವಂತೆ ಅಲ್ಲಿ ಕೆಲವು ನೀತಿನಿಯಮಗಳ ಕಟ್ಟಳೆಗಳನ್ನು ಹಾಕಿ, ಆ ಗೆರೆಯನ್ನು ದಾಟಿದವರು ತಮ್ಮ ಸಮಾಜ ಬಾಹಿರರೆಂದು ತಿಳಿಯುವಂತೆ ಮಾಡಿದ ಮೂಲಕ ದೇವರ ನಿಯಮವೆಲ್ಲವೂ ಬುಡಮೇಲಾಗಿ ಜಗತ್ತು ಬೇರೊಂದು ಹಾದಿಯನ್ನೇ ಹಿಡಿಯುತ್ತ ಹೊರಟಿತು. ಈ ಸಮಾಜದ ನಿಯಮದ ಚೌಕಟ್ಟು ಬಿಟ್ಟು ನಡೆದ ಗಂಡಸರ ತಪ್ಪು ಮುಚ್ಚಿಹೋಗುವಂತಹ ವಾತಾವರಣವಿದೆ. ಆದರೆ ಸೃಷ್ಟಿಧರ್ಮದಂತೆ ಸ್ತ್ರೀಯಳ ಶರೀರರಚನೆಯು ಅವಳ ತಪ್ಪನ್ನು ಮುಚ್ಚುವಂತಿಲ್ಲ. ಆದ್ದರಿಂದ ಪುರುಷರು ಹೆಣ್ಣನ್ನು ಬಿಟ್ಟಿರಲು ಸಾಧ್ಯವಿದೆ! ಆದರೆ ಸ್ತ್ರೀಗೆ ಹಾಗಿರಲೆಂತು ಸಾಧ್ಯ!! ಮೇಲಾಗಿ ಪುರುಷರು ತಮ್ಮ ಸುಖಕ್ಕಾಗಿ “ಸ್ತ್ರೀಗೆ ಪತಿಯೇ ದೇವರು;

ಆವನ ಮಾರ್ಗದಲ್ಲೇ ತಾನು ನಡೆಯುವದು ಪತಿವ್ರತಾಧರ್ಮ' ಮುಂತಾದ ದೊಡ್ಡ ದೊಡ್ಡ ಶಬ್ದ ಜಾಲಗಳನ್ನು ಹೆಣ್ಣಿನ ಸುತ್ತ ಹೆಣೆದರು. ಇದರಿಂದಾಗಿ ಅವರು ಲಗ್ನವಿಲ್ಲದೆ ಸನ್ಯಾಸತ್ವವನ್ನು ಸ್ವೀಕರಿಸಲು ಹೆದರಿದರು ಹಾಗೂ ಲಗ್ನವಾದನಂತರ ಸಹ ಸಂಸಾರಕ್ಕೆ ಬೇಸತ್ತು ಸನ್ಯಾಸಸ್ವೀಕರಿಸಲು ಮಾರ್ಗವಿಲ್ಲದಾಯ್ತು. ಕಾರಣವೆಂದರೆ ಅವಳಿಗೆ ಸನ್ಯಾಸಿ ಎನ್ನುವ ಬದಲು ಗಂಡುಬೀರಿ ಅಥವಾ ತ್ಯಕ್ತೆ ಎಂಬ ಬಿರುದನ್ನು ದಯಪಾಲಿಸಹತ್ತಿತ್ತು ಕುರುಡ ಸಮಾಜ. ಇರಲಿ, ಈಗಾದರೂ ಗಂಡಸರು ತಮಗೆ ಸಂಪೂರ್ಣ ಅಧಿಕಾರವಿದ್ದರೂ ಸಹ ಎಷ್ಟು ಜನರು ಸ್ತ್ರೀಯರ ಮುಖನೋಡದಷ್ಟು ನಿಷ್ಠಾವಂತ ಸನ್ಯಾಸಿಗಳಾಗಿದ್ದಾರೆ! (ಅಪವಾದಾತ್ಮಕವೆಂದು ಕೇವಲ ಕೆಲವರುಹೊರತಾಗಿ ?) ಆದರೆ ವಿರುದ್ಧ ಪರಿಸ್ಥಿತಿಯಲ್ಲಿ ಸಹ ಅಕ್ಕಮಹಾದೇವಿ,ಮೀರಾಬಾಯಿಯವರಂತಹ ಮತ್ತು ಇನ್ನೂ ಎಷ್ಟೋ ಬೆಳಕಿಗೆಬಾರದೆ ಉಳಿದ ಮಹಿಳೆಯರು ಈ ರೀತಿ ಸನ್ಯಾಸಿಗಳಾಗಿ ಹೋಗಿದ್ದಾರೆ. ಇದೇ ಸಮಯದಲ್ಲಿ ಹೇಳುವ ಮತ್ತೊಂದು ಮಾತೆಂದರೆ ಸ್ತ್ರೀಯಿಂದ ದೂರವಾಗಿರುವ ಸಾಮರ್ಥ್ಯವುಳ್ಳ ಗಂಡಸರು ಒಬ್ಬ ಪತ್ನಿಯು ಸತ್ತಲ್ಲಿ ಆ ಜನ್ಮ ವಿಧುರನಾಗದೆ ಪುನಃ ವಿವಾಹಿತರಾಗುವರು. ಆದರೆ ಅದೇ ಒಬ್ಬ ಬಾಲವಿಧವೆಯು ಸಹ ತನ್ನ ಆಯುಷ್ಯವನ್ನೆಲ್ಲವನ್ನು ಒಬ್ಬಂಟಿಗಳಾಗಿಯೇ ಕಳೆಯಬೇಕು. ಇದು ನಮ್ಮ ಸಮಾಜರಚನೆ. ಈ ನಿಯಮವು ಕೆಟ್ಟದ್ದೆಂದು ಹೇಳುವದಿಲ್ಲ. ಇದೊಂದು ರೀತಿಯಿಂದ ನಮ್ಮ ಹೆಣ್ಣುಮಕ್ಕಳು ತಮ್ಮ ಮನೋಬಲ ಬೆಳೆಸಲು ಸುಸಂಧಿಯೆಂದೇ ಹೇಳಬೇಕು. ಆದರೆ ಎಷ್ಟು ಹೆಣ್ಣುಮಕ್ಕಳು ಇದನ್ನರಿತಿರುವರು ? ಹಾಗೂ ನಿಸರ್ಗವಾದರೂ ಇದಕ್ಕೆ ಎಷ್ಟು ಅನುಕೂಲವಾಗಬಲ್ಲದು? ಈ ಮೂಲಭೂತ ಸಮಸ್ಯೆಯನ್ನು ವಿಚಾರಿಗಳು ವಿಚಾರ ಮಾಡಬೇಡವೇ ?

ಯಾರೇ ಆಗಲಿ ಈ ಕೃತ್ರಿಮ ಜಗತ್ತಿನಲ್ಲಿ ಒಬ್ಬರನ್ನೊಬ್ಬರು ನಿಷ್ಕಾಮಪ್ರೇಮದಿಂದ ಪ್ರೀತಿಸುವದು ಕ್ವಚಿತವೇ.ಬಂಧುಬಾಂಧವರೇಕೆ ತಾಯಿ ಮಕ್ಕಳೆಂಬ ರಕ್ತ ಸಂಬಂಧಿಗಳಲ್ಲಿ ಸಹ ಹಣದ ಸಮಸ್ಯೆಯಿಂದ ಪ್ರೀತಿಯು ಉಳಿಯದಾಗಿದೆ. ಅಂತಹದರಲ್ಲಿ ಪರರಕ್ತವಾದ ಗಂಡಹೆಂಡಿರಲ್ಲಿ ನಿಷ್ಕಾಮಪ್ರೇಮವಿಲ್ಲದಿರುವದು ಸಹಜವೇ ಸರಿ. ಎಲ್ಲಿಯವರೆಗೆ ಸ್ತ್ರೀ, ತನ್ನ ರಕ್ಷಣೆಗಾಗಿ ಪುರುಷನನ್ನೇ ಅವಲಂಬಿಸಿರಬೇಕಾದ ಪರಿಸ್ಥಿತಿ ಇತ್ತೋ ಅಲ್ಲಿಯವರೆಗೆ ಗಂಡಹೆಂಡಿರಲ್ಲಿ ಈಗಿರುವಷ್ಟು ವೈಮನಸ್ಯಗಳುಂಟಾಗುತ್ತಿರಲಿಲ್ಲ. ಆದರೆ ಯಾವಾಗ ಹೆಣ್ಣುಮಕ್ಕಳು ತಮ್ಮ ಅಸ್ಥಿತ್ವವನ್ನು ಸ್ವಲ್ಪವಿಲ್ಲಸ್ವಲ್ಪ ಕಂಡುಹಿಡಿದು, ತಾವೂ ಮಾನವರಿರುವೆವೆಂಬದನ್ನು ಅರಿಯುವ ಪರಿಸ್ಥಿತಿ ಬಂದು ತಮ್ಮ ಹೆಜ್ಜೆಯನ್ನು ಸ್ವಲ್ಪ ಮುಂದಿರಿಸಿದರೋ ಆಗಿನಿಂದ ವಿವಾಹ ವಿಚ್ಛೇದನೆ, ಪ್ರೌಢವಿವಾಹ, ಪ್ರೀತಿವಿವಾಹ ಮುಂತಾದವುಗಳಿಗೆ ಪ್ರಾರಂಭವಾಯ್ತು. ಇದರ ಮುಂದೆ ಇನ್ನೂ ಕಾಲುಗತಿಸಿದಂತೆ ಹೆಣ್ಣು, ಪುರುಷಕೃತ ನೀತಿಯ ಭೀತಿಯನ್ನು ಬಿಟ್ಟು ತಾನು ಸ್ವತಂತ್ರ ಅಸ್ಥಿತ್ವಗಳಿಸಿ, ಪುರುಷನು ತನಗೆ ಯಾವದೇ ರೀತಿ

ಯಿಂದಲೂ ತನ್ನ ಮಾರ್ಗದಲ್ಲಿ ಅಡ್ಡಬರಲು ಸಾಧ್ಯವಿಲ್ಲವೆಂಬಷ್ಟು ಮನೋಬಲ ಬೆಳೆಸಿದಲ್ಲಿ ಅವಳು ಪುರುಷನ ಸರಿಸಮಾನ ಹಕ್ಕು ಪಡೆಯಲೇ ಬಲ್ಲಳು. ಇದನ್ನಾದರೂ ನಾವು ಪಶುಪಕ್ಷಿಗಳಲ್ಲಿ ಕಾಣಬಹುದು. ಅವುಗಳು ಪ್ರತಿಫಳಿಗೆಯಲ್ಲೂ ಗಂಡುಹೆಣ್ಣುಗಳು ಒಂದೇ ಸ್ಥಳದಲ್ಲಿದ್ದರೂ ಸಹ ಒಂದನ್ನೊಂದು ಕಾಮುಕ ಭಾವನೆಯಿಂದ ನೋಡುವದಿಲ್ಲ. ಇದೇ ದೇವರ ನಿಯಮ. ಇದರಿಂದಲೇ ಅವುಗಳಲ್ಲಿ ಗಂಡುಹೆಣ್ಣುಗಳ ಕ್ಷೇತ್ರಗಳು ಪ್ರತ್ಯೇಕವಿಲ್ಲ.

'ಮದುವೆಯಾದರೆ ಸ್ತ್ರೀ ಸೌಭಾಗ್ಯವತಿಯಾಗುತ್ತಾಳೆ. ಅವಳಿಗೆ ಸೌಭಾಗ್ಯವನ್ನೊದಗಿಸುವದು ಪುರುಷನ ದುರ್ಭಾಗ್ಯ'ವೆಂಬ ದೊಡ್ಡದೊಂದು ಮಾತು ಆಡಿದ್ದಾರೆ ಧರ್ಮಾಧಿಕಾರಿಗಳು. ಆದರೆ ಹೀಗಾಗಲು ಕಾರಣರಾರು? ಕೃತ್ರಿಮ ಸಮಾಜ ರಚನೆಯಲ್ಲವೇ? ನಿಜವಾಗಿ ಹೆಣ್ಣು ತನ್ನ ಜೀವನ ನಿರ್ವಹಣೆಗಾಗಿ ಪುರುಷನನ್ನವಲಂಬಿಸಬೇಕಾದ ಪ್ರಸಂಗವಿರದಿದ್ದಲ್ಲಿ ಈ ಮಾತನ್ನಾಡಲು ಯಾವ ಗಂಡಸರಿಗೂ ಧೈರ್ಯವಿರುತ್ತಿರಲಿಲ್ಲ. ಆದರೆ ಆ ದುರ್ಭಾಗ್ಯವನ್ನು ಮೈಮೇಲೆ ಹಾಕಿಕೊಳ್ಳಲು ಪುರುಷರೇಕೆ ಇಷ್ಟು ಹಾತೊರೆಯುತ್ತಿರಬಹುದು! ತಿಳಿಯದಾಗಿದೆ. ಹಸಿವು ತೃಷಿ ಇಲ್ಲದಾಗ ಸಹ ಅನ್ನನೀರು ಸೇವಿಸದಿರುವದರಿಂದಲೇ ಸಹಜೀವನವು ಇಲ್ಲಿ ಶಕ್ಯವಿದೆ ಎಂದಿದ್ದಾರೆ. ಇದೇನೋ ನಿಜವಿದೆ. ಆದರೆ ಮನುಷ್ಯನ ಕಾಮವಾಸನೆಯು ಕೇವಲ ಶರೀರಧರ್ಮವಲ್ಲವೆಂಬದು ಯಾವ ವಿಚಾರವೋ ತಿಳಿಯದಾಗಿದೆ. ಆದರೆ ಈಗಿನ ನಮ್ಮ ವಿಲಾಸೀ ವಸ್ತುಗಳು ಹೆಚ್ಚಾಗಿ ಬೆಳೆದದ್ದರಿಂದ ಈ ಕಾಮವಾಸನೆಯಾದರೂ ಒಂದು ವಿಚಿತ್ರ ಹಾದಿಯಿಂದ ನಡೆದು ಜಗತ್ತು ಒಂದು ಕ್ರೂರಹಾದಿಯತ್ತ ಹೊರಟಿದೆ. ಸ್ತ್ರೀಪುರುಷರಿಬ್ಬರ ದೃಷ್ಟಿಯಲ್ಲೂ ಕೃತ್ರಿಮತೆಯ ನೋಟವೇ ಹೊರತು ಸಹಜತೆಯು ಬೆಳಕಿಲ್ಲದಾಗಿದೆ. ಇದರಿಂದಲೇ ಸ್ತ್ರೀಯು ಮಂತ್ರಿ, ಗವ್ಹರ್ನರ, ಸೇನಾಧಿಪತಿಗಳಾದರೂ ಸಹ ಅವರನ್ನು ಯಾರೂ ಎತ್ತಿಕೊಂಡೊಯ್ಯಲಾರರೆಂಬ ಧೈರ್ಯದಿಂದಿರಲು ಸಾಧ್ಯವಿಲ್ಲದಾಗಿದೆ. ಆದರೆ ಈ ವಾತಾವರಣವನ್ನು ಪರಿವರ್ತಿಸಲು ಸ್ತ್ರೀಯೇ ತನ್ನ ಮನೋಬಲ ಬೆಳೆಸಿ, ಭಯವನ್ನು ದೂರೀಕರಿಸಿದಲ್ಲಿ ಸಾಧ್ಯವಿದೆ. ಅವರಿಗೆ ಆ ಧೈರ್ಯ ಬರುವವರೆಗೂ, ಅವರು ತಮ್ಮ ವ್ಯಕ್ತಿತ್ವವನ್ನು ನಂಬಿ ಧ್ಯೇಯ ಸಾಧನೆಯತ್ತ ಲಕ್ಷಪೂರೈಸುವವರೆಗೂ ಸಮಾನತೆಯನ್ನು ಕುರಿತು ಕಾಯ್ದೆ ಕಾನೂನುಗಳನ್ನು ಮಾಡಿಯೂ ಪ್ರಯೋಜನವಿಲ್ಲವೆಂದು ಹೇಳಿದ್ದಾದಲ್ಲಿ ಸ್ತ್ರೀಯು ಎಂದೂ ಮುಂದೆ ಬಿದ್ದು ವಿಚಾರಮಾಡಲಾರಳು. ತಲೆಯ ಮೇಲೆ ಹೊಣೆಬಿತ್ತೆಂದರೆ ಧ್ಯೇಯಸಾಧನೆಯ ಕಡೆಗೆ ತನ್ನಿಂದ ತಾನೆ, ಪರಿಸ್ಥಿತಿಯು ಒಯ್ಯುವದು. ಸ್ತ್ರೀಗಿಂತ ತಾನು ಶ್ರೇಷ್ಠನೆಂದು ತನ್ನ ಭುಜಬಲವನ್ನು ತೋರಿಸುವದಾದಲ್ಲಿ, ಈ ರೀತಿ ಜ್ಞಾನ ಬುದ್ಧಿಗಳಿಂದ ರಚಿತವಾದ ಜಗತ್ತಿನಲ್ಲಿ ಅವನೊಬ್ಬ ನರಪಶುವೆನಿಸಲು ಯಾವ ಅಭ್ಯಂತರವೂ ಇಲ್ಲ.

ಸ್ತ್ರೀಯರಿಗೆ ಕೇವಲ ಮಕ್ಕಳಮೇಲಿಂದಲೇ ಅವರ ಯೋಗ್ಯತೆ ಕಟ್ಟುವದು ವಿಷಾದದಸಂಗತಿ. ಮಾತೆಯು ಹೇಡಿಯಾಗಿದ್ದರೂ ಸಹ ಪುತ್ರರು ವೀರರಾಗಬಹುದು ಅಥವಾ ಇದರ ವಿರುದ್ಧ ಪರಿಸ್ಥಿತಿಯೂ ಸಹ ತಾಯಿ ಮಕ್ಕಳಲ್ಲಿರಬಹುದು. ಆದರೆ ಹೆಣ್ಣು 'ವೀರಮಾತೆ' ಯಾಗುವದು ಕೇವಲ ತನ್ನ ಹೆಣ್ತನದಿಂದಲ್ಲ. ಜಗತ್ತಿನ ತಾಯ್ತನದಿಂದ.ಕೇವಲ ತನ್ನ ಮಕ್ಕಳನ್ನು ಮಾತ್ರ ವೀರರನ್ನಾಗಿಮಾಡುವ ಆಕುಂಚಿತ ದೃಷ್ಟಿ ಅವಳಲ್ಲಿರದೆ ಇಡೀ ಜಗತ್ತಿನ ಜನಾಂಗವನ್ನೇ ತನ್ನ ತಾಯ್ತನದ ಮಮತೆ ಆದರ, ಸೇವೆ, ಬುದ್ಧಿಚಾತುರ್ಯಗಳಿಂದ ವೀರರನ್ನಾಗಿ ಮಾಡುವ ಹೊಣೆ ಅವಳಲ್ಲಿದೆ. ಗಂಡಸು ನಿಸರ್ಗತಃ ಹೆಣ್ಣಿಗಿಂತ ಗಡಸು ಸ್ವಭಾವದವನಾದ್ದರಿಂದ ತಾಯಿಗಿರುವಷ್ಟು ಮಮತೆ ಅವನಲ್ಲಿ ಹುಟ್ಟಲು ಸಾಧ್ಯವಿಲ್ಲ. ಅವನು ಇತರರನ್ನು ನೋಡುವದೃಷ್ಟಿಯು ಹೆಣ್ಣಿಗಿಂತ ಬೇರೆಯೇ ಇರುತ್ತದೆ. ಮೇಲಾಗಿ ಮಕ್ಕಳಿಗೆ ತಂದೆಗಿಂತ ತಾಯಿಯ ಸಂಪರ್ಕವೇ ಹೆಚ್ಚು. ಮಕ್ಕಳಿಂದ ವೀರಮಾತೆಯಾಗುವರೆಂಬ ಮಾತು ಕೇವಲ ಕೆಲವೊಂದು ಕಡೆ ಇರಬಹುದು. ಆದರೆ ಧರ್ಮಾಧಿಕಾರಿಗಳಿಗೆ 'ವೀರಮಾತೆ' ಈ ಪದದ ಅರ್ಥವು. "ವೀರರಮಾತೆ" ಯಾಗಿರದೆ "ವೀರತ್ವದಿಂದ ತುಂಬಿದ ಮಾತೆ" ಎಂದು ಹೊಳೆಯದಿದ್ದುದು ವಿಷಾದವೇ ಸರಿ. ಹಾಗೂ ಇದಕ್ಕೆ ನಮ್ಮ ಹೆಣ್ಮಕ್ಕಳ ಸದ್ಯದ ಅಜ್ಞಾನದ ಪರಿಸ್ಥಿತಿಯೂ ಕಾರಣವಿರಬಹುದು. ಧರ್ಮಾಧಿಕಾರಿಗಳು ತೋರಿಸಿದ ದೊಡ್ಡಸ್ತಿಕೆಯ ಸಮತೆಯ ಆಮಿಷಕ್ಕೆ ಬಲಿಬೀಳದೆ, ನಿಜವಾಗಿ ಮಹಿಳೆಯರು ವೀರತ್ವವುಳ್ಳ ಮಾತೆಯರಾದಲ್ಲಿ ಅವರಿಗೆ ಹೆಣ್ತನದಲ್ಲಿ ಯಾವರೀತಿಯಿಂದಲೂ ಕುಂದುಬರುವದಿಲ್ಲ. ಈ ರೀತಿ ನಡೆದುಕೊಳ್ಳುವದೇ ಮೂಲಭೂತ ಸಮಸ್ಯೆ. ಧರ್ಮಾಧಿಕಾರಿಗಳು ಹಿಂದಿನ ಜೀವಿತದ ಬೆಲೆಯಮೇಲಿಂದ ಅಂದರೆ ಸನ್ಯಾಸಿ ತನದ ಯೋಗ್ಯತೆಯ ಮೇಲಿಂದ ಈಗಿನ ಯುಗದಲ್ಲಿ ಸಹ ವಿಚಾರಮಾಡಿದ್ದಾರೆ. ಆದರೆ ಯಾವದೇ ವ್ಯಕ್ತಿಗಾದರೂ ತನ್ನ ವ್ಯಕ್ತಿತ್ವದಿಂದ ಯೋಗ್ಯತೆ ಬರುವದೇ ಹೊರತು ಕೃತ್ರಿಮ ಸಮಾಜದ, ಜೀವಿತದ ರೂಢಿಯಿಂದಲ್ಲ. ವಿನೋಬಾರವರು ಬ್ರಹ್ಮಚರ್ಯದಿಂದಿದ್ದು, ಮ. ಗಾಂಧಿಯವರು ಸಂಸಾರದಲ್ಲಿದ್ದು ಸಹ ತಮ್ಮ ನಿಷ್ಕಾಮ ತ್ಯಾಗಪೂರ್ವಕ ಕೃತಿಯಿಂದ ಯೋಗ್ಯತೆ ಗಳಿಸಿದ್ದಾರೆ. ಆದರಂತೆ ಹೆಣ್ಮಕ್ಕಳಾದರೂ ಸಹ ತನ್ನ ಮನೆ ಮಕ್ಕಳು ಸಂಸಾರದಲ್ಲಿದ್ದು ಸಮಾಜಕಾರ್ಯಮಾಡಿ ಯೋಗ್ಯತೆಯುಳ್ಳವರಾಗಬಲ್ಲರಷ್ಟೇ ಅಲ್ಲ, ತಮ್ಮ ಶಕ್ತಿಯಿಂದ ಯುಕ್ತಿಯಿಂದ ಪುರುಷರಿಗೂ ಸಹ ಜಗತ್ತಿನಲ್ಲಿ ಬೆಳಕು ತೋರಿಸಿಕೊಡಬಲ್ಲರು !

---

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿದ್ದರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯುವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯುವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ **ಧಾರವಾಡ.**

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..........................................................

..........................................................................................

ಪೂರ್ಣ ವಿಳಾಸ..........................................................................

(ಮನೆ ನಂಬರು ಸಹಿತ) ..............................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ $\frac{\text{ನಾ}}{\text{ಳಾ}}$ ಗಿದ್ದೇನೆ.

ತಾರೀಖು ................................ ಸಹಿ -

## ಅಕ್ಕನ ಪೆಟ್ಟಿಗೆಯ ಹೊಸ ಸದಸ್ಯರು.

(೧) ಕು. ಸರಸ್ವತಿ (ಗ್ರೇಸ) ಭಾಸ್ಕರ ವಿಜಾಪೂರ ವ. ೭ ಕನ್ನಡ ೩ನೇ ವರ್ಗ. ವರ್ಗದಲ್ಲಿ ಎಲ್ಲರಿಗಿಂತ ಮೊದಲು ಇವಳನ್ನು ಹಿಡಿಯಬೇಕಾದರೆ ಅಕ್ಕನಿಗೆ ಸಾಕಾಗಿ ಹೋಗುತ್ತದೆಯೆಂದು ಅವರಕ್ಕನ ತಕರಾರಂತೆ.

(೨) ಕು. ಕಪಿಲಾ ಪೈ ಧಾರವಾಡ ವ. ೯ ಕನ್ನಡ ೪ನೇ ವರ್ಗ. ಓದಿಗಿಂತ ಕುಂಟು ಚೇಷ್ಟೆಯಲ್ಲಿ ಬಲು ಇಷ್ಟ.

(೩) ಕು. ಶೈಲಜಾ ದಿವಾಣ ಧಾರವಾಡ ವ. ೧೦ ಮೊದಲು ಮರಾಠಿ ೪ನೇ ವರ್ಗದಲ್ಲಿದ್ದರೂ ಸಹ ಈಗ ಕನ್ನಡ ಶಾಲೆಗೆ ಅವಳನ್ನು ಮನೆಯ ಹಿರಿಯರು ಹಾಕಿದ್ದಾರಂತೆ. ಕನ್ನಡ ಸಾಧಾರಣ ಓದಲು ಬರುವದರಿಂದ 'ಅಕ್ಕನ ಪೆಟ್ಟಿಗೆ'ಗೆ ಸದಸ್ಯಳಾಗುವ ಸಾಹಸ ಮಾಡಿದ್ದಾಳಂತೆ.

(೪) ಕು. ಹೇಮಲತಾ ಭಾಸ್ಕರ ವಿಜಾಪೂರ ವ. ೧೧ ೯ನೇ ಕ್ಲಾಸಿನಲ್ಲಿದ್ದಾಳೆ. ಮನೆಗೆಲಸಗಳಲ್ಲಿಯೂ, ಶಾಲೆಯಲ್ಲಿಯೂ ಒಳ್ಳೇ ಜಾಣೆಯೆಂದು ಅವರ ತಾಯಿ ಹೇಳುತ್ತಾರೆ.

(೫) ಕು. ಪ್ರೇಮಾ ಕೋಚೀಕರ ಧಾರವಾಡ ವ. ೮. ಕನ್ನಡ ೨ನೇ ವರ್ಗ ಪಾಠಕ್ಕಿಂತ ಆಟದ ಕಡೆ ಹೆಚ್ಚು ಆಸಕ್ತಿಯಂತೆ.

---

## ಸದಸ್ಯರ ಪತ್ರಗಳಿಗೆ ಉತ್ತರ.

(೧) ಪ್ರಿಯ ತಂಗಿ ಗಿರಿಜಾ,

ಹೋದಸಾರೆ ನಿನ್ನ ಹೆಸರು ಅಚ್ಚಿನಲ್ಲಿ ತಪ್ಪಿದೆ. ಅದಕ್ಕಾಗಿ ಏನೂ ತಿಳಿಯಬೇಡ. ನೀನು ಕಳುಹಿದ ಒಗಟಿನ ಉತ್ತರ ೨ನೇ ೩ನೇದು ಸರಿ ಇವೆ ಆದರೆ ಒಂದನೆಯದನ್ನು ಛಾಪಿಸುವಲ್ಲೇ ಅಚ್ಚಿನ ದೋಷವಾಗಿದ್ದರಿಂದ ಅದು ಸರಿಯಾಗಿಲ್ಲ. ನಿನ್ನ ಕವನ ಹಾಗೂ ಒಗಟುಗಳು ಬಂದು ಸೇರಿವೆ. ಈ ಸಾರೆ ಸ್ಥಳಾಭಾವವಿದ್ದ ಮೂಲಕ ಮುಂದಿನ ಸಾರೆ ಪ್ರಕಟಿಸುವೆ. ಇತಿ ನಿನ್ನ ಒಲುಮೆಯ ಅಕ್ಕ.

(೨) ಪ್ರಿಯ ತಮ್ಮ ವಿಶಾಲನಿಗೆ,

ನಿನ್ನೋಲೆ, ಹುಚ್ಚೆಪ್ಪ, ಒಗಟುಗಳೂ ಹಾಗೂ ದೀವಳಿಗೆಯ ಆದರದ ಶುಭಾಶಯಗಳೊಂದಿಗೆ ಕೂಡಿದ ವೀರ ಸುಭಾಷರ ಭಾವಚಿತ್ರವೂ ತಲ್ಪಿ ಹಿಡಿಸಲಾರದಷ್ಟು ಆನಂದವಾಯ್ತು. ಅಕ್ಕನ ಪೆಟ್ಟಿಗೆಯ ಬಗ್ಗೆ ನಿನ್ನ ಕೆಲವು ಸೂಚನೆಗಳು ಒಪ್ಪಿಗೆ ಇದ್ದರೂ ಸಹ ನಮ್ಮ ಸಂಪಾದಕ ಮಂಡಳಕ್ಕೆ ಒಪ್ಪಿಗೆಯಾಗುವ ವರೆಗೂ ಕಾಯಬೇಕಾಗಿದೆ. ನಿನ್ನ ಕೆಲವು ವಿಷಯಗಳನ್ನು ಈಸಾರೆ ಪ್ರಕಟಿಸ

ಲಾಗಿದೆ. ನೀನೊಮ್ಮೆ ನಮ್ಮ ಕಾರ್ಯಾಲಯಕ್ಕೆ ಬಂದು ಭೆಟ್ಟಿಯಾಗುವಿಯಾ? ಬರುವಾಗ ನಿನ್ನ ಉಳಿದ ಹುಚ್ಚಿದ್ದನ ಹುಚ್ಚುಮಾತುಗಳನ್ನು ತರುವೆಯಾ? ನಿನ್ನನ್ನು ಇನ್ನುಮೇಲೆ ವಿಶಾಲನೆಂದೇ ಕರೆಯುತ್ತೇನೆ. ಆಯ್ತು ಸಮಾಧಾನ.

ಇತಿ ನಿನ್ನ ಪ್ರೀತಿಯ ಅಕ್ಕ.

---

**ಮಕ್ಕಳ ಪುಟದಲ್ಲಿ ಹೋದಸಾರೆ ತಪ್ಪಿದ ಕೆಲವು ಸದಸ್ಯರ ಹೆಸರುಗಳ ತಿದ್ದು ಪಡಿ.**

(೧) ಗಿರಿಜಾ ಬೋಳನ್ ಆದರಂತೆ ಸೀತಾ ಬೋಳನ್ ಮತ್ತು ಶಿವಶಂಕರ ಕಣಾಜನವರ ಎಂದು.

**(೨) ಒಗಗಟಿನ ತಿದ್ದುಪಡಿ.**

ಮೊದಲನೇ ಒಗಟಿನಲ್ಲಿ ೩+೪ನೇ ಅಕ್ಷರಗಳನ್ನು ಕೂಡಿಸಿದರೆ 'ಸೂರ್ಯ' ಎಂದಿದ್ದದ್ದನ್ನು 'ಮಾತೆ' ಎಂದು ತಿದ್ದಿಕೊಳ್ಳಬೇಕು.

ಹೋದಸಾರೆಯ ಸಂಚಿಕೆಯಲ್ಲಿ ಶಿವಶಂಕರ ಬ ಕಣಾಜನವರ ಇವನ ಪರಿಚಯ ಮಾಡಿಕೊಡುವಾಗ ಅವನು ೪ನೇ ವರ್ಗದಲ್ಲೆಂದು ಮಾತ್ರ ಬರೆಯಲಾಗಿದೆ. ಅದನ್ನು ಇಂಗ್ಲೀಷ ನಾಲ್ಕನೇ ವರ್ಗದಲ್ಲಿ ಎಂದು ತಿದ್ದಿಕೊಳ್ಳಬೇಕು.

# ತಿಮ್ಮನ ಬುದ್ಧಿ

**ಲೇಖಕ :— ಎಸ್. ಟಿ. ಪಾಟೀಲ.**

ಒಂದಾನೊಂದು ಊರಿನಲ್ಲಿ ತಿಮ್ಮನೆಂಬ ಹುಡಗನಿದ್ದ. ಆತನ ಬುದ್ಧಿ ಬಲು ಮಂಕು. ಅವನು ತನ್ನ ತಾಯಿ, ಮತ್ತು ತನ್ನ ಅಜ್ಜಿಯಕೂಡ ಒಂದು ಚಿಕ್ಕ ಮನೆಯಲ್ಲಿ ವಾಸಿಸುತ್ತಿದ್ದ. ಆತನು ಬಹಳೇ ಸೋಮಾರಿಯೂ ಆಗಿದ್ದನು. ಆದ್ದರಿಂದ ಆತನು ಶಾಲೆಗೆ ಹೋಗುತ್ತಿದ್ದಿಲ್ಲ ಮತ್ತು ಎಲ್ಲಿಯಾದರೂ ಕೆಲಸವನ್ನು ಮಾಡಲಿಕ್ಕೂ ಹೋಗುತ್ತಿದ್ದಿಲ್ಲ. ಊಟಮಾಡುವದು ಸುಮ್ಮನೆ ಕೂಡ್ರುವದು, ಮಲಗುವದು, ಇಷ್ಟೇ ಆತನ ಕೆಲಸಗಳಾಗಿದ್ದವು.

ತಿಮ್ಮನ ಓಣಿಯಲ್ಲಿ ಒಂದು ಶ್ರೀಮಂತರ ಮನೆಇತ್ತು. ಅವರು ಆ ಗರ್ಭ ಶ್ರೀಮಂತರಾಗಿದ್ದರು. ಅವರ ಶ್ರೀಮಂತಿಕೆಯನ್ನು ನೋಡಿ ತಿಮ್ಮನ ಬಾಯಲ್ಲಿ ನೀರೊಡೆಯುತ್ತಿತ್ತು. ನನಗೂ ಅಂಥ ಶ್ರೀಮಂತಿಕೆ ಇದ್ದಿದ್ದರೆ ನಾನು ಏನು ಮಾಡುತ್ತಿದ್ದೆ ? ಎಂದು ತಿಮ್ಮನು ಆಗಾಗ್ಗೆ ವಿಚಾರ ಮಾಡುತ್ತಿದ್ದನು. ಆ ಮನೆಯ ಹುಡುಗರು ಹಾಕಿಕೊಳ್ಳುತ್ತಿದ್ದ ಚೆಂದ ಚೆಂದ ಅರಿವೆಗಳನ್ನು ಮತ್ತು ಅವರುದಿನಾಲು ಶಾಲೆಗೆ ಮೋಟಾರಿನಲ್ಲಿ ಹೋಗುತ್ತಿದ್ದುದನ್ನು ಮತ್ತು ಆ ಮನೆಯ ಹೆಣ್ಣುಮಕ್ಕಳು ಹಾಕುತ್ತಿದ್ದ ಬೆಲೆಯುಳ್ಳ ಆಭರಣಗಳನ್ನು ನೋಡಿ ತಿಮ್ಮನು ತನ್ನ ಅಲ್ಪ ಬುದ್ಧಿಗೆ ಹೊಳೆದ ಮಾತ್ರಕ್ಕೆ ತಾನೂ ಶ್ರೀಮಂತನಾಗಲು ವಿಚಾರ ಮಾಡುತ್ತಲೇ ಇರುತ್ತಿದ್ದನು.

ಒಂದು ದಿನ ಎಲ್ಲರ ಊಟ ಬೇಗನೆ ಆಗಿತ್ತು. ಆ ದಿನ ತಿಮ್ಮನ ತಾಯಿ ಕೆಲಸಕ್ಕೆ ಹೋಗಿದ್ದಿಲ್ಲವಾದ್ದರಿಂದ ಮನೆಯಲ್ಲಿಯೇ ಇದ್ದಳು. ತಿಮ್ಮನ ಅಜ್ಜಿ ಮತ್ತು ತಿಮ್ಮನ ತಾಯಿ ಪಡಸಾಲೆಯಲ್ಲಿ ಮಾತನಾಡುತ್ತ ಕುಳಿತುಕೊಂಡಿದ್ದರು. ಆ ಮಾತು ಈ ಮಾತು ಆಡುತ್ತ ಯಾವದೋ ಕಾರಣದಿಂದ ತಿಮ್ಮನ ಓಣಿಯಲ್ಲಿದ್ದ ಶ್ರೀಮಂತರ ವಿಷಯವಾಗಿ ಮಾತು ಹೊರಟಿತು. ಅವರ ಶ್ರೀಮಂತಿಕೆಯನ್ನು ನೋಡಿ " ಅವರ ಮನೆಯಲ್ಲಿ ಲಕ್ಷ್ಮೀದೇವಿ ಕಾಲು ಮುರಿದುಕೊಂಡು ಬಿದ್ದಾಳೆ ಆದ್ದರಿಂದಲೇ ಅವರು ಶ್ರೀಮಂತರಾಗಿರುವರು " ಎಂದು ತಿಮ್ಮನ ತಾಯಿ ಅಂದಳು. ಅದನ್ನು ಅಲ್ಲಿಯೇ ಕುಳಿತು ತಿಮ್ಮನು ಕೇಳಿದನು.

ಅಂದು ಆ ಊರಿನ ಜಾತ್ರೆ. ಜನರು ಸಡಗರದಿಂದ ಜಾತ್ರೆಗೆ ನಡೆದಿದ್ದರು. ಜಾತ್ರೆಗೆ ತಿಮ್ಮನೂ ತನ್ನ ಅಜ್ಜಿಯ ಕೂಡ ಹೋಗಿದ್ದನು. ಅಲ್ಲಿ ತಿಮ್ಮನ ಅಜ್ಜಿಯು ಬಹು ಬೆಲೆಯುಳ್ಳ ಆಭರಣಗಳಿಂದಲೂ, ಸುಸಂಸ್ಕೃತಿಯಿಂದಲೂ ಮತ್ತು ರೂಪದಿಂದಲೂ ಒಪ್ಪುತ್ತಿದ್ದ ಒಬ್ಬ ಸ್ತ್ರೀಯನ್ನು ನೋಡಿ ಮೂಗಿನಮೇಲೆ ಕೈಯಿಟ್ಟು ನಮ್ಮವ್ವಾ ಲಕ್ಷ್ಮೀದೇವಿಯಾಗಿದ್ದಾಳೆ ಎಂದು ನುಡಿದಳು. ಅದನ್ನು ತಿಮ್ಮನು

ಕೇಳಿದನು. ಒಮ್ಮೆ ತಿಮ್ಮನ ಮನೆಯಲ್ಲಿ ಹಣದ ಅಡಚಣೆ ಬಹಳೇ ಆಯಿತು. ಅದನ್ನು ನೋಡಿ ತಿಮ್ಮನು ಸೋಮಾರಿಯಾಗಿದ್ದರೂ ಹೇಗೆ ಹಣಸಂಪಾದಿಸ ಬೇಕೆಂದು ವಿಚಾರಿಸಹತ್ತಿದನು. ಆಗ ಒಮ್ಮೆಲೇ ಅವನಿಗೆ ಒಂದು ವಿಚಾರ ಹೊಳೆಯಿತು. ಜಾತ್ರೆಯಲ್ಲಿ ಅಜ್ಜಿಯು ಯಾರಿಗೆ ಲಕ್ಷ್ಮೀದೇವಿಯಾಗಿದ್ದಾಳೆ ಎಂದು ಅಂದಿದ್ದಳೊ ಅವರ ಮನೆಗೆ ಹೋಗಿ ತಿಮ್ಮನು ಅಜ್ಜಿಯು ನಿಮ್ಮನ್ನು ಯಾವದೋ ಒಂದು ಕೆಲಸಕ್ಕೆ ನಿಮ್ಮ ಸಲಹೆಯನ್ನು ಕೇಳಲು ಕರೆಯುತ್ತಾರೆ. ಅವರೇ ಬರುತ್ತಿದ್ದರು. ಆದರೆ ಅವರ ಮೈಯ್ಯಲ್ಲಿ ನೆಟ್ಟಗೆ ಇಲ್ಲ ಆದ್ದರಿಂದ ನಿಮ್ಮನ್ನೇ ಕರಕೊಂಡು ಬರಲು ಹೇಳಿದರು. ಅದನ್ನು ಕೇಳಿ ಆ ಹೆಣ್ಣು ಮಗಳು ತಿಮ್ಮನ ಕೂಡ ಅವನ ಮನೆಗೆ ಹೋದಳು. ಬಾಗಿಲಲ್ಲಿ ಕಾಲಿಡುತ್ತಲೇ ಮೊದಲೇ ಸಿದ್ಧಮಾಡಿಟ್ಟ ಬಡಿಗೆಯಿಂದ ಅವಳ ಕಾಲಿಗೆಹೊಡೆದ. ಆ ಹೆಣ್ಣುಮಗಳ ಆಕ್ರೋಶದಿಂದ ಸುತ್ತಮುತ್ತಲಿನವರು ಓಡಿಬಂದು ಏನು ಮಾಡಿದೆ ಎಂದು ಕೇಳಿದರು. ಯಾರ ಮನೆಯಲ್ಲಿ ಲಕ್ಷ್ಮೀದೇವಿ ಕಾಲು ಮುರಿದುಕೊಂಡು ಬಿದ್ದಿರುತ್ತಾಳೋ ಅವರು ಶ್ರೀಮಂತರಿರುತ್ತಾರೆ ಎಂದು ನನ್ನ ತಾಯಿ ಅಂದಿದ್ದಳು ಮತ್ತು ನನ್ನ ಅಜ್ಜಿಯು ಇವರು ಲಕ್ಷ್ಮೀದೇವಿಯಾಗಿದ್ದಾಳೆ ಎಂದು ಅಂದಿದ್ದರು ಇವರ ಕಾಲು ಮುರಿದರೆ ನಾನು ಶ್ರೀಮಂತನಾಗುವೆನು ಎಂದು ತಿಳಿದು ಮುರಿದೆ ಅಂದನು. ಕೂಡಲೇ ಅಜ್ಜಿಯು ಆ ಹೆಣ್ಣು ಮಗಳಿಗೆ ಸಮಾಧಾನ ಹೇಳಿ, ತಿಮ್ಮನಿಗೆ 'ತಿಮ್ಮಾ ಹಾಗಲ್ಲಪಾ ಎಂದು ತನ್ನ ಮಾತಿನ ಅರ್ಥವನ್ನು ತಿಳಿಸಿಹೇಳಿದರು' ಆಗ ತಿಮ್ಮನು ತನ್ನ ತಪ್ಪು ಒಪ್ಪಿಕೊಂಡು ಕ್ಷಮೆಮಾಡುವದಕ್ಕೆ 'ಲಕ್ಷ್ಮೀದೇವಿಯ' ಕಾಲುಬಿದ್ದನು.



## ನಗೆ ಹನಿ

ವಿದ್ಯಾರ್ಥಿ:— ಇದೇನರೀ ! ಮಾಸ್ತರ, ನನ್ನ ನೋಟಬುಕ್ಕಿನೊಳಗೆ ಕೆಳಗೆ ಏನೋ ಬರಿದೀರಲ್ಲಾ.

ಮಾಸ್ತರ:— "ಅಕ್ಷರಗಳು ಚನ್ನಾಗಿಲ್ಲಾ" ಅಂತ.

ವಿದ್ಯಾರ್ಥಿ:— ಹೀಗೋ ! ಅದೇನೋ ನೀವು ಬರೆದದ್ದು ನನಗೆ ತಿಳಿಯಲಿಲ್ಲ.

—ಸುಮಿತ್ರಾ ಭೀಮರಾವ ದೇಷಾಂಡೆ.

ಗುರುಗಳು:— ತಾಜಮಹಾಲ ಎಲ್ಲಿದೆ ? ಮತ್ತು ಏತಕ್ಕೆ ಪ್ರಸಿದ್ಧ ?

ಶಿಷ್ಯ:— ಮುಂಬಯಿಯಲ್ಲಿದ್ದು ಚಹಾದ ಸಲುವಾಗಿ ಪ್ರಸಿದ್ಧವಿದೆ.

ಒಕ್ಕಲಿಗ:— ಹಲ್ಯಾ ಹಲ, ರಾಯರಾಽಽ ಸ್ವಲ್ಪ ಹೋಳಾಗರೀ

ರಾಯರು:— (ಸಿಟ್ಟಿನಿಂದ) ಯಾಕೋ ಮಗನಾಽಽ ನಾನೇನು ಹಣ್ಣೇನೋ ಹೋಳಾಗಾಽಕ ?

—ವಿಶಾಲ ಧಾರವಾಡ.

## ಒಗಟುಗಳು

(೧) ನಾನು ಮೂರು ಅಕ್ಷರದ ಒಂದು ಹೆಸರು. ಅಕ್ಷರಗಳು ೧+೨= ಶಿವ ಎಂದೂ ಅಕ್ಷರಗಳು ೨+೩ = ಸೂರ್ಯನೆಂದೂ ಅಕ್ಷರಗಳು ೧+೩ = ತುಪ್ಪವೆಂದೂ ಆಗುವೆನು. ಆದರೆ ನಾನಾರು ?

—ಸುಮಿತ್ರಾ ಭೀ. ದೇಶಪಾಂಡೆ.

(೨) ನಾಲ್ಕಕ್ಷರದ ನನ್ನ ಹೆಸರಿನ ೩+೪ = ಕೈ, ೪+೨ ನೇ ಅಕ್ಷರ = ಗೋದಿಯ ಸಜ್ಜಿಗೆ (ತರಿ) ೨+೪ ನೇ = ೭ ದಿನಗಳು, ೨+೧ ನೇ = ವಾದಿಸುವವ ೩+೧= ಕಳವು, ೧+೨+೩+೪ = ಸೂರ್ಯ. ಈ ನನ್ನ ಹೆಸರಿನಿಂದ ನಾನೊಬ್ಬ ಕನ್ನಡಿಗನಾದ ಗವ್ಹರ್ನರ್. ನಾನಾರು ?

† † † † †

### ಹೋದ ತಿಂಗಳ ಒಗಟುಗಳ ಉತ್ತರಗಳು

(೧) ವೀರಮಾತೆ ( ಈ ಒಗಟು ಅಚ್ಚಿನಲ್ಲಿ ತಪ್ಪಿದ್ದರಿಂದ ಈ ಸಾರೆ ತಪ್ಪೋಲೆಯಲ್ಲಿ ತಿದ್ದಲಾಗಿದೆ )

(೨) ಕೇಶವ (೩) ನರಹರಿ.

ಸರಿಯಾಗಿ ಉತ್ತರಿಸಿದವರು :— ಶ್ರೀ. ಗಿರಿಜಾ ಯಾದಪ್ಪನವರು.

(೨) ಕು. ಗಿರಿಜಾ ಬೋಳನ್.



### ಪುಟ್ಟ ಗಿರಿಜಳು ಅಕ್ಕನ ಪೆಟ್ಟಿಗೆಗೆ ತಾನೇ ರಚಿಸಿದ ಒಂದು ಹಾಡು ಕಳುಹಿದ್ದಾಳೆ ನೋಡಿರಿ

ಅಜ್ಜಿಯು ಕಳುಹಿದ ಪೆಟ್ಟಿಗೆಯಲ್ಲಿ
ಲಾಡೂ ಪೇಣಿಗಳ್ ತುಂಬಿತ್ತು.
ಅಜ್ಜನು ಕಳುಹಿದ ಪೆಟ್ಟಿಗೆಯಲ್ಲಿ
ಸುವರ್ಣ ಮಯನುಡಿ ತುಂಬಿತ್ತು
ಅಣ್ಣನು ಕಳುಹಿದ ಪೆಟ್ಟಿಗೆಯಲ್ಲಿ
ಮಧುರ ಕವನಗಳ್ ತುಂಬಿತ್ತು
‘ ಅಕ್ಕನು ಕಳುಹಿದ ಪೆಟ್ಟಿಗೆಯಲ್ಲಿ
ಹಾಸ್ಯವಿನೋದಗಳ್ ತುಂಬಿತ್ತು.

ಪ್ರಿಯ ತಮ್ಮ ತಂಗಿಯರಿರಾ, ಇನ್ನೂ ಉಳಿದ ( ನೀವು ಕಳುಹಿದ) ಲೇಖಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸುವೆವು.

ಇತಿ ನಿಮ್ಮೆಲ್ಲರ
ಹಿರಿಯಕ್ಕ.

ತ್ಯಾಗ, ಸಹಿಷ್ಣುತೆಗಳ ಪ್ರತಿ ಮೂರ್ತಿ ಸ್ತ್ರೀ ಎಂದು ಅವಳನ್ನು ಹೊಗಳಿ, ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿಯೇ ಅವಳನ್ನು ಬಚ್ಚಿಡುವದಕ್ಕಿಂತ, ಹೊರಗೂ ಬಂದು ಅವಳು ಕಾರ್ಯ ಮಾಡಲು ಅನುವು ಮಾಡಿಕೊಟ್ಟರೆ ಅವಳ ಈ ಗುಣಗಳ ಯೋಗ್ಯ ಲಾಭ ಇನ್ನಿತರರಿಗೂ ಆದೀತು.

ಬರಲಿರುವ ಧಾರವಾಡ ನಗರ ಸಭೆಯ ಚುನಾವಣೆಯಲ್ಲಿ ಮಹಿಳೆಯರು ಹೆಚ್ಚು ಸಂಖ್ಯೆಯಲ್ಲಿ ಉಮೇದುವಾರರಾಗಿ ನಿಂತು ಹೋರಾಡಿ (ಹೋರಾಡ ಬೇಕಾದ ಪರಿಸ್ಥಿತಿ ಇದ್ದದರಿಂದ), ಆರಿಸಿ ಬರುವದಾದರೆ, ನಗರ ಸಭೆಯ ಆಡಳಿತ ಮಂಡಲ ಪ್ರಜೆಗಳ ನಿಜವಾದ ಪ್ರತಿನಿಧಿಗಳಿಂದ ಕೂಡಿದೆ, ಎಂಬ ಮಾತನ್ನು ಹೇಳುವಂತಾಗ ಬಹುದು. ಮನೆಯ ಆಡಳಿತವನ್ನು ಸುವ್ಯವಸ್ಥಿತವಾಗಿ ನಡೆಸಬಲ್ಲ ಕಾರ್ಯಕ್ಷಮ, ವಿಚಾರವಂತ ಮಹಿಳೆಯರು ನಗರದ ಆಡಳಿತವನ್ನೂ ವ್ಯವಸ್ಥಿತವಾಗಿ ನಡೆಸಬಲ್ಲರು.

ವೈಯ್ಯಕ್ತಿಕವಾಗಿ ಮಹಿಳೆ ಚುನಾವಣೆಯ ರಂಗವನ್ನು ಯಾವದೇ ಕಾರಣ ದಿಂದ ಪ್ರವೇಶಿಸುವದು ಅಸಾಧ್ಯವಾದಲ್ಲಿ, ಸ್ತ್ರೀಯರ ಮಂಡಳ, ಸಮಾಜಗಳು, ಅವ ಳಿಗೆ ಈ ಕಾರ್ಯದಲ್ಲಿ ನೆರವಾಗಬೇಕು. 'ವೀರಮಾತೆ'ಯ ಸಹಕಾರ ಅವರೆಲ್ಲ ರಿಗೂ ದೊರೆಯುವದು ನಿಶ್ಚಿತ !

---

# ಸುದ್ದಿ-ಸಮಾಚಾರ

## ಕನ್ನಡ ಸಮಿತಿ ವತಿಯಿಂದ ಗೌರಿಹುಣ್ಣಿಮೆ, ಕಾರ್ಯಕ್ರಮ

ಸೊಲ್ಲಾಪೂರ:—ದಿನಾಂಕ ೨-೧೦-೫೨ಕ್ಕೆ ಜಯನಿಕೇತನದಲ್ಲಿ ಕವಿವರ್ಯ ಶ್ರೀ. ದ. ರಾ. ಬೇಂದ್ರೆಯವರ ಅಧ್ಯಕ್ಷತೆಯಲ್ಲಿ ಗೌರೀಹುಣ್ಣಿಮೆ ಕಾರ್ಯಕ್ರಮ ಗಳನ್ನು ಏರ್ಪಡಿಸಲಾಯಿತು.

ಪ್ರಾರಂಭದಲ್ಲಿ ಸಮಿತಿಯ ಅಧ್ಯಕ್ಷರಾದ ಶ್ರೀ ಮಡಕಿಯವರು ಸಮಿತಿಯ ವರದಿ, ದಿನದ ಉದ್ದೇಶ ಹಾಗೂ ಕವಿಗಳಿಂದ ಸೊಲ್ಲಾಪೂರಕ್ಕೆ ಆದ ಉಪಕಾರ ಮತ್ತು ಇತರ ವಿಷಯದ ಬಗ್ಗೆ ಹೇಳಿದ ಮೇಲೆ, ಶ್ರೀ ಗುರುರಾವ ಕುಲಕರ್ಣಿ, ಶ್ರೀ ನೀಲಂಗಿ ಸೌ. ಪಾರ್ವತಿ ಹೆಗಡೆ ಮತ್ತು ಕುಮಾರಿ ನೀಲಂಗಿಯರ ಕಾವ್ಯವಾಚ ನದ ನಂತರ ಕವಿವರ್ಯ ಶ್ರೀ. ಬೇಂದ್ರೆಯವರು ಸಮಯೋಚಿತವಾಗಿಯೂ ವಿಸ್ತಾರ ವಾಗಿಯೂ ಮಾತನಾಡಿದರು. ನಂತರ ಶ್ರೀ ಎಲಜ್ಯಾ ಅವರು ಆಭಾರ ಮನ್ನಿಸಿದ ನಂತರ ಕಾರ್ಯ ಮುಗಿಯಿತು.

(ಸೊಲ್ಲಾಪುರದ ಸುದ್ದಿಗಾರರಿಂದ)

ಹುನಗುಂದ (ಜಿ. ವಿಜಾಪುರ):— ದಿ. ೪-೧೦-೫೨. ಕಳೆದ ಅನಂತ ಚತುರ್ದಶಿಯ ದಿನ ಇಲ್ಲಿಯ ಶ್ರೀಗಳವರ ಮಠದಲ್ಲಿ ಶ್ರೀ. ಮ. ಪ್ರ. ಸ್ವ. ಇಲಕಲ್ಲ ಮಹಾಂತ ಸ್ವಾಮಿಗಳ ಅಮೃತ ಹಸ್ತದಿಂದ 'ಅಕ್ಕನ ಬಳಗ' ದ ಸ್ಥಾಪನೆಯಾಗಿ ಕಾರ್ಯಕಾರೀ ಸಮಿತಿಯ ಏರ್ಪಾಟು ಆಯಿತು; ಶ್ರೀಮತಿ ತ್ಯಾಪಿ ಮಹಾಲಿಂಗಮ್ಮನವರು 'ಬಳಗ'ದ ಅಧ್ಯಕ್ಷಿಣಿಯರಾಗಿ ಆರಿಸಲ್ಪಟ್ಟು, ಶ್ರೀಮತಿ ಶೀಲವಂತರು ಕಾರ್ಯದರ್ಶಿಗಳೆಂದು ನೇಮಿಸಲ್ಪಟ್ಟರು. ಇಲ್ಲಿಯ ಪೂಜ್ಯ ಶ್ರೀ ಮಠದ ಗುರುಬಸವಾರ್ಯರ ಆದರ್ಶ ವ್ಯಕ್ತಿತ್ವದಲ್ಲಿ ಅಕ್ಕನ ಬಳಗವು ಪ್ರಗತಿಪಥದಲ್ಲಿ ನಡೆದೀತೆಂಬುದಾಗಿ ಬಳಗದ ಹಿತೈಷಿಗಳೆಲ್ಲರು ಹಾರಯಿಸುತ್ತಿದ್ದಾರೆ. ಪ್ರತಿ ಸೋಮವಾರ ಸಾಯಂಕಾಲ 'ಬಳಗದ' ಕಾರ್ಯಕಲಾಪಗಳು ಸಾಗುತ್ತಿವೆ. ಈ ಸಲದ 'ನಾಡಹಬ್ಬ' ದಲ್ಲಿ 'ಬಳಗ' ದವರ ಬಿನ್ನಹದ ಮೇರೆಗೆ ಭಾಷಣಕಾರ್ತಿಯರಾಗಿ ಶ್ರೀಮತಿ ಕಿಣಗಿ ಪಾರ್ವತಮ್ಮನವರು, ಬಾಗಿಲಕೋಟೆ ಇವರು ಆಗಮಿಸಿದ್ದರು. ಹಬ್ಬಕ್ಕೆ ಮುಖ್ಯ ಅತಿಥಿಗಳಾಗಿ ದಯಮಾಡಿಸಿದ ಶ್ರೀ. ಮ. ಪ್ರ. ನಿಡುಮಾಮಿಡಿ ಜಗದ್ಗುರುಗಳು 'ಬಳಗ' ದ ಹುರುಪು-ಹುಮ್ಮಸಗಳನ್ನು ಕಂಡು, ಮನವಾರೆಕೊಂಡಾಡಿ, ತುಂಬಹರಸಿದರು.

'ಬಳಗ' ದಿಂದ ಊರಲ್ಲಿ ಸ್ತ್ರೀಜನಾಂಗದೊಳಗೆ ನವಜಾಗೃತಿಯುಂಟಾಗಿ, ಮಹಿಳೆಯರು ವಿದ್ಯಾವತಿಯರೂ, ವಿನಯಾದಿ ಗುಣ ಸಂಪನ್ನೆಯರೂ, ಸಮಾಜ ಸೇವಾ ನಿಪುಣೆಯರೂ, ಮತ್ತು ಸಾಹಿತ್ಯಸಂಸ್ಕೃತಿನಿಷ್ಠೆಯರೂ ಆಗಲಿ! 'ಬಳಗ' ವು ಸರ್ವರ ಪ್ರೇಮಾದರಗಳನ್ನು ಗೆಲ್ಲಲಿ !!

ಧಾರವಾಡ:— ತಾ. ೧೧-೧೦-೫೨ ನೇ ಮುಂಬಯಿ ಗವ್ಹರ್ನರರಾದ ಶ್ರೀಮಾನ್ ಗಿರಿಜಾ ಶಂಕರ ಬಾಜಪೈ ದಂಪತಿಗಳು ಧಾರವಾಡದ ವನಿತಾ ಸೇವಾ ಸಮಾಜವನ್ನು ಸಂದರ್ಶಿಸಿ ಅಲ್ಲಿಯ ಚಟುವಟಿಕೆಗಳನ್ನು ನೋಡಿ ಆನಂದಿಸಿದರು. ಮತ್ತು ಒಂದು ನೂರಾಐವತ್ತು ರೂಪಾಯಿಗಳ ಕಾಣಿಕೆಯನ್ನು ಸಲ್ಲಿಸಿದರು. ಗೌರ್ನರರು ಸ್ವತಃ ಸಮಾಜದ ಕೌನ್ಸಿಲದ ಮೊದಲನೆಯ ತರಗತಿಯ ಸದಸ್ಯರಾಗಲು ಒಪ್ಪಿಗೆಯನ್ನಿತ್ತು ನೈತಿಕ ಬೆಂಬಲವನ್ನು ಕೊಟ್ಟಿದ್ದು ಅಭಿನಂದನೀಯ ಸಂಗತಿ.

ಧಾರವಾಡದ ಸುಪ್ರಸಿದ್ಧ ಹಾಗೂ ಶ್ರೀಮಂತ ಮನೆತನದಲ್ಲಿ ಜನಿಸಿದ ಕುಮಾರಿ ಶ್ಯಾಮುಕುಮಾರಿ ಗಿರಿ ಇವರು ತಮ್ಮ ೨೦ ನೆಯ ವಯಸ್ಸಿನಲ್ಲಿ ಅಕಾಲಮರಣಕ್ಕೆ ತುತ್ತಾದ್ದದ್ದು ನಮ್ಮ ಸ್ತ್ರೀಸಮಾಜಕ್ಕೆ ಒಂದು ಹಾನಿಯಾದಂತಾಗಿದೆ. ಇವರು ತಮ್ಮ ಇಷ್ಟು ಸಣ್ಣ ವಯಸ್ಸಿನಲ್ಲೇ, ಸ್ತ್ರೀಸಮಾಜದ ಏಳ್ಗೆಗಾಗಿ ಬೇರೆ ಬೇರೆ ಸಂಘಗಳಲ್ಲಿ ಭಾಗವಹಿಸಿ ಕಾರ್ಯಮಾಡುತ್ತಿದ್ದರು. ಈಗ ಬಿ. ಎ. ತರಗತಿಯಲ್ಲಿ ಓದುತ್ತಿದ್ದುದಲ್ಲದೆ ಸಶಾಸ್ತ್ರೀಯ ಗಾಯನದ ಅಭ್ಯಾಸವನ್ನು ಮಾಡಿ ಇಲ್ಲಿನ ಬಾನುಲಿಯ ಕೇಂದ್ರಕ್ಕೆ ಒಂದು ಶೋಭೆಯನ್ನು ತಂದಿದ್ದರು. ಇಂತಹ ನಮ್ಮ ಭಗಿನಿಯರೊಬ್ಬರ ನಿಧನದಿಂದಾಗಿ ವೀರಮಾತೆಯು ಬಹಳೇ ದುಃಖಿಸುತ್ತಾಳೆ.

# ಸಾದರ ಸ್ವೀಕಾರ

೧. **ಸಿಡಿದ ಕಿಡಿಗಳು.** (ಹರಟೆಗಳು) ಲೇ:— ಕುಂಜಾಲ ಶಾಂತಾರಾಂ. ಪ್ರಕಾಶಕರು:— ಶ್ರೀ. ಕಲಮುದಾನಿ ಗುರುರಾಯರು. ಬೆಲೆ ೧-೮-೦

೨. **ಸೇಬಿನಗಿಡ.** ಸಾಮಾಜಿಕ ಕಾದಂಬರಿ. ಲೇ:—ಕು. ರಾಜಲಕ್ಷ್ಮಿ ನಾಗರಾಜರಾವ್. ಪ್ರಕಾಶಕರು:—ಶ್ರೀ. ಕಲಮುದಾನಿ ಗುರುರಾಯರು. ಬೆಲೆ ೧-೮-೦

೩. **ಆಕೆಯಾರು ?** ಕಥಾಸಂಕಲನ. ಲೇ:- ಎಂ. ಎಸ್. ಮೂರ್ತಿರಾವ ಪ್ರ:- ಶ್ರೀ. ಕಲಮುದಾನಿಗುರುರಾಯರು. ಬೆಲೆ ೧-೦-೦

೪. **ಮಾತೃಶ್ರೀ.** ಕಾದಂಬರಿ. ಲೇ:—ಸಿ. ಎಂ. ವಿ. ಶರ್ಮ. ಬಿ. ಎ. ಪ್ರ:- ಎಂ. ಎಚ್. ರಾಅನ್. ಸರ್ವೋದಯ ಸಾಹಿತ್ಯಮಾಲೆ ಬೆಲೆ ೧-೪-೦

೫. **ಯಮುನರಾಯಭಾರಿ.** ಸಾಮಾಜಿಕ ಕಾದಂಬರಿ. ಲೇ:- ರಘುನಾಥ ವಾಡೇದ. ಪ್ರ:— ಕಲಮುದಾನಿ ಗುರುರಾಯರು. ಬೆಲೆ ೧-೮-೦

೬. **ಕಳಚಲಿದೆ ರತ್ನ.** ಕಥಾಸಂಕಲನ ಲೇ:— ಎ. ಬಿ. ಮುತ್ತಾಳ. ಪ್ರ:— ಎಸ್. ಬಿ. ಅನ್ನದಾನಪ್ಪ ಬೆಲೆ ೧ ರೂ.

೭. **ಕಾಮಸ್ವಾಸ್ಥ್ಯ.** ಲೇ:- ಕಮಲದಾನಿ ಗುರುರಾಯರು. ಬೆಲೆ ೧-೮-೦.

---

## ಪುಸ್ತಕಾವಲೋಕನ

ಫು. ಕ್ರೌನ ೧೨೦.] **ಸೇಬಿನ ಗಿಡ** [ಬೆಲೆ :೧ -೮-೦

ಬರೆದವರು:— **ಕು. ರಾಜಲಕ್ಷ್ಮಿ,** ದಿವಂಗತ ಬಿ. ಎಸ್. ಶ್ರೀಕಂಠಯ್ಯ ನವರ ಮೊಮ್ಮಗಳು, ವಯಸ್ಸು ಹದಿನೆಂಟರಲ್ಲಿದೆಯಂತೆ. ಪುಸ್ತಕವನ್ನೋದಿದಾಗ, ಅದರಲ್ಲಡಕವಾಗಿರುವ ಮನೋಭಾವಗಳ ವಿಶ್ಲೇಷಣ ಕ್ರಮವನ್ನು ಕಂಡಾಗ, ಇದು ಹೇಗೆ ಎನ್ನಿಸುತ್ತದೆ? ವಿಶಾಲವಾದ ವಾಚನಾನುಭವ ಸೂಕ್ಷ್ಮನಿರೀಕ್ಷಣೆ ಓದಿದುದನ್ನು ಅಳವಡಿಸಿಕೊಂಡು ಬರೆಹದಲ್ಲಿ ಮೂಡಿಸಬಹುದಾದ ಕಲಾಕುಶಲತೆ ಇವು ಇದ್ದರೆ ಬರೆಹವು ತಾನೇ ಒಳ್ಳೆಯದಾಗಿ ಓದುಗರ ಮನಸ್ಸನ್ನು ಸೆಳೆಯಬಹುದಲ್ಲವೆ? ಒಂದೆರಡು ಕಡೆ ಕಥೆ ಸ್ವಲ್ಪ ಮುಗ್ಗರಿಸುತ್ತಿದೆ, ಎಂದರೆ ನಮ್ಮ ಜೀವನದ ಹೊರಗೆ ನುಸುಳಿಕೊಳ್ಳುತ್ತಿದೆ. ಕಾಲೇಜಿನ ವಿದ್ಯಾರ್ಥಿ ಅಶೋಕನು ಹಳ್ಳಿಯ ಹುಡುಗಿ ಮಾಲತಿಯೊಡನೆ ನಡಿಸಿದ ಮುನ್ನೋಟವಿಲ್ಲದ ಚಿನ್ನಾಟ ನಮ್ಮ ದಿನದ ಜೀವನಕ್ಕೆ ಅಷ್ಟೊಂದು ಹೊಂದಿಕೆಯಾಗುವದಿಲ್ಲ; ಆದರೆ ಬೆಂಗಳೂರಿನ ರೋಹಿಣಿಯಾಗಲಿ ಅವಳ ತಂಗಿಯರಾಗಲಿ ನಡಿಸಿದ ಮಾತುಕತೆ ರೀತಿನೀತಿಗಳು ಅಷ್ಟು ಆಕ್ಷೇಪಾರ್ಹವೆನಿಸಲಾರವು, ಈ ಹೊಸ ಯುಗದಲ್ಲಿ! ಈ ಸಂದರ್ಭದಲ್ಲಿ ನಮಗೆ ಸಂಪಾದಕರು ಹೇಳಿದ 'ಸಾಹಿತ್ಯಾಭ್ಯಾಸದಲ್ಲಿ ಇಂಗ್ಲೀಷ ಸಾಹಿತ್ಯದ ಪ್ರಭಾವವು ಇವಳ ಮೇಲೆ ಬಹಳವಿದೆ' ಎಂಬ ಮಾತು ನೆನಪಾಗುವದು. ಇರಲಿ, ಹೂವು ಇನ್ನೂ ಅರಳುವುದರಲ್ಲಿದೆ, ಸುಗಂಧಸುಮನ, ಎಂದುಕೊಳ್ಳೋಣ.

# ವೀರಮಾತೆ



**ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ**
**ಕನ್ನಡ ಮಾಸಪತ್ರಿಕೆ.**

**ಸಂಪುಟ ೧ } ಮಾರ್ಗಶೀರ್ಷ ಡಿಸೆಂಬರ ೧೯೫೨ { ಸಂಚಿಕೆ ೭**

## ಸಂಪಾದಕೀಯ

ಮಾನವನ ಪ್ರಗತಿಗಾಗಿ ಶಾಸ್ತ್ರ, ಕಲೆಗಳು ಹೆಣಗುತ್ತಿವೆ; ಜಗತ್ತಿನ ರಂಗದಲ್ಲಿ ಹಲವಾರು 'ಇಜಂ' ಗಳು ಪ್ರವೇಶಿಸಿ, ಮಾನವನ ಸುಖದ ಹೆಸರಿನಲ್ಲಿ ಕೋಲಾಹಲವನ್ನು ನಡೆಸಿವೆ. ಹೀಗಿದ್ದೂ ದಕ್ಷಿಣ ಆಫ್ರಿಕದ ವರ್ಣನೀತಿ ಇಂದು ಮಹಾ ಸಮಸ್ಯೆಯಾಗಿದೆ. ಇಂಗ್ಲೀಷರ ಈ ವರ್ಣನೀತಿಯ ವಿರುದ್ಧ ಹೋರಾಟ, ಈಗ ಹತ್ತಾರು ವರ್ಷಗಳಿಂದಲೂ ನಡೆದೇ ಇದೆ. ಅದು ಇಂದು ತೀಕ್ಷ್ಣವಾಗಿದೆ. ಆಫ್ರಿಕನ್ನರು ಈಗ ಎಚ್ಚತ್ತ ಜನಾಂಗ; ಮಾನವತೆಯನ್ನು ಆದರಿಸುವ ಎಲ್ಲ ರಾಷ್ಟ್ರಗಳಿಂದಲೂ ಅವರ ಹೋರಾಟಕ್ಕೆ ಬೆಂಬಲ ದೊರೆತಿದೆ.

ಈ ವರ್ಣನೀತಿಯ ಹಿಂದೆ ಅಡಗಿದ ರಹಸ್ಯವೇನು? ಕರಿಯ ಬಣ್ಣದ ಬಗ್ಗೆ ಇದ್ದ ಬಿಳಿಯರ ಅಸಹನೆಯೇ? ಅಥವಾ ವರ್ಣಭೇದದ ಹೆಸರಿನಲ್ಲಿ ಕರಿಯರ ದುಡಿತದ ಲಾಭವನ್ನು ಪಡೆಯುವದೇ? ಸಮಾನ ಕೆಲಸ ಮಾಡಿದರೂ ಬಿಳಿಯರಿಗೆ ಹೆಚ್ಚು ವೇತನ, ಕರಿಯರಿಗೆ ಕಡಿಮೆ. ದಕ್ಷಿಣ ಆಫ್ರಿಕದ ತಾಮ್ರದ ಗಣಿಗಳಲ್ಲಿ ದುಡಿಯುವವರೆಲ್ಲ ಕರಿಯ ಶ್ರಮಜೀವಿಗಳು. ಗಣಿಗಳ ಅಧಿಕಾರಿಗಳು ಬಿಳಿಯರು. ಹೆಚ್ಚು

ಕೆಲಸ, ಕಡಿಮೆ ಕೂಲಿಯ ಕೆಲಸವೆಲ್ಲ ಕರಿಯರಿಗೆ ಕಾಯ್ದಿಟ್ಟದ್ದು. ಇವರಿಗೆ ಹಿಂಸೆಕೊಡಲು ಬಿಳಿಯರ ಸಂಘಗಳೂ ಹುಟ್ಟಿಕೊಂಡಿವೆಯಂತೆ! ಹಲವು ಬಿಳಿಯ ಮಾಲಿಕರು ತಮ್ಮವೇ ಆದ ಸೆರೆಮನೆಗಳನ್ನೂ ಮಾಡಿದ್ದಾರಂತೆ!

ಆಸ್ಟ್ರೇಲಿಯದಲ್ಲಿ ವರ್ಣಭೇದದ ಬೇಗೆ ಇದೇ ರೀತಿ ಹಬ್ಬಿ, ಕರಿಯರ ಸಂಖ್ಯೆ ಕೆಲವೊಂದು ದಶಕಗಳಲ್ಲಿ ತೀರ ಕೆಳಗಿಳಿದು ಹೋಯಿತಂತೆ!

ಆಫ್ರಿಕದಲ್ಲಿ ಹಬ್ಬುತ್ತಿರುವ ಈ ಹೋರಾಟಕ್ಕೆ ವರ್ಣನೀತಿಯ ಹೋರಾಟವೆನ್ನುವದಕ್ಕಿಂತ, ಮಾಲಿಕ—ಮಜದೂರ ಹೋರಾಟವೆಂದರೇ ಅರ್ಥಪೂರ್ಣವಾಗಿರುವದೇನೋ!

ಈ ಸಮಸ್ಯೆ ಇಂದು ಸಂಯುಕ್ತ ರಾಷ್ಟ್ರಸಂಘದ ಕೈಯ್ಯಲ್ಲಿದೆ. ವಿರುದ್ಧ ಮತಗಳಿದ್ದರೂ, ಬಹುಮತದಿಂದ ಸಂ. ರಾ. ಸಂಸ್ಥೆಯು, ಈ ಸಮಸ್ಯೆಯನ್ನು ಬಿಡಿಸುವ ಹೊಣೆಯನ್ನು ಹೊತ್ತಿದೆ!

ಈ ಬಿಳಿಯರ, ಕರಿಯರ ವರ್ಣಭೇದ ಹೋಗಲಾಡಿಸಲು ಎಷ್ಟು ರೀತಿಯಿಂದ ಜನಾಂಗವು ಹೆಣಗಬೇಕಾಗಿದೆಯೋ ಅದರ ಎರಡರಷ್ಟು ಹೆಣಗಾಟವು ನಮ್ಮ ಸ್ತ್ರೀ ಪುರುಷರೆಂಬ ಭೇದಗಳಲ್ಲಿ ಹೆಣಗಬೇಕಾಗಿದೆ. ಕರಿಯ ಶ್ರಮಜೀವಿಗಳ ಲಾಭವನ್ನು ಅನ್ಯಾಯದಿಂದ ಬಿಳಿಯರು ತೆಗೆದು ಕೊಳ್ಳುತ್ತಿರುವಂತೆ, ಹೆಣ್ಣಿನ ತ್ಯಾಗ, ಸಹಿಷ್ಣುತೆಗಳ ಉಪಯೋಗವನ್ನಾದರೂ ಗಂಡಸರು ತೆಗೆದುಕೊಳ್ಳುತ್ತಿರುವ ರೂಢಿಯನ್ನು ಬಿಡಿಸಲು ಗಂಡುಹೆಣ್ಣುಗಳಿಬ್ಬರೂ ಹೋರಾಡಬೇಕಾಗಿದೆ.

† † † † †

ಗೃಹಿಣಿಗೆ, ಅವಳು ಮಾಡುವ ಮನೆಕೆಲಸಕ್ಕಾಗಿ ಪ್ರತಿಫಲವೆಂದು ಅವಳ ಪತಿಯ ವೇತನದ ೧/೧೦ ಪಾಲು ದೊರೆಯಬೇಕೆಂದು ಸ್ಕಾಟಿಶ್ ವಕೀಲರು ಸೂಚಿಸಿದ್ದಾರೆ. ಪತಿಯು ಈ ಪಾಲನ್ನು ಕೊಡಲೊಪ್ಪದಿದ್ದರೆ ಅದನ್ನು ಒಡೆಯರಿಂದಲೇ ನೇರವಾಗಿ ಪಡೆಯುವ ಅಧಿಕಾರವೂ ಅವಳಿಗಿರಬೇಕು ಎಂದು ಅವರ ಅಭಿಪ್ರಾಯ. ಮನೆಯಲ್ಲಿ ಅವಳು ದಾಸಿಯಾಗಿ ಸಲ್ಲಿಸಿದ ಸೇವೆಗೆ ೧/೧೦ ಪ್ರತಿಫಲ: ಹೆಂಡತಿಯಾಗಿ, ಮಕ್ಕಳ ಮಾತೆಯಾಗಿ ಸಲ್ಲಿಸಿದ್ದಕ್ಕೆ ಇನ್ನುಳಿದ ೯/೧೦ ವೇ?

ಎಡಿನ್‌ಬರೋದಲ್ಲಿ, ಮದುವೆ ಮತ್ತು ವಿವಾಹವಿಚ್ಛೇದನೆಗಳ ಬಗ್ಗೆ ಪರಿಶೀಲನೆ ನಡೆಸಲು ನೇಮಿಸಲ್ಪಟ್ಟ ರಾಯಲ್ ಕಮೀಶನ್ನಿಗೆ ಅಲ್ಲಿಯ ವಕೀಲರ ಹಾಗೂ ಕಾಯಿದೆ ಸುಧಾರಕರ ಸಂಸ್ಥೆ, ಮಹಿಳೀ ಸಂಘವು, ಕೆಳಗಿನ ವಿಚಾರಗಳನ್ನೊಳಗೊಂಡ ಒಂದು ಮನವಿಯನ್ನು ಸಲ್ಲಿಸಿದೆ.

(೧) ವಿವಾಹವಾಗಲಿರುವ ಇಬ್ಬರೂ ತಮಗೆ ಯಾವದೇ ಅಪಾಯಕಾರಕ ರೋಗವಿಲ್ಲವೆಂಬ ಬಗ್ಗೆ ವೈದ್ಯರ ಸರ್ಟಿಫಿಕೇಟನ್ನು ಸಾದರಪಡಿಸಬೇಕು.

(೨) ಇಬ್ಬರಲ್ಲೊಬ್ಬರು ಯಾವುದೇ ಕಾರಣದಿಂದ, ಹತ್ತು ವರುಷಗಳ ಜೇಲವಾಸವನ್ನನ್ನುಭವಿಸುವ ಪ್ರಸಂಗ ಬಂದರೆ, ವಿಚ್ಛೇದನಕ್ಕೆ ಅವೇ ಕಾರಣ ವಾಗಬಹುದು

(೩) ಪರಸ್ಪರರು ಒಪ್ಪಿದರೆ, ಮೂರು ವರುಷಗಳ ನಂತರ ವಿಚ್ಛೇದನೆಗೆ ಅಪ್ಪಣೆ ದೊರೆಯಬೇಕು.

(೪) ಇಬ್ಬರಲ್ಲೊಬ್ಬರು ಸಹಜೀವನದ ರುಚಿಯನ್ನು ಕಳೆದುಕೊಂಡರೂ, ವಿಚ್ಛೇದನೆಗೆ ಪ್ರತಿಬಂಧವಿರಕೂಡದು.

ವಿವಾಹದ ಮೂಲ ಉದ್ದೇಶ ಪರಸ್ಪರರ, ದೈಹಿಕ, ಬೌದ್ಧಿಕ, ಸಾಂಸ್ಕೃತಿಕ ವಿಕಾಸ; ಇದಕ್ಕೆ ಕ್ಷಮಿಸಲಾರದ ನಷ್ಟ ಒದಗಿದಲ್ಲಿ, ವ್ಯಾವಹಾರಿಕ ದೃಷ್ಟಿಯಿಂದ ವಿಚ್ಛೇದನೆ ಅನಿವಾರ್ಯ !

ಮುರೀ ಸಂಘದ ಅಧ್ಯಕ್ಷರು ಗೃಹಿಣಿಯರ ವೇತನದ ಬಗ್ಗೆ ಅವರ ಸಂಸ್ಥೆಯಲ್ಲಿ ಮಾತೆತ್ತಿದಾಗ ಯಾರೂ ಆಕ್ಷೇಪವೆತ್ತಲಿಲ್ಲವೆಂದು ಹೇಳಿದರಂತೆ! ಅದಕ್ಕೆ ಕಮಿಶನ್ನಿನ ಸದಸ್ಯರೊಬ್ಬರು, ಪುರುಷರ ಸಭೆಯಲ್ಲೊಂದುಸಲ ಇದನ್ನು ಹೇಳಿ ನೋಡಿ, ಅಂದರಂತೆ!

ಪುರುಷರು ಅದಕ್ಕಿಂತ ಗಂಭೀರ ಮೌನ ತಾಳಬಹುದು! ವೇತನವಿಲ್ಲವೆಂದು ಎಲ್ಲ ಕೊರತೆಗಳನ್ನೂ ಪೂರೈಸುವದಕ್ಕಿಂತ, ಯಾರಿಗಾದರೂ ನಿರ್ದಿಷ್ಟ ವೇತನವನ್ನು ಗೊತ್ತುಮಾಡುವದು ಒಳಿತಲ್ಲವೇ ?

ಮೇಲಿನ ಈ ವೇತನ ಪದ್ಧತಿಯಿಂದ ಬುದ್ಧಿವಂತ ಯೋಗ್ಯತಾವಾನರಿಗೂ ಹಾಗೂ ಅಯೋಗ್ಯರಿಗೂ ಒಂದೇ ರೀತಿಯ ವೇತನ ದೊರೆತಂತಾಗುವದು. ಈ ಲೌಕಿಕದ ಬಾಕಿ ವ್ಯವಹಾರಗಳಲ್ಲಿ ವೇತನವು ಅವರವರ ಬುದ್ಧಿಮತ್ತೆ, ಶಿಕ್ಷಣ ಸಾಮರ್ಥ್ಯ ಇವುಗಳನ್ನವಲಂಬಿಸಿರುವದರಿಂದ ಇಲ್ಲಾದರೂ ಅದೇ ಪದ್ಧತಿ ಇರುವದು ಹೆಚ್ಚು ಉತ್ತಮ. ಹೆಣ್ಣುಮಕ್ಕಳು ತಮ್ಮ ವೇತನಕ್ಕಾಗಿ ತಮ್ಮ ಲಗ್ನದ ಪೂರ್ವದಲ್ಲೇ ಲೌಕಿಕ ಶಿಕ್ಷಣದಲ್ಲಿ ಹೆಚ್ಚು ತರಬೇತಿ ಹೊಂದಿ (ಪ್ರಮಾಣಪತ್ರಗಳಿಸಿ) ದಲ್ಲಿ ಈ ವೇತನ ಪ್ರಶ್ನೆ ಬಿಡಿಸಲು ಅನುಕೂಲವಾಗುವದು.

* * * * *

ಲೋಕಸಭೆಯಲ್ಲಿನ ಆಹಾರ ವಿನಿಯಂತ್ರಣದ ಚರ್ಚೆ ನೋಡುತ್ತಿರಲಾಗಿ ಮಂತ್ರಿ ಮಂಡಲದಲ್ಲೇ ಒಂದು ನಿಶ್ಚಿತ ಧೋರಣವಿದ್ದದ್ದು ಕಂಡುಬರುತ್ತಿಲ್ಲ; ಆಹಾರ ಧಾನ್ಯವು ಸಾಕಷ್ಟಿಲ್ಲವೆಂಬದೇ ಮಂತ್ರಿಗಳ ಈ ಗೊಂದಲಕ್ಕೆ ಮೂಲಕಾರಣವಿರಬಹುದು. ಹಾಗೂ ವ್ಯವಹಾರಿಕ ರೀತಿಯಿಂದ ಇದರ ಅಭ್ಯಾಸ ಮಾಡಿದವರು ಇಲ್ಲಿ ಯಾರೂ ಇಲ್ಲವೆಂಬಂತೆ ಕಾಣುವದು. ನಿಜವಾಗಿ ಪರಿಸ್ಥಿತಿಯು ಹಾಗಿದ್ದಲ್ಲಿ (ಆಹಾರಧಾನ್ಯವು ಕಡಿಮೆ ಇದ್ದಲ್ಲಿ) ಇಲ್ಲ ಇಲ್ಲವೆಂಬ ಕೂಗಾಟದ ಗೊಂದಲ

ದೊಳಗಿಂದಲೇ, ಯುದ್ಧವಾತಾವರಣದ ಪರಿಸ್ಥಿತಿಯೊಳಗಿಂದ ಈ ಆರೇಳು ವರ್ಷಗಳು ಹಾಯ್ದು ಬರುತ್ತಿರಲಿಲ್ಲ. ನಮ್ಮಲ್ಲಿ ಈಗ ಸಾಕಷ್ಟು ಆಹಾರಗಳಿದ್ದರೂ ಸಹ ಅವೆಲ್ಲವೂ ಭಾಂಡವಾಳಶಾಹಿಗಳ ಹಗೆಗಳಲ್ಲಿ! ಈ ಸಮಯದಲ್ಲಿ ನಿಯಂತ್ರಣ ತೆಗೆದರೂ ಅಥವಾ ಇಟ್ಟರೂ ಬಡಜನರಿಗಾಗುವ ಲಾಭ ಅಷ್ಟರಲ್ಲೇ ಇದೆ. ಇದನ್ನು ಹೋಗಲಾಡಿಸುವ ಮನಸ್ಸು ನಿಜವಾಗಿಯೂ ಆಹಾರ ಮಂತ್ರಿಗಳ ಮನಸ್ಸಿನಲ್ಲಿದ್ದಲ್ಲಿ ಈ ಕೆಲಸಕ್ಕೆ ಯೋಗ್ಯರಾದ ಹೆಣ್ಣುಮಕ್ಕಳಿಗೇ ಆಹಾರ ಹಂಚುವ ಅಧಿಕಾರಿ ಸ್ಥಳಗಳನ್ನು ಒಪ್ಪಿಸುವದೊಳಿತು. ಹಾಗೂ ಆಹಾರ ಧಾನ್ಯಗಳ ವ್ಯಾಪಾರದ ಅಧಿಕಾರವನ್ನು ಸರಕಾರವು ತನ್ನ ಕೈಯಲ್ಲೇ ತೆಗೆದುಕೊಂಡು, ಯೋಗ್ಯ ಅಧಿಕಾರಿಗಳ ಮುಖಾಂತರ ಆಹಾರ ಸರಬರಾಜು ಮಾಡಿದಲ್ಲಿ ಈ ಆಹಾರದ ಸಮಸ್ಯೆಯು ಬೇಗನೆ ಒಂದು ಸುಸ್ಥಿತಿಗೆ ಬರಬಹುದು. ಮತ್ತು ಈ ಪ್ರಶ್ನೆ ಬಿಡಿಸಬೇಕಾದರೆ ಮೊದಲು ಜನತೆಯು ತಿಳುವಳಿಕೆಯುಳ್ಳದ್ದಾಗಬೇಕು. ಕಾರಣ ಈಗ ಆಹಾರ ಧಾನ್ಯಗಳ ಮೇಲಿನ ನಿಯಂತ್ರಣವನ್ನು ತೆಗೆದು, ಜನತೆಯಲ್ಲಿ ತಿಳುವಳಿಕೆ ಹುಟ್ಟಿಸುವ ಸಲುವಾಗಿ ಮೊದಲು ಸರಕಾರವು ಅದರ ಪ್ರಚಾರವನ್ನು ಜೋರಿನಿಂದ ಮಾಡುವದು ಒಳಿತು. ಒಟ್ಟು ಹೇಳುವದೆಂದರೆ, ಈ ಆಹಾರದ ಸಮಸ್ಯೆ ಬಿಡಿಸಲು (೧) ಆಹಾರ ಆಡಳಿತೆಯ ಮೇಲೆ ಹೆಚ್ಚಿಗೆ ಪ್ರಮಾಣದಿಂದ ಯೋಗ್ಯ ಸ್ತ್ರೀ ಅಧಿಕಾರಿಗಳನ್ನು ನೇಮಿಸುವದು. (೨) ಜನತೆಯಲ್ಲಿ ತಿಳುವಳಿಕೆ ಹುಟ್ಟಿಸುವದು. (೩) ಅಧಿಕಾರಿಗಳು ವ್ಯಾವಹಾರಿಕ ದೃಷ್ಟಿಯಿಂದ ಆಹಾರಶಾಸ್ತ್ರದ ಅಭ್ಯಾಸವನ್ನು ಮಾಡುವದು, (೪) ಆಹಾರ ಉತ್ಪಾದನೆ ಹೆಚ್ಚಿಸಲು ಸರಕಾರವು ಜೋರಿನಿಂದ ಪ್ರಯತ್ನಿಸುವದು. (೫) ಹಾಗೂ ಆಹಾರದ ವ್ಯಾಪಾರವನ್ನು ಸರಕಾರವು ತನ್ನ ಕೈಯ್ಯಲ್ಲಿ ತೆಗೆದುಕೊಳ್ಳುವದು.

## ನಮ್ಮ ಮಾತು

ಈ ಸಲದ ಸಂಚಿಕೆಯಲ್ಲಿ ಹುಚ್ಚಪ್ಪನ ಭವಿಷ್ಯ, ಡಾ. ವನವಿಹಾರಿಯವರ ಆರೋಗ್ಯವನ್ನು ಕುರಿತು ಲೇಖ, ಜಯತೀರ್ಥರ ಕವನ, ಶ್ರೀಮತಿ ಸರೋಜಿನಿಯವರ ಮಾರ್ಮಿಕವಾದ ಕತೆ, 'ಸುಮತಿ' ಯವರ ಹಾಸ್ಯ ಪೂರ್ಣ ಲೇಖ, ಶ್ರೀ ಸುಶೀಲ ಚಿಂತಾಮಣಿಯವರ ವಿಚಾರಪೂರ್ಣ, 'ಅಕ್ಕನ ಜೀವನ ದರ್ಶನ,' ಕಾಯ್ದೆ ಕಾನೂನು ವಿಭಾಗ ಇತ್ಯಾದಿಗಳೆಲ್ಲ ಸೇರಿವೆ. ಸಂಚಿಕೆಯನ್ನು ಅಲಂಕರಿಸಿದ ನಮ್ಮ ಲೇಖಕವೃಂದಕ್ಕೆಲ್ಲ ನಮ್ಮ ವಂದನೆಗಳು! ಅಭಿನಂದನೆಗಳು!

ಈ ಸಲ ಕುಂಭ ರಾಶಿಯವರೇ ಹೆಚ್ಚಾಗಿ ಪ್ರತಿಗಳನ್ನು ಕೊಂಡು ಓದುವರೆಂದು ಆಶಿಸಲಾಗಿದೆ.

ನಮ್ಮ ಮಾತಿಗೆ ಮನ್ನಣೆಯಿತ್ತು ಚಂದಾ ಹಣವನ್ನು ಅನೇಕರು ಈಗಾಗಲೇ ಕಳಿಸಿದ್ದು ಸಂತೋಷದ ಸಂಗತಿ.

ಏಜಂಟರಾಗುವವರು ದಯವಿಟ್ಟು ಐದನೆಯ ತಾರೀಖಿನೊಳಗಾಗಿ ಪ್ರತಿಗಳಿಗೆ ಆರ್ಡರ ಕೊಡಬೇಕು.



## ಅಭಿನಂದನೆ

ಪ್ರಧಾನ ಮಂತ್ರಿ ನೆಹರೂರವರು ತಮ್ಮ ೬೩ನೆಯ ವರ್ಷದಿಂದ ೬೪ರಲ್ಲಿ ಕಾಲಿಟ್ಟ ಬಗ್ಗೆ ರಾಷ್ಟ್ರಗಳಲ್ಲೆಲ್ಲಾ ಅವರ ಹುಟ್ಟುಹಬ್ಬ ಸಮಾರಂಭವು ನಡೆದದ್ದು ಅಭಿನಂದನೀಯ ಸಂಗತಿ. ವೀರಮಾತೆಯು ಪ್ರಧಾನ ಮಂತ್ರಿಯವರಿಗೆ ಆಯುರಾರೋಗ್ಯ ಸಂಪತ್ತನ್ನು ಕೋರಿದ್ದಾಳೆ.

*　　*　　*　　*　　*

# ವಜ್ರದ ಉಂಗುರ

ಪಕ್ಕದ ಮನೆಯ ಇಂದಿರೆ ವಜ್ರದ ಉಂಗುರವನ್ನಿಟ್ಟದ್ದು ನೋಡಿ ಕಮಲುವಿನ ಮನದಲ್ಲಿ ಹೇಗೆ ಹೇಗೋ ಆಯಿತು. 'ಸಾಮಾನ್ಯ ಜೋಯಿಸನ ಹೆಂಡತಿಯೊಬ್ಬಳು ಉಂಗುರವನ್ನಿಡಬಹುದಾದರೆ ನಾನೇಕೆ ಇಡಬಾರದು ?' ಎಂಬ ಹೇವ ಅವಳಲ್ಲಿ ಮೂಡಿತು. ಅಲ್ಲದೆ ಇಂದಿರೆಯ ಉಂಗುರವನ್ನು ನೋಡಿ ಸ್ನೇಹಿತೆಯರೆಲ್ಲ ತುಂಬ ಹೊಗಳಿದ್ದರು.

" ಇಂದಿರೆಯ ದೈವ ಒಳ್ಳೆಯದು; ವಜ್ರದ ಉಂಗರವನ್ನಿಟ್ಟಳು," ಸೀತಾ, ಬಾವಿಯ ನೀರಿಗೆ ಬಂದಾಗ ಅಂದಿದ್ದಳು.

" ಕಮಲೂ, ನೀನೇಕೆ ಒಂದು ಇಡಬಾರದು ? ನಿನ್ನ ಗಂಡ ಬೇಕಾದ ಹಾಗೆ ಸಂಬಳ ತರುತ್ತಾರೆ, " ನಾಗೂ ಕೇಳಿಯೇ ಬಿಟ್ಟಳು.

ಕಮಲುವಿನ ಮನದಲ್ಲಿ ಮೂಡಿದ್ದ ಉಂಗುರದ ಆಶೆ ಮತ್ತಿಷ್ಟು ಕೆರಳಿತು.

ದಿನೇಶನು ಮನೆಗೆ ಬಂದೊಡನೆ ಕೇಳಿಯೇ ಬಿಡುವದೆಂದು ನಿಶ್ಚಯಿಸಿಕೊಂಡಳು. ಇದುವರೆಗೆ ಬೇಡುತ್ತ ಬಂದಿದ್ದ ಅವಳ ಜರೀ ಸೀರೆಯ ಆಶೆ ಕಮರಿ ಹೋಯಿತು; ಅಥವಾ ಅದರ ಹಿನ್ನೆಲೆಯ ಮೇಲೆ ಉಂಗುರದ ಬೇಡಿಕೆ ಇನ್ನಷ್ಟು ಬಲವತ್ತರವಾಯಿತು.

ಆ ದಿನ ಕಮಲ ಒಳ್ಳೆ ರುಚಿಯಾದ ಅಡಿಗೆಯನ್ನು ಮಾಡಿದಳು. ದಿನೇಶನು ಬೇಡಿ ಬಯಸಿದ ಪದಾರ್ಥಗಳೆಲ್ಲ ಆ ದಿನ ಸಿದ್ಧವಾಗಿದ್ದವು.

ಆರು ಗಂಟೆಗೆ ಆಫೀಸಿನಿಂದ ಹಿಂದಿರುಗಿದ ದಿನೇಶನಿಗೆ ಕಮಲ ಹಸ್ಮನುಖಿಯಾಗಿ ಅನಪೇಕ್ಷಿತ ಸ್ವಾಗತವನ್ನಿತ್ತಳು; ನಗುನಗುತ್ತ ಮಾತನಾಡಿದಳು; ಮತ್ತೆ ಸೀರೆಯ ಮಾತನ್ನೇ ಎತ್ತಲಿಲ್ಲ.

" ಅಪ್ಪ ಪತ್ರ ಬರೆದಿದ್ದಾರೆ— ದೀಪಾವಳಿಗೆ ನೀವೂ ಬರಬೇಕೆಂದು.... "

" ಅಂದರೆ ನೀನು ಹೋಗುವದಂತೂ ನಿಶ್ಚಿತವಾಯ್ತನ್ನ ? "

" ಅದು ಹೇಗೆ ? ನೀವು ಬಂದರೆ.......... ?

" ನಾನು ಬರದಿದ್ದರೆ ? "

" ನಾನೂ ಹೋಗುವದಿಲ್ಲ "

ದಿನೇಶನಿಗೆ ಆಶ್ಚರ್ಯವಾಯಿತು; ಇಷ್ಟು ದಿನ ಹೋಗುತ್ತೇನೆಂದು ಹಟ ಹಿಡಿದವಳು ಈಗೇಕೆ ಹೀಗೆ ?

" ಹೋಗದಿದ್ದರೆ, ಸೀರೆ ಸಿಗುವದೆಂದೇ? " ದಿನೇಶ ಅವಳನ್ನು ಬರಸೆಳೆದನು.

" ಹೋಗಿ, ನಿಮಗೆ ಯಾವಾಗಲೂ ಅದೇ ಯೋಚನೆ;....... ನನಗೆ ಸೀರೆಯೇ ಬೇಡ. " ಎನ್ನುತ್ತ ಕಮಲ ಬಿಡಿಸಿಕೊಂಡು ಒಳಗೆ ಓಡಿದಳು.

" ಸೀರೆ ಬೇಡವಾದರೆ.......... ಮತ್ತೇನು ಬೇಕಾಗಿರಬಹುದು ಇವಳಿಗೆ ಹಾಗಾದರೆ ? ನಾನೂ ದೀಪಾವಳಿಗೆ, ಬರಬೇಕೆಂದು ಅವಳು ಆಶಿಸುವಳೆ ? ಅದೇನು ದೊಡ್ಡ ಮಾತು ! ನಾನೆಂದಾದರೂ ಅಂತಹ ಸಂಧಿಯನ್ನು ಬಿಡುವೆನೇ ? "

ದಿನೇಶನು ಗಾಳಿಗೋಪುರ ಕಟ್ಟುತ್ತಲೇ ಆದರದ ಊಟವನ್ನು ಮುಗಿಸಿದನು. ಆದರೆ ಬರಲಿದ್ದ ಭೂತದ ಗಾಳಿ ಮಾತ್ರ ಅವನನ್ನು ಸೋಂಕುತ್ತಿತ್ತು.

ಕಮಲ ತನ್ನ ಊಟವನ್ನು ಮುಗಿಸಿ ದಿನೇಶನ ಕೈಗೆ ವೀಳ್ಯವನ್ನಿಡುತ್ತ ಮೆಲ್ಲಗೆ ಮಾತೆತ್ತಿದಳು:

" ಜೋಯಿಸರ ಇಂದಿರಾ ವಜ್ರದ ಉಂಗುರವನ್ನಿಟ್ಟಿದ್ದಾಳೆ....... "

" ಹುಂ, ಅವಳ ತಂದೆ ಕೊಟ್ಟಿರಬಹುದು " ದಿನೇಶನಿಗೆ ಸ್ವಾಗತದ ಅರ್ಥ ಪೂರ್ಣವಾಯಿತು.

" ತಂದೆ ಕೊಟ್ಟಿದ್ದಲ್ಲವಂತೆ ! "

" ಹೆಂಗಸರೆಲ್ಲ ಹೇಳುವದೇ ಹಾಗೆ " ಕಮಲುವಿಗೆ ಆಘಾತವಾದಂತಾಯಿತು

" ನನಗೆ ಜರೀ ಸೀರೆ ಬೇಡ: ಅಂಥದೊಂದು ಉಂಗುರ ಕೊಡಿಸಿ ಬಿಡಿ, "

" ಈ ಸಲ ದಿಪಾವಳಿಗೆ ಹೋದಾಗ ಉಂಗುರದ ಉಡುಗೊರೆಯನ್ನೇ ಇಸಿದುಕೊ ! ಯಾರು ಬೇಡವೆಂದರು ? "

" ನೀವೇಕೆ ಬೇಡವೆಂದೀರಿ ?.......... ಈ ಸಲ ಅಪ್ಪನಿಗೆ ಮೂರೆಳೆಯ ಚಿನ್ನದ ಸರ ಕೊಡಲು ಹೇಳಿದ್ದೇನೆ: .... ಉಂಗುರವನ್ನು ನೀವೇ ಕೊಡಬೇಕು. "

" ಇಷ್ಟೊಂದು ಅಲಂಕಾರವನ್ನು ಹೇರಿಕೊಳ್ಳಲು ನೀನೇನು ಕುರುಪಿಯೇ, ಚಿನ್ನ "

" ನಿಮ್ಮ ಬಣ್ಣದ ಮಾತೆಲ್ಲ ನನಗೆ ಗೊತ್ತು; ಮಾತು ಕೇಳಿಯೇ ಜರೀ ಸೀರೆ ಉಟ್ಟಂತಾಯ್ತು ! ಇನ್ನು ಉಂಗುರ ಮಾತ್ರ ನಾನು ಬಿಡುವವಳಲ್ಲ. "

ಉಂಗುರದ ಕನಸು ಕಾಣುತ್ತಲೇ ಕಮಲು ನಿದ್ದೆಹೋದಳು.

ಕಮಲುವಿನ ಬಯಕೆಯನ್ನು ಈಡೇರಿಸಲು ಅಸಮರ್ಥನಾದುದಕ್ಕೆ ದಿನೇಶನ ಮನಸ್ಸು ಮಾತ್ರ ಖಿನ್ನವಾಗಿತ್ತು !

§ § § § §

ಆಫೀಸಿನಲ್ಲಿ ವೃತ್ತಪತ್ರವನ್ನೋದುತ್ತಿದ್ದಾಗ ಅದಾವುದೋ ಸುದ್ದಿ ದಿನೇಶನ ಲಕ್ಷ್ಯವನ್ನೆಳೆಯಿತು. ಮತ್ತೆ ಮತ್ತೆ ಆಶ್ಚರ್ಯದಿಂದ ಅದನ್ನೇ ಓದಿದನು; ಅವನ ಕಣ್ಣುಗಳಲ್ಲಿ ಆಶೆಯ ಜ್ಯೋತಿ ಮಿನುಗಿತು.

" ಮೀರತದಲ್ಲಿ ಎರಡೂವರೆ ರೂಪಾಯಿಗೆ ಒಳ್ಳೇ ಬಂಗಾರ, ಒಂದು ತೊಲೆ ! ಒಂದು ತೊಲೆ ಕೊಂಡವರಿಗೆ ಬಂಗಾರದ ಜೊತೆಗೆ ಒಂದು ಫೌಂಟನ್‌ಪೆನ್; ಎರಡು ತೊಲೆ ಕೊಂಡವರಿಗೆ, ಜೊತೆಗೆ ಒಂದು ವಜ್ರದ ಉಂಗುರ; ಮೂರು ತೊಲೆ ಕೊಂಡವರಿಗೆ ಉಂಗುರದ ಜೊತೆಗೆ ರಿಸ್ಟವಾಚ್; ಹತ್ತುವರ್ಷಗಳ ಗ್ಯಾರಂಟೀ. ಇವುಗಳಲ್ಲಿ ಯಾವುದಾದರೂ ಸುಳ್ಳು ಎಂದು ಸಿದ್ಧಮಾಡಿಕೊಟ್ಟವರಿಗೆ ಒಂದು ಸಾವಿರ ರೂಪಾಯಿ ಬಕ್ಷೀಸು "

" ಇಷ್ಟೊಂದು ಬರೆದಿರುವಾಗ, ಅಲ್ಪ ಸತ್ಯವಾದರೂ ಇದರಲ್ಲಿರಲಿಕ್ಕಿಲ್ಲವೇ ?, " ದಿನೇಶನು ಯೋಚಿಸತೊಡಗಿದನು, " ಐದು ರೂಪಾಯಿಗಳಲ್ಲಿ ಉಂಗುರ, ಜೊತೆಗೆ ಬಂಗಾರ ! ಏನಾದರೇನು, ಉಂಗುರವನ್ನು ತೊಡಿಸಿ, ಕಮಲುವಿನ ನಗುಮುಖ ಕಾಣಬಹುದಲ್ಲ ! "

ವ್ಹಿ. ಪಿ. ಯಿಂದ ಎರಡು ತೊಲೆ ಬಂಗಾರವನ್ನು ಕಳಿಸಲು ದಿನೇಶನು ಆರ್ಡರನ್ನು ಕಳಿಸಿಯೇ ಬಿಟ್ಟನು; ಆಗ ಮನಸ್ಸಿಗೇನೋ ಕೊಂಚ ಸಮಾಧಾನವಾಯ್ತು.

‡ ‡ ‡ ‡ ‡

ಒಂದು ವಾರದ ನಂತರ ಆಫೀಸ ವಿಳಾಸಕ್ಕೆ ವಿ. ಪಿ. ಪಾರ್ಸಲ ತಲುಪಿದಾಗ, ದಿನೇಶ ಯಾರೂಇಲ್ಲದ ಸ್ಥಳದಲ್ಲಿ ಅದನ್ನು ಮೆಲ್ಲನೆ ತೆರೆದು ನೋಡಿದನು. ಬಿಳಿಯ ಹರಳಿನ ಹೊಳೆಯುವ ಉಂಗುರ, ಜೊತೆಗೆ ಒಂದು ಬಂಗಾರದ ತುಂಡು !

ಸಂಜೆಗೆ ಆಫೀಸ್ ಬಿಡುವದೇ ತಡ, ದಿನೇಶನು ಮನೆಯ ದಾರೀ ತುಳಿದನು.

" ಬಂಗಾರದ ತುಂಡನ್ನು ತನ್ನ ಪೆಟ್ಟಿಗೆಯಲ್ಲಿ ಭದ್ರವಾಗಿಟ್ಟು, ಕಮಲುವನ್ನು ಎದುರಿಸಿದನು. ದಿನೇಶನು ದಿನಕ್ಕಿಂತ ಬೇಗ ಬಂದುದಕ್ಕೆ ಕಮಲುವಿಗೂ ಆಶ್ಚರ್ಯವಾಯಿತು !

" ಅಂತೂ ನಮ್ಮಿಬ್ಬರ ನ್ಯಾಯದಲ್ಲಿ ಸೋಲುವವನು ನಾನೇ ಎನ್ನು ! " ದಿನೇಶನೇ ಮೊದಲು ಮಾಡಿದನು.

" ಇಂಥ ಮಾತು ಬೇರೆ ಮೇಲೆ ! ಯಾರು ಸೋತವರೆಂಬುದು ಗೊತ್ತೇ ಇದೆ, ಹೇಳಬೇಕೇಕೆ ಮತ್ತೆ ? "

" ಯಾರು ಸೋತವರು ನೋಡು, ನಾನೋ ? ನೀನೋ ?, " ಎನ್ನುತ್ತ ದಿನೇಶನು ಮೆಲ್ಲಗೆ ಅವಳ ಬೆರಳಿಗೆ ಉಂಗುರವನ್ನಿಟ್ಟನು.

“ ಎಲ್ಲಿ ಮಾಡಿಸಿದಿರಿ ? ನನಗಾವುದನ್ನೂ ಹೇಳಲೇ ಇಲ್ಲವಲ್ಲ ?, ” ಎಂದು ತನ್ನ ಬೆರಳಿನ ಸೌಂದರ್ಯವನ್ನು ನೋಡುತ್ತ, ದಿನೇಶನೆಡೆಗೆ, ಮಧ್ಯೆ ಪ್ರೇಮ ಪೂರಿತ ಕಟಾಕ್ಷವನ್ನೆಸೆದಳು, ಕಮಲ ! ದಿನೇಶನಿಗೆ ಇದರಿಂದ ಸಂತಸವಾದರೂ, ಇವಳು ಉಂಗುರವನ್ನು ನಿತ್ಯ ಹಾಕಿದರೆ, ಅದರ ಬಣ್ಣಕ್ಕೆಲ್ಲಿ ಮೋಸವೋ ಎಂದು ಒಳಗೊಳಗೇ ಚಿಂತಿಸುತ್ತಿದ್ದನು.

ಉಂಗುರವನ್ನು ಬೇಡುವ ಮೊದಲರಾತ್ರಿ ದೊರೆತ ಸ್ವಾಗತ,ಅಂದೂ ದಿನೇಶನ ಪಾಲಿಗೆ ದೊರೆಯಿತು.

* * * * *

ಉಂಗುರವನ್ನಿಟ್ಟಂದಿನಿಂದ ಕಮಲುವಿನ ಮರ್ಯಾದೆ ನೆರೆಹೊರೆಯಲ್ಲೆಲ್ಲ ಹೆಚ್ಚಾಯಿತು. ಇಂದಿರೆ ಬಂದು ತನ್ನ ಉಂಗುರಕ್ಕೂ ಇವಳ ಉಂಗುರಕ್ಕೂ ಹೋಲಿಸಿ ನೋಡಿಕೊಂಡು, ಇವಳದೇ ಭಾರೀ ಉಂಗುರವೆಂದು ಹೇಳಿದಳು; ಇದರ ನಿಷ್ಕರ್ಷೆಗಾಗಿ ಬೆಲೆಯನ್ನು ಕೇಳಿದಳು.

“ ನಮ್ಮ ಮನೆಯಲ್ಲಿ ಹಾಗೆಲ್ಲ ಕಡಿಮೆ ಬೆಲೆಯ ಮಾಲು ತರುವದಿಲ್ಲ ; ಯಾವುದಾದರೂ, ಅವರಿಗೆ ಭಾರೀ ಮಾಲೇ ಆಗಿರಬೇಕು ” ಕಮಲು ಗೊತ್ತಿರದಿದ್ದರೂ, ತನ್ನ ಪಕ್ಷವನ್ನು ಸಮರ್ಥಿಸಿಕೊಂಡಳು.

ಮನೆಗೆ ಬಂದು ಕೇಳಿದಾಗ, ಬರೀ ಹರಳಿನ ಬೆಲೆಯೇ ನಾಲ್ಕುನೂರೆಂದೂ, ತನ್ನ ಗೆಳೆಯ ಒಳ್ಳೆ ಪರೀಕ್ಷಕರಿಂದ ಕೊಂಡು ತಂದನೆಂದೂ ದಿನೇಶ ಹೇಳಿದನು.

ಕಮಲುವಿನ ದೃಷ್ಟಿಯಲ್ಲಿ ಅದರ ಬೆಲೆ ಮತ್ತೂ ಹೆಚ್ಚಾಯಿತು ! ಈ ವಿಷಯವನ್ನೆಲ್ಲ ಇಂದಿರೆಗೆ ಹೇಳದ್ದಕ್ಕಾಗಿ ನೊಂದುಕೊಂಡು ಮಾರನೆಯ ಬೆಳಗ್ಗೆಯೇ ಅವಳ ಮನೆಗೆ ಹೋದಳು. ತನ್ನದು ಅಷ್ಟೊಂದು ಬೆಲೆಯುಳ್ಳದ್ದಲ್ಲವೆಂದು ಇಂದಿರೆಯೂ ಒಪ್ಪಿಕೊಂಡಳು. ಕಮಲು ವಿಜಯ ಸಂಪಾದಿಸಿದವಳಂತೆ ಗಡಬಿಡಿಯಿಂದ ಹೊರಟು ಬಂದಳು.

ಇಂದಿರೆಯ ಮನೆಯಲ್ಲಿ ಉಂಗುರವನ್ನು ಮರೆತದ್ದರ ನೆನಸು ಅವಳಿಗಿಲ್ಲವೇ ಇಲ್ಲ. ಅವಳು ಹೊರಟು ಹೋದ ತರುವಾಯ, ಎರಡನ್ನೂ ಹೋಲಿಸಿ ನೋಡಿ, ತನ್ನದನ್ನೇ ಅವಳಿಗೆ ಕೊಟ್ಟರೆ ಹೇಗೆ ? ಎಂದೂ ಯೋಚಿಸಿದಳು ಇಂದಿರೆ. ಆದರೆ ಸಿಕ್ಕುಬಿಟ್ಟರೆ ಕಷ್ಟವಾದೀತೆಂದು ಅವಳ ಉಂಗುರವನ್ನೇ ಮಗಳ ಕೈಲಿ ಕಮಲೂಗೆ ಕೊಟ್ಟು ಕಳಿಸಿದಳು. ಕಮಲೂ ಆಗ ಮನೆಯಲ್ಲಿರಲಿಲ್ಲವಂತೆ ! ಬಾವಿಗೆ ಬಟ್ಟೆ ಒಗೆಯಲು ಹೋಗಿದ್ದಳು. ದಿನೇಶನೇ ಅವಳ ಕೈಯಿಂದ ಉಂಗುರವನ್ನೆತ್ತಿಕೊಂಡು ಸಮಾಚರವನ್ನೆಲ್ಲ ತಿಳಿದುಕೊಂಡು “ ಉಂಗುರವನ್ನು ಅವಳು ಮರೆತದ್ದು ಒಳ್ಳೆಯದೇ ಆಯಿತು. ” ಎಂದು ಉಸಿರೆಳೆದನು !

ಅವಳು ನಿತ್ಯ ಉಪಯೋಗಿಸಿದರೆ, ತನ್ನ ಬಣ್ಣವೆಲ್ಲಿ ಹೊರಬೀಳುವದೋ ಎಂಬ ಭಯ ಕೊಂಚ ಕಡಿಮೆಯಾಯಿತು. ಅದನ್ನು ಹಾಗೆಯೇ ಮುಚ್ಚಿಟ್ಟನು.

ಸಂಜೆ ಆಫೀಸಿನಿಂದ ಹಿಂದಿರುಗಿದಾಗ, ಕಮಲು ಪೆಟ್ಟಿಗೆಗಳನ್ನೆಲ್ಲ ಎತ್ತಿ, ಸಂದಿಗೊಂದಿಗಳಲ್ಲಿ ಏನನ್ನೋ ಹುಡುಕುತ್ತಿದ್ದಳು; ಅವಳ ಮುಖ ವಿವರ್ಣವಾಗಿತ್ತು: ದಿನೇಶನೇ ಕೇಳಿದ, " ಅದೇನು ಅಂಥ ಸಾಮಾನು, ಕಳೆದದ್ದು ? "

" ಅದೇ, ಒಂದು ರೂಪಾಯಿಯ ನೋಟು ! "

" ಅಷ್ಟೇನೇ ? ಅಷ್ಟು ಭಾರೀ ಉಂಗುರವನ್ನು ತೊಡಿಸಿದ ನಾನು, ಒಂದು ರೂಪಾಯಿಯ ನೋಟು ಕಳೆದರೆ,– ಅದೂ ನೀನು ಕಳೆದರೆ ಕೋಪಿಸಿಕೊಳ್ಳುವೆನೇ ? "

'ಉಂಗುರ' ವೆಂದೊಡನೆ ಕಮಲುವಿನ ಎದೆಯಲ್ಲಿ ಹೇಗೋ ಆಯಿತು; ದಿನೇಶನು ಎಷ್ಟು ಹೇಳಿದರೂ ಕೇಳಲಿಲ್ಲ; ಒಂದು ರೂಪಾಯಿಯ ನೋಟನ್ನು ರಾತ್ರಿ ಬಹಳ ಹೊತ್ತಿನ ವರೆಗೂ ಹುಡುಕುತ್ತಲೇ ಇದ್ದಳು.

ಮರುದಿನವೇ, ಆಫೀಸ ಕೆಲಸದ ಮೂಲಕ ನಾಲ್ಕು ದಿನ ಊರಿಗೆ ಹೋಗುವ ಪ್ರಸಂಗ, ಅನಪೇಕ್ಷಿತವಾಗಿ ದಿನೇಶನಿಗೆ ಬಂತು; ಐದನೆಯ ದಿನವೇ ಬರುವದಾಗಿಯೂ, ನೋಟು ಕಳೆದುದಕ್ಕೆ ಮನಸ್ಸಿಗೆ ಹಚ್ಚಿಕೊಳ್ಳಬಾರದಾಗಿಯೂ ಹೇಳಿ, ಅವನು ಹೊರಟುಹೋದನು. ಇತ್ತ ಎಲ್ಲ ಪೆಟ್ಟಿಗೆಗಳನ್ನು, ಮನೆಯ ಮೂಲೆ ಮೂಲೆಗಳನ್ನೂ ಹುಡುಕುವದು ಕಮಲುವಿನ ದಿನದ ಕಾರ್ಯಕ್ರಮವಾಗಿಬಿಟ್ಟಿತು ; ಅತ್ತ ದಿನೇಶನಿಗೆ ಸಂಕಟ ಈ ನಾಟಕವನ್ನು ನೋಡಲು ತಾನಿಲ್ಲವಲ್ಲ, ಎಂದು.

ಐದನೆಯ ದಿನ ಅವನು ಬಂದು ಬಾಗಿಲು ತಟ್ಟಿದಾಗ ಕಮಲುವಿನ ಹರ ಡಿದ ಕೂದಲು, ಧೂಳುಮೆತ್ತಿದ ತಲೆ ನೋಡಿ ಗಾಬರಿಯಾಯಿತು. ಎವೆಯಿಕ್ಕದೆ ಅವಳನ್ನೇ ನೋಡುತ್ತ ನಿಂತಿದ್ದ. ಅವನಿಗೆ ಕಮಲೂ ಹೇಳಿದಳು, " ಮನೆಯ ಗೋಡೆ ಗಳೆಲ್ಲ ಬಣ್ಣ ಹೋಗಿ ಅಂದಗೆಟ್ಟಿದ್ದವು ; ಬಣ್ಣ ಸವರಿದರಾಯಿತೆಂದು ನಡೆಸಿದ್ದೇನೆ."

" ಬಣ್ಣಗೆಟ್ಟದ್ದು ಗೋಡೆಯೋ ? " ಎನ್ನುತ್ತ ದಿನೇಶನು ಒಳಗೆ ನಡೆ ದನು, " ಈ ಮಧ್ಯೆ ನಿನ್ನ ಒಂದು ರೂಪಾಯಿಯ ನೋಟೂ ಸಿಕ್ಕಿರಬೇಕಲ್ಲs ?.... ಎಲ್ಲಿ ನಿನ್ನ ಬೆರಳಿನ ಉಂಗುರ ? ನನ್ನ ಗೆಳೆಯನ ಹೆಂಡತಿಗೂ ಒಂದು ಅಂಥದೇ ಬೇಕಾಗಿದೆಯಂತೆ ! "

ಕಮಲುವಿನ ಕಣ್ಣಲ್ಲಿ ನೀರು ಚಿಮ್ಮಿ ಬಂತು. " ಉಂ....ಗು....ರ, ಅದೇ! ನೋಟಲ್ಲ – ಕಳೆದದ್ದು– ಅ- -ದೇ, " ದುಃಖವನ್ನು ಬಿಗಿಹಿಡಿದು ಹೇಳಿದಳು, " ಮೊನ್ನೆ ಬಾವಿಯ ಮೇಲೆ ಒಗೆಯಲು ಹೋದಾಗಲೇ ಬಿದ್ದಿರಬೇಕು- - ಆದರೆ ನನಗೆ ನೆನಪಿಲ್ಲ: ಯಾರನ್ನು ಏನೆಂದು ಕೇಳಲಿ ? "

" ಉಂಗುರ ಕಳೆಯಿತೆ ? ಅಷ್ಟು ಬೆಲೆಯ ಉಂಗುರ ? "

" ಆದರೂ ನಾನೊಂದುಪಾಯ ಮಾಡಿದ್ದೇನೆ; ಇಲ್ಲಿ ನೋಡಿ, " ಕಳೆದು ಹೋದ ವಸ್ತು, ಪ್ರೇಮ, ಧನ ಎಲ್ಲವೂ ಇದನ್ನು ಧರಿಸಿದ ಮೂರು ದಿನಗಳಲ್ಲಿ ಹಿಂದಿರುಗುವವು, ಅನೇಕರು ಈಗಾಗಲೇ ಈ ಮಂತ್ರದ ತಾಯಿತದ ಲಾಭವನ್ನು ಪಡೆದಿದ್ದಾರೆ; ತೀವ್ರ ಗುಣಕಾರಿಯಾದುದಕ್ಕೆ ಬೆಲೆ ೧೦೦ ರೂಪಾಯಿ ; ಸಾಧಾರಣ,

೫೦ ರೂಪಾಯಿ ; ಇದರ ಯಾವುದೇ ಗುಣವು ಪುಕ್ಕಟೆಯಾದಲ್ಲಿ, ಒಂದು ಸಾವಿರ ರೂಪಾಯಿ ಬಕ್ಷೀಸು, ” ಇದನ್ನು ಓದಿ ನಿನ್ನೆಯೇ ನಾನು ೧೦೦ ರೂಪಾಯಿಗಳನ್ನು ಮನಿಯಾರ್ಡರಿನಿಂದ ಈ ವಿಳಾಸಕ್ಕೆ ಕಳಿಸಿದ್ದೇನೆ. ಇಷ್ಟು ಬೆಲೆಯು ಉಂಗುರದ ಮುಂದೆ ಒಂದು ನೂರು ರೂಪಾಯಿಯುದೇನು ? ”

“ ಈಗಾಗಲೇ ಹಣವನ್ನು ಕಳಿಸಿಬಿಟ್ಟದ್ದೀಯಾ ? ”

“ ಹೌದು, ನಿನ್ನೆಯೇ ! ”

ದಿನೇಶನು ಜೋಲಿ ತಪ್ಪಿ ನಿಂತಲ್ಲಿಯೇ ಕುಸಿದು ಕೂತನು !



# ಭಗಿನಿಯರಿಗಾಗಿ ಜೀವನದ ಕಿಡಿಗಳ ಸಂಗ್ರಹ

ಸಂಗ್ರಹಿಸಿದವರು:— **ಶ್ರೀ. ವೆಂಕಮ್ಮಾ ಕೊಯಮುತ್ತೂರ.**

೧. ಮಾತಿಗಿಂತ ಮೌನ ಹೆಚ್ಚು ಬೇಕಾಗಿದೆ. ಬಾಳಿನ ಹೋರಾಟದಲ್ಲಿ ಬಾಳುವವರ ಏರಾಟದಲ್ಲಿ ಮನುಷ್ಯನು ಬೆಳೆಯಲೂ ಬೇಕು; ಬೆಳಗಲೂ ಬೇಕು. ಬೆಳಿಗೆಇಲ್ಲದೆ ಬೆಳಗುವದು ಹೇಗೆ! ಬೆಳೆಯುವದೆಂದರೆ ಬಲಉಳ್ಳವರಾಗುವದು. ಶಕ್ತಿಸಂಗ್ರಹವೇ ಬೆಳಿಗೆಯ ಲಕ್ಷಣ. ಸಂಗ್ರಹಕ್ಕೆ ಮನವು ಏಕಾಗ್ರಬೇಕು. ವಿವಿಧ ವಿಷಯಗಳಲ್ಲಿ ಕವಲೊಡೆದ ಮನವು ಪಿಸಿಪಿಸಿದು ಹೋಗುವದು. ಒಮ್ಮುಖವಾಗಿ, ತನ್ನ ಏಳಿಗೆಗೆ ಬೇಕಾದ ಸಾರವನ್ನೇ ಹೀರಿ ಬೆಳೆದು ಬಲಿತ ತರುವಾಯ ಹಂಚುವದು ಸುಲಭ. ಚಿಕ್ಕ ಕೂಸು, ಬಿದ್ದವರನ್ನು ಎಬ್ಬಿಸದಿದ್ದರೆ ಅದಕ್ಯಾರು ಹೆಸರಿಡುವರು! ಬೆಳೆದಿದ್ದರೂ, ಬಿದ್ದವರನ್ನು ಎಬ್ಬಿಸಲಾಗದಿದ್ದರೆ ಅವರಲ್ಲಿ ಶಕ್ತಿಯ ಸಂಚಯವಾಗದೆ ಹಂಚಿಹೋಗಿದೆ ಎಂದು ಹೇಳಬಹುದು. ಮೌನವಾಗಿ, ಶಾಂತವಾಗಿ ಶಕ್ತಿಯನ್ನು ಸಂಚಯಿಸಿದಮೇಲೆ ಹಂಚುವದರಲ್ಲಿಯೂ ಸಂಚಯವೇ ತೋರುವದು. ಬೆಳೆಯುವ ಮುಂಚೆಯೇ ಬಲ ಬೀಳಬಾರದು. ಬಲಿತು ಹಣ್ಣಾದಮೇಲೆ ಹಂಚಬಹುದು. ಆದರೆ ನಾವು ಬೆಳೆಯುತ್ತಿರುವಾಗ ನಮ್ಮ ನೆರಳಿನಲ್ಲಿ ಬೇಕಾದವರು ದಣಿವಾರಿಸಿಕೊಳ್ಳಲಿ. ಆಗ ನಾವು ಮೌನದಿಂದ ಶಕ್ತಿಯನ್ನು ಸಂಗ್ರಹಿಸಿ ಬೆಳೆದು, ಸಂಗ್ರಹಿಸಿದ ಶಕ್ತಿಯ ಸದುಪಯೋಗವನ್ನು ಮುಂದೆ ಜಗತ್ತಿಗೆ ಮಾತಿನಿಂದ ಹರಡಿ ಬೆಳಗಬೇಕು. ಸ್ತ್ರೀ ಜನಾಂಗವು ಇದನ್ನರಿತು ಮಾತಿನಮಲ್ಲಿಯರಾಗದೆ, ಮೊದಲೀಗ ಮೌನದಿಂದ ಕಾರ್ಯಸಾಧಿಸಿ ಆದರ ಪ್ರತಿಫಲವನ್ನುಣ್ಣುವದು ಹಿತಕರ.

೨. 'ಮಾಡಲಾರೆ' ನೆನ್ನುವದರಲ್ಲಿ ಮೂಢತನವೂ ಇದೆ; ನೈಗಳ್ಳತನವೂ ಇದೆ. 'ಸಾಧನದಿಂದ ಇಲ್ಲದುದನ್ನು ಪಡೆದೇ ತೀರುವೆವು' ಎಂಬದು ಗೊತ್ತಿಲ್ಲದಿದ್ದರೆ ಅದು ಮೂಢತನ. ಇದ್ದ ಶಕ್ತಿಯನ್ನು ಪ್ರಯೋಗದಿಂದ 'ಇದೆ' ಎಂದು ತಿಳಿಯದಿರುವದು ನೈಗಳ್ಳತನ. ಹುಟ್ಟಿದೊಡನೆ ಯಾರೂ ಬೆಟ್ಟಹಾರಲಿಲ್ಲ! ಚಿಕ್ಕಂದಿನ ಚಕ್ಕಂದ, ಅಜ್ಞಾನಗಳು ಎಲ್ಲರಿಗೂ ಇದ್ದವು. ಆದರೆ ಕೆಲವರು ಬೆಳೆಬೆಳೆದು ಮುಗಿಲ ಮೀರಿದರು. ಹಲವರು ಹಳಹಳಿಸುತ್ತ ಹಗೆಯಸೇರಿದರು. ಬೆಳೆದವರಿಗೆ ಊರುಗೋಲು ಆತ್ಮವಿಶ್ವಾಸ. ವಿವಿಧ ವಾತಾವರಣ, ಪರಿಸ್ಥಿತಿಗಳೊಡನೆ ಹೋರಾಡುತ್ತ ನಮ್ಮ ದೇಹವು ಜೀವವನ್ನು ಹಿಡಿದಿಟ್ಟಿರುವದು ಸಾಮಾನ್ಯಶಕ್ತಿಯೇ! ಜೀವಿಸುವ ಶಕ್ತಿಯು ಶೂರರಲ್ಲಿಯೂ ಉಂಟು, ಹೇಡಿಗಳಲ್ಲಿಯೂ ಉಂಟು, ಅಂತಹ ಶಕ್ತಿಯ ಭಾಂಡಾರವನ್ನಿಟ್ಟುಕೊಂಡು 'ನನ್ನಿಂದಾಗದು; ನನ್ನಲ್ಲಿ ಬಲವಿಲ್ಲ' ಎಂದು ಉಸುರುವದು ಬಹಳ ಹೇಯವಾದ ಜಿನೇತನ, ಆತ್ಮಹತ್ಯ.ಒಳಗಿರುವ ಸಹಜ ಶಕ್ತಿಯ

ಬೀಜವನ್ನು ಸಾಧನದ ಹೊಲದಲ್ಲಿ ಬಿತ್ತಿ, ಅಸಂಖ್ಯ ಶ್ರೇಷ್ಠಕಾರ್ಯದ ಬೆಳೆಯನ್ನು ಹೊಂದಲಿಕ್ಕೆ, ಆತ್ಮವಿಶ್ವಾಸದ ಮಳೆಯು ಅತ್ಯಗತ್ಯ. ಆತ್ಮವಿಶ್ವಾಸವಿಲ್ಲದವರು, ಕೈಯಲ್ಲಿ ಆಹಾರವನ್ನು ಹಿಡಿದುಕೊಂಡು ಉಪವಾಸ ಸತ್ತಂತೆ.

ಈಗ ಹೆಣ್ಣುಮಕ್ಕಳಲ್ಲಿ, ಮೂಢತನದಿಂದೆನ್ನಿ ಅಥವಾ ವೈಗಳ್ಳತನದಿಂದೆನ್ನಿ ಅಂತೂ ಈ ಗುಣಗಳು ಮನೆಮಾಡಿವೆ. ಅವರು ನಿಜವಾಗಿ ತಮ್ಮ ಕೈಯಲ್ಲಿದ್ದ ಆಹಾರವನ್ನು ಸೇವಿಸಿ ಸುಖಿಗಳಾಗಬೇಕಾದರೆ ತಮ್ಮ ಈ ಮೂಢತನದ ಪರದೆಯನ್ನು ಹರಿದೊಗೆಯಬೇಕು.

೩. ಬಯಕೆಯು ಜೀವ; ಎಣಿಕೆಯು ಭಾವ. ಜೀವವು ಮೊದಲು ಹುಟ್ಟುತ್ತದೆ; ನಂತರ ಭಾವವನ್ನು ಕಟ್ಟುತ್ತದೆ. ಬಾಳುವದಕ್ಕಾಗಿ ಜೀವ ಬಯಸುತ್ತದೆ. ಆಳುವದಕ್ಕೆ ಎಣಿಸುತ್ತದೆ. ಬಯಕೆಯು ಪ್ರಾಣವನ್ನು ಉಳಿಸುತ್ತದೆ; ಎಣಿಕೆಯು ಬುದ್ಧಿಯನ್ನು ಬೆಳೆಸುತ್ತದೆ. ಜೀವವೆಂಬದೊಂದು ಗಿಡ. ಅದರಲ್ಲಿ ಬುದ್ಧಿಎಂಬ ಕೆಲವು ಹೂಗಳು. ಹೂಗಳು ಸೊಗಸಿನ ತೆನೆಯೂ, ಸಂತಾನದ ಮನೆಯೂ ಹೌದು. ಗಿಡದ ಜೀವವು ಒಂದಾಗಿ ಕೂಡಿ, ಮೊಗ್ಗಾಗಿಮೂಡಿ, ಹೂವಾಗಿ ಹರಡಿ, ಬೀಜದಲ್ಲಿ ಬಿಡಿಯಾಗುವದು. ಮುಂದೆ ಅದೇ ಅನೇಕ ಗಿಡಗಳ ಬೀಡಾಗುವದು. ಇದೇ ಒಂದು ಜೀವನದ ಹಾಡಾಗುವದು.

ಹಾಗೆಯೇ ಬುದ್ಧಿಯು ಜೀವನವನ್ನು ಮಿರುಗಿಸಲೂ ಬೇಕು, ಹೊಸ ಜೀವನಗಳನ್ನು ಚಿಗುರಿಸಲೂ ಬೇಕು. ಬುದ್ಧಿಯಲ್ಲಿ ಬೆಳೆಯದ ಜೀವನಕ್ಕೆ ಮಾನವ ಸಮಾಜದಲ್ಲಿ ಬೆಲೆ ಇಲ್ಲ. ಮನುಷ್ಯ ಪ್ರಾಣಿಯನ್ನು ಮಾನವತ್ವಕ್ಕೆ ಮುಟ್ಟಿಸುವದು ಬುದ್ಧಿ.

ಆದರೆ ಈಗ ಜಗತ್ತಿನ ಮಾನವಜನಾಂಗದ ಅರ್ಧಭಾಗವಾದ ಸ್ತ್ರೀಯರು ಈ ಬುದ್ಧಿಬಲಕ್ಕೆ ಹೆಚ್ಚು ಮಹತ್ವ ಕೊಡದಿರುವದರಿಂದ ಜಗತ್ತಿನ ಬೆಳಕು ಕಡಿಮೆಯಾಗಿದೆ. ನಿಜವಾಗಿ ಜಗತ್ತು ಬೆಳಗಬೇಕಾದರೆ ಮೊದಲು ಸ್ತ್ರೀಯರು ಬುದ್ಧಿಗಳಿಸಲು ಹೋರಾಡಬೇಕು. ಅಂದರೆ ಸುಶಿಕ್ಷಣಕ್ಕಾಗಿ ಹಾತೊರೆಯಬೇಕು. ಅಂದರೆ ಅವರ ಕಾರ್ಯಸಿದ್ಧಿ.

೪. ಸುಡುವ ಹಾಲು ಮುಟ್ಟಿದ ಬೆಕ್ಕು ಮಂಜಿನ ನೀರಿಗೂಅಂಜುವದು. ಸಾಮಾನ್ಯ ಮನುಷ್ಯರ ಗುಣವಾದರೂ ಇದೇ. ಹಿಂದಿನ ಅನುಭವದ ಪರದೆಯೊಳಗಿಂದಲೇ ಅವರ ಮುಂದಿನ ಅನುಭವದ ಸಂಗ್ರಹ. ಅವರ ವಿವೇಕದ ಒರೆಗಲ್ಲೂ ಅದೇ–ಧರ್ಮ, ಅಧರ್ಮ, ನೀತಿ, ಅನೀತಿ, ಎಲ್ಲವನ್ನೂ ಅದೇ ನಿರ್ಣಯಿಸಬೇಕು. ಅದು ದೂಡಿದೊಡೆ ಒಂದು ಹೆಜ್ಜೆ ಮುಂದೆ. ಅದು ಬೇಡೆಂದೊಡೆ ಮೂರು ಹೆಜ್ಜೆ ಹಿಂದೆ. ಆ ಹಿಂದಿನ ಅನುಭವವೇ ಅವರಿಗೆ ದಾರಿತೋರುವ ವೇದ. ಆದರೆ ಇದು ಎಲ್ಲ ಮನುಷ್ಯರ ಮನಸ್ಸಿನ ಗುಣವಲ್ಲ. ಹೇಳಿದಷ್ಟು ಕೇಳು, ಹಾಕಿದಷ್ಟು ತಿನ್ನು, ಎಂಬ ಗುಣವುಳ್ಳವರ ಸ್ವಭಾವವದು. ಈ ಜನರಿಗೆ ‘ ಇದ್ದಂತೆ ಇರುವದು

ಜಗತ್ತಿನ ಗುಣವಲ್ಲ' ವೆಂಬದು ತಿಳಿಯದು. ಒಂದೇ ವಸ್ತುವಿನ ಅನುಭವವು ವ್ಯಕ್ತಿ ವ್ಯಕ್ತಿಗೂ ಬೇರೆಯಾಗಿರುವದು. ಒಂದೇ ವ್ಯಕ್ತಿಯ ಮನಸ್ಸು ಸಹ ದಿನದಿನಕ್ಕೂ ಬೇರೆ ರೂಪವನ್ನು ಹೊಂದುವದು. ಆದ್ದರಿಂದ ಒಬ್ಬನ ಅನುಭವವೇ ಎಲ್ಲರಿಗೂ ಸಿದ್ಧಾಂತವಾಗಲಾರದು; ಒಂದೇ ಕಾಲದ ಸಿದ್ಧಾಂತವು ತ್ರಿಕಾಲಕ್ಕೂ ಯೋಗ್ಯ ವೆನಿಸಲಿಕ್ಕಿಲ್ಲ. ಆದ್ದರಿಂದ ರೂಢಕಲ್ಪನೆಯ ಪರದೆಯನ್ನು ಸರಿಸಿ ನಾಲ್ಕೂ ನಿಟ್ಟಿಗೆ ದೃಷ್ಟಿಯನ್ನೊಗೆಯುವದು ಒಳಿತು. ಕಾಲಕಾಲಕ್ಕೂ ರೂಢಿಯ ಬಲೆಗಳನ್ನು ಕಡಿದೊಗೆಯುವಂತಹ ಕಡುಗಲಿಗಳು ಹುಟ್ಟಿದರೆಂದೇ, ಮಾನವ ಸಮಾಜವು ಇಂದು ಈ ಪರಿಸ್ಥಿತಿಯಲ್ಲಾದರೂ ಉಳಿದಿದೆ. ಇಲ್ಲದಿದ್ದರೆ ತನ್ನ ಬಲೆಯ ಚಂದಕ್ಕೆ ತಾನೇ ಮರುಳಾಗಿ ಸುತ್ತುಸುತ್ತಿಕೊಂಡು ಸಾಯುವ ರೇಶ್ಮೆಯಹುಳುವಿನ ಪರಿಸ್ಥಿತಿಗೇ ಬರುತ್ತಿತ್ತು ನಮ್ಮ ಬಾಳು.

ಈಗ ನಡೆದು ಬರುತ್ತಿರುವದೇ ನಿಜ, ಬರೆದಿಟ್ಟದ್ದಲ್ಲ. ಈ ಮರ್ಮವನ್ನು ಗಂಡಸರು ಚನ್ನಾಗಿ ಅರಿತಿರುವರೆಂದೇ ಅವರು ಸ್ವಾವಲಂಬಿಗಳಾಗಿದ್ದಾರೆ. ಅಧಿಕಾರಿಗಳಾಗಿದ್ದಾರೆ, ಆಳುವವರಾಗಿದ್ದಾರೆ, ಹೆಚ್ಚೇಕೆ ಹೆಣ್ಣನ್ನು ಹಿಡಿತದಲ್ಲಿಟ್ಟುಕೊಳ್ಳುವವರಾಗಿದ್ದಾರೆ. ಆದರೆ ಹೆಣ್ಮಕ್ಕಳು ಇನ್ನೂವರೆಗೂ ಬರೆದಿಟ್ಟ ಗ್ರಂಥಗಳ ಅಮೌಲ್ಯ ನುಡಿಗಳಿಗೇ ಮಾರುಹೋಗಿರುವದರಿಂದ, ಜಗತ್ತಿನ ಬದಲಾವಣೆಯ ಓಘಕ್ಕೆ ಸಿಕ್ಕಿದ್ದರೂ ಸಹ, ಸಿಕ್ಕಿಲ್ಲವೆಂಬ ಭ್ರಮೆಯಲ್ಲಿರುವದರಿಂದ ಅವರು ರೇಶ್ಮೆಯ ಹುಳುವಿನ ಗೆಳತಿಯರಾಗಿದ್ದಾರೆ. ಇನ್ನಾದರೂ ಅವರು ತಮ್ಮ ಅಸ್ತಿತ್ವವನ್ನರಿತು ನಡೆಯುವ ಹಂಬಲ ತೋರಿಸಿ ಬಲೆಯಿಂದ ಹೊರಬಿದ್ದಲ್ಲಿ ಜಗತ್ತಿನ ಪರಿಸ್ಥಿತಿಯು ನಿಚ್ಚಳವಾಗಿ ಕಂಡೀತು.



# ರಾಮರಾಜ್ಯ ( ಲಾವಣಿ )

ಲೇ:— ಶ್ರೀ. ಚಿ. ವ. ಜಯತೀರ್ಥ, ಚಿಕ್ಕಮಗಳೂರ.



ಇಂದಿನ ಜಗತ್ತು ಮ. ಗಾಂಧಿಯವರ ಪ್ರಯತ್ನದಿಂದ ರಾಮರಾಜ್ಯವಾಗಬೇಕಾದದ್ದು, ರಾವಣನ ರಾಜ್ಯಕ್ಕಿಂತಲೂ ಕ್ರೂರಿಯಾಗಿದೆ! ಯಾವದೇ ರೀತಿಯಿಂದ ಸಬಲರಿದ್ದ ಜನರಿಂದ ದುರ್ಬಲರಿಗಾಗುತ್ತಿರುವ ಅನ್ಯಾಯವು ಜಗತ್ತಿನಲ್ಲಿ ದಿನದಿನಕ್ಕೆ ಹೆಚ್ಚಾಗುತ್ತಿರುವದನ್ನು ಕಂಡು, ರಾವಣನಂತಹ ಕ್ರೂರ ರಾಕ್ಷಸನೂ ಸಹ ಈ ಮಾನವ ಜಗತ್ತು ದಾನವ ಜಗತ್ತಾದ ಬಗ್ಗೆ ಆಶ್ಚರ್ಯ ಹೆದರಿಕೆಪಡುವ ಪ್ರಸಂಗವಿದೆ !!

ರಾಮರಾಜ್ಯ ಬಂದೀತೊ । ರಾಮರಾಜ್ಯ ಬಂದಿತೊ
ರಾಮರಾಮ ರಾಮರಾಮ । ಎಂತಕಾಲ ಬಂದಿತೊ
ಎಂತಕಾಲ ಬಂದೀತೋ । ಬಂದಿತೋ || ಪ ||

ಒಂದೆ ಒಂದು ದೂರುಕೇಳಿ । ರಾಮನೊಂದನೋ ।
ಒಂದುಲಕ್ಷ ದೂರಕೇಳಿ । ಯಾರುನೊಂದರೋ
ಈಗ ಯಾರುನೋಯ್ವರೋ ||

ರಾಮನೀಗ ಒಂದುವೇಳೆ ಪುನಃ ನೋಡುವಾ ಎಂದು
ಭೂಮಿ ಮೇಲೆ ಹುಟ್ಟಬಯಸಿ ಇಳಿದುಬಂದರೆ ।
ಅಮ್ಮಮ್ಮ ಹೀಗೆ ಉಂಟೆ ಭೂಮಿಯಲ್ಲಿ ಎಂದುಕೊಂಡು
ಭೂಮಿ ಮೇಲೆ ಇಟ್ಟಕಾಲ ಮೇಲೆ ತೆಗೆವನೋ ||

ಒಂದೆಭಾರಿ ಹಾರಿ ಎದ್ದು ಹಿಂದೆ ಮುಂದೆ ತಿರುಗದೇನೆ
ಬಿದ್ದೆ ಕೆಟ್ಟೆನೆಂದು ಓಡಿ । ಭೂಮಿ ಬಿಡುವನೋ ।
ಬಿಟ್ಟು ತನ್ನ ಮೂಗ ಮೇಲೆ ಬೆರಳನಿಡುವನೋ ||
ಸ್ವರ್ಗದಲ್ಲ ಗಾಂಧಿಬಂದು ಹೇಳಿದೆಲ್ಲ ಮಾತು ಸುಳ್ಳೆ
ನಿನ್ನ ರಾಜ್ಯ ಭೂಮಿಯಲ್ಲಿ । ಪುನಃ ತರಲು ನಾನು ಬಹಳ
ಸೆಣಸಿ ಸೆಣಸಿ ಜೀವವನ್ನು ಅದಕೆ ಬಿಟ್ಟೆನಃ ||
ನಾನು ಇಲ್ಲಿ ಬಂದ ಮೇಲೆ ಜನರು ನನ್ನ ತತ್ವವರಿತು
ನಿನ್ನ ರಾಜ್ಯವನ್ನು ಪುನಃ ಇಳೆಗೆ ತರುವರು ।

ಎಂದು ಗಾಂಧಿ ನನ್ನ ಭಕ್ತ ನುಡಿವಮಾತು ಸುಳ್ಳೆ ಎಂದು
ಮೂಗಮೇಲೆ ಬೆರಳನಿಡುವ ರಾಮಚಂದ್ರನು ।
ರಾಮನಾಣೆಗೂ ರಾಮ ಚಂದ್ರನಾಣೆಗೂ ॥ ೧ ।

ಲಂಕೆಯಾಳುತಿದ್ದನಂತೆ ದುಷ್ಟರಾವಣ
ಆದರವನ ರಾಜ್ಯದಲ್ಲು ಶಾಂತಿ ಸೌಖ್ಯ ವಿದ್ದವು ॥
ಆ ದಶಶಿರ ರಾವಣನನ ಕೊಂದ ರಾಮನೇ ।
ಒಂದು ವೇಳೆ ಕರುಣೆಇಟ್ಟು । ಬದುಕು ಹೋಗು ಭೂಮಿಯಲ್ಲಿ
ವೈರಬೇಡ ನಮ್ಮೊಳೆಂದು । ವರವನಿತ್ತರೆ ॥
ಭೂಮಿದಾರಿಯಲ್ಲಿ ಬರುತ । ನೋಡಿ ನಿಂತು ದೂರದಲ್ಲೆ
ತನ್ನ ಕಣ್ಣ ತಾನೆ ಉಜ್ಜಿ । ನಂಬಲಾರದೆ ॥
ಏನು ಭೂಮಿ ಇಷ್ಟು ಕೆಟ್ಟು । ಹೋಯ್ತು ಅಯ್ಯೊ ಎಂದುಕೊಂಡು
ಹುಟ್ಟಲಾರೆ ಭೂಮಿಯಲ್ಲಿ ಎಂದು ತಿರುಗುವಾ
ತಿರುಗಿ ಹೋಗಿ ರಾಮನಲ್ಲಿ ಹೀಗೆ ಪೇಳುವಾ ॥ ೨ ॥

ರಾಮಚಂದ್ರ ನನ್ನ ಗರ್ವ । ಇಂದು ಉಡುಗಿತಯ್ಯ ಕೇಳು ।
ಇಷ್ಟು ದಿವಸ ನಾನೆ ಕ್ರೂರಿ । ಎಂದು ಮೆರೆದೆನು ।
ಭೂಮಿಯಲ್ಲಿ ಕಂಡೆನೀಗ ಸಾವಿರಾರು ಮಂದಿಯನ್ನು
ಜನರ ರಕ್ತ ಹೀರುತಿದ್ದ ದಾನವರನ್ನು ।
ಮಾನಿನಿಯರ ಮಾನಹಾನಿ । ಯಾಗುತಿರುವ ಪರಿಯನು
ಎನ್ನ ಎರಡು ಹತ್ತು ಕಣ್ಣು । ಜಗದ ಕಷ್ಟವನ್ನು ಕಂಡು
ಮುಚ್ಚಿತಯ್ಯ ಅಬ್ಬ ಕಣ್ಗೆ ಕತ್ತಲಾಯಿತು ॥
ನನ್ನ ಕೊಂದು ನೀನು ಪುಣ್ಯ । ಗಳಿಸಿಕೊಂಡೆ ರಾಮಚಂದ್ರ
ಸತ್ತು ನಾನು ಪುಣ್ಯವಂತನಾದೆ ವಂದನೆ । ನಿನಗೆ
ನೂರುವಂದನೆ ॥ ೩ ॥



# ಅಂಗಮರ್ದನ (MASSAGE)

ಲೇ :— **ಡಾ. ವನವಿಹಾರಿ**

ಈಶನಿರ್ಮಿತ ಪ್ರತಿಯೊಂದು ಕೃತಿಯೂ ಪೂರ್ಣ ಸ್ವಾವಲಂಬಿ ಮತ್ತು ಸ್ವಯಂಪೂರ್ಣ ಇರುತ್ತದೆ. ಬುದ್ಧಿವಂತನಾದ ಮನುಷ್ಯನು ತನ್ನ ಬುದ್ಧಿ ಪ್ರಭಾವದಿಂದ ಆ ಈಶಕೃತಿಯಲ್ಲಿ ದೊಡ್ಡ ಸಂಸ್ಕೃತಿಯ ಹೆಸರಿನ ಕೆಳಗೆ ತಿರುವು ಮುರುವು ಮಾಡಿ ಅದನ್ನು ವಿಕೃತಗೊಳಿಸಿದ್ದಾನೆ. ಆ ವಿಕೃತಿಯನ್ನೇ ಸರಿಪಡಿಸಲು ವಿವಿಧ ಹಂಚಿಕೆಗಳನ್ನು ಮಾಡುತ್ತಲಿದ್ದಾನೆ. ಮತ್ತು ನಿಜವಾದ ಸ್ವಯಂಪೂರ್ಣವಾದಂಥ ಈಶಕೃತಿಗೆ ವಿಕೃತಸ್ವರೂಪವನ್ನು ಕೊಟ್ಟಿದ್ದಾನೆ. ಮತ್ತು ಈಶಕೃತಿಯ ಬಗ್ಗೆ ಅಜ್ಞಾನವನ್ನು ಸಂಪೂರ್ಣವಾಗಿ ಹರಡಿದ್ದಾನೆ. ಮತ್ತು ಹರಡುತ್ತಲಿದ್ದಾನೆ. ಈ ಅಜ್ಞಾನಕ್ಕೆ ಮೊದಲೇ ಅಜ್ಞಾನದಲ್ಲಿ ಇಡಲ್ಪಟ್ಟಂಥ ಹೆಣ್ಣುಮಕ್ಕಳು ನೀತಿ ಮತ್ತು ಧರ್ಮದ ಹೆಸರಿನಲ್ಲಿ ತುಂಬಾ ಬೆಂಬಲ ಕೊಟ್ಟಿದ್ದಾರೆ. ಮತ್ತು ಕೊಡುತ್ತಲಿದ್ದಾರೆ. ಎಲ್ಲ ಪ್ರಾಣಿಗಳ ದೇಹದಂತೆ ಮನುಷ್ಯ ಪ್ರಾಣಿಯ ದೇಹವಾದರೂ ಸ್ವಯಂಪೂರ್ಣ ಮತ್ತು ಸ್ವಾವಲಂಬಿಯಾಗಿರುವದು. ಪ್ರತಿಯೊಂದು ಪ್ರಾಣಿಯು ಆಕಸ್ಮಿಕವಾಗಿ ಏನಾದರೂ ತಪ್ಪುಮಾಡಿದಲ್ಲಿ ದೇಹದಲ್ಲಿ ವ್ಯತಾಸವುಂಟಾಗುವದು. ಆ ವ್ಯತ್ಯಾಸವನ್ನು ಸರಿಪಡಿಸಲು ದೇಹರಚನೆಯಲ್ಲಿಯೇ ವ್ಯವಸ್ಥೆಯುಂಟು. ಅದರ ಲಾಭವನ್ನು ಮಾನವೇತರ ಪ್ರಾಣಿಗಳೆಲ್ಲಾ ಮಾಡಿಕೊಳ್ಳುತ್ತಿರುವವು. ಆದರೆ ಮನುಷ್ಯಪ್ರಾಣಿಯು ಮಾತ್ರ ತತ್ವಶಃ ಇದನ್ನು ಒಪ್ಪಿ ವ್ಯವಹಾರತಃ ತನ್ನ ಜಾಣತನವನ್ನು, ತನ್ನ ಬುದ್ಧಿ ಪ್ರಭಾವವನ್ನು ತನ್ನ ಅಜ್ಞಾನಿ ಬಂದುಭಗಿನಿಯರಲ್ಲಿ ತೋರಿಸುವದಕ್ಕಾಗಿ ವಿವಿಧ ಹಂಚಿಕೆಗಳನ್ನು ಮಾಡುತ್ತಾನೆ. ಆ ಹಂಚಿಕೆಗಳೆಂದರೆ ವಿವಿಧ ತೆರನಾದ ಔಷಧಿಗಳ ಶೋಧಗಳು. ಅವುಗಳಿಗೆ ದೇಶ, ಕಾಲಮಾನ, ಪರಿಸ್ಥಿತಿಗನುಸರಿಸಿ ಏಷ್ಯಾಖಂಡದಲ್ಲಿ ಆಯುರ್ವೇದ, ಯುನಾನಿ ಮತ್ತು ಯುರೋಪಖಂಡದಲ್ಲಿ ಎಲೋಪಥಿ, ಹೋಮಿಯೋಪಥಿ ಮುಂತಾದ ಹೆಸರುಗಳಿಂದ ವಿವಿಧ ಪದ್ಧತಿಗಳು ಮೆರೆಯುತ್ತಿರುವವು. ಆದರಲ್ಲಿ ಇಂಜಿಕ್ಷನ್, ಇನಾಕ್ಯುಲೇಷನ್, ಭಸ್ಮ, ಅರಿಷ್ಟ, ಚೂರ್ಣ ಮುಂತಾದ ಶಬ್ದಾಡಂಬರದ ಜಾಲದಲ್ಲಿ, ಈಶನಿರ್ಮಿತ ತೀರ ಸುಲಭವಾದ ಉಪಾಯದ ಜ್ಞಾನವನ್ನು ಕಳೆದುಕೊಂಡು ಅರ್ಥ ಮತ್ತು ದೇಹ ಇವೆರಡನ್ನೂ ಕೆಡಿಸಿಕೊಂಡು ದುಃಖಮಯ ಜೀವನವನ್ನು ಸಾಗಿಸುತ್ತಿರುವರು. ಇಂಥ ಕಳೆದುಕೊಂಡಂಥ ಸುಲಭೋಪಾಯದಲ್ಲಿ "ಮಸಾಜ" ಅಂದರೆ ಅಂಗಮರ್ದನವೆಂಬ ಶಾಸ್ತ್ರವು ಒಂದಾಗಿದೆ. ಒಬ್ಬ ಗಂಡಸಿನ ಶಕ್ತಿಗಳು ಒಂದು ವೇಳೆ ಸ್ವಾವಲಂಬಿಯಾಗಿರದಿದ್ದಲ್ಲಿ ಹೆಣ್ಣಿನ ಸಹಕಾರದಿಂದ ಮನುಷ್ಯ ದೇಹವು ಪೂರ್ಣವಾಗುವಂತೆ ಈಶಕೃತ ಸೃಷ್ಟಿಧರ್ಮವು ಎಚ್ಚರ ತೆಗೆದುಕೊಂಡಿದೆ. ಪರಸ್ಪರ ಸಹಕಾರ, ಸಹವಾಸ ಇವುಗಳಿಂದ ಮನುಷ್ಯನು ತನ್ನ ಬೇನೆಗಳನ್ನೆಲ್ಲಾ ಕಳೆವ

ಕೊಂಡು ಚಿರಸುಖಿಯಾಗುವಂತೆ ಗಂಡು ಹೆಣ್ಣಿನ ದೇಹರಚನೆ ಇರುತ್ತದೆ. ದೇಹ ದೊಳಗೆ ವ್ಯತ್ಯಾಸವುಂಟಾಗದಂತೆ ಮತ್ತು ಒಂದು ವೇಳೆ ಉಂಟಾದಲ್ಲಿ ಅದನ್ನು ಸರಿಪಡಿಸುವ ಕೆಲಸವು ದೇಹದೊಳಗಿನ ರುಧಿರಾಭಿಸರಣಕ್ರಿಯೆಯು ಮಾಡುತ್ತದೆ. ವಿಕೃತಿಯು ಉಂಟಾಗಿದ್ದ ಈ ರುಧಿರಾಭಿಸರಣಕ್ರಿಯೆಯಿಂದ, ಆ ವಿಕೃತ ಸ್ಥಳಕ್ಕೆ ರಕ್ತಸಂಚಾರವು ಹೆಚ್ಚು ಅಥವಾ ಕಡಿಮೆ ಮಾಡುವದರಿಂದ ಆ ವಿಕೃತಿಯು ಸರಿ ಪಡಿಸಲ್ಪಡುತ್ತದೆ. ಈ ಕೆಲಸವು '.ಮಸಾಜ'ದಿಂದ ಹೆಚ್ಚು ಚೆನ್ನಾಗಿ ಸಾಧಿಸುವದು. ಈ ಮಸಾಜದಿಂದ ಎಲ್ಲ ತರಹದ ಜ್ವರ, ಪ್ಲೇಗ, ಕಾಲರಾ, ಕ್ಷಯ, ದಮ್ಮು, ಸಂಧಿ ವಾತ ಮುಂತಾದ ಎಲ್ಲ ಬೇನೆಗಳು ಗುಣಹೊಂದುವವು. ತಲೆಶೂಲೆಯಿದ್ದಾಗ ಅಥವಾ ಎಲ್ಲಿಯೇ ಬಾವುವುಂಟಾದಲ್ಲಿ ಮತ್ತು ದಣಿವಾದಲ್ಲಿ ಈ ದೇಹ ತಿಕ್ಕುವದ ರಿಂದ ಯಾವ ಔಷಧಿ, ಇಂಜಕ್ಷನ್‌ಗಳಿಂದ ಸಮಾಧಾನವಾಗದಷ್ಟು ಇದರಿಂದ ಸಮಾಧಾನವಾಗುತ್ತದೆ. ಇಷ್ಟೇ ಅಲ್ಲ, ಉತ್ತರರಾಮಾಯಣದಲ್ಲಿ ರಾಮನು ವಾಲ್ಮೀಕಿಯ ಆಶ್ರಮಕ್ಕೆ ಹೋದ ಕಾಲಕ್ಕೆ ಸೀತೆಯನ್ನು ನೆನೆಸಿ ಮೂರ್ಛೆಯನ್ನು ಹೊಂದಿದಾಗ ಸೀತೆಯ ಅದೃಶ್ಯ ಸ್ಪರ್ಶದಿಂದ ಸಹಿತ ಎಚ್ಚರಗೊಳ್ಳುತ್ತಿದ್ದನೆಂದು ಉಲ್ಲೇಖವಿದೆ. ರಾಮ ಮತ್ತು ಸಾಧುಸಂತರ ಕೇವಲ ಸ್ಪರ್ಶ ಮಾತ್ರದಿಂದ ಕಲ್ಲು ಮನುಷ್ಯರಾದದ್ದು, ಸತ್ತವರು ಬದುಕಿದ್ದ ಮುಂತಾದ ಉದಾಹರಣೆಗಳು ಉಂಟು. ಈ ಅಂಗಮರ್ದನ ಕಲೆಯನ್ನು ನಾವು ಅಭ್ಯಸಿಸಿ, ನಮ್ಮ ಪ್ರಪಂಚದಲ್ಲಿ ಉಪಯೋಗಕ್ಕೆ ತಂದಲ್ಲಿ ಎಷ್ಟು ಕಲ್ಯಾಣವಾಗುವದು ? ಅವನ್ನೂ ಹೇಳಲಿಕ್ಕೆ ಬಾರದು. ಅದರಲ್ಲಿ ಹೆಣ್ಣುಮಕ್ಕಳು ಶ್ರದ್ಧಾಭಕ್ತಿಯಿಂದ ತಮ್ಮ ಪ್ರೇಮಲ ಅಂತಃಕರಣದ ಸ್ಪರ್ಶದಿಂದ ತಮ್ಮ ಪ್ರಪಂಚದಲ್ಲಿ ಎಲ್ಲ ದುಃಖವನ್ನು ಹೋಗಲಾಡಿಸಿ ನಂದನವನದ ಸೌಖ್ಯ ವನ್ನು ಉಂಟುಮಾಡಬಲ್ಲರು. ಈ ವಿದ್ಯೆಯಾದರೂ ಔಷಧಿ ಶಾಸ್ತ್ರದಷ್ಟು ಬಿಗಿ ಯಾಗಿರುವದಿಲ್ಲ. ಆದ್ದರಿಂದ ಇಲ್ಲದ ಸಲ್ಲದ ಪಾವಿತ್ರ್ಯದ ಮತ್ತು ನೀತಿಧರ್ಮ ಮುಂತಾದ ಮಡಿವಂತಿಕೆಯ ಕಲ್ಪನೆಯಿಂದ ಗಂಡಸು ಹೆಂಗಸು ಎಂಬ ಭೇದಭಾವವನ್ನು ಇಟ್ಟುಕೊಳ್ಳದೆ ಈ ಅಂಗಮರ್ದನವನ್ನು ಹೆಚ್ಚಾಗಿ ರೂಢಿ ಯಲ್ಲಿ ತರಬೇಕು. ಕೇವಲ ಬೆನ್ನುಹುರಿಯನ್ನು ಸರಿಯಾಗಿ ತಿಕ್ಕಬಲ್ಲಂಥ ತಜ್ಞರು ವಿಷಮ ಜ್ವರದಂಥ ಕಟ್ಟಿನ ಜ್ವರವನ್ನು ಕೇವಲ ಮೂರು ತಾಸು ಗಳಲ್ಲಿಯೇ ಗುಣಪಡಿಸಿದ್ದಾರೆ. ಈ ಅಂಗಮರ್ದನವು ಅಪ್ರತ್ಯಕ್ಷ ( ಪ್ಯಾಸಿವ್ ) ವ್ಯಾಯಾಮವಿರುತ್ತದೆ. ಹಾಸಿಗೆ ಹಿಡಿದುಕೊಂಡ ಮಲಗಿದವರ ದೇಹದ ಚಲನವಲನ ಕ್ರಿಯೆಗಳನ್ನು ನಾವು ಇಂಜೆಕ್ಷನ್ ಇನಾಕ್ಯುಲೇಶನ್ ಮುಂತಾದ ಉತ್ತೇಜಕ ಔಷಧಿಗಳಿಂದ ಮಾಡಿಸಲು ಯತ್ನಿಸುತ್ತಿರುವದರಿಂದ ಹೃದಯಕ್ಕೆ ಹೆಚ್ಚಿಗೆ ಭಾರಬಿದ್ದು "ಹಾರ್ಟ್‌ಫೇಲ್". ಆಗಿ ನಮ್ಮ ಪ್ರಿಯ ಬಂಧು ಬಾಂಧವರು ಮೃತ್ಯುವಿನದವಡೆಯಲ್ಲಿ ಸಿಕ್ಕು ಒಡ್ಡಾಡುತ್ತಿರುವರು. ಇವುಗಳ ಬದಲಾಗಿ ನಾವು ಮೈ ತಿಕ್ಕುವ ಶಾಸ್ತ್ರವನ್ನು ರೂಢಿಯಲ್ಲಿ ತಂದಲ್ಲಿ ಹೃದಯದ ಮೇಲಿನ ಭಾರವು ಕಡಿಮೆಯಾಗಿ ಉತ್ತೇಜಕ ಔಷಧಗಳಿಂದ ಆಗತಕ್ಕ ಕಾರ್ಯ, ಅಂದರೆ ಏತಕ್ಕೆ ನಾವು

'ಡೇರಿವೇಟಿವ್'(Derivative)ಕ್ರಿಯೆಯೆಂದು ಅನ್ನುತ್ತೇವೆ, ಅದರಂತೆ ಸುಲಭವಾಗಿ ಕ್ರಿಯೆಯಾಗಿ ರೋಗಿಯು ಬೇಗನೆ ಗುಣಮುಖಿಯಾಗುವನು. ಆದ್ದರಿಂದ ಯಾವ ಭಗಿನಿಯರು ತಮ್ಮ ಬಂಧುಬಾಂಧವರು, ಮಕ್ಕಳು ಮರಿಗಳು ರೋಗಕ್ಕೆ ಬಲಿಬಿದ್ದು ಅಕಾಲಮರಣಕ್ಕೆ ತುತ್ತಾಗಬಾರದೆಂದು ಬಯಸುವರೋ ಅವರು ಈ ವಿದ್ಯೆಯನ್ನು ಅವಶ್ಯ ಕಲಿತು ಪ್ರಚಾರಮಾಡಬೇಕು. ಸಣ್ಣಪುಟ್ಟ ಬೇನೆಗಳಿಗಾಗಿ ಹೌಹಾರಿ ಕೊಂಡು ತಮ್ಮಲ್ಲಿ ಸುಪ್ತಾವಸ್ಥೆಯಲ್ಲಿದ್ದ ಸಂಜೀವಿನಿ ವಿದ್ಯೆಯನ್ನು ಅಲ್ಲಗಳೆದು ಧನ್ವಂತರಿಗಳ ಕಡೆಗೆ ಓಡಿಹೋಗಿ ಅರ್ಥ ಮತ್ತು ದೇಹ ಸಂಪತ್ತನ್ನು ಕಳೆದು ಕೊಂಡು, ಹಣೆಬರಹವನ್ನೂ ಹಳಿಯುತ್ತಾ ದುಃಖಕ್ಕೆ ಈಡಾಗಬಾರದು. ಈ ಇಪ್ಪತ್ತನೆಯ ಶತಮಾನದಲ್ಲಿ ಜಂತುಗಳಿಂದ ರೋಗದ ಉತ್ಪತ್ತಿ ಮತ್ತು ಪ್ರಸಾರ ವಾಗುವದೆಂಬ ಜಂತು ಶಾಸ್ತ್ರದ ಭೂತವನ್ನೆಬ್ಬಿಸಿ ಎಲ್ಲರನ್ನೂ ಹೆದರಿಸಿ ಹತಬಲ ರನ್ನಾಗಿ ಮಾಡಿದ್ದು ಎಷ್ಟು ಮೂರ್ಖತನದ್ದಿದೆಯೆಂಬುದನ್ನು ಈ ಅಂಗಮರ್ದನ ಶಾಸ್ತ್ರವು ಅನುಭವ ಪೂರ್ಣವಾಗಿ ನಿದರ್ಶನಕ್ಕೆ ತರುತ್ತದೆ. ಮತ್ತು ಬಳಲುವ ಆಪೇಷ್ಟರ ಪ್ರೇಮ ಸಂಪಾದನೆಗೆ ಸಹಾಯಕವಾಗುತ್ತದೆ.



# ಕವಿಯ ಕೈ ನಾ ಹಿಡಿದೆ



ಲೇಖಕರು:— ಫತ್ತೇಪೂರ ಶಾಮಣ್ಣಾ, ಬೆಳವಣಿಕಿ

ಜಗತ್ತು ಸುಧಾರಣೆಯ ಹಾದಿಯತ್ತ ಹೊರಟಿದ್ದರೂ ಸಹ ಇನ್ನೂ ನಮ್ಮ ಹೆಣ್ಮಕ್ಕಳು ತಮ್ಮ ವಸ್ತುಒಡವೆಗಳ ಕಡೆಗೇ ಹೆಚ್ಚು ಲಕ್ಷ್ಯ ಪೂರೈಸಿ ವೇಳೆ ಕಳೆಯುತ್ತಿರುವದು ಬಹಳೇ ವಿಷಾದದ ಸಂಗತಿ !

ಹೆಣ್ಣು ಗಂಡಸಿನ ದಾಸಿಯಲ್ಲ, ಆವಳಿಗೂ ಅಸ್ತಿತ್ವವಿದೆಯೆಂಬ ಅರಿವು ಈಗೀಗ ಕೆಲವೇ ಹೆಣ್ಣುಮಕ್ಕಳಿಗೇಕಾಗಲೊಲ್ಲದು, ತಿಳಿಯುತ್ತಿರುವಾಗ ಗಂಡಸರು 'ಸತಿಗೆ ಪತಿಯೇ ಮಿಗಿಲು ಆಭರಣ'ವೆಂಬ ವಾಕ್ಯವನ್ನು ಎತ್ತಿ ಹೇಳುವದು ಮತ್ತೂ ವಿಷಾದದ ಸಂಗತಿಯೇ ಸರಿ.

೧

ಕವಿಯ ಕೈ ನಾಹಿಡಿದೆ
ಸುಖಪಡೆಯೆ ಚಣ
ಮನಕೆ ಸುಖಶಾಂತಿ
ಶೂನ್ಯ ತಿಳಿರಿ.

೨

ಆಶೆಗಳ ಮನಸಿನಲಿ
ನೂರಾರು ಮಾಡಿದ್ದೆ
ಭಾವಲೋಕದ ರಾಣಿ
ಯಾಗಿ ಮೆರೆಯುತಲಿದ್ದೆ.

೩

ಭಾಗ್ಯವಂತರ ಮನೆಯ
ಸೇರಿ ಸುಖಪಡಬೇಕು
ಕಾರಿನಲಿ ಊರಿನಲಿ
ತಿರುಗುವದು ಬಯಸಿದ್ದೆ

೪

ಒಡವೆ ಕೇಳಿದರಾಗ
ನೀವು ಹೀಗೇಳುವಿರಿ
ನನ್ನ ಬರೆಹವೆನಿನಗೆ
ಒಡವೆಯೆಂದು

೫

ಪೈ ಬೆಲೆಯು ಬಾಳುತಿಹ
ವಡವೆಗಾಶಿಸಬೇಡ
ನಿನಗೊಲಿದು ನಾಕೊಡುವೆ
ಅಮರ ಹೃದಯವ ನಿನಗೆ

೬

ವಸ್ತು ವಡವೆಯು ನಿನಗೆ
ತರುವ ಭಾಗ್ಯವದೇನು
ಸತಿಗೆ ಪತಿಯೇ ಮಿಗಿಲು
ಆಭರಣವಲ್ಲವೇನು.

೭

ಕಲ್ಪನೆಯ ಲೋಕದಲಿ
ಅಲೆದಾಡುತಿಹ ನಿಮ್ಮ
ಕಲ್ಪನೆಯ ಕವನಗಳು
ತರುವ ಭಾಗ್ಯವದೇನು.

೮

ಕವನಗಳ ಓದಿದೊಡೆ
ಹೃದಯ ತುಂಬುವದೇನೊ
ವಡವೆ ಧರಿಸಿದ ಹಾಗೆ
ಆಗುವದು ಅದು ಏನೊ

೯

ನಿಮ್ಮ ಕವನಕೆ ಜಗವು
ಬೆಲೆಯನೀಯಲು ಬಹುದು
ಅದರಿಂದ ಬಹಭಾಗ್ಯ
ನನಗೆ ಏನು.

೧೦

ಕವನಗಳ ಓದಿದೊಡೆ
ಹೃದಯ ನಿಜ ತಣಿಯುವುದು
ಮೋಹ್ ಮನದಾಸೆ ತೀರಿಸುವ
ಒಗೆಯಲ್ಲ ಅದುವೆ.

೧೧

ಕಲ್ಪನೆಯ ಲೋಕದಲಿ
ಅಲೆಯುತಿಹ ನಿಮ್ಮೊಡನೆ
ಕಲ್ಪನೆಯ ಸುಖಕಾಗಿ
ಬಂದ್ಹಾಗೆ ನಾನಾಯ್ತು ?

# ಗ್ರಹಗಳು ಮತ್ತು ಮನುಷ್ಯನ ಮೇಲೆ ಅವುಗಳ ಪರಿಣಾಮ ( ಲೇಖಾಂಕ ೨ )

ಲೇ:— ಹುಚ್ಚಪ್ಪ.

### ಕುಂಭ ರಾಶಿ

ವಾಯು ತತ್ವದ ಮೂಲ ರಾಶಿಗಳಲ್ಲಿ ಇದು ಕೊನೆಯ ರಾಶಿಯೆಂದು ತಿಳಿಯುತ್ತಾರೆ. ಶರೀರದೊಳಗಿನ ಕಾಲುಗಳ ಪ್ರದೇಶದಲ್ಲಿ ಇದು ಇರುತ್ತದೆ. ಇದಕ್ಕೆ ದೈವೀಜ್ಞಾನದ ರಾಶಿ ಎಂದು ತಿಳಿಯುತ್ತಾರೆ. ಇದು ಸ್ಮರಣಶಕ್ತಿಯ ಪೋಷಕವಿರುತ್ತದೆ. ಈ ರಾಶಿಯ ನಿಜವಾದ ಪರಿಣಾಮವು ಸೂರ್ಯನು ಈ ರಾಶಿಯಲ್ಲಿ ಪ್ರವೇಶ ಮಾಡಿದ ನಂತರ ಆರು ದಿನಗಳ ಮೇಲೆ ಆಗುತ್ತದೆ. ಆ ಕಾಲದಲ್ಲಿ ಈ ರಾಶಿಯಲ್ಲಿ ಹುಟ್ಟಿದ ಮನುಷ್ಯರಲ್ಲಿ ಈ ರಾಶಿಯ ಸಂಪೂರ್ಣ ಲಕ್ಷಣಗಳು ಕಂಡು ಬರುವುದಿಲ್ಲ. ಕೆಲವು ಮೊದಲನೆಯ ರಾಶಿ, ಅಂದರೆ ಮಕರ ಮತ್ತು ಕೆಲವು ಈ ರಾಶಿಯ ಲಕ್ಷಣಗಳು ಕಂಡು ಬರುತ್ತವೆ. ಇದಲ್ಲದೆ ಅವರು ಹುಟ್ಟುವ ಸಮಯದಲ್ಲಿ ಚಂದ್ರನು ಯಾವ ರಾಶಿಯುವನಿರುವನೊ ಆ ರಾಶಿಯ ಕೆಲವು ಅಂಶಗಳು ಅವರಲ್ಲಿ ಕಂಡು ಬರುತ್ತವೆ. ಜಗತ್ತಿನಲ್ಲಿ ಅತ್ಯಂತ ಬಲವಾನ ಮತ್ತು ಅತ್ಯಂತ ಹೇಡಿಯಾರಿರುವರೊ ಅವರೆಲ್ಲರ ರಾಶಿ ಇದೇ ಇರುತ್ತದೆ. ಶಕ್ತಿ ಮತ್ತು ಸತ್ತೆಯನ್ನು ಅವರು ತಮ್ಮ ಕೈಯಲ್ಲಿಯೇ ಇಟ್ಟುಕೊಳ್ಳುತ್ತಾರೆ ಆದರೆ ದುಃಖದ ಸಂಗತಿಏನಂದರೆ ಈ ಜನರಿಗೆ ತಮ್ಮ ಸಾಮರ್ಥ್ಯದಲ್ಲಿ ವಿಶ್ವಾಸವಿರುವದಿಲ್ಲ. ಮತ್ತು ಒಳ್ಳೇ ಆತುರದಿಂದ ಎರಡನೆಯುವರ ಸಲಹೆಯನ್ನು ಕೇಳಲು ಹೋಗುತ್ತಾರೆ.ಸಲಹೆ ಸಿಕ್ಕ ಮೇಲೆ ಅತ್ತ ಕಡೆಗೆ ಎಳ್ಳಷ್ಟು ಲಕ್ಷ ಕೊಡುವದಿಲ್ಲ. ಒಳ್ಳೆ ದೈನ್ಯದಿಂದ ಪ್ರಶ್ನೆಗಳನ್ನು ಕೇಳುವರು ಮತ್ತು ಅದಕ್ಕೆ ಕೊಟ್ಟ ಉತ್ತರದಿಂದ ಕೂಡಲೆ ಮೋಸ ಹೋಗುವರು. ಕೆಲವು ದಿವಸಗಳ ವರೆಗೆ ಅತ್ಯಂತ ಆನಂದಿತರಾಗಿರುವರು. ಮತ್ತು ಬೇರೆ ಸಮಯಗಳಲ್ಲಿ ಅತ್ಯಂತ ದುಃಖದಲ್ಲಿ ಮುಳುಗಿ ಹೋಗುವರು.

ಅಸಾಧಾರಣ ಗುಣ ಮತ್ತು ಶಕ್ತಿ ಈ ರಾಶಿಯುವರಲ್ಲಿ ಇರುತ್ತದೆ. ಆದರೆ ಇವರು ಬಹಳ ಸೋಮಾರಿಯಾಗಿರುವರು. ಆಧ್ಯಾತ್ಮಬಲದಿಂದ ಬೇರೆಯುವರ ವ್ಯಾಧಿ, ದುಃಖ ಮುಂತಾದವುಗಳನ್ನು ಹೋಗಲಾಡಿಸಲು ಸಮರ್ಥರಿರುವರು. ಇವರು ತಮ್ಮ ದೋಷಗಳನ್ನು ಗೆದ್ದಲ್ಲಿ ಮತ್ತು ತಮ್ಮಲ್ಲಿದ್ದ ಆಧ್ಯಾತ್ಮ ಶಕ್ತಿಯನ್ನು ಜಾಗೃತಗೊಳಿಸಿದಲ್ಲಿ ಅವರು ಅದ್ಭುತ ವಿಜಯದಲಾಭವನ್ನು ಅನುಭವಿಸುವರು.

ಹಣ ಗಳಿಸುವ ಹುಚ್ಚು ಬಹಳ ಇರುತ್ತದೆ. ತಮ್ಮ ಸಲುವಾಗಿ ಜನರು ಏನು ಹೇಳುವರು? ಮತ್ತು ತಮ್ಮ ಸಲುವಾಗಿ ಏನು ವಿಚಾರ ಮಾಡುವರು? ಎಂಬ ಹೆದರಿಕೆಯಿಂದ ಮಾಡತಕ್ಕದ್ದನ್ನು ಏನೂ ಮಾಡುವುದಿಲ್ಲ. ಕುಂಭರಾಶಿಯಲ್ಲಿ

ಹುಟ್ಟಿದ ಸ್ತ್ರೀ ಪುರುಷರಿಗೆ ತಮ್ಮಲ್ಲಿದ್ದ ಶಕ್ತಿಯ ಅರಿವು ಸ್ವಲ್ಪೇ ಇರುತ್ತದೆ. ಅವರು ತಮ್ಮ ಅರಿವು ಮಾಡಿಕೊಂಡಲ್ಲಿ ಈ ಜಗತ್ತಿನೊಳಗೆ ದೊಡ್ಡ ವಿಜಯವನ್ನು ಗಳಿಸುವರು. ಇದರಲ್ಲಿ ಏನೂ ಸಂಶಯವಿಲ್ಲ. ಈ ಜನರಿಗೆ ದುರ್ಬಲ ಮತ್ತು ಹೇಡಿ ಕೆಲಸಗಳನ್ನು ಮಾಡಿದ ವಿನಃ ಸಮಾಧಾನ ಸಿಗುವುದಿಲ್ಲ.

ಬಹಳ ಅಭ್ಯಾಸ ಮಾಡದೆ ವಿವಿಧ ವಿಷಯಗಳನ್ನು ಕಲಿಯುವ ಶಕ್ತಿ ಈ ಮನುಷ್ಯನಲ್ಲಿ ಇರುತ್ತದೆ. ಈ ರಾಶಿಯವರು ಬಹುತರವಾಗಿ ಯಾವದೇ ವಿಷಯದ ಸಂಬಂಧವಾಗಿ ಒಮ್ಮೆ ಮಾತ್ರ ಓದುವರು. ಮತ್ತು ಕೂಡಲೇ ಅವರಿಗೆ ಆ ವಿಷಯದ ಸೇರಿಕೆಯಾಗುವದು. ಇವರು ಎಲ್ಲರ ಕೂಡ ಕೂಡಲೇ ಕೂಡಿಹೋಗುವಂಥ ಸ್ವಭಾವದವರಿರುವರು. ಇವರು ಶೀಘ್ರ ಕೋಪಿಗಳೂ, ಶಾಂತ ಸ್ವಭಾವದವರೂ ಇರುವರು. ಈ ಜನರು ಒಮ್ಮೊಮ್ಮೆ ಮನಬಂದಂತೆ ವರ್ತಿಸುವರು. ಆ ಕಾಲದಲ್ಲಿ ಅವರು ವಿವೇಕವನ್ನು ಮರೆತುಬಿಡುವರು. ಉಚ್ಚವಿಷಯಗಳಲ್ಲಿ ನಿರತರಾಗುವರು. ಉಚ್ಚ ಅಭಿಲಾಷೆಗಳನ್ನು ಹಿಡಿದು ಅವರು ಆಕಾಶ ಗಾಳಿಗೋಪುರಗಳನ್ನು ಕಟ್ಟುವಾಗ ಅವರನ್ನು ತಡೆಯಲು ಯಾರೂ ಯತ್ನಿಸಬಾರದು. ಅಂತರಜ್ಞಾನ, ಮತ್ತು ಭವಿಷ್ಯ, ತಿಳಿದುಕೊಳ್ಳುವ ಸಾಮರ್ಥ್ಯವೂ ಇವರಲ್ಲಿ ಹೆಚ್ಚಿಗೆ ಪ್ರಮಾಣದಲ್ಲಿ ಇರುವವು. ಇವರು ತಮ್ಮಲ್ಲಿದ್ದ ಆಧ್ಯಾತ್ಮಿಕ ಶಕ್ತಿಯನ್ನು ಕಂಡುಹಿಡಿದು ಅದರ ಉಪಯೋಗ ಮಾಡಿಕೊಂಡಲ್ಲಿ ಜಗತ್ತಿನಲ್ಲಿ ಇವರಿಗೆ ಬಹಳ ಚಮತ್ಕಾರಿಕ ವ್ಯಕ್ತಿಗಳೆಂದು ತಿಳಿಯುವರು. ಶಾಂತ ಮತ್ತು ಸ್ಥಿರವೃತ್ತಿಯುಳ್ಳ ಈ ರಾಶಿಯ ಜನರ ಕಣ್ಣುಗಳಲ್ಲಿ ಅದ್ಭುತವಾದಂಥ ವಶೀಕರಣಶಕ್ತಿ ಇರುವದು. ಮತ್ತು ಪಾರಮಾರ್ಥಿಕವೃತ್ತಿಯುಳ್ಳ ಈ ರಾಶಿಯ ಕೆಲವು ಜನರ ಕಣ್ಣುಗಳಲ್ಲಿ ಒಂದು ಮಾದರಿ ಸಾತ್ವಿಕ ಓಜಸ್ಸಿನ ಪ್ರವಾಹವು ಇರುತ್ತದೆ. ಅದನ್ನು ಅವರು ರೋಗೀ ಜನರ ಮೇಲೆ ಹಾಕಿದರೆ ಅವರ ವ್ಯಾಧಿಯು ಮಾಯವಾಗದೆ ಇರಲಾರದು. ಇವರು ದೇಹದಿಂದ ಎತ್ತರ, ಸುಂದರ, ಬಹಳ ಪ್ರತಾಪ ಕೆಡಹುವಂಥ ಮತ್ತು ಸುದೃಢನಿರಾಮಯ, ಮತ್ತು ನಿರ್ಮಲ ಶಾಂತಿಯುಳ್ಳವರಿರುವರು.

ಮೇಷ, ಧನು, ಮತ್ತು ಕುಂಭ ರಾಶಿಯ ಜನರು ಒಳ್ಳೆಯ ಮಿತ್ರರಾಗುವರು. ತುಲಾರಾಶಿಯವರ ಕೂಡ ಪ್ರಸಂಗವಶಾತ್ ಸ್ನೇಹಬೆಳೆಸುವರು.

ಸ್ವಂತದ ದೋಷಗಳನ್ನು ಈ ರಾಶಿಯವರು ಕೂಡಲೇ ತಿಳಿದುಕೊಳ್ಳಬೇಕು. ಮತ್ತು ಅವುಗಳನ್ನು ಗೆಲ್ಲಲು ಅವಶ್ಯವಾಗಿ ಪ್ರಯತ್ನ ಮಾಡಬೇಕು. ಒಮ್ಮೊಮ್ಮೆ ಬಹಳ ಹಚ್ಚಿಕೊಳ್ಳುವ, ಮತ್ತು ಏನೂ ಹಚ್ಚಿಕೊಳ್ಳದ ಸ್ವಭಾವದವರಿರುವರು. ಅಂಜಿಕೆ, ಸಂಶಯ, ಮುಚ್ಚಿಡುವ ಸ್ವಾಭಾವ, ನಿರುತ್ಸಾಹೀ ಸ್ವಾಭಾವ, ತಮ್ಮ ವಚನವನ್ನು ಪಾಲಿಸದೇ ಇರುವದು. ಇವೇ ಮೊದಲಾದ ದೊಡ್ಡ ದೋಷಗಳು ಇವರಲ್ಲಿ ಇರುವವು. ದೃಢನಿಶ್ಚಯವಿಲ್ಲದೆ ಮನಬಂದಂತೆ ನಡೆಯುವ ಇವರ ಸ್ವಭಾವವು ಇವರ ಬುದ್ಧಿಯನ್ನು ಕೆಡಿಸುವದು.

ಸ್ವಂತದ ಉಚ್ಚ ಗುಣಗಳನ್ನು ವಿಕಾಸಗೊಳಿಸದೆ ಇದ್ದ ಈ ರಾಶಿಯು ಜನರು ಬಹಳ ಸಿಡಿಸಿಡಿ ಮಾಡುವವರು. ಮತ್ತು ಬಹಳ ಆಸಕ್ತಿಯುಳ್ಳ ಈ ರಾಶಿಯು ಜನರು ತಮ್ಮಲ್ಲಿದ್ದ ಉಚ್ಚತರಗತಿಯು ಶಕ್ತಿ ಮತ್ತು ಗುಣಗಳನ್ನು ಎಂದಿಗೂ ಹೊರಗೆ ತೋರಗೊಡುವದಿಲ್ಲ. ಹೀಗೆ ಮಾಡಿದಲ್ಲಿ ಇವರು ತಮ್ಮ ಜೀವನ ವನ್ನೇ ದುಃಖಮಯ ಹಾಗೂ ನಿರುಪಯೋಗೀ ಮಾಡುವರು.

ಸಂಧಿ ವಾತ, ತಲೆ ಮತ್ತು ಕಾಲುಗಳಲ್ಲಿ ನೋವು, ಮಿದುಳಿನಲ್ಲಿ ಅವ್ಯವಸ್ಥೆ, ಮಂದವಾಗಿ ರುಧಿರಾಭಿಸರಣ ಮತ್ತು ಅಶಕ್ತತೆ ಈ ಬೇನೆಗಳು ಇವರಿಗೆ ಹೆಚ್ಚಾಗಿ ಬರುವವು. ಜ್ಞಾನತಂತುವಿನ ರೋಗಗಳು ಇವರಿಗೆ ಹೆಚ್ಚಾಗಿರುವವು. ಆದ್ದರಿಂದ ಆತ್ಮಸ್ವರೂಪದ ಚಿಂತನ ಮಾಡುವ ಅಭ್ಯಾಸವನ್ನು ಪ್ರತಿದಿನ ಇಡಬೇಕು. ಬೇರೆ ಯವರ ದೋಷಗಳನ್ನು ಮತ್ತು ಕೆಟ್ಟದ್ದನ್ನು ಎಣಿಸುವ ಅಯೋಗ್ಯ ಸ್ವಭಾವವನ್ನು ಬಿಟ್ಟು ಎಲ್ಲರಲ್ಲಿ ಗುಣೈಕ ದೃಷ್ಟಿಯನ್ನು ಇಡುವ ಚಟ ಹಚ್ಚಿಕೊಳ್ಳಬೇಕು. ಯಾರ ಆಶ್ರಯದಲ್ಲೂ, ಎಂದಿಗೂ ಇರಬಾರದು. ಮೇಷ ರಾಶಿಯಲ್ಲಿ ಹುಟ್ಟಿದವರ ಕೂಡ ಲಗ್ನವಾಗಬೇಕು. ಇವರಿಂದ ಉಂಟಾಗುವ ಪ್ರಜರು ಬಹಳ ಬಲವಾನ್, ನಿರೋಗಿ ಹಾಗೂ ಬುದ್ಧಿಶಾಲಿ ಆಗುವರು. ಮತ್ತು ಇವರ ಗೃಹಸ್ಥಾಶ್ರಮವು ಸುಖಮಯ ಹಾಗೂ ಶಾಂತಿಯುತವಾಗುವದು. ಕುಂಭ ಮತ್ತು ಧನು ರಾಶಿಯು ವರ ಲಗ್ನದಿಂದ ಉಂಟಾಗುವ ಪ್ರಜೆಯು ಬಹಳ ಹಚ್ಚಿಕೊಳ್ಳುವ, ಮತ್ತು ಸಿಡುಕ ಸ್ವಭಾವದವರಾಗುವರು. ಮತ್ತು ದೇಹದಿಂದ ಅಷ್ಟು ಸಾಮರ್ಥ್ಯ ಉಳ್ಳವರಿರು ವದಿಲ್ಲ. ಮತ್ತು ಇವರ ಗೃಹಸ್ಥಾಶ್ರಮವು ಆಶ್ಚರ್ಯಕಾರಕ ಸಂಗತಿಗಳಿಂದ ತುಂಬಿದ ಮತ್ತು ರಸಿಕತನವನ್ನೂ ಹೆಚ್ಚಾಗಿ ಬೆಳೆಸುವ ಸಂಭವವಿದೆ.

ಈ ರಾಶಿಯು ಬಾಲಕರಿಗೆ ಪ್ರತಿಯೊಂದು ಕೆಲಸವನ್ನು ಗೊತ್ತುಪಡಿಸಿದ ವೇಳೆಯಲ್ಲಿ ಮಾಡುವ ಮತ್ತು ಕೊಟ್ಟ ವಚನವನ್ನು ಪಾಲಿಸಲು ಕಲಿಸುವದು ಅಗತ್ಯವಿದೆ. ಎಡಬಲದ ಜನರ ಸಹವಾಸದ ಪರಿಣಾಮವು ಅವರ ಮೇಲೆ ಕೂಡಲೇ ಆಗುವದು. ಇವರಲ್ಲಿ ಬೇರೆಯುವರ ಮನರಂಜನಮಾಡುವ ಗುಣವಿರುವದು. ಯಾವಾಗ ಇವರಿಗೆ ಇವರ ವಿರುದ್ಧ ವರ್ತನ ಮಾಡಲಾಗುವದೋ ಅಥವಾ ಇವರ ಮೇಲೆ ಅಪ್ರೀತಿ ತೋರಿಸಲಾಗುವದೋ ಆಗ ಇವರು ಬಹಳ ನಿರ್ದಯರು, ಮತ್ತು ನಿಂದೆ ಮಾಡುವ ಸ್ವಭಾವದವರು ಆಗುವರು. ಇವರ ಸ್ಮರಣಶಕ್ತಿಯು ಬಹಳ ಉತ್ತಮ ಇರುವದು. ಯೋಗ್ಯಶಿಕ್ಷಣದಿಂದ ಪದಾರ್ಥಗಳಲ್ಲಿ ವಾಸವಾಗಿದ್ದ ಗುಪ್ತ ಗುಣಗಳನ್ನು ಕಂಡುಹಿಡಿಯುವ ಶಕ್ತಿಯು ಇವರಲ್ಲಿ ಬಹಳ ಉತ್ತಮರೀತಿಯಲ್ಲಿ ಇರುವವು. ಶಕ್ಯವಿದ್ದಷ್ಟು ಬಹಳ ಕಡಿಮೆ ಜನರ ಗೆಳೆತನ ಮಾಡಗೊಡಬೇಕು. ಶಕ್ಯವಿದ್ದಷ್ಟು ಇವರನ್ನು ಪ್ರಾಮಾಣಿಕ, ಧೈರ್ಯವಾದಿ ಮತ್ತು ದಯಾಳು ಸ್ವಭಾವ ವರು ಆಗುವಂತೆ ಮಾಡಬೇಕು.

ಈ ರಾಶಿಯ ಜನರ ಮನಸ್ಸಿನಲ್ಲಿ ವಿರುದ್ಧ ಹೋಗುವಂಥ ಚಟವನ್ನು ಇಡ ಕೂಡದು. ವಾಯು ಮತ್ತು ಅಗ್ನಿ ತತ್ವದ ಎಲ್ಲ ಹುಡುಗರಿಗೆ ಈ ನಿಯಮ ಹತ್ತು ವದು. ರಾಶಿಯ ಸ್ವಾಮಿ ಶನಿ, ಮತ್ತು ಯುರೇನಸ್, ಮಕರ ಮತ್ತು ಕುಂಭ ಸಂಧಿ ಸಮಯದಲ್ಲಿ ಹುಟ್ಟಿದ ಬಾಲಕರಲ್ಲಿ ಶಾಂತ ಮನಸ್ಸು, ಬುದ್ಧಿ ಜೀವಿ ಮತ್ತು ಅಸಾಧಾರಣ ಕುತೂಹಲ ಸ್ವಭಾವ ಇರುತ್ತದೆ. ಬಾಲಿಕೆಯರಲ್ಲಿ ದಂಧೆಮಾಡಲು ಬೇಕಾಗುವ ಸಹಜ ಕುಶಲತೆಯು, ತಾವು ಒಬ್ಬರೇ ಸಂಪತ್ತು ಗಳಿಸಬೇಕೆಂಬ ಹಟವು, ಮತ್ತು ದೃಢನಿಶ್ಚಯವು ಮಿತಿಮೀರಿ ಇರುತ್ತದೆ.





ಗರ್ಭದಲ್ಲಿದ್ದ ಮಗುವಿನ ಪೋಷಣೆಗೂ, ಬೆಳವಣಿಗೆಗೂ "ಪ್ರೇಗ ಯುಟೇರೋ," ವಾಪರಿಸಿ, ಅದು ತಾಯಿ ಮಕ್ಕಳಿಬ್ಬರಿಗೂ ಹಿತಕಾರಿ.

* * * * *

ಪ್ರಸವವಾಯಿತೇ ? ಹಾಗಾದರೆ 'ಡೆಟ್ಟಾಲ್' ಉಪಯೋಗಿಸಿ: ಡಾಕ್ಟ ರರು ಯಾವಾಗಲೂ ಇದನ್ನೇ ಹೇಳುತ್ತಾರೆ: ಪಕ್ಕದ ಮನೆ ಸುಶೀಲಮ್ಮ ವೇದನೆ ಯಿಂದ ಬಳಲುತ್ತಿದ್ದಾಗ, ನರ್ಸ ಇದನ್ನೇ ಸೂಚಿಸಿದಳಂತೆ !

§ § § § §

ಓ, ಮಗುವಿಗೆ ಅಜೀರ್ಣಬಾಧೆಯೆ ? ಹೊಟ್ಟೆನೋವಿನಿಂದಲೂ ಅದು ಅಳುತ್ತಿರಬಹುದು "ಗ್ರೈಪ ಸೈರಪ್" ಕೊಡಿ ಮಗುವಿಗೆ; ಎಲ್ಲವೂ ವಾಸಿಯಾಗುತ್ತೆ.

† † † † †

'ಕೃಷ್ಣಾ' ಗುರುತಿನ ರೆಡಿಮೇಡ್ ಬಟ್ಟೆಗಳನ್ನೇ ಯಾವಾಗಲೂ ಉಪ ಯೋಗಿಸಿ: ಬೆಳೆಯುವ ಮಕ್ಕಳ ಮೈಗೆ ಅವೇ ಅಂದವಾಗಿರುತ್ತವೆ: ಅಗ್ಗ ಬೆಲೆಯಲ್ಲಿ ಬಹಳ ತಾಳಿಕೆಯುಳ್ಳ ಬಟ್ಟೆಗಳು. ನಮ್ಮ ಟ್ರೇಡ-ಮಾರ್ಕ ನೋಡಿಯೇ ಬಟ್ಟೆ ಗಳನ್ನು ಖರೀದಿ ಮಾಡಿರಿ; ಎಲ್ಲ ಬಗೆಯ ಶರ್ಟ, ಪ್ಯಾಂಟ, ಫ್ರಾಕ್, ಜಂಪರುಗಳು ನಮ್ಮಲ್ಲಿ ದೊರೆಯುತ್ತವೆ.

ಮಣ್ಣಿನಲ್ಲಾಡುವ ನಿಮ್ಮ ಮಗುವಿನ ಕೈ ಕೊಳೆಯಾಗುವದಿಲ್ಲವೇ ? ಆ ಕೊಳೆಯಲ್ಲಿ ಅಸಂಖ್ಯ ಜಂತುಗಳು ಅಡಗಿವೆ: ಅವುಗಳನ್ನು ನಿರ್ಮೂಲಗೊಳಿಸಲು " ಲೈಫ್ ಬಾಯ " ಸೋಪನ್ನೇ ಉಪಯೋಗಿಸಿರಿ.

† † † † †

ಅಮ್ಮಾ, ನಿಮ್ಮ ಕೂದಲು ಎಷ್ಟು ಮೃದುವಾಗಿವೆ, ವಿಪುಲವಾಗಿವೆ ?

ಮಗೂ, ನಾನು ಮೊದಲಿನಿಂದಲೂ ' ಸ್ವಸ್ತಿಕ ' ದವರ ಸುಗಂಧಿತ ಎಣ್ಣೆಯನ್ನೇ ಕೂದಲಿಗೆ ಹಚ್ಚುತ್ತೇವೆ. ಅದರಿಂದಲೇ ನನ್ನ ಕೂದಲು ಇಷ್ಟು ವಿಪುಲವಾಗಿವೆ.

* * * * *

ನಮ್ಮಲ್ಲಿ ಎಲ್ಲ ಬಗೆಯ ಗಂಗಾವನಗಳೂ, ಹೇರಪಿನ್ನಗಳೂ ರಿಬ್ಬನ್ನಗಳೂ ಯೋಗ್ಯ ದರದಿಂದ ದೊರೆಯುತ್ತವೆ.

§ § § § §

ಕಮಲ ಯಾವಾಗಲೂ ' ಖಟಾವ್ ' ಅವರ ವಾಯಿಲನ್ನೇ ಉಪಯೋಗಿಸುತ್ತಾಳಂತೆ: ಅದೊಳ್ಳೇ ನಯವಾಗಿರುತ್ತದೆ.

* * * * *

' ಹಮಾಮ್' ಸೋಪು ನೊರೆನೊರೆಯಾಗಿ ಬೀಳುತ್ತದೆ: ಮೈಗೆ ಸುಗಂಧಿತವಾಗಿದ್ದು, ಆಹ್ಲಾದದಾಯಕವಾಗಿರುತ್ತದೆ: ಬೆಲೆಯಲ್ಲಿ ಕಡಿಮೆ ಆಕಾರದಲ್ಲಿ ದೊಡ್ಡದು.

* * * * *

' ವಿಲ್ಸನ್ ' ಫೌಂಟನ್‌ಪೆನ್ ಎಂದರೆ ಆಕೆಗೆ ಬಹು ಇಷ್ಟ: ಯಾವಾಗಲೂ ಅದೇ ಬೇಕೆಂದು ಆಕೆ ಹಟ ಹಿಡಿಯುತ್ತಾಳೆ.

* * * * *

' ಹಿಮಾಲಯ ಬುಕೇ, ' ಯನ್ನೇ ಉಪಯೋಗಿಸಿ, ಅವಳೊಬ್ಬ ಸುಂದರ ಸ್ತ್ರೀಯಾಗುವ ಮಾರ್ಗದಲ್ಲಿದ್ದಾಳೆ ನೋಡಿ ಈಗ! ನಟಿ ಸ್ನೇಹಲತಾ ಕೂಡ ಅದನ್ನೇ ಮೆಚ್ಚುತ್ತಾಳೆ.

* * * * *

ಓ ಅಣ್ಣನಿಗೆ, " ಹಾರ್ಲಿಕ್ಸ " ಕೊಡಿಸದಿದ್ದರೆ ನನ್ನ ಗತಿ ಏನಾಗುತ್ತಿತ್ತು ! ಅವನು ಯಾವಾಗಲೂ ಬಳಲಿದಂತೆ ಕಾಣುತ್ತಿದ್ದ: ಶಾಸ್ತ್ರಿಗಳ ಮಗನನ್ನು ಕಾಣುವದೆಂದರೆ ಅವನಿಗೆ ತುಂಬಾ ಕಷ್ಟವಾಗಿತ್ತು: ಆದರೆ ಈಗ ' ಹಾರ್ಲಿಕ್ಸಿ ' ಗೆ ಧನ್ಯವಾದಗಳು. ಅಣ್ಣನೇ ನನಗಾಗಿ ಇಷ್ಟೆಲ್ಲವನ್ನೂ ಮಾಡಿದವನು !

‡ ‡ ‡ ‡ ‡

' ಪ್ರಭಾತ್ ಜ್ಯುವೆಲರ್ಸ ಆ್ಯಂಡ ಕೋ ' ; ಎಲ್ಲ ಬಗೆಯ ಹರಳಿನ ಓಲೆ, ಬಳೆ, ಸರಗಳಿಗಾಗಿ ನಮ್ಮಲ್ಲಿಯೇ ಬನ್ನಿ: ಯಾವ ವಧುವೂ ಮೆಚ್ಚುವಂತಹ ಆಭರಣಗಳು ನಮ್ಮಲ್ಲಿ ದೊರೆಯುತ್ತವೆ: ಒಂದು ಸಲ ಬಂದು ಖಾತ್ರಿ ಮಾಡಿಕೊಳ್ಳಿ !

# ಮತ್ತೆ ಹಳ್ಳಿಗೆ ಬನ್ನಿ !

## (ಹೊಲ್ತಿಕೋಟೆಯ ಪುನರ್ನಿರ್ಮಾಣ)

ಭಾರತವು ಹಳ್ಳಿಗಳ ದೇಶ; ಅಲ್ಲಲ್ಲಿ ಹಬ್ಬಿಕೊಂಡಿರುವ ಕೆಲವೇ ಪಟ್ಟಣಗಳನ್ನು ಬಿಟ್ಟರೆ ಹಳ್ಳಿಗಳ ಸಂಖ್ಯೆಯೂ ಹೆಚ್ಚು; ಒಕ್ಕಲತನವೇ ಈ ಹಳ್ಳಿಗರ ಮುಖ್ಯ ಉದ್ಯೋಗ; ಪಟ್ಟಣಗಳಿಗೆ ಪೂರೈಸಲ್ಪಡುವ ಆಹಾರ ಧಾನ್ಯ ಬಹುತರವಾಗಿ ಹಳ್ಳಿಗಳಿಂದಲೇ ಹೋಗುವದು. ಆದರೆ ಇಂದು ಸುಸಂಸ್ಕೃತರೆಂದೆನಿಸಿಕೊಳ್ಳುವವರಿಗೆ ಹಳ್ಳಿಯ ವಾಸ ಒಕ್ಕಲತನ ಮೆಚ್ಚಿಕೆಯಾಗದಂತಾಗಿವೆ. ಆದರೆ ಭಾರತವು ಇಡಿದಾಗಿ ಕಳೆಗೊಳ್ಳಬೇಕಾದರೆ, ಹಳ್ಳಿಗಳತ್ತ ಲಕ್ಷ್ಯಪೂರೈಸಲೇಬೇಕು. ಇಂದಿನ ಸಂಸ್ಕೃತಿಯ ವ್ಯಾಮೋಹದ ಸೆಳವಿಗೆ ಸಿಕ್ಕಿಬಿದ್ದ ಜನತೆಯನ್ನು ಗಾಂಧೀಜಿ ಅದಕ್ಕೆಂದೇ, "Go back to the villages" ಎಂದು ಎಚ್ಚರಿಸಿದರು.

ಇಂದು ಮುಂಬಯಿ ಸರಕಾರವು ಕೈಕೊಂಡಿರುವ ಸರ್ವೋದಯ ವಿಕಾಸ ಯೋಜನೆ ನಿಜಕ್ಕೂ ಅಭಿನಂದನೀಯವಾಗಿದೆ. ಅದರ ಅಂಗವಾಗಿ ಧಾರವಾಡ ಜಿಲ್ಹಾ ಸರ್ವೋದಯ ಕೇಂದ್ರದವರು ಕೈಕೊಂಡ ಕಾರ್ಯ ಸ್ತುತ್ಯವೇ. ಈ ವಿಕಾಸ ಯೋಜನೆಯ ಕ್ಷೇತ್ರದಲ್ಲಿ, ಸರ್ವೋದಯ ಕೇಂದ್ರವು ಮೊದಲಿಗೆ ಕಾರ್ಯಕ್ಕೆ ಕೊಂಡದ್ದು ಅರವಟಿಗೆಯಲ್ಲಿ; ಅರವಟಿಗೆಯಲ್ಲಿ ಇದೀಗ ಕಟ್ಟಿದ ಹಂಚಿನ ಮನೆಗಳೂ, ಉಲ್ಲಸಿತವಾಗಿ ಕಂಗೊಳಿಸುವ ಹಸಿರು ಹೊಲಗಳೂ ತಲೆದೋರುತ್ತಿವೆ. ಬಾಲವಾಡಿಗಳಿಗೆ ಮಕ್ಕಳ ನಗುಮುಖಗಳಿಂದ ಕಳೆಕಟ್ಟಿದೆ. ಈಸಲ ಹೆಚ್ಚು ಆಹಾರ ಧಾನ್ಯ ಬೆಳೆಯುವ ಸ್ಪರ್ಧೆಯಲ್ಲಿ ಅರವಟಿಗೆಯೂ ಎಕರೆಗೆ ೩೨ ಚೀಲ ಧಾನ್ಯ ಬೆಳೆದು ಭಾಗವಹಿಸಿದ್ದು ಅಭಿಮಾನದ ಸಂಗತಿ.

ಸರ್ವೋದಯ ಕೇಂದ್ರದ ಲಕ್ಷ್ಯವನ್ನು ಇದೀಗ ವಿಶೇಷವಾಗಿ ಸೆಳೆದದ್ದು ಹೊಲ್ತಿಕೋಟೆ. ಮೊದಲು ಸಾವಿರಮೇಟಿಯ ಊರು ಎಂದೇನೋ ಇದಕ್ಕೆ ಹೇಳುತ್ತಿದ್ದರಂತೆ; ಇಷ್ಟೊಂದು ಫಲವತ್ತಾದ ಭೂಮಿ ಅದಕ್ಕೆಂದೇ ಮೊದಲು ಹೊನ್ನಿನ ಕೋಟೆ ಎಂದು ಹೆಸರಿದ್ದು ಅದು ಹೊಲ್ತಿಕೋಟೆಯಾಗಿದೆ ಎಂದೂ ಹೇಳುವರು. ಧಾರವಾಡ-ಹಳಿಯಾಳ ದಾರಿಯಲ್ಲಿ ಧಾರವಾಡದಿಂದ ೧೩ ಮೈಲುಗಳ ಅಂತರದ ಮೇಲೆ ಸ್ವಲ್ಪ ಒಳಗೆ ಸರಿದರೆ ಹೊಲ್ತಿಕೋಟೆಯಿದೆ. ಮುಂಬಯಿ ಸರಕಾರದ ಅರಣ್ಯ ಯೋಜನೆಯ ಮೇರೆಗೆ ಇದರ ಸುತ್ತೆಲ್ಲ ದಟ್ಟಾದ ಅಡವಿ ಬೆಳೆದು, ಹಳಿಯಲ್ಲಿಯೂ ಹುಲಿ ಕಾಡುಪಶುಗಳ ಬಾಧೆಯಾಗತೊಡಗಿತು. ಹೊಲದಲ್ಲಿ ಬೆಳೆಯೂ ದನಕರುಗಳೂ, ನಷ್ಟವಾಗತೊಡಗಿದ್ದವು. ಈಗೆರಡು ವರುಷಗಳ ಹಿಂದೆ ಹಗಲಿನಲ್ಲಿಯೇ ಹುಲಿ ತಿರುಗಾಡುತ್ತಿತ್ತಂತೆ; ಜನರೆಲ್ಲ ಅಂಜಿ, ಹತ್ತಿರದ ಹಳ್ಳಿಗಳಾದ ಲಾಳಗಟ್ಟಿ ದೇವರ ಹುಬ್ಬಳ್ಳಿಗಳಿಗೆ ಹೋಗಿಬಿಟ್ಟರು. ಹೊಲ್ತಿಕೋಟೆಯಲ್ಲಿ, ಧೈರ್ಯವಾಗಿದ್ದ ಮೂರು-ನಾಲ್ಕು ಜನ ಗೌಳಿಗರನ್ನು ಬಿಟ್ಟರೆ ಮತ್ತಾರೂ ಇರಲೇ ಇಲ್ಲ. ಹೊಲಗಳ ಹಪ್ತೆ ಕೊಡದಿದ್ದರಿಂದ ಭೂಮಿಯೆಲ್ಲವೂ ಸರಕಾರದ ವಶವಾಯಿತು.

ಈಗ ಹಳೆಯ ಹೊಲ್ತಿಕೋಟೆಯ ಕುರುಹಾಗಿ, ಒಂದೆರಡು ಹಾಳು ಬಿದ್ದ ಗೋಡೆಗಳೂ ದೇವಾಲಯಗಳೂ ಇವೆ: ದಟ್ಟಡವಿಯ ಮೂಲಕ ಮತ್ತು ಕೊಳಚೆಯಾದ ನೀರಿನ ಮೂಲಕ, ಮಲೇರಿಯಾ ಹೊಲ್ತಿಕೋಟೆಯನ್ನು ಹಿಡಿದೇ ಬಿಟ್ಟಿತ್ತು.

ಧಾರವಾಡ ಜಿಲ್ಹಾ ಸರ್ವೋದಯ ಕೇಂದ್ರದ ಸಂಚಾಲಕರಾದ, ಶ್ರೀ ಎನ್. ಟಿ. ದಾಬಡೆಯವರು ಇಂದಿನ ಬದಲಾದ ಹೊಲ್ತಿಕೋಟೆಯಲ್ಲಿ, ಧಾರವಾಡ, ಹುಬ್ಬಳ್ಳಿ ಪತ್ರಿಕಾಪ್ರತಿನಿಧಿಗಳ ಸಭೆ ಕರೆದಿದ್ದರು. ಹೊಲ್ತಿಕೋಟೆಯ ಇತಿಹಾಸ ಇಂದು ಸಾಹಸಪೂರ್ಣವಾಗಿದೆ; ಅಲ್ಲಿದ್ದ ಪದ್ದು ಗವಳಿಯೆಂಬ ಹಿರಿಯನು ಆ ಊರಿನ ಏಳು-ಬೀಳುಗಳ ಇತಿಹಾಸಕ್ಕೆ ಸಾಕ್ಷಿಯಾಗಿದ್ದಾನೆ. 'ಹೆಚ್ಚು ಆಹಾರ ಧಾನ್ಯ ಬೆಳೆಯಿರಿ' ಎಂಬ ಯೋಜನೆಗೂ, ಜನತೆಯ ಪುನರ್ನಿವೇಶನದ ವಿಚಾರಕ್ಕೂ 'ಹೊಲ್ತಿಕೋಟೆ' ಮಾರ್ಪಾಟಾದರೆ, ಸಹಕಾರಿ ಯಾಗಬಹುದು ಎಂಬ ವಿಚಾರದಿಂದ ೧೯೫೧ ರ ಎಪ್ರಿಲ್‌ದಲ್ಲಿ ಸರ್ವೋದಯದ ಕಾರ್ಯ ಇಲ್ಲಿ ಪ್ರಾರಂಭವಾಯಿತು. ಅದಕ್ಕೆಂದೇ ಸರಕಾರವು ೧೦೭೦೦೦ ರೂಪಾಯಿಗಳನ್ನು ಮಂಜೂರ ಮಾಡಿತು. ಸರಕಾರದ ಹಿಂದಿನ ವರದಿಗಳನ್ನೆಲ್ಲ ತಿರುವಿಹಾಕಿ, ಹೊರಗೆ ಹೋಗಿದ್ದ ಅಲ್ಲಿಯ ಮೂಲನಿವಾಸಿಗಳನ್ನು ಪತ್ತೆ ಹಚ್ಚಿ, ಹೊಲಮನೆಗಳನ್ನು ಕೊಡುವ ಆಶೆಯಿಂದ ಅವರ ಮನವೊಲಿಸಿ, ಕೇಂದ್ರದವರು ಅವರನ್ನು ಕರೆತಂದರು. ದಟ್ಟಡವಿಯನ್ನು ಎಲ್ಲರೂಸೇರಿ ಕಡಿದರು. ಆ ಕಟ್ಟಿಗೆಯ ಬೆಲೆಯೇ ೨೫೦೦ ರೂಪಾಯಿಗಳಾಯಿತು. ಬಳಿಕ ಟ್ರ್ಯಾಕ್ಟರದಿಂದ ರೆಂಟೆಹೊಡೆಯಲಾಯಿತು. ಸರಕಾರವು ಟೆನಂಟ್ ಕೋಆಪರೇಟಿವ್ಹ ಫಾರ್ಮಿಂಗ ಸೊಸೈಟಿಗೆ ಕೊಟ್ಟಿದ್ದ ೫೦೦ ಎಕರೆ ಭೂಮಿಯನ್ನೂ ಈಗ ರೈತರಿಗೆ ಕೊಡಲಾಗಿದೆ; ಹೋದ ವರುಷ ಸಕಾಲದಲ್ಲಿ ಭೂಮಿನ್ನು ಹರಗುವದು ಸಾಧ್ಯವಾಗಲಿಲ್ಲ; ಆದರೆ ಈಸಲ ೨೫೦ ಎಕರೆ ಭೂಮಿ ಸಾಗುವಳಿಯಾಗಿ, ಬೆಳೆ ಬೆಳೆದಿವೆ. ಭತ್ತ, ಜೋಳ, ಹುರಳಿ, ತೊಗರಿಗಳನ್ನು ಬೆಳೆದಿದ್ದಾರೆ. ಒಂದೊಂದು ಕುಟುಂಬಕ್ಕೆ ಸರಾಸರಿಯಾಗಿ ೧೦-೧೨ಎಕರೆ ಭೂಮಿಯನ್ನುಹಂಚಿಕೊಟ್ಟಿದ್ದಾರೆ.ಈ ಒಕ್ಕಲತನದ ಕಾರ್ಯಕ್ಕೆ ಬೇಕಾಗುವ ಸಲಕರಣೆಗಳಿಗಾಗಿಯೇ ೪೨೫೦೦ ರೂಪಾಯಿಗಳನ್ನು ತೆಗೆದಿಡಲಾಗಿದೆ. ಈ ವರುಷದ ಬೆಳೆಯ ಬೆಲೆಯೇ ಸುಮಾರು ೨೪೦೦೦ ರೂ. ಆಗಬಹುದಂತೆ! ನೀರಾವರಿ ಯೋಜನೆ ಸಫಲವಾದರೆ, ಕಾರ್ಯ ಇನ್ನೂ ಫಲಪ್ರದವಾಗುವದು. ಅಲ್ಲಿದ್ದ ನೀರಲ್ಲಿ ಔಷಧಿಯನ್ನು ಹಾಕಿದ್ದಾರೆ ಜನರು ಕುಡಿಯಲು ವರ್ತಿಯ ನೀರನ್ನು ಉಪಯೋಗಿಸುತ್ತಾರೆ: ಹಾಳು ಬಿದ್ದ ಎರಡು ಕೆರೆಗಳನ್ನೂ ಪುನರುದ್ಧಾರ ಮಾಡಿದರೆ, ಊರಿಗೂ, ಬೆಳೆಗೂ ನೀರು ಪೂರೈಸಲು ಸಾಧ್ಯವಾಗುವದು. ಈ ಯೋಜನೆಗೆ ಒಂದು ಕೆರೆಗೆ ೧೨೦೦೦ ಇನ್ನೊಂದಕ್ಕೆ ೭೦೦೦ ವೆಚ್ಚವಾಗುವದಂತೆ! ಆದರೂ ಅದರ ಉಪಯೋಗ ಮಾತ್ರ ಸಾಕಷ್ಟಾಗುವದು. ಕುಡಿಯುವ ನೀರಿನ ಬಾವಿ ಕಟ್ಟಿಸಿ, ಮುಖ್ಯ ದಾರಿಗೆ ಮುಟ್ಟಲು, ಒಂದು ದೊಡ್ಡ ದಾರಿಯನ್ನೂ ಮಾಡಿಸುವ ಯೋಜನೆಯಿದೆ. ಇದೆಲ್ಲ ಊರು ನಿರ್ಮಾಣ

ವಾದ ಮೇಲೆ. ಈಗ ಅಲ್ಲಿ ಸುಮಾರು ೩೧ ಕುಟುಂಬಗಳು (೧೫೦ ಜನ) ಬಂದು ನೆಲೆಸಿವೆ. ಮನೆಕಟ್ಟಿಸಲು, ಪ್ರತ್ಯೇಕವಾಗಿಯೇ ಭೂಮಿಯನ್ನು ಸರಕಾರವು ಕೊಟ್ಟಿದೆ.

ಜನರು ಶ್ರದ್ಧಾಳುಗಳು; ಹಾವು ದೇವತೆಯಂತೆ! ಹಾವು ಕಚ್ಚಿದವರನ್ನು ನಾಗೇಂದ್ರನ ದೇವಾಲಯದಲ್ಲಿ ಹಾಕಿ ಬಿಟ್ಟರೆ, ವಿಷದ ಯಾವ ಬಾಧೆಯೂ ಇಲ್ಲದೆ ಅವರು ಆರೋಗ್ಯದಿಂದ ಹೊರಬರುವರಂತೆ! ಇದೀಗ ಕೇಂದ್ರದವರೇ ಊರಲ್ಲಿ ಅಲ್ಪಸ್ವಲ್ಪ ಔಷಧ ದೊರೆಯುವ ವ್ಯವಸ್ಥೆಯನ್ನೂ ಮಾಡಿದ್ದಾರೆ.

ಅಂತೂ ಸರ್ವೋದಯ ಕೇಂದ್ರದ ಕಾರ್ಯಕರ್ತರ ಅವಿರತ ಪರಿಶ್ರಮದಿಂದ ಮತ್ತು ಹೊಲ್ತಿಕೋಟೆಯ ಜನರ ಸಹಕಾರದಿಂದ, ಊರು ತನ್ನ ಹಳೆಯ ವೈಭವವನ್ನು ಮರಳಿ ಪಡೆಯುತ್ತಿದೆ! ಇನ್ನೂ ಒಂದು ತೂಕು ಹೆಚ್ಚಾಗಿಯೇ ಎನ್ನಿ!

—ಸಂ.



# ಅಕ್ಕನ ಜೀವನ ದರ್ಶನ

**ಲೇ:— "ಸುಶೀಲ ಚಿಂತಾಮಣಿ" ಧಾರವಾಡ.**

"ಯುಗಪ್ರವರ್ತಕ ಬಸವಣ್ಣನವರ"ನ್ನು, ಕುರಿತು ಬರೆದು ಶ್ರೀ ಚಿಂತಾಮಣಿಯವರು ವಾಚಕ ವೃಂದಕ್ಕೆ ಸುಪರಿಚಿತರಾಗಿದ್ದಾರೆ; ಪ್ರಸ್ತುತ ಲೇಖವನ್ನು "ಅಕ್ಕಮಹಾದೇವಿ,"ಯನ್ನು ಕುರಿತು ಹೊರಬೀಳಲಿರುವ ಅವರ ಇನ್ನೊಂದು ಕೃತಿಯಿಂದ ತೆಗೆದುಕೊಳ್ಳಲಾಗಿದೆ. ಹೊಸ ವಿಚಾರ, ಹೊಸ ದೃಷ್ಟಿಕೋನ, ಇವು ಇದರಲ್ಲಿ ಕಂಡು ಬರುತ್ತವೆ.

"ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರೀ ತಥಾ ಪಂಚಕಂ ನಾಃಸ್ಮರೇನ್ನಿತ್ಯಂ ಮಹಾಪಾತಕ ನಾಶನಂ...." ಎಂದು ನುಡಿಯುತ್ತ ರಂಗವಲ್ಲಿ ಹಾಕುತ್ತ ಕುಳಿತ ಸರಳೆಯನ್ನು ಅದೆಷ್ಟುಸಲ ಕಂಡಿದ್ದಳೋ ಗೌಳಿಗರ ಮಲ್ಲವ್ವ! ಇಂದು ಮಂತ್ರ ಅನ್ನುತ್ತ ಅಲ್ಲಿಯೇ ಶತಪಥ ಹಾಕುತ್ತಲಿದ್ದ ಶಿವರಾಮ ಜೋಯಿಸರನ್ನು ಕೇಳಿಯೇ ಬಿಟ್ಟಳು. "ಅಲ್ರೀ ಜೋಯಿಸ್ರ! ದಿನಾ ಮುಂಜಾನೆ ನಮ್ಮ ಸರಳಕ್ಕ ಈ ಐದು ಮಂದೀ ಹೆಸರು ನೆನಿಯೋದಕ ಆದ್ರ, ನಮ್ಮ ಪಾರ್ವತೆವ್ವನ್ನ ನೆನಿಯೋದಕ ಹೆಚ್ಚಿನದಲ್ಲೇನ್ರಿ?"

ಜೋಯಿಸರು ಒಂದು ಕ್ಷಣ ತಡೆದರು. ಮಲ್ಲವ್ವನಲ್ಲಿ ಈ ಪ್ರಶ್ನೆ ಕೇಳುವ ಕುತೂಹಲವೇಕೆ ನಿರ್ಮಾಣವಾಗಿದೆ. ಎಂಬದನ್ನು ವಿಚಾರಿಸುವದಕ್ಕೆ ತಡೆದರೋ, ಅಥವಾ ಯಾವುದೋ ವಿಚಾರ ತಂತ್ರಿ ಇಂದು ಮಲ್ಲವ್ವನ ಪ್ರಶ್ನೆಯ ಕಡೆಗೆ ಹೊರಳುವದಕ್ಕೆ ತಡೆದರೋ ಅಂತೂ ಒಂದು ಕ್ಷಣ ತಡೆದು ಉತ್ತರಿಸಿದರು. "ಅದು

ಹಾಂಗಲ್ಲ ಮಲ್ಲಮ್ಮ, ಸೀತಾ ತಾರಾ ಅವರ್‍ನ ನೆನಿಯೋದು ಮುಂಜಾನೆ ಮಾತ್ರ. ನಮ್ಮ ಪಾರ್ವತೆಮ್ಮನ್ನ ನೆನಿಯೋದು, ಹುಟ್ಟಿದಂದಿನಿಂದ ಸಾಯುವತನಕ, ಅಂದ್ರ ಕುಂತಾಗ ನಿಂತಾಗ ಕೆಲಸದಲ್ಲಿದ್ದಾಗ ಯಾವಾಗಲೂ ಆ ಜಗನ್ಮಾತೆಯನ್ನ ನಾವು ನೆನೆಯಬೇಕು. ”

“ ಹೀಂಗೇನ್ರಿ ! ಅಂದವಳೇ ಮೂಹೂರ್ತ ಕೇಳಬಂದ ಮಲ್ಲಮ್ಮ ಹೊರ ಟಿದ್ದು ಹೋದಳು. ಅಲ್ಲಿಯೇ ಕುಳಿತಿದ್ದ ನನ್ನಲ್ಲಿ ಅವರ ಸಂಭಾಷಣೆಯಲ್ಲಿ ವ್ಯಕ್ತ ವಾದ ವಿಚಾರ ಲಹರಿ ಹಾಗೆಯೇ ಉಳಿದುಬಿಟ್ಟಿತು.

ಒಂದು ವಿಚಾರ ಲಹರಿ ಹರಿಬಿದ್ದಿತೆಂದರೆ ಮುಂದೆ ಮುಂದೆ ಸಾಗುವದೇ ಅದರ ಗುಣವೇನೋ ! ಒಬ್ಬರನ್ನು ನೆನೆಯುವದು, ವಂದಿಸುವದು, ಪೂಜಿಸುವದು ಎಂಬ ಮಾತುಗಳನ್ನು ವಿಚಾರ ಲಹರಿಗೆ ಬಿಟ್ಟಾಗ ಯಾವ ದಿಕ್ಕಿನಲ್ಲಿ ಅದರ ಓಟ ಸಾಗಬಹುದು ಹೇಳಲಿಕ್ಕಾಗಲಿಕ್ಕಿಲ್ಲ. ಆದರೆ ಪ್ರಶ್ನಮಾಲೆ ಮಾತ್ರ ಹಾಗೇ ಮುಂದು ವರಿಯುತ್ತದೆ. ನೆನೆಯುವದು ಎಂದಾಗ ಉಪಕಾರವನ್ನೋ ? ಅವರ ಹೋರಾಟದ ಶಕ್ತಿಯನ್ನೊ ? ವಂದಿಸುವದು ಎಂದಾಗ ಅಂತಃ ಸ್ಫೂರ್ತಿಯಿಂದಲೋ ? ಡಂಭಾ ಚಾರಕ್ಕೊ ? ಹಾಗೇ ಒಂದರಮೇಲೊಂದು ಪ್ರಶ್ನೆಗಳು ಮೇಲೇರಿ ಬರುತ್ತವೆ. ಇದೆಲ್ಲ ವನ್ನೂ ಬಿಟ್ಟರೂ ನೆನೆಯುವದು ಎಂಬ ಒಂದೇ ಮಾತನ್ನು ವಿಚಾರಿಸಬೇಕೆಂದರೂ, ಉದ್ದೇಶವು ಒಂದೇ ಇದ್ದಾಗ ಐವರನ್ನೇಕೆ ನೆನೆಯಬೇಕೆಂಬ ಶಂಕೆ ಮೂಡುತ್ತದೆ. ಹೆಣ್ಣು ಕುಲಕ್ಕೆ ಈ ಐವರು ಮಾಡಿದ ಉಪಕಾರದ ರೂಪದಲ್ಲಿ, ಅವರುಗಳ ಜೀವನ ಹೋರಾಟಗಳ ಆದರ್ಶವನ್ನು ತೆಗೆದುಕೊಳ್ಳುವದಾದರೆ ಅವರು ವಂದನೀಯರೂ ಏಕಾಗಲಿಲ್ಲ ? ಸ್ಮರಣೀಯರಾಗಿ ಮಾತ್ರ ಏಕೆ ಉಳಿದರು ? ಗಂಡುಕುಲಕ್ಕೆ ಅದೇ ರೀತಿ ಆದರ್ಶವನ್ನಿತ್ತವರು ಮಾನವಕುಲಕ್ಕೇ ವಂದನೀಯರಾದರು, ಮಾನನೀಯ ರಾದರು. ಹೆಣ್ಣುಕುಲದಲ್ಲೇಕೆ ಅಂತಹರು ಹುಟ್ಟಲಿಲ್ಲ ? ಪುರಾಣದ ದೇವತೆಗಳಲ್ಲಿ ದೇವತೆಯರೂ ಇದ್ದರೂ, ಕಲ್ಪನೆಯ ಕನಸಿನಲ್ಲಿ ಅರ್ಧ ದೇಹ ಹೆಣ್ಣೆಂದರೂ ಪ್ರತ್ಯೇಕ ವಾದ ಅಸ್ತಿತ್ವದ ಮಾತು ಬಂದಾಗ ಗಂಡೇ ಸರ್ವಸ್ವನಾಗುತ್ತಾನಲ್ಲ ? ಗಂಡು ಕುಲಕ್ಕೇ ಪೂಜನೀಯನಾಗಿ, ಅಮೂರ್ತ ಆದರ್ಶವಾಗಿ ದೇವನೊಬ್ಬನಿದ್ದರೆ, ಹೆಣ್ಣು ಕುಲಕ್ಕೆ ಗಂಡೇ ದೇವನಾಗಿದ್ದಾನಲ್ಲವೇ ? ಹೆಣ್ಣು ಕುಲದ ಮುಂದಿರುವ ಈ ಪ್ರಶ್ನೆಯು ಎಂದಾದರೂ ಮಾನವ ಕುಲದ ಪ್ರಶ್ನೆಯಾಗಿದೆಯೇ ? ಗಂಡನೇ ದೇವರೆಂದು ತಿಳಿದು ಹೋರಾಟ ನಡೆಯಿಸಿದ ಪಂಚ ಕನ್ನೆಯರ ಆದರ್ಶದಂತೆಯೇ. ದೇವರೇ ಗಂಡ ನೆಂದು ತಿಳಿದು ಹೋರಾಟದ ಜೀವನ ನಡೆಯಿಸಿದವರ ಆದರ್ಶವು ಮಾನವ ಕುಲದ ವಿಚಾರಕ್ಕಾದರೂ ಬಂದಿದೆಯೇ ? ಓ ! ಅದು ವಿಚಾರದ ಓಘ !

ಹುಟ್ಟ ಕನ್ನಡಿಗನಾದವನಿಗೆ ಈ ಬಗೆಯ ವಿಚಾರದ ಓಘವು ಎತ್ತ ಸಾಗ ಬಹುದೆಂಬದನ್ನು ತಿಳಿದುಕೊಳ್ಳುವದಕ್ಕೆ ಅಷ್ಟೇನೂ ತೊಂದರೆಯಾಗಲಾರದು. ಆಗಬಾರದು.

ಕಾಲಗತಿಗನುಸರಿಸಿ ಅರಳುತ್ತಿರುವ ಮಾನವ ಕುಲವು ತನ್ನ ಪ್ರಗತಿ ಮಾರ್ಗದಲ್ಲಿ ಅನೇಕ ಹೊರಳಿಕೆಗಳನ್ನು ದಾಟಿದೆ. ಅಂತಹ ಒಂದು ಹೊರಳಿಕೆಯ ಕಾಲಕ್ಕೆ ಕನ್ನಡನಾಡಿನಲ್ಲಿ ಹುಟ್ಟಿ ಹೆಣ್ಣು ಕುಲದ ಸ್ವಾತಂತ್ರ್ಯ ಧ್ವಜವನ್ನು ಮೆರಿಸಿದ ಅಕ್ಕಮಹಾದೇವಿಯು ಹೋರಾಟದ ಜೀವನ ಜೀವಿಸಿದಳು. ಆದರಿಂದ ಸಹಜ ಜೀವನದ ಆದರ್ಶವನ್ನು ತೋರಿದಳು. ಹೆಣ್ಣು ಕುಲದ ಪ್ರಗತಿಯ ಬಗ್ಗೆ ಚಿಂತಿಸುವವರ ವಿಚಾರದ ಓಘಕ್ಕೆ ಸ್ವಾಭಾವಿಕವಾದ ಓಟವನ್ನಿತ್ತಳು. ಅಕ್ಕನ ಜೀವನ ದರ್ಶನವು ಇಂದಿಗೂ ಮಾನವ ಕುಲದ ಜೀವನದ ದರ್ಶನವಾಗಿದೆ. ಸ್ಮರಣೀಯರು ವಂದನೀಯರು ಎಂಬ ಮಾತುಗಳ ನಿಜವಾದ ಅರ್ಥವನ್ನು ತನ್ನ ಜೀವನ ದರ್ಶನದಿಂದ ಲೋಕಕ್ಕೆ ಬಿತ್ತರಿಸಿದ್ದಾಳೆ. ಸ್ಮರಣೀಯರಾದ ಪಂಚಕನ್ನೆಯರಂತೆ ಅಕ್ಕಮಹಾದೇವಿಯು ರಾಣಿ ಎಂದು ಹೇಳಿಸಿಕೊಂಡರೂ, ಒಬ್ಬ ರಾಜನ ಹೆಂಡತಿ ಎಂಬ ಕಾರಣಕ್ಕಾಗಿ ಅಕ್ಕನು ರಾಣಿಯಾಗಿರಲಿಲ್ಲ. ಇತಿಹಾಸಕಾರರ ತಲೆ ತಿನ್ನುತ್ತಲಿದ್ದ ಅಕ್ಕನ ಮದುವೆಯ ಸಮಸ್ಯೆಯೇ ಈ ಮಾತನ್ನು ಒಡೆದು ಹೇಳುತ್ತದೆ. ಪುರಾಣ ಕಾಲದ ಪಂಚಕನ್ನೆಯರಕಾಲದಿಂದ ಅಕ್ಕನ ಕಾಲದವರೆಗೆ ಅಂದರೆ ಇಂದಿಗೆ ಎಂಟು ನೂರುವರುಷಗಳ ಹಿಂದೆ ಮಾನವ ಕುಲದ ಮುಂದೆ ಈ ಸಮಸ್ಯೆ ನಿಂತಿತ್ತು. ಒಬ್ಬ ಹೆಣ್ಣು ತಾನು ಅರಸನ ಹೆಂಡತಿಯು ಆದುದರಿಂದ ಅರಸಿ ಎಂದು ಹೇಳಿಸಿಕೊಳ್ಳಬೇಕೊ ? ಆಳುವವರು ಗಂಡಿದ್ದರೆ ಅರಸ, ಹೆಣ್ಣಿದ್ದರೆ ಅರಸಿ, ಎಂದು ತಿಳಿಯಬೇಕೋ ಎಂಬ ಪ್ರಶ್ನೆಯು ಮುಖ್ಯವಾಗಿತ್ತು. ಗಂಡು, ಹೆಣ್ಣಿನಲ್ಲಿ ನೈಸರ್ಗಿಕ ಭೇದವಿದೆಯಲ್ಲದೆ ತನ್ನ ಸುಖಕ್ಕಾಗಿ ಪುರುಷನು ಮಾಡಿಕೊಂಡ ಕೃತ್ರಿಮ ಭೇದವನ್ನು ತಾನು ಮನ್ನಿಸುವದಿಲ್ಲವಾಗಿ ಅಕ್ಕನು ಅಂದು ಘೋಷಿಸಿದಳು. ಹೆಣ್ಣೆಂದರೆ ಗಂಡಿನ ಒಂದು ಒಡೆತನದ ವಸ್ತುವಲ್ಲ. ಅವಳಿಗೂ ಪುರುಷನಂತೆಯೇ ಪ್ರತ್ಯೇಕವಾದ ಅಸ್ತಿತ್ವವಿದೆ ಎಂಬದನ್ನು ಮಾತಿನಿಂದ ಪ್ರತಿಪಾದಿಸಿದಳು. ಕೃತಿಯಿಂದ ಸಿದ್ಧಮಾಡಿ ತೋರಿಸಿದಳು. " ಮೊಲೆ, ಮುಡಿಬಂದರೆ ಹೆಣ್ಣೆಂಬರು " ಎಂಬಮಾತಿನಿಂದ ಗಂಡು ಹೆಣ್ಣುಗಳ ನೈಸರ್ಗಿಕ ಭೇದದ ಅರ್ಥವನ್ನು ವಿವರಿಸುತ್ತ, " ರಾಣಿ " ಎಂಬ ಮೋಹಕ ಹೆಸರಿನಿಂದ ರಾಜನ ಒಡೆತನವಸ್ತುವಾಗಿ, ಅವನ ಭೋಗ ಸಾಮಗ್ರಿಯಾಗಿ ಬಾಳಲಾರೆನೆಂದು ಕೃತಿಯಿಂದ ತೋರಿಸಿದಳು. ಜೀವನ ಸಿದ್ಧಿಯ ಕೊನೆಯ ಹೋರಾಟವೆಂದು ಅಂದು ಪುರುಷ ಶ್ರೇಷ್ಠನೆಂದು ತಿಳಿಯಲಾಗುತ್ತಿದ್ದ ಅರಸನ ಆಶಯವನ್ನು ಕಾಲ್ಕಸದಂತೆ ತೊರೆದಳು. ಆಧ್ಯಾತ್ಮಿಕ ಆದರ್ಶದ ಅವಿಚಲ ತಾರೆಯ ಕಡೆಗೆ ಹುಮ್ಮಸ್ಸಿನಿಂದ ದುಮಿಕಿದಳು.

ಅರಸನ ಹೆಂಡಂದಿರೆಂಬ ಕಾರಣಕ್ಕಾಗಿ ಅರಸಿಯರಾದ ಪಂಚಕನ್ನೆಯರು ಸ್ಮರಣೀಯರಾಗಿ ಉಳಿದದ್ದು ಅವರ ಆದರ್ಶಮಯ ಜೀವನದ, ಹೋರಾಟದ ಶಕ್ತಿಯ ಸಂರಕ್ಷಣೆ ಎಂಬುದಕ್ಕಾಗಿ ಆದರೆ ಅವರ ಹೋರಾಟವು ಅಕ್ಕನಂತೆ ಸ್ವತಂತ್ರ ಅಸ್ತಿತ್ವಕ್ಕಾಗಿ ನಡೆಯಿಸಿದ ಹೋರಾಟವಾಗಿರದೆ ಮನುಷ್ಯ ಮಾತ್ರನಿಗೆ ಇರುವ

ಅವಕಾಶಗಳನ್ನೇ ನಮಗೂ ಏಕೆ ಕೊಡಬಾರದು? ಅರ್ಥಾತ್ ನಮ್ಮನ್ನೂ ಮನುಷ್ಯ ಪ್ರಾಣಿ ಎಂದೇಕೆ ತಿಳಿಯಬಾರದು ? ಎಂಬ ಪ್ರಶ್ನೆಯ ಉತ್ತರ ರೂಪದಲ್ಲಿ ಸಮಾನ ಅವಕಾಶ ಕೇಳುವ ಹೋರಾಟವಾಗಿತ್ತು. ಪಂಚಕನ್ನೆಯರ ಈ ಹೋರಾಟದಿಂದಾಗಿ ಹೆಣ್ಣುಕುಲಕ್ಕೆ ಸಮಾನತೆಯ ತಾತ್ವಿಕ ಮನ್ನಣೆ ದೊರೆಯಿತು. ಕೃತಿಯ ಮನ್ನಣೆ ಇಂದಿಗೂ ದೊರೆಯಬೇಕಾದ ಮಾತೇ ಆಗಿ ಉಳಿದಿದೆ. ಈ ಸಮಸ್ಯೆಯನ್ನೆದುರಿಸಿದ ಅಕ್ಕನ ಹೊಸ ಉಪಕ್ರಮದಿಂದಾಗಿ ಹೆಣ್ಣುಕುಲದ ಪ್ರಗತಿಯ ಮುಖವೇ ಬದಲಾ ಯಿತು. ಪಶುತ್ವದಿಂದ ದೇವತ್ವಕ್ಕೇರುವ ಪುರುಷನ ಧ್ಯೇಯವೇ ಸ್ತ್ರೀಯ ಧ್ಯೇಯ ವಾಯಿತು. ಹಿಂದೆ ಪಂಚಕನ್ನೆಯರು ಮಹಿಳೆಯರ ಮಾನವೀಕರಣಕ್ಕಾಗಿ ಅಂದರೆ ಹೆಣ್ಣನ್ನೂ ಮನುಷ್ಯರಲ್ಲಿ ಎಣಿಸುವಂತೆ ಮಾಡುವದಕ್ಕಾಗಿ ಕಷ್ಟಪಟ್ಟರು, ಅದರ ಮುಂದಿನ ಹೆಜ್ಜೆಯಾದ ಧ್ಯೇಯಸಿದ್ಧಿಯಲ್ಲಿ ಸಮಾನತೆಯನ್ನು ಅಕ್ಕನು ಸಾಧಿಸಿದಳು.

ಒಗಟದಂತೆ ಕಾಣುವ "ಗಂಡನೇ ದೇವರೋ ದೇವರೇ ಗಂಡನೋ" ಎಂಬ ಮಾತಿನಲ್ಲಿ ಹುದುಗಿರುವ ಅದ್ಭುತ ಸಾಧನೆಗೆ ಅಕ್ಕಮಹಾದೇವಿಯ ಜೀವನ ಹೋರಾಟವೇ ಕಾರಣವೆಂಬುದು ನಿರ್ವಿವಾದ. ಅದರ ಜೀವಂತ ದರ್ಶನವು ಕನ್ನಡ ನಾಡಿನಲ್ಲಿ ಮಾತ್ರ ಇಂದಿಗೂ ದೊರೆಯುತ್ತದೆ. ಮೂರು ಲೋಕದ ಗಂಡ ಎಂಬ ಮಾತಿನಲ್ಲಿ ಗಂಡ ಎಂಬುದಕ್ಕಿರುವ ಅರ್ಥವು ಹೆಂಡತಿಯ ಗಂಡ ಎಂಬ ಮಾತಿ ನಲ್ಲಿರುವ ಗಂಡ ಎಂಬುದಕ್ಕಿಲ್ಲನೆಂಬುದನ್ನು ಕನ್ನಡದ ಜನಜೀವನದಲ್ಲಿಯೇ ಕಾಣ ಬಹುದಾಗಿದೆ. ಕಾಲದ ಪ್ರಭಾವದಿಂದ ಅಕ್ಕನ ಅಂದಿನ ಸಾಧನೆಯು ಹೆಸರಿಗೆ ಮಾತ್ರ ಉಳಿದಿದೆ ಎಂದರೂ ಉಳಿದ ಹೆಸರುಗಳೇ ಆ ಮಹತ್ಸಾಧನೆಯನ್ನು ಬಿಚ್ಚಿ ಹೇಳುತ್ತವೆ. ರಾಜನ ಹೆಂಡತಿ ಆದುದರಿಂದ ರಾಣಿ ಎಂಬುದಲ್ಲದಂತೆ, ಬಸಪ್ಪನ ಹೆಂಡತಿ ಆದುದರಿಂದ ಅವಳು ಬಸವ್ವ ಎಂದು ಕನ್ನಡನಾಡಿನಲ್ಲಿ ಹೇಳುವದಿಲ್ಲ. ಬಸಪ್ಪನ ಹೆಂಡತಿಯು ನೀಲವ್ವನೂ ಆಗಿರಬಹುದಾಗಿದೆ. ಬಸಪ್ಪ ಮತ್ತು ಬಸವ್ವ ಎಂಬುವು ಮಾನವಕುಲದಲ್ಲಿ ನಿಸರ್ಗದಿಂದಲೇ ನಿರ್ಮಿತವಾದ ಗಂಡು ಹೆಣ್ಣು ಎಂಬ ಜಾತಿಯನ್ನು ಸೂಚಿಸುವ ಹೆಸರುಗಳಾಗಿವೆ. ಹೆಸರಿನಲ್ಲಿಯೂ ಸಮಾನತೆ ಯನ್ನು ಕಾಣದ, ಕಣ್ಣುಕಾಣದ ಗಾವಿಲರು, ಹೆಸರಿನಲ್ಲಾದರೂ ಸಮಾನತೆ ಸಾಧಿ ಸಿದವರಿಗೆ ಹೆಸರಿಡುವ ಯತ್ನಮಾಡಬುದು. ಅಕ್ಕನ ಜೀವನದರ್ಶನವು ಅಂಥವರ ಕಣ್ಣಿಗೆ ಅಂಜನವಾಗಿದೆ.

ಗಂಡನೇ ದೇವರು ಎಂದು ಹೇಳುವಲ್ಲಿ ಮನುಷ್ಯರಲ್ಲಿಯೇ ಗಂಡು ಹೆಣ್ಣು ಗಳ ಸಂಬಂಧವನ್ನೂ ತೋರಿಸಿದ್ದಾರೆ. ದೇವರೇ ಗಂಡನೆಂಬ ಮಾತಿನಲ್ಲಿ ಹೆಣ್ಣು ಮತ್ತು ದೇವರ ಸಂಬಂಧವನ್ನು ತೋರಿಸಲಾಗಿದೆ. ಅಕ್ಕಮಹಾದೇವಿಯ ಕಾಲಕ್ಕೆ ಹೆಣ್ಣು ಮತ್ತು ದೇವರ ಸಂಬಂಧವನ್ನು ಹೇಳುವದಿರಲಿ ಹೆಣ್ಣು ಮತ್ತು ಗಂಡಿನ ಸಂಬಂಧವನ್ನೂ ಕೂಡ ಸಮಾನತೆಯ ತಳಹದಿಯ ಮೇಲೆ ನುಡಿಯುವಂತಿರಲಿಲ್ಲ. ವೆಂಬುದನ್ನು ಅಲಕ್ಷಿಸುವಂತಿಲ್ಲ. ಮನುಷ್ಯ ಮನುಷ್ಯರ ಸಂಬಂಧವೇ ಅರ್ಥಾತ್

ಪುರುಷ ಪುರುಷರ ಸಂಬಂಧವೇ ಸಮಾನತೆಯ ತಳಹದಿಯ ಮೇಲೆ ಅಂದು ಇಲ್ಲ ದಿರುವಾಗ, ಮನುಷ್ಯ ಪ್ರಾಣಿಗಳಲ್ಲಿ ಒಂದೆಂದು ತಿಳಿದು ನಡೆಸಿಕೊಳ್ಳಲಾರದ ಹೆಣ್ಣಿನ ವಿಷಯದಲ್ಲಿ ಹಾಗೆ ಹೇಳುವದು ಅತಿ ಧೈರ್ಯದ ಮಾತೇ ಆಗಿತ್ತು. ಅಂದು ಕೂಡ ಇಂದಿನಂತೆಯೇ ಕ್ರಾಂತಿಕಾಲವಿತ್ತು. ಮಾನವಕುಲವು ಇಂದಿನಂತೆಯೇ ಅನೇಕ ಸಮಸ್ಯೆಗಳನ್ನೆದುರಿಸಬೇಕಾಗಿತ್ತು. ಅವುಗಳಲ್ಲಿ ಈ ಸಂಬಂಧದ ಸಮಸ್ಯೆಯೂ ಒಂದು. ಗಂಡು ಗಂಡಿನ ಸಮಾನತೆ, ಗಂಡು ಹೆಣ್ಣಿನ ಸಂಬಂಧದ ಸಮಾನತೆ, ಗಂಡು ಮತ್ತು ದೇವರ ಸಂಬಂಧ, ಹೆಣ್ಣು ಮತ್ತು ದೇವರ ಸಂಬಂಧ ಮುಂತಾದ ಈ ಸಂಬಂಧಗಳ ಸರಕ್ಕೆ ಒಂದು ಸೂತ್ರವಿರಲಿಲ್ಲ. ಅಕ್ಕಮಹಾದೇವಿಯು ಸರಕೆ ಹೃದಯದ ಸೂತ್ರವನ್ನು ಅನುಗೊಳಿಸಿ, ಹೆಣ್ಣು ಮತ್ತು ದೇವರ ಸಂಬಂಧವನ್ನು ಪ್ರಸ್ಥಾಪಿಸುವಲ್ಲಿ ಮೇರು ಮಣಿಯಾದಳು.

ಮಾನವಕುಲದ ಬೇರೆ ಬೇರೆ ಸಂಬಂಧಿಗಳ ವಿಷಯವಾಗಿ ಕಾಲಕಾಲಕ್ಕೆ ಬದಲಾವಣೆಗಳಾಗುತ್ತಲೇ ಬಂದಿವೆ. ಆದರೆ ಈ ಎಲ್ಲ ಸಂಬಂಧಗಳ ವಿಷಯವಾಗಿ ನಿರ್ಣಯಗಳೇನೇ ಆದರೂ ಅವುಗಳನ್ನು ಕೃತಿಗಿಳಿಸುವಾಗ ಧೂರ್ತಪುರುಷ ವರ್ಗವು ತನ್ನ ಹಿತ ಸಂಬಂಧಕ್ಕೆ ಧಕ್ಕೆಬರದಂತೆ ನೋಡಿಕೊಂಡಿದೆ ಎಂಬುದನ್ನು ಮರೆಯು ವಂತಿಲ್ಲ. ಪಂಚಕನ್ನೆಯರ ಕಾಲಕ್ಕೆ ಸಮಾನತೆಯ ಮಾತುಬಂದಾಗ ಪುರುಷ ವರ್ಗದಲ್ಲಿಯೇ ಮೇಲು ವರ್ಗದವರ ಸಂಗಡ ಸಂಬಂಧ ಬೆಳೆಯಿಸಿದ ಹೆಣ್ಣು ವರ್ಗಕ್ಕೆ ಮಾತ್ರ ಸಮಾನತೆಯ ಆಶ್ವಾಸನ ಕೊಡಲಾಯಿತು. ಕೃತಿಗಿಳಿಸುವಾಗ ಅದೂ ಕೂಡ ಏನಾಯಿತೆಂಬದಕ್ಕೆ ಅಕ್ಕನ ಹೋರಾಟವೇ ಸಾಕ್ಷಿಯಾಗಿ ನಿಂತಿದೆ. ಇಂದಿಗೂ ಸ್ವಾತಂತ್ರ್ಯದ ದೃಷ್ಟಿಯಲ್ಲಿ ಸಮಾನತೆಯ ಹೋರಾಟ ಹೆಣ್ಣುಕುಲ ಹೂಡಿದೆ. ಅದಕ್ಕೆ ತಾತ್ವಿಕ ಮನ್ನಣೆಯುದೊರೆತಿದೆ. ಕೃತಿಗಿಳಿಯುವಾಗ ಹಿಂದಿನದರ ಪುನರಾವೃತ್ತಿಯಾಗದಂತೆ ಹೆಣ್ಣು ಕುಲದ ಮುಂದಾಳುಗಳು ನೋಡಿಕೊಳ್ಳಬೇಕಾ ಗಿದೆ. ಅದಕ್ಕಾಗಿ ಅಕ್ಕನ ಜೀವನದರ್ಶನವು ಮಾರ್ಗದರ್ಶಕವಾಗಬಹುದಾಗಿದೆ. ಅಂದು ಮಾನವಕುಲಕ್ಕೆ ಒಂದು ರೋಗ ಬಂದಿತ್ತು ಅದರ ತ್ರಿದೋಷಗಳಿಗೆ ಬಸವಣ್ಣ ಅಕ್ಕಮಹಾದೇವಿ, ಅಲ್ಲಮಪ್ರಭುಗಳು ಒಂದೊಂದು ಔಷಧಕೊಟ್ಟರು. ಇಂದಿಗೂ ಅಂಥದೇ ಬೇನೆ ಮತ್ತೆ ಮರುಕಳಿಸಿದಂತಿದೆ. ಅದೇ ಬೇನೆ ಇದ್ದರೆ ಅದೇ ಔಷಧ ಯೋಗ್ಯವಾಗುವದು. ಕಾಲಕ್ಕೆ ತಕ್ಕಂತೆ ಅದನ್ನು ಉಪಯೋಗಿಸುವ ಕ್ರಮ, ಹಾಗೂ ಸಾಧನಗಳು ಬೇರೆಯಾಗಬಹುದು.

ಅಕ್ಕಮಹಾದೇವಿಯ ಜೀವನ ಹೋರಾಟದಲ್ಲಿ ನಿಸರ್ಗದ ವೈರವಿಲ್ಲ. ಪುರುಷವರ್ಗದಂತೆ, ನಿಸರ್ಗದ ಮೇಲೆ ಪ್ರಭುತ್ವದೊರಕಿಸುವನೆಂಬ ಹುಚ್ಚು ಹಂಬಲ ವಿಲ್ಲ. ಕ್ರಾಂತಿಯ ನೆವದಲ್ಲಿ ಹಿಂಸೆಯ ಹಟವಿಲ್ಲ. ಆತ್ಮಸಮರ್ಥನೆಯ ಹೆಸರಿನಲ್ಲಿ ಅಕ್ಕನ ತ್ಯಾಗವಿಲ್ಲ. ಅಕ್ಕನ ತ್ಯಾಗಕ್ಕೆ ಭೋಗದ ಆಮಿಷವಿಲ್ಲ. ಮಾನವನ ಕೊರತೆ ಗಳ ಅರಿವಿದ್ದರೂ, ಅದೇ ಅರಿವಿನ ಬಲದಿಂದ ತನ್ನ ತಾನರಿತ ಅಕ್ಕನ ಆದರ್ಶವು

ಕೆಚ್ಚಿನ ಕನ್ನಡತಿಯರ ಮುಂದಿನ ಮಾರ್ಗ ತೋರಿಸುವ ಬೆಳಕಾಗಲಿ. ಅಕ್ಕನ ಜೀವನ ದರ್ಶನವು, ಹೆಣ್ಣುಕುಲದ ಹಿರಿಮೆಯನ್ನು ಮಾನವಕುಲಕ್ಕೇ ಆದರ್ಶವಾಗಿ ಮಾಡುವಂತೆ ಕನ್ನಡತಿಯರ ಕೃತಿಶಕ್ತಿಯನ್ನು ಹೆಚ್ಚಿಸಲಿ ಎಂದು ಹಾರೈಸುವದೇ ಅಕ್ಕನಿಗೆ ನನ್ನ ಅರಿಕೆ.



## ಅಕ್ಕನ ಪೆಟ್ಟಿಗೆಯ ಹೊಸ ಸದಸ್ಯರು.

(೧) **ಕು. ದ್ವಾರಕಾ ವೆಂಕಟರಾವ್ ಬನ್ನಿಗೋಳ ಮುದಗಲ್.** ವ. ೧೨. ಕನ್ನಡ ೫ ನೇ ವರ್ಗ, ಕವನ, ಒಗಟುಗಳಲ್ಲಿ ಆಸಕ್ತಿ ಇದ್ದಂತೆ ತೋರುತ್ತದೆ. ಮುದ್ದಾದ ಒಂದು ಸಣ್ಣ ಕವನ, ಒಂದೆರಡು ಒಗಟುಗಳನ್ನು ಆದರದಿಂದ ಕಳುಹಿಸಿದ್ದಾಳೆ ವೀರಮಾತೆಗೆ.

(೨) **ದಾನಪ್ಪಾ ಚನ್ನಪ್ಪಾ ಕಾಮೋಜಿ.** ಧಾರವಾಡ. ವ. ೧೪. ಇಂಗ್ಲೀಷ ೪ ನೇ ವರ್ಗ. ಕವನ ಓದುವದು, ರಚಿಸುವದರಲ್ಲಿ ಹಾಗೂ ಹಿಂದಿ ಅಭ್ಯಾಸ ಮಾಡುವದರಲ್ಲಿ ಬಹಳ ಆಸಕ್ತಿಯಂತೆ. ಈ ಮೊದಲೇ ನಮ್ಮ ಅಕ್ಕನಪೆಟ್ಟಿಗೆಯ ಸದಸ್ಯನಾದ ವಿಶಾಲನು ಇವನ ಆಪ್ತ ಗೆಳೆಯನಂತೆ.

(೩) **ಪ್ರತಿಭಾ ದಿವಾಣ ಧಾರವಾಡ.** ವ. ೮. ಕನ್ನಡ ೨ ನೇ ವರ್ಗ. ಮಾತಿನಮಲ್ಲಿ. ಹಿರಿಯರೊಡನೆ ಹರಟುವದೆಂದರೆ ಬಲು ಇಷ್ಟ.

(೪) **ಕೃಷ್ಣಾಜಿ ಭೀಮರಾವ ದೇಶಪಾಂಡೆ** ಧಾರವಾಡ. ವಯಸ್ಸು ತಿಳಿಸಿಲ್ಲ. ೪ ನೇ ವರ್ಗ.

## ಸದಸ್ಯರ ಪತ್ರಗಳಿಗೆ ಉತ್ತರ

**ಪ್ರಿಯ ತಂಗಿ ತಮ್ಮಂದಿರಾ,**

ಈ ಸಾರೆ ಬಹುತೇಕ ನಿಮ್ಮೆಲ್ಲ ಸದಸ್ಯರ ಪತ್ರಗಳು ಒಂದೇ ವಿಚಾರವನ್ನು ಹೋಲುತ್ತಿವೆ. ಕಾರಣ ಎಲ್ಲರಿಗೂ ಒಂದೇ ಪತ್ರದಲ್ಲಿ ಉತ್ತರಕೊಡುವ ಪ್ರಯತ್ನಮಾಡಿದ್ದಾಳೆ ನಿಮ್ಮ ಹಿರಿಯಕ್ಕ. ನೋಡಿ ನಿಮ್ಮೆಲ್ಲರ ಒಗಟು, ಕವನ, ಲೇಖನಗಳೂ ತಲ್ಪಿವೆ. ಅವುಗಳಲ್ಲಿ ಯೋಗ್ಯವಿದ್ದ ಕೆಲವನ್ನು ಈ ಸಾರೆ ಪ್ರಕಟಿಸಲಾಗಿದೆ. ಮತ್ತೆ ಕೆಲವನ್ನು ಮುಂದಿನ ಸಾರೆ ಪ್ರಕಟಿಸುವೆವು. ಪ್ರಕಟವಾಗದಿದ್ದ ಲೇಖಗಳ ಬಗ್ಗೆ ನೀವ್ಯಾರೂ ನಿರಾಶರಾಗಬಾರದು. ಆದರೆ ಇದಕ್ಕೂ ಉತ್ತಮ ಬರೆಯಲು ಪ್ರಯತ್ನಿಸಿ ನಿಮ್ಮ ಲೇಖವೇ ಮೊದಲು ಪ್ರಕಟವಾಗುವಂತೆ ಪ್ರಯತ್ನಮಾಡಿರಿ. ನೀವು ಕಳುಹುವ ಒಗಟುಗಳೆಲ್ಲ ಕೇವಲ ಅಕ್ಷರ ಕೂಡಿಸುವದರ ಮೇಲೇ ಅವಲಂಬಿಸಿರುತ್ತದೆ. ಒಂದೇ ಮಾದರಿಯ ಒಗಟುಗಳನ್ನು ಹಾಕುವದರಿಂದ ಅಕ್ಕನ ಪೆಟ್ಟಿಗೆಯ ಓದುಗರಿಗೆ ಬೇಸರ ಬರಬಹುದು. ಕಾರಣ ಹೊಸ ರೀತಿಯ ಒಗಟು, ನಗೆಹನಿಗಳನ್ನು ಕಳುಹಲು ಪ್ರಯತ್ನಿಸಿರಿ. ಒಮ್ಮೆ ಎಲ್ಲಾದರೂ ಅಚ್ಚಾಗಿದ್ದ ನಗೆಹನಿಗಳನ್ನೇ ತಿರುಗಿ ಕಳುಹುವ ಸಾಹಸಮಾಡದಿರಿ.

ಇತಿ ತಮ್ಮೆಲ್ಲರ ಹಿರಿಯಕ್ಕ

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮುಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿದ್ದರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ **ಧಾರವಾಡ.**

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..............................................

..............................................................................

ಪೂರ್ಣ ವಿಳಾಸ..............................................................

(ಮನೆ ನಂಬರು ಸಹಿತ) ...................................................

---

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು ................................ ಸಹಿ

# ನಗೆ ಹನಿ

**ಮದ್ರಾಸೀ ಮನುಷನೊಬ್ಬನು :**–(ಶಾಲೆಯ ಸಹಾಯಾರ್ಥವಾಗಿ ಧರ್ಮಾರ್ಥ ಪೆಟ್ಟಿಗೆ ತಂದ ವಿದ್ಯಾರ್ಥಿನಿಯರನ್ನುದ್ದೇಶಿಸಿ, ) ಓ ! ಉಂಡಿ ತಂದಿರುವಿರಾ ?

**ವಿದ್ಯಾರ್ಥಿನಿಯರು :**— (ಸಂಕೋಚಿತರಾಗಿ) ಇಲ್ಲರೀ, ನಾವು ಶಾಲೆಯ ಸಹಾಯಾರ್ಥ ಹಣಬೇಡಲು ಬಂದಿರುವೆವು. ನಮ್ಮ ಬಳಿಯಲ್ಲಿ ಉಂಡಿಯೆಲ್ಲಿದೆ ?

( ಮದ್ರಾಸಿ ಜನರು ಧರ್ಮಾರ್ಥಪೆಟ್ಟಿಗೆಗೆ ಉಂಡಿ ಎನ್ನುವರು )

§ § § § §

## ಹುಚ್ಚಿದ್ದನ ಎರಡು ಘಟನೆಗಳು

(೧) ಶಾಲೆಯಲ್ಲಿ ಗುರುಗಳಿಗೆ ಯಾವನೋ ಒಬ್ಬ ಹುಡುಗ ಮಾಸ್ತರ್ರೀ....! ಪಟಾಕ್ಷಿಯಿಂದ ಏನೂ ಘಾಯವಾಗೋದಿಲ್ಲ ಅಂತಾರೆ ಅದು ನಿಜ ಏನ್ರಿ? " "ಹೌದು" ಎಂದು ಗುರುಗಳಿಂದುತ್ತರ ಹೊರಟಿತು. ಆಗ ಪೆದ್ದ ಒಂದು ಯೋಚನೆ ಮಾಡಿ ಮರುದಿವಸ ಶಾಲೆಗೆ ಬರುವಾಗ ಒಂದು ಪಟಾಕ್ಷಿಸರವನ್ನು ತಂದು, ಮಾಸ್ತರರ ಮೇಜಿನ ಕೆಳಗೆ ಕುಳಿತ. ಮೇಜಿನ ಸುತ್ತಲೂ ಮೇಲೆಯೂ ಅರಿವೆ ಹಾಕಿದ್ದರಿಂದ ಗುರುಗಳಿಗೆ ಪೆದ್ದನು ಮೇಜಿನ ಕೆಳಗಿರುವದು ಗೊತ್ತಾಗಲಿಲ್ಲ. ಸರಿ ! ಪಾಠನಡೆದಾಗ ಗುರುಗಳ ಕುರ್ಚಿಯ ಕೆಳಗೆ ಪಟಾಕ್ಷಿಗಳು ಚಟ್‌ಫಟ್ ಎಂದು ಹಾರಹತ್ತಿದವು. ಆಗ ಪೆದ್ದ ಮೆಲ್ಲನೆ ಗುರುಗಳಿಗೆ ಗೊತ್ತಾಗದಂತೆ ತನ್ನ ಜಾಗದಲ್ಲಿ ಕುಳಿತ. ಗುರುಗಳು ಬೆಚ್ಚಿಬಿದ್ದು ಎದ್ದರು. ಆಗ ಮಾಸ್ತರರ ಧೋತರ ಸುಡಹತ್ತಿತು. ಗುರುಗಳು ಕೋಪದಿಂದ " ಪಟಾಕ್ಷಿ ಹಚ್ಚಿದವರು ಯಾರೊ ? " ಎಂದರು ಆಗ ಪೆದ್ದ " ನಾನ್ರೀ ಹಚ್ಚಿದಾಂವ " ! " ನಿನ್ನೆ ನೀವೆ ಹೇಳಿದ್ರಲ್ಲ ! ಪಟಾಕ್ಷಿಯಿಂದ ಏನೂ ಗಾಯವಾಗೋದಿಲ್ಲಾ ! ಅಂತಾ ! ಅದರಿಂದ ನಾ ಹಚ್ಚಿದೆ ! ತಮಗೇನೂ ಘಾಯವಾಗಿರಲಿಕ್ಕಿಲ್ಲವಷ್ಟೇ ! ಎಂದ. ಮಾಸ್ತರರ ಮುಖ ಪೆಚ್ಚಾಯಿತು.

(೨) ಒಂದು ದಿನ ಶಾಲೆಗೆ ಹೋಗಲು ಒಲ್ಲೆನೆಂದು ಹಠಹಿಡಿದ ಪೆದ್ದ, ತಾಯಿ ಬಂದೊಡನೆ ಉಪ್ಪಿಟ್ಟುಕೊಡುವ ಆಶೆತೋರಿಸಿ ಪೆದ್ದನನ್ನು ಶಾಲೆಗೆ ಕಳುಹಿದಳು. ಉಪ್ಪಿಟ್ಟಿನ ಆಶೆಯಿಂದ ಕ್ಲಾಸಿನಲ್ಲಿ ಕುಳಿತ ಪೆದ್ದ, ಮಾಸ್ತರರು " ಹಿಮಾಲಯದಲ್ಲಿ ಏನಿದೆ ? " ಎಂದು ಕೇಳಿದಾಗ " ಉಪ್ಪಿಟ್ಟು " ಎಂದು ಉತ್ತರಿಸಿ ಸುಮ್ಮನೆ ಕುಳಿತ.

**—ವಿಶಾಲ-ಧಾರವಾಡ.**

## ಒಗಟಗಳು

(೧) ಜೋಕೆ! ಮಾರ್ಗಹಿಡಿದು ಹೋಗುವ ನನಗೆ ಅಡ್ಡಿಮಾಡಿದರೆ ನೀವೆಲ್ಲಾ ಸಾಯುತ್ತೀರಿ.

(೨) ಕಾರಖಾನೆಯವರು ನನ್ನನ್ನು ದುಂಡಾದ ಕಟ್ಟಿಗೆಯಲ್ಲಿ ಸಿಲುಕಿಸಿದ್ದರಿಂದ ಬಿಡುಗಡೆ ಹೊಂದಲು ವಿದ್ಯಾವಂತರ ಕೈಯಲ್ಲಿ ದುಡದು ಕೊನೆಗೆ ಮಡಿಯುತ್ತೇನೆ.

—ದ್ವಾರಕಾಬಾಯಿ ಬನ್ನಿಗೋಳ ಮುದಗಲ್.

× × × × ×

(೩) ನೆಲನೆಕ್ಕುವದು ನಾಲಿಗೆಯಲ್ಲ. ನನ್ನ ಮಕ್ಕಳಿಗೆಲ್ಲ ಒಂದೇ ಉಡುದಾರ. ಆದರೆ ನಾನಾರು ?

—ವಿಶಾಲ ಧಾರವಾಡ.

† † † † †

### ಹೋದ ತಿಂಗಳ ಒಗಟುಗಳ ಉತ್ತರಗಳು

(೧) **ಹರವಿ.** (೨) **ದಿವಾಕರ.**

**ಸರಿಯಾಗಿ ಉತ್ತರಿಸಿದವರು:— ೧. ವಿಶಾಲ ಧಾರವಾಡ. ೨. ದಾನಪ್ಪಾ ಕಾನೋಜಿ ಧಾರವಾಡ. ೩. ಶ್ರೀಪಾದ ದೇಶಪಾಂಡೆ ಧಾರವಾಡ. ೪. ಸುಧಾ ಕುಲಕರ್ಣಿ ಮಾಳಮಡ್ಡಿ. ೫. ಎನ್. ಜಿ. ಗಲಗಲಿ ಧಾರವಾಡ. ೬. ಶ್ರೀ ಶಾಲಿನಿ ಹಾಲಗಿ ಧಾರವಾಡ. ೭. ವಿಜಯಲಕ್ಷ್ಮಿ ವೈದ್ಯ ಧಾರವಾಡ.**

* * * * *

### ಚುಟುಕು

ನನ್ನ ಮುಖವು ಅಂದ
ನಾನು ಬಹಳ ಚಂದ
ಆದರೆ ನೋಡಿ ನನ್ನ ಬುದ್ಧಿ
ಸ್ವಲ್ಪ ಮಾತ್ರ ಮಂದ.



**ಪ್ರವೇಶ ಫೀ ಎರಡಾಣೆ.**

**ಸರಿಯಾದ ಉತ್ತರಕ್ಕೆ ವೀರಮಾತೆಯು ಒಂದು ಪ್ರತಿ ಪುಕ್ಕಟೆ (ಫ್ರೀ)**

| | | | | |
|---|---|---|---|---|
| ಸ ೧ | ೨ | * | ೩ | ನ |
| * | ಶಾ ೪ | ೫ | ನ | * |
| ೬ | | ಹ | * | ೭ |
| ಮ | * | ೮ | ೯ | ನ |
| ೧೦ | ಯ | * | ಮ ೧೧ | |

**ಮೇಲಿನಿಂದ ಕೆಳಕ್ಕೆ—**

(೨) ವಿಸ್ತೀರ್ಣ. (೩) ಮರ್ರ್ಯಾದೆ. (೫) ಸೈರಣೆ. (೬) ತಾವರೆ. (೭) ಮಂಗ. (೯) ಜವ.

**ಎಡದಿಂದ ಬಲಕ್ಕೆ—**

(೧) ಸಿಹಿ.(೩) ಕೃಷ್ಣನ........ಕಂಸ.(೪) ಕಾಯಿದೆ. (೬) ಸ್ವಜನ........ವೇ ಸರ್ವ ನಾಶದ ಮೂಲ. (೮) ಕಣ್ಣು. (೧೦) ನಾಶ. (೧೧) ವೃಕ್ಷ.

**ರಚಿಸಿದವರು:— ವಿಶಾಲ, ಧಾರವಾಡ.**

**( ಉತ್ತರವು ಡಿಸೆಂಬರ ೨೨ ರೊಳಗಾಗಿ ತಲ್ಪುವಂತೆ ಕಳಿಸಬೇಕು. )**



# ಅಕಬರ ಬೀರಬಲ್‌ರ ಕಥೆ

( ಕೇಳಿ ಬರೆದ ಕಥೆ )

**ಕತ್ತೆ ಯಾರು ?**

ಅಕಬರನ ಚರಿತ್ರೆ ಗೊತ್ತಿದೆಯಲ್ಲವೆ? ನಿಮಗೆ! ಆಗಿನ ಕಾಲದಲ್ಲಿ ಭಾರತದ ಚಕ್ರವರ್ತಿಗಳಲ್ಲಿ ಮೊಗಲ ವಂಶದ ಬಾದಶಹ ಅಕಬರನೊಬ್ಬನಾಗಿದ್ದ. ಗಣ್ಯ, ಶೂರ, ಧೀರಬುದ್ಧಿವಂತ ಸಾಮ್ರಾಟ! ಆ ಬಾದಶಹನಲ್ಲಿ "ನವರತ್ನ" ಗಳಿದ್ದವು. ನವರತ್ನಗಳೆಂದರೆ ೯ ರತ್ನಗಳು. ಹೊಳೆಯುವ ರತ್ನಗಳಲ್ಲ. ಬಾದಶಹನ ಸಭಾಸಂಘವನ್ನು ಬೆಳಗುವ ಅಮೌಲ್ಯ ರತ್ನಗಳು (೯ ಮಂತ್ರಿವರ್ಯರು)

ಆ ರತ್ನಗಳಲ್ಲೊಂದಾದ "ಬೀರಬಲ್" ನು ಬಹಳ ಜಾಣ ಮತ್ತು ಯುಕ್ತಿವಂತ ವಿಕಟ ಮಂತ್ರಿಯೂ ಆಗಿದ್ದನು.

ಪ್ರತಿ ದಿನ ಸಂಜೆಗೆ ವಿಹಾರಕ್ಕಾಗಿ ಬಾದಶಹನು ಅಡ್ಡಾಡಲಿಕ್ಕೆ ಹೋಗುತ್ತಿದ್ದನು. ಒಂದುದಿನ ಬೀರಬಲ್ಲನೂ, ಅಕಬರನೂ ಅಡ್ಡಾಡಲು ಹೋದಾಗ ಸಂಜೆಯಾಗಲು ಬೇಗನೆ ಅರಮನೆ ಸೇರಬೇಕೆಂದು ಬೇಗ ಬೇಗ ಹೆಜ್ಜೆ ಹಾಕುತ್ತ ಅರಮನೆಯತ್ತ ಸಾಗುತ್ತಿದ್ದರು. ಆಗ ಅರಮನೆ ಇನ್ನೂ ಬಹಳೇ ದೂರ ವಿದ್ದುದರಿಂದ ಬೀರಬಲ್ಲನು "ಬಾದಶಾಹ! ಅರಮನೆ ಇನ್ನೂ ಬಹಳ ದೂರ ಇರುವದು ಆದ್ದರಿಂದ ಈ ತಂಬಾಕದ ಹೊಲದ ನಡುವೆ ಹಾದು ಹೋದರೆ ಬೇಗನೆ ಅರಮನೆಗೆ ಮುಟ್ಟುವೆವು!" ಎಂದನು. "ಆಗಲಿ" ಎಂದೆನ್ನುತ್ತ ಬಾದಶಹನು ಹೊಲದ ನಡುವೆ ಹೊಕ್ಕಾಗ ಅಲ್ಲೆರಡು ಕತ್ತೆಗಳು ಹೊಲದಲ್ಲಿ ಹಾಗೆಯೇ ಸುಮ್ಮನೇ ನಿಂತಿದ್ದವು. ಆಗ ಇದೇ ಸಮಯವೆಂದು ತಿಳಿದು ಅಕ್ಬರನು ಬೀರಬಲ್ಲನಿಗೆ! ನೋಡು ಬೀರಬಲ್ಲ! ಈ ಕತ್ತೆಗಳು ಕೂಡ ತಂಬಾಕು ತಿನ್ನುವದಿಲ್ಲ! 'ಎಂದ' ಆದರೆ ಈ ಮಾತಿನಲ್ಲಿ ಬೀರಬಲ್ಲನು ತಿನ್ನುತ್ತಿದ್ದುದರಿಂದ ಬೀರಬಲ್ಲನು ಕತ್ತೆಗಿಂತ ಕಡೆ ಎಂಬ ಗುಪ್ತ ಅರ್ಥವಿತ್ತು. ಈ ಮಾತುಗಳನ್ನು ಕೇಳಿದ ಬೀರಬಲ್ಲನು "ಮಹಾರಾಜ! ತಂಬಾಕನ್ನು ತಿನ್ನದ ಕತ್ತೆಗಳನ್ನೇ ಹೊಲದಲ್ಲಿ ಬಿಡುತ್ತಾರೆ! ತಿನ್ನುವ ಕತ್ತೆಗಳನ್ನು ಒಳಗೆ ಬಿಟ್ಟಾರೆಯೇ" ಎಂದ. ಈ ಮಾತಿನಲ್ಲಿ ಅಕಬರನು ತಂಬಾಕು ತಿನ್ನದ್ದರಿಂದ ಅವನು "ತಂಬಾಕು ತಿನ್ನದ ಕತ್ತೆ" ಎಂಬರ್ಥವಿದ್ದದ್ದರಿಂದ ಅಕಬರನೂ ಕತ್ತೆಯಾಗಲಿಲ್ಲವೇ? ಈ ಗುಪ್ತಾರ್ಥವನ್ನು ಅರಿತ ಅಕಬರನು ನಾಚಿ ಸುಮ್ಮನಾದನು.

—ವಿಶಾಲ ಧಾರವಾಡ.



# ಶಿಕ್ಷಣ ಖಾತೆಯಲ್ಲಿ ಮುಂಬಯಿ ಕರ್ನಾಟಕಕ್ಕಾದ ಅನ್ಯಾಯ

ಈ ೨೦ ನೆಯ ಶತಮಾನದಲ್ಲಿ ಸಹಾ ಸ್ತ್ರೀಯರಿಗೆ ಒಂದು ಶಿಕ್ಷಣ ಸಂಸ್ಥೆಯ ಹೊರತಾಗಿ ಮತ್ತಾವ ಖಾತೆಗಳಲ್ಲೂ ಅಧಿಕಾರಸ್ಥಾನಗಳಲ್ಲಿ ಅವರನ್ನು ನೇಮಿಸಿಕೊಂಡಿಲ್ಲ. ಒಂದೆರಡು ಕಡೆ ಯಾವದೋ ಒಂದು ಸ್ಥಳದಲ್ಲಿ ನೇಮಿಸಿಕೊಂಡಿದ್ದರೂ ಸಹ ಅದು ಅಳುತ್ತಿರುವ ಸಣ್ಣ ಮಕ್ಕಳಿಗೆ ಸಿಹಿ ಪದಾರ್ಥ ತಿನ್ನಲುಕೊಟ್ಟು ಸುಮ್ಮನಾಗಿಸಿದಂತೆ. ಈ ಶಿಕ್ಷಣ ಖಾತೆಯಲ್ಲಾದರೂ ಸಹ ಮೇಲಿನ ಅಧಿಕಾರಿ ಸ್ಥಳವಿರದೆ 'ಅಸಿಸ್ಟಂಟ' ಎಂಬ ಹೆಸರಿನಿಂದ ನೇಮಿಸಿದ್ದಿದೆ. ರಾಷ್ಟ್ರದ ಪ್ರತಿಯೊಂದು ಖಾತೆಗಳಲ್ಲೂ ಸ್ತ್ರೀಯರಿಗೂ ಪ್ರವೇಶವಿದ್ದಲ್ಲಿ ರಾಷ್ಟ್ರಾಡಳಿತವು ಸುವ್ಯವಸ್ಥಿತವಾಗುವದೆಂಬಲ್ಲಿ ಯಾವ ಸಂಶಯವೂ ಇಲ್ಲ. ಕಾರಣವೆಂದರೆ ಅವರ ನಿಸರ್ಗಸಿದ್ಧ

ಸ್ವಭಾವಕ್ಕನುಸರಿಸಿ ಸಣ್ಣ ಪ್ರಮಾಣದಲ್ಲಿ ಮಾಡುವ ಗೃಹಕಾರ್ಯಗಳೇ ದೊಡ್ಡ ಪ್ರಮಾಣದಲ್ಲಿ ಮಾಡುವದಿರುತ್ತದೆ. ಬಾಕಿ ಖಾತೆಗಳಲ್ಲಿ, ಇದರ ವಿಚಾರದ ಸುಳಿವೂ ಸಹ ಇನ್ನೂ ರಾಷ್ಟ್ರಾಧಿಕಾರಿಗಳ ತಲೆಗಳಲ್ಲಿ ಬಾರದಿರುವದು ಸ್ತ್ರೀಯರ ಅದರೊಡನೆ ರಾಷ್ಟ್ರದ ದುರ್ದೈವವೇ ಸರಿ. ಮಿಕ್ಕೆಲ್ಲ ಖಾತೆಗಳನ್ನು ಈಗ ಸ್ವಲ್ಪ ಬದಿಗಿರಿಸಿ ಶಿಕ್ಷಣ ಖಾತೆಯೊಂದನ್ನೇ ತೆಗೆದುಕೊಂಡರೂ ಸಹ ಅಲ್ಲಿ ಹೆಣ್ಣುಮಕ್ಕಳ ಅವಶ್ಯಕತೆ ಎಷ್ಟಿದೆ ಎಂಬದನ್ನು ವಿಚಾರಮಾಡತಕ್ಕದ್ದಿದೆ. ಈ ಖಾತೆಗೆ ಗಂಡಸರು ಎಷ್ಟು ಅವಶ್ಯಕವೋ ಅದರ ಎರಡು ಪಟ್ಟು ಹೆಣ್ಮಕ್ಕಳ ಅವಶ್ಯಕತೆ ಇದೆಯೆಂಬ ಮಾತನ್ನು ಎಲ್ಲ ಶಿಕ್ಷಣ ಶಾಸ್ತ್ರಜ್ಞರೂ ಒಪ್ಪಿದ್ದಾರೆ. ಮಕ್ಕಳನ್ನು ಮಮತೆಯಿಂದ ನೋಡಿ ಯಾವ ರೀತಿಯಲ್ಲಿ ಅವರಿಗೆ ಶಿಕ್ಷಣಕೊಟ್ಟರೆ ಅವರು ಹೇಳಿದ್ದನ್ನು ಬೇಗನೆ ಗ್ರಹಿಸು ವರೆಂಬದನ್ನು ಸ್ತ್ರೀಯರು ಎಷ್ಟು ಬಲ್ಲರೋ ಅಷ್ಟು ಪುರುಷರು ಅರಿಯಲಾರರು. ಕಾರಣ ಈ ಖಾತೆಯ ಮೇಲಿನ ಅಧಿಕಾರಿಸ್ಥಳಕ್ಕೆ ಹೆಣ್ಣುಮಕ್ಕಳಿದ್ದರೆ ಅವರು ಆ ಖಾತೆ ಯಲ್ಲಿ ಅನಾನುಕೂಲತೆಗಳನ್ನು ನೋಡಿಕೊಂಡು ಅದಲು ಬದಲುಮಾಡಿ ಶಿಕ್ಷಣ ಕ್ರಮದಲ್ಲಿ ಒಳ್ಳೆಯ ಮಾರ್ಗವನ್ನು ಹುಡುಕಲು ಅನುಕೂಲವಾಗುವದು. ಈಗ ಆ ಪರಿಸ್ಥಿತಿ ಇಲ್ಲದೆ, ಕೇವಲ ಪುಸ್ತಕೀಶಿಕ್ಷಣ ಅದೂ ಕೇವಲ ಪರೀಕ್ಷೆಯಮಟ್ಟಿಗೆ, ಅದರಲ್ಲೂ ಪರೀಕ್ಷಕರ ಕಣ್ಣಿಗೆ ಅಂಜನ ಹಚ್ಚುವ ಪೂರ್ತಕ್ಕೆ ನಾಲ್ಕು ಮುಖ್ಯ ಮಾತುಗಳನ್ನು ಬಾಯಿಪಾಠಮಾಡಿ ಪರೀಕ್ಷೆಯಲ್ಲಿ ಪಾಸಾಗಿ ಮುಂದೆ ಅವರು ಅಯೋಗ್ಯ ಶಿಕ್ಷಕರಾಗಲಾಗಲೀ ಅಥವಾ ಮತ್ತ್ಯಾವದೇ ಅಯೋಗ್ಯ ನೌಕರರಾಗ ಲಾಗಲೀ ಆಸ್ಪದಮಾಡಿಕೊಟ್ಟಂತಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಈಗ ಶಾಲಾಖಾತೆ ಯಲ್ಲಿಯ 'ಅಸಿಸ್ಟಂಟ ಇನಸ್ಪೆಕ್ಟ್ರೆಸ್' ಸ್ಥಳವನ್ನು ಸಹಾ ತೆಗೆದು ಹಾಕುವ ಪ್ರಯತ್ನ ನಡೆದಿದ್ದು, ಮುಂದೆ ಇನ್ನು ನಾಲ್ಕಾರು ತಿಂಗಳಲ್ಲಿ ಈ ವ್ಯವಸ್ಥೆಯು ಜಾರಿಯಲ್ಲಿ ಬರಲಿದೆಯೆಂದು ನಮ್ಮ ಮುಂಬಯಿ ಕರ್ನಾಟಕದಲ್ಲಿ ಈ ಸ್ಥಳದಲ್ಲಿದ್ದ ಸ್ತ್ರೀ ಅಧಿಕಾರಿ ಜಾಗವನ್ನು ಈಗಲೇ ಕಡಿಮೆ ಮಾಡಿರುವದು ಶೋಚನೀಯ ಸಂಗತಿ. ಇದರಿಂದ ಕರ್ನಾಟಕಕ್ಕೆ ವಿಶೇಷವಾಗಿ ಹೆಣ್ಣುಮಕ್ಕಳಿಗೆ ಬಹಳೇ ಅನ್ಯಾಯ ವಾಗಿದೆ. ಈಗ ಸದ್ಯದಲ್ಲಿ ಶಿಕ್ಷಣಶಾಖೆಯೊಳಗಿನ ಒಬ್ಬ ಅಧಿಕಾರಿಗಳು ನಿವೃತ್ತರಾದ್ದ ರಿಂದ ಆ ಸ್ಥಳದಲ್ಲಿ ಬೇರೆ ಅಧಿಕಾರಿಗಳನ್ನು ನೇಮಿಸಿಕೊಳ್ಳುವ ಗೊಡವೆಗೇಕೆ ಹೋಗಬೇಕೆಂದು ಭಾವಿಕಾಯ್ದೆಯ ಜಾರಿಯನೆವಮಾಡಿ ಈ ರೀತಿ ಸುವ್ಯವಸ್ಥೆ ಮಾಡಿ ಆರ್ಥಿಕಲಾಭ ಪಡೆಯುತ್ತಿರುವದನ್ನು ನೋಡಿ ನಾವು ಕರ್ನಾಟಕದವರು ಸುಮ್ಮನೆ ಕೂಡುವದೊಂದು ನಮ್ಮ ಕರ್ನಾಟಕದವರ ಸಹನ ಶೀಲತೆಯ ದ್ಯೋತ ಕವೇ ಸರಿ! ಸರ್ಕಾರಕ್ಕೆ ಈ ರೀತಿ ಸ್ಥಳವನ್ನು ಬರಿದುಮಾಡಿ ಆರ್ಥಿಕ ಲಾಭ ಪಡೆಯುವದೇ ವಿಚಾರವಿದ್ದಲ್ಲಿ ಗಂಡಸರ ಒಂದು ಸ್ಥಳವನ್ನೇ ಕಡಿಮೆಮಾಡಿ, ಸ್ತ್ರೀ ಯರ ಹಿತದೃಷ್ಟಿಯಿಂದ ಈ ಸ್ಥಳವನ್ನು ಖಾಯಂ ಇಡುವದು ಅಗತ್ಯವಿತ್ತು. ಈಗಾಗಿರುವ ಹಾನಿಯನ್ನು ದೂರಮಾಡಲು ಕೂಗೆಬ್ಬಿಸುವದು ಹಾಗೂ ಅದರ

ಬಗ್ಗೆ ಚಳುವಳಿಮಾಡುವದು ನಮ್ಮೆಲ್ಲರ ಮೊದಲ ಕರ್ತವ್ಯ. ಅದರಲ್ಲೂ ಮಕ್ಕಳ ತಾಯ್ತಂದೆಯರ, ಪತ್ರಿಕಾ ಕರ್ತರ, ನಗರ ಪಾಲಕರ, ಶಾಲಾಶಿಕ್ಷಕಿಯರ ಹೆಚ್ಚಾಗಿ ಧಾರ್ಮಿಕ ನೀತಿವಂತರ ಬಿಟ್ಟೂಬಿಡದ ಕರ್ತವ್ಯ. ಈಗ ಕೇವಲ ನಮ್ಮ ಕರ್ನಾಟಕದ್ದಷ್ಟೇ ವಿಚಾರಮಾಡುವದಾದರೆ ಮೊದಲು ಬರಿದುಮಾಡಿದ 'ಅಸಿಸ್ಟಂಟ ಇನಸ್ಪೆಕ್ಟ್ರೆಸ್' ಸ್ಥಳಕ್ಕಾಗಿ ಬಡಿದಾಡಬೇಕು. ಮುಂದೆ ಇಡೀ ಶಿಕ್ಷಣ ಸಂಸ್ಥೆಯ ವಿಷಯದ ಬಗ್ಗೆ ವಿಚಾರಮಾಡುವದಾದರೆ, ಸಮಾನತೆಯ ಹಕ್ಕು ಪ್ರಸ್ಥಾಪಿತವಾಗಿದೆ ಯೆಂದು ತಿಳಿದರೆ ಈ ಶಿಕ್ಷಣಖಾತೆಯ ಜಿಲ್ಲಾಧಿಕಾರಿಯ ಸ್ಥಳದಲ್ಲಿ ಹೆಣ್ಣುಮಕ್ಕಳನ್ನೇ ನೇಮಿಸಿಕೊಳ್ಳುವದವಶ್ಯಕ. ಹೆಣ್ಮಕ್ಕಳು ಯಾವದೇ ರೀತಿಯಿಂದ ಬಾಕಿ ಪರಿಸ್ಥಿತಿಗಳ ಮೂಲಕ ಆ ಸ್ಥಳಕ್ಕೆ ಯೋಗ್ಯರಿಲ್ಲವೆಂದು ಕಂಡಲ್ಲಿ, ಪೂಜ್ಯ ಆಯೋಗ್ಯ ಮಂತ್ರಿವರ್ಯರಿಗೆ ಯೋಗ್ಯ ಆಪ್ತ ಕಾರ್ಯದರ್ಶಿಗಳನ್ನು ಕೊಡುವಂತೆ ಸ್ತ್ರೀ ಅಧಿಕಾರಿಗಳಿಗೂ ಸಹ ಒಬ್ಬ ಯೋಗ್ಯರಾದ ಆಪ್ತಕಾರ್ಯದರ್ಶಿ (ಗಂಡಸರು ?) ಗಳನ್ನು (Personal Assistant or private secretary) ಒದಗಿಸಿಕೊಟ್ಟು ಕೆಲಸ ಸಾಗಿಸಿಕೊಳ್ಳಬೇಕು. ಮನುಷ್ಯರು ಪರಿಸ್ಥಿತಿಗೆ ಹೊಂದಿಕೊಂಡು ಹೋಗುವದೇ ಸೃಷ್ಟಿನಿಯಮವಿರುವದರಿಂದ ಇಂದಲ್ಲ ನಾಳೆಯಾದರೂ ಹೆಣ್ಣುಮಕ್ಕಳ ಮೇಲೆ ಈ ಅಧಿಕಾರದ ಹೊಣೆ ಬಿದ್ದೊಡನೆ ಅವರು ತಾವಾಗಿ ಈ ಕೆಲಸಕ್ಕೆಯೋಗ್ಯರಾಗುವರು.

ಈಗ ಎಷ್ಟೋ ಪ್ರಸಿದ್ಧ ವ್ಯಕ್ತಿಗಳೂ, ದೊಡ್ಡ ದೊಡ್ಡ ಅಧಿಕಾರಿಗಳೂ ಸಹ ಸ್ತ್ರೀಯರು ಅಧಿಕಾರಿ ಸ್ಥಳಕ್ಕೆ ಇಷ್ಟೇ ಅಲ್ಲ ಯಾವದೇ ಒಂದು ನೌಕರಿಗೆ ಸಹಾ ಯೋಗ್ಯರಿಲ್ಲವೆಂಬ ಕೂಗನ್ನು ಎಬ್ಬಿಸಿರುವರಲ್ಲದೆ ಕೆಲವು ಪ್ರಾಂತಗಳಲ್ಲಿ ಸುವಾಸಿನಿಯರಿಗೆ ನೌಕರಿಕೊಡಬಾರದೆಂದೂ, ನರ್ಸಿಂಗ್ ಮುಂತಾದ್ದನ್ನು ಕಲಿಯಲಿಚ್ಛಿಸುವವರಿಗೆ ಸಹಾ ಶಿಷ್ಯವೃತ್ತಿಯನ್ನು ಕೊಡಬಾರದೆಂದೂ ಠರಾವು ಪಾಸಮಾಡಿದ್ದಾರೆ. ಈ ರೀತಿ ಹೆಣ್ಣುಮಕ್ಕಳು ನೌಕರಿಗೆ ಅಯೋಗ್ಯರಾಗಲು ಕಾರಣವೆಂದರೆ, ಸ್ವತಃ ಅವರ ಅಜ್ಞಾನ ಹಾಗೂ ಗಂಡಸರ ಕೃತ್ರಿಮವಿಲಾಸಿ ಜೀವನ. ಇದರಲ್ಲಿ ಹೆಣ್ಣು ಮಕ್ಕಳನ್ನು ಅಲ್ಲಗಳೆಯುವದಕ್ಕಿಂತ ಗಂಡಸರು ತಮ್ಮ ಗೃಹಜೀವನದಲ್ಲಿ ತಿದ್ದಿ ನಡೆಯುವದು ಹಿತಕರ ! —ಇತಿ ಕುಬುದ್ಧಿ.

## ಸಾದರ ಸ್ವೀಕಾರ

(೧) **ಯುವಕ ಕಲಾವೃಂದ** ಬೆಳಗಾವಿ, ವಾರ್ಷಿಕ ವರದಿ.

(೨) **ಜಗತ್‌ಪ್ರವಾಸಿ.** ಕನ್ನಡ ತ್ರೈಮಾಸ ಪತ್ರಿಕೆ. ಸಂ— **ಆರ್. ಎ. ಜಹಗೀರದಾರ.** (ನಾಗರಹಳ್ಳಿ ಧಡಲ್ ವಾರ್ಷಿಕ ಚಂದಾ ೧-೮-೦)

(೩) **ತರಂಗ.** ಕನ್ನಡ ಚಲಚಿತ್ರ ಮಾಸಪತ್ರಿಕೆ ಗದಗ. ಸಂ—**ಎಂ. ಜೀವನ** ಬಿಡಿ ಸಂಚಿಕೆ ೩ ಆಣೆ.

(೪) **ಸಮಾಜ ವಿಕಾಸ.** ಕನ್ನಡ ಮಾಸಪತ್ರಿಕೆ. ಸಂ— **ಭಿ.ಕೃ.ನಾಡಕರ್ಣಿ** ವಾ. ಚಂ. ೩ ರೂ.

(೫) **ಪ್ರಕಾಶ.** ಬೆಳಗಾಂವ. ಸಂ—**ಆರ್. ಕೇ. ಮೆಣಸಿ** ವಾ. ಚಂ.೩ ರೂ.



## ಶ್ರೀ ತಿಮ್ಮಮ್ಮನವರ ಚರಿತ್ರೆಯು

ಲೇ:— ಶ್ರೀ. ನಾ. ಶ್ರೀ. ರಾಜಪುರೋಹಿತ

ಇತಿಹಾಸ ಸಂಶೋಧಕರು ಧಾರವಾಡ.

ತುರಡಗಿಗ್ರಾಮದ ತಪೋಧನರಾದ ಜ್ಯೋತಿ ಶ್ರೀ. ನರಸಿಂಹಾಚಾರ್ಯ ಹಾಗೂ ಸಾಧ್ವೀ ಶಿರೋಮಣಿ ಶ್ರೀ. ಚಂದ್ರಲಾದೇವಿ ಎಂಬ ಸತ್ವಶಾಲಿಗಳಾದ ದಂಪತಿಗಳ ಮಗಳೇ ನಮ್ಮ ಕಥಾನಾಯಕಿಯಾದ ಸಾಧ್ವೀಮಣಿ ಶ್ರೀ. ತಿಮ್ಮಮ್ಮ ನವರು ಪ್ರಾಚೀನ ಸಂಪ್ರದಾಯದ ಪ್ರಕಾರ ಇವರ ಎಂಟನೆಯ ವರ್ಷದಲ್ಲೇ ಮುದ್ದಲಗುಂದಿ ಶ್ರೀ ವೆಂಕಟನರಸಿಂಹ ನಾಯಕರ ಮಗ ಅಶ್ವತ್ಥ ಎಂಬವರನೊಡನೆ ಇವರ ಲಗ್ನವಾಗಿ, ಮುಂದೆ ಇವರು ಅತ್ತೆಯ ಮನೆಗೆ ಹೋಗಿ ಎರಡು ವರ್ಷ ಗಳಲ್ಲೇ ದೈವವಶಾತ್ ತಿಮ್ಮಮ್ಮನವರಿಗೆ ವೈಧವ್ಯವು ಪ್ರಾಪ್ತವಾಯ್ತು. ಆದರೆ ಬಾಲ್ಯದಿಂದಲೂ ಉಜ್ವಲ ಮನೋವೃತ್ತಿಯುಳ್ಳ ಇವರು ತಮ್ಮ ಮುಂದಿನ ಆಯುಷ್ಯವನ್ನೆಲ್ಲಾ ವೆಂಕಟಾಚಲಪತಿಯ ಧ್ಯಾನ್ಥದಲ್ಲಿಯೇ ಸಮರ್ಪಿಸುವ ದೃಢ ನಿಶ್ಚಯಮಾಡಿದರು. ತಮ್ಮ ಮನೆತನದ ದೇವರ ದರ್ಶನಕ್ಕೆಂದು ಪ್ರತಿವರ್ಷ ಕೊಪ್ಪರಕ್ಷೇತ್ರಕ್ಕೆ ನರಸಿಂಹ ಜಯಂತಿಯ ನಿಮಿತ್ತ ತನ್ನ ಅತ್ತೆಮಾವಂದಿರೊಡನೆ ಹೋಗಿಬರುತ್ತಿದ್ದರು. ದೇವದುರ್ಗದಲ್ಲಿ ಪರಮಪೂಜ್ಯರಾದ ಕಾಣ್ವಶಾಖೆಯ ಶ್ರೀ ಗಿರಿಯಪ್ಪನವರ ದರ್ಶನವಾದಂದಿನಿಂದ ಅವರ ಸೇವಾಕಾರ್ಯದಲ್ಲಿ ತತ್ಪರ ರಾಗಲು ತಿಮ್ಮಮ್ಮನವರ ಮನಸ್ಸು ನಿಶ್ಚಯಿಸಿತು. ಇದಕ್ಕೆ ಅತ್ತೆಮಾವಂದಿರ ಅಪ್ಪಣೆ ದೊರೆತದ್ದರಿಂದ ತಿಮ್ಮಮ್ಮನವರು ಅವರ ಸೇವೆಗೆ ನಿಂತು ಅವರ ಪರಮ ತೇಜಸ್ವಿನೀ ಶಿಷ್ಯರಾದರು.

ಈ ಸಂದರ್ಭದಲ್ಲಿ ಈ ದೇವದುರ್ಗದ ಶ್ರೀ ಗಿರಿಯಪ್ಪಯ್ಯನವರ ಮನೆತನದ ವಂಶವೃಕ್ಷವನ್ನು ಇಂದಿನ ಮಿತಿಯವರೆಗೆ ವಾಚಕರ ಮುಂದೆಇಟ್ಟು, ಈ ಪೂಜ್ಯಮನೆತನದ ಮಾಹಾತ್ಮ್ಯವನ್ನು ಸ್ವಲ್ಪ ಮಟ್ಟಿಗೆ ನಿವೇದಿಸಿ, ಶ್ರೀ ತಿಮ್ಮಮ್ಮನವರ ಚರಿತ್ರೆಯ ಕಡೆಗೆ ಸಾಗುವಾ ;




ಈ ಪೂಜ್ಯಮನೆತನದ ಮೂಲ ಪುರುಷರಾದ ಶ್ರೀ ಗಿರಿಯಪ್ಪಯ್ಯನವರು ದೇವರು ಶ್ರೀ ಮೋತಂಪಲ್ಲಿ ಕ್ಷೇತ್ರದಲ್ಲಿ (ಜಿಲ್ಹಾ:– ಕಲಬುರ್ಗಿ) ಇರುವ ಶ್ರೀ ಮುಖ್ಯ ಪ್ರಾಣದೇವಾಲಯದಲ್ಲಿ ತಪಸ್ಸನ್ನು ಮಾಡಿ, ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆದ ಸಿದ್ಧಪುರುಷರು. ಈ ಪುಣ್ಯಶ್ಲೋಕರು ಪ್ರತಿವರ್ಷ ಶ್ರೀ ಮೋತಂಪಲ್ಲಿ ಕ್ಷೇತ್ರಕ್ಕೂ ಶ್ರೀವೆಂಕಟರಮಣಗಿರಿ ಕ್ಷೇತ್ರಕ್ಕೂ ಅವಿಚ್ಛಿನ್ನವಾಗಿ ಹೋಗಿ, ಯಾತ್ರಾಕಾರ್ಯವನ್ನು ಯಥಾವಿಧಿಯಾಗಿ ನೆರವೇರಿಸಿಕೊಂಡು ಬರುತ್ತಿದ್ದರಲ್ಲದೆ ಆಯಾ ಕ್ಷೇತ್ರದಲ್ಲಿ ನೆರೆದ ಜನರಿಗೆ ಜ್ಞಾನೋಪದೇಶವನ್ನು ಮಾಡಿ, ಅವರಲ್ಲಿ ದೈವಿಕ ಜೀವನವು ಜಾಗೃತವಾಗುವಂತೆ ಮಾಡುತ್ತಿದ್ದರು. ಈ ಪರಮ ಪುಣ್ಯಪ್ರದವಾದ ಶ್ರೇಷ್ಠಪರಂಪರೆಯು ಇಂದಿನ ಮಿತಿಯವರೆಗೆ ಪೂಜ್ಯ ಶ್ರೀ ವೆಂಕಟವರಾಹಪ್ಪಯ್ಯನವರು ೨ ದೇವರು ಇವರ ತನಕ ಅನುಸ್ಯೂತವಾಗಿ ನಡೆದುಬಂದಿದೆ.

ಭಗವದ್ಭಕ್ತಳಾದ ಶ್ರೀ ತಿಮ್ಮಮ್ಮನು, ಮೂಲಪುರುಷರಾದ ಶ್ರೀ ಗಿರಿಯಪ್ಪಯ್ಯನವರು ದೇವರು ಇವರ ಕೃಪೆಗೆಪಾತ್ರಳಾಗಿ, ಈ ಪುಣ್ಯಶ್ಲೋಕರ ಶಿಷ್ಯತ್ವವನ್ನು ವಹಿಸಿ, ೨೦ ವರ್ಷಗಳವರೆಗೆ ದೇವದುರ್ಗದಲ್ಲಿ ಇವರ ಸನ್ನಿಧಾನದಲ್ಲಿಯೇ ಇದ್ದಳು. ಈ ಮಹನೀಯರಾದ ಶ್ರೀ ಗಿರಿಯಪ್ಪಯ್ಯನವರು ಪ್ರತಿವರ್ಷ ವೆಂಕಟರಮಣಗಿರಿ ಯಾತ್ರೆಗೂ ಮತ್ತು ಮೋಂತಪಲ್ಲಿ ಶ್ರೀ ಮುಖ್ಯಪ್ರಾಣದೇವರ ದರ್ಶನಕ್ಕೂ ಈ ತಿಮ್ಮನನ್ನು ಸಂಗಡ ಕರೆದುಕೊಂಡು ಹೋಗುತ್ತಿದ್ದರು. ಹೀಗೆ ೨೦ ವರ್ಷಗಳವರೆಗೆ ಅಖಂಡವಾಗಿ ತಿಮ್ಮಮ್ಮನು ಈ ದೇವದುರ್ಗದ ಸತ್ಪುರುಷರ ನೇತೃತ್ವದಲ್ಲಿ ತೀರ್ಥಯಾತ್ರೆಗಳನ್ನು ಮಾಡಿದ್ದಲ್ಲದೆ ವೆಂಕಟರಮಣಗಿರಿ ಮುಂತಾದ ಕ್ಷೇತ್ರಗಳಲ್ಲಿ ಪುರಾಣ ಪುಣ್ಯಕಥೆಗಳನ್ನೂ ಸಾಧು ಸತ್ಪುರುಷರ ಮುಖದಿಂದ ವೇದಾಂತ ವಿಷಯಕ ಪ್ರವಚನಗಳನ್ನೂ ಕೇಳಿ, ಬಹು ಶ್ರುತಳಾದಳು! ಕಿಂಬಹುನಾ ಮಹಾಜ್ಞಾನಿಯಾದಳು!!



## ೪ ನೆಯ ಅಧ್ಯಾಯ

# ಸ್ವತಂತ್ರ ಆಧ್ಯಾತ್ಮಿಕ ಜೀವನ

ಶ್ರೀ ತಿಮ್ಮಮ್ಮನವರು ೨೦ ವರ್ಷಗಳವರೆಗೆ ದೇವದುರ್ಗದ ಸತ್ಪುರುಷರಾದ ಶ್ರೀ ಗಿರಿಯಪ್ಪಯ್ಯನವರ ಸನ್ನಿಧಿಯಲ್ಲಿ ಶಿಷ್ಯತ್ವವನ್ನು ವಹಿಸಿಕೊಂಡಿದ್ದು, ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಸಂಪಾದಿಸಿ, ಬ್ರಾಹ್ಮೀಸ್ಥಿತಿಯನ್ನು ಪಡೆದರು. ಆ ಬಳಿಕ ಒಂದು ದಿವಸ ಗುರುಗಳಸನ್ನಿಧಿಯಲ್ಲಿ ಈ ಮಹನೀಯಳು ವಿನಯಪೂರ್ವಕವಾಗಿ ಅರಿಕೆಮಾಡಿಕೊಂಡದ್ದೇನೆಂದರೆ, " ತಾವು ಇಂದಿನವರೆಗೆ,೨೦ ವರ್ಷಗಳತನಕ ಪಿಪೀಲೀಕಾ ಮಾರ್ಗದಿಂದ ನನಗೆ ಕ್ರಮಕ್ರಮೇಣ ಜ್ಞಾನೋಪದೇಶ ಮಾಡುತ್ತ ಮಾಡುತ್ತ, ನನ್ನನ್ನು ವಿಹಂಗಮ ಮಾರ್ಗಕ್ಕೆ ತಂದು ಮುಟ್ಟಿಸಿದ್ದೀರಿ. ಪಿಪೀಲಿಕಾ ಮಾರ್ಗವು ಕ್ರಮಮುಕ್ತಿಪ್ರದವಾಗಿದೆ; ವಿಹಂಗಮ ಮಾರ್ಗವು ಸದ್ಯೋಮುಕ್ತಿಪ್ರದವಾಗಿದೆ ತಾವು ನನಗೆ ಈರೀತಿಯಿಂದ ಅನಂತ ಉಪಕಾರವನ್ನು ಮಾಡಿರುತ್ತೀರಿ. ತಮ್ಮ ಜ್ಞಾನೋಪದೇಶದಿಂದ ನಾನು ಧನ್ಯಳಾದೆನು. ಇನ್ನುಮೇಲೆ ನಮ್ಮ 'ಕರಡಕಲ್ಲ ನಾಡಿಗೆ' ಹೋಗಿ,[೧] ಪ್ರಾಯಶಃ ಹೂನೂರುಗ್ರಾಮದಲ್ಲಿ ವಾಸಮಾಡಿ, ತಾವು ಹೇಳಿದ

(೧) 'ಕರಡಕಲ್ಲ ೩೦೦ ನಾಡು' ಇತ್ತೆಂಬುದು ಲಿಂಗಸುಗೂರು ಗ್ರಾಮದಲ್ಲಿಯ ಶಿಲಾಲೇಖದಿಂದ ಸ್ಪಷ್ಟವಾಗಿ ಸಿದ್ಧವಾಗಿದೆ. ಈ ಕರಡಕಲ್ಲ ನಾಡಿನಲ್ಲಿ ೩೦೦ ಗ್ರಾಮಗಳಿದ್ದವೆಂದು ಈ ಶಿಲಾಶಾಸನವು ಗರ್ಜಿಸಿ ಹೇಳುತ್ತದೆ. ಈ ನಾಡಿನಲ್ಲಿ ಲಿಂಗಸುಗೂರು, ಕರಡಕಲ್ಲ (ಈ ನಾಡಿನ ರಾಜಧಾನಿ), ಹೂಸೂರು, ತುರಡಗಿ, ವಂದಾಲಿ, ಮುದ್ದಲಗುಂದಿ ಮುಂತಾದ ಗ್ರಾಮಗಳೆಲ್ಲವೂ ಸೇರಿದ್ದವು. ಶ್ರೀ ತಿಮಮ್ಮನವರ ಕಾಲದಲ್ಲಿ ಈ ನಾಡಿಗೆ ಈ ಹೆಸರೇ ಪ್ರಸಿದ್ಧವಾಗಿತ್ತು.

ಉಪದೇಶಾಮೃತವನ್ನು ಆ ನಾಡಿನಲ್ಲಿ ಬಿತ್ತರಿಸಬೇಕೆಂದು ಮಾಡಿದ್ದೇನೆ. ಅಪ್ಪಣೆಯಾಗಬೇಕು; ಎಂದು ಬಿನ್ನವಿಸಿದಳು. ಇದಕ್ಕೆ ಆ ಸತ್ಪುರುಷರು ಹಾಗೆಯೇ ಆಗಲಿ ಎಂದು ಆಜ್ಞೆಯನ್ನು ಮಾಡಿದರು.

ಆ ಬಳಿಕ ಮಹಾ ಸಾಧ್ವಿ ಶಿರೋಮಣಿಯಾದ ಶ್ರೀ ತಿಮ್ಮಮ್ಮನವರು ಪ್ರಸನ್ನ ಚಿತ್ತದಿಂದ ಹೊನ್ನೂರಿಗೆ ಹೋಗಿ, ಅಲ್ಲಿಯ ಹಳ್ಳದ ದಂಡೆಯಮೇಲಿರುವ ನಿಸರ್ಗ ಮನೋಹರವಾದ ಶ್ರೀ ಮಾರುತಿ ದೇವಾಲಯವನ್ನು ತಮ್ಮ ಆಶ್ರಮಸ್ಥಾನವನ್ನಾಗಿ ಮಾಡಿಕೊಂಡು ಅಲ್ಲಿ ಇರಲಾರಂಭಿಸಿದರು. ಈ ಕಾಲವೆಂದರೆ ಶಕವರ್ಷದ ೧೭೯೦ (ಕ್ರಿಸ್ತವರ್ಷದ ೧೮೬೮). ಈ ಸಮಯಕ್ಕೆ ಶ್ರೀ ತಿಮ್ಮಮ್ಮನವರಿಗೆ ೪೦ ವರ್ಷ ವಯಸ್ಸಾಗಿದ್ದಿತು. ಈ ಕಾಲದಿಂದ ಈ ಸಾಧ್ವಿಯು ನಿಸರ್ಗರಮಣೀಯವಾದ ಈ ಆಶ್ರಮದಲ್ಲಿ ಸ್ವತಂತ್ರರೀತಿಯಿಂದ ತಪಸ್ಸನ್ನಾರಂಭಿಸಿದಳು.

ಜಗದ್ವಿಖ್ಯಾತ ಮೋಕ್ಷಶಾಸ್ತ್ರ ವಿಶಾರದರಾದ ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಎಮ್. ಎ. ಪಿ. ಎಚ್. ಡಿ. ಇವರು ತಾವು ಬರೆದ ಬುದ್ಧದೇವನ ಚರಿತ್ರದಲ್ಲಿ ತಪೋವನದ ಮಹತ್ವವನ್ನು ಬಹು ಸಮಂಜಸವಾಗಿ ಹೀಗೆ ವಿವೇಚಿಸಿದ್ದಾರೆ:—

“ಬುದ್ಧದೇವನು ೫ ಜನ ಶಿಷ್ಯರೊಡನೆ ‘ಉರುವೇಲಾ’ ಎಂಬ ಬಹು ರಮಣೀಯವಾದ ಸ್ಥಾನಕ್ಕೆ ಹೋದನು. ಅದು ಸುಂದರವಾದ ತಪೋವನವಾಗಿದ್ದಿತು. ಭಾರತೀಯರಲ್ಲಿ ಒಂದು ಸರ್ವಸಾಮಾನ್ಯವಾದ ತಿಳಿವಳಿಕೆಯೇನೆಂದರೆ, ಯಾರಿಗೆ ಪವಿತ್ರವಾದ ಧರ್ಮಮಯ ಜೀವನವನ್ನು ಆಚರಿಸುವುದಿದೆಯೋ, ಅವರು ನಿಸರ್ಗಸುಂದರ ಸ್ಥಾನದಲ್ಲಿ ಇರಬೇಕು. ಪ್ರಶಾಂತವಾದ ಹಾಗೂ ಮನೋಹರವಾದ ಇಂಥ ನಿಸರ್ಗಸುಂದರ ಸ್ಥಾನದಲ್ಲಿ ಪವಿತ್ರ ಧರ್ಮಮಯಜೀವನವನ್ನು ಆಚರಿಸುವುದು ಸುಕರವಾಗಿರುತ್ತದೆ. ಭಾರತದಲ್ಲಿಯ ಧಾರ್ಮಿಕ ಮಠಗಳೂ, ಮಂದಿರಗಳೂ ದೇವಾಲಯಗಳೂ ಹಾಗೂ ಆಶ್ರಮಗಳೂ ಪ್ರಾಯಶಃ ನದಿಯ ತೀರದಲ್ಲಿ ಅಥವಾ ಪರ್ವತದ ಶಿಖರದಮೇಲೆ ಇರುತ್ತವೆ. ಧಾರ್ಮಿಕಶ್ರದ್ಧೆಯೂ, ಪಾವಿತ್ರ್ಯವೂ ಉಂಟಾಗುವುದಕ್ಕೋಸ್ಕರ ವಾತಾವರಣವು ಅನುಕೂಲವಾಗಿರಬೇಕಾಗಿರುತ್ತದೆ. ಆದುದರಿಂದ ಸುತ್ತಮುತ್ತಲೂ ನಿಸರ್ಗರಮಣೀಯತೆಯು ಇರಬೇಕಾಗುವುದು. ಈ ಸಂಗತಿಯನ್ನು ಭಾರತೀಯರು ಮರೆತಿರುವುದಿಲ್ಲ.”

ಹೊನ್ನೂರು ಗ್ರಾಮದ ಶ್ರೀ ಮಾರುತಿದೇವಾಲಯವು[೧] ಹಳ್ಳದ ದಂಡೆಯ ಮೇಲೆ ನಿಸರ್ಗರಮಣೀಯವಾದ ಸ್ಥಾನದಲ್ಲಿಯೇ ಇದ್ದುದರಿಂದ ಶ್ರೀ ತಿಮ್ಮಮ್ಮ

(೧) ಈ ಮಾರುತಿ ದೇವಾಲಯದ ಪರಿಸರದಲ್ಲಿ ಮನೆಗಳೇ ಇದ್ದಿರಲಿಲ್ಲ. ಕೇವಲ ಬಯಲುಪ್ರದೇಶವೇ ಇದ್ದು, ಅದರಲ್ಲಿಯೂ ಹಳ್ಳದ ದಂಡೆಗೆ ಇದ್ದ ದೊಡ್ಡದೊಡ್ಡ ವೃಕ್ಷಗಳಿಂದ ನಿಸರ್ಗಸೌಂದರ್ಯವು ಬಹುನಯನಮನೋಹರವಾಗಿ ಇದ್ದಿತು. ೨೦-೩೦ ವರ್ಷಗಳಿಂದ ಇತ್ತೀಚೆಗೆ ಈ ಮಾರುತಿದೇವಾಲಯದ ಮುಂದೆ ೮-೧೦ ಮನೆಗಳು ಕಟ್ಟಲ್ಪಟ್ಟವೆ.

ನವರು ಈ ದೇವಸ್ಥಾನವನ್ನು ತಮ್ಮ ಆಶ್ರಮಸ್ಥಾನವನ್ನಾಗಿ ಏರ್ಪಡಿಸಿಕೊಂಡರು. ಮಹಾ ಸಾಧ್ವಿ ಶಿರೋಮಣಿಯಾದ ಶ್ರೀ ತಿಮ್ಮಮ್ಮನವರು ಈ ಹೂನೂರ ಆಶ್ರಮ ದಲ್ಲಿ ಸ್ವತಂತ್ರ ರೀತಿಯಿಂದ ತಪಸ್ಸನ್ನಾರಂಭಿಸಿದಕೂಡಲೇ ಮೊಟ್ಟಮೊದಲು ಕಂದ ಗಲ್, ಶಿರಗುಪ್ಪಿ ಗ್ರಾಮಗಳ ಜೋಯಿಸರ ಮನೆತನದ ಕೌಶಿಕಗೋತ್ರದ ಕಾಣ್ವ ಶಾಖೆಯ ವೈದಿಕ ಬ್ರಾಹ್ಮಣನಾದ ವೇದಮೂರ್ತಿ ಅಕ್ಷತೆ ಹನುಮಪ್ಪನೆಂಬವನು ಈ ತಪಸ್ವಿನಿಯ ತೇಜಸ್ಸಯನ್ನು ಕಂಡು ಬೆರಗಾಗಿ, ಭಯ, ಭಕ್ತಿಗಳಿಂದ ಈ ಸಾಧ್ವಿಯ ಶಿಷ್ಯತ್ವವನ್ನು ವಹಿಸಿದನು. ಈತನು ಸಾತ್ವಿಕನೂ, ತನಗೆ ಗೊತ್ತುಮಾಡಿಕೊಟ್ಟ ದೇವರ ಪೂಜಾ, ಧೂಪ, ದೀಪ, ನೈವೇದ್ಯ ಇತ್ಯಾದಿಗಳನ್ನು ದಕ್ಷತೆಯಿಂದ ಮಾಡು ವವನೂ ಆಗಿದ್ದನು. ಈತನು ತ್ರಿಕಾಲ ಸ್ನಾನಗಳನ್ನು ಮಾಡಿ, ತ್ರಿಕಾಲ ಸಂಧ್ಯಾ, ಅರ್ಘ್ಯಪ್ರದಾನ, ಸೂರ್ಯನಮಸ್ಕಾರ, ಮುಂತಾದ ಆಹ್ನಿಕಗಳನ್ನು ಪ್ರತಿದಿವಸ ಯಥಾವಿಧಿಯಾಗಿ ನಿಷ್ಠೆಯಿಂದ ಪಾಲಿಸುತ್ತಿದ್ದನು. ಲಿಂಬೆಹಣ್ಣಿನಷ್ಟು ದೊಡ್ಡದಾದ ಅಕ್ಷತೆಯನ್ನು ತನ್ನಹಣೆಯಮೇಲೆ ಹಚ್ಚಿಕೊಳ್ಳುತ್ತಿದ್ದುದರಿಂದ ಈತನನ್ನು "ಅಕ್ಷತೆ ಹನುಮಪ್ಪ" ಎಂದು ಜನರೆಲ್ಲರೂ ಕರೆಯುತ್ತಿದ್ದರು.

ಶ್ರೀ ಅಮ್ಮನವರು ಪ್ರತಿದಿವಸ ಶ್ರೀ ಮುಖ್ಯಪ್ರಾಣದೇವರ ಚಿಕ್ಕಶಿಲಾ ಪ್ರತಿಮೆ(೨)ಯನ್ನು ಪೂಜಿಸುತ್ತಿದ್ದರು. ಶಿಷ್ಯನಾದ ವೇ|| ಅಕ್ಷತೆ ಹನುಮಪ್ಪನು ಅರ್ಥಾತ್ ಹನುಮಂತಾಚಾರ್ಯನು ಪ್ರತಿದಿವಸ ನರಸಿಂಹಶಾಲಗ್ರಾಮವನ್ನೂ ಶ್ರೀದೇವಿ, ಭೂದೇವಿ ಸಹಿತ ಶ್ರೀ ವೆಂಕಟೇಶವಿಗ್ರಹವನ್ನೂ ಪೂಜಿಸಿ, ಧೂಪ, ದೀಪ, ನೈವೇದ್ಯ, ವೈಶ್ವದೇವಮಾಡಿ, ಶ್ರೀ ಅತಿಥಿ, ಅಭ್ಯಾಗತರಿಗೂ ಹಾಗೂ ಶ್ರೀ ಅಮ್ಮನವರಿಗೂ ತೀರ್ಥವನ್ನು ಕೊಡುತ್ತಿದ್ದನು. ಶ್ರೀ ಅಮ್ಮನವರು ಸನಾತನ ವೈದಿಕಧರ್ಮಾನುಸಾರವಾಗಿ ಗೋಬ್ರಾಹ್ಮಣರ ರಕ್ಷಣೆಯೇ ತಮ್ಮ ಪವಿತ್ರ ಕರ್ತವ ವೆಂದು ತಿಳಿದು, ಅದನ್ನು ತಪ್ಪದೆ ಪರಿಪಾಲಿಸುತ್ತಿದ್ದರು. ಆದ್ದರಿಂದ ಹೂನೂರು ಗ್ರಾಮದ ಈ ಆಶ್ರಮದ ಬಳಿಯಲ್ಲಿ ಆಕಳುಗಳು ಸಂರಕ್ಷಿಸಲ್ಪಡುವಂತೆ ಇಲ್ಲಿ ಒಂದು ಗೋಶಾಲೆಯೂ ನಿರ್ಮಾಣವಾಯಿತು. ಶ್ರೀ ಅಮ್ಮನವರ ದರ್ಶನಮಾಡಿಕೊಂಡು, ಅವರಿಂದ ಉಪದೇಶವನ್ನೂ ಆಶೀರ್ವಾದವನ್ನೂ ಪಡೆಯಬೇಕೆಂದು ನಾಲ್ಕೂವರ್ಣ ಗಳ ಸದ್ಗೃಹಿಣಿಯರು, ಸದ್ಗೃಹಸ್ಥರು ದಿನಾಲು ಈ ಆಶ್ರಮಕ್ಕೆ ಬರುತ್ತಿದ್ದರು. ಶ್ರೀ ಅಮ್ಮನವರ ಆಶ್ರಿತವರ್ಗಕ್ಕೆ ಅಥವಾ ಅಥಿತಿ ಅಭ್ಯಾಗತರಿಗೆ ಎಂಥ ಪ್ರಸಂಗ ದಲ್ಲಿಯೂ ಯಥಾ ವಿಭವಾನುಸಾರ ಮಾಡುವ ಆದರಾತಿಥ್ಯಕ್ಕೆ ಲವಲೇಶವಾದರೂ ಕೊರತೆಯಾಗಲಿಲ್ಲ. ಈ ಆಶ್ರಮದಲ್ಲಿ ಅನ್ನದಾನವು ಮುಕ್ತದ್ವಾರವಾಗಿತ್ತು. ಈ

(೨) ಶ್ರೀ ಸಾಧ್ವಿ ತಿಮ್ಮಮ್ಮನವರ ಕರಾರ್ಚಿತವಾದ ಶ್ರೀ ಮುಖ್ಯಪ್ರಾಣ ದೇವರ ಚಿಕ್ಕ ಶಿಲಾಪ್ರತಿಮೆಯು ಈಗ ಸಾಧ್ವಿಯ ವೃಂದಾವನದ ಉತ್ತರ ದಿಕ್ಕಿನ ಭಿತ್ತಿಯಲ್ಲಿ ಸ್ಥಾಪಿತ ವಾಗಿರುತ್ತದೆ.

**ಶ್ರೀಧರಲಾಲ:—** [ ಮೋರೆಯನ್ನು ಗಂಟಿಕ್ಕಿ] ಇದೇನು? ಇದು ನಮ್ಮ ಬೆನ್ನು ಹತ್ತಿರುವುದು. ನಮ್ಮ ಸಂತೋಷಕ್ಕೆ ಅಪಶಕುನವು.

**ರತಿಲಾಲ:—** ಆಯಿತು; ಈ ಹೊತ್ತಿನ ಕೆಲಸವೇನೋ ಮುಗಿದಂತಾಯಿತು. ನಾನು ಹೋಗಿ ಬರುತ್ತೇನೆ.

[ ರತಿಲಾಲ ಹೊರಡುವನು. ಅವರನ್ನು ಬಿಡಲಿಕ್ಕೆಂದು ಶ್ರೀಧರಲಾಲರು ಹೋಗುವರು. ]

[ಭಾಗ್ಯವತಿ ಮತ್ತು ನಳ, ರಾಮಕ್ಕನನ್ನು ಹಿಡಿದು ತರುವರು. ಕೆಳಗೆ ಮಲಗಿಸಿ ಗಾಳಿ ಬೀಸುವರು. ನೀರು ಕುಡಿಸುವರು. ರಾಮಕ್ಕನಿಗೆ ಸ್ವಲ್ಪ ಎಚ್ಚರವಾಗುವುದು.

**ಭಾಗ್ಯವತಿ:—** ರಾಮಕ್ಕಾ ! ನಿನಗೇನಾಯಿತು ? ಹೀಗೇಕೆ ಬಿದ್ದೆ ?

**ರಾಮಕ್ಕಾ:—** ಅವ್ವಾ ! ನಾನೇನು ಹೇಳ್ಲಿ ! ನಾನು ಅಡದು ಇನ್ನೂ ಮೂರುವಾರಾನು ಆಗೈತೋ ಇಲ್ಲೋ—ವೈಯ್ಯಾಗ ಸಗತಿಲ್ಲ. ವ್ಯಾಲೆ ಎರಡು ದಿವಸ ದಿಂದ ಬಾನಿಲ್ಲವ್ವಾ.

**ಭಾಗ್ಯವತಿ:—** ಅಯ್ಯೋ ಪಾಪ ! ಇದನ್ನು ನೋಡುವುದು, ಕೇಳುವುದು ನನ್ನಿಂದಾಗದು.

[ ನಳನನ್ನು ಉದ್ದೇಶಿಸಿ ]

**ಭಾಗ್ಯವತಿ:—** ನಾನು ಮುಂದೆ ಹೋಗಿ ಅವಳ ತಿಂಡಿಯ ವ್ಯವಸ್ಥೆಯನ್ನು ಮಾಡುತ್ತೇನೆ. ನೀನು ನಿಧಾನವಾಗಿ ಅವಳನ್ನು ಕರೆದುಕೊಂಡು ಬಾ [ಹೋಗುತ ಸ್ವಗತ ] ಶ್ರೀಮಂತ ಮತ್ತು ಸೋಮಾರಿ ಜನರ ಹೊಟ್ಟೆ ಆ ಕಂಠ ತುಂಬಿದವರ ಟೀ ಪಾರ್ಟಿ—ಪ್ರಸ್ತ—ಪ್ರಯೋಜನ—ಇದೊಂದು ಚಿತ್ರ ! ಅದೇ ಮನೆಯಲ್ಲಿ ಅದೇ ಸ್ಥಳದಲ್ಲಿ ಹೊಟ್ಟೆಯ ಬೆಂಕಿಯ ತಾಪವನ್ನು ಸಹನಮಾಡುತ್ತ ಮಯ್ಯಾರೆ ದುಡಿ ಯುವ ಇನ್ನೊಂದು ಚಿತ್ರ !! ಭಗವಂತಾ ! ಇದೇ ಏನು ನಿನ್ನ ಇನ್ಸಾಫ್ [ ಹೋಗುವಳು ]

**ರಾಮಕ್ಕ:—** ಸ್ವಾಮ್ಯಾರ ! ಬಡವರ ಮ್ಯಾಲಽ ಇಷ್ಟೇಕೆ ಸಿಟ್ಟು ನಿಮಗಽ ! ಮುಸಿರ್ಯಾಗ ಒಂದು ಅಗಳು ಅನ್ನಾ ಬಿಡದಾಂಗ ?

**ನಳ:—** ತುತ್ತು ಅನ್ನಾ ಅಂದ್ರ ನಿಮ್ಮಪ್ಪನ ಮನೆ ಗಂಟೇನು ? ಮಾತಾಡಿದ ಕೆಲಸ, ಮಾತಾಡಿದ ಸಂಬಳ ಮುಗಿತು. ಮಾತನಾಡದ ಕೆಲಸಾನ ಮಾಡಿದ್ರ ತುತ್ಯಾಕ ಎರಡು ತುತ್ತು ಅನ್ನಾ ಸಿಗತೈತಿ..

**ರಾಮಕ್ಕ:—** ನಾನೇನು ಕೆಲ್ಸ ಕಡಿಮೆ ಮಾಡ್ತೇನಿ ಸ್ವಾಮಿ ?

**ನಳ:—** ನಿನ್ನ ಒಣ ಕೆಲಸಾ ಯಾರ ಕೇಳ್ತಾರ ? ಸ್ವಾಮ್ಯಾರ್ ದಾಗಲಿ ನಂದಾಗಲಿ ಹಾಸಿಗಿ ಹಾಸೋದು, ಕಾಲ ಒತ್ತೋದು, ನನಗಽ ಎಲೀ ಅಡಕಿ ಕೊಡೋದು ಇಂಥವೆಲ್ಲಾ ಮಾತನಾಡದ ಕೆಲ್ಸ ಮಾಡಿದ್ರ ತುತ್ತು ಯಾಕೆ ಎರಡು ತುತ್ತು ಅನ್ನಾ ಸಿಗತೈತಿ; ನಿನ್ನ ಸಂಬಳ ಕೈಯಾಗ ಖರ್ಚೀಗೆ ಉಳಿತೈತಿ.

**ರಾಮಕ್ಕ:—** ಥೂ [ ಸ್ವಲ್ಪ ಸಿಟ್ಟಿನಿಂದ ] ಇಂಥಾ ಹಾಳು ವ್ಹಾರೇವು ನನಗೆ ಹೇಳಬ್ಯಾಡ್ರಿ. ಗಂಡಗೆ ಮಾಡುವ ಕೆಲಸ ಮತ್ಯಾರಿಗೂ ಮಾಡಾಕಿಲ್ಲ.

**ನಳ:—** ಈ ದಗದಾ ಮಾಡದೆ ನಿನಗೆ ತುತ್ತೂ ಸಿಗಾಕಿಲ್ಲಾ ಅರ್ಧಾ ತುತ್ತು ಸಿಗಾಕಿಲ್ಲಾ ನಡಿ ಅಮ್ಮಾವರು ಕರದಾರs.

**ರಾಮಕ್ಕ:—** ಈ ಮನಿ ಬದಕು ಬಿಟ್ಟು ಗಿರಣ್ಯಾಗ ದಗದಾ ಮಾಡಿದ್ರ ?

**ನಳ:—** ಅಲ್ಲೇನ ಮತ್ತ ? ಹತ್ತು ಮೇಸ್ತ್ರೀಗಳ ಮರ್ಜಿ ಹಿಡಿದು, ನಾನು ಹೇಳಿದ್ಹಾಂಗ ಮರ್ಜಿ ಕಾದುಕೊಂಡು ಇರಬೇಕಾಗತ್ತೈತಿ. ನಡಿ ಹರಟೆ ಕೊಚ್ಚ ಬ್ಯಾಡ ನಡಿ.

[ ಇಬ್ಬರೂ ಹೋಗುವರು ]

( ತೆರೆ ಬೀಳುವದು )



## ಅಂಕ ೨. [ದೃಶ್ಯ ೩]

[ ರತಿಲಾಲ ಸೇಟರ ಬಂಗಲೆ. ರತಿಲಾಲ ಹಾಡುತ್ತ ಕೂತಿರುವನು. ]

**ರತಿಲಾಲ:—** [ ಸ್ವಗತ ] ಸಮಾಜ ಸತ್ತಾವಾದ ಮಂಡಳದ ಸ್ಥಾಪನೆಯ ಬಗ್ಗೆ ನಾಳಿನ ದಿನ ಕೂಡುವ ಸಭೆಗೆ ನಾನು ಅಧ್ಯಕ್ಷನಾಗುವ ಸಲುವಾಗಿ ಮಾತನಾಡಲು ಬರುವೆನೆಂದು ಸಮಶೀಲನು ಅಪಾಯಿಂಟ ಮಾಡಿದ ವೇಳೆ ಆಯಿತು.ನನಗೆ ಒಳ್ಳೆ ಸುಸಮಯ ದೊರೆಯಿತು. ಬಡವರ ಮೇಲಿನ ಪ್ರೀತಿಯನ್ನು ತೋರಿಸಲಿಕ್ಕೆ ಭಾಗ್ಯವತಿಯು ಒಂದು " ಪಂಚಮ ಬಾಲಿಕಾ ನಿಲಯ " ವನ್ನು ಸ್ಥಾಪನೆ ಮಾಡಿರುವಳು. ಅದರಲ್ಲಿ ಅವಳಿಗೆ ನಾನು ಧನ ಸಹಾಯ ಮಾಡುತ್ತೇನೆ. ಇದರಿಂದ ಭಾಗ್ಯವತಿಯ ಪ್ರೀತಿಯು ನನ್ನ ಮೇಲೆ ಹೆಚ್ಚಾಗುವದು. ಆ ದಿನ ಸಹ ಅವಳು, ನನ್ನ ಸಂಗಡ ವಿವಾಹಮಾಡಿಕೊಳ್ಳುವದಿಲ್ಲ, ಎಂದು ಅಂದಿಲ್ಲ. ಸಾರ್ವಜನಿಕ ಸಂಸ್ಥೆಗೆ ಸಹಾಯಮಾಡುವದರಿಂದ, ಅದಕ್ಕೆ ಅಧ್ಯಕ್ಷನಾಗುವದರಿಂದ ನನ್ನ ನೈಸರ್ಗಿಕ, ಲೌಕಿಕ ಪ್ರಿಯತೆಯ ಮತ್ತು ಪ್ರೌಢಿಯ ಲಾಲಸೆಯ ತೃಪ್ತಿಯಾಗುವದು. ಸಹಜವಾಗಿ ದೊರೆತ ಲಕ್ಷಾವಧಿ ರೂಪಾಯಿಯೊಳಗಿನ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡುವದೆಂದರೆ ಅದೇನು ಸ್ವಾರ್ಥತ್ಯಾಗವಲ್ಲ. ಇತರ ಸಾವಿರಾರು ನಾಟಕ, ಸಿನೆಮಾ, ಕ್ಲಬ್, ಸಾಯಿಟ್ ಸೀಯಿಂಗ್ ' ಪ್ರದರ್ಶನ, ಕಾನಫರನ್ಸ, ಕಾಂಗ್ರೆಸ್ ಮುಂತಾದ ನಿರುದ್ಯೋಗಿ, ಜನರ ಉದ್ಯೋಗದೊಳಗಿನ ಒಂದು ಉದ್ಯೋಗ ಇಂಥ ಸಮಾಜಸೇವೆ. ನಮಗೆ ಅದರಲ್ಲಿ ಅಂತಃಕರಣವನ್ನು ತೋರಿಸುವದು ಬೇಕಾಗಿಲ್ಲ: ಅದೆಲ್ಲಾ ಬಡವರು ಮಾಡುವರು. ಧ್ಯೇಯ, ತತ್ವ ಇವುಗಳು ಅಲಂಕಾರ ರೂಪವಾಗಿ ನಮ್ಮ ಸುಖಕ್ಕೆ ಮತ್ತು ಪ್ರೌಢಿಗೆ

ಸಾಧನೀ ಭೂತವಾಗಿರಬೇಕೇ ವಿನಃ, ಅವುಗಳಿಂದ ನಮ್ಮ ಸುಖಕ್ಕೆ, ಸ್ವಾಸ್ಥ್ಯಕ್ಕೆ ಭಂಗಬಂದಿರಬಾರದು. ಸಮಾಜ ಸೇವೆ ನಮ್ಮ ನೂರಾರು ದೋಷಗಳನ್ನು ಮುಚ್ಚಲು ಒಳ್ಳೆ ಆವರಣವು. ಅದು ಸಾಮಾನ್ಯ ಜನರ ಮತ್ತು ಕಾರ್ಯಕರ್ತರ ಪ್ರೀತಿಯನ್ನು ಸಂಪಾದಿಸಿ, ನಮ್ಮ ಪ್ರತಿಸ್ಪರ್ಧಿಯ ಮೇಲೆ, ಸಾರ್ವಜನಿಕ ಪ್ರತಿಷ್ಠೆಯಲ್ಲಿ ಮೆರೆಯಲಿಕ್ಕೆ ಒಳ್ಳೆಯ ಅನುಕೂಲ ಸಾಧನವು.

**( ಸೇವಕನ ಪ್ರವೇಶ )**

**ಸೇವಕ:—** ಯಾರೋ ಗಾಂಧೀಟೋಪಿಯನ್ನು ಹಾಕಿಕೊಂಡು ಬಂದರು.

**ರತಿಲಾಲ:—** ಅವರನ್ನು ಒಳಗೆ ಕರಿ. ( **ಸೇವಕ ಹೋಗಿ ಕರೆದುಕೊಂಡು ಬರುವನು.** ) Come in (**ಶೇಕ ಹ್ಯಾಂಡ ಮಾಡಿ**) Take your seat. ( **ಸಮಶೀಲನು ಕುಳಿತ ಬಳಿಕ** ) ಸಮಶೀಲ, ನಿನ್ನ ಸಮಾಜಸತ್ತಾವಾದಿ ಮಂಡಳದ ಮುಖ್ಯ ತತ್ವದ ಬಗ್ಗೆ ಮತ್ತು ಅದರ ಆವಶ್ಯಕತೆಯ ಬಗ್ಗೆ ನಿನ್ನ ವಿಚಾರವನ್ನು ಸ್ವಲ್ಪದರಲ್ಲಿ ಹೇಳು. ಅವು ನನಗೆ ಒಪ್ಪಿಗೆ ಆದರೆ ನಾನು ಅದರ ಅಧ್ಯಕ್ಷನಾಗಲು ಸಿದ್ಧನಿದ್ದೇನೆ.

**ಸಮಶೀಲ :—** “ ಆತ್ಮವತ್ ಸರ್ವಭೂತೇಷು ” ಈ ಆಧ್ಯಾತ್ಮಿಕ ತತ್ವದ ಆರ್ಥಿಕ ಅನುವಾದವೆಂದರೆ ಸಮತಾವಾದ. ಐಹಿಕ ಸಂಪತ್ತಿಯ ಮೇಲೆ ಎಲ್ಲರಿಗೂ ಸಮಾನ ಹಕ್ಕು ಇರಬೇಕು. ಪ್ರತಿಯೊಂದು ವ್ಯಕ್ತಿಗೆ ತನ್ನ ಆತ್ಮಶಕ್ತಿ, ಬುದ್ಧಿಶಕ್ತಿ ಮತ್ತು ಶಾರೀರಿಕ ಶಕ್ತಿ ಇವುಗಳನ್ನು ಬೆಳಸಿ ಶ್ರೇಯಸ್ಸನ್ನು ಸಂಪಾದಿಸಲಿಕ್ಕೆ, ಸಮಾನ ಸೌಕರ್ಯವು ಸಿಕ್ಕುವಂತೆ ಸಮಾಜದ ಮತ್ತು ರಾಜ್ಯಯಂತ್ರದ ರಚನೆ ಇರಬೇಕು. ಆಸ್ತಿಯ ಮೇಲಿನ ವ್ಯಕ್ತಿಹಕ್ಕನ್ನು ಹೋಗಲಾಡಿಸಿ ಅದರ ಮೇಲೆ ಸಮಾಜದ ಸತ್ತೆಯನ್ನು ಸ್ಥಾಪಿಸಬೇಕು. ಇಂತಹ ಗುರಿಯನ್ನಿಟ್ಟುಕೊಂಡ ಸಂಸ್ಥೆಯ ಆವಶ್ಯಕತೆಯೂ ಇಷ್ಟೆಂದು ಹೇಳಲು ಸಾಧ್ಯವಿಲ್ಲ! ಸಮಾಜದೊಳಗಿನ ಮನುಷ್ಯತ್ವವನ್ನು ಹಾಳುಮಾಡಿದ ಈ ಆರ್ಥಿಕ ವಿಷಮತೆಯು, ಬಡವರ ಗೋಳಾಟಕ್ಕೆ ಸ್ತ್ರೀಯರ ದಾಸ್ಯಕ್ಕೆ ಮತ್ತು ಅವನತಿಗೆ; ರಾಜಕೀಯ, ಆರ್ಥಿಕ ಕಠೋರ ಸ್ಪರ್ಧೆಗೆ, ಧಂದೆವಾಯಿತರ ಸ್ವಾರ್ಥ ಲಂಪಟತೆಗೆ, ಭೌತಿಕ ಶಾಸ್ತ್ರದ ಮಾನವವಂಶ ನಿರ್ಮೂಲನ ಪ್ರವೃತ್ತಿಗೆ, ಮನುಷ್ಯನ ಕಾಯದೆ ಅಥವಾ ಸತಿನಿಯಮ ಉಲ್ಲಂಘನಕ್ಕೆ, ವೈಯಕ್ತಿಕ ಆಸ್ತಿಸಂಪಾದನೆಯ ಅಖಂಡ ಅಸಂತುಷ್ಟ ಹವ್ಯಾಸವೆ ಕಾರಣ. ಈ ಹವ್ಯಾಸವನ್ನು ನಿರ್ಮೂಲಮಾಡುವದು ಪ್ರತಿ ವ್ಯಕ್ತಿಯ ಶ್ರೇಷ್ಠತಮ ಮತ್ತು ಅವಶ್ಯಕ ಕರ್ತವ್ಯವು. ಈ ಹವ್ಯಾಸವು ನಿರ್ಮೂಲವಾಗಿದ್ದರೆ ನಮ್ಮ ರಾಜಕೀಯ ಸಂಸ್ಥೆಗಳು, ವಿಶ್ವವಿದ್ಯಾಲಯಗಳು, ಧರ್ಮಸಂಸ್ಥೆಗಳು ಮುಂತಾದವುಗಳೂ ಕೂಡ ಈ ರಾಕ್ಷಸೀ ದ್ರವ್ಯಾರ್ಜನದ ಆಸೆಗೆ ಬಲಿ ಬೀಳುವವು.

**ರತಿಲಾಲ :—** ನಿಮ್ಮ ಸಮತಾವಾದದ ಅರ್ಥ ನನಗೆ ಸರಿಯಾಗಿ ಆಗಲಿಲ್ಲ. ಸೃಷ್ಟಿಕರ್ತನು ವ್ಯಕ್ತಿಯಲ್ಲಿ ಶ್ರೇಷ್ಠ, ಕನಿಷ್ಠ ಗುಣಗಳನ್ನಿಟ್ಟಿರುವನು.

**ಸಮುಶೀಲ :—** ಸಮತಾವಾದವೆಂದರೆ ಸಮರೂಪತತ್ವವಲ್ಲ. Equality is not uniformist. ಆತ್ಮತ್ವದ ವಿಕಾಸಕ್ಕಾಗಿ ಸಮಾನ ಸಂಧಿಯನ್ನು ಕೊಡುವದಕ್ಕೆ ವ್ಯಾವಹಾರಿಕ ಸಮತಾವಾದ ಅನ್ನುವರು.ವ್ಯಕ್ತಿಯು, ತನ್ನ ಯೋಗ್ಯತೆಯ ಪ್ರಕಾರ ಆ ಸಂಧಿಯ ಲಾಭವನ್ನು ಮಾಡಿಕೊಳ್ಳುವನು.

**ರತಿಲಾಲ :—** ವೈಯಕ್ತಿಕ ಆಸ್ತಿಸಂಪಾದನೆಯ ಉತ್ಪ್ರೇರಣೆ ಮತ್ತು ಆಶೆ ಇಲ್ಲದೆ ಹೋದರೆ ಕಾರ್ಯಮಾಡುವ ಪ್ರವೃತ್ತಿಯು ಸತ್ತುಹೋಗಿ ಎಲ್ಲರೂ ಸುಖಿಯಾಗಿ ಇರುವರು. ಅಥವಾ ಒಬ್ಬನು ಮಾಡಿದ ಪ್ರಯತ್ನದ ಲಾಭವು ಇನ್ನೊಬ್ಬನಿಗೆ ಆಗುವದು. ಇದರಿಂದ ಹೆಚ್ಚು ಕಾರ್ಯಕ್ಷಮ ವ್ಯಕ್ತಿಗಳು ಕಮ್ಮಿಯಾಗಿ ಸಾಮಾನ್ಯ ಕೆಲಸಗಾರರೆ ಹೆಚ್ಚಾಗುವರು. "ಎಲ್ಲರ ಕಾರ್ಯವೆಂದರೆ ಯಾರದು ಕಾರ್ಯವಲ್ಲ." ಎಂಬದು ಗಾದೆಯ ಮಾತು.

**ಸಮುಶೀಲ:—** ನಿಮ್ಮ ಮಾತಿನಲ್ಲಿ ಮನುಷ್ಯಪ್ರಾಣಿಯು ಸ್ವಭಾವದಿಂದ ಸೋಮಾರಿ ಇರುವನೆಂದು ಗೃಹಿತ ಮಾಡುವಿರಿ. ಉದ್ಯೋಗ ಪ್ರಿಯತೆಯ ಜೀವಂತ ವ್ಯಕ್ತಿಯ ಸಹಜಧರ್ಮವು. ಸಧ್ಯದ ಪರಿಸ್ಥಿತಿಯಲ್ಲಿ ಸ್ವಲ್ಪಜನರ ಆಸ್ತಿಸಂಪಾದನೆಯ ಆಶೆಗಾಗಿ ಬಹುಜನರಿಗೆ ದುಡಿಯಬೇಕಾಗುವದು. ಅದರಲ್ಲಿ ಸಂಪೂರ್ಣ ಕಾರ್ಯಕ್ಷಮತೆಯು ವ್ಯಕ್ತವಾಗದೆ, ಹೊಟ್ಟೆತಾಪತ್ರಯದ ದುಡಿಮೆಯು ಮಾತ್ರ ಕಂಡುಬರುವದು. ತಮ್ಮ ದುಡಿತದ ಲಾಭವು ಪರ್ಯಾಯದಿಂದ ತಮಗೆ ಆಗುವದೆಂಬ ನಂಬಿಕೆಯಾದರೆ ಸರ್ವರು ಉತ್ಸಾಹದಿಂದ ಕಾರ್ಯ ಮಾಡುವರು, ಮತ್ತು ಪ್ರತಿಭಾಶಾಲಿ ಜನರಿಗೆ ಬೇಕಾದ ಸೌಕರ್ಯ ಸಿಕ್ಕರೆ ಅವರಿಂದ ಅಸಾಮಾನ್ಯ ಕಾರ್ಯವಾಗುವದು.

**ರತಿಲಾಲ:—** ( **ಆಲೋಚನೆ ಮಾಡಿ** ) Yes I see your point. ಆಗಲಿ ನಿಮ್ಮ ಮಂಡಳದ ಅಧ್ಯಕ್ಷ ನಾಗಲಿಕ್ಕೆ ನನ್ನ ಒಪ್ಪಿಗೆ ನಾಳೆ ಸಭೆಯು ಎಷ್ಟು ಘಂಟೆಗೆ ?

**ಸಮುಶೀಲ:—** 5—30.P. M. ಹೋಗಿಬರುತ್ತೇನೆ.

( **ಹೋಗುವನು** )



# ವೀರಮಾತೆ




ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ

ಕನ್ನಡ ಮಾಸಪತ್ರಿಕೆ.

ಸಂಪುಟ ೧ } ಪೌಷ್ಯ ಜನೆವರಿ ೧೯೫೩ { ಸಂಚಿಕೆ ೮


## ಸಂಪಾದಕೀಯ

ಕಟ್ಟುನಿಟ್ಟುಗಳಿಲ್ಲದೆ ಬೆಳೆಯುತ್ತಿರುವ ಪ್ರಜಾಸಂಖ್ಯೆಯನ್ನು ನೋಡಿದಾಗ, ಅನ್ನ ಬಟ್ಟೆಗಳ ಸಮಸ್ಯೆ, ಬಳಿಕ ಶಿಕ್ಷಣ ಸಂಸ್ಕೃತಿಗಳ ಸಮಸ್ಯೆ ಯಾವ ಸರಕಾರದೆದುರಾದರೂ ಬಂದು ನಿಲ್ಲುವದು ಸಹಜವೇ ಆಗಿದೆ. ಈ ಸಮಸ್ಯೆಗಳನ್ನು ಆ ಮೇಲೆ ಎದುರಿಸುವದಕ್ಕಿಂತ ಕುಟುಂಬ ನಿಯೋಜನೆಯ ಪದ್ಧತಿಯನ್ನೇ ಮೂಲತಃ ಕೈಕೊಂಡರೆ ಹೇಗೆಂದು ದೇಶವಿದೇಶಗಳ ತಜ್ಞರು ಯೋಚಿಸುತ್ತಿದ್ದಾರೆ. ಇದಕ್ಕಾಗಿಯೇ ಮುಂಬಯಿಯಲ್ಲಿ ನವ್ಹೆಂಬರ ೨೪ ರಿಂದ ಡಿಸೆಂಬರ ೨ ರ ವರೆಗೆ ಜಾಗತಿಕ ಪರಿಷತ್ತಿನ ಮೂರನೆಯ ಅಧಿವೇಶನ ಕೂಡಿತ್ತು. ೧೪ ರಾಷ್ಟ್ರಗಳ ಪ್ರತಿನಿಧಿಗಳು ಸುಮಾರು ಐವತ್ತರ ಸಂಖ್ಯೆಯಲ್ಲಿ ನೆರೆದಿದ್ದರು. ಪರಿಷತ್ತನ್ನು ಉದ್ಘಾಟಿಸುತ್ತ ಡಾ. ರಾಧಾಕೃಷ್ಣನ್ ಹೇಳಿದರು, “ ಮಕ್ಕಳು ಸುಕೋಮಲ ಪುಷ್ಪಗಳಿದ್ದಂತೆ ನಿಜ; ಅವುಗಳನ್ನು ದೇವರು ಕೊಡುತ್ತಾನೆ; ಆದರೆ ದೇವರು ಬುದ್ಧಿಯನ್ನೂ ಕೊಟ್ಟಿದ್ದಾನೆ. ಆ ಬುದ್ಧಿಯ ಉಪಯೋಗದಿಂದ ನಾವೂ ನಮ್ಮ ಮಕ್ಕಳೂ ಸುಖಿಯಾಗಿರುವಂತೆ ಮಾಡಬೇಡವೇ ? ”

ಸ್ವಾಗತಾಧ್ಯಕ್ಷರಾದ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯರು, ಅತಿಥಿಗಳನ್ನು ಸ್ವಾಗತಿಸುತ್ತ ಮುಂದುವರಿದರು "ಕುಟುಂಬ ನಿಯೋಜನೆಯ ಪ್ರಶ್ನೆಯನ್ನು ಜಾಗತಿಕ ರಂಗದ ಮೇಲೆ ಚರ್ಚಿಸುವ ಪರಿಸ್ಥಿತಿ ಇಂದು ಬಂದಿದೆ. ವಿವಾಹ, ನಮ್ಮಲ್ಲಿ ವೈಯ್ಯಕ್ತಿಕ ವಿಷಯವಾಗಿರದೆ ಸಾಮಾಜಿಕ ವಿಷಯವಾಗಿದೆ. ಶಾಸ್ತ್ರೀಯ ಸಂಶೋಧನೆಯ ಫಲ ಮಾನವನ ಸುಖಕ್ಕಾದಷ್ಟೂ ಒಳಿತು. ಇಂದು ಬೆಳೆಯುತ್ತಿರುವ ಪ್ರಜಾಸಂಖ್ಯೆಯನ್ನು ಸಂತತಿನಿಯಮನದ ಕೃತ್ರಿಮ ಸಾಧನೆಗಳಿಂದ ತಡೆಯುವದೂ ಸಾಧ್ಯವಿಲ್ಲ. ಜಗತ್ತಿನಲ್ಲಿರುವ ಅನ್ನ ಧಾನ್ಯ ಸಂಪತ್ತಿಯ ಮೇಲೆ, ಹುಟ್ಟಿದ ಪ್ರತಿಯೊಂದು ವ್ಯಕ್ತಿಯ ಅಧಿಕಾರವೂ ಇದೆ; ವ್ಯಕ್ತಿಯ ಸರ್ವತೋಮುಖ ವಿಕಾಸಕ್ಕೆ ಅವಕಾಶ ಒದಗಿಸಿಕೊಡಲು, ಕುಟುಂಬ ನಿಯೋಜನದ ಯೋಜನೆ ಅತ್ಯಂತ ಸಹಾಯಕಾರಿಯಾಗಿದೆ."

ಡಾ. ರಾಧಾಕೃಷ್ಣನ್ನರು ಕುಟುಂಬ ನಿಯೋಜನೆಯ ಬಗ್ಗೆ ತಮ್ಮ ವಿಚಾರಗಳನ್ನು ಕೂಲಂಕಷವಾಗಿ ಇಟ್ಟಿದ್ದಾರೆ, "ಕೇವಲ ಸಾಮಾಜಿಕ ಹಿತದ ದೃಷ್ಟಿಯಿಂದಲೇ ಕುಟುಂಬ ಯೋಜನೆಯ ಪ್ರಶ್ನೆಯಿದ್ದಾಗ, ಕರ್ತವ್ಯ, ಅಧ್ಯಾತ್ಮಗಳೆರಡರ ದೃಷ್ಟಿಯಿಂದಲೂ, ಅದರಲ್ಲಿ ದೋಷವಿಲ್ಲ. ಅವಿರತವಾದ ಮಾತೃತ್ವದ ಹೊಣೆಯೆಂದರೆ ಸ್ತ್ರೀಯ ಮೇಲೆ ನಡೆಸಿದ ಅತ್ಯಾಚಾರಗಳಲ್ಲಿ ಅದೂ ಒಂದು. ಎಲ್ಲರಿಗೂ ಅನ್ನ ವಸ್ತ್ರಗಳು ದೊರೆತು, ನಮ್ಮ ಭಾವೀ ಪೀಳಿಗೆ ಆರೋಗ್ಯ ಸಂಪನ್ನವಾಗಬೇಕಾದರೆ ಈ ಯೋಜನೆ ಅತ್ಯಂತ ಆವಶ್ಯಕವಾಗಿದೆ. ಕುಟುಂಬದ ಆರೋಗ್ಯ ಮತ್ತು ಸುಖಕ್ಕಾಗಿ, ತನಗೆ ಎಷ್ಟು ವರುಷಕ್ಕೊಂದು ಮಗು ಹುಟ್ಟಬೇಕು, ಎಂಬುದನ್ನು ನಿರ್ಣಯಿಸುವ ಅಧಿಕಾರ ಪ್ರತಿವ್ಯಕ್ತಿಗೂ ಇದ್ದೇ ಇದೆ. ಇದೇ ಕುಟುಂಬ ನಿಯೋಜನೆ. ಬಾಲಮೃತ್ಯು ಮತ್ತು ಹೆರಿಗೆಯಲ್ಲಾಗುವ ಮೃತ್ಯುವಿನ ಸಂಖ್ಯೆ ನಿಶ್ಚಿತವಾಗಿಯೂ ಇದರಿಂದ ಕಡಿಮೆಯಾಗುವದು. ಭಾರತದ ಪಂಚವಾರ್ಷಿಕ ಯೋಜನೆಯೂ ಇದನ್ನೊಪ್ಪಿಕೊಂಡಿದೆ. ಭಾರತದ ಮುಖ್ಯ ಮಂತ್ರಿ ಪಂಡಿತ ನೆಹರೂ, ಈ ಯೋಜನೆಗೆ ತಮ್ಮ ಬೆಂಬಲವನ್ನಿತ್ತಿದ್ದಾರೆ. ಇರುವಿಕೆಯ ಮಟ್ಟವನ್ನೇರಿಸಿದರೆ, ಪ್ರಜೋತ್ಪಾದನದ ಸಂಖ್ಯೆ ಕಡಿಮೆಯಾಗುವದೆಂದು ಕೆಲ ಶಾಸ್ತ್ರಜ್ಞರ ಅಭಿಪ್ರಾಯ. ಹೆಚ್ಚು ಉತ್ಪಾದನೆ ಮಾಡಿ ಬಾಯಿಗೂಡಿಸುವದು ಮುಂದಿನ ಮಾತು. ಸದ್ಯದ ಉಪಾಯವೆಂದರೆ ಈ ಯೋಜನೆಯೇ !

ಜ್ಞಾನ ಇಬ್ಬದಿಗೂ ಹರಿತವಾದ ಶಸ್ತ್ರವಿದ್ದಂತಿದೆ. ಅದರಲ್ಲಿ ಯಾವುದೇ ಬಗೆಯ ಶಕ್ತಿಯಿರಲಿ, ಅದನ್ನು ಸಾಮಾಜಿಕ ಹಿತಕ್ಕಾಗಿ ಅಥವಾ ವೈಯ್ಯಕ್ತಿಕ ಹಿತಕ್ಕಾಗಿ ಉಪಯೋಗಿಸಿದಲ್ಲಿ ತಪ್ಪಾಗಲಾರದು. ಜಗತ್ತು ಯಾವಾಗಲೂ ಸ್ಥಿರವಾಗಿಲ್ಲ. ಅದರಲ್ಲಿ ವ್ಯತ್ಯಾಸ ಯಾವಾಗಲೂ ನಡೆದದ್ದೇ; ಬ್ರಹ್ಮಚರ್ಯವೇ ಸರ್ವೋತ್ತಮವೆಂದು ಸೇಂಟ ಪಾಲನಿಗೆ ಮೊದಲು ತೋರಿತು. ಆದರೆ ಭಾವನೆಗಳನ್ನೆಲ್ಲ ನಿಗ್ರಹಿಸಿ ಜೀವನ್ಮೃತನಾಗಿರುವದಕ್ಕಿಂತ ವಿವಾಹವಾಗಿ, ಪರಿಮಿತವಾದ

ರೀತಿಯಲ್ಲಿ ವಾಸನಾತೃಪ್ತಿಯನ್ನುಂಟುಮಾಡಿಕೊಂಡಲ್ಲಿಯೇ ಹೆಚ್ಚು ಸುಖವಿದೆ ಯೆಂದು ಬಳಿಕ ಕಂಡು ಬಂದಿತು. ಗಾಂಧೀಜಿಯಾದರೂ ಆಚರಣೆ ಆದರ್ಶಗಳಲ್ಲಿ ವ್ಯತ್ಯಾಸವನ್ನಿಟ್ಟಿದ್ದರು. ಅವರು ಸೂಚಿಸಿದ ಸಂಯಮ ಸಾಮಾನ್ಯರಿಗೆ ಅಸಾಧ್ಯ. ಮೇಲಾಗಿ ಈ ಸಂಯಮವೂ ನಿಸರ್ಗವಿರುದ್ಧವಲ್ಲವೆ? ಪ್ರಜೆಗಳ ಬೆಳೆಯುವ ಸಂಖ್ಯೆ ಯನ್ನು ತಡೆಯುವದು ನಮ್ಮ ಉದ್ದೇಶ. ಇದನ್ನು ಬೇಕಾದವರು ಬೇಕಾದ ಹಾಗೆ ಸಾಧಿಸಬಹುದು."

ಪರಿಷತ್ತಿಗೆ ಆಗಮಿಸಿದ್ದ ಮಾತೆ ಶ್ರೀ ಮಾರ್ಗರೆಟ ಸಂಗರ ಅವರು, ಪರಿಣಾಮಕಾರಕವಾಗಿ ಭಾಷಣಮಾಡಿ, ತಾವು ತಮ್ಮ ದೇಶದಲ್ಲಿ ಕೂಡಿಸಿದ ೨೫೦೦ ಡಾಲರುಗಳನ್ನು ಪರಿಷತ್ತಿಗೆ ದಯಪಾಲಿಸಿದರು. ಅದೇರೀತಿ ಅಮೇರಿಕೆಯ ಶ್ರೀಮತಿ ವಾತುವಲ್ ಅವರು ೫೦೦೦ ಡಾಲರುಗಳನ್ನು ಕೊಟ್ಟರು. ಜಪಾನದ ಪ್ರತಿನಿಧಿ ಶ್ರೀ ಶಿಂಝು ಕಾಟೋ ಕುಟುಂಬನಿಯೋಜನೆಯ ಬಗ್ಗೆ ತಮ್ಮ ದೇಶದ ಅನುಭವ ವನ್ನು ವಿಶದೀಕರಿಸಿದರು. "ನಮ್ಮ ಪ್ರಜೆಗಳ ಸಂಖ್ಯೆಯನ್ನು ಹೆಚ್ಚಿಸಿ, ನಾವು ಏಶಿಯವನ್ನೇ ಕೈಯ್ಯಲ್ಲಿಟ್ಟುಕೊಳ್ಳಬಲ್ಲೆವೆಂಬ ನಮ್ಮ ಹೆಮ್ಮೆ ಇಂದು ಇಲ್ಲವಾಗಿದೆ. ಈ ಕುಟುಂಬ ನಿಯೋಜನೆಯ ಚಳವಳಿ ಇಂದು ಜನಾಂಗದಲ್ಲಿ ಒಳ್ಳೇ ಜೋರಿನಿಂದ ನಡೆದಿದೆ. ಅಲ್ಲಿಯ ಪಾರ್ಲಿಮೆಂಟಿನಲ್ಲಿ ೮೪ ಜನ ಸ್ತ್ರೀಸದಸ್ಯೆಯರಿದ್ದಾರೆ."

ಶ್ರೀಮತಿ ಸಾಂಗರರು ರೋಗಗ್ರಸ್ತ ಪ್ರಜೆಗಳು ಪ್ರಜೋತ್ಪಾದನೆಯನ್ನು ಮಾಡದಂತೆ ನೋಡಿಕೊಳ್ಳಬೇಕೆಂಬುದರ ಮೇಲೆ ಹೆಚ್ಚು ಜೋರು ಕೊಟ್ಟು ಮಾತನಾಡಿದರು.

ಕುಟುಂಬ ನಿಯೋಜನೆಯ ಬಗ್ಗೆ ಕೆಲವೊಂದು 'ಫಿಲ್ಮಸ್' ಗಳನ್ನೂ ತೋರಿಸಲಾಯಿತು. ವಿದೇಶ ದೇಶಗಳಲ್ಲಿಯ ಪ್ರತಿಯೊಬ್ಬ ಪ್ರತಿನಿಧಿಯ ಅನು ಭವವೂ ಈ ಕ್ಷೇತ್ರದಲ್ಲಿ, ಒಂದಕ್ಕಿಂತ ಒಂದು ಮಾರ್ಮಿಕವಾಗಿದ್ದವು. ಜಪಾನದ ಡಾ. ಕೋಯಾ ಅಲ್ಲಿಯ ಮೂರು ಹಳ್ಳಿಗಳಲ್ಲಿಯ ಆಶ್ಚರ್ಯಕಾರಕ ವರದಿಯನ್ನು ಒಪ್ಪಿಸಿದರು. ಸ್ತ್ರೀಪುರುಷ ಬೀಜಗಳ ಸಂಯೋಗದಿಂದ, ಶಿಶುವಿನ ಜನನದವರೆಗೆ ಸಾದ್ಯಂತವಾಗಿ, ಸಾಮಾನ್ಯರಿಗೂ ತಿಳಿಯುವಂತೆ ಕೆಲವೊಂದು 'ಫಿಲ್ಮಸ್' ಗಳು ವಿವರಿಸಿದವು.

ಸಂತತಿನಿಯಮನಕ್ಕಾಗಿ ಸ್ತ್ರೀಯರ ಮೇಲಿನ ಶಸ್ತ್ರಕ್ರಿಯೆಯನ್ನು ಕುರಿತು ಹೆಚ್ಚು ಅಭ್ಯಾಸಮಾಡಿದ ಡಾ. ಶಿರೋಡಕರರು ತಮ್ಮ ಅನುಭವವನ್ನು ನಿವೇದಿಸಿ ದರು. ಶಸ್ತ್ರಕ್ರಿಯೆಯಿಂದ ಮುಂದೆ ಮಕ್ಕಳಾಗುವದೇ ಇಲ್ಲವೆಂಬ ತಪ್ಪು ತಿಳುವಳಿಕೆ ಯನ್ನೂ ತಮ್ಮ ಹೊಸ ಪದ್ಧತಿಯಲ್ಲಿ ಎತ್ತಿ ತೋರಿಸಿದರು. ಶಸ್ತ್ರಕ್ರಿಯೆಯಿಂದ ಸ್ತ್ರೀತ್ವ, ಪುರುಷತ್ವಗಳಿಗೆ ಯಾವ ಬಗೆಯ ಧಕ್ಕೆಯೂ ಇಲ್ಲವೆಂಬುದನ್ನು ಶಾಸ್ತ್ರೀಯ ಜ್ಞಾನದ ಆಧಾರ ಸಹಿತ ಅವರು ವಿಶದ ಪಡಿಸಿದರು.

ಬಳಿಕ ಕುಟುಂಬ ನಿಯೋಜನೆಯ ತಾಂತ್ರಿಕ ಮತ್ತು ಶಾಸ್ತ್ರೀಯ ಪ್ರಶ್ನೆ

ಗಳನ್ನು ಕುರಿತು ಚರ್ಚೆ ಸಾಗಿತು. ಡಾ. ಮಸಾನಿಯವರು, 'ಕೃತ್ರಿಮ ಸಾಧನ ಗಳಿಂದಾಗುವ ಮಾನಸಿಕ ಪ್ರತಿಕ್ರಿಯೆಯನ್ನೂ ನಾವು ನೆನೆಯಬೇಕು,' ಎಂದು ಹೇಳಿದರು.

ಕೊನೆಗೆ, "ವರ್ಲ್ಡ ಫೆಡರೇಶನ್ ಫಾರ್ ಪ್ಲ್ಯಾನ್ಡ್ ಪೇರಂಟಹುಡ್," ಎಂಬ ಸಂಸ್ಥೆ ಸ್ಥಾಪಿಸಲ್ಪಟ್ಟು ಶ್ರೀಮತಿ ಮಾರ್ಗರೆಟ ಸಾಗರರು ಅದರ ಅಧ್ಯಕ್ಷರಾದರು.

ಕ್ಯಾಥೋಲಿಕರು ಬಾಹ್ಯಸಾಧನಗಳ ಉಪಯೋಗಕ್ಕೆ ವಿರುದ್ಧರಾದ್ದರಿಂದ ಯಾರೂ ಉಪಸ್ಥಿತರಿರಲಿಲ್ಲ. ಗುಜರಾಥಿಗಳೂ ಹೆಚ್ಚಾಗಿರಲಿಲ್ಲ; ಮಹಾರಾಷ್ಟ್ರೀಯ ಮತ್ತು ಪಾರ್ಸಿ ಜನರಿಂದ ಸಭೆಕಿಕ್ಕಿರಿದು ತುಂಬಿತ್ತು.

ಅಂತೂ ಏಶಿಯಾ ಖಂಡದಲ್ಲಿಯೇ ಮೊದಲನೆಯದಾದ ಈ ಜಾಗತಿಕ ಪರಿಷತ್ತು ಮುಂಬಯಿಯಲ್ಲಿ ಸೇರಿ, ಕುಟುಂಬ ನಿಯೋಜನೆಗೆ ಸಂಬಂಧಿಸಿದ ವಿವಿಧ ವಿಷಯಗಳನ್ನು ಸಾದ್ಯಂತವಾಗಿ ಚರ್ಚಿಸಿ, ಯಶಸ್ವಿಯಾಗಿ ಕೊನೆಗಂಡದ್ದು ಅಭಿನಂದನೀಯ! ಈ ವಿಷಯಗಳನ್ನು ಬಾಯಿಂದ ಆಡುವದೂ ಅಸಂಸ್ಕೃತಿಯ ಲಕ್ಷಣ ಎಂಬ ಕಾಲ ಉರುಳಿಹೋಗಿ ಶಾಸ್ತ್ರೀಯ ದೃಷ್ಟಿಕೋನದಿಂದ,ಗಂಭೀರವಾಗಿ ಇವುಗಳನ್ನು ಕುರಿತು ವಿಚಾರಿಸುವ ಕಾಲ ಬಂದಿದೆ. ಕುಟುಂಬ ನಿಯೋಜನೆಯಲ್ಲಿ, ರಶಿಯದ ಉದಾಹರಣೆಯೂ ನಮ್ಮೆದುರಿದೆ; ಜಪಾನದ ಉದಾಹರಣೆಯೂ ಇದೆ

ಆ ವಿವಿಧ ಪ್ರಯೋಗಗಳಿಂದಾದ ಪರಿಣಾಮವನ್ನರಿತುಕೊಂಡು, ಭಾರತದ ವಾತಾವರಣಕ್ಕೆ ಅನುಕೂಲವಾಗುವಂತೆ ನಮ್ಮ ಕುಂಟುಂಬ ನಿಯೋಜನೆಗೆ ಅವು ಗಳನ್ನನ್ವಯಿಸಿಕೊಳ್ಳಬೇಕು, ಅಷ್ಟೇ.



## ಅಭಿನಂದನೆ

ಕನ್ನಡನಾಡಿನಲ್ಲಿ ಅತ್ಯಂತ ಪರಿಶ್ರಮ ವಹಿಸಿ ಅನೇಕ ಶಿಕ್ಷಣ ಸಂಸ್ಥೆ ಗಳನ್ನು ಕಟ್ಟಿದ, ಶಿಕ್ಷಣತಜ್ಞರಾದ ಡಾ. ಎಸ್. ಸಿ. ನಂದೀಮಠರು ಇದೀಗ ನಮ್ಮ ಕರ್ನಾಟಕ ವಿಶ್ವವಿದ್ಯಾಲಯದ ರಜಿಸ್ಟ್ರಾರರಾದುದು ಅಭಿನಂದನೀಯ! ಇದಕ್ಕೂ ಮೊದಲು ಡಾ. ನಂದೀಮಠರ ಸಂಬಂಧ ವಿಶ್ವವಿದ್ಯಾಲಯಕ್ಕಿರಲಿಲ್ಲವೆಂದಲ್ಲ, ಆದರೆ ಇದೀಗ ಅವರಿಂದ ಇನ್ನೂ ಹೆಚ್ಚಿನ ಶಕ್ತಿಯನ್ನು ಪಡೆದು, ಕಾರ್ಯಮಾಡುವ ಅವಕಾಶ ಅದಕ್ಕೆ ದೊರೆತಿದೆ. ಅವರ ಹಿರಿತನದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ತನ್ನ ಹಿರಿಮೆಯನ್ನು ಕಾಣುವದೆಂದು ನಮ್ಮ ಆಶೆ!



# — ರವಿಯುದಯ —

ಮೂಡುತಿಹ ನೇಸರನು ಪಸರಿಸಿದ ಹೊಂಬಣ್ಣ !
ಮೋಡ ಮುಖಗಳನಾಂತು ಮಿರುಗುತಲಿ, ಬಾಳಿನೊಳು,
ಗಾಢಮೋಹವ ಬಿಡಿಸಿ ಶಾಂತಿ ಸಾಮ್ರಾಜ್ಯದಲಿ
ಜಾಡತೋರುವ ಜ್ಯೋತಿ ಯಂದದಲಿ ನಲಿಯುತಿದೆ ॥ ೧ ॥
ಚಿಲಿಪಿಲಿಯ ಕಲರವದಿ ಬಹುವಿಧದವಿಹಗಗಳು
ಇಳೆಗೊರಗಿ ನಿದ್ರಿಸುವ ಜನರ ಕರ್ಣಂಗಳಿಗೆ
ಮೆಲುದನಿಯ ಗಾಯನವ ಮಧುರ ತಾನದಿ ಪಾಡಿ,
ಇಳೆಯ ಮೋಹವ ಬಿಡಿಸಿ ತೊಡಗಿಪವು ಕರ್ಮದೊಳು ॥ ೨ ॥
ಇರುಳೆಲ್ಲ ವಿರಹದೊಳು ನರಳಿರುವ ಜಲಜಂಗೆ
ಮರಳಿಯಾಶೆಯನಿತ್ತು ಪ್ರೇಮವನು ಪಿಡಿದಿರಲು
ನೆರೆಯನಿತ್ತೀ, ಜನಗಳಾಶಾ ಜೀವಿಗಳಾಗಿ
ಇರಲು ಬೋಧಿಸುತಿಹವು ಹೊಂಬಣ್ಣ ಕಿರಣಗಳು । ೩ ॥
ಮುಸುಗಿನಿಂದಿಹ ಮದ ಮೋಹದಂಬರವನ್ನು
ಪಸರಿಸುತ ಜನಗಳನು ತನ್ನ ಉಡಿಯೊಳು ತುಂಬಿ,
ಮಿಸುಗದಂತೆಯೆನಿಂದ ನಿಶೆಯ ಮಾಯವ ಕಳೆದು,
ನಸುಬೆಳಕ ಜೀವನದಿ ಪಸರಿಪುದು ಹೊಂಗಿರಣ ॥ ೪ ॥

"ಮಂಕೇಶ್ವರೆ"



# ವಧುವಿನ ಕಾಲ್ಗುಣ

ಲೇಖಕಿ :— **ಸರೋಜಿನಿ ಮಹಿಷಿ.**

**ವಿವಾಹದ ದಿನ ವರನ ಮೈಯಲ್ಲಿ ಸರಿಯಾಗಿರಲಿಲ್ಲ, ವಧುವಿನ ಕಾಲ್ಗುಣ! ಬಳಿಕ ಮಾವನಿಗೆ ಅಸ್ವಾಸ್ಥ್ಯ !ಅದೂ ವಧುವಿನ ಕಾಲ್ಗುಣ!! ಆಮೇಲೆ ನೆಮ್ಮದಿಯಾಗಿದ್ದ ಒಂದು ಮನೆ ಒಡೆದು ಎರಡಾಯಿತು;ಅದೂ ವಧುವಿನ ಕಾಲ್ಗುಣ!!!**

ವಿವಾಹದ ಮುಹೂರ್ತ ರವಿವಾರವೆಂದೇ ನಿಶ್ಚಿತವಾಗಿತ್ತು, ಗೋಧೂಳಿಯ ಮುಹೂರ್ತದಲ್ಲಿ;ಇಬ್ಬಣಗಳ ಬೀಗರೂ ಒಳ್ಳೆ ಸಂಭ್ರಮದಿಂದ ಧಾರೆಯ ಮನೆಯಲ್ಲಿ ನೆರೆದಿದ್ದರು; ಮುಹೂರ್ತಕ್ಕೆ ಇನ್ನೂ ಕಾಲುಗಂಟೆಯಿರುವಾಗಲೇ, ಪುರೋಹಿತರ ಆಗ್ರಹದ ಮೇರೆಗೆ, ವರನು ವೇದಿಕೆಯ ಮೇಲಿದ್ದನು; ವಧು ಬರುವದರಲ್ಲಿದ್ದಳು. ಮುಹೂರ್ತ ಸಮೀಪಿಸಿದಾಗ, ನಿರ್ಜೀವ ಪಟವೊಂದು ಇಬ್ಬರ ಮಧ್ಯೆ ಬಂದು ನಿಂತಿತ್ತು ! ರಾಮು ಲತೆಯನ್ನು ವಿವಾಹಕ್ಕೆ ಮೊದಲು ನೋಡಿದ್ದ. ಅವ

ಳನ್ನು ಮತ್ತೆ ಕಾಣಬೇಕೆಂಬ ತವಕ ಆವನ ಜಡವಾದ ಕಣ್ಣುಗಳನ್ನು ಮೇಲಕ್ಕೆತ್ತಿತ್ತು. ಆದರೆ ಲತೆ! ತನ್ನ ಬಳೆಗಳ ಗಾಜಿನಲ್ಲಿ ರಾಮುವಿನ ಪ್ರತಿಬಿಂಬವನ್ನು ಕಾಣುವದರಲ್ಲಿದ್ದಳು. ಪುರೋಹಿತರ ಗಡಚಿಕ್ಕುವ ಮಂತ್ರಧ್ವನಿ ರಾಮುವಿನ ತಲೆನೋವನ್ನು ಇನ್ನೂ ಹೆಚ್ಚಿಸಿತು. ಕೊನೆಗೊಮ್ಮೆ ಮುಹೂರ್ತ ಬಂದು ಅಂತರಪಟವನ್ನು ದೂರ ಸರಿಸಿತು; ಅಕ್ಷತೆಗಳು ತಲೆಯನ್ನಲಂಕರಿಸಿದವು. ಜಡವಾದ ಧ್ವನಿಯಿಂದ ರಾಮು ಪುರೋಹಿತರಿಗೆ ಹೇಳಿದ:—

"ನನಗೆ ವಿಪರೀತ ತಲೆನೋವು; ಹೋಗಿ ಇದೇ ಕೋಣೆಯಲ್ಲಿ ಮಲಗಿಕೊಂಡಿರುತ್ತೇನೆ. ಅವಶ್ಯ ಬಿದ್ದರೆ ಕರೆಕಳುಹಿ."

ಪುರೋಹಿತರು ಮೌನವಾಗಿ ತಲೆ ಕೊಡಹಿ ಹೇಳಿದರು,ಹೋಗಿ;ಒಂದರ್ಧ ಗಂಟೆ ವಿಶ್ರಮಿಸಿ. ಉಳಿದುದೆಲ್ಲ ಆ ಮೇಲೆ"

ಲತೆ ಗಾಬರಿಯಿಂದ ರಾಮುವಿನ ಮುಖವನ್ನು ನೋಡಿದಳು. ಅವಳ ದೃಷ್ಟಿಯನ್ನೆದುರಿಸಿ, ರಾಮು ಹೊರಟುಹೋದನು. ಅವನ ಮುಖ ಬಾಡಿತ್ತು; ಕಣ್ಣು ಜಡವಾಗಿದ್ದವು!

ಲತೆಗೆ ಸಂಕಟವಾಯಿತು; ರಾಮುವಿನ ಬಳಿ ಹೋಗಿ. ಏನೆಂದು ವಿಚಾರಿಸಿ, ಕೊಂಚ ಆರೈಕೆ ಮಾಡಬೇಕೆಂದರೆ, ಮನಸ್ಸಿದ್ದರೂ ಧೈರ್ಯ ಸಾಲದು. ಹೇಗೋ ನುಸುಳಿಕೊಂಡು ಅವಳೂ, ರಾಮು ಮಲಗಿದ್ದ ಕೋಣೆಯ ಪಕ್ಕದ ಕೊಠಡಿಯನ್ನು ಸೇರಿದಳು. ಅವಳನ್ನು ಸುತ್ತುವರಿದು ಗೆಳತಿಯರು ಒಂದೊಂದಾಗಿ ಪ್ರಶ್ನೆ ಕೇಳುತ್ತಿದ್ದರೂ ಲತೆಯ ಲಕ್ಷ್ಯವೆಲ್ಲ ರಾಮುವಿನೆಡೆಗೆ. ಆದಾರೋ ಆ ಕೋಣೆಯಲ್ಲಿ ರಾಮುವಿನೊಡನೆ ಮಾತಾಡುತ್ತಿದ್ದರು "ಹಾಗೇ ಮಲಗಿರು; ಜ್ವರ ಏರಿದೆ, ಎದ್ದು ಅಡ್ಡಾಡಬೇಡ. ನಿನ್ನೆ ನೆಟ್ಟಗಿದ್ದವನಿಗೆ ಈವೊತ್ತು ಜ್ವರ ಬರಬೇಕೆಂದರೆ!........ ವಧುವಿನ ಕಾಲ್ಗುಣ!!" ಧ್ವನಿ ಗಡುಸಾಗಿತ್ತು!!

ಲತೆಯ ಮನಕ್ಕೆ ತೀಕ್ಷ್ಣವಾದ ಬಾಣ ನಟ್ಟಂತೆ ನೋವಾಯಿತು! ರಾಮು ಅನಿವಾರ್ಯವಾಗಿ ಮತ್ತೆ ಬಂದು ವೇದಿಕೆಯ ಮೇಲೆ ಕುಳಿತಿದ್ದ! ಊಟ ಉಪಚಾರಾದಿಗಳಲ್ಲಿ ಅವನ ಭಾಗವೇ ಇರಲಿಲ್ಲ; ವಿವಾಹದ ಇನ್ನುಳಿದ ಕಾರ್ಯಕ್ರಮಗಳೂ ಹೇಗೆ ಹೇಗೋ ಕೊನೆಗಂಡವು. ಇದ್ದೂರವರು, ದೂರಿನಿಂದ ಬಂದವರು, ಒಬ್ಬೊಬ್ಬರಾಗಿ ವಧುವಿನ ಕಾಲ್ಗುಣವನ್ನು ಶಪಿಸುತ್ತ ಮನೆಗೆ ತೆರಳಿದರು.ತೀರ ಹತ್ತಿರದ ನೆಂಟರೊಬ್ಬಿಬ್ಬರು ಮಾತ್ರ ಮನೆಯಲ್ಲುಳಿದರು. ಲತೆಯ ಮುಖವೂ ಬಾಡಿತ್ತು; ಮನೆ ತುಂಬಿಸುವದಕ್ಕೆಂದು ಹೋದ ಅವಳು, ಆ ದಿನ ರಾಮುವಿನ ಮನೆಯಲ್ಲಿಯೇ ಉಳಿದಳು. ಆದರೆ ಆವನನ್ನು ಕಂಡು ಮಾತನಾಡಲು ಮಾತ್ರ ಆವಳಿಂದಾಗಲಿಲ್ಲ! ಹಾಗೆ ಮಾತನಾಡಿದರೆ ಯಾರು ಏನೆನ್ನುವರೋ ಎಂಬ ಅಂಜಿಕೆ! ಮತ್ತೆ ತಂದೆ ತನ್ನನ್ನು ಮರಳಿ ಕರೆದುಕೊಂಡೊಯ್ದರೆ ಎಂಬ ಚಿಂತೆ ಬೇರೆ! ಲತೆ ಯೋಚಿಸಿ ಯೋಚಿಸಿ, ಕಂಗೆಟ್ಟಳು.

ಕಂಡವರು ಬಂದು ಮಾತನಾಡಿಸಿ ತೊಂದರೆಕೊಡುವರೆಂದು ಲತೆಯ ಮಾವ, ರಾಮುವನ್ನು ಅಟ್ಟದ ಮೇಲೆ ಮಲಗಿಸಿದ್ದರು. ಏನಾದರೂ ಸರಿ, ರಾಮುವನ್ನು ಕಾಣಲೇಬೇಕೆಂದು, ಮೆಟ್ಟಿಲುಗಳನ್ನೇರಿ ಬಂದೂ, ಮಾವನ ದನಿಯನ್ನು ಕೇಳಿ ಎರಡು ಸಲ ಲತೆ ಹಾಗೇ ಹೊರಟು ಹೋದಳು.

" ಎಲ್ಲರೂ ಮಲಗಿರುವಾಗ, ಮಾವ ಮಲಗಿರುವರಲ್ಲವೇ ! ಸರಿ. ಆಗ ಕಾಣುವೆ " ಲತೆ ತನ್ನ ಮನಸ್ಸಿಗೆ ತಾನೇ ಸಮಾಧಾನವನ್ನು ಹೇಳಿಕೊಂಡಳು.

ಆದರೆ ಅವಳ ಆ ಪ್ರಯತ್ನವೂ ಸಫಲವಾಗಲಿಲ್ಲ. ರಾಮುವಿನ ನರಳುವ ಧ್ವನಿ ಮಾತ್ರ ಅವಳ ಹೃದಯವನ್ನು ಇರಿಯುತ್ತಿತ್ತು !

ಬೆಳಕು ಮೂಡಿದಾಗ ನಿದ್ರೆಯಿಲ್ಲದೆ, ಯೋಚನೆಯಿಂದ ಲತೆಯ ಕಣ್ಣುಗಳು ಜಡವಾಗಿದ್ದವು. ಲತೆಯ ತಂದೆ, ರಾಮುವಿನ ಬಗ್ಗೆ ತಮ್ಮ ಸಹಾನುಭೂತಿಯನ್ನು ವ್ಯಕ್ತಮಾಡಿ ಹೊರಡುವ ಮಾತುಕತೆ ನಡೆಸಿದ್ದರು, ಅವಳ ಮಾವನೊಡನೆ, ಮನೆಯ ಮುಂಭಾಗದಲ್ಲಿ ! ಇದೇ ಸಮಯವೆಂದು ಲತೆ ಮೇಲೋಡಿದಳು. ರಾಮು ಜಂತಿಯ ಕಡೆಗೆ ದೃಷ್ಟಿಯನ್ನಿಟ್ಟು ನರಳುತ್ತ ಮಲಗಿದ್ದನು. ಅವಳನ್ನು ಕಂಡರೂ ತನ್ನ ಕಣ್ಣನ್ನು ತಾನೇ ನಂಬದಾದನು.

" ಲತಾ ಇಷ್ಟು ದಿನವೂ ನೀನು ಇಲ್ಲಿಯೇ ಇದ್ದಿಯಲ್ಲವೇ ? ಆಂ ? "

ಲತೆ ಮೌನವಾಗಿದ್ದಳು.

" ಒಂದು ಸಲವಾದರೂ ಬಂದು ಮಾತನಾಡಿಸಲಾಗಲಿಲ್ಲವೇ ? ಲತಾ ! " ರಾಮುವಿನ ಮುಖ ದೈನ್ಯದಿಂದ ತುಂಬಿತ್ತು.

ಲತೆಯ ಕಣ್ಣುಗಳಲ್ಲಿ ನೀರು ಹರಿಯುತ್ತಿತ್ತು !

" ಇಲ್ಲಿ ಬಾ, ನನ್ನ ಬಳಿಗೆ ಲತಾ, " ರಾಮು ಉಸುರಿದನು.

ಲತೆಯ ಕಾಲುಗಳು ಮುಂದೆ ನೂಕಿದವು; ಅವಳ ಕೈಯ್ಯನ್ನು ಅದುಮಿ, ತನ್ನ ಹಣೆಯ ಮೇಲಿಟ್ಟುಕೊಂಡು, ರಾಮು ಅವಳನ್ನೇ ನೋಡುತ್ತ ಕೇಳಿದನು, " ಏಕೆ ಲತಾ ? ಏಕೆ ಬರಲಿಲ್ಲ ನನ್ನ ಬಳಿ ? "

ಲತೆಯ ದುಃಖ ಉಕ್ಕಿತು, " ತಂದೆ ನನ್ನನ್ನು ಕರೆದುಕೊಂಡು ಊರಿಗೆ ಹೋಗುವರಂತೆ ! "

" ಊರಿಗೆ ಹೋಗುವಿಯಾ ಲತಾ ? ನನಗಾಗಿ ನೀನಿಲ್ಲಿರಲಾರೆಯಾ ?.... ಇರಲಾರೆಯಾ ? "

ಒಂದು ಕ್ಷಣದ ನೀರವತೆಯಲ್ಲಿ ಆದಾರೋ ಮೆಟ್ಟಿಲನ್ನೇರುತ್ತಿದ್ದಂತೆ ಭಾಸವಾಯಿತು.

" ಇರುವಿಯಲ್ಲವೇ ಲತಾ ? "

" ಹುಂ "

ರಾಮುವಿನ ಮನಸ್ಸು ಹಗುರಾಯಿತು. ಲತೆಯ ಕಣ್ಣುಗಳು ಮೆಟ್ಟಿಲಿನ

ಬಳಿ ಇಣಿಕಿ ನೋಡಿದವು. ಅವಳ ಮಾವ ! ಲತೆ ದೂರ ಸಿಡಿದು ನಿಂತಳು. ಈ ಘಟನೆಯ ಬಗ್ಗೆ ಸಂದೇಹ ಪಟ್ಟುಕೊಂಡೇ ಅವರು ಮೇಲೆ ಬಂದಿದ್ದರೇನೋ ! ಮುದುಡಿಯಾಗಿ ನಿಂತಿದ್ದ ಲತೆಯ ಕಡೆಗೊಂದು ತೀಕ್ಷ್ಣವಾದ ನೋಟವನ್ನು ಬೀರಿ, ರಾಮುವಿನತ್ತ ಹೊರಳಿ ಹೇಳಿದರು, “ ನಾಳೆ ಅವಳ ತಂದೆ ಹೋಗುತ್ತಾರೆ, ಅವರ ಜೊತೆಗೆ ಅವಳೂ ಹೋಗಿ ಬಿಡಲಿ;........ ದೊಡ್ಡ ಹುಡುಗಿ,– ಅದೇ ನಾನು ಬೇಡ ವೆಂತು ಹೇಳಿದ್ದು; ಇಲ್ಲಿದ್ದರೆ, ನಿನಗೇ ಮತ್ತೆ ತೊಂದರೆ ! ”

ರಾಮುವಿನಲ್ಲಿ ಉತ್ತರವನ್ನು ಕೊಡುವ ಶಕ್ತಿಯಿರಲಿಲ್ಲ.

ಲತೆ ಕಣ್ಣೀರನ್ನೊರಸಿಕೊಂಡು ಕೆಳಗೋಡಿದಳು.

“ ಮತ್ತೆ ನೀನು ನನ್ನೊಡನೇ ಬಂದು ಬಿಡಮ್ಮಾ, ನಿಮ್ಮ ಮಾವ ಹೇಳಿದ್ದಾರೆ, ” ಲತೆಯ ತಂದೆ ಹೇಳಿದರು.

“ ಅವರು ಜಡ್ಡಿನಿಂದ ಹಾಸಿಗೆ ಹಿಡಿದಿರುವಾಗ ಆರೈಕೆ ಮಾಡುವದನ್ನು ಬಿಟ್ಟು ನಾನು ಹೇಗೆ ಬರಲಿ, ಅಪ್ಪಾ? ಅತ್ತೆಯೊಬ್ಬರಿಗೇ ತೊಂದರೆಯಾಗುವದಿಲ್ಲವೇ? ” ಲತೆ ಮೆಲ್ಲಗೆ ಹೇಳಿದಳು.

“ ಇಷ್ಟು ದಿನ ನೀನೇ ಇದ್ದಿಯೇನೇ ? ಬಂದು ಮೂರು ದಿನವಾಗಿಲ್ಲ, ಮಾತು ನೋಡಿ ” ಒಳಗಿಂದ ಅತ್ತೆ ಕೂಗಿದರು.

ಲತೆಯ ಮನಸ್ಸಿನ ಭಾವವನ್ನರಿತು ತಂದೆ ಹೇಳಿದರು, “ ಇನ್ನೂ ನಾಲ್ಕು ದಿನ ಬಿಟ್ಟು ಮತ್ತೆ ಬರುತ್ತೇನಮ್ಮಾ, ಆಗ ಕರೆದುಕೊಂಡು ಹೋಗುತ್ತೇನೆ ” ಲತೆಯ ಮನಸ್ಸು ಕೊಂಚ ಸಮಾಧಾನಗೊಂಡಿತು; ಅವಳ ಮಾವನಿಗೂ ಹೇಳಿ ಲತೆಯ ತಂದೆ ಹೊರಟು ಹೋದರು.

ಲತೆಯನ್ನು ಕಂಡರೆ ಅತ್ತೆ, ಮಾವ ಇಬ್ಬರೂ ಸಿಡಿಮಿಡಿಗೊಳ್ಳುವರು, ಆದರೆ ವಧುವಿನ ಕಾಲ್ಗುಣ ! ಮರುದಿನ ಅದೇಕೊ ಮಾವನಿಗೆ ಮೈಯಲ್ಲಿ ಸರಿಯಾಗಿರಲಿಲ್ಲ; ಅದೇ ಕೋಣೆಯಲ್ಲಿ ರಾಮುವಿನ ಪಕ್ಕಕ್ಕೆ ಅವರೂ ಒಂದು ಹಾಸಿಗೆಯನ್ನು ಹಿಡಿದರು. ರಾಮುವಿನ ಬಳಿ ಕದ್ದು ಬರುತ್ತಿದ್ದ ಲತೆಗೆ ಈಗ ಅದೂ ಬಾರದಾಯಿತು. ಮಾವ ನಿದ್ರೆಯಲ್ಲಿದ್ದಾರೆಂದು, ಅಪ್ಪಿ ತಪ್ಪಿ ಹೋದರೆ,ಅವರ ಕೋಪಕ್ಕೆ ಪಾತ್ರಳಾಗಬೇಕಾಗುತ್ತಿತ್ತು. ಅವಳ ಸ್ಥಿತಿಯನ್ನರಿತ ರಾಮು ಮಾತ್ರ ಒಳಗೊಳಗೇ ಮಿಡಿಯುತ್ತಿದ್ದನು !

ಅಂದು ಮಧ್ಯಾಹ್ನ ಅತ್ತೆ, ಹಣ್ಣಿನ ರಸ ಕೊಡಲು ಲತೆಯನ್ನೇ ಮೇಲೆ ಕಳಿಸಿದರು. ಲತೆ ಕೊಡಲು ಹೋದಾಗ ಮಾವ ಮುಖ ತಿರುವಿದರು; ಮಾವ ಬಿಟ್ಟರೆ ಬಿಡಲಿ, ಎಂದು ರಾಮುವಿಗೆ ರಸ ಕೊಡುವ ಧೈರ್ಯ ಅವಳಿಗಾಗಲಿಲ್ಲ ! ಹಾಗೇ ಅಳುತ್ತ ಹೊರಟು ಬಂದಳು.

ಅತ್ತೆ ಜ್ವರ ನೋಡಿ ಬರಲು ಮೇಲೆ ಹೋದಾಗ ಮಾವ ಕೇಳಿದರು.

“ ನಿನಗೆ ಬರಲು ವೇಳೆ ಇರುವದಿಲ್ಲವೇ ? ಅವಳನ್ನೇಕೆ ಕಳಿಸುತ್ತೀ ? ”

“ ಇಬ್ಬರೂ ಮಲಗಿ ಬಿಟ್ಟಿದ್ದೀರಿ, ಮನೆಯ ಕೆಲಸವನ್ನೆಲ್ಲ ನಾನೇ ನೋಡಿಕೊಳ್ಳಬೇಕು, ಅವಳೂ ಸ್ವಲ್ಪ ಮಾಡಲಿ, ಎಂದು ಕಳಿಸಿದೆ. ”

“ ನಿನಗೆ ಕೆಲಸವಾಗದಿದ್ದರೆ ಆಳಿಡು, ಆದರೆ ಅವಳನ್ನು ಮಾತ್ರ ನನೆದುರು ಕಳಿಸಬೇಡ. ” ಅತ್ತೆ ಒಟಗುಟ್ಟುತ್ತ ಇಳಿದು ಬಂದರು.

* * * *

ಮರುದಿನ ಪತಿಯ ಜ್ವರವನ್ನು ಅಳೆಯುಲು ಹೋಗಿದ್ದ ಅತ್ತೆಯ ಕೈಯ್ಯಿಂದ ಥರ್ಮಾಮಿಟರ ಜಾರಿ ನೆಲಕ್ಕೆ ಬಿದ್ದು ‘ ಎರಡು ತುಂಡಾಯಿತು ! ಮಾವ ಕಿಡಿಗಣ್ಣಿನಿಂದ ಅವರನ್ನು ನೋಡಿದರು;ರಾಮುವಿಗೆ ಹಣ್ಣಿನ ರಸಕೊಡಲು ಹೋದಾಗ, ಗ್ಲಾಸು ಅವರ ಕೈಯ್ಯಿಂದ ತಪ್ಪಿಸಿಕೊಂಡು ನೆಲಕ್ಕುರುಳಿತು. ಮೃದುವಾಗಿ ತಲೆಯೊತ್ತಲು ಹೇಳಿದರೆ, ಅತ್ತೆ ತೂಕಡಿಸಲಾರಂಭಿಸಿದರು. ಮಾವನಿಗೂ ಕೊಂಚ ಬೇಸರವಾಯಿತು. ರಾಮು ಮಾತ್ರ ಎಲ್ಲದಕ್ಕೂ ಮೌನವಾಗಿಯೇ ಇದ್ದನು!

× × × × × ×

ಮತ್ತೊಂದು ಸಲ ಕೊಳೆಯಾದ ಬಟ್ಟೆಗಳನ್ನೆಲ್ಲ ತೆಗೆದುಕೊಂಡು ಹೋಗಲು, ಅತ್ತೆಯ ಹೇಳಿಕೆಯ ಮೇರೆಗೆ ಲತೆ ಮೇಲೆ ಹೋಗಿದ್ದಳು. ಮಾವ ಕುರ್ಚಿಯ ಮೇಲೆ ಕುಳಿತವರು ಅಲ್ಲಿಯೇ ತೂಕಡಿಸುತ್ತಿದ್ದರು. ಲತೆ ರಾಮುವಿನ ಬಳಿ ಹೋಗಿ ಮೆತ್ತಗೆ ಅವನ ಹಣೆಯ ಮೇಲೆ ಕೈಯಿಟ್ಟಳು. ರಾಮು ಕಣ್ದೆರೆದು ನೋಡಿ, ಅವಳ ಕೈಯನ್ನು ಮುತ್ತಿಟ್ಟನು.

ಲತೆ ಈಚೆಗೆ ಹೊರಳಿ ಮಾವನ ಹಾಸಿಗೆಯ ಮೇಲಿನ ಕೊಳೆಯಾದ ಬಟ್ಟೆಗಳನ್ನೆಲ್ಲ ತೆಗೆದು ಒಟ್ಟುಗೂಡಿಸಿ, ಶುಭ್ರವಾದ ಬಟ್ಟೆಯನ್ನು ಹಾಸಿದಳು. ಆಚೆ–ಈಚೆ ಹರಡಿದ ಸಾಮಾನುಗಳನ್ನು ಅಂದವಾಗಿರಿಸಿದಳು. ಮಾವ ಕಣ್ಣರಳಿಸಿ ನೋಡಿ ಹೇಳಿದರು, “ ಥರ್ಮಾಮಿಟರ ತಾರಮ್ಮ, ಇಲ್ಲಿ, ಜ್ವರ ನೋಡೋಣ. ”

ಲತೆ ಎತ್ತಿಕೊಟ್ಟು ಮತ್ತೆ ಜ್ವರವನ್ನು ನೋಡಿದಳು; ೧೦೩ ಡಿಗ್ರಿ ಜ್ವರವಿತ್ತು! ಮಾವ ಮಲಗಿದಾಗ ಮೆಲ್ಲಗೆ ಕಾಲೊತ್ತಿದಳು. ಅವರು ಮೌನವಾಗಿಯೇ ಇದ್ದರು. ಹಣೆಗೆ ತಣ್ಣೀರಿನ ಪಟ್ಟಿ ಹಾಕಿದಳು. ಕೃತಜ್ಞತೆಯಿಂದ ಕಣ್ಣು ಬಿಟ್ಟು ಅವಳೆಡೆಗೆ ನೋಡಿದರು. ಲತೆಗೆ ತಾನು ಕೃತಾರ್ಥಳೆನಿಸಿತು!

ಮರುದಿನದಿಂದ ಅವರಿಬ್ಬರ ಆರೈಕೆ ಲತೆಗೇ ಸೇರಿದ ವಿಷಯವಾಗಿಬಿಟ್ಟಿತು. ನಾಲ್ಕು ದಿನಗಳ ನಂತರ ಅವಳ ತಂದೆ ಬಂದಿದ್ದರೂ, ಮನೆಯ ಪರಿಸ್ಥಿತಿಯನ್ನು ನೋಡಿ ಹಾಗೇ ಹೊರಟು ಹೋದರು.

ಇದೀಗ ರಾಮುವಿಗೆ ಸ್ವಲ್ಪ ಗುಣವಾಗಿತ್ತು. ಮನೆಯಲ್ಲಿ ಅತ್ತಿತ್ತ ಎದ್ದು ಓಡ್ಡಾಡುತ್ತಿದ್ದನು ಬಂದ ಹೊಸತರಲ್ಲಿಯೇ ಲತೆಯು ಮಾಡುವ ಕೆಲಸಗಳನ್ನು ನೋಡಿ ಅವನಿಗೂ ಮರುಕವೆನಿಸಿತು. ಅವಳು ಮಾಡುವ ತಂದೆಯ ಶುಶ್ರೂಷೆಯಲ್ಲಿ ತಾನೂ ನೆರವಾಗಬೇಕೆಂದು ಆಶಿಸುತ್ತಿದ್ದನು. ಅವಳ ಸೇವೆಯಿಂದಾಗಿ ಮಾವನಿಗೂ ಗುಣವಾಗತೊಡಗಿತ್ತು.

ಒಂದು ಸಲ ಲತೆ ಕಸಗುಡಿಸಲು ಮೇಲೆ ಹೋದಾಗ ರಾಮು ಅಲ್ಲಿರಲಿಲ್ಲ. ಮಾವ ಎದ್ದು ಕುಳಿತು, ಲತೆಯನ್ನೇ ನಟ್ಟದೃಷ್ಟಿಯಿಂದ ನೋಡುತ್ತಿದ್ದರು.

"ಲತಾ, ಆ ಪಂಜೆ ತಾರಮ್ಮಾ ಇಲ್ಲಿ," ಮೆಲ್ಲಗೆ ಹೇಳಿದರು. ಲತೆ ಪಂಜೆ ಕೊಡಲು ಹೋದಾಗ, ಅವಳ ಕೈಯನ್ನು ಹಿಡಿದು ಮುತ್ತಿಟ್ಟರು! ಲತೆಗೆ ಏನೂ ಅರ್ಥವಾಗಲಿಲ್ಲ. ಕೂಗಿದರೆ ಅನರ್ಥವಾದೀತೆಂದು ಹಾಗೇ ಸಹಿಸಿಕೊಂಡಳು. ಮಾವ ಅವಳನ್ನು ಮತ್ತೆ ಹತ್ತಿರ ಸೆಳೆದು, ಆಚೆ ಈಚೆ ನೋಡಿ, ಅವಳ ನೈದಡವಿ, ತಲೆಯನ್ನು ಆಘ್ರಾಣಿಸಿದರು. ಲತೆಯ ಮುಖ ಮ್ಲಾನವಾಗಿತ್ತು. ಅವರಿಂದ ಬಿಡಿಸಿಕೊಂಡು ಕೆಳಗೆ ಹೋಗಬೇಕಾದರೆ ಸಾಕು ಬೇಕಾಯಿತು.

ಕೋಣೆಯಲ್ಲಿ ಇನ್ನುಳಿದ ಕಸವನ್ನು ರಾಮು ಮೇಲೆ ಬಂದ ಮೇಲೆಯೇ ಗುಡಿಸಲಾಯಿತು.

ಮತ್ತೆ ಆ ಸಂಜೆ ಲತೆಯನ್ನು ಕೂಗಿ ಅತ್ತೆ ಹೇಳಿದರು," ಹಾಲು ಕಾಯಿಸಿದ್ದೇನಮ್ಮಾ, ಕೊಟ್ಟು ಬಾ ಮೇಲೆ"

ಲತೆಗೆ ಏನೂ ತೋಚದಾಯಿತು. ಯಾರೆದುರು ಯಾರನ್ನು ದೂರಬೇಕವಳು? ಮೇಲೆ ಇಟ್ಟುಬಿಟ್ಟು ಇಳಿದು ಬಂದರಾಯಿತೆಂದು ಅನಿವಾರ್ಯವಾಗಿ ಒಪ್ಪಿಕೊಂಡಳು. ಲತೆ ಮೇಲೆ ಹೋಗಿರಬೇಕು, ಅಷ್ಟರಲ್ಲಿಯೇ ಅತ್ತೆ ನೆನೆದುಕೊಂಡು ಹೇಳಿದರು,

"ರಾಮು, ಸಕ್ಕರೆಯನ್ನೇ ಹಾಕಲು ಮರೆತು ಹೋಯಿತು, ಹೋಗಿ ಕೊಟ್ಟು ಬಾಪ್ಪಾ" ರಾಮು ಸಕ್ಕರೆಯ ಪಾತ್ರೆಯನ್ನು ಮೇಲೆ ಒಯ್ಯುವಷ್ಟರಲ್ಲಿಯೇ ಕಿಟಕಿಯಿಂದ ದೃಶ್ಯ ಕಾಣಿಸಿತು. ಮಾವ ಹಿಡಿದ ಕೈಯನ್ನು ಬಿಡಿಸಿಕೊಳ್ಳಲು ಲತೆ ಪ್ರಯತ್ನಿಸುತ್ತಿದ್ದಾಳೆ! ಅವಳ ಕಣ್ಣಿನಲ್ಲಿ ನೀರೂರಿದೆ. ಅದನ್ನು ನೋಡಲಾರದೆ, ಒಂದು ಹೆಜ್ಜೆ ಮುಂದೆ ಇಟ್ಟು ರಾಮು ಕೂಗಿದನು, "ಲತಾ."

ಲತೆ, ಕೈಬಿಡಿಸಿಕೊಂಡು ಓಡಿದವಳೇ ರಾಮುವನ್ನು ಬಿಗಿಯಾಗಿ ಅಪ್ಪಿ, ಮುಖವನ್ನು ಮುಚ್ಚಿಕೊಂಡು ಅಳತೊಡಗಿದಳು. ರಾಮು ಅವಳನ್ನು ಸರಿಸುತ್ತ, "ಹೀಗೇಕೆ? ಹಾಲಿಗೆ ಸಕ್ಕರೆಯನ್ನೇ ಮರೆತು ಬಂದಿಯಂತೆ," ಎಂದು ಹೇಳಿ ಮಾತು ಮರೆಯಿಸಲೆಳಸಿದನು. ಮಾವನೂ ದನಿಗೂಡಿಸಿದರು, "ಇನ್ನೂ ಚಿಕ್ಕವಳು, ಮರೆತಿರಬೇಕು, ಮರೆತರೇನಾಯಿತಮ್ಮಾ ಅಳಬೇಡ."

* * * * * *

ತಾಯಿತಂದೆಗಳಿಬ್ಬರೂ ಕುಳಿತಿದ್ದಾಗ ಮರುದಿನ ರಾಮೂ ಹೇಳಿದ,

"ಈ ಮನೆ ಆಫೀಸಿಗೆ ಬಹಳ ದೂರಾಗುತ್ತದಮ್ಮ. ನಡೆದು ಹೋಗುವದೆಂದರೆ ನನಗೂ ತುಂಬಾ ದಣಿವು. ಅದಕ್ಕೆಂದು ಅಲ್ಲಿಯೇ ಒಂದು ಮನೆ ಬಾಡಿಗೆಗೆ ತೆಗೆದುಕೊಂಡಿದ್ದೇನೆ."

"ಇಷ್ಟುದಿನವೂ ಇಲ್ಲಿಯೇ ಇದ್ದೆ ಈಗ ಅವಳೇನಾದರೂ ಕಿವಿ ಚುಚ್ಚಿ

ದಳೋ ಏನು ? ಇದ್ದರಿರಲಿ, ಇನ್ನೂ ಚಿಕ್ಕವಳು ಅವಳಿಗೇನು ತಿಳಿಯುತ್ತೆ ? ” ಅತ್ತೆ ರಾಗ ಎಳೆದರು.

ಮಾವ ಮೌನದಿಂದಲೇ ತಮ್ಮ ಸಮ್ಮತಿಯನ್ನು ಸೂಚಿಸಿದರು !

† † † † †

ಮರುದಿನ ರಾಮೂ ತನ್ನ ಪತ್ನಿಯೊಡನೆ ಬೇರೆ ಬಿಡಾರ ಮಾಡಿದಾಗ ಜನರೆಲ್ಲ ಕೂಗಿದರು, “ ನೆಮ್ಮದಿಯಾಗಿದ್ದ ಒಂದು ಮನೆ ಒಡೆದು ಎರಡಾಯಿತು, ವಧುವಿನ ಕಾಲ್ಗುಣ ! ”



# ಗ್ರಹಗಳು ಮತ್ತು ಮನುಷ್ಯನ ಮೇಲೆ ಅವುಗಳ ಪರಿಣಾಮ

**ಲೇಖಾಂಕ ೩.**

ಲೇ:— ಶ್ರೀ ಹುಚ್ಚಪ್ಪ.

**ವೃಷಭ ರಾಶಿ:—** ಪೃಥ್ವೀ ತತ್ವದ ಮುಖ್ಯ ರಾಶಿ, ಗುಪ್ತ ಇಡುವ ಶಕ್ತಿ. ಐಶ್ವರ್ಯ, ಜ್ಞಾನ ಮುಂತಾದವುಗಳಲ್ಲಿ ಗುಪ್ತ ಇಡುವ ಸಾಮರ್ಥ್ಯವುಳ್ಳದ್ದು, ಸಂಕಲ್ಪಶಕ್ತಿ ದೊಡ್ಡದು ಈ ಗುಣಗಳನ್ನು ಪೋಷಿಸುವ ಶಕ್ತಿ ಇದರಲ್ಲಿರುತ್ತದೆ. ಈ ರಾಶಿಯವರನ್ನು ಗೆಲ್ಲುವದು ಬಹಳ ಕಷ್ಟದ್ದು. ಇವರು ನಿರ್ಭಯ ಮತ್ತು ಮಾಯಾಳು ಇರುವರು. ಇವರನ್ನು ಕೆಣಕದೇ ಇರುವವರಿಗೆ ಇವರು ಬಹಳ ಉದಾರರು ಮತ್ತು ದೊಡ್ಡ ಮನಸ್ಸಿನವರು ಪರೋಪಕಾರಿಗಳು. ಮತ್ತು ಮನುಷ್ಯ ಜಾತಿಯ ಕಲ್ಯಾಣವನ್ನು ಶಕ್ಯವಿದ್ದಷ್ಟು ಮಾಡುವವರು. ಇದಕ್ಕೂ ಹೆಚ್ಚು ಕಲ್ಯಾಣ ಆಗದೇ ಇದ್ದ ಪ್ರಸಂಗದಲ್ಲಿ ಮನಸ್ಸಿನಲ್ಲಿ ಬಹಳ ಕೊರಗುವರು. ದ್ರವ್ಯಸಂಚಯ ಮಾಡುವ ಇಚ್ಛೆಯು ಇವರಲ್ಲಿ ಇರುವದಿಲ್ಲ. ಮನುಸ್ಸು ಏಕಾಗ್ರ ಮಾಡುವದರಲ್ಲಿ ಬಹಳ ಸಾಮರ್ಥ್ಯವುಳ್ಳವರು. ಆಧ್ಯಾತ್ಮಿಕ ಶಾಸ್ತ್ರದ ಅಭ್ಯಾಸವು ಬಹಳ ಕಲ್ಯಾಣ ಕಾರಕವಾಗುವದು. ಇವರು, ಮನಸ್ಸಿನಲ್ಲಿ ಹುಟ್ಟುತಕ್ಕಂಥ ಉದ್ರೇಕಗಳನ್ನು ಮತ್ತು ವಿಕಾರಗಳನ್ನು ಹಿಡಿತದಲ್ಲಿ ಇಟ್ಟುಕೊಂಡಲ್ಲಿ ಸಹಜವಾಗಿ ಅಭ್ಯುದಯವನ್ನು ಹೊಂದಲು ಶಕ್ತರಾಗುವರು. ಹೊರಗಿನ ಸಂಗತಿಗಳ ಕಡೆಗೆ ಇವರ ಲಕ್ಷ್ಯವು ಮಿತಿ ಮೀರಿ ಹತ್ತುವದು. ವಿಷಯ ಸುಖದಲ್ಲಿಯೇ ಮನಸ್ಸು ವ್ಯಗ್ರವಾಗುವದು. ವಿವಿಧ ವಿಷಯಗಳ ಬಯಕೆಯಂತೆ ನಡೆಯುವ ಪ್ರವೃತ್ತಿಯಿಂದ ಇವರು ಆಗಾಗ್ಗೆ ದೊಡ್ಡ ದುಃಖಕ್ಕೆ ಈಡಾಗುವರು. ಇವರು ಉತ್ತಮ ಲೇಖಕರ ಮತ್ತು ಹತ್ತಿರದ ಸಂಬಂಧಿಕರೊಡನೆ ಅಥವಾ ಮಿತ್ರರೊಡನೆ ಸಹಕರಿಸಲು ತುಂಬ ಶಕ್ತರಲ್ಲ. ಇವರನ್ನು

ಶತ್ರುಗಳನ್ನಾಗಿ ಮಾಡಿಕೊಳ್ಳುವದು ಬಹಳ ಭಯದಾಯಕವಾಗಿರುತ್ತದೆ. ಇವರು ನಿರೋಗಿ, ತುಂಬಿದ ಮುಖವುಳ್ಳವರು. ತೇಜಸ್ವಿಯರಾಗಿರುತ್ತಾರೆ, ಮಕರ ಮತ್ತು ತುಲಾ ರಾಶಿಯವರ ಕೂಡ ಗೆಳೆತನ ಬಹಳ ಅನುಕೂಲ ಮತ್ತು ಬಹಳ ಬೇಗನೆ ಆಗುವಂಥದು, ವೃಷಭ ರಾಶಿಯುವರನ್ನು ಅಜ್ಞಾನ ಮತ್ತು ಅಶಿಕ್ಷಿತ ಜನ ರೊಡನೆ ಇರಗೊಡುವದೆಂದರೆ ಅವರ ನಾಶವೇ ಸರಿ. ಇವರು ಸಿಟ್ಟಿಗೆದ್ದಾಗ ಅವ ರಿಂದ ದೂರವಿರುವದು ಒಳ್ಳೆಯದು. ವಿಕಾರದ ಸಂಯಮನ ಮಾಡದ ವಿನಃ ಕೈಕೊಂಡ ಕೆಲಸ ಮಾಡುವದರಲ್ಲಿ ಇವರು ಬಹಳ ನಿರ್ದಯರು ಮತ್ತು ಸ್ವಾರ್ಥಿ ಗಳು ಸ್ವಂತ ವಿಚಾರಗಳೇ ಯಾವಾಗಲೂ ಸರ್ವೋತ್ತಮವೆಂದು ತಿಳಿಯುವವರು. ಇಲ್ಲದ ಕಾರಭಾರ ಮಾಡುವದು ಇವರಿಗೆ ಸೇರುವದು. ಅತಿಕ್ರಮಣ ಮಾಡುವ ರಭಸಿನ ಸ್ವಭಾವ. ಉತಾವಳಿ ಸ್ವಭಾವ, ಸಿಟ್ಟಿನವರು. ತಮ್ಮದು ನಡೆಯದೇ ಇದ್ದಾಗ ಹೊಡೆದಾಟಮಾಡುವವರು,ನಮ್ರುತನ ಸಭ್ಯತನ ಆತ್ಮ ಸಂಯಮನ ಮುಂ ತಾದ ಉಚ್ಚ ಶಕ್ತಿಗಳ ವಿಕಾಸ ಮಾಡುವವರಲ್ಲಿ ಅವಿಶ್ರಾಂತ ಶ್ರಮ ಪಡುವದೇ ಈ ದುಷ್ಟಗುಣಗಳನ್ನು ಹೊಡೆದುಹಾಕಲು ಸಹಾಯವಾಗುವದು.ಮಾನಸಿಕ ವ್ಯಥೆ,ಹೃದ ಯದ ವ್ಯಾಧಿ, ಜಲೋದರ ಮುಂ. ರೋಗಗಳು ಅಂಟಿಕೊಳ್ಳುತ್ತವೆ. ಅತಿಶಯ ಹುಮ್ಮಸತನದಿಂದ ವಿಷಯೋನ್ಮತ್ತರಾಗುವದರಿಂದ ವಿವಿಧ ತೆರವಾದ ವ್ಯಾಧಿಗಳನ್ನು ಅನುಭವಿಸಬೇಕಾಗುತ್ತದೆ. ತಿನಸು ತಿಂಡಿಗಳಲ್ಲಿ ಎಚ್ಚರಿಕೆ, ನಿರಂತರ ಮೌನ ಅದ ರಂತೆ ಧೈರ್ಯ ತಾಳುವದು ಅಗತ್ಯವಿದೆ. ಇಂದ್ರಿಯ ಮತ್ತು ಮನಸ್ಸನ್ನು ತಮ್ಮ ಅಂಕಿತದಲ್ಲಿ ಇಡದೆ ಇರುವದರಿಂದ ಇವರು ತಮ್ಮ ಮೇಲೆ ಭಯಂಕರ ಸಂಕಟ ಗಳನ್ನು ತಂದೊಡ್ಡಿಕೊಳ್ಳುವ ಸಂಭವವಿದೆ. ಏಕಾಂತದಲ್ಲಿ ಬಹಳ ವೇಳೆಯ ತನಕ ಇರುವದರಿಂದ ತಮ್ಮ ಹಾಗೂ ಪರಕೀಯರ ಹಿತದ ಸಂಬಂಧವಾಗಿ ಎಷ್ಟೋ ವಿಚಾರಗಳು ಸ್ಫುರಣ ಹೊಂದುವವು. ಸಿಟ್ಟು ಮತ್ತು ಈರ್ಷೆಯಿಂದ ಬಹಳ ದೂರ ವಿರಬೇಕು. ಇಲ್ಲವಾದರೆ ಬಹಳ ವ್ಯಾಧಿಗಳು ಬಂದು ಸಾಯುವ ಪ್ರಸಂಗವು ಬರ ಬಹುದು ಈ ರಾಶಿಯ ಹೆಣ್ಣುಮಕ್ಕಳು ಎರಡನೆಯವರ ಮುಖಸ್ತುತಿಯಿಂದಾಗಲಿ ಅಥವಾ ಹಚ್ಚಿಕೊಂಡಂತೆ ತೋರಿಸುವದರಿಂದಾಗಲಿ ಅಡ್ಡಮಾರ್ಗ ಹಿಡಿಯುವ ಸಂಭವವುಂಟು. ಕಾರಣ ಎಚ್ಚರ ಎಲ್ಲ ತರದ ಉತ್ತೇಜಕ ಮತ್ತು ಮಾದಕ ಪದಾರ್ಥಗಳ ಸೇವನೆಯು ಬಹಳ ಘಾತುಕವಿರುತ್ತದೆ. ಮಕರ ರಾಶಿಯವರ ಕೂಡ ಇವರ ಲಗ್ನವಾಗುವದು. ಹಿತಕರ, ಪ್ರಜಾ ನಿರೋಗಿ ಮತ್ತು ಸುಧೃಢವಾಗುವದು. ತುಲಾರಾಶಿಯವರೊಡನೆ ಲಗ್ನವಾದಲ್ಲಿ ಮೇಲಿನ ತರ ಗತಿಗಿಂತ ಕಡಿಮೆಯತರದ ಮಕ್ಕಳಾಗಬಹುದು. ಅವರು ಬಹಳ ಬುದ್ಧಿವಾನರಾ ಗುವರು. ವೃಷಭವು ವೃಷಭರಾಶಿಯೊಡನೆ ಲಗ್ನವಾದರೆ ಅವರಿಂದಾಗುವ ಪ್ರಜೆಯು ಬಹಳ ದಿವಸ ಬದುಕುವದಿಲ್ಲ. ಕ್ವಚಿತವೇ ಗೃಹಸ್ಥಾಶ್ರಮದ ಸುಖ ತೆಗೆದುಕೊಳ್ಳು ವವರು ಸಿಗುತ್ತಾರೆ. ಈ ರಾಶಿಯ ಮಕ್ಕಳು ಅಹಂಭಾವಿ, ಮತ್ತು ಬೇಕಾದಂತಹ ಹೊಣೆಗಾರಿಕೆಯ ಕೆಲಸವನ್ನು ಸ್ವತಃ ಮಾಡುವವರಿರುತ್ತಾರೆ. ಸಹನಶಕ್ತಿ ಉಳ್ಳವರು.

ಸ್ವಭಾವತಃ ಯಶಸ್ವಿಗಳಾಗುತ್ತಾರೆ. ಸ್ವತಃ ತಮ್ಮವಯಸ್ಸಿನ ಗೆಳೆಯಗೆಳತಿಯರ ಅನುಕರಣ ಕೂಡಲೇ ಮಾಡುತ್ತಾರೆ. ಆದ್ದರಿಂದ ಈ ವಿಷಯದಲ್ಲಿ ಅವರ ಮೇಲೆ ಮುದ್ದಾಂ ಹೆಚ್ಚು ಲಕ್ಷವಿಡುವದು ಅಗತ್ಯವಿದೆ ಮಕ್ಕಳು ಬಹಳ ಹಠ ಮಾರಿಗಳಿರುತ್ತಾರೆ. ಪ್ರೇಮದಿಂದಲೇ ಕೂಡಲೇ ವಶರಾಗುತ್ತಾರೆ. ಸಿಟ್ಟಿನಿಂದ ವಶಪಡಿಸಿಕೊಳ್ಳುವದು ಬಹಳ ನಷ್ಟದಾಯಕವಿರುತ್ತದೆ. ಆದರಿಂದ ಹತ್ತು ಪಟ್ಟು ಹೆಚ್ಚಿಗೆ ಕೆಡುತ್ತಾರೆ ತಾಯ್ತಂದೆಯರು ಅವರ ಮನಬಂದಂತೆ ವರ್ತ ನಕ್ಕೆ ಬಗ್ಗಕೂಡದು. ಮತ್ತು ಅವರೊಡನೆ ಅತ್ಯಂತ ಶಾಂತ, ಸ್ವಸ್ಥ, ಗಂಭೀರ ವೃತ್ತಿಯಿಂದಿರಬೇಕು. ನುಡಿಯಲ್ಲಾಗಲೀ, ಕಣ್ಣಿನಿಂದಾಗಲೀ ಸ್ವಲ್ಪ ಸಹ ಸಿಟ್ಟು ತೋರಿಸಕೂಡದು. ಶಾಂತ ಮತ್ತು ದೃಢನಿಶ್ಚಯವುಳ್ಳ ತಾಯ್ತಂದೆಗಳ ಬಗ್ಗೆ ಈ ರಾಶಿಯ, ಬಾಲ ಬಾಲಿಕೆಯರಿಗೆ ಬಹಳ ಅಭಿಮಾನವೆನಿಸುವದು. ಮನ ದಲ್ಲೇ ಅವರ ಪ್ರಶಂಸೆ ಮಾಡುವರು. ಇವರು ಬಹಳೇ ಸ್ವಾರ್ಥಿಗಳಿರುವರು. ಅಡ್ಡದಾರಿ ಹತ್ತುವವರು. ಮಿತಾಹಾರಿಗಳಾಗಲು ಕಲಿಸಬೇಕು. ಅಮಿತಾಹಾರ ದಿಂದ ಯೋಗ್ಯ ವಯಸ್ಸಾಗುವ ಪೂರ್ವದಲ್ಲೇ ಕಾಮವಿಕಾರಗಳು ಉತ್ಪನ್ನವಾಗಿ ಬಹಳ ನಷ್ಟ ಉಂಟಾಗುವದು. ಘಾತುಕತನದಿಂದ ನಡಿಯುವ ಪ್ರವೃತ್ತಿ ಇವ ರಲ್ಲುಂಟು. ಇವರನ್ನು ಮನಬಂದಂತೆ ನಡೆಯಗೊಟ್ಟರೆ ಇವರು ಯಾವಾಗಲೂ ಭಯೋತ್ಪಾದಕ ಕೆಲಸಕ್ಕೆ ಕಾರಣರಾಗುವರು. ತಮ್ಮ ಬಯಕೆಗಳನ್ನು ಪೂರ್ಣ ಮಾಡಿಕೊಳ್ಳಲು ಅಸತ್ಯರೂಪಿಶಸ್ತ್ರದ ಉಪಯೋಗವನ್ನು ಅಖಂಡವಾಗಿ ಮಾಡಿ ಕೊಳ್ಳುವರು. ಬೇರೆಯವರ ಆಸ್ತಿಯನ್ನು ಅಪಹರಿಸುವದೇ ಇವರ ಶೀಲವಾಗಿರು ವದು. ಆದ್ದರಿಂದ ಇವರ ಮೇಲೆ ಪ್ರೇಮದಿಂದಲೇ ಬಹಳ ಲಕ್ಷವಿಡುವದು ತುಂಬಾ ಅಗತ್ಯವಿದೆ. ಹೀಗೆ ಮಾಡಿದಲ್ಲಿ ಅವರು ಅತ್ಯಂತ ಉದ್ಧಟರೂ ಮತ್ತು ಪೀಡಕರೂ ಆಗುವರು. ಮೇಷ ಮತ್ತು ವೃಷಭ ರಾಶಿಗಳ ಸಂಧಿಯ ಸಮಯದಲ್ಲಿ ಹುಟ್ಟಿದವರು ತಂತಮ್ಮ ಉದ್ಯೋಗದಲ್ಲಿ ಹೆಚ್ಚು ಮನಸ್ಸು ಹಾಕಿದಲ್ಲಿ ಅಸಾಧಾರಣ ಶಕ್ತಿಯನ್ನು ತೋರಿಸುವರು. ಇವರು ದೇಹದಿಂದ ಅಷ್ಟು ಸದೃಢರಲ್ಲ. ಆದರೂ ಇವರು ಬಹಳ ಹಠಮಾರಿ ಮತ್ತು ದೃಢಸ್ವಭಾವದವರೂ ಇರುವದರಿಂದ ಕೆಲಸವನ್ನು ಚನ್ನಾಗಿ ನೀಗಿಸುವರು. ಯಶದೊರಕಿಸುವದರಲ್ಲಿ ಎಂದೂ ಹಿಂದೆ ಬೀಳಬಾರದೆಂಬ ನಿಶ್ಚಯದಿಂದ, ಹೋರಾಡಲು ಹಿಂಜರಿಯದೆ ಇದ್ದದರಿಂದ ನಾಲ್ಕು ಕೋಡುಳ್ಳ ರಾಶಿಯವರೆಂದು ಅನ್ನುತ್ತಾರೆ. ಇವರು ಆಡಿನಂತೆ ನಿರ್ಭಯರೂ, ಉದ್ಯೋಗಿಗಳೂ, ವೃಷಭದಂತೆ ನಿರ್ಭಯರೂ, ಅಧಿಕಾರ ಆಕ್ರಮಣ ಮಾಡುವವರೂ ಇರುತ್ತಾರೆ. ಈ ಸಂಧಿ ಸಮಯದಲ್ಲಿ ಹುಟ್ಟಿದ ಮನುಷ್ಯರು ಒಂದೇ ತತ್ವ ನಂಬುವವರು ಅಂದರೆ ತಮ್ಮ ಸಲಹೆಯಂತೆಯೇ ಎಲ್ಲರೂ ನಡೆಯಬೇಕೆಂಬ ಮತ್ತು ತಮ್ಮ ಸಲಹೆಯನ್ನೇ ಕೇಳಬೇಕೆಂಬ ಹಠಉಳ್ಳವರಿರುವರು. ಬಹಳ ಶಕ್ತಿವಾನರಿರುವರು. ಎರಡನೇ ಯವರ ಮೇಲೆ ಛಾಪಕೆಡುಹುವಂತಹ ಆಶ್ಚರ್ಯಕಾರಕ ಶಕ್ತಿಯುಳ್ಳವರಿರುತ್ತಾರೆ.

ಹೆಚ್ಚಿಗೆ ಹೆಚ್ಚು ಉಚ್ಚಶಿಖರವನ್ನು ಮುಟ್ಟುವ ಪ್ರವೃತ್ತಿ ಉಳ್ಳವರಿರುವದರಿಂದ ದುರಾಚಾರದ ಮಡುವಿನಲ್ಲಿ ಬೀಳಲು ಹಿಂಜರಿಯುವದಿಲ್ಲ. ವಿಚಾರದಲ್ಲಿ ಕ್ರಾಂತಿ ಹುಟ್ಟಿಸುವ ಶಕ್ತಿಯುಳ್ಳಂತೆ ಅವರಲ್ಲಿ ವ್ಯಾಧಿನಿವಾರಕ ಶಕ್ತಿಯಾದರೂ ಅತ್ಯಂತ ಇರುತ್ತದೆ. ಮಕ್ಕಳ ಮೇಲೆ ಇವರಿಗೆ ಬಹಳ ಪ್ರೇಮ. ಈ ರಾಶಿಯ ಜನರಿಗೆ ಕಾಮುಕಪ್ರೇಮ ಹೆಚ್ಚಿರುತ್ತದೆ. ಇವರ ಲಗ್ನವು ಪ್ರಸಂಗವಶಾತ್ ದುಃಖಮಯ ವಾಗಿದ್ದುದು ಕಂಡು ಬರುತ್ತದೆ.



## “ಕಾನೂರ ಸುಬ್ಬಮ್ಮ ಹೆಗ್ಗಡತಿ” ಯನ್ನು ಓದಿದನೋಲೆ ಬರೆದದ್ದು.

(ಸೀತೆ ಮತ್ತು ಹೂವಯ್ಯನಬಗ್ಗೆ)

### ಸೀತೆ.

ಕೇಳ್ ತಾಯೆ ವಂದನೆಯು ಮಹಿಳೆಯರ ಕಣ್ಮಣಿಯೆ
ತ್ಯಾಗದಿಂ ಜೀವನವ ನಂದನವ ಗೈದಿರುವೆ
ನಿನ್ನ ಮಂಗಲ ನಾಮ ಕೊಂಡಾನು ಮನದಣಿವೆ
ಬಾಳಮರದಲಿ ನೀನು ಫಲವಾಗಿ ಮಾಗಿರುವೆ
ನಿನ್ನ ಜೀವನವೊಂದು ತಪದ ರೂಪದೊಳಿಹುದು
ನಲುಮೆ ಒಲುಮೆಗಳಿಂದ ನವನಾಕವಾಗಿಹುದು
ನರಕದಲಿ ನಿಂತರೂ ಅದನೆ ಸ್ವರ್ಗವ ಮಾಡಿ
ಹೆಗ್ಗುರಿಯ ಧ್ರುವದೆಡೆಗೆ ಬಾಳನ್ನು ಗುರಿಮಾಡಿ ॥ ೧ ॥

ಹೆದರದೆಯೆ ಹೇಸಿಕೆಯನೆಲ್ಲದಾಟುತ ನಡೆದು
ಹೂವಯ್ಯನೆತ್ತರಕೆ ನೆಗೆದ ಸೀತಾದೇವಿ
ನಿನ್ನ ಹೃದಯವ ಸತತ ಆ ವಿಧಿಯು ಕಡೆಕಡೆದು
ಬೇಸತ್ತಿತಲ ನಿನ್ನ ತಾಳ್ಮೆಯನು ಕಂಡೋವಿ
ಸಂತೈಸಿತಲ ! ವಿಧಿಯ ಗೆದ್ದೆ ಧೀರರ ಧೀರೆ
ನಡೆದೆಯಲ ಮೇಗಡೆಗೆ ಹೆಗ್ಗುರಿಯ ನೀ ಸಾರೆ

ಸೌ. ಪಾರ್ವತಿದೇವಿ ಹೆಗಡೆ.



# ಸಾಯಿತಿಯ ಸಂದರ್ಶನ !

**ಲೇಖಕಿ:— ಸುಮತಿ.**

ಸಾಯಿತಿಗಳ ಸಮ್ಮೇಲನವಂತೆ ! ಹಾಗೆಂದರೇನು? ಸಾಯಲು ಹೊರಟವರನ್ನು ಒಂದೆಡೆಗೆ ಕೂಡಿಸಿ, ಜೀವಿಸಿರಲು ಅವರ ಮನವೊಲಿಸುವದೇ ? ಮತ್ತೆ ಜೀವನಕ್ಕೆ ಸಂಬಂಧಪಟ್ಟ ಸಾಯಿತ್ಯವೇ ಹೆಚ್ಚು ಬೆಲೆಯುಳ್ಳದ್ದಂತೆ; ಹಾಗಾದರೆ ಇದೇ ಅರ್ಥವಿರಬಹುದೇ ? ಅಥವಾ ' ಸಾಯಿತಿ ' ಗಳೆಂದರೆ ಒಂದು ಬಗೆಯ ಪ್ರಾಣಿಗಳೋ ? ಇಲ್ಲವೆ ಸಮವಸ್ತ್ರಧಾರಿಗಳಾದ ಪೋಲೀಸರಂತೆ, ಅವರೂ ಒಂದು ಪಡೆಯೆ ? ಪೋಲೀಸರನ್ನು ಕಂಡರೆ ನನಗೆ ತುಂಬಾ ಹೆದರಿಕೆ ಚಿಕ್ಕಂದಿನಿಂದಲೂ ; ಹಾಗೆ ಈಗ ' ಸಾಯಿತಿ ' ಗಳನ್ನು ಕಂಡರೂ ಹೆದರಿಕೆ ಬರುತ್ತಿದೆ. ಆದರೆ ಅವರನ್ನು ಗುರುತಿಸಲು ನನಗಿನ್ನೂ ಅಷ್ಟು ಚೆನ್ನಾಗಿ ಬಾರದು.

ಮೊನ್ನೆ ಅದಾರೊ, ತಾನೊಬ್ಬ ಸಾಯಿತಿ ಎಂದು ಹೇಳಿಕೊಂಡು ನನ್ನ ಬಳಿಗೆ ಬಂದಿದ್ದರು. ಹಾಗಾದರೆ ಅವರನ್ನು ಸೂಕ್ಷ್ಮವಾಗಿ ನಿರುಕಿಸಿ, ಸಾಯಿತಿಗಳನ್ನು ಗುರುತಿಸುವ ಲಕ್ಷಣವನ್ನಾದರೂ ಕಂಡುಕೊಳ್ಳೋಣವೇ, ಎಂದು ಯೋಚಿಸಿ ನಿರುಕಿಸಿದೆ. ಅವರ ವೇಷ ಪರಮಾತ್ಮಸ್ವರೂಪದ್ದು ; ಅದು ಏಕ, ನಿತ್ಯ, ಅಖಂಡ ! " ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ " ಎಂಬ ಭಗವಂತನ ಮಾತು ಅವರ ವೇಷಕ್ಕೇ ಹೆಚ್ಚು ಅನ್ವಯಿಸುತ್ತದೆ. ಅವರು ಮೈಮೇಲೆ ಹೊದ್ದಿದ್ದ ಕೇಸರೀ ಬಣ್ಣದ ಕೆಂಪಾದ, ಶಾಲು ಅವರ ಅಜ್ಜನಿಗೆ ಯಾರೋ ಸ್ವಾಮಿಯವರು ಆಶೀರ್ವಾದವಾಗಿ ಕೊಟ್ಟಿದ್ದಂತೆ ! ಅದರ ಬಗ್ಗೆ ಅವರಿಗೊಳ್ಳೆ ಅಭಿಮಾನ. ಸದಾಕಾಲವೂ ಪರಮ ಪವಿತ್ರವಾದ ಆ ಶಾಲಿಗೆ, ಇದುವರೆಗೂ ನೀರಿನ ಅವಶ್ಯಕತೆಯೇ ಉಂಟಾಗಿರಲಿಲ್ಲವಂತೆ !

ಇನ್ನು ಅವರ ತಲೆಯ ಮೇಲಿನ ಸುದೀರ್ಘ ಕೂದಲುಗಳ ರಾಶಿಯನ್ನು ನೋಡಿ, ಯಾವ ಹೇರ ಆಯಿಲ್ ಜಾಹೀರಾತುಗಾರರು ಬೇಕಾದರೂ ಅವರ ಹೆಸರನ್ನು ಹಾಕಬಹುದು. ಮಧ್ಯೆ ಒಂದೊಂದು ಬಿಳಿಯ ಕೂದಲುಗಳ ಸಮುದಾಯ, ಜ್ಞಾನವೃದ್ಧರ ಕುರುಹಾಗಿ ಕಂಗೊಳಿಸುತ್ತಲೂ ಇದೆ. ಕವಿಯಾಗುವ ಹಂಬಲ ಒಂದು ಕಾಲಕ್ಕೆ ನನಗೂ ಬಹಳವಾಗಿತ್ತು. ಆ ಹಂಬಲಿನ ಇದ್ದ ಬಿದ್ದ ಭಾಗದಿಂದ ವರ್ಣಿಸಬಹುದಾದರೆ, ಶಿವನ ಜಡೆಯಲ್ಲಿ ಗಂಗಾನದಿಯ ಪ್ರವಾಹ ಕಂಡಂತೆ ಆ ದೃಶ್ಯ ಅಂದವಾಗಿತ್ತು !

ಹದಿನಾರನೆಯ ಶತಮಾನದಲ್ಲಿ ಜನ ಉಪಯೋಗಿಸುತ್ತಿದ್ದ ಪಾದರಕ್ಷೆ, ಎಂದು ವಸ್ತುಸಂಗ್ರಹಾಲಯದಲ್ಲಿಟ್ಟರೆ ಬಹುಮಾನ ದೊರೆಯಬಹುದಾದಂಥ ಪಾದರಕ್ಷೆ ಅವರ ಕಾಲಲ್ಲಿ ! ಪಾದರಕ್ಷೆಗಳು ಪಾದಗಳ ನಟ್ಟನಡುವೆ ಅಂದವಾಗಿ ಕೂಡುತ್ತವೆ ! ಅಂತೂ ಆಪಾದಮಸ್ತಕ ಪರಿಯಂತ ಅವರನ್ನು ನಿರುಕಿಸಿದೆ.

" ನೀವೂ ಸಾಯಿತಿಗಳೇ ? " ನಾನು ಕೇಳಿದೆ.

" ಅಹುದು "

" ಈ ಸಲ ಸಮ್ಮೇಲನವಂತೆ, ಹೋಗುತ್ತೀರಾ ? "

" ಅಹುದು, ಹೋದ ಸಲ ಈ ಸಮ್ಮೇಲನದ ಅಂಗವಾಗಿ ನಡೆದ ಗ್ರಂಥ ಕರ್ತರ ಸಮ್ಮೇಲನದಲ್ಲಿ ನನಗೂ ಬಹುಮಾನ ದೊರೆತಿತು. "

" ನೀವು ಗ್ರಂಥಗಳನ್ನೂ ರಚಿಸಿದ್ದೀರಾ ? "

" ಅಹುದು, ಇದು ನೋಡಿ, " ಕಿಸೆಯಿಂದ ಒಂದು ಪುಸ್ತಕವನ್ನು ಹೊರ ತೆಗೆದು ಹೇಳತೊಡಗಿದರು, " ಸಾಯಿತ್ಯ ಜೀವನಕ್ಕೆ ಸಂಬಂಧ ಪಟ್ಟು ದಾಗಿರಬೇಕು; ಕೇವಲ ಕಲ್ಪನಾ ಲೋಕದಲ್ಲಿ ವಿಹರಿಸದೆ, ವ್ಯಾವಹಾರಿಕ ಲೊಕದಲ್ಲೂ ಇಳಿದು ಬಗಲು ಅನುಕೂಲವಾಗುವಂತಿರಬೇಕು. ಅದಕ್ಕೆಂದೇ ನೋಡಿ, ನಾನು ಇದನ್ನು ರಚಿಸಿದ್ದು, ' ಕೋಷ್ಟಕ ' :

" ನಾವು ಓದುವಾಗಲೂ ಈ ಪುಸ್ತಕವು ಇತ್ತೆಂದು ಕಾಣುತ್ತೆ " ನಾನು ಹೇಳಿದೆ.

" ಇದ್ದಿರಬೇಕು, ನೀವು ಸಾಹಿತ್ಯದಲ್ಲಿ ಹೆಚ್ಚು ನುರಿತವರಲ್ಲ. ಹಿಂದೊಂದು ಕಾಲದಲ್ಲಿ ಅಷ್ಟಕ, ದಶಕ, ಶತಕಗಳೆಂಬ ಸಾಹಿತ್ಯದ ರೂಪಗಳ ಎಂಟು, ಹತ್ತು, ನೂರು ಶ್ಲೋಕಗಳಲ್ಲಿ ಬರೆಯಲ್ಪಡುತ್ತಿದ್ದವು. ' ಗಜಾಷ್ಟಕ ' ದ ಹೆಸರನ್ನು ನೀವು ಕೇಳಿರಲಿಕ್ಕಿಲ್ಲ. ಆದರೆ ಇಂದು ನಾನು ಬರೆದದ್ದು ಅದಲ್ಲ; ಇದು ಹೊಸ ಮಾದರಿ ಯದು " ಕ. ಅಷ್ಟಕ. ? " ಆ ಕೋಷ್ಟಕವೆಲ್ಲಿ, ಈ ಕೋಷ್ಟಕವೆಲ್ಲಿ ?........ ಅಂ ಎಲ್ಲಿ ನೀವೇನಾದರೂ ಬರೆದಿದ್ದೀರಾ ? "

" ಇಲ್ಲ ಸ್ವಾಮಿ ಸದ್ಯ ಪಾರಾಗಿದ್ದೇನೆ........ಹಾಗೆಲ್ಲ ಅನ್ನೋಕೆ ನಮ್ಮಂಥ ಮಂದ ಬುದ್ಧಿಯವರಿಗೇನಾದರೂ ಹಾಯುತ್ತದೆಯೇ ? " ನಾನು ಹೇಳಿದೆ.

" ಅದು ಸರಿ, ಆದಕ್ಕೆ ಬೇಕು ಸಾಯಿತಿಯ ಹೃದಯ; ಅಲ್ಲದೆ ಜೀವನದಲ್ಲಿ ಆಶೆಯ ಕಿರಣ ಎಲ್ಲಕ್ಕೂ ಮಹತ್ವದ್ದು. ಕತ್ತಲೆಯನ್ನು ಹಿಂದೂಡಿ ಬೆಳಕಿನಲ್ಲಿ ಕಾಲಿಕ್ಕುವ ಪ್ರಯತ್ನವನ್ನು ಮನುಷ್ಯನು ಮಾಡಬೇಕು. ಈ ಪ್ರಯತ್ನದಲ್ಲಿ ಸಹಾಯಕನಾಗಿ ಸಾಹಿತಿ ಮುಂದೆ ಬರುವನು; ಅದಕ್ಕೇ ನೋಡಿ ನಾನು ಇದರಲ್ಲಿ ಬರೀ ' ಏರಿಕೆ ರೂಪಾಂತರ'ದ ಕೋಷ್ಟಕವನ್ನಷ್ಟೇ ಕೊಟ್ಟಿದ್ದೇನೆ. ' ಇಳಿಕೆ ರೂಪಾಂತರ'ವನ್ನೂ ಕೊಟ್ಟರೆ ಮಕ್ಕಳ ಮನಸ್ಸಿನ ಮೇಲೆ ಅದು ಎಂತಹ ಕೆಟ್ಟ ಪರಿಣಾಮವನ್ನುಂಟು ಮಾಡುತ್ತದೆ, ನೋಡಿ.'

ನಾನು ಸಾಯಿತಿಯ ಮನೋವೈಜ್ಞಾನಿಕತೆಗೂ, ವಾಕ್‌ಚಾತುರ್ಯಕೂ ಬೆರಗಾದೆ! ಸಾಯಿತಿ ಮತ್ತೆ ಪ್ರಾರಂಭ ಮಾಡಿದರು, " ಧನವಿಲ್ಲದಿದ್ದರೂ ಸರಿ, ಬಂಧನ ಮಾತ್ರ ಈ ಕಾಲದಲ್ಲಿ ಸಲ್ಲದು. ವ್ಯಕ್ತಿಯ ಸರ್ವತೋಮುಖ ವಿಕಾಸಕ್ಕೆ, ಸ್ವಾತಂತ್ರ್ಯ ಬೇಕು; ಅದೂ ವಿಶೇಷವಾಗಿ ಸಾಯುತಿಗೆ. ಅನಿರ್ಬಂಧವಾಗಿ ನನ್ನ

ಭಾವಗಳನ್ನು ಹರಿಬಿಡಲು ನಾವು ಸ್ವತಂತ್ರರಿರಬೇಕು. ಇವೇ ನೋಡಿ ನಾನು ಮುಕ್ತಛಂದದಲ್ಲಿ ಬರೆದ ಕೆಲ ಕವಿತೆಗಳು; ಅವುಗಳಲ್ಲಿ ವಿಷಯ ವೈವಿಧ್ಯ, ಶೈಲಿಯ ವೈವಿಧ್ಯ ಎಲ್ಲವೂ ಇವೆ. ಅದನ್ನು ಬೇಕಾದರೆ ಗದ್ಯದಂತೆಯೂ ಓದಬಹುದು, ಪದ್ಯದಂತೆಯೂ ಓದಬಹುದು. ಇವುಗಳಲ್ಲಿ ಮಾತ್ರ ಅನೇಕ ಪದ್ಯಗಳು ಸ್ತ್ರೀಯರ ಉದ್ಧಾರವನ್ನು ಕುರಿತೇ ಬರೆದಂಥವುಗಳು. ನಮ್ಮ ಸಮಾಜದಲ್ಲಿ ಸ್ತ್ರೀಯರನ್ನು ದ್ವೇಷದ ಬುದ್ಧಿಯಿಂದಲೋ,ಪ್ರತೀಕಾರದ ಇಚ್ಛೆಯಿಂದಲೋ ಹಳಿಯುವವರಿದ್ದಾರೆ. ಆದರೆ ಅವರಿಗೆ ಮಾರ್ಗದರ್ಶನ ಮಾಡುವವರಿಲ್ಲ ನೋಡಿ, ಅದಕ್ಕೆಂದೇ ಈ ಕವಿತೆ ನಾನು ಬರೆದದು.

‘ ಪುರುಷರೊಡನೆ ಮಾತು ಬೇಡ;<br>
ಶಿಕ್ಷಣದ ಮೋಹಕೆ ಬಲಿಬೀಳ ಬೇಡ;<br>
ಅತ್ತೆಮಾವಂದಿರ ಮಾತು ನೀ ಮೀರ ಬೇಡ,<br>
ವಿನಯವದು ಯುವತಿಗೇ ಭೂಷಣವು ನೋಡ.

‘ಯುವತಿಗೇ’ ಎಂಬಲ್ಲಿ ಸ್ವಲ್ಪ ಜೋರುಕೊಟ್ಟು ಓದಬೇಕು, ಅಷ್ಟೇ. ಸ್ತ್ರೀಯರಿಗೂ ಸ್ವಾತಂತ್ರ್ಯಬೇಕು ನೋಡಿ; ಕವಿತೆ ಬರೆಯಲು, ನಮ್ಮ ಹಾಗೆ ಉಪದೇಶ ಮಾಡಲು ಎಂದಲ್ಲ ನಾನು ಹೇಳುವದು, ಆದರೆ ಆರ್ಥಿಕ ಸ್ವಾತಂತ್ರ್ಯ! ಅದೇ ನಾನು ಹಿಂದೂ ಕೋಡ ಬಿಲ್ ಮೇಲೆ ಬರೆದ ಕವಿತೆಯನ್ನು ನೀವು ಓದಿದ್ದೀರಾ ?.... ನಮ್ಮ ಪಕ್ಕದ ಮನೆಯಲ್ಲಿ ಆಧುನಿಕ ಯುವತಿಯೊಬ್ಬರಿದ್ದಾರೆ; ಅವರಲ್ಲಿ ವಿನಯ ಸ್ವಲ್ಪ ಕಡಿಮೆ, ಯಾಕೆಂದರೆ ನನ್ನೊಡನೆ ಧಾರಾಳವಾಗಿ ಮಾತಾಡುತ್ತಾರೆ; ತಮ್ಮ ಈ ಕೊರತೆಯನ್ನು ತುಂಬಿಕೊಳ್ಳಲು ಒಬ್ಬ ಮಗನಿಗೆ ‘ ವಿನಯ ’ ಎಂಬ ಹೆಸರನ್ನು ಬೇರೆ ಇಟ್ಟಿದ್ದಾರೆ. ಅವರೂ ಕೂಡ ನೋಡಿ, ಈ ನನ್ನ ಕವಿತೆ ಚೆನ್ನಾಗಿದೆ ಎಂದು ಬಾಯಿತುಂಬ ಹೊಗಳಿದರು.”

‘ ಈ ಸಮ್ಮೆಲನಕ್ಕೇನಾದರೂ ಹೊಸ ಗ್ರಂಥರಚನೆ ಮಾಡಿದ್ದೀರಾ, ’ ಕಾವ್ಯಪ್ರಪಂಚದಿಂದ ಪಾರಾಗಲು ನಾನೇ ಪ್ರಶ್ನಿಸಿದೆ.

“ ವಿವಿಧ ಭಾಗಗಳಲ್ಲಿ ಪ್ರಯೋಗಮಾಡಿ ಪ್ರಾವೀಣ್ಯ ಪಡೆಯಬೇಕೆಂಬ ಹಂಬಲೊಂದಿದೆಯಲ್ಲ ನೋಡಿ,” ಸಾಯಿತಿಗಳು ನಗತೊಡಗಿದರು, “ ಈಸಲ ಐತಿಹಾಸಿಕ ಕ್ಷೇತ್ರದಲ್ಲಿ ನನ್ನ ಪರಿಶ್ರಮ. ತುಂಬಾ ಶ್ರಮವಹಿಸಿ ‘ ತಘಲಕ, ಮತ್ತು ಮೋಗಲ್ ವಂಶಗಳ ವೃಕ್ಷಗಳನ್ನು ತಯಾರಿಸಿದ್ದೇನೆ. ಅಲ್ಲದೆ ಈ ವಂಶಗಳಲ್ಲಿ ಬರುವ ಪ್ರಸಿದ್ಧ ಪುರುಷರ ವೈಯ್ಯಕ್ತಿಕ ಜೀವನದ ಬಗ್ಗೆಯೂ ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದೇನೆ. ಔರಂಗಜೇಬನಿಗೆ ಕವಳಿ ಹಣ್ಣುಗಳ ಮೇಲೆ ಬಹಳ ಪ್ರೀತಿಯಂತೆ, ನಿಮಗೆ ಗೊತ್ತೇ ?

ನಾನು ಇಲ್ಲವೆಂದು ತಲೆಯಲ್ಲಾಡಿಸಿದೆ.

"ಒಂದು ಸಲ ಅವನು ದೂತರನ್ನಟ್ಟಿ ಮಧ್ಯರಾತ್ರಿಯಲ್ಲಿ ಕವಳಿಹಣ್ಣುಗಳನ್ನು ತರಿಸಿ ಕೊಂಡಿದ್ದನಂತೆ!"

ನಾನು ನನ್ನ ಕೈಗಡಿಯಾರದ ಕಡೆಗೆ ನೋಡಿದೆ.

"ಸರಿ ಈಗ ನಿಮಗೆ ಹೊತ್ತಾಯಿತೆಂದು ಕಾಣುತ್ತದೆ; ನನ್ನ ಕವಿತೆಗಳನ್ನೂ ಹೊಸ ಗ್ರಂಥವನ್ನೂ ಇನ್ನೊಂದು ಸಲ ಓದಿ ತೋರಿಸುವೆ," ಸಾಯಿತಿಗಳು ಎದ್ದು ನಿಂತರು.

ನಾನೂ ಅಲ್ಪ ಸಂಭಾವನೆಯನ್ನು ಅವರ ಕೈಗಿಟ್ಟೆ; ಆದರೆ ನನ್ನ ಕೊರಳ ಸೆರೆ ತುಂಬಿ ಬಂದು, ಬಾಯಿಂದ ಮಾತೇ ಹೊರಡಲಿಲ್ಲ.

ಅಂದಿನಿಂದ ಒಂದೆರಡು ನಿಮಿಷ ಮಾತಾಡುತ್ತಲೇ, ನಾನು ಸಾಯಿತಿಗಳನ್ನು ಮಾತ್ರ ತಕ್ಕಮಟ್ಟಿಗೆ ಗುರುತಿಸಬಲ್ಲೆ!



## ವೀರ ಪುತ್ರನಿಗಾಗಿ ಕೃತಜ್ಞತೆ

ಆಂಧ್ರಪ್ರಾಂತ ರಚನೆಗಾಗಿ ಪೊಟ್ಟಿ ಶ್ರೀ ರಾಮುಲು ಅವರು ೫೮ ದಿನಗಳ ಆಮರಣ ಉಪವಾಸ ಮಾಡಿದ್ದು ಅವರ ಧ್ಯೇಯನಿಷ್ಠೆಯ ನಿಶ್ಚಿತವನ್ನು ತೋರಿಸುತ್ತದೆ. ಇದು ಅಭಿನಂದನೀಯ ಸಂಗತಿ ನಮ್ಮ ಪ್ರತಿಯೊಬ್ಬ ಹೆಣ್ಣುಮಕ್ಕಳಲ್ಲಾದರೂ, ತಮ್ಮ ಏಳ್ಗೆಯ ಸಲುವಾಗಿ ಇದೇ ತೆರನಾದ ಧ್ಯೇಯನಿಷ್ಠೆಯ ಹಸಿವು ಉತ್ಪನ್ನವಾಗಲೆಂದು ಪರಮಾತ್ಮನಲ್ಲಿ ಪ್ರಾರ್ಥನೆ. ಹಾಗೂ ಧ್ಯೇಯವಾದಿ ಶ್ರೀ. ರಾಮುಲು ಇವರ ಸಲುವಾಗಿ ನಮ್ಮ ವೀರಮಾತೆಯು ತುಂಬಾ ಕೃತಜ್ಞತಾ ಕಂಬನಿಗಳನ್ನು ಕರೆಯದಿರಲಾರಳು.



# ನಮ್ಮ ಆಹಾರ ವಿಹಾರ

**ಲೇ:— ಶ್ರೀಮತಿ ಶಾಲಿನಿ ಹಾಲಗಿ, ಧಾರವಾಡ.**

ಶ್ರೀಮಂತ ಜನರು ಜೀವನ ಸತ್ವವುಳ್ಳ ಅನೇಕ ಹಣ್ಣು, ಹಂಪಲಗಳನ್ನೂ, ಕಾಯಿ ಪಲ್ಲೆಗಳನ್ನೂ ತಿನ್ನುತ್ತಾರೆ, ಆದರೆ ಮಧ್ಯಮ ವರ್ಗದ ಜನರು ದಿನಾಲು ತಕ್ಕೊಳ್ಳುವ ಸಾಮಾನ್ಯ ತರಗತಿಯ ಆಹಾರದಲ್ಲಿ ಕೂಡ ಜೀವನ ಸತ್ವ ಇರುವದೆಂಬ ದನ್ನು ಅರಿತುಕೊಳ್ಳದೆ ಕಸದಕಿಂತಲೂ ಕೀಳು ಮಾಡಿ ನೋಡುತ್ತಾರೆ. ಗೋದಿ, ಜೋಳ ಶೆಜ್ಜೆ ಮುಂತಾದ ಧಾನ್ಯಗಳನ್ನು ಬಿಸಿಲಿನಲ್ಲಿ ಇಟ್ಟು ಒಣಗಿಸಿ ನಂತರ ಬೀಸಿ ದರೆ ತೌಡು ಕಡಿಮೆ ಪ್ರಮಾಣದಲ್ಲಿ ಬರುವದು. ಬಂದ ಸ್ವಲ್ಪ ತೌಡಿನಿಂದ ಕೂಡ ಏನಾದರೂ ಪದಾರ್ಥ ಮಾಡಿ ತಿನ್ನಬೇಕು. ತೌಡಿನಲ್ಲಿ ಜೀವನ ಸತ್ವ ಹೆಚ್ಚಾಗಿ ಇರುವದರಿಂದ ಕಸದಲ್ಲಿ ಚಲ್ಲಬಾರದು. ಗೋದಿಯ ತೌಡಿನಲ್ಲಿ ಬೆಲ್ಲ ಬೆರಸಿ ಕೈತಟ್ಟು ಮಾಡಬಹುದು, ಇದು ತಿನ್ನಲಿಕ್ಕೆ ರುಚಿಹತ್ತುವದು, ಮತ್ತು ತೌಡಿನಿಂದ ತಯಾರಿ ಸಿದ್ದು ಎಂದು ಕಲ್ಪನೆ ಕೂಡ ಬರುವದಿಲ್ಲ.

ತೊಪ್ಪಲ ಪಲ್ಲೆಯನ್ನು ತಿನ್ನುವದು ಕಡಿಮೆ ತರದ್ದೆಂದು ಎಷ್ಟೋ ಜನರ ಭಾವನೆ ಇರುವದು. ಒಂದು ವೇಳೆ ಪಲ್ಲೆಯನ್ನು ಮಾಡಿದರೆ, ತೊಪ್ಪಲನ್ನು ಕುದಿಸಿ ಆದರ ನೀರನ್ನು ಕಚ್ಚಿನಲ್ಲಿ ಸುರವಿಬಿಡುತ್ತಾರೆ, ಹಾಗೆ ಮಾಡದೆ ತೊಪ್ಪಲನು ಹೆಚ್ಚುವ ಮೊದಲೇ ಸ್ವಚ್ಛವಾಗಿ ತೊಳೆದು ನಂತರ ಕುದಿಸಬೇಕು. ಪಲ್ಲೆಯು ಬೆಂದ ನಂತರ ನೀರು ಸ್ವಲ್ಪ ಹೆಚ್ಚಾಗಿದ್ದು ಕಂಡು ಬಂದರೆ ಆ ನೀರನ್ನು ಬೇರೆ ತಕ್ಕೊಂಡು ಅದರಲ್ಲಿ ಸ್ವಲ್ಪ ಉಪ್ಪು, ಸಕ್ಕರೆ ಹಾಕಿ ಕುಡಿಯಬಹುದು ಕೂಡ.

ಮೆಂಥೆ, ಸಬ್ಬಸಿಗೆ, ಚಕೋತ ಮೊದಲಾದ ತೊಪ್ಪಲ ಪಲ್ಲೆಗಳು ದೇಹಕ್ಕೆ ಅತ್ಯಂತ ಪೋಷಕವಾಗಿರುತ್ತವೆ. ಛಪ್ಪರ ಬದನೇಕಾಯಿ (ಟಾಮೆಟೊ) ಯನ್ನು ಬರೀ ಕಚ್ಚಾ ಪಲ್ಲೆ (ಹಸೀಪಲ್ಲೆ) ಯಂತೆ ಮಾಡಿ ತಿನ್ನುತ್ತಾರೆ, ಆದರೆ ದಿನಾಲು ಒಂದೇ ಪ್ರಕಾರ ಮಾಡಿ ತಿನ್ನುವದರಿಂದ ಮನುಷ್ಯನಿಗೆ ಬೇಸರವಾಗುತ್ತದೆ. ಆದ್ದ ರಿಂದ ಟಾಮೆಟೊದಿಂದ ಅನೇಕ ಸಿಹಿ, ಮತ್ತು ಉಪ್ಪು ಕಾರ ಪದಾರ್ಥಗಳನ್ನು ಮಾಡಿ ತಿನ್ನಬೇಕು. ಇದರಲ್ಲಿ 'ಎ' ಜೀವನಸತ್ವ ವಿರುತ್ತದೆ 'ಎ' ಜೀವನ ಸತ್ವವು ಶರೀರದ ಬೆಳವಣಿಗೆಗೂ ಸವಕಳಿಯ ಪೂರೈಕೆಗೂ ಅವಶ್ಯವಿರುತ್ತದೆ.

ಅಕ್ಕಿಯನ್ನು ಗಿರಣಿಯಲ್ಲಿ ಪಾಲಿಶ್ ಮಾಡಿಸುವದರಿಂದ 'ಬಿ' ಜೀವನ ಸತ್ವ ನಾಶವಾಗುತ್ತದೆ. ಇದರಿಂದ ದೇಹದಲ್ಲಿಯ ನರಗಳು ಅಶಕ್ತವಾಗುತ್ತವೆ. ಪಚನ ಕ್ರಿಯೆ ಸರಿಯಾಗಿ ನಡೆಯಲಾರದು. ಆದ್ದರಿಂದ ಅಕ್ಕಿಯನ್ನು ಮನೆಯಲ್ಲಿಯೆ ಕುಟ್ಟಿ ತಿನ್ನಬೇಕು. ಒಂದು ವೇಳೆ ಮನೆಯಲ್ಲಿ ಕುಟ್ಟಲಿಕ್ಕೆ ಅನುಕೂಲ ಇಲ್ಲದವರು ಗಿರ ಣಿಗೆ ಒಯ್ದರೂ ಅಲ್ಲಿ ಕಡಿಮೆ ಪ್ರಮಾಣದಿಂದ ಪಾಲಿಶ್ ಮಾಡಿಸಬೇಕು.

ಆಹಾರದ ಪೋಷಾಕಾಂಶಗಳೆಲ್ಲ ಒಂದು ಯೋಗ್ಯ ಪ್ರಮಾಣದಲ್ಲಿ ಇರಬೇಕು. ಆದರೆ ಇವು ಒಂದೇ ಪದಾರ್ಥದಲ್ಲಿರುವದಿಲ್ಲ. ಆದುದರಿಂದ ನಾವು ಬೇರೆ ಬೇರೆ ಆಹಾರ ಪದಾರ್ಥಗಳನ್ನು ಮಾಡಿ ತಿನ್ನಬೇಕು. ಕಾಲಕ್ಕೆ ಸರಿಯಾಗಿಯೂ ಆಹಾರವನ್ನು ತಕ್ಕೊಳ್ಳುವದು ಒಳಿತು. ಬೇಸಿಗೆಯ ಕಾಲದಲ್ಲಿ ಹಸಿ ಪಲ್ಲೆಗಳನ್ನು (ಪಚ್ಚಡಿ, ಭಜ್ಜಿ) ತಿನ್ನುವದರಿಂದ ದೇಹಕ್ಕೆ ಹಿತವಾಗುತ್ತದೆ. ಮಳೆಗಾಲದಲ್ಲಿ ತೊಪ್ಪಲ ಪಲ್ಲೆಯನ್ನು ಹೆಚ್ಚಾಗಿ ತಿನ್ನಬಾರದು. ತಿಂದರೂ ತೊಪ್ಪಲನ್ನೂ ಸಣ್ಣವಾಗಿ ಹೆಚ್ಚಿ, ಅದರಲ್ಲಿ ಅಕ್ಕಿ ಅಥವಾ ಜೋಳದ ಹಿಟ್ಟು ಹಾಕಿ ಕಲಸಿ ಸ್ವಲ್ಪ ಉಪ್ಪು, ಕಾರ ಹಾಕಿ ಕಬ್ಬಿಣದ ಹಂಚಿಗೆ ಎಣ್ಣೆ ಸವರಿ ಕೈಯಿಂದ ತಟ್ಟಿ ಬೇಯಿಸಿ ತಿನ್ನಬೇಕು.ಬಟಾಟೆಯ ಸಿಪ್ಪೆಯನ್ನು ಸುಲಿದು ಪಲ್ಲೆ ಮಾಡುತ್ತಾರೆ.ಆದರೆ ಹಾಗೆ ಮಾಡದೆ ಸುಲಿಯದೆ ಹಾಗೇ ಪಲ್ಲೆ, ಅಥವಾ ಉಪ್ಪಿನಕಾಯಿ ಮುಂತಾದ ಪದಾರ್ಥಗಳನ್ನು ಮಾಡಬಹುದು. ಇದರಂತೆ ಗೆಣಸಿನಲ್ಲಿ ಸಹ ಜೀವನಾವಶ್ಯಕ ಪದಾರ್ಥ ಇರುವದರಿಂದ ಸಿಪ್ಪೆ ತಗೆಯದೆ ಹಾಗೇಮಾಡಿ ತಿನ್ನಬೇಕು.

ಅಡಿಗೆಯನ್ನು ರುಚಿ ಮಾಡುವದಕ್ಕಾಗಿ ಆಹಾರ ಧಾನ್ಯಗಳನ್ನು ನಾವು ಉಪಯೋಗಿಸುವರೀತಿಯಲ್ಲೂ,ಎಷ್ಟೋರೀತಿಯಿಂದ ಅವುಗಳಲ್ಲಿಯ ಜೀವನಾವಶ್ಯಕ ವಸ್ತುಗಳನ್ನು ಹಾಳುಮಾಡುತ್ತೇವೆ. ಅಕ್ಕಿ, ಕಾಯಿಪಲ್ಲೆ ಮತ್ತು ತೊಪ್ಪಲ ಪಲ್ಲೆ ಬೇಯಿಸುವಾಗ ನೀರನ್ನು ಚೆಲ್ಲಿ ಬಿಡುತ್ತೇವೆ. ಬೇಯುವಾಗ ಕುದಿಯುವ ನೀರಿನಲ್ಲಿ ಕೂಡಿದ ಆಹಾರದಲ್ಲಿಯ ಜೀವನಾವಶ್ಯಕ ವಸ್ತುಗಳು ಇದರಿಂದ ಹಾಳಾಗುತ್ತವೆ. ಈ ರೀತಿ ಆಹಾರ ಪದಾರ್ಥಗಳಲ್ಲಿಯ ಹಾಳಾಗುವ ಜೀವನಾವಶ್ಯಕ ವಸ್ತುಗಳನ್ನು ತಡೆದು ಆಹಾರ ಪದಾರ್ಥಗಳ ಉಪಯೋಗವನ್ನು ಹೆಚ್ಚು ಹೆಚ್ಚು ಮಾಡಿಕೊಳ್ಳಬೇಕು. ಹಿರಿಯರು ಹೇಳುವ ನಾಡನುಡಿಯಂತೆ, " ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ, " ವೆಂಬಂತೆ ನಾವು ನಾಲಿಗೆಯ ರುಚಿ ನೋಡದೆ ಪ್ರತಿ ಒಂದು ಆಹಾರದಲ್ಲಿಯ ಗುಣವನ್ನು ಅರಿತುಕೊಂಡು ಅದರಂತೆ ಆಚರಿಸುತ್ತ ಹೋದರೆ ನಮ್ಮ ಜೀವನ ರಥವು ಸುರಕ್ಷಿತವಾಗಿ ಸಾಗಬಲ್ಲದು. ಆಹಾರದಂತೆ ಮನೆಯ ಸ್ವಚ್ಛತೆಯೂ ಮನುಷ್ಯನ ಆರೋಗ್ಯದ ಒಂದು ಭಾಗವಾಗಿರುತ್ತದೆ. ಶಕ್ಯವಿದ್ದಷ್ಟು ಸ್ವಚ್ಛತೆಯಿಂದಲೂ, ಮಿತವ್ಯಯದಿಂದಲೂ, ಮಿತಾಹಾರದಿಂದಲೂ ಮನುಷ್ಯನು ನಿರೋಗಿಯಾಗುವದರಲ್ಲಿ ಸಂಶಯವಿಲ್ಲ.



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿದ್ದರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯುವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯುವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ **ಧಾರವಾಡ.**

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..........................................................

..........................................................................................

ಪೂರ್ಣ ವಿಳಾಸ..........................................................................

(ಮನೆ ನಂಬರು ಸಹಿತ) ..............................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು ಸಹಿ

## ಅಕ್ಕನ ಪೆಟ್ಟಿಗೆಯ ಹೊಸ ಸದಸ್ಯರು

(೧) **ಷನ್ಮುಖ ಕಲ್ಲಪ್ಪ ಪೂಜಾರ,** ಧಾರವಾಡ. ವಯಸ್ಸು ೧೪. ಇಂಗ್ಲೀಷ್ ೪ ನೇ ವರ್ಗ. ಕಥೆ ಓದುವದು ಒಗಟು ಬಿಡಿಸುವದರಲ್ಲಿ ಬಹಳ ಆಸಕ್ತಿಯಂತೆ. ನಮ್ಮ ಪೆಟ್ಟಿಗೆಯ ಸದಸ್ಯನಾದ ವಿಶಾಲನು ಇವನ ನೆಚ್ಚಿನ ಗೆಳೆಯನಂತೆ.

(೨) **ಕು. ವಿಜಯಮಾಲಿನಿ ಬಾಲಕೃಷ್ಣ,** ದಾವಣಗೇರಿ. ವಯಸ್ಸು ತಿಳಿಸಿಲ್ಲ. ಕನ್ನಡ ೩ನೇ ವರ್ಗ. ಡಾನ್ಸ ಕಲಿಯಲು ಬಹಳ ಇಷ್ಟವಂತೆ.

(೩) **ಬಿ. ಬಿ. ವಾಸುದೇವ ಮೊದಲಿಯಾರ,** ದಾವಣಗೇರಿ. ವ. ೧೧. ಮಾಧ್ಯಮಿಕಶಾಲೆ ೪ ನೇ ವರ್ಗ. ಇವನಿಗೆ ಸ್ಯಾಕಲ್ ಸವಾರಿ ಎಂದ ರಂತೂ ಊಟದ ಪರಿವಿಲ್ಲವಂತೆ, ಕ್ರಿಕೇಟ ಆಟದಲ್ಲಿ ಬಲು ಇಷ್ಟವಂತೆ.

(೪) **ಪ್ರಭಾವತಿ ರಾಮರಾವ್ ವಾಡೇದ,** ಹುಬ್ಬಳ್ಳಿ. ತನ್ನ ವಯಸ್ಸಾ ಗಲೀ, ಸೇರಿಕೆಯ ವಿಷಯಗಳಾಗಲೀ ತಿಳಿಸಿಲ್ಲ.

(೫) **ಆನಂದ ರಂಗರಾವ್ ಕುಲಕರ್ಣಿ,** ಗದಗ. ವಯಸ್ಸು ತಿಳಿಸಿಲ್ಲ. ಇಂಗ್ಲಿಷ್ ಮೂರನೇ ವರ್ಗ. ಕಥೆ, ಕವನ, ನಗೆಹನಿ, ವಿನೋದ,. ಆಟ ಅಭ್ಯಾಸಗಳಲ್ಲಿ ಬಹಳ ಆಸಕ್ತಿಯಂತೆ. ಈ ಸಾರೆ ಅಕ್ಕನ ಪೆಟ್ಟಿಗೆಗೆ ಸೊಗಸಾದ ನಗೆಹನಿಗಳೆರಡನ್ನು ಕಳುಹಿಸಿದ್ದಾನೆ.

(೬) **ಸುನೀತಾ ಹರಪನಹಳ್ಳಿ.** ವ. ೯. ವರ್ಗ ಕನ್ನಡ ೪. ಮೊದಲನೆಯ ವರ್ಗದಿಂದಲೂ ೧ ನೇ ನಂಬರ ಬಿಟ್ಟಿಲ್ಲವಂತೆ. ಶಾಲೆಯ ಪಾರ್ಲಿ ಮೆಂಟಿನ ಮುಖ್ಯ ಮಂತ್ರಿ ಇವಳು. ಆಟಪಾಟಗಳಲ್ಲಿ ಬಹಳ ಆಸ್ತೆ. 'ಶಾರೀರಿಕ ಶಿಕ್ಷಣದ' ಬಗ್ಗೆ ಇದ್ದ 'ಶ್ರೀ ಕೊಪ್ಪಿಕರ ಪ್ರೈಸ್' ಈ ಸಾರೆ ದೊರಕಿಸಿದ್ದಾಳೆ. ಕತೆಕಾದಂಬರಿಗಳನ್ನೋದುವದೆಂದರೆ, ಅದ ರಲ್ಲೂ ದೊಡ್ಡವರ ಆತ್ಮಚರಿತ್ರೆಯೋದುವದೆಂದರೆ ಬಲು ಹುರುಪು. ಈ ಸಾರೆ ಅಕ್ಕನ ಪೆಟ್ಟಿಗೆಗೆ ತನ್ನದೊಂದು 'ವಿನೋದಗಾರ ಚನ್ನಯ್ಯ' ನೆಂಬ ನಕ್ಕು ನಗಿಸುವ ಕತೆ ಕಳುಹಿಸಿದ್ದಾಳೆ.

## ಸದಸ್ಯರ ಪತ್ರಗಳಿಗೆ ಉತ್ತರ

ಪ್ರಿಯ ತಂಗಿ ವಿಜಯಮಾಲಿನಿ,

ನಮ್ಮೂರಿನಲ್ಲಿ ಡ್ಯಾನ್ಸಕಲಿಸುವ ವರ್ಗವೇನೋ ಇದೆ. ಆದರೆ ನನಗೆ ಅದರ ಬಗ್ಗೆ ಹೆಚ್ಚಿನ ವಿಚಾರವೇನೂ ಗೊತ್ತಿಲ್ಲವೆಂದು ತಿಳಿಸಲು ವಿಷಾದವೆನಿಸುತ್ತದೆ. ನಿನ್ನ ಕಲಾಪ್ರೀತಿಯ ಬಗ್ಗೆ ಬಹಳ ಸಂತೋಷವಾಯ್ತು. ನಿನ್ನ ತಮ್ಮನ ಫೋಟೋ ಕಳುಹಿಸದೆ 'ಬ್ಲಾಕ' ಮಾಡಿ ಕಳುಹಿಸಿದರೆ ಅದನ್ನು ಅಗತ್ಯ ಅಚ್ಚು ಹಾಕಿಸುವೆ.

—ಇತಿ ನಿನ್ನೊಲುಮೆಯ ಅಕ್ಕ.

ಪ್ರಿಯ ತಮ್ಮಾ ಕೃಷ್ಣಾಜಿ,

ನಿನ್ನ ವಯಸ್ಸು ಮೊದಲೇ ತಿಳಿಸದಿದ್ದ ಮೂಲಕ ನಿನ್ನ ಹೆಸರಿನ ಮುಂದೆ ಅದನ್ನು ಪ್ರಕಟಿಸಲಾಗಲಿಲ್ಲ. ನಮ್ಮ ರೆಕಾರ್ಡಿನಲ್ಲಿ ಈಗ ಬರೆದಿಟ್ಟಿದ್ದೇವೆ. ಹೋದ ಸಾರೆ ನೀನು ಕಳುಹಿದ ಒಗಟಿನ ಉತ್ತರ ನನಗೆ ತಲುಪಿಯೇ ಇಲ್ಲ. ಕಳುಹಿಸಿದ ಭಾಸವಾಗಿ ಎಲ್ಲಾದರೂ ಮರೆತೆಯೋ ಹೇಗೆ ನೋಡು.

ಇತಿ ನಿನ್ನ ಪ್ರೇಮದ ಹಿರಿಯಕ್ಕ.

ನಲ್ಮೆಯ ತಮ್ಮ ವಾಸುದೇವ,

ನಿನ್ನ ಅಣ್ಣ ಹಾಗೂ ತಂಗಿಯರ ಸದಸ್ಯತನದ ಫಾರ್ಮನ್ನು ಕಳುಹಿದ್ದರೂ ಸಹಾ ಹೆಸರೇಕೆ ಹೋದಸಾರೆ ಪ್ರಕಟಿಸಲಿಲ್ಲವೆಂದು ನಿನ್ನ ಪ್ರಶ್ನೆ. ಆದರೆ ನಿನ್ನ ತಂಗಿಯ ಫಾರ್ಮ್ ಮಾತ್ರ ನಮಗೆ ತಲ್ಪಿದೆ. ಅದೂ ತಡಮಾಡಿ ತಲ್ಪಿದ್ದರಿಂದ ಈ ತಿಂಗಳಲ್ಲಿ ಪ್ರಕಟಿಸಲಾಗಿದೆ. ಅಣ್ಣನದು ತಲ್ಪಿಲ್ಲ. ಇದರ ಅರ್ಥವೇನು ತಿಳಿಯಲಿಲ್ಲ

ಇತಿ ನಿನ್ನಾದರದ ಅಕ್ಕ.

ಪ್ರಿಯ ತಂಗಿ ಸುನೀತಾ,

ನೀನು ಕಳುಹಿಸಿದ ಕಥೆ ಬಹಳ ಚನ್ನಾಗಿದೆ. ನಿನ್ನನ್ನು ಅಕ್ಕನ ಪೆಟ್ಟಿಗೆಯ ಸದಸ್ಯಳನ್ನಾಗಿ ಮಾಡಿಕೊಂಡಿದ್ದೇನೆ. ನಿನ್ನ ಸಹೋದರನು ಕಳುಹಿಸಿದ ಪ್ರವೇಶ ಪತ್ರಿಕೆಗೆ ಸದಸ್ಯತ್ವದ ಫೀ ಕಳುಹಿಸಿಲ್ಲ; ಫೀ ಕಳುಹಿಸಿದಲ್ಲಿ ಮುಂದಿನ ತಿಂಗಳಿನಲ್ಲಿ ನಿನ್ನ ತಮ್ಮನನ್ನು ಸದಸ್ಯರ ಪಟ್ಟಿಯಲ್ಲಿ ಸೇರಿಸಲಾಗುವದು.

ಇತಿ ನಿನ್ನೊಲುಮೆಯ ಅಕ್ಕ.

ಪ್ರಿಯ ತಮ್ಮ ತಂಗಿಯರಿರಾ,

ಈ ಸಾರೆ ನಿಮ್ಮಲ್ಲಿ ಎಷ್ಟೋ ಜನರು ಸ್ಪರ್ಧೆಯ ಪ್ರವೇಶ ಹಣವನ್ನಿಡದೆ ಉತ್ತರ ಕಳುಹಿಸಿರುವಿರಿ. ಇದು ಮೊದಲ ಸಾರೆಯೆಂದೂ, ಸಣ್ಣ ಮಕ್ಕಳ ಮನಸ್ಸಿಗೆ ನಿರಾಶೆಯಾಗಬಾರದೆಂದೂ ಈ ಸಾರೆ ಸರಿಯುತ್ತರವಿತ್ತವರ ಹೆಸರುಗಳನ್ನು ಪ್ರಕಟಿಸಲಾಗಿದೆ. ಪ್ರವೇಶ ಹಣ ಕಳುಹಿಸದಿದ್ದವರಿಗೆ ವೀರಮಾತೆಯ ಪ್ರತಿ ಬಹುಮಾನವಾಗಿ ಕಳುಹಿಸಿಲ್ಲ.

ತಮಗೆ ಮತ್ತೊಂದು ಮಾತು ಪುನಃ ಒತ್ತಿ ಹೇಳುವದೆಂದರೆ, ದಯವಿಟ್ಟು, ಒಮ್ಮೆ ಯಾವದೇ ಪತ್ರಿಕೆಯಲ್ಲಿ ಪ್ರಕಟವಾದ ಕತೆ, ಕವನ, ಒಗಟು, ಹಾಸ್ಯ ಮುಂತಾದವುಗಳನ್ನು, ಕಳುಹಿಸ ಬೇಡಿರಿ. ಅಂತಹವುಗಳನ್ನು ಕಳುಹಿಸಿದಲ್ಲಿ ಅವುಗಳನ್ನು ಸ್ವೀಕರಿಸಲಾಗುವದಿಲ್ಲ. ಅದು ಚೌರ್ಯ.

ಇತಿ ನಿಮ್ಮೆಲ್ಲರೊಲುಮೆಯ ಹಿರಿಯಕ್ಕ.



# ನಗೆ ಹನಿ

**ಮೇಷ್ಟ್ರು:—** ಲೋ ಕಿಟ್ಟು, ನಾನು ಹೇಳಿದ್ದನ್ನು ಏಕೆ ಬರೆಯಲಿಲ್ಲ ?

**ಕಿಟ್ಟು :—** ನೀವು ಬೆತ್ತವನ್ನು ಮರೆತು ಬಂದಿದ್ದೀರಿ. ಅದಕ್ಕೇ ಸಾರ್.

ಲೇ:– **ದಾನಪ್ಪಾ ಕಾಮೋಜಿ.**

**ಮೇಜರ್:—** " ಏನಿದು ಗದ್ದಲ " ?

**ಲೆಫ್ಟಿನಂಟ:—** (ಪಕ್ಕದಲ್ಲಿದ್ದವನನ್ನು ತೋರಿಸಿ) ಇವನು ನನಗೆ ಸಲ್ಯೂಟ ಹೊಡೆಯದಿದ್ದುದಕ್ಕಾಗಿ ಇವನಿಗೆ ೨೦೦ ಸಲ್ಯೂಟ ಹೊಡೆಯಲು ಶಿಕ್ಷೆಕೊಟ್ಟಿದ್ದೇನೆ.

**ಮೇಜರ್:—**( ಲೆಫ್ಟಿನಂಟನಿಗೆ )ಆದರೆ ಅವನು ಸಲ್ಯೂಟ ಮಾಡಿದಾಗೊಮ್ಮೆ ನೀನು ಸಲ್ಯೂಟ ಹೊಡೆಯುವದನ್ನು ಮರೆಯ ಬೇಡ.( Dont forget to salute in return. )

ಲೇ:– **ಎಸ್. ಎಂ. ಕನ್ನೂರ.**

**ಗಂಡ:—** ಲೇ. ಏನೇ, ಇದು ! ಹತ್ತುಸಲ ಹೇಳಿದೆ ಎಲೆ ಹಾಕೆಂದು. ಅದೇನೆ ಅದು ಅಷ್ಟು ಮಗ್ನಳಾಗಿ ಓದುತ್ತಾ ಇದ್ದಿ ಇತ್ತ ಲಕ್ಷಿಸದೆ ?

**ಹೆಂಡತಿ:—** ಅದೇ " ಪತಿಯ ಸೇವೆ " ಎಂಬ ಪುಸ್ತಕ.

ಲೇ:– **ಕಲಾವತಿ ನಿ. ಯಾದಪ್ಪನವರ.**

**ವಿದ್ಯಾರ್ಥಿ:—** ( ಎಲೆ ಅಡಿಕೆ ಹಾಕುತ್ತಿರುವ ಗುರುಗಳನ್ನು ನೋಡಿ )ಗುರುಗಳೇ ಎಲೆ ಹಾಕಬೇಡಿರಿ.

**ಗುರುಗಳು:—** ಯಾಕೋ ?

**ವಿದ್ಯಾರ್ಥಿ:—** ಪಾನಪ್ರತಿಬಂಧಕ್ಕೆ ನೆರವಾಗಿರಿ ಎಂದು ರಾಷ್ಟ್ರಪತಿಗಳು ಹೇಳಿದ್ದಾರೆ. ಅದಕ್ಕೇ ನಿಮಗೆ ಪ್ರತಿಬಂಧ ಮಾಡುತ್ತಿದ್ದೇನೆ. ( ಪಾನ=ಎಲೆ )

ಲೇ:– **ಕೃಷ್ಣಾಜಿ. ಭೀ. ದೇಶಪಾಂಡೆ.**

**ಹಳ್ಳಿಯವ :—** ( ಮೇನ್ ರೋಡ ಮೇಲೆ ) ಏ ತಮ್ಮಾ ! ಓಟು ಇಲ್ಲಿ ಸರಕಾರಿ ದವಾಖಾನೆ ತೋರಿಸು.

**ಹುಡುಗ :—** ಯಜ್ಜಾ, ಇದು ಮೇನ್‌ರೋಡ್. ಇದರ ನಡುವೆ ೫ ನಿಮಿಷ ಹೀಗೆನಿಂತರೆ ನಡಿಯೋತ್ರಾಸಿಲ್ಲದೆ ದವಾಖಾನೆ ಮುಟ್ಟತೀ ನೋಡು.

* * * * * *

**ಡ್ರಾಯವ್ಹರ :—** ( ಹಳ್ಳದ ದಂಡೆಯ ಮೇಲೆ ) ಅ .... ರೆ.... ರೆ .... ರೆ !

ಪಕ್ಕದಲ್ಲಿ ಕುಳಿತ ಪ್ರವಾಸಿ:– ಏನಾತೋ ಏನಾತುss ?

**ಡ್ರಾಯವ್ಹರ:—** ಅರೇ ! ಹಳ್ಳ ಬಂತು ಹಳ್ಳ !!

**ಪ್ರವಾಸಿ:—** ( ಗಾಭರಿಯಿಂದ ) ಏನು ? ಹಾರ್ನ ಮಾಡಲಿಲ್ಲವೇನೋ ?

— **ಆನಂದ ರಂ. ಕುಲಕರ್ಣಿ,** ಗದಗ.

† † † † † †

## ಹುಚ್ಚಪೆದ್ದ

ಶಾಲೆಯಲ್ಲಿ ಗುರುಗಳು ಪೆದ್ದನಿಗೆ "ನಾನು ಹೇಳಿದ ಹಾಗೆ ಹೇಳುತ್ತೀಯೇನೋ ? ಎಂದರು. ಪೆದ್ದ ಹೇಳುತ್ತೇನೆಂದ. ಸ್ವಲ್ಪ ಹೊತ್ತಿನ ನಂತರ ಮಾಸ್ತರರು ಮತ್ತೊಮ್ಮೆ "ನಾನು ಅಂದ ಹಾಗೆ ಅನ್ನುತ್ತಿಯೇನೊ" ಎಂದಾಗ ಪೆದ್ದನು ಕೂಡಲೆ "ನಾನು ಅಂದ ಹಾಗೆ ಅನ್ನುತ್ತೀಯೇನೊ" ಎಂದು ಮಾಸ್ತರರಿಗೆ ಏಕವಚನದಲ್ಲೇ ಪ್ರಶ್ನಿಸಿದ. ಲೇಖ:- ವಿಶಾಲ.

## ಒಗಟುಗಳು

ಒಂದು ಮನೆಯಲ್ಲಿ ಇಬ್ಬರು ಹುಡುಗರಿರುತ್ತಾರೆ. ಅವರಿಬ್ಬರಿಗೂ ತಂದೆ ಇರುತ್ತಾರೆ. ಆದರೆ ಆ ಮನೆಯ ಜನಸಂಖ್ಯೆ ಮೂರು. ಇದು ಹೇಗೆ ಹೇಳಬಲ್ಲಿರಾ ? ( ಕೇವಲ ಸಣ್ಣಮಕ್ಕಳಿಗಾಗಿ ಈ ಒಗಟು ) ಲೇ:- ಕಲಾವತಿ ಯಾದಪ್ಪನವರ.

ಪ್ರಭಾಕರನ ಬೆಳಕು ನಸುಕಿನಲ್ಲಿ ತ್ತತ್ತತ್ತತ್ತತ್ತತ್ತತ್ತ ಸಂಜೆಗೆ ತ್ತತ್ತತ್ತತ್ತತ್ತ ಸದಾಕಾಲ ನಡೆದಿರುವದು. ಲೇ:- ಶಿವಪುತ್ರ.

ಎಚ್ಚರಿಕೆ ! ನನ್ನ ಕೈಯೊಡನೆ ಆಟವಾಡಿ ಏನಾದರೂ ನನಗೆ ಧಕ್ಕೆ ಕೊಟ್ಟರೆ, ಸಮಯಕ್ಕೆ ಸರಿಯಾಗಿ ನಿಮಗೆ ಕೆಲಸವಾಗಲು ತೊಂದರೆಯಾದೀತು !
ಲೇ:- ದಾನಪ್ಪ ಕಾಮೋಜಿ.

### ಜಾಣ್ಮೆಯ ಒಗಟು

ನಾನು ಒಂದು ಇಂಗ್ಲೀಷ್ ಶಬ್ದ. ನನ್ನ ಮೊದಲಿನೆರಡು ಹಾಗೂ ಕಡೆಯ ಎರಡು ಅಕ್ಷರಗಳು E D. ಇರುವವು. You see a 'T' in the middle. Who am I? ಲೇ:- ಶಿವಪುತ್ರ.

### ಹೋದ ತಿಂಗಳ ಒಗಟುಗಳಿಗೆ ಉತ್ತರ

(೧) ಶ್ವಾಸೋಚ್ಛ್ವಾಸ (೨) ಸೀಸಪೆನ್ಸಿಲ (೩) ಕಸಬರಿಗೆ.

ಸರಿಯಾಗಿ ಉತ್ತರ ಕಳುಹಿದವರು.

ಮೊದಲಿನ ಒಗಟಿಗೆ ಯಾರೂ ಸರಿಯಾದ ಉತ್ತರ ಕಳುಹಿಸಿಲ್ಲ. ಉಳಿದೆರಡಕ್ಕೆ ಸರಿಯಾಗಿ ಉತ್ತರಿಸಿದವರು :—

ಶಕುಂತಲಾ ಬಾಬಾಜಿ ಬಿಲಕರ, ಸಂಕೇಶ್ವರ. ವಿಶಾಲ, ಧಾರವಾಡ. ನೀ. ಡೀ. ಕುಲಕರ್ಣಿ, ಕಳ್ಳಿಹಾಳ. ಸುನೀತಾ ಹರಪನಹಳ್ಳಿ.

ಕೊನೆಯದೊಂದಕ್ಕೆ ಸರಿಯುತ್ತರಿಸಿದವರು :—

ಹನಮಂತ ಕಬ್ಬೂರ, ಮುಂಬಯಿ. ವಾಮನ ಅ. ಬಿಟಗೇರಿ, ಬೆಳಗಾಂವ.

**ಹೋದ ತಿಂಗಳ ಸ್ಪರ್ಧೆಗೆ ಸರಿಯಾಗಿ ಉತ್ತರಿಸಿದವರು :—**

ವಾಮನ ಆ. ಬೆಟಗೇರಿ ಬೆಳಗಾಂವ. ಶಕುಂತಲಾ ಬಿಲಕರ ಸಂಕೇಶ್ವರ. ಡಿ. ಎಸ್. ಶಾಂತಪ್ಪ. ಸಕಲೇಶಪುರ. ಆರ್. ಕೆ. ರೋಹಿಡೆಕರ್. ವಿಜಾಪೂರು. ಸಂಗಪ್ಪಾ ಎಲಬುರ್ಗಿ, ಬ್ಯಾಡಗಿ ಹನುಮಂತ ಕಬ್ಬೂರ, ಮುಂಬಯಿ. ಎಸ್. ಎಚ್. ಬೆಂಗೇರಿ, ಹಾವೇರಿ. ಬಿ. ಬಿ. ವಾಸುದೇವ ಮೊದಲಿಯಾರ,ದಾವಣಗೇರಿ. ಕೃಷ್ಣಾಜಿ ಭೀ. ದೇಶಪಾಂಡೆ, ಧಾರವಾಡ. ಆನಂದ ರಂ ಕುಲಕರ್ಣಿ, ಗದಗ. ಧೃವ ಯೆಲಗೇರಿ, ಧಾರವಾಡ. ಚನ್ನಮ್ಮಿಪ್ಪಾ ಬಡೇಮಿ, ಬನಹಟ್ಟಿ. ಜಿ. ಎನ್. ಹಿರೇಮಠ, ಕೋರವಾರ. ಸುನೀತಾ ಹರಪನಹಳ್ಳಿ, ಧಾರವಾಡ. ದೇವರಾಜ ಎಲೆಗಚ್ಛ್ಯ, ಧಾರವಾಡ. ನೀಲಕಂಠರಾವ್ ಕುಲಕರ್ಣಿ, ಕಳ್ಳಿಹಾಳ. ಸುಶೀಲಾ ಕರ್ಜಗಿ, ಧಾರವಾಡ. ಡಿ. ಜಿ. ಎಂ. ನಾಡಗೌಡರ, ಧಾರವಾಡ. ಮೋಹನ ಕಡಕೋಳ, ಧಾರವಾಡ. ಬಸವಮ್ಮಾ ಶಾಬಾದಿ ಆಲಮೇಲ.



ಪ್ರವೇಶ ಫೀ ೪ ಆಣೆ. [ ಸರಿಯುತ್ತರಕ್ಕೆ ಒಂದು ವೀರಮಾತೆ ಪುಕ್ಕಟೆ ]

| | | | | |
|---|---|---|---|---|
| ೧ | ೨ | ಖಾ | * | ಪ ೩ |
| ೪ | ಸ | * | ೫ | |
| ನ ೬ | | | * | |
| * | * | * | ಮಿ ೭ | * |
| ೮ | ೯ | ಟ್ರ ೧೦ | | ೧೧ |
| ೧೨ | ರು | | * | ರ |
| ಲ | * | ೧೩ | ಮಾ | |

**ಎಡದಿಂದ ಬಲಕ್ಕೆ:**—(೧) ಒಂದು ನಕ್ಷತ್ರ (೪) ೩೦ ದಿನಗಳದೊಂದು ಗುಂಪು. (೫) ಉಚ್ಚ ಧ್ಯೇಯದ ಹೆಸರಿನಲ್ಲಿ ನಡೆಸುವ ಕ್ರೂರಕೃತ್ಯ (೬) ಪರೀಕ್ಷೆಯಲ್ಲಿ ಮಂದವಿದ್ಯಾರ್ಥಿಗಳು ಮಾಡುವ ಹೇಯಕೆಲಸ (೮) ನಗಿಸುವದೇ ಈತನ ಧ್ಯೇಯ. (೧೨) ಇದೊಂದು ಜಾತಿಯ ಸುವಾಸಿತ ಗಿಡ (೧೩) ಹಿಂದಿನಕಾಲದ ಜನರು ಇದನ್ನು ಧರಿಸದೆ ಆಫೀಸಿಗೆ ಹೋಗುತ್ತಿರಲಿಲ್ಲವಂತೆ.

**ಮೇಲಿನಿಂದ ಕೆಳಕ್ಕೆ:**—(೧) ರಾಮಾಯಣ ಕಾಲದಲ್ಲಿ ಸಹ ಈ ವಾಹನವು ಇತ್ತಂತೆ (೨) ನ್ಯಾಯಾಧೀಶ. (೩) ಪ್ರತಿಯೊಂದು ಕಾರ್ಯದಲ್ಲಿ ಇದು ಇರಲೇಬೇಕು. (೭) ಒಂದು ಕಾಡುಪ್ರಾಣಿ. (೮) ನಿರ್ಮಲ. (೯) ಒಂದು ಪಶುವಿನ ಸಂತತಿ. (೧೦) ಒಂದು ಸಭ್ಯ ಪ್ರಾಣಿ. (೧೧) ಈಗಿನ ಯುಗದಲ್ಲಿ ಸತ್ಯವಾದಿಗಳೇ..........ರಾಗಿದ್ದಾರೆ.

ರಚಿಸಿದವರು:— **ಕುಮಾರ ವಿಶಾಲ. ಧಾರವಾಡ.**

ಉತ್ತರವು ಜಾನೇವರಿ ೧೮ ರೊಳಗಾಗಿ ತಲ್ಪುವಂತೆ ಕಳುಹಿಸಬೇಕು.

ಪ್ರವೇಶಧನ ವಿಡದವರ ಹೆಸರನ್ನು ಪ್ರಕಟಿಸಲಾಗುವದಿಲ್ಲ.

# ೧೯೫೩ ನೇ ವರ್ಷದ ಕ್ಯಾಲೆಂಡರ

| ಜನೇವರಿ | ಫೆಬ್ರುವರಿ | ಮಾರ್ಚ | ಎಪ್ರಿಲ್ | ಮೇ | ಜೂನ್ | ಜುಲೈ | ಆಗಸ್ಟ | ಸಪ್ಟೆಂಬರ | ಅಕ್ಟೋಬರ | ನವ್ಹೆಂಬರ | ಡಿಸೆಂಬರ | ೧೯೫೩ | | | | |
|---|---|---|---|---|---|---|---|---|---|---|---|---|---|---|---|---|
| ೩೧ | ೨೮ | ೩೧ | ೩೦ | ೩೧ | ೩೦ | ೩೧ | ೩೧ | ೩೦ | ೩೧ | ೩೦ | ೩೧ | | | | | |
| ಗು | ರ | ರ | ಬು | ಶು | ಸೋ | ಬು | ಶ | ಮಂ | ಗು | ರ | ಮಂ | ೧ | ೮ | ೧೫ | ೨೨ | ೨೯ |
| ಶು | ಸೋ | ಸೋ | ಗು | ಶ | ಮಂ | ಗು | ರ | ಬು | ಶು | ಸೋ | ಬು | ೨ | ೯ | ೧೬ | ೨೩ | ೩೦ |
| ಶ | ಮಂ | ಮಂ | ಶು | ರ | ಬು | ಶು | ಸೋ | ಗು | ಶ | ಮಂ | ಗು | ೩ | ೧೦ | ೧೭ | ೨೪ | ೩೧ |
| ರ | ಬು | ಬು | ಶ | ಸೋ | ಗು | ಶ | ಮಂ | ಶು | ರ | ಬು | ಶು | ೪ | ೧೧ | ೧೮ | ೨೫ | |
| ಸೋ | ಗು | ಗು | ರ | ಮಂ | ಶು | ರ | ಬು | ಶ | ಸೋ | ಗು | ಶ | ೫ | ೧೨ | ೧೯ | ೨೬ | |
| ಮಂ | ಶು | ಶು | ಸೋ | ಬು | ಶ | ಸೋ | ಗು | ರ | ಮಂ | ಶು | ರ | ೬ | ೧೩ | ೨೦ | ೨೭ | |
| ಬು | ಶ | ಶ | ಮಂ | ಗು | ರ | ಮಂ | ಶು | ಸೋ | ಬು | ಶ | ಸೋ | ೭ | ೧೪ | ೨೧ | ೨೮ | |

**ಎಡಗಡೆಯ ಕ್ಯಾಲೆಂಡರ ನೋಡುವರೀತಿ.**

ಪ್ರತಿಯೊಂದು ವಾರದ ಎದುರಿಗಿರುವ ಸಂಖ್ಯೆಗಳು ಆಯಾ ತಿಂಗಳುಗಳಲ್ಲಿ ಆಯಾವಾರಗಳಲ್ಲಿ ಬರುವ ತಾರೀಖುಗಳು.

**ಉದಾ:—** ಜಾನೇವರಿ ತಿಂಗಳ ಕೆಳಗೆ ಮೊದಲ ಅಕ್ಷರ ' ಗು ' ಎಂದಿದೆ ಅಂದರೆ ಗುರುವಾರ. ಅದೇ ದಿನ ನಾವು ಆದೇ ಸಾಲಿನಲ್ಲಿ ನೋಡುತ್ತಹೋದರೆ (ಸಂಖ್ಯೆಯ ಕಡೆಗೆ) ೧ ಎಂಬ ಸಂಖ್ಯೆ ಇದೆ ಅಂದರೆ ಜಾನೇವರಿ ೧ನೇ ತಾ. ಗುರವಾರ ಅದರಂತೆ ಫೆಬ್ರುವರಿ ೧ನೇ ತಾ. ರವಿವಾರ. ಇದರಂತೆ ಎಲ್ಲವನ್ನು ನೋಡಬೇಕು.

ರಚಿಸಿದವರು:— **ಶ್ರೀ. ಶಿವಶಂಕರ. ಬ. ಕಣಾಜನವರ.(ವಿಶಾಲ) ಧಾರವಾಡ.**

**ಬಿಟ್ಟ ಸ್ಥಳ ತುಂಬಿರಿ.**

(೯) ಗ್ರಾಮ........ವನ್ನು ಆಳುವವ ಗೌಡನೇ ? ಇಲ್ಲ!—"ಗ್ರಾಮಫೋನೋ"

(೧೦) ........ನಾಯಿಯು ಮನೆಯನ್ನು ಕಾಯುವದೇ? ಇಲ್ಲ!—" ಶಹನಾಯಿ"



# ಅವಳ ತಾಯಿ

## ಇದು ನಿಜವಿರಬಹುದೇ ?

ಒಂದು ಊರಿನಲ್ಲಿ ಒಬ್ಬ ಅನಾಥ ಬಾಲಿಕೆಯೋರ್ವಳಿದ್ದಳು ! ಅವಳಿಗೆ ಓದುವದೆಂದರೆ ಬಹಳ ಇಷ್ಟ ! ಆದರೆ ಬಡವಳು ! ಹಣವೆಲ್ಲಿಂದ ಬರಬೇಕು ? ಓದಬೇಕೆಂದರೆ ಪುಸ್ತಕ ಬೇಡವೇ ? ಪುಸ್ತಕ ಬೇಕಾದರೆ ಕೊಳ್ಳಲು ಹಣಬೇಡವೇ ? ಕಾರಣ ಅವಳು ಭಿಕ್ಷೆಬೇಡಿ ಜೀವನ ಸಾಗಿಸಿ ಭಿಕ್ಷೆಯಾಗಿ ಬಂದ ಹಣವನ್ನು ಕೂಡಿಸಿ " ಒಂದು ವೀರಮಾತೆ ಕೊಳ್ಳುತ್ತಿದ್ದಳು !" ವೀರಮಾತೆಯನ್ನೇ ಅವಳು ಏಕೆ ಕೊಳ್ಳುತ್ತಿದ್ದಳು ? ನಿಮಗೆ ಗೊತ್ತೆ ? ಅವಳು ಮಹಿಳೆಯಲ್ಲವೇ ? ಮಹಿಳೆಯರ ಏಳ್ಗೆಗಾಗಿಯೇ " ವೀರಮಾತೆ " ದುಡಿಯುವದಿಲ್ಲವೇ ? ಕಾರಣ ಅವಳು ವೀರಮಾತೆಯನ್ನೇ ಕೊಂಡುಕೊಳ್ಳುವಳು ! ಒಂದು ತಿಂಗಳ ೬ ನೆಯ ದಿನಾಂಕದಂದು " ವೀರಮಾತೆ " ಪ್ರಕಟವಾಯಿತು ! ಆಗ ಆ ಬಾಲಿಕೆ " ಆರಾಣೆ " ಒಯ್ದು,ಒಂದು " ವೀರಮಾತೆ " ಕೊಂಡು ಭಿಕ್ಷೆಯೆತ್ತಲು ಹೊರಟಳು ! ಆಗ ಒಂದು ಮನೆ ಯಜಮಾನತಿ ಭಿಕ್ಷೆ ನೀಡಿ " ನಿನಗೆ ತಂದೆ ತಾಯಿಗಳಿಲ್ಲವೇನಮ್ಮಾ ! " ಎಂದು ಕೇಳಿದಳು. ಆಗ ಆ ಬಾಲಿಕೆ " ವೀರಮಾತೆ " ಯನ್ನು ಅವಳಿಗೆ ತೋರಿಸುತ್ತ " ಇವಳೇ ನನ್ನ ತಾಯಿ " ಎಂದು ಹೇಳಿದಳು !

ಇದು ನಿಜವೇ ? '..............' ನಿಜವಿರುವದು !

" ಇವಳೇ ನನ್ನ ತಾಯಿ " ಎಂದು ಹೇಳಿದುದನ್ನು ಕೇಳಿದವ:— " ವಿಶಾಲ "

ಧಾರವಾಡ.

# ವಿನೋದಗಾರ ಚೆನ್ನಯ್ಯ

ಲೇ:— ಸುನೀತಾ ಹರಪನಹಳ್ಳಿ.

ನಾಗರಹಳ್ಳಿಯಲ್ಲಿ ಚೆನ್ನಯ್ಯನೆಂಬ ವಿನೋದಗಾರನಿದ್ದನು. ಅವನು ತನ್ನ ವಿನೋದದಮಾತುಗಳಿಂದ ಹಳ್ಳಿಯ ಜನರನ್ನು ಹೊಟ್ಟೆಹುಣ್ಣಾಗುವಂತೆ ನಗಿಸುತ್ತಿದ್ದನು. ಹಳ್ಳಿಯ ಜನರಿಗೆ ಚೆನ್ನಯ್ಯನು ಮನರಂಜನೆಯ ವಸ್ತುವಾಗಿದ್ದನು.

ಕೊಟ್ರಪ್ಪನವರು ನಾಗರಹಳ್ಳಿಯ ಗೌಡರು. ಗೌಡರೆಂದರೆ ಹಳ್ಳಿಯಲ್ಲಿ ರಾಜರಿದ್ದಂತೆಯೆ. ಕೊಟ್ರಪ್ಪನವರ ದಷ್ಟಪುಷ್ಟ ದೇಹ, ಡೊಳ್ಳು ಹೊಟ್ಟೆ, ಗೊಗ್ಗರ ಧ್ವನಿ, ಮಾತಿನಲ್ಲಿ ಬಿಗುವು, ಎಲ್ಲವೂ ಗೌಡಿಕೆಗೆ ಒಪ್ಪುವಂತಹವಿದ್ದವು. ಅವರನ್ನು ಮಾತಾಡಿಸುವ ಧೈರ್ಯ ಯಾರಿಗೂ ಇರಲಿಲ್ಲ.

ಹೀಗಿರಲು ಒಮ್ಮೆ ಕೊಟ್ರಪ್ಪನವರಿಗೂ, ಚನ್ನಯ್ಯನಿಗೂ ವಾದ ಬಿತ್ತು. ಚೆನ್ನಯ್ಯನು, "ಗೌಡರೆ, ಜನಸಮೂಹದಲ್ಲಿ ನಿಮ್ಮನ್ನು ನಾನು ಒಮ್ಮೆ ಒಂಟಿ ಹೆಸರಿನಿಂದ ಒದರುವೆ." ಎಂದು ಹೇಳಿದನು. ಚೆನ್ನಯ್ಯನ ಮಾತಿಗೆ ಗೌಡರು ನಕ್ಕು ಅಂದರು, "ಹಳ್ಳಿಗೆ ಗೌಡನಾದ ನನಗೆ ನೀನು ಒಂಟಿ ಹೆಸರಿನಿಂದ ಕರೆಯುವದೆಂದರೇನು, ಇದು ಎಂದಿಗೂ ಶಕ್ಯವಾಗಲಿಕ್ಕಿಲ್ಲ" ಅದಕ್ಕೆ ಚೆನ್ನಯ್ಯನು ಉತ್ತರ ಕೊಟ್ಟನು. "ಗೌಡರೆ, ನಿಮ್ಮನ್ನು ನಾನು ಒಂಟಿ ಹೆಸರಿನಿಂದ ಕರೆಯದಿದ್ದರೆ ನಾನು ವಿನೋದಗಾರ ಚೆನ್ನನೇ ಅಲ್ಲ."

ದಿನಗಳು ಕಳೆದವು. ಒಮ್ಮೆ ಯಾವುದೊ ಒಂದು ವ್ಯಾಜ್ಯದ ನಿಮಿತ್ತ ಕೊಟ್ರಪ್ಪನವರಿಗೆ ಪಟ್ಟಣಕ್ಕೆ ಹೋಗುವ ಪ್ರಸಂಗ ಬಂದಿತು. ಆವರು ತಮ್ಮ ಜೊತೆಗೆ ಚೆನ್ನಯ್ಯನನ್ನೂ ಕರೆದುಕೊಂಡು ಹೋದರು. ಗೌಡರು ಅರ್ಜಿ ಮಾಡಲು ಕೋರ್ಟಿನೊಳಗೆ ಹೋದರು. ಚೆನ್ನಯ್ಯನು ಅವರ ಹಾದಿಕಾಯುತ್ತ ಕೋರ್ಟಿನ ಬಾಗಿಲಿಗೆ ಆತು ನಿಂತುಕೊಂಡನು. ಸ್ವಲ್ಪ ವೇಳೆಯ ನಂತರ ಗೌಡರು ಅರ್ಜಿಮಾಡಿ ಕೋರ್ಟಿನ ಹೊರಗೆ ಬಂದರು. ಅವರ ಹಾದಿಯನ್ನೇ ಕಾಯುತ್ತಿದ್ದ ಚೆನ್ನಯ್ಯನು ಅವರನ್ನು ಕಂಡೊಡನೆ, "ಕೊಟ್ರ್ಯಾ" ಎಂದು ಒದರಿದನು. ಕೊಟ್ರಪ್ಪನವರಿಗೆ ತಮ್ಮನ್ನು ಒಂಟಿ ಹೆಸರಿನಿಂದ ಏಕೆ ಒದರುತ್ತಿದ್ದಾನೆ ಎಂದು ಆಶ್ಚರ್ಯವಾಗಿ ಬೆರಗಾಗಿ ಸುಮ್ಮನೆ ನಿಂತರು, ಗೌಡರು. ಸುಮ್ಮನೆ ನಿಂತುದನ್ನು ನೋಡಿ ಚೆನ್ನಯ್ಯನು ಮತ್ತೊಮ್ಮೆ "ಕೊಟ್ರ್ಯಾ" ಎಂದು ಜೋರಿನಿಂದ ಒದರಿದನು. ಕೋರ್ಟಿನಲ್ಲಿ ಇದ್ದ ಜನರು ಘೊಳ್ಳನೆ ನಕ್ಕರು. ಈಗ ಮಾತ್ರ ಗೌಡರಿಗೆ ಕೋಪವು ತಲೆಗೇರಿತು. "ಅಲ್ಲೊ ಚನ್ಯಾ, ಈ ನೆರೆದ ಜನರಲ್ಲಿ ನನ್ನನ್ನು "ಕೊಟ್ರ್ಯಾ" ಎಂದು ಒಂಟಿ ಹೆಸರಿನಿಂದ ಒದರಿ ಈ ರೀತಿ ಅಪಮಾನಗೊಳಿಸ ಬೇಕೆ ?" ಎಂದು ಗದ್ದರಿಸಿದರು. ಆಗ ಚೆನ್ನಯ್ಯನು ನಗುತ್ತ, "ಅಲ್ರೀ ಗೌಡ್ರ," "ಅರ್ಜಿ ಕೊಟ್ರ್ಯಾ" ಎಂದು ಕೇಳಿದೆ" ಎಂದು ಅಂದನು. ಎಲ್ಲರೂ ನಕ್ಕರು ಗೌಡರೂ ನಕ್ಕರು.



# ಶ್ರೀ. ಯಮುನಾಬಾಯಿ ನಾಡಕರ್ಣಿ ಮುಖ್ಯಾಧ್ಯಾಪಿಕೆ ಇವರ ವ್ಯಕ್ತಿಪರಿಚಯ

ಲೇ:- ಶ್ರೀ. ಗುರುನಾಥ ಜೋಶಿ

ಮಕ್ಕಳೊಡನೆ ಮಕ್ಕಳಾಗಿ ನಲಿಯುವ ಭಾಗ್ಯ, ಎಲ್ಲರಿಗೂ ಸಿಗದಿರುವ ಭಾಗ್ಯ. ಇಂತಹ ಪರಮಭಾಗ್ಯವನ್ನು ನಮ್ಮ ಶ್ರೀ. ಯಮುನಾಬಾಯಿ ನಾಡಕರ್ಣಿ ಇವರು ದೊರಕಿಸಿಕೊಂಡಿದ್ದಾರೆ. ಪ್ರತ್ಯಕ್ಷ ತಾಯಿಯು ಸಹ ಮಕ್ಕಳಲ್ಲಿ ಕಾಣದ ದಿವ್ಯಪ್ರೇಮ ಜ್ಞಾನಗಳನ್ನು ಶ್ರೀ. ನಾಡಕರ್ಣಿಯವರು ಕಂಡಿದ್ದಾರೆ. ಇವರು ಶಿಕ್ಷಣ ಖಾತೆಯಲ್ಲಿ ಒಳ್ಳೇ ಆದರ್ಶ ಶಿಕ್ಷಕಿಯರಾಗಿ ಕೆಲಸಮಾಡಿದ್ದಾರೆ. ಶಿಕ್ಷಿಕಿಯ ವೃತ್ತಿಯಲ್ಲಿ ಎಷ್ಟೋ ಜನರಿದ್ದಾರೆ; ಆದರೆ ಅದರಲ್ಲಿಯ ಮರ್ಮವನ್ನರಿತು, ಮಕ್ಕಳ ಮನವನ್ನು ಕಂಡುಹಿಡಿದು, ಅವರ ಮನೋವೃತ್ತಿಗೆ ತಕ್ಕಂತೆ ಶಿಕ್ಷಣ ಕೊಡುವ ಹದವನ್ನರಿತವರು ಕೇವಲ ವಿರಳ. ಅಂತಹ ವಿರಳ ವ್ಯಕ್ತಿಗಳಲ್ಲಿ ನಮ್ಮ ಶ್ರೀ. ನಾಡಕರ್ಣಿಯವರೊಬ್ಬರು. ಇವರ ಮುಖದ ಮೇಲೆ ಸದಾ ಮುಗುಳ್ನಗೆಯು ಇರುವದನ್ನು. ಕಾಣುವ ಮಕ್ಕಳು ಯಾವ ಭಯವೂ ಇಲ್ಲದೆ, ತಾಯಿಯ ಬಳಿ ಹೋಗುವ ತೆರದಿಂದ ಇವರನ್ನು ಕಂಡೊಡನೆ ಅವರ ಸುತ್ತುಗಟ್ಟುತ್ತಾರೆ. ತಮಗೆ ತೋರಿದ ಪ್ರಶ್ನೆಗಳನ್ನು ಕೇಳುತ್ತಾರೆ. ಅವರೆಲ್ಲರಿಗೂ ಇವರು ಮುಗುಳ್ನಗೆಯಿಂದಲೇ ಉತ್ತರಕೊಟ್ಟು, ಅವರೊಡನೆ ನಕ್ಕು ನಲಿಯುತ್ತಾರೆ.

ಶ್ರೀಮತಿ ಯಮುನಾಬಾಯಿಯವರು ಆದರ್ಶ ಶಿಕ್ಷಕಿಯರೂ ಅದರಂತೆ ಆದರ್ಶ ವಿದ್ಯಾರ್ಥಿನಿಯರೂ ಎನ್ನಲಡ್ಡಿಯಿಲ್ಲ. ಇವರು "ನಾನು ಕಲಿಯತಕ್ಕ ವಿಷಯಗಳು ಇನ್ನೂ ಬಹಳ ಇವೆ" ಎಂದು ಯಾವಾಗಲೂ ಹೇಳುತ್ತಿರುವರಲ್ಲದೆ, ಯಾವದೊಂದು ಹೊಸ ವಿಷಯಗಳನ್ನು ಕಂಡೊಡನೆ ಕಲಿಯುವ ಪ್ರಯತ್ನಮಾಡಿ ಅದನ್ನು ಪೂರ್ಣಗೊಳಿಸುತ್ತಾರೆ. ತಮ್ಮ ಶಾಲೆಗೆ ಹೊಸ ಶಿಕ್ಷಕಿಯರು ಬಂದಲ್ಲಿ ಅವರಿಗೆ ಅಲ್ಪಾವಧಿಯಲ್ಲೇ ಒಳ್ಳೇ ತರಬೇತಿ ಕೊಡುವದರಲ್ಲಿ ಇವರದು ನುರಿತಕೈ. ಶಾಲೆ ಕಾಲೇಜುಗಳ ಪ್ರತಿಯೊಂದು ಚಟುವಟಿಕೆಗಳಲ್ಲಿ ಇವರು ಒಳ್ಳೇ ಮಾರ್ಗ

ದರ್ಶಕರು, ಶಿಕ್ಷಕವೃತ್ತಿಗೆ ಅವಶ್ಯವಾಗಿ ಬೇಕಾದ ಮಕ್ಕಳ ಮೇಲಿನ ಅಸಾಧಾರಣ ಮಮತೆ ಇವರಲ್ಲಿ ಸ್ವಾಭಾವಿಕವಾಗಿರುವದರಿಂದ ಈ ವೃತ್ತಿಯಲ್ಲಿ ಇವರೊಳ್ಳೇ ಆದರ್ಶರಾಗಲು ಅನುವುದೊರೆತಂತಾಗಿದೆ. ಇವರು ಯಾವದೇ ವಿಷಯುವನ್ನಾದರೂ ತಮ್ಮ ಅನುಭವಪೂರ್ಣ ಮನಸ್ಸಿನಿಂದಲೇ ಹೇಳುವದರಿಂದ, ಆ ವಿಷಯುವು, ಶಿಕ್ಷಕಿ ವಿದ್ಯಾರ್ಥಿನಿಯರು ತಮ್ಮ ಭಾವೀ ಶೈಕ್ಷಣಿಕ ಜೀವನದಲ್ಲಿ ಬರುವ ಎಲ್ಲ ಕುಂದಕೊರತೆಗಳನ್ನು ನೀಗಿಸಿಕೊಳ್ಳಲು ಊರುಗೋಲಾಗುತ್ತದೆ.

ಶ್ರೀಮತಿಯವರ ಕಾರ್ಯಗಳ ಅನುಕರಣವೇ ಎಷ್ಟೋ ಶಿಕ್ಷಕಿಯರಿಗೆ ಮಾರ್ಗದರ್ಶನವಾಗಿದೆ. ಹೊಸ ಶಿಕ್ಷಕಿಯರೆನ್ನಿ ಅಥವಾ ಶಿಕ್ಷಕಿಯರಿದ್ದರೂ ಸಹ ಕಲಿಸುವ ರೀತಿ ಶಿಕ್ಷಣದ ಮಹತ್ವವನ್ನರಿಯದ ಎಷ್ಟೋ ಶಿಕ್ಷಕಿಯರು ತಮ್ಮ ವರ್ಗದ ೫೦-೬೦ಮಕ್ಕಳೆದುರು ಚೀರಾಡಿ,ಹೊಡೆದು, ಹೆದರಿಸಿ ಆ ಮಕ್ಕಳ ತಲೆಯಲ್ಲಿ ವಿಷಯವನ್ನು ತುಂಬುವ ಸಲುವಾಗಿ ದೊಡ್ಡ ಧ್ವನಿ ತೆಗೆದು ವಿಷಯಗಳನ್ನು ಮಕ್ಕಳಿಗೆ ತಿಳಿಯದಂತಹ ಭಾಷಾಶೈಲಿಯಲ್ಲಿ ಕಲಿಸಿದ ವಿಷಯುವನ್ನೇ ಇವರು ಆ ಮಕ್ಕಳ ತಲೆಯಲ್ಲಿ ಆಡಾಡುತ್ತ, ಒಳ್ಳೇ ಮಾರ್ಮಿಕವಾಗಿ ಸರಳಭಾಷೆಯಲ್ಲಿ ತಿಳಿಸಿ, ತುಂಬಿ ಬಿಡುತ್ತಾರೆ. ಮಕ್ಕಳಿಗೆ ಅವರು ಹೇಳಿದ ವಿಷಯುವೊಂದು ತಮಗೆ ಮೊದಲೇ ತಿಳಿದ ವಿಷಯುವೇ ಎನಿಸುವಷ್ಟು ಸರಳವಾಗಿ ಬಿಡುತ್ತದೆ.ಹೀಗಿದೆ ಅವರ ಕಲಿಸುವ ಪದ್ಧತಿ·

"ಮಾತಿಗಿಂತ ಕೃತಿಗೆ ಹೆಚ್ಚು ಮಹತ್ವಕೊಡಿರಿ, ಮಾನವನ ಧ್ವನಿಯು ಒಂದು ತಳವಾರನ ಕಾಳೆಯಲ್ಲ. ಅದನ್ನು ಸುಮ್ಮನೆ ಒದರಗೊಡುವದು ಧ್ವನಿಯ ಅಪವ್ಯಯಮಾಡಿದಂತೆ. ಧ್ವನಿಯ ಸದುಪಯೋಗ ಸಹ ಬಹಳ ಮಹತ್ವದ್ದಿದೆ." ಎಂಬದು ಇವರ ಮುಖ್ಯ ಉಪದೇಶ. ಹಾಗೂ ಇವರ ಆಚಾರವಾದರೂ ವಿಚಾರದಂತೆಯೇ ಇದೆ. ಇವರು ದೊಡ್ಡ ಅಧಿಕಾರಿಗಳಿದ್ದು, ಕೈತುಂಬ ಸಂಬಳವಿದ್ದು, ಯಾವ ಕೆಲಸಮಾಡುವ ಅವಶ್ಯಕತೆ ಇಲ್ಲದಿದ್ದರೂ ಸಹ ಇವರು ಬೆಳಗಿನ ೫ ಘಂಟೆಗೆ ಎದ್ದವರು ದಿನವಿಡೀ ಒಂದಿಲ್ಲೊಂದು ಕೆಲಸದಲ್ಲಿ ತೊಡಗಿಯೇ ಇರುತ್ತಾರೆ. ಇವರಿಗೆ ಗಿಡಗಂಟೆಗಳಲ್ಲಿ ಕೆಲಸಮಾಡುವದರಲ್ಲೂ, 'ಮಗ್ಗದ ಮೇಲೆ ಬಟ್ಟೆ ನೇಯುವದರಲ್ಲೂ ಆಸಕ್ತಿ ಹೆಚ್ಚು. ಮಕ್ಕಳ ಮೇಲೆ ಹೇಗೆ ಮಮತೆಯೋ ಹಾಗೇ ಇತರ ಎಲ್ಲ ಪ್ರಾಣಿಗಳ ಮೇಲೂ ಇವರಿಗೆ ತುಂಬಾ ಮಮತೆ. ಅದರ ದ್ಯೋತಕವೆಂದೇ ಇವರು ಕೋಳಿಗಳನ್ನು ಸಾಕುವ ಉದ್ಯೋಗ ಕೈಕೊಂಡಿದ್ದಾರೆ. ಕೋಳಿಗಳ ಆಟದಲ್ಲಿ ಸಹಾ ಒಂದು ವಿಧ ಮಾಧುರ್ಯ ಕಂಡಿದ್ದಾರೆ. ಇವರು ಕೋಳಿಯ ಮನೆ ಮುಂದೆ ಹಾಯ್ದು ಹೋಗುವಾಗ ಅವುಗಳು ಸಣ್ಣಮಕ್ಕಳಂತೆ ಇವರನ್ನು ಸುತ್ತುವರಿದು ಕಾಲಿಗೆತೊಡಕು ಹಾಕಿಚಿನ್ನಾಟವಾಡುವಾಗ ಇವರು ಅವುಗಳ ಕಡೆಗೆ ಮಮತೆಯಿಂದ ನೋಡುವಚಿತ್ರವನ್ನು ನೋಡಿದರೆ ಪ್ರಾಣಿಗಳಲ್ಲಿ ಸಹ ಇವರಾವದೋ ದಿವ್ಯಜ್ಞಾನ ಕಾಣುತ್ತಿರುವರೆಂಬದು ಸ್ಪಷ್ಟವಾಗುತ್ತಿರುತ್ತದೆ. ನಮ್ಮ ಬಳಿಬರುವ ಕೋಳಿಗಳಿಗೆ ನಾವು ಕಲ್ಲೆಸೆವಾಗ ಇವರು ಅವುಗಳೊಡನೆ ಮಮತೆಯಿಂದ ವಿಹರಿಸುವ ದೃಶ್ಯವು ನಮಗೆ ಪ್ರಾಣಿ

ಗಳ ಬಗ್ಗೆ ಮುಚ್ಚಿ ಅಂತರ್ ಚಕ್ಷುವು ಇವರಲ್ಲಿ ತೆರೆದದ್ದು ಕಂಡುಬರುತ್ತದೆ. ನಾವು ತುಚ್ಛೀಕರಿಸುವ ವಸ್ತುವಿನಲ್ಲಿ ಸಹ ಇವರು ಸೌಂದರ್ಯ ಕಂಡಿದ್ದಾರೆ. ಇದೊಂದು ಇವರ ಕಲಾಭಿಮಾನವೂ ಹೌದು. ಪ್ರತಿಯೊಂದು ವಿಷಯದಲ್ಲೂ ಇವರ ಸ್ವಭಾವವು ಹೀಗೆಯೇ. ‘ ಅಡಿಗೆಗೆ ರುಚಿಬರುವದು ಮಾಡುವ ಕೈಯಿಂದಲ್ಲ, ಉಣ್ಣುವ ನಾಲಿಗೆ ಯಿಂದ; ವಸ್ತುವಿನಲ್ಲಿ ಸೌಂದರ್ಯ ಕಾಣುವದು ಇರುವ ವಸ್ತುವಿನಿಂದಲ್ಲ; ನೋಡುವ ದೃಷ್ಟಿಯಿಂದ ’ ಎಂಬ ಮಾತು ಇವರ ಪ್ರತಿಯೊಂದು ಕಾರ್ಯದಲ್ಲೂ ಕಾಣುವದು. ಇನ್ನು ಇವರು ಶಿಕ್ಷಣಖಾತೆಯಲ್ಲಿ ತಮ್ಮ ಸತತ ಸೇವೆಯನ್ನು ಹೇಗೆ ಸಲ್ಲಿಸುತ್ತಿ ರುವರೆಂಬದನ್ನಷ್ಟು ನೋಡುವಾ.

ಧಾರವಾಡದ ಹೆಣ್ಣು ಮಕ್ಕಳ ಸರಕಾರಿ ಟ್ರೇನಿಂಗ ಕಾಲೇಜದ ಮುಖ್ಯಾಧ್ಯಾಪಿಕೆಯರಾಗಿ ಕಾರ್ಯಮಾಡಿ ಸೇವಾ ನಿವೃತ್ತರಾದ ಶ್ರೀಮತಿ ಯಮುನಾಬಾಯಿ ನಾಡಕರ್ಣಿ ಅವರು ಇದೇ ವರುಷ ಸ್ಥಾಪಿತವಾದ ವನಿತಾ ಸೇವಾ ಸಮಾಜ, ಧಾರವಾಡದಿಂದ ನಡೆಸಲ್ಪಡುತ್ತಿರುವ ಹೆಣ್ಣು ಮಕ್ಕಳ ಟ್ರೇನಿಂಗ ಕಾಲೇಜದ ಮುಖ್ಯಾಧ್ಯಾಪಿಕೆಯರಾಗಿ ಕಾರ್ಯ ಮಾಡುತ್ತಲಿದ್ದಾರೆ. ಇವರು ಶಿಕ್ಷಣ ಪ್ರಪಂಚದ ನಾನಾ ಕ್ಷೇತ್ರಗಳಲ್ಲಿ ಕಾರ್ಯ ಮಾಡಿದ್ದಾರೆ. ಇವರ ಜೀವನ ಬಹುಮುಖಿಯಾಗಿದೆ.

ಇವರು ಕಾರವಾರದಲ್ಲಿ ಹೈಸ್ಕೂಲು ಶಿಕ್ಷಣವನ್ನು ಪ್ರಾರಂಭಿಸಿದ ಪ್ರಥಮ ಮಹಿಳೆಯೆಂದು ಪ್ರಸಿದ್ಧಿ. ಅಲ್ಲಿಯ ಶಿಕ್ಷಣವನ್ನು ಮುಗಿಸಿಕೊಂಡು ಮುಂಬಯಿ ವಿಲ್ಸನ್ ಕಾಲೇಜನ್ನು ಸೇರಿ ೧೯೨೪ ರಲ್ಲಿ ಪದವೀಧರರಾದರು. ಮತ್ತು ಮುಂಬಯಿ ಬಿ. ಟಿ. ಕಾಲೇಜ ಸೇರಿ ಬಿ. ಟಿ. ಆದರು. ಇವರು ಮೊದಲು ಸೇವೆಗೆ ಸೇರಿದುದು ಧಾರವಾಡದ ಎ. ವ್ಹಿ. ಸ್ಕೂಲಿನಲ್ಲಿ ೧೯೨೪ ರಲ್ಲಿ. ೧೯೪೭ ರಲ್ಲಿ ಧಾರವಾಡದ ಹೆಣ್ಣು ಮಕ್ಕಳ ಸರಕಾರಿ ಟ್ರೇನಿಂಗ ಕಾಲೇಜ ಲೇಡಿ ಸುಪರಿಂಟೆಂಡೆಂಟರಾಗಿ ನಿಯಮಿಸಲ್ಪಟ್ಟರು. ಇದೇ ೧೯೫೨ನೇ ಸಂಸ್ಥೆಯಿಂದ ಇದೇ ನವಂಬರ ೪ನೆಯ ತಾರೀಖಿಗೆ ಸೇವಾ ನಿವೃತ್ತರಾದರು. ಇದೂ ಅಲ್ಲದೆ ‘ ಕನ್ನಡ ಪ್ರಾಥಮಿಕ ಶಿಕ್ಷಣ ’ ಮಾಸ ಪತ್ರಿಕೆಯ ಸಹ ಸಂಪಾದಕರಾಗಿಯೂ ೩-೪ ವರ್ಷಗಳಿಂದ ಕಾರ್ಯ ಮಾಡಿದ್ದಾರೆ. ಸತತೋದ್ಯೋಗ, ಕರ್ತವ್ಯದಕ್ಷತೆ, ಲಲಿತಕಲಾಪ್ರೇಮ, ಸೌಹಾರ್ದ, ಸಹಕಾರ, ನಿರಾಡಂಬರ ಜೀವನ, ಸೌಜನ್ಯ, ಶಿಕ್ಷಣದಲ್ಲಿ ಆಸ್ಥೆ ಮತ್ತು ನಿಸ್ಪೃಹತೆ ಮುಂತಾದ ಗುಣಗಳಿಂದ ಅಧಿಕಾರಿಗಳ, ಸಹೋದ್ಯೋಗಿಗಳ ಮತ್ತು ಶಿಷ್ಯವೃಂದದ ಮೆಚ್ಚುಗೆಯನ್ನು ಪಡೆದ ಮಹಿಳಾ ಮಣಿಗಳೆಂದರೆ ಶ್ರೀಮತಿ ಯಮುನಾಬಾಯಿ ನಾಡಕರ್ಣಿಯವರು. ಇವರ ನೇತೃತ್ವದಲ್ಲಿ ಹಾಗು ಮಾರ್ಗದರ್ಶನದಲ್ಲಿ ವನಿತಾ ಸೇವಾ ಸಮಾಜದ ಟ್ರೇನಿಂಗ ಕಾಲೇಜ ಘನತೆಗೇರಲೆಂದು ಹಾರೈಕೆ.



# ವಿಧವೆಯ ಗೋಳು

**ಲೇಖಕ:— ಕೆ. ಸಿತಾರಾಮ ಅಡಿಗ. ಕುರಾಡಿ ದ. ಕ.**

ಓ ತಾಯಿ ಎಲ್ಲೆಲ್ಲು ಕಗ್ಗತ್ತಲಾವರಣ
ಶಾಶ್ವತದ ಸಂತಾಪ ಜ್ವಾಲಾಗ್ನಿ ಬವಣೆ ॥
ಇನ್ನೆನಗೆ ಈ ಜಗದಲಿಹುದೇನು ಬರಿ ಶೂನ್ಯ
ಮನ್ನಣೆಯ ಪೆಸರೆಲ್ಲಿ ಕಾಣೆ ನಾನು ॥
ಹೃದಯ ಲೋಕದ ರವಿಯು ಎಲ್ಲಿಹನು ಕಾಣೆ
ನೆಲಸಿಹುದು ಕಾರ್ಗತ್ತಲೆಯು ನನ್ನಾಣೆ ॥
ಓ ತಾಯಿ ನೀಡೆನಗೆ ಆಸರದ ಭರವಸೆಯು
ಗತಿಸಿ ಪೋಪುದು ಜೀವ ನುಚ್ಚು ನೂರಾಗಿ ॥
ಇನ್ನೆಲ್ಲಿ ಈ ಜಗದ ಸುಖ ಭೋಗಲಾಲಸೆಯು
ನನ್ನವರು ನನಗೆಲ್ಲಿ ಈ ಬಾಳು ಬರಿದು ॥
ಆಸರದ ವೃಕ್ಷತಾ-ನಳಿದು ಪೋಪಾಗಂದು
ಕಸವು ಅಲ್ಲದೆ ಏನು ಜತೆಯು ಲತೆಯು ॥
ಹುಟ್ಟಿ ಬೆಳೆದಿಹ ಮನೆಯು ಬಿಟ್ಟು ಬೇರೆಡೆ ಸೇರ್ದೆ
ನಿಷ್ಟುರದ ಬಾಳ್ವೆಯಾಗೆಲೆ ನಿನ್ನ ನಂಬಿ ॥
ಎಷ್ಟೊಂದು ಕಷ್ಟದಲ್ಲಿ ಕುಗ್ಗದೇ ಒಂದಿನಿತು
ಸೃಷ್ಟಿಮಾಯೆಯೊಳ್ ಬಿದ್ದೆ ನಾನಿನ್ನ ಬಿಟ್ಟು ॥
ಹುಟ್ಟಿದಾ ಜೀವನಿಗೆ ಮರಣವೆಂದಿಗು ದಿಟವು
ಕಷ್ಟ ಕಾರ್ಪಣ್ಯದಾ ಮಾಯ ದಿಟವು ॥
ಪಟ್ಟ ಬವಣೆಯ ನೀನು ಒಂದಿನಿತು ಎಣೆಸದೇ
ಬಿಟ್ಟು ಹೋಗ್ವದು ಸರಿಯೆ ನರಕದಲಿ ನೀ ಎನ್ನನಿಟ್ಟು ॥

# ಪ್ರಬೋಧಾನಂದರ ವಿಚಾರ ವಾಹಿನಿ

ಲೇ :— ಗರುಡ ಸದಾಶಿವರಾಯ.

**ಆರ್ಯ ಪ್ರಬೋಧಾಶ್ರಮವು ಗದುಗಿನಲ್ಲಿದೆ. ಅದರ ಸಂಸ್ಥಾಪಕರು ಶ್ರೀ. ಗರುಡ ಸದಾಶಿವರಾಯರು. ಅವರೀಗ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದ್ದಾರೆ. ಈ ಆಶ್ರಮದ ಅವರ ಹೆಸರು ಪ್ರಬೋಧಾನಂದರು.**

(೧) ಹೆಣ್ಣು ಮಕ್ಕಳ ಸರ್ವಾಂಗೀಣ,ಉನ್ನತಿಗಾಗಿಯೇ ಈ ಸಂಸ್ಥೆಯು ಪ್ರಯತ್ನಮಾಡುವದು.

(೨) ದೇಶ ಭಾಷಾ ಮತ್ತು ರಾಷ್ಟ್ರಭಾಷಾ (ಹಿಂದಿ) ಎರಡೂ ಭಾಷೆಗಳನ್ನು ಬರವಣಿಗೆ ಸಹಿತ ಕಡ್ಡಾಯವಾಗಿ ಕಲಿಯತಕ್ಕದ್ದು. ಐಚ್ಛಿಕವಾಗಿ ಸಾಧ್ಯವಿದ್ದಷ್ಟು ಭಾರತೇತರ ಭಾಷೆಗಳಲ್ಲಿ ಉಪನ್ಯಾಸ ಮಾಡುವ ರೂಢಿಯನ್ನು ಮಾಡಿಕೊಳ್ಳಬಹುದು.

(೩) ಮುಖ್ಯವಾಗಿ ಹೆಣ್ಣುಮಕ್ಕಳಿಗೆ ಆಯುರ್ವೇದ, ಋತುಮಾನಗಳಿಗನುಸರಿಸಿ ಆರೋಗ್ಯ-ಬಲ-ಬುದ್ಧಿ-ಕ್ರಾಂತಿಗಳಿಗೆ ಸ್ವಲ್ಪೂ ಪೆಟ್ಟಾಗದಂತೆ ಅಡುಗೆ ತಯಾರಿಸುವ ಸೂಪಶಾಸ್ತ್ರ ಕಲಿಸತಕ್ಕದ್ದು. ಹುಟ್ಟಿದ ಮಕ್ಕಳಿಗೆ ಅವರ ನೇತೃತ್ವದಲ್ಲಿ ಬೆಳೆಯುವತನಕ, ಮತ್ತು ಇರುವತನಕ, ಅವುಗಳಿಗೆ ಪ್ರಾಥಮಿಕ ಶಿಕ್ಷಣ ಕೊಡುತ್ತಾ, ಆರೋಗ್ಯದ ಕಡೆಗೆ ನಿಗಾ ಇಡತಕ್ಕದ್ದು.

(೪) ಗಂಡು ಹುಡುಗರನ್ನು ಅವರು ಸ್ವಲ್ಪ ದೊಡ್ಡವರಾಗುತ್ತಲೇ,ಅವರು ಭಾರತ, ಅಥವಾ ಪ್ರಪಂಚದ ಹಿತದ ಯಾವಕ್ರಿಯಾತ್ಮಕ ವ್ಯವಸಾಯದಲ್ಲಿ ಆಸ್ಥೆವಹಿಸಿ ಕೆಲಸಮಾಡಬಹುದೆಂಬುದನ್ನೂ ಸೂಕ್ಷ್ಮ ಮತ್ತು ನಿತ್ಯ ನಿರೀಕ್ಷಣೆಯಿಂದ ಕಂಡು ಹಿಡಿದು, ಆ ಬಗ್ಗೆ ಲಿಖಿತ ಮೂಲಕ ಪ್ರಶಸ್ತಿಯನ್ನು ಕೊಟ್ಟು ಅವರಿಗೆ ಮುಂದಿನ ಮಾರ್ಗವನ್ನು ಕಂಡುಕೊಳ್ಳಲಿಕ್ಕೆ ಮಹಿಳಾ ಶಾಲೆಯಿಂದ ಬೇರೆ ಮಾಡತಕ್ಕದ್ದು

(೫) ದಿವ್ಯ ಬೆಳೆಯನ್ನು ಕೊಡುವ ಭೂಮಿಯು ಕಸುವುಳ್ಳದ್ದಾಗಿರಬೇಕು. ಅದರಲ್ಲಿ ಪೈರು ಪಚ್ಚೆ ಕೆಡಿಸುವ ಕಸ ಕಡ್ಡಿ ಮತ್ತು ನಟ್ಟು ಇರಕೂಡದು. ಅತ್ಯಂತ ಹಸನಾಗಿರತಕ್ಕದು. ಹಾಗೆ ಪುರುಷೋತ್ತಮರನ್ನೂ ಆದರ್ಶ ನಾರೀ ರತ್ನಗಳನ್ನೂ ಮಹಾಭಾರತದ ಪರಂಪರೆಗೆ ತಕ್ಕ ॥ ಕೃಣ್ವಂತೋ ವಿಶ್ವಮಾರ್ಯಂ ॥ ಎಂದು ಸಮಸ್ತಲೋಕಗಳಿಗೂ ಕೇಳಿಸುವಂತೆ ಸಾರುವ ನಿರ್ಭೀತವಾಗಿರುವ ಸಂತಾನಗಳು ಕಾಯಕ, ವಾಚಕ, ಮಾನಸಿಕ, ಯಾವ ಕಲಂಕವಿಲ್ಲದ ಸತಿಯರನ್ನೂ ಮತ್ತೂ ನಿಷ್ಕಲಂಕ ಶಿವಸ್ವರೂಪಿಗಳಾದ ನಿಸ್ವಾರ್ಥಿ ಪುರುಷರನ್ನೂ ನಿರ್ಮಲ ಸ್ತ್ರೀಯರೇ ಒದಗಿಸಬಲ್ಲರು. ಅಂತಹ ನಾರಿಯರೇ ವಿಶ್ವದಲ್ಲಿ ತುಂಬಿಹೋಗಲೆಂಬ ಗುರುತರವಾದ ಗುರಿಯೇ ಪ್ರಬೋಧಾಶ್ರಮದ ಅಂತಿಮ ಸಾಧ್ಯವೆಂದು ಇಟ್ಟುಕೊಳ್ಳಲಾಗಿದೆ.

(೬) ಅಂತರಂಗದ ನೈರ್ಮಲ್ಯಗುರಿಗೆ ಪೋಷಕ ಮತ್ತು ಸಹಾಯಕವಾದ ಬಹಿರಂಗದ ನೈರ್ಮಲ್ಯಕ್ಕೆ ಆಶ್ರಮವಾಸಿಗಳು ಮತ್ತು ಅದರ ಚಾಲಕ ಪಾಲಕ ಅಧ್ಯಾಪಕವರ್ಗದವರೆಲ್ಲರೂ ನಿರ್ದಾಕ್ಷಿಣ್ಯವಾದ ಅವಶ್ಯವಾದ ನಿಗಾ ಇಡತಕ್ಕದ್ದು.

(೭) ಎಲ್ಲ ಪಂಗಡದ ಭಾರತೀಯ ಮಹಿಳಾವರ್ಗದ ಎಲ್ಲ ಬಗೆಯ ಉನ್ನತಿಗಾಗಿ ದುಡಿಯಬೇಕೆಂಬ ಈ ಸಂಸ್ಥೆಗೆ ಕುಬೇರನ ನಿಧಿಯೇ ಬೇಕು. ಅದಾದರೂ ಕಣ್ಣಿಗೆ ಕಾಣದ ಲೋಕದಲ್ಲಿಲ್ಲ. ಈ ಭೂಲೋಕದಲ್ಲಿಯೇ ಇರುವದು. ಅದರ ಪ್ರವಾಹವನ್ನು ಈ ಪ್ರಬೋಧಾಶ್ರಮದ ಚಟುವಟಿಕೆ ಮತ್ತು ಉನ್ನತಿಗಳಿಗಾಗಿ ಮೊದಮೊದಲು ಸಣ್ಣಾಗಿ ಹರಿದು ಬರುವಂತೆ ಮಾಡುವ ಸಾಮರ್ಥ್ಯವು, ಕಲಾಪೂರ್ಣ ಭಾವಪೂರ್ಣ ಮತ್ತು ಸಶಾಸ್ತ್ರ ನಾಟಕ, ಗಾಯನ, ನರ್ತನ, ಚಿತ್ರಕಲೆಗಳೇ ಮೊದಲಾದ ಹೆಣ್ಣುಮಕ್ಕಳಿಗೆ ನೀಗುವ ಕಲೆಗಳ ಪ್ರದರ್ಶನಗಳಿಂದಲೇ ಸುಸಾಧ್ಯವೆಂದು ನಮ್ಮ ನಂಬಿಗೆ. ವಿಶೇಷವೇನು ? ಅವರ ಸ್ವಾವಲಂಬನ ಜೀವನಕ್ಕೆ ವರ್ತಮಾನಕಾಲದಲ್ಲಿ ಪ್ರಚಲಿತ ಫೋಟೋಗ್ರಾಫಿ-ಟೇಲರಿ-ಟಾಯಿಪರಾಯಿಟಿಂಗ-ರೇಡಿಯೋ-ವಾಚ-ಟಾಯಿಮಪೀಸ-ಕ್ಲಾಕ್- ಸಾಯಿಕಲ-ಗ್ರಾಮೊಫೋನೊ ಮೊದಲಾದವುಗಳ ರಿಪೇರಿ-ಕೃಷಿಯಲ್ಲಿ-ಹಣ್ಣು ಹಂಪಲ-ಕಾಯಿಪಲ್ಲೆ ಹೂವು ದವನ ಮರುಗ ಇತ್ಯಾದಿಗಳನ್ನು ಬೆಳೆಸುವ, ತಕ್ಕಮಟ್ಟಿನ ಡೇರಿಫಾರ್ಮ ಮತ್ತು ಜೇನು ಸಾಕುವದೇ ಮೊದಲಾದ ಶಿಕ್ಷಣಗಳನ್ನು ಕೂಡಿಸುವದು.

—ಆಡಳಿತರಂಗ—

(೮) ಈಗಿನ ಶಿಕ್ಷಣಪಡೆದ ಹೆಣ್ಣುಮಕ್ಕಳು ಕದಾಚಿತ ಸರಕಾರಿ ನೌಕರಿಗಳಲ್ಲಿ ನಿರಂತರ ವಿಚಾರವಿಲ್ಲದ ಅಜ್ಞಾನಿ ಜನಸಾಮಾನ್ಯರೊಡನೆ ಸಮಯಾನುಸಾರ ಬಿರುಸಾಗಿ ನಡೆಯ ಬಹುದಾದ ಆಡಳಿತ (Government) ದೊಳಗಿನ ಎಲ್ಲ ಶಾಖೆಗಳಲ್ಲಿನ ಭಾಗಗಳನ್ನು ಬಿಟ್ಟು ಮಿಕ್ಕವುಗಳಿಗೆಲ್ಲ ಸ್ತ್ರೀಯರನ್ನೇ ನೇಮಿಸಿಕೊಳ್ಳಲು ಸರಕಾರವನ್ನು ಸವಿನಯ ಭಾವದಿಂದ ಒತ್ತಾಯ ಪಡಿಸಿ ಮಹಳೆಯರಿಗೆ ತಕ್ಕ ತರಬೇತುಕೊಡಿಸುವಂತೆ ಮಾಡುವದು. ಯಾಕಂದರೆ ಹೆಣ್ಣುಮಕ್ಕಳು ಸಹ ಗಂಡುಮಕ್ಕಳಂತೆ ಶಾಲೆಕಾಲೇಜು ಶಿಕ್ಷಣ ಪಡೆದು ಪದವೀಧರರಾಗಿದ್ದಾರೆ. ಮತ್ತು ಆಗುತ್ತ ನಡೆದಿದ್ದಾರೆ.

(೯) ಹೆಣ್ಣು ಮಕ್ಕಳಿಗೆ ತಕ್ಕ ವ್ಯಾಯಾಮ ತಪ್ಪದೆ ಮಾಡಿಸುವದಲ್ಲದೆ ಅವರನ್ನು ಸ್ವಸಂರಕ್ಷಣ ಕ್ಷಮರನ್ನಾಗಿ ಮಾಡಿಸುವದು. ಅಪಾಯವಿಲ್ಲದ ಜಲಾಶಯಗಳಲ್ಲಿ ಈಜು ಕಲಿಸುವದು.

(೧೦) ಭೂಮಿಗೆ ಭಾರವಾಗದ ಬಲ-ತೇಜ-ದೇಹಾದಿಗಳಿಂದಿರುವ ದೀರ್ಘಜೀವಿಗಳಾದ ಸಂತಾನ, ಮಿತವಾಗಿ ಪಡೆಯುವ ಮತ್ತು ಅವುಗಳ ಸಂಗೋಪನ ಮಾಡುವ ಕ್ರಮವನ್ನು ಸಂಸಾರದಲ್ಲಿ ಪದಾರ್ಪಣಮಾಡುವ ಸ್ನಾತಕಿಯರಿಗೆ ಮನದಟ್ಟುಮಾಡಿಕೊಡುವದು.

(೧೧) ॥ ಭದ್ರಂ ತದ್ ವಿಶ್ವಂ ಯದ್ ವದಂತಿ ದೇವಾಃ ॥ ಎಂಬುದನ್ನು ಅತ್ಯಂತ ಪ್ರಾಚೀನಕಾಲದಲ್ಲಿ ಋಷಿಗಳು ಸಾರಿದ್ದಾರೆ. ಅದನ್ನು ಕಾರ್ಯರೂಪದಲ್ಲಿ ತರುವಂತೆ ಪ್ರಯತ್ನ ಮಾಡಲು ಭೂಭಾಗದ ಯಾವತ್ತೂ ಮಾನವಕೋಟಿಗೆ ಪ್ರಚೋದನೆ ಸಿಗತಕ್ಕದ್ದು.

(೧೨) ಸದರಿ ಬ್ರಹ್ಮಸೇವೆಯು ಪ್ರಸಾರವಾಗಿ ಮಾನವಲೋಕದಲ್ಲಿ ಸಮರ್ಪಕವಾಗಿ ಕಾರ್ಯರೂಪದಲ್ಲಿ ಬರಬೇಕಾದರೆ, ಹೆಚ್ಚು ಹೆಚ್ಚಾಗಿ ಅಲ್ಲಲ್ಲಿಗೆ ಶಾಲೆಗಳನ್ನಿಡುವದು ಅವುಗಳಲ್ಲಿ ಪರಸ್ಪರ ವಿಚಾರವಿನಿಮಯಮಾಡಿ ಉದ್ದೇಶ ಸಾಧನೆಯನ್ನು ಸುಲಭವಾಗಿಸಲು ನಿತ್ಯಶಃ ಬಾನುಲಿ ಮತ್ತು ಟೇಲಿಫೋನುಗಳ ಸಹಾಯ ಪಡೆಯಲಿಕ್ಕೆ ಎಲ್ಲ ಸರಕಾರಗಳ ಅಪ್ಪಣೆ ಪಡೆಯತಕ್ಕದ್ದು.

(೧೩) ಪ್ರತಿಯೊಂದು ಶಾಲೆಯಲ್ಲಿ ಬೋಧಕಿಯರಿದ್ದು ಅವರು ತಮ್ಮ ಸುತ್ತಮುತ್ತಲಿನ ಮಾನವ ಸಹೋದರಿಯರಿಗೆ ಸದ್ ಬೋಧಗಳನ್ನು ಬೋಧಿಸಲು ಸತತವಾಗಿ ಪ್ರಯತ್ನ ಮಾಡತಕ್ಕದ್ದು.

(೧೪) (ಅ) ಮಾನವರಲ್ಲಿ ಯುದ್ಧಗಳೇ ಆಗದಂತೆ ಪ್ರಯತ್ನ ಮಾಡುವದು. (ಆ) ಅಪರಿಹಾರ್ಯವಾಗಿ ಯುದ್ಧವೇ ಆಗುವದಾದರೆ ಉಭಯ ಪಕ್ಷದವರು ಧರ್ಮಯುದ್ಧವನ್ನೇ ಆಡತಕ್ಕದ್ದು. ಧರ್ಮಯುದ್ಧಮಾಡುವ ಯೋಧರು ಸಮಾನ ಬಗೆಯ ಆಯುಧಗಳನ್ನು ಉಪಯೋಗಿಸತಕ್ಕದ್ದು. ಯುದ್ಧರಂಗದಲ್ಲಿ ಬೇಕಾದಷ್ಟು ಚಟುವಟಿಕೆಯನ್ನೂ ಕೌಶಲ್ಯವನ್ನು ತೋರಿಸಬಹುದು.



ಎಲ್ಲ ಕೆಲಸಗಳು, ಶ್ರೀ ಅಮ್ಮನವರಲ್ಲಿ ಭಕ್ತಿಯುಳ್ಳ ಆಗಿನ ಕಾಲದ ಭಾವಿಕ ಜನರು ತಾವಾಗಿಯೇ ತಂದು ಅರ್ಪಿಸುವ ದ್ರವ್ಯದ ಸಾಹಾಯ್ಯದಿಂದ ನಡೆಯುತ್ತಿದ್ದವು. ಶ್ರೀ ಅಮ್ಮನವರು ಸ್ವತಃ ಕೇವಲ ನಿರಿಚ್ಛೆಯುಳ್ಳವರಿದ್ದರು. ಯಾಚನಾಮಾಡುತ್ತಿರಲಿಲ್ಲ. ಎಂದರೆ ಈ ಸ್ವಾಧ್ವಿಯವರು ಕೇವಲ ಅಯಾಚಿತವೃತ್ತಿಯಿಂದಲೇ ಇರುತ್ತಿದ್ದರು. ಇವರು ಶ್ರೀಹರಿಪರಮಾತ್ಮನಿಗೆ ಸರ್ವಥೈವಶರಣಾಗತರಾಗಿ, ಆತನ ಧ್ಯಾನದಲ್ಲಿಯೇ ಯಾವಾಗಲೂ ತಲ್ಲೀನರಾಗಿರುತ್ತಿದ್ದರು. ಅತಏವ ಶ್ರೀ ಪರಮಾತ್ಮನ ಕೃಪೆಯಿಂದ ಪರಮ ಭಗವದ್ಭಕ್ತರಾದ ಶ್ರೀ ಅಮ್ಮನವರಿಗೆ ಧನದ ಸಮೃದ್ಧಿಯು ಯಾವಾಗಲೂ ಇರುತ್ತಿದ್ದಿತು.[೧]

ಇವರು ಪ್ರತಿವರ್ಷ ವೆಂಕಟರಮಣಗಿರಿಯ ಯಾತ್ರೆಗೆ ನವರಾತ್ರಿಯ ಮಹೋತ್ಸವಕ್ಕೆ ಪಾದಚಾರಿಯಾಗಿ ಹೋಗಿಬರುತ್ತಿದ್ದರು. ಇವರ ಜೊತೆಯಲ್ಲಿ ನೂರಾರು ಜನ ಬಡ ಬ್ರಾಹ್ಮಣರು ಕುಟುಂಬಸಹಿತವಾಗಿ ಯಾತ್ರೆಗೆ ಹೋಗಿಬರುತ್ತಿದ್ದರು. ಈ ಎಲ್ಲ ಕೌಟುಂಬಿಕ ಯಾತ್ರಿಕರ ಯೋಗಕ್ಷೇಮವನ್ನು ಶ್ರೀ ಅಮ್ಮನವರೇ ವಹಿಸಿಕೊಳ್ಳುತ್ತಿದ್ದರು. ಹೂನೂರಿನಿಂದ ಶ್ರೀ ವೆಂಕಟರಮಣಗಿರಿಯವರೆಗೆ ಸುಮಾರು ೩೦೦ ಮೈಲು ಪ್ರಯಾಣವನ್ನು ಮಾರ್ಗದಲ್ಲಿ ಇಂಥಿಂಥ ಗ್ರಾಮಗಳಲ್ಲಿಯೇ ಇಳಿದುಕೊಳ್ಳುತ್ತ ಇಳಿದುಕೊಳ್ಳುತ್ತ ಕ್ರಮದಿಂದ ಪಾದಚಾರಿಯಾಗಿ ಹೋಗತಕ್ಕದ್ದೆಂದು ನಿರ್ಣಯಿಸಿಕೊಂಡು ಮಾರ್ಗಕ್ರಮಣಮಾಡುತ್ತಿದ್ದರು. ಶ್ರೀ ಅಮ್ಮನವರು ತಾವು ನಿರ್ಣಯಿಸಿದ ಗ್ರಾಮಕ್ಕೆ ಹೋದಕೂಡಲೆ, ಅಲ್ಲಿಯ ಶ್ರೀ ಮುಖ್ಯಪ್ರಾಣದೇವರ ಮಂದಿರದಲ್ಲಿಯೇ ಎಂದರೆ ಶ್ರೀ ಮಾರುತಿ ದೇವಾಲಯದಲ್ಲಿಯೇ ಸರ್ವಪರಿವಾರದೊಡನೆ ತಂಗುತ್ತಿದ್ದರು. ತಂಗಿದ ಕೂಡಲೇ ಅಕ್ಷತೆಹನುಮಪ್ಪನು ಸಣ್ಣ ಕೂಸುಗಳಿಗೆ ಹಾಲನ್ನು ಮೊದಲು ತಂದುಕೊಡುವನು. ಅನಂತರ ಅಡಿಗೆಗೆ ಬೇಕಾಗುವ ಸಾಮಾನುಗಳನ್ನು ತಂದುಕೊಡುತ್ತಿದ್ದನು. ಆ ಬಳಿಕ ಸ್ವತಃ ಹನುಮಪ್ಪನು ಮಧ್ಯಾಹ್ನ ಸ್ನಾನಮಾಡಿ ಶ್ರೀ ನರಸಿಂಹ ಶಾಲಗ್ರಾಮವನ್ನೂ ಶ್ರೀ ವೆಂಕಟೇಶದೇವರ ಪ್ರತಿಮೆಯನ್ನೂ ಪೂಜಿಸಿ, ಧೂಪ, ದೀಪ, ನೈವೇದ್ಯ, ವೈಶ್ವದೇವ ಮಾಡುವಷ್ಟರಲ್ಲಿ, ಶ್ರೀ ಅಮ್ಮನವರೂ ಇತರ ಎಲ್ಲ ಸದ್ಗೃಹಿಣಿಯರೂ ಸದ್ಗೃಹಸ್ಥರೂ ಸ್ನಾನ, ಆಹ್ನಿಕ ಮುಂತಾದವುಗಳನ್ನು ನೆರವೇರಿಸಿಕೊಂಡು ಸಿದ್ಧರಾಗಿರುತ್ತಿದ್ದರು ಆಗ್ಗೆ ಆ ಅಕ್ಷತೆ ಹನುಮಪ್ಪನು ಶ್ರೀ ಅಮ್ಮನವರಿಗೂ ಮಿಕ್ಕವರಿಗೂ ತೀರ್ಥವನ್ನು ಕೊಡುತ್ತಿದ್ದನು. ತದನಂತರ ಎಲ್ಲರೂ ಭೋಜನ ಮಾಡಿಕೊಂಡು, ಸ್ವಲ್ಪವಿಶ್ರಮಿಸುತ್ತಿದ್ದರು. ತರುವಾಯ ಸಾಧ್ವಿಶಿರೋಮಣಿ ಶ್ರೀ ಅಮ್ಮನವರು ಆಗ್ರಾಮದ ಜನರಿಗೆ ಹಾಗೂ ಪರಿವಾರಕ್ಕೆ ಧರ್ಮೋಪದೇಶ ಮಾಡಿ, ಆಶೀರ್ವಾದಮಾಡುತ್ತಿದ್ದರು. ಆಬಳಿಕ ಶ್ರೀ ಅಮ್ಮನವರು ತಮ್ಮ ಪರಿವಾರ ಸಹಿತ ಮುಂದಿನ ಗ್ರಾಮಕ್ಕೆ ಪ್ರಯಾಣಮಾಡುತ್ತಿದ್ದರು.

(೧) ಅನನ್ಯಾಶ್ಚಿಂತಯಂತೋಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥
(ಶ್ರೀ ಭಗವದ್ಗೀತಾ ಅ. ೯. ಶ್ಲೋ. ೨೨)

ಶ್ರೀ ಅಮ್ಮನವರು ಗಿರಿ ಯಾತ್ರೆಗೆ ಹೋಗುವಾಗ ಹಾಗೂ ಬರುವಾಗ ಮಾರ್ಗದಲ್ಲಿಯ ಗ್ರಾಮಗಳ ಭಾವಿಕ ಜನರು "ನಮ್ಮ ಊರಿಗೆ ಶ್ರೀ ಅಮ್ಮನವರು ಇಂದು ಅಥವಾ ನಾಳೆ ದಯಮಾಡಿಸುವರು." ಎಂದು ಯೋಚಿಸುತ್ತ, ಶ್ರೀ ಅಮ್ಮನವರ ಸಂದರ್ಶನಕ್ಕೂ ಅವರ ಸೇವೆಯನ್ನು ಮಾಡುವುದಕ್ಕೂ ಕಾದಿರುತ್ತಿದ್ದರು.

ಇದೇ ರೀತಿಯಾಗಿ ಶಕವರ್ಷದ ೧೭೯೦ (ಕ್ರಿಸ್ತವರ್ಷದ ೧೮೬೮) ರಿಂದ ಶ. ವ ೧೮೩೦ರ (ಕ್ರಿ. ವ. ೧೯೦೮ರ) ವರೆಗೆ ೪೦ ವರ್ಷಗಳಲ್ಲಿ ಅಖಂಡವಾಗಿ ೪೦ ಸಲ ವೆಂಕಟರಮಣಗಿರಿಯ ಯಾತ್ರೆಯನ್ನು ಶ್ರೀ ಅಮ್ಮನವರು ಸ್ವತಂತ್ರರೀತಿಯಿಂದ ಮಾಡಿದರು. ಇದಕ್ಕೂ ಪೂರ್ವದಲ್ಲಿ ಗುರುವರ್ಯರಾದ ಪರಮ ಪೂಜ್ಯ ದೇವದುರ್ಗದ ಗಿರಿಯಪ್ಪನವರ ನೇತೃತ್ವದಲ್ಲಿ ೨೦ ವರ್ಷಗಳವರೆಗೆ ಶ್ರೀ ತಿರುಪತಿಯ ಯಾತ್ರೆಯನ್ನು ಶ್ರೀ ಅಮ್ಮನವರು ಮಾಡಿದರೆಂಬುದನ್ನೂ ಹಿಂದೆಯೇ ಹೇಳಿದ್ದೇವೆ. ಒಟ್ಟಿನಲ್ಲಿ ೬೦ ವರ್ಷಗಳವರೆಗೆ ಶ್ರೀ ಅಮ್ಮನವರು ವೆಂಕಟರಮಣಗಿರಿಯ ಯಾತ್ರೆಯನ್ನು ಎಡೆಬಿಡದೆ ಮಾಡಿ ಧನ್ಯರಾದರು! ಇದರಿಂದ ಈ ಸಾಧ್ವಿಯರ ಹೃದಯದಲ್ಲಿದ್ದ ದೃಢವಾದ ಭಗವದ್ಭಕ್ತಿಯೂ ಕರ್ತೃತ್ವಶಕ್ತಿಯೂ ಚೆನ್ನಾಗಿ ವ್ಯಕ್ತವಾಗುತ್ತವೆ.



## ೫ ನೇ ಅಧ್ಯಾಯ

### ಬರಗಾಲದಲ್ಲಿ ಶ್ರೀ ವೆಂಕಟರಮಣಗಿರಿಯ ಯಾತ್ರೆಯು.

ಶ್ರೀ ಅಮ್ಮನವರು ಪ್ರತಿವರ್ಷ ತಪ್ಪದೆ ನವರಾತ್ರಿಯ ಮಹೋತ್ಸವಕ್ಕೆ ಶ್ರೀ ವೆಂಕಟರಮಣಗಿರಿಯ ಯಾತ್ರೆಯನ್ನು ಮಾಡುತ್ತಿದ್ದರು. ಅವರ ಜೊತೆಯಲ್ಲಿ ನೂರಾರು ಬಡ ಬ್ರಾಹ್ಮಣರು, ತಮ್ಮ ಹೆಂಡಂದಿರು ಮಕ್ಕಳು ಸಹಿತವಾಗಿ ಯಾತ್ರೆಗೆ ಹೊರಡುತ್ತಿದ್ದರು. ಇವರೆಲ್ಲರ ಯೋಗಕ್ಷೇಮವನ್ನು ಶ್ರೀ ಅಮ್ಮನವರೇ ವಹಿಸಿಕೊಳ್ಳುತ್ತಿದ್ದರು. ಇದೆಲ್ಲ ಸಂಗತಿಯನ್ನು ನಾವು ಹಿಂದೆಯೇ ಹೇಳಿದ್ದೇವೆ. "ಶಕವರ್ಷದ ೧೭೨೮ನೆಯ ಕ್ಷಯನಾಮ ಸಂವತ್ಸರದಲ್ಲಿ ಬರಗಾಲವು ಉಗ್ರಸ್ವರೂಪವನ್ನು ಧಾರಣ ಮಾಡಿತು." ಎಂಬ ವೃತ್ತಾಂತವು "ಶ್ರೀ ಚಿದಂಬರ ವಿಜಯ." ಗ್ರಂಥದಲ್ಲಿ (ಪುಟ ೨೧೫) ವರ್ಣಿತವಾಗಿದೆ. ಇದೇ ಬರಗಾಲದಲ್ಲಿ.

### ಮುರಗೋಡ ಶ್ರೀ ಚಿದಂಬರ ದೀಕ್ಷಿತ ಮಹಾಸ್ವಾಮಿಗಳವರ ಸಂದರ್ಶನ

ಶ್ರೀ ತಿಮ್ಮಮ್ಮನವರು ಶ್ರೀ ಚಿದಂಬರ ದೀಕ್ಷಿತ ಮಹಾಸ್ವಾಮಿಗಳವರ ಸಂದರ್ಶನಕ್ಕೆಂದು ಈ ಹೂನೂರು ಗ್ರಾಮದಿಂದ ಹೊರಟರು. ಇವರೊಡನೆ ಇವರ ಭಕ್ತರಾದ ಸದ್ಗೃಹಸ್ಥರು ಹಾಗೂ ಸದ್ಗೃಹಿಣಿಯರು ೫೦-೬೦ ಜನ ಹೊರಟರು. ಇವರೆಲ್ಲರೂ ಪಾದಚಾರಿಗಳಾಗಿ ಮಮಣಗತಿಯಿಂದ ಸಾಗಿ, ಮಹಾಸ್ವಾಮಿಗಳವರ

ಜನ್ಮಸ್ಥಾನ ಮತ್ತು ವಾಸಸ್ಥಾನವಾದ ಮುರಗೋಡದ ತೀರ ಸಮೀಪಕ್ಕೆ ತಲಪಿದರು. ಆ ದಿವಸ ಹೊತ್ತು ಮುಳುಗುವುದಕ್ಕೆ ಸುಮಾರು ೧ಳ್ತಿ ತಾಸು ಇರುವಾಗ ಶ್ರೀ ಸ್ವಾಮಿಗಳವರ ಸನ್ನಿಧಿಯಲ್ಲಿ ವಿದ್ವಜ್ಜನರೂ, ಭಾವಿಕ ಭಕ್ತರೂ, ಆಪ್ತಬಂಧುಗಳೂ, ಪ್ರತಿಷ್ಠಿತ ಮಂಡಳಿಯೂ ಹಾಗೂ ಇತರರೂ ಎಡ ಬಲ ಸಮ್ಮುಖಗಳಲ್ಲಿ ಸುಖಾಸೀನರಾಗಿದ್ದರು. ಶ್ರೀ ದೀಕ್ಷಿತರವರು ತಮ್ಮ ಯೋಜಿತವಾದ ಉಚ್ಚಾಸನದಲ್ಲಿ ಮಂಡಿಸಿದ್ದರು. ಸತ್ಕಾಲಕ್ಷೇಪದ ಪ್ರಸಂಗಾನುಸಾರವಾಗಿ ಭಾಷಣಗಳು ನಡೆದಿದ್ದವು. ಇಂಥ ಸಮಯದಲ್ಲಿ ಶ್ರೀ ದೀಕ್ಷಿತರವರು ಒಮ್ಮೆಲೇ ತಮ್ಮ ಸ್ಥಳದಿಂದ ಎದ್ದು ನಿಂತರು. ಕೂಡಲೇ ಸಭಿಕರೆಲ್ಲರೂ ಆಶ್ಚರ್ಯ ಚಕಿತರಾಗಿ ಎದ್ದು ನಿಂತರು! "ತಾವು ಒಮ್ಮೆಲೇ ಎದ್ದ ಕಾರಣವೇನು ?" ಎಂದು ಆ ಸಭೆಯಲ್ಲಿಯ ವಿಶ್ವಾಸಾರ್ಹರಾದ ಸದ್ಗೃಹಸ್ಥರು ಪ್ರಾರ್ಥನಾರೂಪದಿಂದ ಕೇಳಿಕೊಂಡರು. ಆಗ ಶ್ರೀ ದೀಕ್ಷಿತರವರು:- "ನಡೆಯರಿ ಹೋಗೋಣ; ತಾಯಿಯವರಾದ ಶ್ರೀ ಹೊಸೂರು ತಿಮ್ಮಮ್ಮನವರು ನಮ್ಮ ಗ್ರಾಮದ ಸಮೀಪದಲ್ಲಿ ನನ್ನಲ್ಲಿಗೆ ಬರಲೋಸುಗ ಬರುತ್ತಿರುವರು." ಎಂದು ಹೇಳುತ್ತ ಹಾಗೆಯೇ ಮುಂದಕ್ಕೆ ನಡೆದರು. ಕೂಡಲೇ ಯಾವತ್ತೂ ಜನರು ಶ್ರೀ ದೀಕ್ಷಿತರವರನ್ನು ಹಿಂಬಾಲಿಸಿದರು. ಮಾರ್ಗದಲ್ಲಿ ಅತ್ತಿತ್ತ ತಿರುಗಾಡುತ್ತಿದ್ದ ಜನರು ಸಹ ಮಹಾಸ್ವಾಮಿಗಳ ಹಿಂದೆ ಹೊರಟರು. ಹೀಗೆ ಅನೇಕ ಜನ ಸಮುದಾಯದೊಡನೆ ತೆರಳಿದ ಶ್ರೀ ದೀಕ್ಷಿತರವರು ಊರ ಹೊರಭಾಗದ ಸ್ವಲ್ಪ ಮಾರ್ಗವನ್ನು ಕ್ರಮಿಸುವಷ್ಟರಲ್ಲಿ ಸಮ್ಮುಖದಲ್ಲಿ ಪಾದಚಾರಿಗಳಾಗಿ ಬರುತ್ತಿರುವ ಶ್ರೀ ಅಮ್ಮನವರನ್ನು ಕಂಡರು. ತೀರ ಸಮೀಪಕ್ಕೆ ಬಂದಾಗ್ಗೆ, ಶ್ರೀ ಅಮ್ಮನವರು, ಈ ಯಾವತ್ತೂ ಜನಸ್ತೋಮದಿಂದೊಡಗೂಡಿ ದಯಮಾಡಿಸಿದ ಸಾಕ್ಷಾತ್ ಅವತಾರ ಪುರುಷನನ್ನು ಸಾಷ್ಟಾಂಗ ನಮಸ್ಕಾರಗಳಿಂದ ಸೇವೆಯನ್ನು ಮಾಡಬೇಕೆಂದು ತಮ್ಮ ಹಸ್ತದಲ್ಲಿ ಧಾರಣ ಮಾಡಿರುವ ದಂಡ ಮತ್ತು ಗೋಪಾಳಗಳನ್ನು ಇಟ್ಟು ತಮ್ಮ ಹೆಗಲ ಮೇಲಿನ ಅರಿವೆಯನ್ನು ರಾಜಮಾರ್ಗದ ಮೇಲೆ ಹಾಸುವಷ್ಟರಲ್ಲಿ, ಶ್ರೀ ದೀಕ್ಷಿತರವರು ತಾವೇ ಮುಂದುವರಿದು ಶ್ರೀ ಅಮ್ಮನವರಿಗೆ ನಮಸ್ಕಾರಮಾಡಿದರು. ಆಗ ಶ್ರೀ ಅಮ್ಮನವರು:- "ಅಪ್ಪಾ, ನೀನು ಜಗತ್ಕಲ್ಯಾಣಾರ್ಥವಾಗಿ ಅವತರಿಸಿದ ಸಾಕ್ಷಾತ್ ಪ್ರಭು ಇರುತ್ತೀ; ನೀನು ನನಗೆ ಈ ರೀತಿ ಸತ್ಕರಿಸಬಹುದೇ ? ಕ್ಷಮಿಸು." ಎಂದು ನುಡಿದು, ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಲು ಹೋದರು. ಆ ಕ್ಷಣವೇ ಶ್ರೀ ದೀಕ್ಷಿತರವರು:- "ತಾವು ಮಾತೃ ಶ್ರೀಗಳು. ನನಗೆ ವಂದ್ಯರಿರುವಿರಿ; ಕಾರಣ ನೀವು ಹಾಗೆ ಮಾಡಬೇಡಿರಿ." ಎಂದು ನುಡಿದು, ಅವರಿಂದ ನಮಸ್ಕರಿಸಿಕೊಳ್ಳದೆ, ತಾವೇ ಪುನಃ ನಮಸ್ಕಾರಮಾಡಿದರು. ಆಗ ಆ ಉಭಯತರ ನೇತ್ರಗಳಲ್ಲಿ ಆನಂದಾಶ್ರುಗಳು ಧಾರೆಗರೆದವು, ಪರಮ ಮಹನೀಯರಾದ ಈ ಸಾಧುಗಳ ಹಾಗೂ ಸಾಧ್ವಿಯರ ವಿಷಯವಾಗಿ ನೆರೆದ ಪ್ರೇಕ್ಷಕ ಮಂಡಳಿಯು ಬೆರಗಾಗಿ ತಟಸ್ಥ ನಿಂತಿತು! ಕ್ಷಣಕಾಲದ ಮೇಲೆ ಯೋಗಕ್ಷೇಮದ ವಿಚಾರ ಮಾಡುತ್ತ

ಎಲ್ಲ ಜನರ ಸಂಗಡ ಶ್ರೀ ಅಮ್ಮನವರನ್ನೂ ಅವರ ಪರಿವಾರದವರನ್ನೂ ಶ್ರೀ ದೀಕ್ಷಿತರವರು ತಮ್ಮ ಗೃಹಕ್ಕೆ ಕರೆದುಕೊಂಡು ಹೋದರು. ಶ್ರೀ ತಿಮ್ಮಮ್ಮನವರು ಶ್ರೀ ಚಿದಂಬರ ದೀಕ್ಷಿತ ಮಹಾಸ್ವಾಮಿಗಳವರ ಸಂದರ್ಶನಕ್ಕೆ ಬಂದಕಾಲವೆಂದರೆ ಶಕವರ್ಷದ ೧೭೨೭ (ಎಂದರೆ ಕ್ರಿಸ್ತ ವರ್ಷದ ೧೮೦೫) ಈ ಕಾಲಕ್ಕೆ ಶ್ರೀ ತಿಮ್ಮಮ್ಮನವರಿಗೆ ೭೭ ವರ್ಷಗಳ ವಯಸ್ಸಾಗಿದ್ದಿತು. ಶ್ರೀ ಚಿದಂಬರ ದೀಕ್ಷಿತ ಮಹಾಸ್ವಾಮಿಗಳವರಿಗೆ ೪೭ ವರ್ಷಗಳ ವಯಸ್ಸಾಗಿದ್ದಿತು. ಆದ್ದರಿಂದಲೇ ಈ ಮಹನೀಯರಿಬ್ಬರಿಗೆ ಪರಸ್ಪರ ಭೆಟ್ಟಿಯಾದ ಸಮಯದಲ್ಲಿ ಮಹಾಸ್ವಾಮಿಗಳವರು ತಿಮ್ಮಮ್ಮನವರಿಗೆ 'ತಾಯಿ' ಎಂದು ಸಂಬೋಧಿಸಿರುವುದು ಯಥೋಚಿತವಾಗಿದೆ.

ಶ್ರೀ ತಿಮ್ಮಮ್ಮನವರು ಮೂರು ದಿವಸಗಳವರೆಗೆ ಶ್ರೀ ದೀಕ್ಷಿತ ಮಹಾಸ್ವಾಮಿಗಳವರ ಗೃಹದಲ್ಲಿ ಇದ್ದು, ಅವರ ಯಥಾರ್ಥ ಪ್ರೀತಿಯ ಆದರಾತಿಥ್ಯವನ್ನು ವನ್ನು ಸ್ವೀಕರಿಸಿ, ತ್ರಿಕರಣಪೂರ್ವಕವಾದ ತಮ್ಮ ಭಕ್ತಿಭಾವನೆಯನ್ನರ್ಪಿಸಿ, ಸಂತುಷ್ಟರಾಗಿ ತದನಂತರ ಯುಕ್ತಸನ್ಮಾನದಿಂದ ನಿರೋಪವನ್ನು ಪಡೆದು, ಪಯಣವನ್ನು ಬೆಳಸಿ ಸ್ವಸ್ಥಾನಕ್ಕೆ (ಹೂನೂರಿಗೆ) ತಲಪಿದರು.

(**ವಾಚಕ ಮಹಾಶಯರಿಗೆ ವಿನಂತಿ:—** (೧) ಶ್ರೀ ತಿಮ್ಮಮ್ಮನವರು, ದೇಶದ ತುಂಬಾ ಬರಗಾಲ ಉಂಟಾಗಿದ್ದಾಗಲೂ ಸಹ ನೂರಾರು ಬಡಕುಟುಂಬಗಳನ್ನು ಸಂಗಡ ಕರೆದುಕೊಂಡು, ಪಾದಚಾರಿಯಾಗಿ ತಿರುಪತಿ ಯಾತ್ರೆಯನ್ನು ಮಾಡಿರುವುದು, (೨) ದೇಶದಲ್ಲೆಲ್ಲಾ ಕಡೆಗೂ ಕಾಲರಾ ಬೇನೆಯು ಹಬ್ಬಿದಾಗ ಸಹ ಶ್ರೀ ಅಮ್ಮನವರು ಅನೇಕ ಕುಟುಂಬಗಳೊಡನೆ ಶ್ರೀ ವೆಂಕಟರಮಣಗಿರಿಯ ಯಾತ್ರೆಯನ್ನು ಮಾಡಿರುವುದು, (೩) ಶ್ರೀ ವೆಂಕಟೇಶ ಭಕ್ತಿಯು ಕರ್ನಾಟಕದಲ್ಲಿ ಎಂದಿನಿಂದ ಪ್ರಚಾರದಲ್ಲಿ ಬಂದಿತು. ? (೪) ಶ್ರೀ ರಾಮಾನುಜಾಚಾರ್ಯರ ಶಿಷ್ಯರಾದ ಉತ್ತರ ಭಾರತದ ಆರ್ಯವೈಶ್ಯರು (ಎಂದರೆ ಮಾರವಾಡಿಗಳು) ಶ್ರೀ ವೆಂಕಟೇಶ ದೇವರನ್ನು 'ಬಾಲಾಜಿ' ಎಂದು ಯಾಕೆ ಸಂಬೋಧಿಸುತ್ತಿದ್ದಾರೆ. ? (೫) ತಿರುಮಲೆಯಲ್ಲಿ ಈ ಶ್ರೀ ವೆಂಕಟೇಶ ದೇವರನ್ನು ಶ್ರೀ ರಾಮಾನುಜಾಚಾರ್ಯರು ಪ್ರತಿಷ್ಠೆಯನ್ನು ಮಾಡಿರುತ್ತಾರೆಯೋ ಹೇಗೆ ? ಎಂಬವೇ ಮೊದಲಾದ ವಿಷಯಗಳನ್ನು ಕುರಿತು ಚಿಕಿತ್ಸಕ ದೃಷ್ಟಿಯಿಂದ ಸಪ್ರಮಾಣವಾಗಿ ಚರ್ಚಿಸಿ, ವಿಸ್ತಾರವಾಗಿ ಬರೆದು, ಸಾಧ್ವಿ ಶಿರೋಮಣಿ ಹೂನೂರ ಶ್ರೀ ತಿಮ್ಮಮ್ಮನವರ ಆರಾಧನಾ ಸಂಸ್ಥೆಯ ಅಧ್ಯಕ್ಷರಾದ ಶ್ರೀಮಾನ್ ಪಂಡಿತ ಬಿಂದುರಾವ ಮುಜುಮದಾರ ಗುಡಗಂಟಿ, ಇವರಾಗಲಿ, ಉಪಾಧ್ಯಕ್ಷರಾದ ಶ್ರೀಮಾನ್ ಭೀಮರಾವ ಕುಲಕರ್ಣಿ ಕಂದಗಲ್ಲ ಇವರಾಗಲಿ ಸ್ವತಂತ್ರವಾಗಿ ಪ್ರಸಿದ್ಧಪಡಿಸುವ ಶ್ರೀ ತಿಮ್ಮಮ್ಮನವರ ಚರಿತ್ರೆಯಲ್ಲಿ ಪ್ರಕಟ ಮಾಡುತ್ತೇನೆ.

ಈ 'ವೀರಮಾತೆ' ಮಾಸಪತ್ರಿಕೆಯಲ್ಲಿ ಸ್ಥಳಾಭಾವದ ಮೂಲಕ ಕೊನೆಯ ಭಾಗವಾದ 'ಶ್ರೀ ತಿಮ್ಮಮ್ಮನವರ ನಿರ್ಯಾಣ' ಎಂಬ ಅಧ್ಯಾಯವನ್ನು ಮಾತ್ರ ಪ್ರಕಟಗೊಳಿಸಿ, ಲೆಕ್ಕಣಿಕೆಯನ್ನು ಕೆಳಗಿಡುತ್ತೇನೆ.)

# ೬ ನೇ ಅಧ್ಯಾಯ

## ಸಾಧ್ವಿಶಿರೋಮಣಿ ಶ್ರೀ ತಿಮ್ಮಮ್ಮನವರ ನಿರ್ಯಾಣ.

ಶ್ರೀ ತಿಮ್ಮಮ್ಮನವರು ೧೭೩೩ ನೆಯ ಶಕವರ್ಷದಲ್ಲಿ (ಎಂದರೆ ಕ್ರಿಸ್ತ ವರ್ಷದ ೧೮೧೧ ರಲ್ಲಿ) ತಮ್ಮ ೮೩ ನೆಯ ವರ್ಷದ ವಯಸ್ಸಿನಲ್ಲಿ ತಿರುಪತಿಯ ಯಾತ್ರೆಯನ್ನು ನೆರವೇರಿಸಿಕೊಂಡು ಬಂದಬಳಿಕ ಪೌಷ್ಯಮಾಸದಲ್ಲಿ ವಾರ್ಧಕ್ಯದ ಮೂಲಕ ದೇಹದಲ್ಲಿ ಅನಾರೋಗ್ಯವುಂಟಾಗಿ ಹಾಸಿಗೆಯನ್ನು ಹಿಡಿದರು. ಆದರೂ ಸುಸಂಸ್ಕೃತವಾದ ಅವರ ಹೃದಯವು ಮಾತ್ರ ತೇಜಃಪುಂಜವಾಗಿಯೇ ಇದ್ದಿತು. ಆ ಕಾಲಕ್ಕೆ ಈ ಹೊನೂರು ಗ್ರಾಮದ ಶ್ರೀ ಮಾರುತಿ ದೇವಾಲಯದಲ್ಲಿದ್ದ ಶ್ರೀ ತಿಮ್ಮಮ್ಮನವರ ಕೊನೆಯ ದರ್ಶನಕ್ಕೋಸ್ಕರ ಈ ಸಾಧ್ವಿಯ ಭಕ್ತರಾದ ಅನೇಕಜನ ಸದ್ಗೃಹಿಣಿಯರೂ ಸದ್ಗೃಹಸ್ಥರೂ ಗುಂಪುಗುಂಪಾಗಿ ಬಂದು, ಈ ಮಹನೀಯಳ ಸನ್ನಿಧಾನದಲ್ಲಿ ನೆರೆದರು. ಈ ಪ್ರಕಾರ ಭಯಭಕ್ತಿಯಿಂದಲೂ ಪೂಜ್ಯಬುದ್ಧಿಯಿಂದಲೂ ಬಂದ ಈ ಸ್ತ್ರೀಯರೂ ಪುರುಷರೂ ಶ್ರೀ ಅಮ್ಮನವರಿಗೆ ಹೀಗೆ ಪ್ರಾರ್ಥಿಸಿದರು:— "ಶ್ರೀ ಅಮ್ಮನವರೇ ತಾವು ನಮ್ಮ ನಾಡಿನಲ್ಲಿ ಅವತರಿಸಿ, ತಮ್ಮ ಉಪದೇಶಾಮೃತದಿಂದ ನಮ್ಮ ಕುಲಕೋಟಿಯನ್ನೆಲ್ಲ ಉದ್ಧಾರಮಾಡಿದಿರಿ. ಇನ್ನು ತಾವು ವೈಕುಂಠಕ್ಕೆ ಗಮನ ಮಾಡತಕ್ಕವರು, ಆದ್ದರಿಂದ ತಮ್ಮ ದಿವ್ಯಹಿತೋಪದೇಶವನ್ನು ಕೇಳಿ ಪುನೀತರಾಗಬೇಕೆಂದು ತಮ್ಮ ಸನ್ನಿಧಿಗೆ ಬಂದಿದ್ದೇವೆ. ತಾವು ಅಪ್ಪಣೆಕೊಡಿಸಬೇಕು." ಈ ಬಿನ್ನಹವನ್ನು ಕೇಳಿ ಶ್ರೀ ಅಮ್ಮನವರು ಹೀಗೆ ಉಪದೇಶಮಾಡಿದರು:— "ಶ್ರೀ ಪರಮಾತ್ಮಸಾಕ್ಷಾತ್ಕಾರವನ್ನು ಹೊಂದಬೇಕಾದರೆ ಮೊಟ್ಟಮೊದಲು ಮೂರ್ತಿಪೂಜೆಯನ್ನು ಮಾಡಬೇಕಾಗುತ್ತದೆ. ಈ ದೇವಮೂರ್ತಿಯೆಂದರೆ ಶ್ರೀ ಪರಮಾತ್ಮನ ಪ್ರತೀಕವೆಂದೇ ಭಾವಿಸಿ ಧ್ಯಾನ ಮಾಡಬೇಕು. ಕೊನೆಯಲ್ಲಿ ಅಂತರ್ಮುಖರಾಗಿ ಹೃದಯಸ್ಥ ಪರಮಾತ್ಮನನ್ನು ಪೂಜಿಸುವುದೇ ಸಾಕ್ಷಾತ್ಕಾರದ ಶ್ರೇಷ್ಠವಾದ ಸಾಧನವಾಗಿದೆ. ಯಾಕೆಂದರೆ ಶ್ರೀ ಪರಮಾತ್ಮನು ಚರ್ಮಚಕ್ಷುವಿಗೆ ಗೋಚರನಾಗುವುದಿಲ್ಲ. ಜ್ಞಾನಚಕ್ಷುವಿಗೆ ಗೋಚರನಾಗುತ್ತಾನೆ. ಅಂತರ್ಮುಖರಾಗಿ ಹೃದಯಸ್ಥ ಪರಮಾತ್ಮನನ್ನು ಧ್ಯಾನಮಾಡುವುದರಿಂದ ದಿವ್ಯದೃಷ್ಟಿಯು ಎಂದರೆ ಜ್ಞಾನಚಕ್ಷುವು ಪ್ರಾಪ್ತವಾಗತ್ತದೆ. ಇಷ್ಟುಮಾತ್ರವೇ ಅಲ್ಲ, ಅಪಾರಶಕ್ತಿಸಂಪನ್ನನಾದಂಥ ಮತ್ತು ಅತ್ಯುತ್ತಮ ಗುಣಪಂಡಿತನಾದಂಥ ಈ ಅಂತರಾತ್ಮನನ್ನೇ ದೃಢವಾಗಿನಂಬಿ ಈ ಪರಮಾತ್ಮನ ಸಂದೇಶದ ಮೇರೆಗೆ ನಾವು ನಡೆದುಕೊಂಡರೆ, ನಮ್ಮ ಆಚಾರವಿಚಾರಗಳೆಲ್ಲವೂ ಈಶ್ವರಪ್ರಣೀತ ಅತ್ಯುಚ್ಚ ತತ್ವಗಳ ಅನುರೋಧದಿಂದಲೇ ನೆರವೇರುತ್ತವೆ. ಆದುದರಿಂದ ಶ್ರೀ ಮಧ್ವಾಚಾರ್ಯರು ಅಪ್ಪಣೆಕೊಡಿಸಿದಂತೆ "ನಾಹಂ ಕರ್ತಾ ಹರಿಃಕರ್ತಾ ತತ್ಪೂಜಾ ಕರ್ಮಚಾಖಿಲಮ್" ಎಂಬ ಅಮೃತವಾಣಿಯಪ್ರಕಾರ "ನಾನು ಕರ್ತೃವಲ್ಲ; ನನ್ನ ಹೃದಯದಲ್ಲಿ ಶ್ರೀ ಹರಿಯೇ ನಿಂತುಕೊಂಡು ಎಲ್ಲ ಕೆಲಸಗಳನ್ನೂ ಮಾಡುತ್ತಾನೆ. ಅರ್ಥಾತ್ ನಾನು ಮಾಡುವ ಕೆಲಸಗಳೆಲ್ಲವೂ ಶ್ರೀ ಪರಮಾತ್ಮನ

ಪೂಜೆಯೇ ಆಗಿರುತ್ತದೆ." ಎಂದು ತಿಳಿದು, ಆಸ್ಥಾಪೂರ್ವಕವಾಗಿ ಭಕ್ತಿಯಿಂದ ಎಲ್ಲ ಕೆಲಸಗಳನ್ನು ಮಾಡಿರಿ. ಎಂದರೆ, ಐಹಿಕ ಹಾಗೂ ಪಾರಮಾರ್ಥಿಕ ಈ ಎರಡೂ ಸುಖಗಳನ್ನು ಪಡೆಯುವಿರಿ." ಎಂದು ಉಪದೇಶಮಾಡಿ, ಕೊನೆಗೆ ಹೇಳಿದ್ದೇನೆಂದರೆ:— "ನಾನು ಮರಣಹೊಂದಿದ ಬಳಿಕ ನನ್ನ ಶವವನ್ನು ಈ ಹೂನೂರು ಗ್ರಾಮದ ಈ ಶ್ರೀ ಪ್ರಾಣದೇವರ ಸಮ್ಮುಖವಾಗಿರುವ ಹಳ್ಳದ ಆಚೆಯ ದಂಡೆಯ ಪ್ರದೇಶದಲ್ಲಿ ದಹನ ಮಾಡಿರಿ."

ಮುಂದೆ ಮಾಘ ಶುದ್ಧ ಪ್ರತಿಪದೆಯ ದಿವಸ ಶ್ರೀ ತಿಮ್ಮಮ್ಮನವರು ತಮ್ಮ ೮೫ನೆಯ ವರ್ಷದ ವಯಸ್ಸಿನಲ್ಲಿ ಇಹಲೋಕದ ಯಾತ್ರೆಯನ್ನು ಮುಗಿಸಿ, ವೈಕುಂಠಕ್ಕೆ ಪ್ರಯಾಣ ಮಾಡಿದರು. ಆ ಬಳಿಕ ವಿಧ್ಯುಕ್ತವಾಗಿ ಅವರ ಸ್ಮಶಾನ ಯಾತ್ರೆಯು ನೆರವೇರಿತು. (ಶಕವರ್ಷದ ೧೭೩೫ನೆಯ ಶ್ರೀಮುಖಸಂವತ್ಸರದ ಮಾಘಶುದ್ಧ ೧)

ಶ್ರೀ ಅಮ್ಮನವರು ಆಜ್ಞೆಯನ್ನು ಮಾಡಿದಂತೆಯೇ ಹಳ್ಳದ ಆಚೆಯ ದಡದ ಪ್ರದೇಶದಲ್ಲಿಯೇ ದಹನ ಮಾಡಿದರು. ಈ ದಹನ ಮಾಡಿದ ಸ್ಥಳದಲ್ಲಿ ಶ್ರೇಷ್ಠವಾದ ಶಿಲೆಯಿಂದ ನಿರ್ಮಿಸಲ್ಪಟ್ಟ ಸುಂದರವಾದ ವೃಂದಾವನವನ್ನು ಪ್ರತಿಷ್ಠೆಮಾಡಿದ್ದಾರೆ. ಪ್ರತಿವರ್ಷ ಮಾಘ ಶುದ್ಧ ಪ್ರತಿಪದೆಯ ದಿನಸ ಶ್ರೀ ತಿಮ್ಮಮ್ಮನವರ ಪುಣ್ಯತಿಥಿಯ ಆರಾಧನೆಯ ಮಹೋತ್ಸವವು ಬಹು ವಿಜೃಂಭಣೆಯಿಂದ ನೆರವೇರುತ್ತಿರುತ್ತದೆ. ಈ ಸಾಧ್ವಿಶಿರೋಮಣಿಯು, ದೇವದುರ್ಗದ ಶ್ರೀ ಗಿರಿಯಪ್ಪಯ್ಯನವರು ದೇವರು ಇವರೊಡನೆ ೨೦ ವರ್ಷ, ಮುಂದೆ ೪೫ ವರ್ಷಗಳವರೆಗೆ ಸ್ವತಂತ್ರರೀತಿಯಿಂದ ನೂರಾರು ಬ್ರಾಹ್ಮಣ ಬಡ ಕುಟುಂಬಗಳನ್ನು ಸಂಗಡ ಕರೆದುಕೊಂಡು, ತಿರುಪತಿಯಾತ್ರೆಯನ್ನು ಮಾಡಿದಳು! ಸಾರಾಂಶ, ಶ್ರೀ ತಿಮ್ಮಮ್ಮನವರು ಅವಿಚ್ಛಿನ್ನವಾಗಿ ಒಟ್ಟು ೨೫ ಸಲ ಶ್ರೀ ತಿರುಪತಿಯಾತ್ರೆಯನ್ನು ಮಾಡಿದರೆಂದು ಇತ್ಯರ್ಥ.



## ಸಾದರ ಸ್ವೀಕಾರ

**ಜ್ಯೋತಿ:—** ಕನ್ನಡ ತ್ರೈಮಾಸಿಕ. ಸಂ. ಶ್ರೀ ಹೆಚ್. ಸರ್ವೇಶ್ವರ. ಹೊಸ ಪೇಟೆ. ವಾ. ಚಂ. ೧ ರೂ. ಬಿಡಿಸಂಚಿಕೆ. ೪ ಆಣೆ.

**ಸಾಧನ:—** ಕನ್ನಡ ಮಾಸಪತ್ರಿಕೆ. ಸಂ. ಶ್ರೀ ಗಣಪತಿ ಶಂಕರ ಭಟ್ಟ ಸರ್ಪ ಕರ್ಣೇಶ್ವರ. ಹೊನ್ನಾವರ. ವಾ. ಚಂ. ೫ ರೂ. ಬಿಡಿಸಂಚಿಕೆ. ೬ ಆಣೆ.

**ಮಹಾದೇವಿಯಕ್ಕ:—** ಏಕಾಂಕ ನಾಟಕ. ಲೇ:- ಶ್ರೀ ಮಲ್ಲಿಕಾರ್ಜುನ ಶಿ. ಲಠ್ಠೆ. ಬೆಳಗಾಂವಿ. ಬೆಲೆ ೮ ಆಣೆ.

**ಕಲ್ಯಾಣ:—** ಕವಿತಾಸಂಗ್ರಹ. ಲೇ:- ದಿವಂಗತೆ ಶ್ರೀ. ಸೌ. ಬೆಳಗೆರೆ ಜಾನಕಮ್ಮ. ಬೆಂಗಳೂರ. ಬೆಲೆ. ೧-೪-೦

**ಹೊಲಿಗೆಯ ಕಲೆ:—** ಸಚಿತ್ರ ತ್ರೈಮಾಸಿಕ. ಸಂ. ಹಳಪೇಟ ಚಿಂತಾಮಣಿ ರಾಯರು ಧಾರವಾಡ.





## " ಬಾಣಂತಿ ಉಪಚಾರ ಮತ್ತು ಕೆಲವು ಸ್ತ್ರೀ ರೋಗಗಳು "

ಲೇ:- ಆಯುರ್ವೇದ ವಿದ್ವಾನ ಗುಂಡಾಚಾರ್ಯ ಸವಣೂರ, ಹುಬ್ಬಳ್ಳಿ.

( ಬೆಲೆ ರೂ. ೧-೬-೦ )

ಈ ಉಪಯುಕ್ತವಾದ ಪುಸ್ತಕವು " ವಿವಿಧಜ್ಞಾನ ಸಾಹಿತ್ಯ ಮಾಲೆ " ಯ ಸಂಪಾದಕರಾದ ಶ್ರೀಯುತ ರಾ ಬ. ದೇಶಪಾಂಡೆಯವರಿಂದ ಪ್ರಕಾಶಿಸಲ್ಪಟ್ಟಿದೆ. ಇಂತಹ ಪುಸ್ತಕಗಳು ಕನ್ನಡದಲ್ಲಿ ಬಹು ಕಡಿಮೆ ಇಲ್ಲವೆಂದರೂ ನಡೆಯುವುದು. ಪ್ರತಿಯೊಬ್ಬನೂ ಸಂಗ್ರಹಿಸಬೇಕಾದ ಪುಸ್ತಕವಿದು. ಲೇಖಕರು ಅನುಭವಿಗಳಿದ್ದಾರೆ. ಅವರ ನುಡಿಯಲ್ಲಿ ಸೊಬಗಿದೆ, ಸ್ಪಷ್ಟತೆಯಿದೆ, ಕಳಕಳಿಯಿದೆ, ಜನ ಸಾಮಾನ್ಯರಿಗೆ ತಿಳಿಯಲೆಂದು ಅವರು ಸಾಧ್ಯವಾದಷ್ಟು ಪ್ರಯತ್ನಿಸಿದ್ದಾರೆ. ಬಾಣಂತಿಯರಿಗೆ ಹಾಗೂ ಬಾಣಂತಿಯರಲ್ಲದಿರುವ ಸ್ತ್ರೀಯರಿಗೆ ಬರತಕ್ಕ ರೋಗಗಳನ್ನೂ ಅವುಗಳನ್ನು ಗುಣಪಡಿಸುವ ಕ್ರಮಗಳನ್ನೂ ವಿವರಿಸಿದ್ದಾರೆ. ಅಲ್ಲಲ್ಲಿ ಮನೋಹರವಾದ ಗ್ರಂಥಾಧಾರಗಳನ್ನೂ ಕೊಡಲಾಗಿದೆ. ಇದರಿಂದ ವಿವರಿಸುವ ವಿಷಯವು ಓದುಗರ ಮೇಲೆ ಹೆಚ್ಚು ಬಿಂಬಿಸುವುದು. ಪಾರಿಭಾಷಿಕವೇ ಮೊದಲಾದ ಶಬ್ದಗಳ ಅರ್ಥವಿವರಣೆಯೂ ಪುಸ್ತಕದ ಕೊನೆಯಲ್ಲಿ ಕಂಡುಬರುವುದು. " ತಿದ್ದುಪಡಿಯಲ್ಲಿ " ಕಾಣಲಾಗದ ಮುದ್ರಣ ದೋಷಗಳೂ ಉಳಿದುಕೊಂಡಿವೆ. ಅವೆಲ್ಲವೂ ಮುಂದಿನ ಆವೃತ್ತಿಯಲ್ಲಿ ಮಾಯವಾಗುವುದು ಖಂಡಿತ. ಶ್ಲೋಕಗಳ ಹಾಗೂ ಇಂಗ್ಲಿಷ್ ವಾಕ್ಯಗಳ ಅರ್ಥಗಳನ್ನು ಸಹ ಕೊಟ್ಟಿದ್ದರೆ ಚನ್ನಾಗಿರುತ್ತಿತ್ತು. ಅಂತೂ ಒಟ್ಟಿನಲ್ಲಿ ಈ ಪುಸ್ತಕವು ಸರ್ವ ಗ್ರಾಹ್ಯವಾಗಿದೆಯಲ್ಲದೆ ಮನೆಯಲ್ಲಿ ಕಾದಿಡಲು ಯೋಗ್ಯವಾಗಿದೆ.

(೨) **ಹೊಲಿಗೆಯ ಕಲೆ:—** ಹೊಲಿಗೆಯ ವಿದ್ಯಾಲಯದಿಂದ ಶ್ರೀ ಹಳಪೇಟೆ ಚಿಂತಾಮಣಿರಾಯರು ಹೊರಡಿಸುತ್ತಿರುವ ಈ ತ್ರೈಮಾಸಿಕ ಪತ್ರಿಕೆಯು, ಮನೆಮನೆಗಳಲ್ಲಿನ ಸ್ತ್ರೀಯರೂ ಸಹ ತಮ್ಮ ಬಿಡುವಿನ ವೇಳೆಗಳಲ್ಲಿ ಮನೆಯಲ್ಲೇ ಕುಳಿತು ಶಾಸ್ತ್ರೀಯ ರೀತಿಯಿಂದ ಹೊಲಿಗೆ ಕಲಿಯಲು ಅತ್ಯಂತ ಉಪಯುಕ್ತವಾದ

ದ್ದಿದೆ. ಈ ಪತ್ರಿಕೆಯು ಮನೆಮನೆಗಳಿಗೆ ಸ್ವಾವಲಂಬನದ ಮಾತನ್ನು ಮುಟ್ಟಿಸಿ, ಮನೆಮನೆಗಳ ಹೆಣ್ಣುಮಕ್ಕಳು ತಮ್ಮ ಕುಟುಂಬಗಳಿಗೆ ಆಗಾಗ್ಗೆ ಬೇಕಾಗುವ ಬಟ್ಟೆಗಳನ್ನು ತಕ್ಕಮಟ್ಟಿಗೆ ತಾವೇ ಮನೆಗಳಲ್ಲಿ ಮಾಡಿಕೊಳ್ಳುವ ಪ್ರವೃತ್ತಿ ಹುಟ್ಟಿಸಲು ಸಹಾಯಕಾರಿಯಾಗಲೆಂದು ಹಾರೈಕೆ.

(೩) **ಬಲಿದಾನ:—** ಲೇ. ಪಿ. ವಿಜಯಕುಮಾರ. ಕಣಬರಗಿ. ಶ್ರೀ. ವಿಜಯಕುಮಾರರ ಮೊದಲನೇ ಸಾಹಸವೇ ಈ ಬಲಿದಾನ. ನಮ್ಮ ಜನರಿಗೆ ಇನ್ನು ನಮ್ಮ ಇತಿಹಾಸದ ಪರಿಚಯವು ಅಷ್ಟಾಗಿ ಇಲ್ಲವೆಂದರೂ ಅಡ್ಡಿ ಇಲ್ಲ. ಹೀಗಿರುವಾಗ ಈ ಲೇಖಕರು ತಮ್ಮ ಸರಳ ಭಾಷಾಶೈಲಿಯಲ್ಲಿ ಸಣ್ಣಮಕ್ಕಳಿಗೂ ಸಹ ತಿಳಿಯುವಂತೆ ನಮ್ಮ ಇತಿಹಾಸದಲ್ಲಿ ಬರುವ ಕೆಲವು ಸನ್ನಿವೇಶಗಳನ್ನು ಕಾದಂಬರಿ ರೂಪದಲ್ಲಿ ಚಿತ್ರಿಸಿ ಮಕ್ಕಳಿಗೆ ಸರಳರೂಪದಲ್ಲಿ ಇತಿಹಾಸ ಕಲಿಯಲು ಅನುಕೂಲಮಾಡಿಕೊಟ್ಟಿದ್ದಾರೆ. ಇದೇ ಇವರ ಪ್ರಥಮಕಾದಂಬರಿಯಾದ್ದರಿಂದ, ಅಲ್ಲಲ್ಲಿ ಸ್ವಲ್ಪ ಏರು ತಗ್ಗುಗಳು ಕಾಣುತ್ತಿದ್ದರೂ ಸಹ ಮುಂದೆ ಇದೇ ಈ ಲೇಖನಕೃತಿಯಲ್ಲಿ ಇವರು ತರಬೇತಿ ಹೊಂದಿ ಪ್ರಸಿದ್ಧ ಲೇಖಕರಾಗುವರೆಂಬದರಲ್ಲಿ ಯಾವ ಸಂಶಯವೂ ಇಲ್ಲ. ಶ್ರೀ ವಿಜಯಕುಮಾರರ ಕೃತಿಯು ವಿಜಯ ಗಳಿಸಿ, ನಮ್ಮ ಭಾರತ ದೇಶದ ಮಕ್ಕಳಿಗೆ ಮಾರ್ಗದರ್ಶನವಾಗಲೆಂದು, ಆದರದ ಹಾರೈಕೆ.

(೪) **ಸಾಧನ. ಮಾಸಪತ್ರಿಕೆ:—** ಈ ಮಾಸಪತ್ರಿಕೆಯು ಅನೇಕ ಎಡರು ತೊಡರುಗಳಿಗೆ ಸಿಲ್ಕಿ ಸತ್ತು ಸತ್ತು ಮತ್ತೆ ಮತ್ತೆ ಹುಟ್ಟಿ, ಈಗ ಬೆಳಕಿಗೆ ಬಂದುದು ಅಭಿನಂದನೀಯ ಸಂಗತಿ! ಈಗ ಸಧ್ಯದಲ್ಲಿ ಜಗತ್ತು ಸುಧಾರಣೆಯ ಹಾದಿಯ ಕಡೆಗೇ ಹೊರಟು, ತಮ್ಮ ಜೀವನಾವಶ್ಯಕ ಸಾಧನದ ಕಡೆಗೆ ದುರ್ಲಕ್ಷಿಸಿದಾಗ ಈ ಸಾಧನ ಪತ್ರಿಕೆಯು ತಲೆಯೆತ್ತಿ ಜೀವನ ಸಾಧನಗಳನ್ನೊಳಗೊಂಡು 'ಮೋಕ್ಷಕ್ಕೆ ಸಾಧನ' ಮಾಡಿಕೊಡುತ್ತಿರುವದು ಬಹಳೇ ಶ್ಲಾಘನೀಯ ? ಹೊದಿಕೆಯ ಮೇಲಿನ ಚಿತ್ರಗಳೇ ನಮ್ಮ ಮೋಕ್ಷಸಾಧನದ ಮಾರ್ಗ ತೋರಿಸುತ್ತಿದೆ. ಕೆಲವೊಂದು ಲೇಖಗಳಲ್ಲಿ ಬರುವ ಪ್ರತಿಯೊಬ್ಬ ವ್ಯಕ್ತಿ ಕೃತಿ ಹಾಗೂ ಊರುಗಳ ಹೆಸರುಗಳೂ ಒಂದಕ್ಕೊಂದು ಹೊಂದಿಕೆಯಾಗಿ ತಮ್ಮ ಕಲಾಕೌಶಲ್ಯವನ್ನು ತೋರಿಸುತ್ತಿವೆ. ಸಮಾಜ ನಿರೀಕ್ಷಣೆಯೆಂಬ ಭಾಗದಲ್ಲಿ ಬರುವ ಕನ್ನಡ ನಾಡಿನ ಸ್ತ್ರೀ ಜೀವನವನ್ನು ನಿರೀಕ್ಷಿಸಿದ ಕೆಲವು ಚಿತ್ರಗಳನ್ನು ನಿರೂಪಿಸಿ ವಾಚಕರ, ಹೆಚ್ಚಾಗಿ ಹೆಣ್ಣಿನ ಲಕ್ಷವನ್ನು ಅತ್ತ ಸೆಳೆಯುತ್ತಿರುವ ನಿರೀಕ್ಷಕರ ಕೃತಿಯು ಬಹಳೇ ಸ್ತುತ್ಯವಾದದ್ದಿದೆ ? ಸಧ್ಯದಲ್ಲಿ ಅವಿಚಾರದಿಂದ ತಲೆ ಎತ್ತಿ ಯಾವದೊಂದು ಚಳುವಳಿಯಲ್ಲಿ ತೊಡಗಿ ತಮ್ಮ ಗೌರವಕ್ಕೆ ಇದೇ ಭೂಷಣವೆಂದು ಭಾವಿಸುವ, ಹಾಗೂ ಭಾರತದ ಸಾಮಾಜಿಕ ಉನ್ನತಿಯ ಚಳುವಳಿಯಲ್ಲಿ ಸ್ತ್ರೀ ಸ್ವಾತಂತ್ರ್ಯಕ್ಕೆ ಮುಖ್ಯ ಸ್ಥಾನವಿರಬೇಕು ಮುಂತಾಗಿ ಹೇಳಿ, ಕನ್ನಡ ನಾಡಿನ ಯಾವ ಹಿತಾಹಿತಗಳನ್ನು ನಿರೀಕ್ಷಿಸದೆ ಅವಸರದಿಂದ ಮುನ್ನುಗ್ಗುವ ಅತ್ಯಾಚಾರದ ಮುಖಂಡರಿಗೆ ಬದ್ಧಿ ಕಲಿಸಿ, ಅವರನ್ನು ಮೋಕ್ಷಕ್ಕೆ ಒಯ್ಯಲು ಈ 'ಸಾಧನ' ವೇ ಸಾಧ್ಯವಾಗಲೆಂದು ನಮ್ಮ ಹಾರೈಕೆ ? 'ಸಾಧನ' ದ ಗುರಿಯು ಮನೆ ಮನೆಗಳಲ್ಲಿ ಹರಡಿ ಅದರ ಧ್ಯೇಯ ಸಾಧನವು ಸಾಧ್ಯವಾಗಲೆಂದು ಆಶೆ ?

# ಕಾಯದೆ-ಕಾನೂನು

**ಪ್ರಶ್ನೆ:—** ನಮ್ಮ ಗೆಳೆಯನ ಲಗ್ನ ೪೨ನೇ ಇಸ್ವಿಯಲ್ಲಿ ಆಗಿದೆ. ಅವನ ಹೆಂಡತಿ ೪೭ ರ ವರೆಗೆ ಚನ್ನಾಗಿ ಬಾಳುವೆಮಾಡಿದಳು ಆದರೇ ಈಗ ಎರಡು ತಿಂಗಳಿನಿಂದ ಅವಳ ತಂದೆಯು ಅವಳನ್ನು ಕಳಿಸದಂತಾಗಿದ್ದಾನೆ. ನನ್ನ ಮಿತ್ರನ ಕಡೆಗೆ ಎಳ್ಳಷ್ಟೂ ತಪ್ಪಿಲ್ಲ. ಅವಳ ತಂದೆಗೆ ದುಡ್ಡಿನ ಮತ್ತು ಕಾಯದೇಯ ಬಹಳ ಸೂಕ್ಷ್ಮ ಇದೆ. ನನ್ನ ಮಿತ್ರನು ಹೆಂಡತಿಯನ್ನು ತವರುಮನೆಗೆ ಕಳಿಸಲು ನಿರಾಕರಿಸಿದ್ದನು. ಅವರೇ ಅವಳ ತಂದೆಯು ಅವಳನ್ನು ಒತ್ತಾಯದಿಂದ ಒಯ್ದಿರುತ್ತಾನೆ. ಎರಡನೇ ಹೆಂಡತಿ ಸಿಕ್ಕರೆ ಆಗು ಎನ್ನುತ್ತಾನೆ. ಕಾಯದೆಯಿಂದ ಅವನಿಗೆ ಹಾಗೆ ಮಾಡಲು ಬರುವದಿಲ್ಲವೆಂದು ಅವನನ್ನು ಈ ಶಬ್ದಗಳಿಂದ ಹಿಯಾಳಿಸುತ್ತಲಿದ್ದಾನೆ. ವಕೀಲರ ಸಲಹೆ ನನ್ನ ಮಿತ್ರನು ತೆಡೆದುಕೊಂಡನು. ವಕೀಲರು ಘಟಸ್ಫೋಟ ಮಾಡಿಕೊಳ್ಳೆಂದು ಕೊಟ್ಟ ವಕೀಲರ ಸಲಹೆಯನ್ನು ಸಲಹೆಯ ಉಪಯೋಗವನ್ನು ನನ್ನ ಮಿತ್ರನಿಗೆ ಮಾಡಿಕೊಳ್ಳಲು ಬರುವಂತಿಲ್ಲ. ಯಾಕಂದರೆ ಅವನ ಸಮಾಜವು ಅವನಿಗೆ ಪ್ರಾಯಶ್ಚಿತ ಕೊಡುವದು ಮತ್ತು ಸಮಾಜ ಬಿಟ್ಟು ಹೊರಗೆ ಹಾಕುವದು. ಅವನ ಮಾವನಿಗೆ ಪ್ರಾಯಶ್ಚಿತ ಕೊಡದಷ್ಟು ಸಮಾಜವು ಹುಂಬ ಇರುತ್ತದೆ. ಬಿಡುಗಡೆ ಹೊಂದಲು ಬೇಕಾಗುವ ನಾಲ್ಕು ವರುಷದ ತ್ಯಾಗದ ಅವಧಿಯಲ್ಲಿ ಗಂಡನು ಏನು ಮಾಡಬೇಕು ? ದ್ವಿಭಾರ್ಯಕ ಪ್ರತಿಬಂಧಕ ಕಾಯದೆಯಿಂದ ಆಗತಕ್ಕ ತೊಂದರೆಯ ಉದಾಹರಣೆ ಇದೊಂದಾಗಿದೆ. ಈ ತೊಂದರೆಯನ್ನು ತಪ್ಪಿಸಲು ಸಾಧ್ಯವಿಲ್ಲವೇ ? ಇದರಲ್ಲಿ ಗಂಡಸಿಗೆ ನಷ್ಟವಾದಂತೆ ಸ್ತ್ರೀಯರಿಗಾದರೂ ಇದೆ. ಅವರಿಗಾದರೂ ಎರಡನೇ ಸಂಬಂಧ ಜೋಡಿಸಲು ತೊಂದರೆ ಇದೆ. ಈ ಕಾಯದೆಯಿಂದ ಯಾರ ಹಿತವಾಗಿದೆ ಇದು ತಿಳಿಯದಂತಾಗಿದೆ.

**ಉತ್ತರ:—** ನಿಮ್ಮ ಮಿತ್ರನ ಪರಿಸ್ಥಿತಿ ಬಿಗಿಯೇನೋ ಇದೆ. ನಾವು ಯಾವ ಸಮಾಜದಲ್ಲಿ ಹುಟ್ಟಿರುತ್ತೇವೆ ಆ ಸಮಾಜದ ರೀತಿ ನಡತೆಯ ದುಷ್ಪರಿಣಾಮವನ್ನು ಭೋಗಿಸದ ಹೊರತು ಉಪಾಯವಿಲ್ಲ. ಆದರಂತೆ ಕಾಯದೆಯಲ್ಲಿಯ ದೋಷಗಳಾದರೂ ನಮಗೆ ತ್ರಾಸದಾಯಕವಾಗುವವು ಅವುಗಳನ್ನು ಅನುಭವಿಸದ ಹೊರತು ಗತ್ಯಂತರವಿಲ್ಲ. ತುಂಬಾ ದೋಷರಹಿತ ಕಾಯದೆ ಮಾಡುವದು ಶಕ್ಯವಿಲ್ಲ. ಕಾಯದೆಯ ಗುಣಗಳಂತೆ ದೋಷಗಳನ್ನಾದರೂ ಸ್ವೀಕರಿಸಲೇಬೇಕಾಗುವದು. ಈ ದೃಷ್ಟಿಯಿಂದ ಈ ಕಾಯದೆಗಳ ಕಡೆಗೆ ನೋಡಿದರೆ ಮೊದಲು ಸ್ತ್ರೀ ಜಾತಿಯ ಮೇಲೆ ಯಾವದೊಂದು ಅನ್ಯಾಯವಾಗುತ್ತಿತ್ತೊ ಅದರಿಂದ ಅವರ ರಕ್ಷಣೆ ಮಾಡುವ ಇದೊಂದು ಪ್ರಯತ್ನ. ಈ ಕಾಯದೇಯಲ್ಲಿ ಸುಧಾರಣೆಗೆ ಆಸ್ಪದವಿಲ್ಲದಂತಿಲ್ಲ. ಈ ಕಾಯದೆ ಹೊಸದಾಗಿ ಆಗಿರುತ್ತದೆ. ಮತ್ತು ಅನುಭವದಿಂದ ಅದರಲ್ಲಿ ಸುಧಾರಣೆಯಾಗುವ ಅಪೇಕ್ಷೆಮಾಡಿ ಆ ದೃಷ್ಟಿಯಿಂದ ನಾವು ಮತ ಪ್ರಚಾರ

ಮಾಡುತ್ತಿರಬೇಕು. ಮೇಲೆ ಹೇಳಿದ ಕಾಯದೇ ಪರಿಸ್ಥಿತಿಯ ನಿಮಿತ್ತ ಇದಕ್ಕಿಂತ ಹೆಚ್ಚು ನಿಮ್ಮ ಮಿತ್ರನಿಗೆ ಹೇಳಲು ಬರುವದಿಲ್ಲ.

## ಸುದ್ದಿ-ಸಮಾಚಾರ

**ಮಹಿಳಾ ಹೋಮಗಾರ್ಡ ಪದಕ.**

ಪುಣೆ. ೧೮— ಪುಣೆ ಜಿಲ್ಲೆಯ ಗ್ರಾಮ ಸಂರಕ್ಷಕ ದಲದ ಸ್ತ್ರೀ ಶಾಖೆಯು ನಡೆಯಿಸಿದ ಆದರ ಕಾರ್ಯ ಹಾಗು ಪರೇಡನ್ನು ಮುಖ್ಯ ಮಂತ್ರಿಗಳ ಪಾರ್ಲಮೆಂಟರಿ ಸೆಕ್ರೆಟರಿಗಳಾದ ಶ್ರೀಮತಿ ನಿರ್ಮಲಾ ರಾಜೆ ಭೋಸಲೆ ಇವರು ಇಂದು ನೋಡಿ ಸಮಾಜ ಜೀವನದಲ್ಲಿಯ ಸರ್ವಶಾಖೆಯಲ್ಲಿ ಸ್ತ್ರೀಯರು ಭಾಗವಹಿಸಿ ಹಿಂದೆ ಉಳಿದ ರೆಂಬುವ ಲಕ್ಷಣಗಳನ್ನು ತೆಗೆದು ಹಾಕತಕ್ಕದ್ದೆಂದು ಹೇಳಿದರು.

**೮೦ ವರ್ಷಕ್ಕೆ ಲಗ್ನ.**

ಸುಪ್ರಸಿದ್ಧ ತತ್ವಜ್ಞ ಹಾಗೂ ಜಗತ್ ಪ್ರಸಿದ್ಧ ಲೇಖಕರಾದ ಬೆರ್ಟಾಂಡ ರುಸೆಲ್ಲ ಇವರು ಅಮೇರಿಕಾದ ಬರಹಗಾರಳಾದ ಕುಮಾರಿ ಎಡಿಥ ಪಿಂಚ ಇವರ ಕೂಡ ವಿವಾಹವಾಯಿತು. ರುಸಿಲ್ಲರ ವರ್ಷ ೮೦, ನವಪರಿಣಿತ ವಧುವಿನ ವಯಸ್ಸು ೬೨ ವರ್ಷ ಇದ್ದು ರುಸೆಲ್ಲರ ನಾಲ್ಕನೆಯ ಲಗ್ನವಿದು.

**ಮೋಜಾರು ಗೋವಿಂದ ಪೈ ಇವರ ಕೇರು ಬೀಜದ ಕಾರಖಾನೆಯಲ್ಲಿ ೧೫೦೦ ಜನ ಸ್ತ್ರೀ ಕೂಲಿಕಾರರು ಸಂಪು; ಕೂಲಿಕಾರರ ಎತ್ತಿದ ಕೈಗೆ ಜಯ ದೊರೆಯಿತು.**

ಮಂಗಳೂರಿನಲ್ಲಿ ಕಳೆದ ೩ನೇ ದಿನಾಂಕ ಡಿಸೆಂಬರ ತಿಂಗಳಲ್ಲಿ ಮೋಜಾರು ಗೋವಿಂದ ಪೈಗಳು ತೆರೆದ ಕೇರು ಬೀಜದ ಕಾರಖಾನೆಯಲ್ಲಿ ಕೂಲಿಕಾರರು ತಮ್ಮ ಹೊಟ್ಟೆಗೆ ಕೊಡುವ ಪಗಾರ ಸಾಲದೆಂದೂ, ಬೋನಸ್ ಕೇಳಲು, ಅವರ ಬೋನಸ್ ಕೊಡುವುದಿಲ್ಲ, ಅದಕ್ಕೆ ಬದಲು ಸೀರೆಗಳನ್ನು ಕೊಡುವುದಾಗಿ ಹೇಳಿದರು. ಪುನಃ ಆ ಸ್ತ್ರೀಯರು ಅರಿವೆಯ ಆಸೆಹಚ್ಚಿ ಬೋನಸ್ ಮುಳುಗಿಸುತ್ತೀರೆಂದು ಹೇಳಿ ಇದರಿಂದ ನಮ್ಮ ಹೊಟ್ಟೆ ತುಂಬುವುದಿಲ್ಲ. ಎಂದು ಮುಷ್ಕರ ಹಿಡಿದರು. ಇದರ ಸಲುವಾಗಿ ಇಬ್ಬರು ಸ್ತ್ರೀ ಕೂಲಿಕಾರರನ್ನು ಕೆಲಸದಿಂದ ಕಿತ್ತು ಹಾಕಲಾಯಿತು. ಮರುದಿನ ಈ ಸುದ್ದಿ ಕಾರಖಾನೆಯಲ್ಲೆಲ್ಲಾ ಹಬ್ಬಿತು. ಅವರು ಎಲ್ಲರೂ ಒಂದಾಗಿ, ನಾವು ನಮ್ಮ ಹೊಟ್ಟೆಗಾಗಿ ಕೇಳಿದರೆ ಅವರನ್ನು ಕೆಲಸದಿಂದ ತೆಗೆದುಹಾಕಿದಿರಿ. ಅವರನ್ನು ಕೆಲಸಕ್ಕೆ ಪುನಃ ತೆಗೆದು ಕೊಳ್ಳುವವರೆಗೂ ನಾವು ಕೆಲಸಮಾಡುವದಿಲ್ಲವೆಂದು ಹಟ ಹಿಡಿದರು. ಕೊನೆಗೆ ಪೋಲೀಸರನ್ನು ಕರೆಸಿ ಒತ್ತಾಯ ಮಾಡಲು ಅವರಿಗೂ ಇದೇ ಹೇಳಿದರು. ಕೊನೆಗೆ ಉಪಾಯ ಕಾಣದೆ ಪುನಃ ಅವರಿಬ್ಬರನ್ನೂ ಕೆಲಸಕ್ಕೆ ತೆಗೆದುಕೊಂಡು ಬೋನಸ್ ಕೊಡುತ್ತೇವೆಂದು ಹೇಳಿದರು. ಮರುದಿನ ಸಾರ್ವಜನಿಕ ಸಭೆಸೇರಿಸಿ ಶ್ರೀ. ಲಿಂಗಪ್ಪ ಸುವರ್ಣರನ್ನು ಅಧ್ಯಕ್ಷರನ್ನು ಮಾಡಿ ಈ ವರೆಗೆ ಹೊಟ್ಟೆಪಾಡಿಗಾಗಿ ಯುದ್ಧಮಾಡಿ ಗೆದ್ದ ಅಕ್ಕತಂಗಿಯರಿಗಾಗಿ ಅಭಿನಂದಿಸಲಾಯಿತು.

# ವೀರಮಾತೆ




ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ
ಕನ್ನಡ ಮಾಸಪತ್ರಿಕೆ.

ಸಂಪುಟ ೧ | ಮಾಘ ಫೆಬ್ರುವರಿ ೧೯೫೩ | ಸಂಚಿಕೆ ೯


## ಸಂಪಾದಕೀಯ

ಪ್ರಜಾ ಸತ್ತಾತ್ಮಕ ರಾಜ್ಯ ಕಾಯದೆ ಬದ್ಧವಾಗಿ ನಮ್ಮ ಭಾರತದಲ್ಲಿ ಅವತರಿಸಿ ಇದೀಗ ಮೂರು ವರ್ಷಗಳಾದವು. ಈ ಅವಧಿಯಲ್ಲಿ ಭಾರತದಾದ್ಯಂತ ಮಹಾ ಚುನಾವಣೆ ಯಶಸ್ವಿಯಾಗಿ ನಡೆದು ಪ್ರಜೆಗಳ ಪ್ರತಿನಿಧಿಗಳು ಅಧಿಕಾರ ಸೂತ್ರಗಳನ್ನು ವಹಿಸಿಕೊಂಡರು. ತಮ್ಮನ್ನು ಆರಿಸಿ ತಂದ ಆಯಾ ಪ್ರಾಂತಗಳ ಬೇಡಿಕೆಗಳನ್ನು ಪೂರೈಸಿಕೊಡುವದು ಚುನಾಯಿತರಾದವರ ಕರ್ತವ್ಯ; ಆ ದೃಷ್ಟಿಯಿಂದ ಭಾರತ ಸರಕಾರವು ಅಖಂಡ ಭಾರತದ ಹಿತಕ್ಕಾಗಿ ಕಾರ್ಯಕೈಕೊಳ್ಳಲು ಯತ್ನಿಸುತ್ತಿದೆ. "ಹೆಚ್ಚು ಆಹಾರ ಧಾನ್ಯ ಬೆಳೆಯಿರಿ," ಎಂಬುದರ ಪ್ರಚಾರ, 'ವನಮಹೋತ್ಸವ,' 'ಕೃಷಿ ಪಂಡಿತ' ಬಿರುದಿನ ದಾನಗಳು ಪ್ರಚಾರದಲ್ಲಿ ಬಂದಿವೆ. ಆದರೂ ಜನ ಸಾಮಾನ್ಯರ ದೃಷ್ಟಿಯಿಂದ, ಅಲ್ಪವಾದ ಅವರ ಬೇಡಿಕೆಗಳು ಇನ್ನೂ ಪೂರೈಸಲ್ಪಟ್ಟಿಲ್ಲವೆಂದೇ ಹೇಳಬೇಕು. ಪ್ರಜಾಸತ್ತಾತ್ಮಕ ರಾಜ್ಯದ ವೈಶಿಷ್ಟ್ಯ ಹೊಣೆಗಳನ್ನಾಗಲಿ, ಪ್ರಜಾರಾಜ್ಯ ದಿನಾಚರಣೆಯ ಮಹತ್ವವನ್ನಾಗಲಿ, ಅರಿತು ಭಾಗವಹಿಸಬೇಕಾದರೆ, ಅದರಿಂದ ಬರುವ ಲಾಭವೂ ಅವರನ್ನು ಮುಟ್ಟುವಂತಿರಬೇಕು.

ಭಾರತದಂತಹ ವಿಶಾಲವಾದ ಭೂಭಾಗದಲ್ಲಿ ವಾಸಿಸುವ ಕೋಟ್ಯನುಕೋಟಿ ಪ್ರಜೆಗಳ ಸಾಮಾನ್ಯ ಬೇಡಿಕೆಗಳನ್ನೇ ಆದರೂ ಒಮ್ಮೆಲೇ ಪೂರೈಸುವದು ಅಸಾಧ್ಯವಾಗಬಹುದು. ಆದರೆ ಕ್ರಮೇಣವಾದ ಅಭಿವೃದ್ಧಿ ಸರಕಾರದ ಗುರಿ; ಅದು ಸಾಧಿಸಬೇಕಾದುದು ಹಲವರ ಹಿತವನ್ನಲ್ಲ, ಸರ್ವರ ಹಿತವನ್ನು. ಪ್ರಚಾರದಲ್ಲಿ ಬರಲಿರುವ ಪಂಚವಾರ್ಷಿಕ ಯೋಜನೆ ಈ ದೃಷ್ಟಿಯಿಂದಲೇ ರಚಿತವಾದುದು.

ಇದೇ ಜನೆವರಿ ೧೮ ರಂದು ಹೈದರಾಬಾದದ ನಾನಲ ನಗರದಲ್ಲಿ ಸೇರಿದ ಪರಿಷತ್ತು ಭಾರತದ ಪ್ರಧಾನ ಮಂತ್ರಿ ಶ್ರೀ. ನೆಹರೂರ ಅಧ್ಯಕ್ಷತೆಯಲ್ಲಿ, ಪಂಚವಾರ್ಷಿಕ ಯೋಜನೆಯನ್ನು ಕಾರ್ಯಗತಮಾಡುವ ವಿಚಾರಕ್ಕೆ ಸಾಕಷ್ಟು ಸ್ಥಳವನ್ನು ಕೊಟ್ಟಿತ್ತು. ಅಹಿಂಸೆಯಿಂದಲೇ ಸ್ವಾತಂತ್ರ್ಯ ಗಳಿಸಿದ ಭಾರತದ ವಿದೇಶ ನೀತಿಗೆ ಜಗತ್ತಿನ ರಂಗದಲ್ಲಿ ಪ್ರಾಧಾನ್ಯವಿದೆ. ನ್ಯಾಯವಾದದನ್ನು ಸಮರ್ಥಿಸಿ, ಅನ್ಯಾಯವಾದುದನ್ನು ಹೀಗಳೆದು, ಆ ನ್ಯಾಯ ಅನ್ಯಾಯಗಳೆರಡೂ ತನ್ನ ಬಳಿಗೆ ಬರುವವರೆಗೆ ತಟಸ್ಥವಾಗಿರುವದು ಭಾರತದ ವಿದೇಶ ನೀತಿಯಾಗಿದೆ. ದಕ್ಷಿಣ ಆಫ್ರಿಕೆಯ ಹಿಂದೀಯರು ಕೈಕೊಂಡ ಕ್ರಮ ಸ್ತುತ್ಯವೆಂಬುದು ಭಾರತದ ಗೊತ್ತುವಳಿ.

ಪಂಚವಾರ್ಷಿಕ ಯೋಜನೆ ದೇಶದ ಅಂತರಿಕ ಸಮಸ್ಯೆಗಳನ್ನು ಕುರಿತಾದುದು. ರಾಷ್ಟ್ರದ ಆರ್ಥಿಕ ಪ್ರಗತಿಯನ್ನು ಸಾಧಿಸುವದು ಮತ್ತು ಬಡತನ ನಿರುದ್ಯೋಗಗಳ ನಿರ್ಮೂಲನೆಯ ದೃಷ್ಟಿಯಿಂದ ಜನತೆಯ ಜೀವನ ಮಟ್ಟವನ್ನು ಏರಿಸುವದು, ದೇಶದ ಮುಂದಿರುವ, ಮಹಾ ಕಾರ್ಯಗಳು. ಇದಕ್ಕಾಗಿ ದೇಶದ ಎಲ್ಲ ಸಂಪತ್ತನ್ನು ಸುಯೋಜಿತವಾಗಿ ಉಪಯೋಗಿಸಬೇಕಾಗಿದೆ. ಪಂಚವಾರ್ಷಿಕ ಯೋಜನೆ ಪೂರ್ಣವಾಗಿ ಬಳಕೆಯಲ್ಲಿ ಬಂದರೆ ದೇಶದ ಭಾವೀ ಪ್ರಗತಿಯ ಅಡಿಗಲ್ಲು ಭದ್ರವಾಗುವದು.

ಹಳ್ಳಿಗಳ ಪುನರುದ್ಧಾರ, ಔದ್ಯೋಗಿಕ ಕಚ್ಚಾ ಸರಕುಗಳ ಹೆಚ್ಚಿನ ಉತ್ಪಾದನೆ, ಆಹಾರ ಧಾನ್ಯದ ಹೆಚ್ಚಳ ಇವು ಇದರಲ್ಲಿ ಮುಖ್ಯವಾದುವು. ಗ್ರಾಮೋದ್ಯೋಗದ ಕ್ಷೇತ್ರವನ್ನು ವಿಸ್ತರಿಸಿ, ಸಹಕಾರಿ ತಳಹದಿಯ ಮೇಲೆ ಜನತೆಯನ್ನು ಬಲಪಡಿಸುವದು, ಯೋಜನೆಯ ಗುರಿ. ರಾಷ್ಟ್ರದ ಪ್ರಗತಿ, ಈ ಯೋಜನೆಯನ್ನು ಅನುಸರಿಸಿದಲ್ಲಿ, ತೀವ್ರವಾಗಿಯೇ ಆಗುವದೆಂಬಲ್ಲಿ ಸಂಶಯವಿಲ್ಲ, ಆದರೆ ಜನತೆಯ ಪೂರ್ಣ ಬೆಂಬಲ ಮಾತ್ರ ಇದಕ್ಕೆ ದೊರೆಯಬೇಕು. ಅಂದರೆ ನವಭಾರತವೇ ನಿರ್ಮಾಣವಾದೀತು ಎಂದು ನೆಹರೂರು ಆಶಿಸಿದರು.

ಭಾಷಾವಾರ ಪ್ರಾಂತರಚನೆಯ ವಿಷಯ ಆಯಾ ಪ್ರಾಂತದವರಿಗೆ ಜೀವಾಳದ ಮಾತು. ಎಲ್ಲ ಪ್ರಾಂತಗಳ ಜೀವಾಳದ ಮಾತು ಸರಕಾರಕ್ಕೂ ಜೀವಾಳದ್ದೇ. ಆದರೆ ರಾಜ್ಯಗಳ ಪುನರ್ಘಟನೆ ಮಾಡುವಾಗ ಭಾಷೆಯೊಂದನ್ನೇ ಅಲ್ಲ, ಇತರ ಅಂಶಗಳನ್ನೂ ಸರಿಯಾಗಿ ಪರಿಶೀಲಿಸಿ ನಿರ್ಣಯಕ್ಕೆ ಬರಬೇಕು ಎಂಬುದು ನೆಹರೂರ ಮತ.

ಭಾಷೆಯ ಆಧಾರದಿಂದ ದೇಶವಿಭಾಗ ಮಾಡುವದು ಅಷ್ಟೊಂದು ಸರಿಯಲ್ಲ ಕಾಡು ವಿಚಾರ; ನಾಗರೀಕತೆಯು ಕಾಡು ವಿಚಾರದಿಂದ ಪ್ರಾದೇಶಿಕ ಪ್ರಜಾಸರಕಾರದತ್ತ ಸಾಗಿದಂತಾಗುವದು, ಎಂಬುದು ಶ್ರೀ. ರಾಜಗೋಪಾಲಾಚಾರ್ಯರ ಅಭಿಮತ.

ಭಾಷಾವಾರ ಪ್ರಾಂತರಚನೆಯು ನಿರ್ಮಾಣಕ್ಕೆ ತಡೆಯುಂಟಾಗುತ್ತಿರುವದು, ಗಡಿತಂಟೆಗಳಿಂದ, ಒಮ್ಮತದ ಅಭಾವದಿಂದ; ಒಂದು ಪ್ರಾಂತ ನಿರ್ಮಾಣವಾದರೆ ಇನ್ನೊಂದು ಆಗಲೇಬೇಕು. ಗಡಿತಂಟೆಯ ಸಮಸ್ಯೆಯನ್ನು, ನಿರ್ಣಾಯಕ ಮಂಡಳವು ಸಮಾಧಾನಕರವಾಗಿ ಬಿಡಿಸಿದಲ್ಲಿ, ಜನತೆ ಒಮ್ಮತದ ಮಹತ್ವವನ್ನು ಪ್ರಾಂತದ ಶ್ರೇಯಸ್ಸಿನ ದೃಷ್ಟಿಯಿಂದ ಅರಿತು, ಒಪ್ಪಿಕೊಂಡಲ್ಲಿ, ಈ ಪ್ರಶ್ನೆ ಸಮಾಧಾನಕರವಾಗಿಯೇ ಬಗೆಹರೆದೀತು!

* * * * *

## ಕರ್ನಾಟಕ ವಿಶ್ವವಿದ್ಯಾಲಯ

ಶಿಕ್ಷಣಕ್ಷೇತ್ರದಲ್ಲಿ ದೂರದ ಆಡಳಿತ ಬೇಡವೆಂದು, ಕಾಡಿ ಬೇಡಿ ಕರ್ನಾಟಕಕ್ಕೇ ಎಂದು ವಿಶ್ವವಿದ್ಯಾಲಯವನ್ನು ಪಡೆದುಕೊಂಡೆವು. ಆದರೆ ಹಟ ಮಾಡಿ ಇಸಿದುಕೊಂಡದ್ದನ್ನೂ ಯಶಸ್ವಿಯಾಗಿ ಮಾಡಿ ತೋರಿಸಿದರೆ ನಾವು ಗೆದ್ದಂತೆ. ರಾಷ್ಟ್ರದಲ್ಲಿ ಜಾತಿ, ಮತ, ಪಕ್ಷ ಪಂಗಡಗಳ ಹಿಡಿತದಿಂದ ದೂರವಿರಬಹುದಾದಂಥ ಒಂದೇ ಕ್ಷೇತ್ರ ವಿಶ್ವವಿದ್ಯಾಲಯ; ಸಂಸ್ಕೃತಿ, ಶಿಕ್ಷಣಗಳ ಸಂಪತ್ತಿನಿಂದ ಜನತೆಯ ಹೃದಯವನ್ನು ಉದಾತ್ತವಾಗಿರಿಸಿ ನಾಡನ್ನು ಕಟ್ಟುವದೇ ಅದರ ಧ್ಯೇಯ; ಈ ಧ್ಯೇಯ ಇಂದು ದುಡಿದರೆ ನಾಳೆ ಸಾಧಿಸುವದಲ್ಲ; ಈ ಪೀಳಿಗೆಯ ಜನ ಮನಃಪೂರ್ವಕವಾಗಿ ಪರಿಶ್ರಮವಹಿಸಿದರೆ ಅದರ ಫಲ ಮುಂದಿನ ಪೀಳಿಗೆಗೆ ದೊರೆತೀತು! ವಿಶ್ವವಿದ್ಯಾಲಯ, ಆದರ ದುಡಿಮೆ, ಫಲ, ಒಂದು ಪಕ್ಷ, ಒಂದು ಪಂಗಡಕ್ಕೆ ಸೇರಿದ್ದಲ್ಲ. ಈ ಮಾತನ್ನು ಲಕ್ಷ್ಯದಲ್ಲಿಟ್ಟು ಕನ್ನಡಿಗರು ವಿಶ್ವವಿದ್ಯಾಲಯವನ್ನು ಕಟ್ಟಬೇಕು. ಇದರ ಓರಿಗೆಯ ವಿಶ್ವವಿದ್ಯಾಲಯಗಳು ಧನದ ಕೊರತೆಯ ಕುತ್ತನ್ನು ದಾಟಿ, ಸಂಕುಚಿತ ದೃಷ್ಟಿಯಿಂದ ದೂರವಾಗಿರುವವೆಂದು ನಾವು ತಿಳಿದಿರುವಾಗ, ಇದಕ್ಕೂ ಆ ರೋಗ ಅಂಟುವದು ಉಚಿತವಲ್ಲ. ಅದಕ್ಕಾಗಿ ಕನ್ನಡಿಗರು ಅವಶ್ಯಕ ಆಹಾರದಷ್ಟೇ ಅವಶ್ಯವಾಗಿರುವ ವಿಶ್ವವಿದ್ಯಾಲಯವನ್ನು, ಕೈಲಾದ ಸಹಾಯವನ್ನು ನೀಡಿ, ಉಜ್ವಲಗೊಳಿಸಬೇಕಾದುದು ಅವಶ್ಯಕ.

ನಿಧಿಸಂಗ್ರಹದ ಸಪ್ತಾಹ ಪ್ರಾರಂಭವಾಗಿದೆ. ಉಪಕುಲಪತಿಗಳೂ, ರಜಿಸ್ಟ್ರಾರರೂ, ವಿಶ್ವವಿದ್ಯಾಲಯದ ಎಲ್ಲ ಸಭಾಸದರೂ ಇದಕ್ಕಾಗಿ ತಮ್ಮ ಶಕ್ತಿಮೀರಿ ಪ್ರಯತ್ನವನ್ನು ನಡೆಸಿದ್ದಾರೆ, ತ್ಯಾಗದಿಂದ ಸೇವೆಯನ್ನು ಸಲ್ಲಿಸಿದ್ದಾರೆ, ಅವರೆಲ್ಲರೊಡನೆ ಸಹಕರಿಸಿ, ನಮ್ಮದೇ ಆದ ವಿಶ್ವವಿದ್ಯಾಲಯದ ಅಡಿಗಲ್ಲನ್ನು ಭದ್ರವಾಗಿರುಸುವದು ನಮ್ಮೆಲ್ಲರ ಕರ್ತವ್ಯ.

† ✦ † ✦ † ✦

ಸಂಕ್ರಾಂತಿ, ಪ್ರಜಾದಿನಾಚರಣೆಯ ಹುರುಪಿನಿಂದ ಪ್ರಾರಂಭವಾಗುವ ವರುಷ ನಮ್ಮ ಸೋದರೀವರ್ಗಕ್ಕೆಲ್ಲ ಶುಭದಾಯಕವಾಗಲೆಂದು ವೀರಮಾತೆಯ ಹರಕೆ !

* * * * * *

# ನಮ್ಮ ಮಾತು

ಈ ಸಲದ ಸಂಚಿಕೆಯಲ್ಲಿ ಕಲೆ, ಕೈಗಾರಿಕೆಗಳಿಗೆ ಸಂಬಂಧಿಸಿದ ಲೇಖಗಳ ಸಂಖ್ಯೆ ಒಂದಕ್ಕೆ ಮಿಕ್ಕಿದೆ. ಕಲೆ, ಕೈಗಾರಿಕೆಗಳಲ್ಲಿ ಆಸ್ಥೆವಹಿಸಿ ಬರೆಯುವವರೂ, ಓದುವವರೂ ಹೆಚ್ಚಿದುದು ಅಭಿನಂದನೀಯ. ಶ್ರೀಮತಿ ಕುಸನೂರರ ಭಾಷಣ, ಶ್ರೀಮಾನ್ ಕೇಶವಶರ್ಮಾ ಗಲಗಲಿಯವರ, ' ಜಾತಕ, ' ವನ್ನು ಕುರಿತ ಲೇಖ ಈ ಸಂಚಿಕೆಯ ವೈಶಿಷ್ಟ್ಯ.

ಹೋದ ಸಂಚಿಕೆಯಲ್ಲಿಯ ಕಥೆಯನ್ನು ಕುರಿತು ಸೋದರಿಯರು ತಮ್ಮ ಮೆಚ್ಚಿಕೆಯನ್ನು ವ್ಯಕ್ತಪಡಿಸಿದ್ದು ಅಭಿನಂದನೀಯ !

ನಮ್ಮ ಚಿಕ್ಕ ಸೋದರ ಸೋದರಿಯರ ಸಹಕಾರ ನಮಗೆ ಬಲವಾಗಿದೆ ಯೆಂಬುದಕ್ಕೆ ದಿನೇ ದಿನೇ ಬೆಳೆಯುತ್ತಿರುವ " ಅಕ್ಕನ ಪೆಟ್ಟಿಗೆ " ಯೇ ಸಾಕ್ಷಿಯಾಗಿದೆ. ಸಕಾಲಕ್ಕೆ ತಲುಪದಿದ್ದ ಅವರ ಪತ್ರ, ಕಥೆ, ಕವನಗಳನ್ನು ಮುದ್ರಿಸಲು ಸಾಧ್ಯವಾಗ ದ್ದಕ್ಕೆ ವಿಷಾದಿಸುತ್ತೇವೆ. ಮುಂದಿನ ಸಲ, ಕಳಿಸುವದಾದಲ್ಲಿ, ಬೇಗನೆ (ಫೆಬ್ರುವರಿ ೧೮ ರೊಳಗಾಗಿ) ಕಳಿಸಬೇಕು.

ಸ್ಥಳೀಯರು ತಮ್ಮ ಚಂದಾಹಣವನ್ನು, ಪಾವತಿ ಪಡೆದು, ಸಂಚಿಕೆಯನ್ನು ಕೊಡಲು ಬಂದವರಿಗೆ ಕೊಡಬಹುದು. ಯಾವ ರೀತಿಯಿಂದಾದರೂ ಸರಿ, ಬೇಗನೆ ಹಣವನ್ನು ಮುಟ್ಟಿಸಿ, ನಮ್ಮ ಕಾರ್ಯದಲ್ಲಿ ಸಹಕಾರ ನೀಡಬೇಕೆಂದು ಪ್ರಾರ್ಥನೆ.

# ಸ್ವತಂತ್ರರಾರು ? ನಾನೇ.......ನೀನೇ ?

( ಒಂದು ಕಥೆ )

**ಲೇ:— ಸರೋಜಿನಿ ಮಹಿಷಿ.**



ಸೀತಾ, ನಮ್ಮೂರ ಮಹಿಳಾ ಸಮಾಜದ ಸದಸ್ಯೆ; ಆಗೀಗ ಸಮಯ ದೊರಕಿಸಿಕೊಂಡು ಸಮಾಜದ ಕಾರ್ಯಕಲಾಪಗಳಿಗೆ ಬಹುತರವಾಗಿ ಹಾಜರಿರುತ್ತಿದ್ದಳು. ಮನೆಯಲ್ಲಿದ್ದರೆ ಮಧ್ಯಾಹ್ನದ ಬಿಡುವಿನಲ್ಲಿ ಮಗುವೂ ಕೈಬಿಟ್ಟು ಮಲಗಿದಾಗ ಗೆಳತಿ ರಾಧೆಯೋ, ನೆರೆಮನೆಯ ಪಾರ್ವತಮ್ಮನೋ ಬಂದು ಅವಳಿಗೆ ಅಚೆ ಈಚೆ ಸುದ್ದಿಗಳನ್ನು ಮುಟ್ಟಿಸುತ್ತಿದ್ದರು. ಆದರೆ ಮಹಿಳಾ ಸಮಾಜದ ಮೀಟಿಂಗಿನಲ್ಲಿ ನಡೆಯುವ ವಿವಿಧ ಬಗೆಯ ವಾರ್ತಾಲಾಪ, ಹೊಸ ಬೆಡಗಿನ ಆಭರಣ, ವೇಷಭೂಷಣಗಳನ್ನು ನೋಡುವ ಸಂದರ್ಭ ಅವಳಿಗೆ ಬೇರೆಲ್ಲಿಯೂ ಸಿಗುತ್ತಿರಲಿಲ್ಲ.

ಆದಿನ, ದೇಶಪಾಂಡೆ ಸಾಹೇಬರ ಪತ್ನಿ ಲಕ್ಷ್ಮೀ ದೇವಿಯ ಕೊರಳಲ್ಲಿದ್ದ ಚಿನ್ನದ ಸರ ಸೀತಮ್ಮನ ಮನಸ್ಸನ್ನು ಸೆಳೆಯಿತು! ಕಾರ್ಯಕ್ರಮ ಅತ್ತ ಪ್ರಾರಂಭವಾಗಿದ್ದರೂ ಅವಳ ಮನಸ್ಸೆಲ್ಲ ಸರದೆಡೆಗೇ! "ಅಂತಹದೊಂದನ್ನು ನಾನೇಕೆ ಮಾಡಿಸಬಾರದು ? ಈಗ ಸರವನ್ನು ಹಾಕದಿದ್ದರೆ ಇನ್ನು ಮೊಮ್ಮಕ್ಕಳು ಹುಟ್ಟಿದ ಮೇಲೆ ಹಾಕುವದಿದೆಯೇ ?" ಮನಸ್ಸಿನಲ್ಲಿ ಅವಳ ಸರದ ಲೆಕ್ಕ ನಡೆದೇ ಇತ್ತು.

"ಸ್ತ್ರೀ ಪುರುಷನ ಅರ್ಧಾಂಗಿ; ಅವಳೊಂದು ಉಪಭೋಗ್ಯ ವಸ್ತುವಲ್ಲ; ದಾಸ್ಯದ ಭಾವನೆ ಮೊದಲು ಅವಳ ಮನಸ್ಸಿನಿಂದ ಪೂರ್ಣವಾಗಿ ಕಿತ್ತುಹೋಗಬೇಕು. ಸ್ವಾತಂತ್ರ್ಯದ ರುಚಿಯನ್ನು ಅವಳೂ ತಿಳಿಯಬೇಕು; ಅವಳೂ ಬುದ್ಧಿಭಾವನೆಗಳುಳ್ಳ ಪ್ರಾಣಿಯೆಂಬುದನ್ನು ಸಮಾಜಕ್ಕೆ ತೋರಿಸಿಕೊಡುವದು ನಮ್ಮ ಕರ್ತವ್ಯ." ವೇದಿಕೆಯ ಮೇಲೆ ನಿಂತು ಭಾಷಣ ಮಾಡುತ್ತಿದ್ದ ಮಹಿಳೆಯ ಈ ಶಬ್ದಗಳು ಮಾತ್ರ ಸೀತಮ್ಮನ ಕಿವಿ ಸೇರಿದವು ಮಹಿಳೆಯರು ಸ್ವಾತಂತ್ರ್ಯವನ್ನು ಏಕೆ ಬೇಡುತ್ತಾರೆಂಬುದರ ಕಲ್ಪನೆ ಅವಳಿಗೀಗ ಬಂತು!" ರಾಮನಾಥನು ಸರವನ್ನು ಮಾಡಿಸಿತರಲು, ಒಂದುವೇಳೆ ಒಳ್ಳೇ ರೀತಿಯಿಂದ ಒಪ್ಪದಿದ್ದರೆ, ಬಂಡು ಹೂಡುವದೇ ನಿಶ್ಚಯ !! ಅವರಿಗೆ ಇಲ್ಲವೆನ್ನಲು ಎಷ್ಟು ಅಧಿಕಾರವೋ, ಅಷ್ಟೇ ಅಧಿಕಾರ ನನಗೂ ಇದೆ ಮಾಡಿಸಲು !!" ಸೀತಮ್ಮನ ಮನಸ್ಸು ಹಗುರಾಯಿತು.

ಸಭೆಯ ಔಪಚಾರಿಕ ಕಾರ್ಯಕಲಾಪಗಳೆಲ್ಲ ಕೊನೆಗಂಡವು. ಬಹುದಿನಗಳಿಂದ ಕೂಡಿದ ಹೆಂಗಳೆಯರಲ್ಲಿ ಮಾತುಕಥೆ ಪ್ರಾರಂಭವಾಯಿತು.

"ಬಹಳ ದಿನಗಳಿಂದ ಸಮಾಜಕ್ಕೇ ಬಂದಿಲ್ಲವಲ್ಲ, ಶಾಂತಮ್ಮ ?" ಸೀತಮ್ಮ ಕೇಳಿದಳು.

“ ಅಹುದು ನಮ್ಮ ಮನೆಯ ಕಾರ್-ಡ್ರೈವ್ಹರನಿಗೆ ವೈಯ್ಮಲ್ಲಿ ಸರಿಯಾಗಿರ ಲಿಲ್ಲ. ನಡೆದು ಬರೋದು ಅಂದರೆ ಬೇಸರ ನೋಡಿ !'' ಶಾಂತಮ್ಮ ಬೇಸರದಿಂದ ಹೇಳಿದಳು.

“ ಅಹುದು ತುಂಬಾ ಬಿಸಿಲು,” ಆದರಲ್ಲಿ ಮಕ್ಕಳನ್ನು ಕರೆತಂದರಂತೂ ತೀರಿತು !

“ ಎಲ್ಲಿ ನಿಮ್ಮ ಮಗು ಕಾಣಲಿಲ್ಲವಲ್ಲಃ ?”

“ ಮನೆಯಲ್ಲಿ ಅವರಿಗೆ ನೋಡಿಕೊಳ್ಳುವಂತೆ ಹೇಳಿ ಬಿಟ್ಟುಬಂದಿದ್ದೇನೆ.”

“ ಸರಿಯಾಯಿತು ಬಿಡಿ; ವಾರಕ್ಕೊಂದು ದಿನವಾದರೂ ಅವರು ಮಗು ವನ್ನು ನೋಡಿಕೊಂಡಿರಬೇಡವೇ ?'' ಸಮಾನತೆಯ ಹಕ್ಕಿನಿಂದ ಶಾಂತಮ್ಮ ಉಸು ರಿದರು, “ ನೀವೀಗ ನಡೆದೇ ಹೋಗುತ್ತೀರಾ? ಪಾಪ !''

ಸೀತಮ್ಮನ ಪಾಲಿಗೆ ಕರುಣೆದೊರೆಯಿತು; ಶಾಂತಮ್ಮ ಅಲ್ಲಿಂದ ಜಾರಿದರು!

† ✦ † ✦ † ✦ †

“ ಏನಿದ್ದರೂ ನನಗೆ ಅಂತಹ ಚಿನ್ನದ ಸರ ಬೇಕೇಬೇಕು,'' ಸೀತಾ ಹಟ ದಿಂದ ಹೇಳಿದಳು.

“ ನೀವು ಮಾಡಿಸದಿದ್ದರೆ ಬಿಡಿ, ನನ್ನ ಬಳಿಯಲ್ಲಿ ಮಿಕ್ಕ ಹಣವನ್ನೆಲ್ಲ ಹಾಕಿ ನಾನೇ ಮಾಡಿಸುತ್ತೇನೆ.”

“ ಸರಿ ಈಗ ಬೇಡ, ನಿನ್ನ ಹಣ ನಿನ್ನ ಬಳಿಯಲ್ಲೇ ಇರಲಿ; ಅಂದರೆ ಇನ್ನಾವುದಕ್ಕಾದರೂ ಅರ್ಜಂಟ ಆದ ಕೆಲಸಕ್ಕೆ ಉಪಯೋಗವಾದೀತು ! ” ರಾಮ ನಾಥ ಶಾಂತವಾಗಿಯೇ ಹೇಳಿದ.

“ ನನ್ನ ಹಣವನ್ನು ನನಗೆ ಬೇಕಾದುದಕ್ಕೆ ವಿನಿಯೋಗಿಸಲು ಕೂಡ ನನಗೆ ಸ್ವಾತಂತ್ರ್ಯವಿಲ್ಲವೇ ? ಅದಕ್ಕೇ ಸ್ತ್ರೀಯರು ಇಂದು ಸ್ವಾತಂತ್ರ್ಯ ಬೇಡುವದು, ಅದಕ್ಕಾಗಿ ಹೋರಾಡುವದು,'' ಸೀತೆಗೆ ಸಿಟ್ಟು ತಡೆಯದಾಗಿತ್ತು; ಕಿರಚುತ್ತಿದ್ದ ಮಗುವಿನೆಡೆಗೆ ಅವಳ ಲಕ್ಷ್ಯವೇ ಇರಲಿಲ್ಲ.

“ ನಿಮಗೆ ಸ್ವಾತಂತ್ರ್ಯ ಕೊಟ್ಟರೇನು ? ವಿಜಯಲಕ್ಷ್ಮಿ ಪಂಡಿತರಂತೆ ರಾಯಭಾರಿಗಳಾಗುವಿರಾ ?'' ರಾಮನಾಥ ಕೆಣಕಿದ.

“ ಹಾಗಾದರೆ ಸ್ವಾತಂತ್ರ್ಯ ಪಡೆದ ನೀವೆಲ್ಲರೂ ನೆಹರೂಗಳೇ ? ” ಸೀತೆಯ ಸ್ವರವೂ ಏರಿತು.

“ ಆದೇನಿಲ್ಲ ಈವೊತ್ತಿನಿಂದ ನನಗೂ ಸ್ವಾತಂತ್ರ್ಯ ಬೇಕೇಬೇಕು.

“ ಬೇಕು ಎಂದು ಬೇಡಲು, ನಾನೇನು ಕಸಿದುಕೊಂಡಿದ್ದೇನೆಯೇ ?”

“ ಮತ್ತೆ ? ನಾನು ಮಾಡುವ ಯಾವುದಕ್ಕೂ ನೀವು ಆಕ್ಷೇಪವೆತ್ತಕೂಡದು!''

“ ಆಗಲಿ, ಇದೇ ಅಲ್ಲವೇ ನಿನ್ನ ಸ್ವಾತಂತ್ರ್ಯ ? ” ಸೀತೆಯ ಮುಖದ ಮೇಲೆ ನಗೆಮೂಡಿತು.

" ಆದರೆ ನನ್ನದೂ ಒಂದು ಕರಾರು," ರಾಮನಾಥ ಮುಂದುವರಿದನು. " ನಾನು ಮಾಡುವ ಯಾವ ಕಾರ್ಯದಲ್ಲೂ ನೀನು ಕೂಡ ಆಕ್ಷೇಪವೆತ್ತ ಕೂಡದು."

" ಆಗಲಿ," ಮುಗುಳ್ನಗೆಯಿಂದ ಸೀತಾ ಒಪ್ಪಿಕೊಂಡಳು.

† † † † †

ಸೀತಾ ಮ್ಯಾಟ್ರಿಕ್ಕಿನವರೆಗೆ ಓದಿದವಳು. ಇನ್ನೂ ಹೆಚ್ಚು ಓದಿಸಿದರೆ, ಹೆಚ್ಚು ಕಲಿತ ವರನನ್ನೆಲ್ಲಿ ತರುವದೆಂದು, ಓದನ್ನು ಅಲ್ಲಿಗೇ ನಿಲ್ಲಿಸಿ ಸೀತೆಯ ತಂದೆ ಅವಳ ವಿವಾಹವನ್ನು ಮಾಡಿದ್ದರು. ಅಳಿಯ ರಾಮನಾಥ ಪಿ. ಡಬ್ಲ್ಯು. ಡಿ ಆಫೀಸಿನಲ್ಲಿ ಓವ್ಹರಸಿಅರ ಅವನಿಗೆ ಬರುವ ವೇತನ ಅಚ್ಚುಕಟ್ಟಾಗಿ ಸಂಸಾರವನ್ನು ನಡೆಸಿ ಕೊಂಡು ಹೋದರೆ ಈಗೇನೋ ಸಾಕಾಗುವಂತಿತ್ತು. ಆದರೆ ಸೀತೆಯಿಂದ ಅದು ಸಾಧ್ಯವಿಲ್ಲ! ಅಲ್ಲದೆ ಮದುವೆಯಾದ ಹೊಸತರಲ್ಲಿ, ತನ್ನ ಹೆಂಡತಿಯನ್ನೂ ನಗರದ ಗಣ್ಯ ಸ್ತ್ರೀಯನ್ನಾಗಿ ಮಾಡಬೇಕೆಂಬ ರಾಮನಾಥನ ಹುರುಪು ಜೊತೆಗೆ; ಮಹಿಳಾ ಸಮಾಜಕ್ಕೆ ಅವಳು ಈಗ ಮೆಂಬರ್. ವೃತ್ತಪತ್ರಿಕೆಗಳು ಮನೆಗೆ ಬರುವದು ಅವಳ ಹೆಸರಿನಲ್ಲೇ; ಅವಳಾಗಿ ಬರೆಯುವ ಹವ್ಯಾಸಕ್ಕೆ ಹೋಗದಿದ್ದರೂ, ಒಂದೆರಡು ಕಥೆ ಗಳು ಅವಳ ಹೆಸರಿನಲ್ಲಿ ಮೂಡಿದವು! ಏನಿದ್ದರೂ ಸರಿ, ಈಗ ಅವಳನ್ನು ಕೊರೆ ಯುವ ವಿಷಯ ಒಂದು— ಅದೇ ಆ ಚಿನ್ನದ ಸರ!! ಅವಳ ಸ್ವಾತಂತ್ರ್ಯ!!

ಮನೆಯಲ್ಲಿ, ಪರಸ್ಪರರಲ್ಲಿ ಕರಾರುವಾದಂದಿನಿಂದ ಸಂಜೆ ಏಳುವರೆ ಗಂಟೆಗೆ ಮನೆಯಲ್ಲಿರಲೇಬೇಕಾಗಿದ್ದ ಸೀತಾ ಇದೀಗ ಒಂಬತ್ತರವರೆಗೂ, ಹೊರಗೆ ಇರಬಹು ದಾಗಿತ್ತು. ಈ ಮಿತಿಯನ್ನೂ ಅವಳೇ ನಿರ್ಧರಿಸಿಕೊಂಡಿದ್ದು! ಮಗುವೀಗ ಬಳಿ ಯಲ್ಲಿ! ಏಳುವರೆ ಎಂಟು ಗಂಟೆಗೆ ದಾಸ್ಯದಲ್ಲಿದ್ದ ಸ್ತ್ರೀಯರೆಲ್ಲ ಹೊರಟು ಹೋದ ಮೇಲೆ, ಸೀತಾ ವಿರಾಮವಾಗಿ ತನ್ನ 'ಮೆಚ್ಚಿಕೆ'ಯ ಗೆಳತಿಯರೊಡನೆ " ಪಿಂಗ್ ಪಾಂಗ" ನ್ನೋ ಕೇರಮ್ಮನ್ನೋ ಲೇಡೀಜ ಕ್ಲಬ್ಬಿನಲ್ಲಿ ಆಡಬಹುದಿತ್ತು. ಲ್ಯೂಸಿ ಯೊಡನೆ ಆಡುವ ಭಾಗ್ಯ ಅದೆಷ್ಟೋದಿನಗಳ ಹಂಬಲಿನ ಮೇಲೆ ಅವಳಿಗೀಗ ದೊರಕಿತ್ತು.

ಅದೊಂದು ಸಂಜೆ ಆ ಈ ವಿಷಯ ಹರಟುತ್ತ ಕೇರಮ್ ಆಡುತ್ತ ಕುಳಿತಿ ದ್ದಂತೆ ಎಂಟೂವರೆ ಗಂಟೆ ಆಗಿ ಹೋಯಿತು. ಸೀತಾ ಗಡಬಿಡಿಯಿಂದ "ಡ್ರಾಪ್ಸ" ಗಳನ್ನೆಲ್ಲ ಎತ್ತತೊಡಗಿದಳು. ಅಕಸ್ಮಾತ್ ಲ್ಯೂಸಿಯ ಲಕ್ಷ್ಯ ಅವಳ ಬಳೆಗಳ ಕಡೆಗೆ ಹೋಯಿತು. "ಇಂತಹ ಹಳೇ ಫೇಶನ್ ಬಳೆಗಳೇಕೆ ಸೀತಾ?" ಲ್ಯೂಸಿ ಕೇಳಿದಳು.

"ಏನೋ, ನಮ್ಮ ಮನೆಯಲ್ಲಿ ಇದೇ ಮೆಚ್ಚಿಕೆ"

"ಅಂದರೆ? ನಿನ್ನ ಹಸಬೆಂಡ್ ಮೆಚ್ಚಿಕೆಗಾಗಿಯೇನೇ ನೀನೆಲ್ಲ ಮಾಡು ವದು? ಸಿಲಿ ಗರ್ಲ!" ಲ್ಯೂಸಿ ನಗತೊಡಗಿದಳು.

" ಬಳೆಗಳಿದ್ದರೆ ಇರಲಿ, ಹೊಸ ಫ್ಯಾಶನ್ನಿನ ಸರವನ್ನು ನನ್ನ ಮನಸ್ಸಿಗೆ ಬಂದಂತೆ ಮಾಡಿಸಬೇಕೆಂದಿದ್ದೇನೆ," ಸೀತಾ ವಿಶ್ವಾಸದಿಂದ ಹೇಳಿದಳು.

“ ಹೊಸದೆಂದರೆ ಅದೆಂತಹದು ? ”

“ ನಮ್ಮ ಮಿಸೆಸ್ ದೇಶಪಾಂಡೆ ಲಕ್ಷ್ಮೀದೇವಿಯ ಕೊರಳಲ್ಲಿದೆಯಲ್ಲಃ, ಅಂತಹದು !”

“ ಓ ಅದೂ ಓಲ್ಡ ಫ್ಯಾಶನ್ನೀ ನೀವು ನನ್ನ ಸರ ನೋಡಿಲ್ವೇ ?”

“ ಇಲ್ಲ.”

“ ಹಾಗಾದರೆ ಈಗ ನನ್ನ ಜೊತೆಗೆ ಬಂದುಬಿಡಿ ಕಾರಿನಲ್ಲಿ, ನನ್ನ ಸರ ತೋರಿಸುತ್ತೇನೆ.”

“ ತುಂಬಾ ಲೇಟಾಗುತ್ತದೇನೋಂತ,” ಸೀತೆ ಗುಣಗುಟ್ಟಿದಳು.

“ ಮತ್ತೆ ನಿಮ್ಮನ್ನು ಕಾರಿನಲ್ಲಿಯೇ ಮನೆಗೆ ಕಳಿಸುತ್ತೇನೆ,” ಲ್ಯೂಸಿ ಸಮಾಧಾನ ಹೇಳಿದಳು. ಸೀತಾ ಒಪ್ಪಿಕೊಂಡಳು.

ಲ್ಯೂಸಿ ಕ್ರಿಶ್ಚಿಯನ್ ಮಹಿಳೆ, ಪದವೀಧರೆ ಮನೆಗೆ ಬಂದೊಡನೆಯೇ ಸೀತಮ್ಮನನ್ನು ಕರೆದು ತಂದು, ತನ್ನ ಪತಿಯೊಡನೆ ಔಪಚಾರಿಕವಾಗಿ ಪರಿಚಯ ಮಾಡಿಕೊಟ್ಟಳು.

“ ಇವರು ಮಿಸೆಸ್ ಸೀತಾ ರಾಮನಾಥನ್, ಮೆಟ್ರಿಕ್ಕಿನ ವರೆಗೆ ಓದಿದ್ದಾರೆ; ಈಗ ನಮ್ಮ ಕ್ಲಬ್ಬಿನ ಮೆಂಬರು. ಮಿ. ರಾಮನಾಥನ್ ಪಿ. ಡಬ್ಲ್ಯು.ಡಿ. ಆಫೀಸಿನಲ್ಲೇ ಅಲ್ವೇ ಇರೋದು ?”

ಸೀತಾ ತಲೆಯಲ್ಲಾಡಿಸಿದಳು.

“ ಇವರು ನಮ್ಮ ಮಿ. ಜಾರ್ಜ ಈ ನಗರದ ಪೋಲಿಸ್ ಇನ್‌ಸ್ಪೆಕ್ಟರು. ” ಮಿ. ಜಾರ್ಜ ಮುಗುಳ್ನಗೆಯಿಂದ ಕೈಕುಲುಕಲು ಮುಂದೆ ಬಂದರು. ಸೀತೆಗೆ ಒಂದು ಬಗೆಯ ಸಂಕೋಚ. ಆದರೂ ತನಗೆಲ್ಲಿ ಹಿಂದುಳಿದವಳೆಂಬ ಬಿರುದು ಬರುವದೋ ಎಂದು ಕೈನೀಡಿದಳು. ಔಪಚಾರಿಕವಾಗಿ ಮಾತುಕಥೆ ತಿಂಡಿ ತೀರ್ಥಗಳೆಲ್ಲ ಮುಗಿದವು. ಲ್ಯೂಸಿಯ ಸರ ಬೆಡಗಿನದಿದ್ದರೂ ಸೀತೆ ಮನಸ್ಸಿಗೆ ಒಪ್ಪಿಗೆಯಾಗಲಿಲ್ಲ.

“ ಇದನ್ನು ನಿತ್ಯ ಉಪಯೋಗಿಸುವಂತಿಲ್ಲ, ಅಲ್ಲವೇ ?” ಸೀತಾ ಕೇಳಿದಳು.

“ ನಿಮ್ಮ ಜನರಿಗೆ ಅದೇ ಯೋಚನೆ; ಎಂದಾದರೊಂದು ದಿನ ಭಾರೀ ಪಾರ್ಟಿಯಿದ್ದಾಗ, ಸಮಾರಂಭದಲ್ಲಿ ಹಾಕಿದರೆ ಅದಕ್ಕೆ ಬೆಲೆ, ” ಲ್ಯೂಸಿ ಹೇಳಿದಳು.

“ ಅದೂ ಸರಿ,” ಸೀತಾ ಹೊರಡಲು ಎದ್ದು ನಿಂತಳು. “ ತುಂಬಾ ಹೊತ್ತಾಯಿತು.”

“ ಇಂದು ವಿದ್ಯಾರ್ಥಿ ಸಂಘದವರು ಏರ್ಪಡಿಸಿದ ಪ್ರದರ್ಶನದ ಕೊನೆಯ ದಿನವಂತೆ; ನಿಮ್ಮ ಡಾರೀ ಕಾಯ್ದು ಮತ್ತೆ ಆಮಂತ್ರಣ ಕೊಟ್ಟು ಹೋಗಿದ್ದಾರೆ ಈಗ,” ಜಾರ್ಜ ಸೀತೆಯ ಮುಖವನ್ನು ನೋಡುತ್ತ ದನಿ ಎಳೆದರು.

“ ಮತ್ತೆ ನೀವು ?” ಲ್ಯೂಸಿ ಕೇಳಿದಳು.

“ ನೀವು ಬಾ ಎಂದರೆ ಬರುತ್ತೇನೆ, ನನಗೇನು ?”

[ ೪೧ ನೇ ಪುಟ ನೋಡಿರಿ. ]

# ಕವಿಯ ವಿಜಯ



ಲೇ:— ಫತ್ತೇಪೂರ ಶಾಮುಂಣಾ ಬೆಳವಣಕಿ.

ನಮ್ಮ ಊರಲ್ಲೊಬ್ಬ ಕವಿಯು
ಅವನ ಬರೆಹ ಬಹಳ ಸಿಹಿಯು
ಏನೆ ಒಂದು ಬರೆಯಲವನು
ಏಕ ಮನದಿ ಓದಿ ಜನರು
ತಣಿದು ಅವಗೆ ಸ್ಫೂರ್ತಿ ಇತ್ತು
ಕವಿಯು ಎಂಬ ಹೆಸರನಿತ್ತು
ಅವನು ಮಾನ್ಯ ಪುರುಷನೆಂದು
ಗಣಿಸಿ ಮೆರೆಯುತಿದ್ದರು ॥ ೮ ॥
ಕಾವ್ಯ ಶಕ್ತಿಯಿಂದ ಮೆರೆವ
ಊರ ಜನರ ಒಲವು ಇರುವ
ಕವಿಗೆ ಓರ್ವ ಹೆಣ್ಣು ಕೊಡಲು
ದೂರ ದೇಶದವನು ಬಂದ
ಆಸ್ತಿ ಪಾಸ್ತಿ ಎಷ್ಟು ಎಂದ
ಕವಿಯು ಆಗ ಆಸ್ತಿನಾಸ್ತಿ,
ಕಾವ್ಯವೊಂದೆ ನನ್ನ ಆಸ್ತಿ
ಜನರ ಪ್ರೀತಿಯೊಂದು ಜಾಸ್ತಿ ॥ ೧೬ ॥
ಕವಿಯ ಮಾತು ಕೇಳಿ ಆಗ
ಹೆಣ್ಣು ಕೊಡಲು ಓಡಿ ಬಂದ
ದೂರ ದೇಶದವನು ಅಂದ
ಕವಿಯು ಒಡನೆ ಹೀಗೆ ನುಡಿದ
ನಿನ್ನ ಕಾವ್ಯ ನಿಧಿಯು ಅಲ್ಲ
ಹೊಟ್ಟೆ ತುಂಬು ಅಸ್ತ್ರವಲ್ಲ
ಮಗಳಿಗೊಂದು ವಡವೆಯಲ್ಲ
ನಿನಗೆ ಕೊಡಲು ತಿರುಕನಲ್ಲ ॥ ೨೪ ॥

ಹೀಗೆ ಎನುತ ಹೆಣ್ಣು ಕೊಡಲು
ಓಡಿ ಬಂದ ದೂರದವನು
ಕವಿಯ ಮಹಿಮೆ ಅರಿಯದಾಗಿ
ಕಾವ್ಯ ಬರೆವ ನಿನಗೆ ನಾನು
ಮಗಳ ಕೊಡೆನು ಕಾವ್ಯ ಜೀವಿ
ಏನು ಜೀವಿ ಇಹದ ಅರಿವು
ನಿನಗೆ ಇಹುದೆ ಹೊನ್ನೆ ಹೊನ್ನು
ಜನರ ಅಳೆವ ಮಾನಗೋಲು ‖ ೩೨ ‖
ಹೀಗೆ ನುಡಿದ ಮಾತು ಕೇಳಿ
ಕವಿಯು ಒಂದು ಬಾರಿ ನಕ್ಕು
ಹೆಣ್ಣು ನೀವು ಕೊಡಿರಿ ಎಂದು
ಕಾಲು ಹಿಡಿಯಬಂದೆನೆಂದು
ತಿಳಿದು ಹೀಗೆ ಹೇಳ್ವಿರೇನು
ಜಗದ ನೀತಿ ಏನೆ ಇರಲಿ
ಹೊನ್ನು ಪಡೆದ ನಿಮಗೆ ಶರಣು
ಆಯಿತೆ ಮಹಾನುಭಾವ ‖ ೪೦ ‖
ಕೋಪಗೊಂಡು ಹೇಳುತಿಲ್ಲ
ಕೋಪ ಮೊದಲು ನನ್ನಲಿಲ್ಲ
ಕರವ ಒಡ್ಡಿ ಬೇಡುತಿಹೆನು
ಧನವನಂಬಿ ಬಾಳಬೇಡಿ
ನಿಮ್ಮಲಿಹುದು ಧನವು
ಸ್ಥಿರವೆ ಬೇಗ ತಿಳಿದು ನೀವು
ಹೇಳಿ ದೈನ್ಯನಾಗಿ ಬೇಡುತಿಹೆನು
ಮಾನಕೀರ್ತಿಯೊಂದು ಅಧಿಕಲ್ಲವೇನು ‖ ೪೮ ‖
ಕಾವ್ಯ ಕೊಂದು ರೂಪವುಂಟು
ಸ್ಥಿರತೆ ಅದಕೆ ಉಂಟು ಉಂಟು
ಹೆಸರ ಹರಿಸು ಹೆಮ್ಮೆ ಉಂಟು
ಕವಿಯು ರಕ್ಷೆ ಮಾಡುವುದುಂಟು
ಮನುಜ ಜನ್ಮ ಪುನಿತ ಮಾಡು

ಭಾಗ್ಯ ಉಂಟು ಎಲ್ಲ ಉಂಟು
ಇದಕೆ ಮಿಗಿಲು ಏನು ಉಂಟು
ಜಗದಿ ಅಸ್ತ್ರ ಮಹಾನುಭಾವ ॥ ೫೬ ॥
ಕವಿಯೆ ನಿನ್ನ ಮಾತು ಕೇಳಿ
ನಾನು ಧನ್ಯನಾದೆ ತಿಳಿಯೆ
ನೀನೆ ಇಂದು ವಿಜಯಿಯಾದೆ
ಧನವು ಕೀಳು ಎಂಬುದರಿತೆ
ನನ್ನ ತಪ್ಪು ಬೇಗ ಕ್ಷಮಿಸು
ಕಾಲಿಗೆರಗಿ ಮುಗಳ ಕೊಡುತೆ
ನಿನ್ನ ಕೀರ್ತಿ ಬೆಳಗಲೆಂದು
ನಿನಗೆ ನಾನು ಹರಸುವೆ ॥ ೬೭ ॥



# ಅಮೃತ ಸಂಜೀವಿನಿ

( ಎಲ್ಲ ಬೇನೆಗಳಿಗೆ ಒಂದೇ ಒಂದು ಮದ್ದು. )

ಲೇ:— **ಡಾ. ವನವಿಹಾರಿ.**

ಎಲ್ಲ ಬೇನೆಗಳಿಗೆ ಒಂದೇ ಒಂದು ಉಪಾಯವೆಂಬ ಹೆಸರು ಕೇಳಿ ತಾಯಿಗಳಿರಾ ನೀವೆಲ್ಲ ಬೆರಗಾಗಬಹುದಲ್ಲ ! ಇದರಲ್ಲಿ ಬೆರುಗುಗೊಳ್ಳುವ ಕಾರಣವೇನೂ ಇಲ್ಲ! ‘ Natures Laws are too simple to believe. ’ ಡಾ. ಕುನ್ಹೆಯವರು ಎಲ್ಲ ಬೇನೆಗಳೂ ಒಂದೇ, ಅದಕ್ಕೆ ಮದ್ದಾದರೂ ಒಂದೇ ಎಂದು ಸಿದ್ಧಪಡಿಸಿ ತೋರಿಸಿರುವರು. ಅವರ “ ಮುಖಪರೀಕ್ಷಾ ಶಾಸ್ತ್ರ ” ಎಂಬ ಪುಸ್ತಕವನ್ನು ನೋಡಿದಲ್ಲಿ ನಿರೋಗಿಗಳೆಂದು ತಿರುಗಾಡುವ ನಾವೆಲ್ಲರೂ ರೋಗಿಗಳು ಹೇಗಿರುವರೆಂಬುದು ಮನವರಿಕೆಯಾಗುವದು, ಜಂತು ಶಾಸ್ತ್ರದ ಹುಯಿಲನ್ನೆಬಿಸಿ, ಕುಬೇರನ ಸಂಪತ್ತಿಯನ್ನು ಗಳಿಸುವಂಥ ಜಾಹಿರಾತುಬಾಜಿಯಿಂದ ಬೆರಗುಗೊಂಡ ತಾಯಂದಿರು ಬೇಕಾದಷ್ಟು ವೆಚ್ಚಕೊಟ್ಟು, ಭಿಷಗ್ವರ್ಯರನ್ನು ಕರೆಯಿಸಿ, ತಮ್ಮ ಮಕ್ಕಳ ಆರೈಕೆ ಔಷದೋಪಚಾರಣೆ ಮಾಡುವದಾಗುವದಿಲ್ಲವೆಂದು ಹಣೆಹಣೆ ಕುಟ್ಟಿಕೊಂಡು ಅಳುವರು ಕೆಲವರು, ಇಂಥವರನ್ನೆಲ್ಲ ಕರೆಯಿಸಿ ಆರೈಕೆ ಮಾಡಿದರೂ ಸಹ ರತ್ನದಂಥ ತೇಜಸ್ವಿ ಚಿಕ್ಕ ಮಕ್ಕಳನ್ನು ಕಳೆದುಕೊಂಡು ಬೇಕಾದಷ್ಟು ಸತ್ಯ ನಾರಾಯಣ ವ್ರತವನ್ನು ಮಾಡಿದರೂ ಸಹ ಅವನು ಒಲಿಯಲಿಲ್ಲೆಂದು ಹುಚ್ಚೆದ್ದು ಕುಣಿದಾಡುವ ಕುಬೇರರ ಮಕ್ಕಳು ಕೆಲವರು. ಬೇಕಾದಷ್ಟು ಹಣ ವೆಚ್ಚಮಾಡಿ ಮಂಚಾಲಿ, ಗಾಣಗಾಪೂರ, ತುಳಜಾಪೂರ, ಕೊಲ್ಹಾಪೂರ, ನರಸೋಬನವಾಡಿ ಈ ವಾಡಿ ಆ ವಾಡಿ ಎಲ್ಲಮ್ಮನ ಜಾತ್ರೆ, ಯಮನೂರ ಯಾತ್ರೆ, ಮುಂತಾದ ಎಲ್ಲ ಕಡೆಗೆ ಆರೋಗ್ಯಕ್ಕಾಗಿ, ಸ್ವಿಟಝರಲಂಡ, ಕಾರಲಾ, ಲೋಣಾವಳ, ಹಿಮಾಲಯ ಮುಂತಾದ ಗಿರಿಶಿಖರಗಳನ್ನು ಸುತ್ತಾಡಿ, ಸಂಪತ್ತನ್ನು ಹಾಳು ಮಾಡಿಕೊಂಡ ಭಾವಿಕರು ನಾಸ್ತಿಕರ ಮೆಟ್ಟಲನ್ನು ಏರ ಹತ್ತಿದ್ದಾರೆ. ಈ ಎಲ್ಲ ಅನಾಹುತಗಳಿಗೆ ಕಾರಣವು ಮೂಲಸೃಷ್ಟಿ ನಿಯಮದ ಭಂಗ ಎಂಬ ಅರಿವಿಲ್ಲದೇ ಜನರೆಲ್ಲರೂ ದುಃಖಕ್ಕೆ, ಅಪಮೃತ್ಯುವಿಗೆ ತುತ್ತಾಗಿರುವರು. ಇದಕ್ಕೆಲ್ಲ ಕೃತಿಮ ಸಮಾಜ ರಚನೆಯ ನಿಯಮಗಳಿಗೆ ತುತ್ತಾದ ಮಾತೆಯರ ಅಂದರೆ ಸ್ತ್ರೀಯರ ಅಜ್ಞಾನವೇ ಕಾರಣ. ಆರೋಗ್ಯವೇ ಸೃಷ್ಟಿ ಧರ್ಮವಿದ್ದು ಅನಾರೋಗ್ಯವು ಕೃತ್ರಿಮ ನಡತೆಯ ನಿಮಿತ್ತ ಉಂಟಾಗಿರುತ್ತದೆ. ಅನಾರೋಗ್ಯವುಂಟಾದ ಕೂಡಲೆ ಯಾವ ಸೃಷ್ಟಿ ನಿಯಮದ ಭಂಗವು ಕಾರಣವಿರುತ್ತದೆಂಬುದನ್ನು ಸ್ತ್ರೀಯರು ಅಥವಾ ಭಗಿನಿಯರು ಕೂಡಲೆ ಕಂಡು ಹಿಡಿದು ಅದನ್ನು ನಿವಾರಿಸಲು ಬೇಕಾಗುವ ಸ್ವಾತಂತ್ರವನ್ನು ಕೃತ್ರಿಮ ಸಮಾಜ ರಚನೆಯ ಬಂಧನವನ್ನು ಹರಿದೊಗೆದು, ಗಳಿಸಬೇಕು. ಈ

ಸ್ವಾತಂತ್ರ್ಯವೆ ಅವರ ಜನ್ಮಸಿದ್ಧ ಹಕ್ಕಾಗಿರುತ್ತದೆ. ಇದನ್ನು ಅವರು ಗಳಿಸದಿದ್ದಲ್ಲಿ ತನ್ನ ಕರುಳನ್ನು ಕಳೆದುಕೊಂಡ ಬಗ್ಗೆ ತಾವೇ ದುಃಖಪಡಬೇಕಾಗುವದು. ಪ್ರತಿ ಯೊಂದು ಬೇನೆಯಲ್ಲಿಯೂ ನಮ್ಮ ಆಹಾರ ವಿಹಾರದ ದೋಷಗಳ ನಿಮಿತ್ತ ದೋಷ ಗಳುಂಟಾಗುವವು. ಈ ದೋಷಗಳೆಂದರೆ ದೇಹದ ಆರೋಗ್ಯಕ್ಕೆ ಬೇಡಾದಂಥ ವಿಜಾತಿಯ ದ್ರವ್ಯಗಳೆಂದು ಹೇಳಬಹುದು. ಕಾಲಮಾನ ಹವೆಯ ಗುಣಗಳಿಗನು ಸಾರವಾಗಿ ಈ ವಿಜಾತಿಯ ದ್ರವ್ಯವು ದೇಹದಲ್ಲಿ ಕೊಳೆತು ಅಂದರೆ ಫರಮೆಂಟಾಗಿ ( Ferment ) ತನಗೆ ಸಿಕ್ಕ ದಾರಿಯಿಂದ ಹೊರಬೀಳುವದು, ಆದರಿಂದ ನಿನ್ನೆ-ಮೊನ್ನೆ ಈಗಲೆ-ಆಗಲೆ ಅತ್ತಿತ್ತ ಓಡಾಡುವ ನಮ್ಮ ಪ್ರೀತಿಯ ವ್ಯಕ್ತಿಗಳು ಪ್ಲೇಗ ಕಾಲರಾ, ಟಾಯಫಾಯಿಡ, ಹೃದ್ರೋಗ ( Heart-fail ) ಮುಂತಾದ ಆಕಸ್ಮಿಕ ರೋಗಗಳಿಗೆ ಬಲಿಬಿದ್ದು ಮೃತ್ಯುಂಜಯನನ್ನು ಗೆಲ್ಲಲು ಹೊರಟು ಆ ಮೃತ್ಯುವಿನ ಬಲಿಯಾಗಿ ಎಲ್ಲರನ್ನು ಆಶ್ಚರ್ಯಚಕಿತರನ್ನು ಭಯಗ್ರಸ್ತರನ್ನು ಮಾಡಿಬಿಡುವರು. ಇದರ ಕಾರಣವನ್ನು ಕಂಡುಹಿಡಿದಲ್ಲಿ ' A stitch in time saves nine ' ಎಂಬಂತೆ ಕೂಡಲೆ ಕಾರಣವನ್ನು ಕಿತ್ತಿಹಾಕಿದಲ್ಲಿ ಮುಂದಿನ ಎಲ್ಲ ಅನಾಹುತಗಳೂ ತಪ್ಪಿ ಹೋಗುವವು. ಆಹಾರ ಸಿಗುವದಿಲ್ಲವೆಂಬ ಭಯದಿಂದ ಆಶೆಬುರುಕತನ ದಿಂದ ಮನುಷ್ಯನು ಹೆಚ್ಚಿಗೆ ತಿನ್ನುವನು, ತಿನ್ನಬಾರದಂಥ ಚಕ್ಕಲಿ, ಚಹಾ ದೋಸೆ ಜಿಲೇಬಿ ಬಿಸ್ಕೀಟ, ಪೆಪ್ಪರಮೆಂಟ ರೋಟ, ಅವಲಕ್ಕಿ ಚುರಮುರಿ ಖಾರದಾಣಿ ಮುಂತಾದವುಗಳನ್ನು ಅಕಾಲದಲ್ಲಿ ಸಕಾಲದಲ್ಲಿ, ಬೇಕಾದಾಗ, ಬೇಡವಾದಾಗ, ಬೇಕಾದಹಾಗೆ ಬೇಕಾದಷ್ಟು ತಿನ್ನುವದರಿಂದ ಆ ಪದಾರ್ಥಗಳು ಸರಿಯಾಗಿ ಪಚನ ವಾಗದೇ ಬೊಜ್ಜುರೂಪವಾಗಿ ( Fat ) ದೇಹದೆಲ್ಲೆಲ್ಲ ವ್ಯಾಪಿಸಿರುವನು; ಇದರಿಂದಲೆ ಮನುಷ್ಯನು ಕುರೂಪಿ ಬೇಡೋಲ ಆಗಿರುವನು. (ನಾವೆಲ್ಲರೂ ರೋಗಿಗಳು ಹೇಗಿರು ವೆಂಬುದನ್ನು ಮನವರಿಕೆ ಮಾಡಿಕೊಳ್ಳಲು ಡಾ. ಕುನ್ಹೆಯವರ " Facial expres sion " ಎಂಬ ಪುಸ್ತಕದೊಳಗಿನ ಚಿತ್ರಗಳನ್ನು ದಯಮಾಡಿ ನೋಡಬೇಕು) ಈ ವಿಜಾತಿಯ ದ್ರವ್ಯವು ಯೂರಿಕ ಆಸಿಡದಲ್ಲಿ ಪರ್ಯಾವಸಾನ ಹೊಂದುವದು. ಈ ವಿಷಮಯ ಪದಾರ್ಥವನ್ನು ಹೊರಗೆ ಹಾಕಲು ಜ್ವರ,ಕೆಮ್ಮು,ದಮ್ಮು,ವಾತ,ಶೂಲೆ, ಪಿತ್ತ ಮುಂ ರೂಪಧಾರಣಮಾಡಿದ ಬೇನೆಗಳು ಬರುವವು.ಇಂಥ ಪರಿಸ್ಥಿತಿಯಲ್ಲಿ ಆ ಯುರಿಕ್ ಆಸಿಡವು ಅಲ್ಕಲಿ ಸ್ವರೂಪ ಹೊಂದುವಂತೆ ಮ್ಯಾಕ್ಸಲ್ಫ (Epsom-salt ) ಡಾಕ್ಟರರು ಜುಲಾಬಕ್ಕೆ ಕೊಂಡುವಂಥ ಜಾನಸನ್ ಸಕ್ಕರೆಯಂಥ ಪದಾರ್ಥವಾದ ಕಹೀಔಷಧವು.ಇದರ ಉಪಯೋಗವನ್ನು ಜಾಣತನದಿಂದ ಮಾಡಬೇಕು. ಇದನ್ನು ಉಪಯೋಗಿಸುವವ ಪ್ರಮಾಣವು ಒಂದು ಭಾಗ ಎಪ್ಸಮ್ ಸಾಲ್ಟ ಮೂವತ್ತೆರಡು ಭಾಗ ಬಿಸಿ ನೀರು ಎರಡೂ ಕೂಡಿಸಿ ಮಿಶ್ರಣ ಮಾಡಿ ನೀರು ತಯಾರುಮಾಡಬೇಕು. ಈ ನೀರಿನಲ್ಲಿ ಮನುಷ್ಯನು ಕೂಡಬೇಕು. ಇದರಿಂದ ಆ ಯುರಿಕ್ ಆಸಿಡ್‌ದಿಂದ ಯುರೆಟ್ಸ ರೂಪವಾಗಿ ವಿಷವು ದೇಹದ ಮೇಲೆ ಕೂಡುವದು. ಅದನ್ನು ಒಂದೇ

ಸವನ್ನೆ ದೇಹವು ಬೆವರುವವರೆಗೆ ಒರೆಸುತ್ತ ಕೂಡಬೇಕು. ಒಂದು ವೇಳೆ ಆಗಲೆ ಬೆವರು ಬಾರದೇ ಇದ್ದಲ್ಲಿ ಮತ್ತು ಈ ಸ್ನಾನವು ಸಾಕೆನಿಸಿದಲ್ಲಿ ಸಾಧಾರಣವಾಗಿ ಒರೆಸಿಕೊಂಡು ಮುಸುಕು ಹಾಕಿ ಮಲಗಬೇಕು. ಆ ನಂತರವಾದರೂ ಬೆವರು ಬಿಡಬಹುದು, ಸಾಕಷ್ಟು ಅನುಭವವಿಲ್ಲದಲ್ಲಿ ಮೊದಲಿನ ಒಂದೆರಡು ಪ್ರಯೋಗಗಳಲ್ಲಿ ಇದರಿಂದ ಸಾಕಷ್ಟು ಲಾಭವು ಎನಿಸಲಿಕ್ಕಿಲ್ಲ, ಆದರೆ ಬರುಬರುತ್ತ ಹೇಳಲಿಕ್ಕೆ ಬಾರದಷ್ಟು ಲಾಭವೂ ಕಂಡು ಬರುವದು. ಇದರಂಥ ಸುಖದಾಯಕ ಲಾಭದಾಯಕ ಕೂಡಲೆ ಪರಿಣಾಮ ತೋರಿಸುವಂಥ ಆಶ್ಚರ್ಯಕಾರಕ ಉಪಾಯವು ಮತ್ತಾವದೂ ಇರುವದಿಲ್ಲ.ಕಟ್ಟಿನ ಜ್ವರವು(Tyfoid)ಪ್ರತಿ ಮೂರು ತಾಸಿಗೊಮ್ಮೆ ಈ ಸ್ನಾನವನ್ನು ಮಾಡಿಸಿದಲ್ಲಿ ಮೂರು ದಿವಸಗಳಲ್ಲಿ ಮಾಯವಾಗುವದು.ಅದರಂತೆ ವೈಲಿ,ಗಣಜಲಿ, ನಿಮೋನಿಯಾ, ಕ್ಷಯ ಮುಂತಾದ ರೋಗಗಳಲ್ಲಿ ಇಡೀ ದೇಹಕ್ಕೆ ಈ ಪ್ರಕಾರವಾಗಿ ಸ್ನಾನ ಕೊಡುವದರಿಂದ ಅಥವಾ ಆ ಅಂಗಾಂಗಳನ್ನು ಈ ನೀರಿನಿಂದ ಕಾಸುವದರಿಂದ ಒಳ್ಳೇ ಹೆಸರಾದ ತಜ್ಞರಾದ ಡಾಕ್ಟರ, ಧನ್ವಂತರೀ, ಹಕೀಮ, ಮುಂತಾದವರೆಲ್ಲರೂ ತಮ್ಮ ತಮ್ಮ ಶಸ್ತ್ರಾಸ್ತ್ರಗಳನ್ನು ತಮ್ಮ ತಮ್ಮ ಕೈಗಳಲ್ಲಿಯೇ ಹಿಡಿದುಕೊಂಡು, ನಿಂತಲ್ಲಿಯೇ ನಿಂತು ಬೆರಗುಗೊಳ್ಳುವಂಥ ಪರಿಣಾಮಗಳನ್ನು ನೋಡಿ ಬೆರಳು ಕಚ್ಚುವರು. ಕಾಲರಾದಲ್ಲಿ, ಬಾಲಗ್ರಹದಲ್ಲಿ, ಆಮಾಂಶ, ಅತಿಸಾರ ಸಂಗ್ರಹಿಣಿ ಮೂರನೇ ಸ್ಥಿತಿಗೂ ಮುಟ್ಟಿದಂಥ ಕಫ ಕ್ಷಯದ ರೋಗಿಗಳೂ ಮೂರು ದಿವಸಗಲ್ಲಿ ಗುಣಮುಖರಾಗುವರು. ಇಂಥ ರೋಗಗಳಲ್ಲಿ ವಾರದಲ್ಲಿ ಒಂದೆರಡು ಸಲ ಈ ಸ್ನಾನ ಮತ್ತು ದಿನದಲ್ಲಿ ಅಗತ್ಯಬಿದ್ದಂತೆ ಈ ನೀರಿನಿಂದ ವಿಶಿಷ್ಟ ಅಂಗಗಳನ್ನು ಕಾಸುವದರಿಂದ ಅಪಮೃತ್ಯುವಿಗೆ ತುತ್ತಾಗುವ ಮಾತೇ ಇಲ್ಲ. ಆದರೆ ರೋಗಿಗಳು ಕೂಡಲೇ ಗುಣಮುಖರಾಗಿ ಸ್ವಲ್ಪಾಯುಸದಿಂದ ಸ್ವಲ್ಪ ವೆಚ್ಚದಲ್ಲಿ ಗುಣಹೊಂದಿ ಮನೆಯ ನಿರಾಶಾಮಯ ವಾತಾವರಣವನ್ನು ಹೋಗಲಾಡಿಸಿ ಆನಂದಮಯವಾಗಿರುವರು. ಇದು ಅಲ್ಪ ಉಪಾಯವೆಂದು ಅಲ್ಲಗಳೆಯದೆ ಅಗತ್ಯವುಳ್ಳವರು ಮಾಡಿನೋಡಿ ಗುಣಹೊಂದಿದಲ್ಲಿ ಡಾಕ್ಟರರ ಫೀ ಎಂದು ಶ್ರೀಮಂತರು ತಾವು ಕೊಡಬಯಸುವ ಹಣವನ್ನು ವೀರಮಾತೆಯು ವೃದ್ಧಿಹೊಂದುವಂತೆ ಕೊಟ್ಟು ಹಾರೈಸಬೇಕು ಬೊಜ್ಜು ಕಳೆದುಕೊಳ್ಳಲು ಎಲ್ಲ ಉಪಾಯಗಳನ್ನು ಮಾಡಿ ಬೇಸತ್ತವರು ವಾರದಲ್ಲಿ ಎರಡು ಮೂರು ಸಲ ಈ ಸ್ನಾನವನ್ನು ಕೈಕೊಳ್ಳಬೇಕು, ಮತ್ತು ಬೊಜ್ಜು ಹೆಚ್ಚು ಬೆಳೆಯದಂತೆ ಹಣ್ಣು ಹಾಲಿನಮೇಲೆ ವಿಶೇಷವಾಗಿ ಇರಬೇಕು, (ಎಲ್ಲ ಬೇನೆಗಳಲ್ಲಿ ಈ ಪಥ್ಯವು ಒಳ್ಳೆಯದು) ಜಿಜ್ಞಾಸುಗಳು ಈ ಉಪಾಯವನ್ನು ಮಾಡಿ ನೋಡಿ ತಮ್ಮ ಅನುಭವಗಳನ್ನು ವೀರಮಾತೆಗೆ ತಿಳಿಸಿದಲ್ಲಿ ಪ್ರಸಿದ್ಧ ಮಾಡಲು ಅನುಕೂಲ್ಯವಾಗುವದು. ವಿಶೇಷವಾಗಿ ಮಾತೆಯರು ತಮ್ಮ ಪ್ರಿಯತಮ ಬಂಧು-ಬಾಂಧವರು ಮಕ್ಕಳು ಅಪಮೃತ್ಯುವಿಗೆ ತುತ್ತಾಗಬಾರದೆಂದು ಆಶಿಸುವವರು ಇತ್ತ ಹೆಚ್ಚಾಗಿ ಗಮನಕೊಡಬೇಕು.

---

# ಸರೋಜಿನಿ ನಾಯುಡು



ಲೇ:– **ಸರೋಜಿನಿ ಕುಸನೂರ,** ಎಂ. ಎ. ಧಾರವಾಡ.

ಸರೋಜಿನಿ ಭಾರತ ಕಾವ್ಯಾಂಬರದ ಬೆಳುದಿಂಗಳು. ಹಿಂದುಸ್ತಾನದ ಕವಿ ಚೂತವನ ಕೋಕಿಲೆ. ಆಕೆಯ ವಾಣಿ ವೇಣುಗಾನ, ಭಾಷಣ ರಸಗಂಗೆ. ಆಕೆಯ ಜೀವನ ನಿರಂತರ ಸೌಂದರ್ಯೋಪಾಸನೆ. ಇಂಥ ಅಮಲಮಣಿ ಸರೋಜಿನಿದೇವಿಯ ಪರಿಚಯ ಮಾಡಿಕೊಡುವದೆಂದರೆ ಮಹದಾನಂದ.

ಸರೋಜಿನಿದೇವಿಯ ತಂದೆ ಅಘೋರನಾಥ ಚಟ್ಟೋಪಾಧ್ಯಾಯ. ಮೈಸೂರಿನಲ್ಲಿ ಕೆಲವು ಕಾಲ ಪ್ರಾಧ್ಯಾಪಕರಾಗಿದ್ದು ಅನಂತರ ಹೈದ್ರಾಬಾದ ಸೇರಿ ಅಲ್ಲಿಯೇ ನೆಲೆಸಿದರು. ಆತನ ಯೋಗಜೀವನದ ಹಣ್ಣು ಸರೋಜಿನಿ. ಮೊಳಕೆಯಲ್ಲಿಯೇ ವ್ಯಕ್ತಿಯ ಗುಣ ತಿಳಿಯುತ್ತದೆ. ಎಳೆತನದಿಂದಲೂ ಸರೋಜಿನಿ ಬಲು ಚುರುಕು. ೧೨ ವರ್ಷಕ್ಕೇ ಆಕೆ ಮೆಟ್ರಿಕ್ ಪರೀಕ್ಷೆಯಲ್ಲಿ ಪಾಸಾದಳು.ಮುಂದೆ ವಿಲಾಯತಿಯಲ್ಲಿ ವಿದ್ಯಾಭ್ಯಾಸ ಹೊಂದಿದಳು. ಇನ್ನೂ ಹದಿಮೂರು ವರುಷದ ಚಿಕ್ಕ ಬಾಲಿಕೆಯಾಗಿರುವಾಗಲೇ ಆಕೆಯಲ್ಲಿ ಕಾವ್ಯಾಂಕುರ. ಆಕೆ ಆಡಿದ ಮಾತೂ ಮಾಡಿದ ಯಾವ ಕೆಲಸವು ಕಾವ್ಯಮಯವಾಗದೇ ಇಲ್ಲ. ಆಕೆಯ ಭಾಷಣಗಳು ರಸವತ್ತಾದ ಉದ್ವೇಗ ಪೂರ್ಣವಾದವು. ವಿಲಾಯತಿಯಲ್ಲಿ ತನ್ನ ಕವಿತೆಯಿಂದ ಜನರನ್ನು ಮುಗ್ಧಗೊಳಿಸಿ Nightingale of the east ಎನಿಸಿಕೊಂಡಳು. ಸರೋಜಿನಿ ೧೮೯೮ ರಲ್ಲಿ ಡಾ. ಎಮ್. ಜಿ. ನಾಯುಡು ಅವರನ್ನು ಮದುವೆಯಾದಳು. ಸರೋಜಿನಿಯ ಕವಿತೆಗಳು ಇಂಗ್ಲೀಷಿನಲ್ಲಿವೆ. ಆಕೆಯ ಸ್ವರ್ಣದೇಹಳಿ (Golden Threshold) ಭಗ್ನ ಪಕ್ಷಗಳು (Broken wings) ' Bird of Time ' ಇವುಗಳು ಇಂಗ್ಲೀಷಿನ ಜನರನ್ನು ತಲೆದೂಗಿಸಿವೆ. ಆಕೆಯ ಸ್ವರ್ಣದೇಹಳಿಗೆ ಸುಪ್ರಸಿದ್ಧ ವಿಮರ್ಶಕ ಚಕ್ರವರ್ತಿಯಾದ ಆರ್ಥರ್ ಸೈಮನ್ಸ ಪೀಠಿಕೆ ಬರೆದಿದ್ದಾನೆ. ಆಕೆಯ ಕವಿತೆಗಳು ಎಲ್ಲ ಭಾರತೀಯ ಭಾಷೆಗಳಲ್ಲಿ ಹಾಗೂ ಕೆಲವು ವಿದೇಶೀ ಭಾಷೆಗಳಲ್ಲಿ ಭಾಷಾಂತರ ಹೊಂದಿವೆ.

ಸೌಂದರ್ಯೋಪಾಸನೆಯೇ ಸರೋಜಿನಿಯ ಜೀವನರಹಸ್ಯ, ಗೆಲುವಿನಗುಟ್ಟು, ಜೀವನದ ಶ್ರುತಿಯಾಗಿದ್ದಿತು. ಆಕೆಯ ಜೀವನದ ಎಲ್ಲ ರಂಗಗಳಲ್ಲಿಯೂ ಈ ಶ್ರುತಿ ಕೇಳಬರುತ್ತದೆ. ಸ್ವದೇಶೀ, ಖಾದೀತತ್ವ, ಆಕೆಗೆ ಒಪ್ಪಿಗೆ ಇದ್ದರೂ ಒರಟು ಬಟ್ಟೆ ಆಕೆಗೆ ಸಹಿಸದು. ಆಕೆ ರೇಶಿಮೆ ಬಟ್ಟೆ ಧರಿಸುತ್ತಿದ್ದಳು. ಸೌಂದರ್ಯವೇ ಸತ್ಯವೆಂಬುದನ್ನು ಆಕೆ ಮನಗಂಡಿದ್ದಳು. ಸುಂದರವಲ್ಲದುದು ಮಧುರವಲ್ಲದುದು ಸತ್ಯವಲ್ಲವೆಂದು ಆಕೆಯ ಹಟ. ಈ ಸೌಂದರ್ಯ ಪಿಪಾಸೆಯೇ ಆಕೆಯನ್ನು ಕಾವ್ಯಲೋಕದಿಂದ ರಾಜಕೀಯ ಸಾಮಾಜಿಕ ಕ್ಷೇತ್ರದಲ್ಲಿ ಕಾರ್ಯಮಾಡಲು ತೊಡಗಿಸಿತು.

ವಿಲಾಯತಿಯಿಂದ ವಿದ್ಯಾಭ್ಯಾಸವನ್ನು ತೀರಿಸಿಕೊಂಡು ಬಂದಮೇಲೆ ಹಿಂದುಸ್ತಾನದಲ್ಲಿ ಆಕೆಯ ಮನಸ್ಸನ್ನು ಕರಗಿಸಿದುದು ಭಾರತ ಸ್ತ್ರೀಯರ ದೈನ್ಯಾವಸ್ಥೆ.ಸ್ತ್ರೀ ಎಂದರೆ ಹಣ ಸೊತ್ತು ಗಂಡಸಿನ ಸುಖಭೋಗದ ಸಾಮಗ್ರಿ, ಸಾಧನೆ. ನಾರಿ ಎಲ್ಲ ಅನರ್ಥಕ್ಕೂ ಕಾಂಚನದಂತೆ ಮೂಲ ಎಂಬ ಭಾವನೆ ಆಚಾರದಲ್ಲೂ, ವಿಚಾರದಲ್ಲೂ ಹಿಂದೂ ಜನರಲ್ಲಿ ಬಲವಾಗಿ ಬೇರೂರಿತ್ತು. ನಮ್ಮ ಸಂಸ್ಕೃತಿಗೆ, ಜೀವನಕ್ಕೆ, ವಿಕಾಸಕ್ಕೆ ಹಿಡಿದ ಈ ಗೆದ್ದಲು ಆಕೆಯ ಚೆಲುವಿನ ನೋಟಕ್ಕೆ ಪೂರ್ಣ ಜೀವನದ ಕಲ್ಪನೆಗೆ ಸರಿದೋರಲಿಲ್ಲ. ಆಕೆಯು ಕೂಡಲೆ ಸ್ತ್ರೀ ಜನೋದ್ಧರಣ ಕಾರ್ಯಕ್ಕೆ ತೊಡಗಿದಳು. ಅಂದಿನಿಂದ ಆಕೆಯ ಭಾಷಣಗಳಿಗೆ ಹಿಂದೀ ಮಹಿಳೆಯರ ಹಕ್ಕು ಬಾಧ್ಯತೆಗಳು, ಅವರ ತ್ಯಾಗ ಸೇವೆಗಳು ಪಲ್ಲವಿಯಾದವು. ಭಾರತ ಮಹಿಳೆಯ ಸ್ವಾತಂತ್ರ್ಯಸಾಧನೆಗಾಗಿ ದೊರೆತ ಯಾವ ಸಂದರ್ಭವನ್ನೂ ಆಕೆ ವ್ಯರ್ಥವಾಗಿ ಬಿಡಲಿಲ್ಲ. ಬೇರೆ ದೇಶಗಳಲ್ಲಿ ಈ ನಾರೀ ಚಳುವಳಿ ಭೀಕರವಾಗಿತ್ತು. ಆದರೆ ಭಾರತದಲ್ಲಿ ಸದ್ದಿಲ್ಲದೇ ಈ ಕ್ರಾಂತಿ ನಡೆದುಹೋಯಿತು. 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂಬ ವಾಕ್ಯ ನಿರ್ನಾಮವಾಗಿದೆ. ಸ್ವಾತಂತ್ರ್ಯದ ಸುಂದರ ಧ್ಯೇಯದ ಉಪಾಸನೆಯಲ್ಲಿ ನಾರಿ ಲಕ್ಷ್ಮಿಯಾಗಿದ್ದಾಳೆ. ಗಂಡು ಮತ್ತು ಹೆಣ್ಣು ವಾಗರ್ಥಗಳಂತೆ ಅನ್ಯೋನ್ಯ ಆಶ್ರಯಿಗಳು. ಯಾರಿಗೆ ಯಾರೂ ಹೆಚ್ಚಲ್ಲ, ಎಂಬ ಭಾವನೆ ಬೆಳೆದಿದೆ. ಸಂಘಜೀವನದಲ್ಲಿ, ರಾಜಕೀಯರಂಗದಲ್ಲಿ, ಶಿಕ್ಷಣದಲ್ಲಿ, ಕುಟುಂಬ ಜೀವನದಲ್ಲಿ ಸಾಮರಸ್ಯ ಬೆಳೆದಿದೆ. ಮಹಿಳೆಯರು ಪುರುಷರೊಡನೆ ಎಲ್ಲ ಕ್ಷೇತ್ರಗಳಲ್ಲಿಯೂ ಕೆಲಸ ಮಾಡುತ್ತಿದ್ದಾರೆ. ಶಾಸನ ಸಭೆಗಳಲ್ಲಿ ಸ್ತ್ರೀಯರಿಗೆ ಯೋಗ್ಯ ಸ್ಥಳವಿದೆ. ಜಗತ್ತಿಗೆ ಉದಾಹರಣೆಯಾಗಿ ವಿಜಯಲಕ್ಷ್ಮಿ ಪಂಡಿತ ಮಂತ್ರಿಯಾಗಿದ್ದಾಳೆ. ಈ ಕ್ರಾಂತಿ ಪುನರುಜ್ಜೀವನಗಳಿಗೆ ಗಾಂಧೀಜಿಯ ಪ್ರಭಾವ, ಅವರ ಸತ್ಯಾಗ್ರಹಗಳು ಬಹು ಮಟ್ಟಿಗೆ ಕಾರಣವಾಗಿದ್ದರೂ ಸರೋಜಿನಿಯ ಕೃಷಿಗೆ ಆ ಕೀರ್ತಿ ಸಲ್ಲಬೇಕು. ೧೯೩೦ ರಲ್ಲಿ ಸತ್ಯಾಗ್ರಹ ಸಮರದಲ್ಲಿ ಭಾರತದ ಸ್ತ್ರೀಯರು ವಹಿಸಿದ ಭಾಗ, ಹೊತ್ತ ಹೊಣೆ, ಮಾಡಿದ ತ್ಯಾಗ ಜಗತ್ತಿನ ಇತಿಹಾಸದಲ್ಲಿಯೇ ಮಹತ್ವದ್ದಾಗಿವೆ. ಸರೋಜಿನಿ ಸ್ವಯಂ ಉಪ್ಪಿನ ಸತ್ಯಾಗ್ರಹದಲ್ಲಿ ಧುಮುಕಿದಳು. ಹೆಸರಾದ ಧಾರಾಸನದ ಮುತ್ತಿಗೆಗೆ ಆಕೆಯೇ ಮುಂದಾಳು. ಆಗ ಮಾತ್ರ ಎಲ್ಲ ಸಮಯಗಳಲ್ಲೂ ಸರೋಜಿನಿಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಧಾನ ಪಾತ್ರವಿದ್ದೇ ಇತ್ತು. ಹಾಗೂ ಈ ಸ್ವಾತಂತ್ರ್ಯ ಸಂಗ್ರಾಮದ ಹೋರಾಟದಲ್ಲಿ ಆಕೆಯು ಅನೇಕಸಲ ಕಾರಾಗೃಹವನ್ನು ಕಂಡಿದ್ದಳು. ೧೯೧೯ ರಲ್ಲಿ ರೌಲೆಟ್ ಶಾಸನವನ್ನು ವಿರೋಧಿಸಿ ಗಾಂಧೀಜೀ ಮೊದಲನೇ ಸತ್ಯಾಗ್ರಹ ಹೂಡಿದಾಗಲೆ ಸರೋಜಿನಿ ಅದರಲ್ಲಿ ಪಾಲುಗೊಂಡಳು. ಆಕೆಯದು ದೇಶಸೇವೆಯಲ್ಲಿ ನುರಿತ ಜೀವ.ಹೆಸರಿಗೆ ಹೈದ್ರಾಬಾದ ನಿವಾಸಿಯಾದರೂ ಹೆಚ್ಚಾಗಿ ಇರುತ್ತಿದ್ದುದು ಮುಂಬೈಯಲ್ಲಿ. ಗಾಂಧೀಜಿಯ ಮೇಲೆ ಆಕೆಯದು ಅಪಾರ ಭಕ್ತಿ. ಸತ್ಯಾಗ್ರಹದ ಪವಾಡವನ್ನು ಮೆರೆಯಿಸಿ ಸ್ವದೇಶಕ್ಕೆ ಹಿಂದಿರುಗಿದ ಗಾಂಧೀಜಿಯ ತತ್ತ್

ಜೀವನಗಳು ಆಕೆಯನ್ನು ಸೆಳೆದವು. ಅಂದಿನಿಂದ ಭಾರತದ ಮೂಲೆ ಮೂಲೆಗಳಲ್ಲೂ ಗಾಂಧೀ ಗೀತವನ್ನು ಹಾಡುತ್ತಿದ್ದಾಳೆ. ನೂರು ರಾಗಗಳಲ್ಲಿ ನೂರು ಛಂದಗಳಲ್ಲಿ ಆ ಹಾಡು ದನಿಗೊಂಡಿದೆ. ಸಾವಿರ ಮನಸ್ಸಿನಲ್ಲಿ ಆಚಾರ್ಯ ಪ್ರೇಮವನ್ನು ಆಕೆ ಹರಿಸಿದ್ದಾಳೆ. ಭಾರತದ ಒಳಗೂ ಹೊರಗೂ ಆತನ ಸಂದೇಶವನ್ನು ಬೀರಿದ್ದಾಳೆ. ಹೈದ್ರಾಬಾದಿನ ನೆರೆಹಾವಳಿಯಲ್ಲಿ ಸಂತ್ರಸ್ತರಿಗೆ ಸಹಾಯ ಸಲ್ಲಿಸಿದ ಮಹಾನ್ ಕಾರ್ಯಕ್ಕಾಗಿ ಎಡ್ವರ್ಡ್ ಮಹಾರಾಜನಿಂದ ಕೈಸರ-ಈ-ಹಿಂದ ಎಂಬ ಸುವರ್ಣ ಪದಕವನ್ನು ಸರೋಜಿನಿದೇವಿ ಪಡೆದಿದ್ದಳು. ಗಾಂಧೀಜಿ, ಜವಾಹರ, ರವೀಂದ್ರನಾಥರಿಗಿದ್ದಷ್ಟೇ ಜಗದ್ವಿಖ್ಯಾತಿ ಆಕೆಗಿದೆ. ಅಮೇರಿಕಾ, ಆಫ್ರಿಕಾ, ಯುರೋಪುಗಳಲ್ಲಿ ಭಾರತದ ಸಂದೇಶವನ್ನು ತನ್ನದೇ ಆದ ರೀತಿಯಲ್ಲಿ ಬೀರಿದ್ದಾಳೆ. ಸತ್ಯಾಗ್ರಹವನ್ನು ಸ್ವೀಕರಿಸಿದ ವಿದುಷೀಮಣಿಗಳಲ್ಲಿ ಆಕೆಯೇ ಮೊದಲಿಗಳು.

ಸರೋಜಿನಿ ೧೯೨೩ ರಿಂದ ೨೯ರ ವರೆಗೆ ಮುಂಬೈ ಮುನಿಸಿಪಾಲ್ಟಿಯ ಸದಸ್ಯೆಯಾಗಿದ್ದಳು. ೧೯೨೫ ರಲ್ಲಿ ಆಕೆಗೆ Indian National Congress ದ ಅಧ್ಯಕ್ಷಸ್ಥಾನ ದೊರಕಿತು. ಆಕೆಯು ಭಾರತದ ಅನೇಕ ಪ್ರಮುಖ ವಿಶ್ವವಿದ್ಯಾಲಯಗಳ ಪದವೀದಾನದ ಕಾಲಕ್ಕೆ ಭಾಷಣಗಳನ್ನು ಮಾಡಿದ್ದಾಳೆ. ಆಕೆಯು ಒಮ್ಮೆ ನಾಗಪೂರ ವಿಶ್ವವಿದ್ಯಾಲಯದ ಪ್ರಶಸ್ತಿ ಪ್ರದಾನೋತ್ಸವದ ಪ್ರಧಾನ ಭಾಷಣವನ್ನು ಮಾಡುತ್ತ ವಿದ್ಯಾರ್ಥಿಗಳನ್ನುದ್ದೇಶಿಸಿ, ಈ ರೀತಿ ಹೇಳಿದಳು ‘ ನಾನು ಬ್ರಾಹ್ಮಣಿ! ಭಿಕ್ಷಾಂ ದೇಹಿ ’ ಎಂದು ಬಂದಿದ್ದೇನೆ. ನಾನು ಬೇಡುತ್ತಿರುವುದು ಹಿಡಿ ಅನ್ನವಲ್ಲ. ದೇಶಸೇವೆಗಾಗಿ ಸಮರ್ಪಿತವಾದ ನಿಮ್ಮ ಜೀವಗಳನ್ನು.

ಸರೋಜಿನಿಯ ರಾಜಕೀಯ ಜೀವನವೆಲ್ಲ ಬರಿ ಸಿಡಿಲು ಗುದುಕಿಯ ಸವಾರಿಯಾಗಿಲ್ಲ. ಕವಿಗುಣವಾದ ಸಾಮೋಪಾಯವೇ ಆಕೆಯ ಸಾಧನ. ಕಾಂಗ್ರೆಸ್ಸಿನಲ್ಲಿ ಸ್ತ್ರೀಪುರುಷರ ಸಮಾನತೆ ರೂಢಿಯಲ್ಲಿ ಬಂದುದು ಆಕೆಯ ಮಧುರ ಪರಿಶ್ರಮದಿಂದ. ಭಾರತದ ಸ್ತ್ರೀಯರಿಗೆ ಇಂದು ಮತದಾನದ ಹಕ್ಕು ಬಂದಿದೆ. ೧೯೧೯ ರಲ್ಲಿ ಮೌಂಟಫರ್ಡ ಸುಧಾರಣೆಗಳು ಬಂದಾಗ ಈ ಅಧಿಕಾರ ದೊರೆಯಿತು. ಆಗ ಸರೊಜಿನಿಯೇ ಭಾರತೀಯ ಸ್ತ್ರೀಯರ ಶಿಷ್ಟಮಂಡಳದ ಮುಂದಾಳಾಗಿ ಇಂಗ್ಲೆಂಡಿಗೆ ಹೋಗಿದ್ದಳು. ಹಿಂದೂ ಸ್ತ್ರೀಯುಕ್ತಿ ಇಂದು ಕಾಣುವ ಪ್ರಗತಿಗೆ ಅಂದೇ ತಳಹದಿ ಬಿತ್ತು. ಆನಿಬೆಸೆಂಟರ ಹೋಮರೂಲು ಲೀಗಿಗೆ ಶಿಷ್ಟಮಂಡಳದಲ್ಲೂ ಆಕೆ ಇಂಗ್ಲಂಡು ಕಂಡಿದ್ದಳು. ೧೯೩೧ ರಲ್ಲಿ ಲಂಡನದಲ್ಲಿ ಜರುಗಿದ ದುಂಡುಮೇಜಿನ ಪರಿಷತ್ತಿನಲ್ಲಿ ಪ್ರತಿನಿಧಿಯಾಗಿದ್ದಳು.

ಸರೋಜಿನಿಯ ಕವಿಹೃದಯಕ್ಕೆ ಎರಡರಲ್ಲಿ ಅಚಲ ಶ್ರದ್ಧೆ. ಒಂದು ಗಾಂಧೀಜಿಯ ಜೀವನ, ಇನ್ನೊಂದು ಮಾನವ ಕೋಟಿಯ ಏಕತಾನ. ಸಮರಸ ಜೀವನದ ಏಕತಾನವೇ ಮಾನವ ಜೀವನದ ಪೂರ್ಣ ಸೌಂದರ್ಯ. ಗಾಂಧೀಜಿಯ ಬಾಳಿನಲ್ಲಿ ಆಕೆ ಈ ಸಮರಸ ಜೀವನದ ಶ್ರುತಿಯನ್ನು ಕೇಳಿದ್ದಳು.

ಇಂಥ ಧೀರ ಜೀವಿಗಲ್ಲದೆ ಮತ್ತಾರಿಗೆ ಮನ್ನಣೆ ಸಲ್ಲಬೇಕು ? ಲಕ್ನೋ ಕಾಂಗ್ರೆಸ್ಸಿಗೆ ಒಂದೇ ಮನದಿಂದ ಭಾರತವು ಸರೋಜಿನಿಯನ್ನು ಅಧ್ಯಕ್ಷಸ್ಥಾನಕ್ಕೆ ಆರಿಸಿತು. ತನ್ನ ದೇಶಸೇವೆ, ತ್ಯಾಗಗಳಿಂದ ಆಕೆಯು ಉತ್ತರ ಪ್ರದೇಶದ ಗವ್ಹರ್ನರ ಪದವಿಯನ್ನು ಪಡೆದಳು. ಇಂಥ ಧೀರ ವೀರ ಮಹಿಳೆ ಸರೋಜಿನಿದೇವಿಯ ಜೀವನ ಕುಸುಮವು ಆಕೆಯ ೭೦ ನೆಯ ವಯಸ್ಸಿನಲ್ಲಿ ೧೯೪೯ರ ಮಾರ್ಚ ೨ ನೆಯ ದಿನಾಂಕ ದಂದು ಮುಕುಲಿತವಾಯಿತು. ಆ ಕುಸುಮದ ಸೌರಭ ಭಾರತದ ಒಳಗೂ ಹೊರಗೂ ಪಸರಿಸಿದೆ. ಆಕೆಯ ಆದರ್ಶ ತತ್ವಗಳನ್ನು ಅನುಸರಿಸುವದು ಭಾರತದ ಮಹಿಳೆ ಯರ ಆದ್ಯ ಕರ್ತವ್ಯವಾಗಿದೆ.

**ಜೈ ಹಿಂದ**

**[ಅಖಿಲ ಭಾರತ ಆಕಾಶವಾಣಿ, ಧಾರವಾಡ. ಇವರ ಕೃಪೆಯಿಂದ]**



## — ನಾರೀ —

**ಲೇ:— ' ಸರೋಜಿನಿ '**

ಅರ್ಧ ಸತ್ಯ ನೀಂ, ಅರ್ಧ ಸ್ವಪ್ನ ನೀಂ, ಆಶೆ–ನಿರಾಶೆಗಳರ್ಧವೆ ನೀಂ
ಅರ್ಧ ಅಜಿತ-ಜಿತ, ಅರ್ಧ ತೃಪ್ತಿ ನೀಂ, ಅತೃಪ್ತಿ-ಪಿಪಾಸೆಗಳ-
ರೆಯೇ ನೀಂ
ಅರ್ಧ ಕಾಮದೊಳ್ ಬೆಂಕಿಯ ಕಿಡಿ ನೀಂ, ಇನ್ನರ್ಧ ದೊಳ್
ನೀರೇ ನೀಂ
ಅರ್ಧಾಂಗಿನೀ ದೇವೀ, ಅರೆಜೀವನದ ಪ್ರತಿನಿಧಿ ನಾರೀ ನೀಂ!

**( ಹಿಂದೀ ಕವಿತೆಯೊಂದರಿಂದ )**

# ಕೈಗಾರಿಕೆಯಲ್ಲಿ ಕಲೆ



ಲೇ:— ಶ್ರೀ. ಹಳಪೇಟ ಚಿಂತಾಮಣಿ.

" ಒಂದು ವಸ್ತುವು ಸುಂದರವಾಗಿರುವದರಿಂದ ಅದನ್ನು ಉಪಯೋಗಕ್ಕೆ ತೆಗೆದುಕೊಳ್ಳುವದಿರದೆ, ಹೆಚ್ಚು ಉಪಯೋಗಕ್ಕೆ ಬರುವ ವಸ್ತುವನ್ನು ಸುಂದರವಾಗಿ ಮಾಡಿಕೊಳ್ಳುವದಿರುತ್ತದೆ. "

(ಒಂದು ವಿಚಾರ ಮೊಗ್ಗೆ)

ಒಂದು ಭವ್ಯವೂ ಅದ್ಭುತವೂ ಆದ ಕಲಾಕೃತಿಯನ್ನು ಬಣ್ಣಿಸುತ್ತ " ಇದನ್ನು ೨೦ ಸಾವಿರ ಜನರು ೨೦ ವರುಷಗಳಲ್ಲಿ ಕಟ್ಟಿದರಂತೆ " ಎಂದು ಮಹಾತ್ಮಾ ಗಾಂಧಿಯವರೆದುರು ಹೇಳಿದಾಗ ತುಂಬ ಮರುಕವನ್ನು ವ್ಯಕ್ತಮಾಡಿ ಗಾಂಧೀಜಿ ಉಸಿರೆಳೆದರಂತೆ !

" ತಾವು ಈ ಕಲಾಕೃತಿಯನ್ನು ಮೆಚ್ಚುವದಿಲ್ಲವೇ ! " ಹೀಗೆ ಆಶ್ಚರ್ಯದ ದನಿಯಲ್ಲಿ ಪ್ರಶ್ನೆ ಹಾಕಿದಾಗ.

" ಮೆಚ್ಚದೇನು ! ಆದರೆ ೨೦ ಸಾವಿರ ಜನರ ಕೃತಶಕ್ತಿಯನ್ನೂ ಮಾನವತೆಯ ಮುನ್ನಡೆಯ ಕಾರ್ಯದಲ್ಲಿ ಅದೇ ೨೦ ವರುಷ ಉಪಯೋಗಿಸಿದ್ದರೆ ಎಂಥ ಮಹಾನ್ ಜೀವನ ಕಲಾಕೃತಿ ನಿರ್ಮಾಣವಾಗಬಹುದಿತ್ತಲ್ಲ ಎಂದು ಚಿಂತಿಸಿದೆ ಅಷ್ಟೆ ! " ಎಂದುತ್ತರಿಸಿದರಂತೆ !

ಜೀವನದ ವಿಷಯವಾಗಿ ಕ್ರಾಂತಿಕಾರೀ ಧೋರಣವಿಟ್ಟುಕೊಂಡಿದ್ದ ಮಹಾತ್ಮರು ಕಲೆಯ ವಿಷಯವಾಗಿಯೂ ತಳೆದ ಅಭಿಪ್ರಾಯಗಳು, ಕ್ರಾಂತಿಕಾರಿಯಾಗಿಯೇ ಇದ್ದವು. ಜೀವನಕ್ಕೆ ಹೊಂದಿಕೊಳ್ಳದ ಕಲೆಯು ಜೀವನ ಕಲೆಯಾದೀತೇ ಅನ್ನುವ ದೃಷ್ಟಿ ಕೋನವು ಇಂದಿಗೂ ಕಲಾತಜ್ಞರನ್ನು ಎಚ್ಚರಿಸುವ ಮಾತೇ ಆಗಿ ಉಳಿದಿದೆ. ಪ್ರಗತಿ, ಪರಾಗತಿಗಳ ತಾಕಲಾಟದಲ್ಲಿ ಕಲೆಗಾಗಿ ಕಲೆ ಅನ್ನುವ ಮಾತಂತೂ ಹಳೆಯದಾಗಿದೆ. ಇಷ್ಟೇ ಅಲ್ಲದೆ ತಕ್ಕಮಟ್ಟಿಗೆ ಹಳಸಿದ್ದೂ ಆಗಿದೆ ಎಂದು ಹೇಳಬಹುದಾಗಿದೆ.

ಇಂದು ಕೈಗಾರಿಕೆಯು ಕಲಾವಂತನ ಉಪಜೀವನದ ಮಾರ್ಗ ಮಾಡಿಕೊಡುತ್ತಿದ್ದರೆ, ಅದರಲ್ಲಿನ ಕಲೆಯು ಅವನ ನಿಜ ಜೀವನದ ಮಾರ್ಗದರ್ಶನ ಮಾಡಿಸುತ್ತಿದೆ. ಕೈಗಾರಿಕೆಯು ಜೀವನಕ್ಕೆ ಹೊಂದಿಕೊಂಡೇ ಉಳಿಯುತ್ತದೆ. ಬೆಳೆಯುತ್ತದೆ. ಕಲೆಯು ಜೀವನಕ್ಕೆ ಹೊಂದಿಕೊಂಡೇ ಬೆಳೆಯಬೇಕಾದರೆ ಕೈಗಾರಿಕೆಯ ಮುಖಾಂತರ ತಾನು ಬೆಳಗಬೇಕು. ಜೀವನವನ್ನೂ ಬೆಳಗಿಸಬೇಕು. ಇನ್ನುಳಿದವರ ಮಾತು ಏನೇ ಇದ್ದರೂ ಭಾರತದ ಹಳ್ಳಿಗನ ಜೀವನದ ಕುರುಹುಗಳಲ್ಲಿ ಇಂದಿಗೂ ಕೈಗಾರಿಕೆಯಲ್ಲಿನ ಕಲೆಯನ್ನು ಕಾಣುತ್ತೇವೆ.

೨೦ ವರುಷಗಳವರೆಗೆ ೨೦ ಸಾವಿರ ಜನರು ಕಟ್ಟಿದ ಕಲಾಕೃತಿಯು ನಮ್ಮ ಅಳಿದ ಸಾಮ್ರಾಜ್ಯದ ಕುರುಹಾದರೆ, ನಿತ್ಯದ ಬಳಿಕೆಯಲ್ಲಿರುವ ವಸ್ತುಗಳ ಮೆರು

ಗಾಗಿ ಉಳಿದ ಕಲೆಯು ಎಂಥ ಪರಿಸ್ಥಿತಿಯಲ್ಲಿಯೂ ಜೀವ ಹಿಡಿದುಕೊಂಡಿರುವ ಜನಜೀವನದ ಕುರುಹಾಗಿದೆ. ಬಹುಶಃ ಈ ಕುರುಹನ್ನು ಕಂಡೇ ಕನ್ನಡದ ಕಲೆಯನ್ನು ಹೊಗಳುವವರು. “ ಕನ್ನಡ ಕಲೆ ಎಂದರೆ ಮಾನವ ಜೀವನದ ಕೊಳದಲ್ಲಿನ ಕಮಲ.” ಎಂದು ಅಂದಿರಬೇಕೆನಿಸುತ್ತದೆ.

ಏರುಂಜವ್ವನದ ಬಾಲೆಯು ಕೊಡವು ಬರಿದಾದದ್ದೇ ಇರಲಿ ಆವಳ ಕೊಡದ ಮೇಲಿನ ಸುಳಿವು ಮನ ಸೆಳೆಯಲು ಸಮರ್ಥವಿರುತ್ತದೆ. ತುಂಬಿದ ಮೈಗೆ ದೃಷ್ಟಿ ತಾಗದಿರಲೆಂದು ಮೆರವಣಿಗೆ ಹೊರಟ ಬಸವಣ್ಣ ಹೊರಿಸಿಕೊಂಡ ಝೂಲದಮೇಲಿನ ಕುಸುರಿನ ಕಸೂತಿಯು ದೃಷ್ಟಿ ಹೊರಳಿಸ ಹಚ್ಚುತ್ತದೆ. ದುಡಿದು ದಣಿದು ಮನೆ ಸೇರಬಯಸಿದಾಗ ಪ್ರವೇಶದ್ವಾರಕ್ಕೆ ತನ್ನ ಕೆತ್ತನೆಯ ಕೆಲಸದಿಂದ ಬಡಿಗನು ಪ್ರಸನ್ನತೆ ಮೂಡಿಸುತ್ತಾನೆ. ಮಳೆರಾಯ ಕೃಪೆಮಾಡಿರಲಿ, ಮಾಡದಿರಲಿ ಸೀಗೀಹುಣ್ಣಿಮೆಯ ಊಟ ತೆಗೆದುಕೊಂಡು ಹೋಗುವ ಬುಟ್ಟಿಗಳ ಸಿಂಗಾರ ಶಿರಿವಂತಿಕೆಯು ವಿಲಾಸೀ ಶೃಂಗಾರವನ್ನೂ ನಾಚಿಸುತ್ತದೆ. ಹೆತ್ತವಳ ಒಡಲಾಸೆಯು ವ್ಯಕ್ತರೂಪವೆಂಬಂತೆ ದೇವಜಾಲಲೀಲೆಗಳನ್ನು ಬಣ್ಣಗಳಿಂದ ಮೂಡಿಸಿದ ತೊಟ್ಟಿಲವನ್ನು ತೂಗುವಮುಂದೆ ಮಾತೆಯು ಮನದಲ್ಲಿ ಮೂಡುವ ಚಿತ್ರ, ಜೀವನ ಕಲಾಚಿತ್ರವೇ ಅಲ್ಲವೇ ? ನಗರ ಜೀವನದ ಹೊರಮಿಂಚಿನ ಕೃತ್ರಿಮ ಕಲೆಯ ಅನುಕರಣೆಯ ಫಲವಾಗಿ ಕನ್ನಡ ಕೈಗಾರಿಕೆಯಲ್ಲಿನ ಕಲೆಯ ದರ್ಶನವು ಮಬ್ಬಾಗಿದ್ದರೂ, ಇಂದಿಗೂ ಹೇಗೋ ಉಳಿದಿರುವ ಕುರುಹುಗಳಲ್ಲಿನ ಕಲಾಸ್ಪರ್ಶವು, ಕನ್ನಡ ಜನಜೀವನಕ್ಕೆ ಅಮೃತಸ್ಪರ್ಶವಾಗಿ ಪರಿಣಮಿಸಬಹುದಾಗಿದೆ.

ನವನಾಗರಿಕತೆಯ ಕಹಿ ಫಲವೆಂಬಂತೆ ಕೈಗಾರಿಕೆಯಲ್ಲಿನ ಕಲೆಗೆ ಒಂದು ದೋಷ ಅಂಟಿಕೊಂಡಿದೆ. ಕಲಾತ್ಮಕವಾದ ಉಪಯುಕ್ತ ವಸ್ತುವಿಗಿದ್ದ ಸೌಂದರ್ಯದ ಸೊಬಗಿನ ಸ್ಥಳದಲ್ಲಿ, ವಿಲಾಸದವಾಸನೆ ಆವರಿಸುತ್ತಲಿದೆ. ಇದರಿಂದಾಗಿ ಜೀವನವೇ ವಿಲಾಸದ ಲಾಸ್ಯದಲ್ಲಿ ಲೋಲಾಡುತ್ತಿದೆ. ಆದಕ್ಕೆ ಕಲಾತ್ಮಕವಸ್ತುವಿನ ಸೊಬಗಿಗಿಂತಲೂ ತನ್ನ ಈ ಆಟವೇ ಸುಖದಾಯಕವೆನಿಸುತ್ತಿದೆ. ಆದರೆ ಇದು ಯಾವ ಗುರಿಗೆ ನಿಲುಕುವ ಮಾರ್ಗವೆಂಬುದನ್ನವಲೋಕಿಸಬೇಕು.

ಉಪಯುಕ್ತ ವಸ್ತುವು ಕಲಾತ್ಮಕವಾಗಿದ್ದ ಮಾತ್ರಕ್ಕೆ ಕೈಗಾರಿಕೆಯಲ್ಲಿನ ಕಲೆ ಎಂಬ ಮಾತಿನ ಉದ್ದೇಶ ಸಾಧಿಸಿದಂತಾಗಲಿಲ್ಲ. ಆ ವಸ್ತುವನ್ನು ಉಪಯೋಗಿಸುವವನು ಮನುಷ್ಯನೇ ಇದ್ದರೂ, ಅದನ್ನು ತಯಾರಿಸುವವನೂ ಮನುಷ್ಯನೇ ಎಂಬುದನ್ನು ಮರೆಯುವಂತಿಲ್ಲ. ಇಬ್ಬರು ಮನುಷ್ಯರ ನಡುವೆ ಇಂದು ಇನ್ನೊಬ್ಬನ ಪ್ರವೇಶವೂ ಆಗಿದೆ. ಅವನಿಗೆ ತನ್ನ ಲಾಭದ ಮುಂದೆ ಮನುಷ್ಯತ್ವವೂ ತೃಣ ಸಮಾನ. ಅವನ ಸ್ಥಾನವೋ ದಿನದಿನಕ್ಕೆ ಭದ್ರವಾಗುತ್ತಲಿದೆ. ಅವನಿಲ್ಲದಿದ್ದರೆ ಕಲಾವಂತನೂ ಹಾಗೂ ಅವನ ವಸ್ತುವನ್ನುಪಯೋಗಿಸುವವನೂ ಕೂಡಿಯೇ ತೊಂದರೆಯಲ್ಲಿ ಬೀಳುತ್ತಾರೆ. ಅಷ್ಟು ಅವನ ಅಗತ್ಯವು ಅನಿವಾರ್ಯವಾಗಿದೆ. ಇತ್ತೀಚೆಗಂತೂ ಈ ಮಾರ

ನೆಯುವನ ಜಾಲವು ವಿಶ್ವವ್ಯಾಪಿಯಾಗಿದೆ. ಅದನ್ನು ಅಲ್ಲಗಳೆಯುವದಕ್ಕಿಂತ ಅವನ ಸ್ಥಾನವನ್ನು ಮನ್ನಿಸಿಯೂ ಕೂಡ ಕೈಗಾರಿಕೆಯಲ್ಲಿನ ಕಲೆಯ ಉದ್ದೇಶವನ್ನು ಸಾಧಿಸುವದು ಸೂಕ್ತ ಮಾರ್ಗವಾಗಿದೆ.

ಮೊದಲು ಯಾವುದೊಂದು ಉಪಯುಕ್ತ ವಸ್ತುವು ವಿಶೇಷವಾಗಿ ಬಳಿಕೆಯಲ್ಲಿ ಬಂದು ತನ್ನ ಆವಶ್ಯಕತೆಯನ್ನು ಸಿದ್ಧಗೊಳಿಸಿದ ಮೇಲೆ ಅದಕ್ಕೆ ಕಲೆಯ ಮೆರಗು ಕೊಡಲಾಗುತ್ತಿತ್ತು. ಈಗ ಕಲೆಯ ಮೆರಗು ಕೊಡಲಾದ ವಸ್ತುವನ್ನೇ ಉಪಯೋಗಕ್ಕೆ ತೆಗುದುಕೊಳ್ಳುನಂತೆ ಮೋಹ ಜಾಲವನ್ನು ಹರವಲಾಗುತ್ತಿದೆ. ಇಂಥವಸ್ತುವಿನ ಮೋಹಕತೆಯೇ ಹೆಚ್ಚಾಗಿ, ಉಪಯುಕ್ತತೆಯು ಕ್ಷಣಿಕವಾಗುತ್ತಿದೆ. ಹೀಗಾಗಿ ಕೈಗಾರಿಕೆಗಾರಿಕೆಯಲ್ಲಿ ಕಲೆ ಅನ್ನುವ ಮಾತಿನ ನಿಜವಾದ ಉದ್ದೇಶವೇ ದೂರ ದೂರ ಉಳಿಯುತ್ತಲಿದೆ. ಅದಕ್ಕೆ ಕಸಬುದಾರನ ಹಾಗೂ ಅವನ ವಸ್ತುವನ್ನು ಕೊಳ್ಳುವವನ ನಡುವೆ ನಿಂತಿರುವ ಮಾರನೆಯುವನ ಕುತಂತ್ರವೇ ಹೆಚ್ಚು ಕಾರಣವಾಗಿರುತ್ತದೆ. ಅವನ ಕುತಂತ್ರದಿಂದ ಪಾರಾಗುವ ಮಾತು ಅನೇಕಸಲ ಮುಂದೆ ಬರುತ್ತದೆ. ಆದರೆ ಅವನ ಕುತಂತ್ರದಿಂದ ಪಾರಾಗುವದರೊಂದಿಗೆ ಇನ್ನೊಮ್ಮೆ ಅಂಥ ಸಂಕಟಕ್ಕೀಡಾಗದಂತೆ ಉಪಾಯವನ್ನು ಹುಡುಕುವದೂ ಅಗತ್ಯದ ಮಾತೇ ಆಗಿದೆ.

ಪ್ರಪಂಚದ ಅನೇಕ ಜನಾಂಗಗಳು ಇಂಥ ಪ್ರಸಂಗದಲ್ಲಿ ಯಾವ ಪ್ರತಿಕ್ರಿಯೆಯನ್ನು ವ್ಯಕ್ತಮಾಡಿವೆ ಅನ್ನುವ ಮಾತು ನಮ್ಮ ಮುಂದಿದೆ. ಜಪಾನದಲ್ಲಿ ಪ್ರತಿ ಮನೆಯೂ ಕೈಗಾರಿಕೆಯಲ್ಲಿನ ಕಲೆಯ ಕೇಂದ್ರಗಳಾಗಿವೆ. ಅಲ್ಲಿ ಭಾರತದಂತೆ ಕಲಾತ್ಮಕವಸ್ತುಗಳನ್ನು ಕೊಳ್ಳುವನೆಂದರೆ ಪ್ರೋತ್ಸಾಹನೆಯ ಒಂದೇ ದೃಷ್ಟಿಯಿರುವದಿಲ್ಲವೆಂದು ಹೇಳಲಾಗುತ್ತಿದೆ. ಮೊದಲು ಭಾರತದಲ್ಲಿಯೂ ಕಲೆಯು ಪ್ರತಿಯೊಬ್ಬರೂ ಮೈಗೂಡಿಸಿಕೊಳ್ಳುವ ವಿಷಯವಾಗಿತ್ತಲ್ಲದೆ, ಇಂದಿನಂತೆ ಕರುಣೆಗೆ, ಆಶ್ರಯಕ್ಕೆ ಪಾತ್ರವಾದ ವಿಷಯವಾಗಿರಲಿಲ್ಲವೆಂಬದನ್ನು ಹಿಂದಿನಜನ ಜೀವನವನ್ನಭ್ಯಸಿಸುವದರಿಂದ ಕಂಡುಕೊಳ್ಳಬಹುದಾಗಿದೆ. ಪ್ರತಿಯೊಬ್ಬ ಮಹಿಳೆಯು ಅರವತ್ನಾಲ್ಕು ವಿದ್ಯೆಗಳಲ್ಲಿ ಪಾರಂಗತಳಾಗುವಂತೆ ವ್ಯವಸ್ಥೆ ಇತ್ತು ಹಿಂದೆ. ಇಂದೋ ಕೇವಲ ಒಂದು ಸಾಹಿತ್ಯ ಕಲೆಯಲ್ಲಿ ತರಬೇತಿಯನ್ನು ಪಡೆದಾಕ್ಷಣ ಕಲಾತಜ್ಞತೆಯ ಪದವಿ (ಮಾಸ್ಟರ ಆಫ್ ಆರ್ಟ್ಸ) ಬಂದು ಬಿಡುತ್ತದೆ. ಇದಾಗಿ ಇನ್ನುಳಿದ ವಿದ್ಯೆಗಳು ವಿದ್ಯೆಗಳೇ ಅಲ್ಲವೆಂಬ ಭಾವನೆ ಬೆಳೆದು ಬರುವಂತಾಗಿದೆ. ಇದರ ಕಾರಣವನ್ನು ಅನೇಕ ಸಲ ಇಂದಿನ ಶಿಕ್ಷಣದಮೇಲೆ ಹಾಕಲಾಗುತ್ತಿದೆ. ಆದರೆ ಶಿಕ್ಷಣವು ಸ್ವತಃ ಏನನ್ನೂ ಮಾಡಲು ಸಮರ್ಥವಿರುವದಿಲ್ಲ. ಅದು ಇದ್ದುದನ್ನು ಇದ್ದಂತೆ ಉಳಿಸುವ ಕಾರ್ಯವನ್ನು ಮಾತ್ರ ಮಾಡಬಲ್ಲುದು. ಎಂಬ ಮಾತನ್ನು ಮರೆಯಲಾಗುತ್ತದೆ. ನಮ್ಮ ಸಮಾಜರಚನೆಯಲ್ಲಿ ದುರ್ಘಟನೆ ನಡೆದಾಗ ಮಹಿಳೆಯನ್ನು ಆಶ್ರಿತ ಸ್ಥಿತಿಯಲ್ಲಿಡುವ ಪ್ರಸಂಗ ಬಂತು. ಮುಂದೆ ಅದೇ ರೂಢಿಯಾಗಿ ಮಹಿಳೆಯೆಂದರೆ ಆಶ್ರಯದಲ್ಲಿರುವ ಒಂದು ವಸ್ತುವೆಂದು ತಿಳಿಯಲಾಯಿತು. ಮಹಿಳೆಯ

ಆಶ್ರಿತ ಸ್ಥಿತಿಯಲ್ಲಿ ಉಳಿದಮೇಲೆ ಅವಳು ವೈಗೂಡಿಸಿಕೊಂಡ ಕೈಗಾರಿಕೆಯಲ್ಲಿನ ಕಲೆಯೂ ಆಶ್ರಯವನ್ನೇ ಹುಡುಕಬೇಕಾಯಿತು ಒಮ್ಮೆ ಆಶ್ರಯದಲ್ಲುಳಿದಮೇಲೆ ಆದರೊಂದಿಗೆ ಬರುವ ಎಲ್ಲ ಗುಣ ದೋಷಗಳೂ ಬೆನ್ನ ಹಿಂದೆಯೇ ಬರುವದು ಸ್ವಾಭಾವಿಕ. ಈ ಕ್ರಮದಿಂದಾಗಿ ಕೈಗಾರಿಕೆಯಲ್ಲಿನ ಕಲೆಯ ಕೃತ್ರಿಮ ಸ್ವರೂಪವು ಭಾರತದಲ್ಲಿ ಹಾಗೇ ಉಳಿದು ಬೆಳೆದು ಬಂದಿದೆ.

ಸಾಮಾನ್ಯವಾಗಿ ಯಾವುದೊಂದು ವಿಷಯವನ್ನು ಕುರಿತು ಬರೆಯುವಾಗ ಆಯಾ ವಿಷಯದ ತಾತ್ವಿಕ ಹಿನ್ನೆಲೆಯಲ್ಲಿ ತಾತ್ವಿಕ ಅಂದರೆ ವ್ಯವಹಾರವನ್ನು ಬಿಟ್ಟು ಚರ್ಚೆಮಾಡುವದು ರೂಢಿ. ಇಲ್ಲಿ ಹಾಗೆ ಮಾಡದೇ ಕೈಗಾರಿಕೆಯಲ್ಲಿನ ಕಲೆಯ ತತ್ವವನ್ನು ಇಂದಿನ ವ್ಯವಹಾರಕ್ಕೆ ಹೇಗೆ ಹೊಂದಿಸಬೇಕೆನ್ನುವ ಪ್ರತಿಪಾದನೆಯೊಂದಿಗೆ ಆದರ ಸಾಧ್ಯಾಸಾಧ್ಯತೆಯನ್ನೂ ಸೂಚ್ಯವಾಗಿ ಹೇಳಲಾಗಿದೆ. ಇನ್ನು ಅದರ ಪ್ರಾತ್ಯಕ್ಷಿಕೆಯ ವಿಚಾರ. ಅದು ಈ ಚಿಕ್ಕ ಲೇಖನದ ಕ್ಷೇತ್ರಕ್ಕೆ ಮಿಕ್ಕಿದ ಮಾತು.



# ಸ್ತ್ರೀಜಾತಕ

ಲೇಖಾಂಕ– ೧

**ಲೇಖಕ:— ಪಂಡಿತ ಕೇಶವ ಶರ್ಮಾ ಗಲಗಲಿ.**



ಇತ್ತಲಾಗಿ ಸ್ತ್ರೀಯರಲ್ಲಿಯೂ ಶಿಕ್ಷಣಪ್ರಚಾರವು ಹೆಚ್ಚಾಗಿ ಆಗಹತ್ತಿರುವದು. ಗೃಹಿಣಿಯರೂ ತಮ್ಮ ಕರ್ತವ್ಯವನ್ನು ಅರಿತು ನಡೆದರೆ ' ನೂನಂ ಕಾರ್ತಸ್ವರೇ ಕಲ್ಯಾಣೇ ಗಂಧಃ ' ಜಾತಕಶಾಸ್ತ್ರವು ಮಾನವನು ತನ್ನ ಯೋಗ್ಯತೆಯನ್ನು ತಾನರಿತುಕೊಂಡು ನಡೆಯಲು ವಿಘ್ನಗಳನ್ನು ಚೆದರಿಸಿ ಪ್ರಗತಿಯ ಸಾಧಿಸಲು ಬಲವತ್ತರ ಸಹಾಯಕವಾದ ಶಾಸ್ತ್ರವಾಗಿದೆ. ಸ್ತ್ರೀಯರೂ ಈ ಶಾಸ್ತ್ರವನ್ನು ಅಭ್ಯಾಸ ಮಾಡಿ ತಮ್ಮ ಜಾತಕದ ಬಲಾಬಲವನ್ನು ಅರಿತು ಪಡೆಯಬೇಕು. ಅದರ ಮಾರ್ಗದರ್ಶನಕ್ಕಾಗಿ ಸ್ತ್ರೀ ಜಾತಕದ ಬಗ್ಗೆ ಕೆಲವು ಲೇಖನಗಳನ್ನು ಇಲ್ಲಿ ಕೊಡಲಾಗಿದೆ.

ಮಾನವನು ಹುಟ್ಟಿದಾಗ ಪೂರ್ವಕ್ಷಿತಿಜದಲ್ಲಿ ಯಾವರಾಶಿ ಉದಿತವಾಗುವದೋ ಅದಕ್ಕೆ ಲಗ್ನವೆನ್ನುವರು. ಲಗ್ನದಿಂದ ಕ್ರಾಂತಿವೃತ್ತದಲ್ಲಿ ೧೨ ಭಾಗಮಾಡಿ ೧೨ ಭಾವ ಸಾಧನೆಯನ್ನು ಮಾಡುವರು. ಲಗ್ನದಲ್ಲಿ ರಾಶಿದರ್ಶಕ ಅಂಕವನ್ನು ಬರೆಯುವರು. ಕ್ರಮದಿಂದ ಮುಂದಿನ ಅಂಕೆಗಳು ಆ ಭಾವದಲ್ಲಿ ಬಿದ್ದ ರಾಶಿಗಳೆಂದು

ತಿಳಿಯಬೇಕು. ಹುಟ್ಟಿದಾಗ ಗ್ರಹಸ್ಥಿತಿಯನ್ನು ತೋರಿಸುವ ಆಕಾಶದನಕಾಶಕ್ಕೆ ಕುಂಡಲಿಯೆನ್ನುವರು. ನೀವು ಹುಟ್ಟಿದಾಗ ಯಾವಗ್ರಹವು ಯಾವ ಭಾಗದಲ್ಲಿರುವ ದೆಂಬದನ್ನು ತೋರಿಸುವ ಚಿತ್ರವೇ ಕುಂಡಲಿಯು.

ಲಗ್ನವೆಂದರೆ ಪೂರ್ವಕ್ಷಿತಿಜಕ್ಕೆ ಹತ್ತಿದ ರಾಶಿಯ ಭಾಗ. ಅಸ್ತವೆಂದರೆ ಪಶ್ಚಿಮಕ್ಷಿತಿಜದಲ್ಲಿ ಆ ವೇಳೆಯಲ್ಲಿ ಕಾಣುವರಾಶಿ ದಶಮವೆಂದರೆ ನೆತ್ತಿಯ ಮೇಲಿನ ಭಾಗ ಪಾತಾಳವೆಂದರೆ ಅಧಃಸ್ವಸ್ತಿಕ ಕಾಲಕೆಳಗಿನ ಭಾಗ. ಲಗ್ನದಿಂದ ಪಾತಾಳದ ವರೆಗ ೩ ಭಾಗಗಳನ್ನು ಮಾಡಿ ಪ್ರಥಮ ದ್ವಿತೀಯ ತೃತೀಯ ಭಾವಗಳನ್ನು ಸಾಧಿಸು ವರು. ಇದರಂತೆ ಉಳಿದಭಾಗಗಳು. ಅಂತೂ ಕುಂಡಲಿಯಲ್ಲಿ ೧೨ ಮನೆಗಳಿರುವವು. ಇವು ಮಾನವನ ಆಯುಷ್ಯದ ೧೨ ಖಾತೆಗಳು ಅಲ್ಲಿರುವ ಗ್ರಹಗಳು ಅವುಗಳ ಭವಿತ ವ್ಯವನ್ನು ಸೂಚಿಸುವವು.

ಕುಂಡಲಿ




ಇವು ಮನೆಯನ್ನು ಸೂಚಿಸುವ ಅಂಕಿಗಳು.

೧೨ ಮನೆಗಳಿಂದ ೧೨ ಸಂಗತಿಗಳನ್ನು ವಿಚಾರಿಸುವದು. ಸ್ತ್ರೀಯರ ಕುಂಡಲಿ ಯಲ್ಲಿ ೧-೫-೭-೯ ಮನೆಗಳ ವಿಚಾರವು ಮುಖ್ಯವೆಂದು ಹೇಳುವರು. ಉಳಿದ ಮನೆಗಳ ವಿಚಾರವನ್ನು ಮಾಡಬೇಕು. ಆದರೆ ಇವುಗಳ ವಿಚಾರ ಮುಖ್ಯ. ೧ ನೇ ಮನೆಯಿಂದ ದೇಹಬಲ ತಿಳಿಯುವದು. ೫ ನೇ ಮನೆ ಪುತ್ರಸ್ಥಾನ. ೭ ನೇ ಮನೆ ಪತಿಸ್ಥಾನ. ೯ ನೇ ಮನೆ ಭಾಗ್ಯ. ೧೨ ಮನೆಗಳಿಗೆ ಭಾವ ಭವನ ಮಂದಿರ ಇವು ಪರ್ಯಾಯ ಶಬ್ದಗಳು. ಭಾವ ಭವನಗಳಲ್ಲಿ ಸೂಕ್ಷ್ಮ ಭೇದವಿದೆ. ಆ ವಿಚಾರ ಈಗ ಬೇಡ. ಅಂತೂ ೧೨ ಮನೆಗಳಿಂದ ವಿಚಾರಿಸಬಹುದಾದ ಸಂಗತಿಗಳನ್ನು ಕೆಳಗೆ ಕೊಟ್ಟಿರುವೆವು.

೧ ನೇ ಮನೆ (ಲಗ್ನ):—ಈ ಭವನದಿಂದ ದೇಹಬಲ. ಸ್ವರೂಪ (ಚರ್ಯೆ) ಮೊದಲಾದವುಗಳನ್ನು ವಿಚಾರಿಸುವರು.

೨ ನೇ ಮನೆಯಿಂದ ಧನವನ್ನು ವಿಚಾರಿಸಿರುವರು. ಕುಟುಂಬಸ್ಥಿತಿ ಬಲಗಣ್ಣು.

೩ ನೇ ಮನೆಯಿಂದ ಅಣ್ಣತಮ್ಮಂದಿರು ಅಕ್ಕತಂಗಿಯರು ಸಣ್ಣ ಪ್ರವಾಸಗಳು ಸ್ವಾವಲಂಬನ.

೪ ನೇ ಮನೆಯಿಂದ ತಾಯಿ, ಗೃಹ, ಭೂಮಿ, ವಾಹನ ಮತ್ತು ಸುಖ.

೫ ನೇ ಮನೆಯಿಂದ ಬುದ್ಧಿ, ಶಿಕ್ಷಣ ಮತ್ತು ಸಂತಾನ.

೬ ನೇ ಮನೆ ರೋಗ ಶತ್ರುಗಳು ಮಾತೆಯ ಬಂಧುಗಳು ಸೋದರಮಾವ ಅಬಚಿ ಮೊದಲಾದವರು ಮತ್ತು ಸೇವಾಕರ್ಮ.

೭ ನೇ ಮನೆಯಿಂದ ಹೆಂಡತಿ ಅಥವಾ ಗಂಡ, ಪಾಲುಗಾರ, ಮಧ್ಯಮ ಪ್ರವಾಸಗಳು ಮತ್ತು ವ್ಯಾಪಾರ.

೮ ನೇ ಮನೆಯಿಂದ ಮೃತ್ಯು, ಮೃತ್ಯುಪತ್ರದ್ವಾರಾಧನಪ್ರಾಪ್ತಿ ಅಪಘಾತ ಹಾನಿ ಜಿದ್ದು ಮತ್ತು ಲಾಟರಿ.

೯ ನೇ ನವಮಭಾವ ಭಾಗ್ಯ ಭರನವೆಂದು ಕರೆಯುವರು. ದೈವ, ತಂದೆಯ ಆಸ್ತಿ ದೂರ ಪ್ರವಾಸ, ಜಲಪ್ರವಾಸ ಮತ್ತು ಧರ್ಮ.

೧೦ ನೇ ಮನೆಗೆ ರಾಜ್ಯಭರನವೆಂದು ಕರೆಯುವರು. ಇದರಿಂದ ಉದ್ಯೋಗ, ಮಾನ ಸನ್ಮಾನ ಮತ್ತು ಜಾತಕನ ದರ್ಜೆ ಮುಂತಾದವುಗಳು ತಿಳಿಯುವವು.

೧೧ ನೇ ಭಾವ ಉತ್ಪನ್ನ ಗಳಿಕೆ ಲಾಭ ಮಿತ್ರರು.

೧೨ ನೇ ಭಾವ ವ್ಯಯಸ್ಥಾನ, ಹಾನಿ, ಖರ್ಚು, ಸೆರೆಮನೆ ಬಂಧನ ಎಡಗಣ್ಣು ಕಣ್ಣ ಕಕ್ಕಿ ಮೊದಲಾದ ವಿಚಾರ ಮತ್ತು ಇದು ಬಿಡುಗಡೆಯಸ್ಥಾನ. ಇಲ್ಲಿ ಗುರು ಇದ್ದರೆ ಮೋಕ್ಷಕೊಡುವನು. ಒಂದು ಮನೆಯಿಂದ ೩-೪ ಸಂಗತಿಗಳನ್ನು ವಿಚಾರಿಸಿದರೂ ಒಂದೇ ಸಂಗತಿಯನ್ನು ವಿಚಾರಿಸುವಾಗ ಕಾರಕಗ್ರಹಗಳಿಂದ ಉಪಸಂಹಾರಕ್ಕೆ ಬರುವದು. ಉದಾ:— ಚಂದ್ರ ಮಾತೃಕಾರಕ ರವಿ ಪಿತೃಕಾರಕ ಲಗ್ನದಲ್ಲಿ ವಿದಿತವಾದ ರಾಶಿ. ಲಗ್ನದಲ್ಲಿರುವ ಗ್ರಹ ಲಗ್ನಾಧಿಪತಿ. ಲಗ್ನದಮೇಲೆ ದೃಷ್ಟಿಯಿಟ್ಟಿರುವ ಗ್ರಹಗಳಿಂದ ಜಾತಿಯ ದೇಹ ಸ್ಥಿತಿಯನ್ನು ಗುಣಧರ್ಮಗಳನ್ನೂ ಊಹಿಸುವದು. ಉದಾಹರಣಕ್ಕಾಗಿ:—ವೃಷಭ ಲಗ್ನದಲ್ಲಿ ಶುಕ್ರನಿರುವಾಗ ಹುಟ್ಟಿದ ಸ್ತ್ರೀಯರು ಸೌಂದರ್ಯವಂತರೂ ಕಲಾಪ್ರೇಮಿಗಳೂ ಇರುವರು. ಗ್ರಹಗಳು ಅನುಕೂಲ ರಾಶಿಯಲ್ಲಿ ಶುಭ ಫಲವನ್ನು ಕೊಡುವವು. ಪ್ರತಿಕೂಲ ರಾಶಿಯಲ್ಲಿ ಅಶುಭ ಫಲವನ್ನು ಕೊಡುವವು. ಅನುಕೂಲ ರಾಶಿ ಪ್ರತಿಕೂಲ ರಾಶಿಗಳು ಕೆಳಗೆ ಬರೆದಂತೆ:—

| | ಸ್ವಕ್ಷೇತ್ರ | ಮಿತ್ರ | ಉಚ್ಚ |
|---|---|---|---|
| ರವಿ | ಸಿಂಹ | ಧನು | ಮೇಷ |
| ಚಂದ್ರ | ಕರ್ಕ | ಮೀನ | ವೃಷಭ |
| ಮಂಗಳ | ವೃಶ್ಚಿಕ, ಮೇಷ | ಧನು | ಮಕರ |
| ಬುಧ | ಮಿಥುನ | ವೃಷಭ, ತುಲಾ | ಕನ್ಯಾ |
| ಗುರು | ಧನು, ಮೀನ | ಮೇಷ | ಕರ್ಕ |
| ಶುಕ್ರ | ತುಲಾ, ವೃಷಭ | ಮಿಥುನ | ಮೀನ |
| ಶನಿ | ಕುಂಭ, ಮಕರ | ಮಿಥುನ, ವೃಷಭ | ತುಲಾ |

ಉಚ್ಚ ರಾಶಿಯಿಂದ ೭ನೇ ರಾಶಿ ನೀಚ, ಸ್ವಕ್ಷೇತ್ರದಿಂದ ೭ನೇ ರಾಶಿ ಬಲಹೀನ. ಉಚ್ಚರಾಶಿಯಲ್ಲಿ ಗ್ರಹಗಳು ೧ ರೂ ಶುಭ ಫಲವನ್ನು ಕೊಡುವವು. ಸ್ವಕ್ಷೇತ್ರದಲ್ಲಿ ೮ ಆಣೆ. ಮಿತ್ರಕ್ಷೇತ್ರದಲ್ಲಿ ೪ ಆಣೆ. ಶತ್ರುಕ್ಷೇತ್ರದಲ್ಲಿ ೨ ಆಣೆ ನೀಚರಾಶಿಯಲ್ಲಿ ಶೂನ್ಯ.



# ಕಲಾ ಪ್ರಗತಿ

ಲೇ:— ಶ್ರೀಮತಿ ತಾರಾ ಪವಾರ.

ಕಲಾಮಂದಿರ ಧಾರವಾಡ.



ಭಾರತದಲ್ಲಿ ಕಲೆಯು ಎಂದಿನಿಂದಲೂ ಮೆರೆಯುತ್ತಿದೆ. ನಮ್ಮ ನಾಡು ಲಲಿತ ಕಲೆಗಳ ಬೀಡು. ಲಲಿತಕಲೆಗಳಲ್ಲಿ ಚಿತ್ರಕಲೆಗೂ ಒಂದು ಮಹತ್ವದ ಸ್ಥಾನವು ಹಿಂದಿನ ಕಾಲದ ರಾಜ ಮಹಾರಾಜರುಗಳಿಂದ ದೊರೆತಿದೆ. ಆ ಚಿತ್ರ ಕಲೆಯ ಸಾಕ್ಷಿಗಳು ಮತ್ತು ದೃಷ್ಟಾಂತಗಳು ನಮಗೆ ಇನ್ನೂ ದೊರಕುತ್ತಿವೆ. ಚಿತ್ರ ಕಾರರಿಗೆ ಯಾವಾಗಲೂ ಎಲ್ಲಕಡೆಯಲ್ಲಿ ಮನ್ನಣೆ ದೊರತೇ ದೊರೆತಿದೆ.

ರಾಜ ಮಹಾರಾಜರ ಆಸ್ಥಾನದಲ್ಲಿ ಚಿತ್ರಕೋವಿದನಿಗೆ ಒಂದು ಸ್ಥಳ ಮೀಸಲು. ಆದರ ಫಲವಾಗಿ ಕಲಾವಿದನ ಕೈ ಚಳಕದಿಂದ, ರಾಜಾಶ್ರಯದ ಕೃಪಾ ಛತ್ರದಿಂದ, ಬಾದಾಮಿ, ಪಟ್ಟದಕಲ್ಲು, ಐಹೊಳ್ಳಿ, ಮತ್ತು ಹಳೇಬೀಡು ಬೇಲೂರ ಮೊದಲಾದ ಮುಖ್ಯ ಮುಖ್ಯ ಸ್ಥಳಗಳಲ್ಲಿ ಕಲಾದೇವಿಯ ಮುಕುಟವು ಶೋಭಿಸ ತೊಡಗಿತು. ಇನ್ನೂ ಶೋಭಿಸುತ್ತಲಿದೆ. ಈ ಸ್ಥಳಗಳಲ್ಲಿ ಕಲ್ಲಿನಲ್ಲಿ ಕೊರೆದ ಮೂರ್ತಿ ಗಳನ್ನು ನೋಡಿದರೆ ಇಂದಿಗೂ ಅಚ್ಚಳಿಯದೆ ಜೀವಕಳೆಯಿಂದ ತುಂಬಿವೆಯೋ ಎಂಬಂತೆ ಸುಂದರವಾಗಿ ಕಂಗೊಳಿಸುತ್ತವೆ. ಕಲಾವಿದನು ದೊಡ್ಡ ದೊಡ್ಡ ಬಂಡೆ ಗಲ್ಲುಗಳನ್ನು ಮೇಣದಂತೆ ಭಾವಿಸಿ ಕೆತ್ತಿದಂತೆ ಮೂರ್ತಿಗಳ್ಳನ್ನು ನಯವಾಗಿ ನಿರ್ಮಿಸಿ ದ್ದಾನೆ. ಆದ್ದರಿಂದಲೇ ಬಾದಾಮಿಯ ಗವಿಗೆ " ಮೇಣಬಸ್ತಿ " ಯೆಂಬ ಹೆಸರು ಒಪ್ಪುತ್ತಿದೆ. ಜಕ್ಕಣಾಚಾರ್ಯರ ಕಲಾಕೃತಿಗಳು ಇನ್ನೂ ಎಷ್ಟು ಉನ್ನತಮಟ್ಟದಲ್ಲಿವೆ ಎಂಬುದು ಎಲ್ಲರಿಗೂ ಗೊತ್ತಿದ್ದ ಮಾತು. ಅವರು ನಿರ್ಮಿಸಿದ ಗೋಪುರ, ಅಲ್ಲಿಯ ಸಾವಿರಾರು ಕೃತಿಗಳು ವಿಜಯ ವಿಠ್ಠಲ ಗುಡಿ ಮುಂತಾದವುಗಳು ಕಲಾವಿದನ ಚಾತುರ್ಯದಿಂದ ಹೊಳೆಯುತ್ತಲಿವೆ. ಚಾಲುಕ್ಯರ ಪುಲಿಕೇಶಿಯೂ ಕಲೆಗೆ ವಿಶೇಷ ಮಹತ್ವವನ್ನು ಕೊಟ್ಟಿದ್ದನೆಂಬುದನ್ನು ಅಜಂತೆಯ ಗವಿಯೊಳಗಿನ ಚಿತ್ರಗಳಿಂದ ತಿಳಿದು ಬರುತ್ತದೆ. ಅಲ್ಲಿಯ ಸ್ವದೇಶಿ ಬಣ್ಣದ ಚಿತ್ರಗಳು ಈಗಲೂ ಹೊಸತಾಗಿ ಕೊಟ್ಟಂತೆ ತೋರುತ್ತಿವೆ. ಈಗ ನಮಗೆ ಪರದೇಶದಿಂದ ಹೊಸ ಹೊಸ ಶೋಧ ಗಳಿಂದ ಶ್ರೇಷ್ಠತರದ ಬಣ್ಣಗಳು ದೊರಕುತ್ತಿವೆ. ಆಗಿನ ಜನರು ತಯಾರಿಸಿದ ಬಣ್ಣವು ಇಂದಿನ ಬಣ್ಣದ ನೂರು ಪಟ್ಟು ಮಿಗಿಲಾಗಿದೆ.

ಇಮಾರತುಗಳನ್ನು ನೋಡ ಹೊರಟರೆ ತೀರಿತು. ತಾಜಮಹಲು ವಿಶ್ವಕ್ಕೇ ಅಧಿಕವಾಗಿದೆ. ಮಮತಾಜಳ ಪ್ರೇಮದಂತೆ ಕಲಾಪ್ರೇಮವೂ " ಶಹಾಜಾನ "

ನಿಂದ ಪ್ರದರ್ಶಿತವಾಗಿದೆ. ಅದರಂತೆ ದಿಲ್ಲಿ ಮೈಸೂರಲ್ಲಿ ಕೆಲವು ಕುರುಹುಗಳನ್ನು ಕಾಣಬಹುದು. ವಿಜಾಪುರದ ಗೋಲಗುಮ್ಮಟ, ಇಬ್ರಾಹಿಮ್ ರೋಜಾ ಮುಂತಾದ ಕೃತಿಗಳು ಇನ್ನೂ ನಮಗೆ ಹಿಂದಿನ ವೈಭವವನ್ನು ಸಾರಿಹೇಳುತ್ತಿವೆ ಇವೆಲ್ಲವುಗಳನ್ನು ಪರಿಶೀಲಿಸಿದರೆ ಆ ಕಾಲಕ್ಕೆ ಭಾರತದಲ್ಲಿ ಕಲೆಯ ಖ್ಯಾತಿ ಎಷ್ಟಿತ್ತೆಂಬುದನ್ನು ಅಳೆಯಬಹುದು. ಆದರೆ ಈಗ ನಮ್ಮ ಭಾರತೀಯರು ಅಷ್ಟೊಂದು ಸವಲತ್ತು ಕೊಡುವದಿಲ್ಲ. ಕಲಾದೇವಿಯ ಮಕ್ಕಳು ಸಾಮಾನ್ಯವಾಗಿ ಬಡವರೇ. ಆಗಿನ ಕಾಲದಲ್ಲಿ ಬಡಜನರಿದ್ದಿಲ್ಲವೆಂತಲ್ಲ. ಎಲ್ಲರೂ ಪ್ರೇಮ ಸೌಹಾರ್ದ್ಯತನದಿಂದ ಇರುತ್ತಿದ್ದರು. ಭಾರತವು ಅನ್ನ, ಚಿನ್ನ, ದೃಷ್ಟಿಯಿಂದ ಉತ್ತಮವಾಗಿತ್ತು ಅಂತೆಯೇ ಭಾರತವು ಸುವರ್ಣಭೂಮಿಯೆನ್ನಿಸಿದೆ. ಈಗಲಾದರೂ ಕಲೆಗೆ ಮಹತ್ವವಿಲ್ಲವೆಂತಲ್ಲ ಆದರೆ ಬೇರೆ ಶಿಕ್ಷಣವನ್ನು ನೋಡಿದರೆ ಈ ಶಿಕ್ಷಣವು ಅತಿ ಕಡಿಮೆ. ಶಾಲೆ ಕಾಲೇಜುಗಳ ಸಂಖ್ಯೆ ಬಹಳವಾಗಿದೆ. ಆದರೆ ಕಲಾಶಾಲೆಗಳ ಸಂಖ್ಯೆಯನ್ನು ನೋಡಿದರೆ, ಬೆರಳಿನಿಂದ ಎಣಿಸುವಷ್ಟಿದೆ. ಮುಂಬಯಿಯಲ್ಲಿ ಸರ್. ಜೆ. ಜೆ. ಸ್ಕೂಲ ಆಫ್ ಆರ್ಟ, ಕವಿ ರವೀಂದ್ರರ " ವಿಶ್ವಭಾರತಿ " ಯ ಅಂಗವಾಗಿ ಕಲಾಶಾಲೆಯು ಶಾಂತಿನಿಕೇತನದಲ್ಲಿದೆ. ಮತ್ತೆ ಎಲ್ಲಿಯೊ ಒಂದೊಂದು ಇವೆ. ಈಗ ಕರ್ನಾಟಕದಲ್ಲಿ ಶ್ರೀಮಾನ ಹಾಲಭಾವಿಯವರ ಕಲಾಶಾಲೆಯು " ಕಲಾಮಂದಿರ " ವೆಂಬ ಹೆಸರಿನಿಂದ ಪ್ರಾರಂಭವಾಗಿದೆ. ಇದೊಂದು ಶ್ರೀ ಹಾಲಭಾವಿಯವರ ಸಾಹಸವೆಂದೇ ಹೇಳಬಹುದು. ಇಂದಿಗೆ ಹದಿನೆಂಟು ವರ್ಷಗಳ ಪೂರ್ವದಲ್ಲಿ ಕರ್ನಾಟಕದ ಜನತೆಗೆ ಲಲಿತಕಲೆ, ಚಿತ್ರಕಲೆ ಏನೆಂಬದನ್ನು ತೋರಿಸಲು ಕಲಾಮಂದಿರವನ್ನು ಸುರುವು ಮಾಡಿದರು. ಎಷ್ಟೋ ಅಡೆತಡೆಗಳು ಬಂದರೂ ಅದನ್ನು ಎದುರಿಸಿ " ಕಲಾದೇವಿ " ಯ ಭಾವುಟವನ್ನು ಕರ್ನಾಟಕದಲ್ಲಿ ಸ್ಥಿರವಾಗಿ ನಿಲ್ಲಿಸಿದ್ದಾರೆ. ವರುಷ ವರುಷವು ಪ್ರದರ್ಶನವನ್ನು ನೆರವೇರಿಸಿದ ಫಲವಾಗಿ ಜನತೆಯ ಕಲಾಪ್ರೇಮವು ಸ್ವಲ್ಪವಾದರೂ ಜಾಗ್ರತವಾಗಿದೆಯೆನ್ನಲು ಅಡ್ಡಿಯಿಲ್ಲ. ಮೊದಲು ಪ್ರದರ್ಶನಗಳು ನೆರವೇರುತ್ತಿದ್ದಿಲ್ಲ. ಈಗ ಧಾರವಾಡಧಲ್ಲಿ ಪ್ರತಿಯೊಂದು ಚಟುವಟಿಕೆಗಳಲ್ಲಿ ಕಲಾಪ್ರದರ್ಶನವು ಒಂದು ಅಂಗವಾಗಿದೆ. ಶ್ರೀಮಾನ ಹಾಲಭಾವಿಯವರ ಪರಿಶ್ರಮದಿಂದ ಕಲಾಮಂದಿರವು ಸರಕಾರದಿಂದ ಮಾನ್ಯತೆ ಪಡೆಯಿತು. ಮತ್ತು ಬಡಜನರು ಕಲಿಯಲು, ಮತ್ತು ಪರೀಕ್ಷೆಯು ಸಲುವಾಗಿ ಮುಂಬಯಿಗೆ ಹೋಗಬೇಕಾಗುತ್ತಿತ್ತು. ಇಲ್ಲಿಯೇ ಡ್ರಾಯಿಂಗ ಪೇಂಟಿಂಗ ಪರೀಕ್ಷೆಯ ಕೇಂದ್ರವನ್ನು ಹೋದ ವರ್ಷ ೫೨ ನೇ ಇಸ್ವಿಯಲ್ಲಿ ಸುರುವು ಮಾಡಿ ಆ ಅನಾನುಕೂಲತೆಯನ್ನು ಹೋಗಲಾಡಿಸಿದ್ದಾರೆ. ಡ್ರಾಯಿಂಗ ಶಿಕ್ಷಕರಾಗ ಬಯಸುವವರು ಒಂದು ವರ್ಷ ಟ್ರೇನಿಂಗ ತಕ್ಕೊಳ್ಳಲು ಮುಂಬಯಿಯಲ್ಲಿಯೇ ಇರಬೇಕಾಗುತ್ತಿತ್ತು. ಅದನ್ನೂ ಸಹಿತ ಧಾರವಾಡ " ಕಲಾಮಂದಿರ " ದಲ್ಲಿ ಸುರುವು ಮಾಡಿದ್ದಾರೆ. ಇದು ಶ್ರೀಮಾನ ಹಾಲಭಾವಿಯವರ ಸತತ ಪ್ರಯತ್ನದಿಂದ ಫಲಿಸಿತು. ಇವರ ಪ್ರಯತ್ನಕ್ಕಿಂತಲೂ ಇವರ ತಂದೆಯವರಾದ ವಯೋವೃದ್ಧ ಜ್ಞಾನವೃದ್ಧ ಶ್ರೀಮಾನ್ ವ್ಹಿ. ಬಿ. ಹಾಲಭಾವಿಯವರ ಪ್ರೋತ್ಸಾಹನವೇ ಇದಕ್ಕೆ ಕಾರಣ.

ಇವರು ಸಾಹಿತ್ಯ ಮತ್ತು ಕಲಾ ಪ್ರೇಮಿಗಳು. ಇವರಿಗೆ ಮೊನ್ನೆ ತಾ- ೯-೧೧-೫೨ ದಿವಸ ಬೆಂಗಳೂರಿನ ಸಾಹಿತ್ಯ ಪರಿಷತ್ತಿನವರು, ಇವರು ಮಾಡಿದ ಸಾಹಿತ್ಯ ಸೇವೆಗೆ ಶಾಲು ಮತ್ತು ಗಂಧದ ಪೆಟ್ಟಿಗೆ ಫಲತಾಂಬೂಲಗಳಿಂದೊಡಗೂಡಿ ಸನ್ಮಾನಮಾಡಿದರು. ಇಂಥವರ ಪ್ರೋತ್ಸಾಹನದಿಂದ ಕಲಾಶಾಲೆಯೂ ಕಲೆಯೂ ಕರ್ನಾಟಕದಲ್ಲಿ ಶೋಭಿಸುತ್ತಲಿದೆ. ದೇವರು ಇವರೆಲ್ಲರಿಗೂ ಆಯುರಾರೋಗ್ಯ ದಯಪಾಲಿಸಿ ಕಲಾದೇವಿಯನ್ನು ಅಜರಾಮರವಾಗಿಡಲೆಂದು ಆಶಿಸುವೆ.



## ಸುದ್ದಿ-ಸಮಾಚಾರ

### (೧) ಸೈಕಲ್ ಮೇಲೆ ಜಗತ್ತನ್ನು ಸುತ್ತಿದ ಮಹಿಳೆ.

ನ್ಯೂಝೀಲಂಡದ ಮಿಸ್ "ಲ್ಯೂಸಿ ಸದರ್ಲಂಡ" ಎಂಬ ಯುವತಿಯು ಸೈಕಲ್ ಮೇಲೆ ಜಗತ್ತಿನ ಪ್ರವಾಸ ಕೈಕೊಂಡಿದ್ದು ಇದೀಗ ಮುಂಬಯಿಗೆ ಬಂದಿದ್ದಾಳೆ. ಮುಂಬಯಿಯ ಹಿಂದೀಯರಿತ್ತ ಸ್ವಾಗತದಿಂದ ಅವಳಿಗೆ ತುಂಬ ಸಂತೋಷವಾಯಿತು. ಅವಳ ಮನೋ ಧೈರ್ಯ ಎಲ್ಲಕ್ಕೂ ಹಿರಿದು. ಹೊರಡುವಾಗ ಅವಳು ವಿಶೇಷ ಧನವನ್ನಾಗಲಿ, ವಸ್ತುಗಳನ್ನಾಗಲಿ ತೆಗೆದುಕೊಂಡಿಲ್ಲವಂತೆ. ಅವಳ ಸೈಕಲ್ಲಿನ ಹಿಂಬದಿಗೆ ಒಂದು ಪೆಟ್ಟಿಗೆ ಮಾತ್ರ ಇದೆ. ಈಗ ಅವಳು ಆಸ್ಟ್ರೇಲಿಯಾ, ಇಂಗ್ಲಂಡ, ಸ್ಕಾಟಲಂಡ, ಫ್ರಾನ್ಸ, ಸ್ವಿಟ್ಝರ್ಲಂಡ್ಸ, ಜರ್ಮನಿ, ಯುಗೋಸ್ಲೇವಿಯಾ ಗ್ರೀಸ, ತುರ್ಕಸ್ತಾನ, ಇರಾಣ, ಇರಾಕಗಳನ್ನು ಸುತ್ತಿ ಭಾರತಕ್ಕೆ ಬಂದಿದ್ದಾಳೆ. ಅವಳು ನರ್ಸಿಂಗ ಶಿಕ್ಷಣವನ್ನು ಪಡೆದವಳು, ಹಣದ ಕೊರತೆಯಾದಾಗ ಈ ಶಿಕ್ಷಣದ ಲಾಭವನ್ನು ಪಡೆದುಕೊಳ್ಳುತ್ತಾಳೆ. ಇದುವರೆಗೆ ತೀರ ಅವಶ್ಯಕವಿದ್ದಲ್ಲಿ ಮಾತ್ರ ಅವಳು ಎರಡನೆಯ ವಾಹನಸೌಕರ್ಯವನ್ನುಪಯೋಗಿಸಿದ್ದಾಳಂತೆ!

### (೨) ಅಂತರರಾಷ್ಟ್ರೀಯ ಬಾಲ ಕಲ್ಯಾಣ ಸಮಿತಿ.

ಅಂತರರಾಷ್ಟ್ರೀಯ ಬಾಲ ಕಲ್ಯಾಣ ಸಮಿತಿಯ ಪರಿಷತ್ತು ಡಿಶೆಂಬರ ೧೨ ರಂದು ಮುಂಬಯಿಯಲ್ಲಿ ಕೂಡಿತ್ತು. ಇಪ್ಪತ್ತೇಳು ರಾಷ್ಟ್ರಗಳ ಪ್ರತಿನಿಧಿಗಳು ಪರಿಷತ್ತಿಗೆ ಬಂದಿದ್ದರು. ಈ ಪ್ರತಿನಿಧಿಗಳಲ್ಲಿ ಬಹುಸಂಖ್ಯಾಕರು ಸ್ತ್ರೀಯರೇ: ಮಲಾಯಾ, ಬ್ರಹ್ಮದೇಶ, ಇಂಡೋನೇಶಿಯಾಗಳಿಂದ ಸ್ತ್ರೀ ಪ್ರತಿನಿಧಿಗಳೇ ಬಂದಿದ್ದರು. ಕೇಂದ್ರ ಸರಕಾರದ ಆರೋಗ್ಯ ಮಂತ್ರಿ ರಾಜಕುಮಾರಿ ಅಮೃತ ಕುವರರು ಪರಿಷತ್ತಿನ ಪ್ರಾರಂಭದಲ್ಲೇ "ಭಾರತದಲ್ಲಿ ಬಾಲ ಕಲ್ಯಾಣದ ಯೋಜನೆ," ಎಂಬ

ವಿಷಯವನ್ನು ಕುರಿತು ಮಾತನಾಡಿದರು. ಬಳಿಕ ಮಕ್ಕಳ ದೈಹಿಕ ವಿಕೃತಿ, ಮಾನಸಿಕ ವಿಕೃತಿಗಳನ್ನು ಕುರಿತು, ಅವುಗಳ ಪರಿಹಾರೋಪಾಯಗಳನ್ನು ಕುರಿತು, ದೇಶ ವಿದೇಶದ ಪ್ರತಿನಿಧಿಗಳು ಕೂಲಂಕಷವಾಗಿ ಚರ್ಚಿಸಿದರು. ಇವುಗಳ ಪ್ರಾತ್ಯಕ್ಷಿತೆ (Practical) ಗಳನ್ನೂ ಮುಂಬಯಿಯಲ್ಲಿ ನೋಡಲಾಯಿತು.

ಇದರೊಂದಿಗೇ ಪದವೀಧರ ಮಹಿಳೆಯರ ಪರಿಷತ್ತು ಲೇಡಿ ರಾಮರಾವ ಇವರ ಅಧ್ಯಕ್ಷತೆಯಲ್ಲಿ ಸೇರಿತ್ತು. ಸುಶಿಕ್ಷಿತ ಮಹಿಳೆಯರ ಸಂಘಟನೆಯನ್ನು ಕುರಿತು ಚರ್ಚೆ ನಡೆಯಿತು.

ಅಂತೂ ಕುಟುಂಬ ನಿಯೋಜನೆಯ ಪರಿಷತ್ತು, ಬಾಲ ಕಲ್ಯಾಣ ಸಮಿತಿಯ ಪರಿಷತ್ತು ಅಂತರಾಷ್ಟ್ರೀಯ ಸಂಬಂಧದಲ್ಲಿ ಭಾರತದಲ್ಲಿ ಸೇರಿದ್ದು ಅಭಿನಂದನೀಯ !

### (೩) ಡಾ. ರಾಧಾಕೃಷ್ಣನ್ನರ ಕಿವಿಮಾತು.

ಹಿರಿಯ ತತ್ವಜ್ಞಾನಿ ಡಾ. ರಾಧಾಕೃಷ್ಣನ್ನರು ಚಿಕ್ಕಮಂಗಳೂರಿನ ಮಹಿಳಾ ಸಮಾಜ ಸಮ್ಮೇಲನವೊಂದರಲ್ಲಿ ಸೋದರಿಯರಿಗೆ ಕಿವಿಮಾತು ಹೇಳಿದರು, "ಜರ್ಮನಿಯಲ್ಲಿ ಡಿಗ್ರಿ ಸರ್ಟಿಫಿಕೇಟು"ಗಳನ್ನು ಹಿಡಿದು ಜನ ಹೊಡೆದಾಡರು; ದೇಶಕ್ಕಾಗಿ ದುಡಿಯುವ ಅಂತಹ ಹಂಬಲ ನಮ್ಮಲ್ಲಿಯೂ ಬರಬೇಕು. ನಮ್ಮ ಅಧ್ಯಾತ್ಮಿಕ ಸಂಪತ್ತಿಗೆ ಅಲ್ಲಿಯ ಜನ ನೀಡುವ ಆದರ ಅಪಾರವಾಗಿದೆ. ಸ್ತ್ರೀಯರು ಸ್ವಭಾವದಿಂದಲೇ ಕಷ್ಟಸಹಿಷ್ಣುಗಳ, ತ್ಯಾಗಶೀಲೆಯರು. ಅವರೇ ಈ ಸಂಸಾರದ ಅಶಾಂತಿಯಿಂದ ನಮ್ಮನ್ನು ಪಾರುಮಾಡುವವರು; ಅವರು ತಮ್ಮದೇ ಆದ ಗೃಹಿಣೀ ಮಾತೃ ಸ್ಥಾನಗಳನ್ನು ಮರೆಯಲಾಗದು."

### (೪) ಧಾರವಾಡ ಜಿಲ್ಹೆಯ ಮಾಧ್ಯಮಿಕ ಶಾಲಾ ಬಾಲಿಕೆಯರ ಪ್ರಥಮ ಸಂತೋಷ ಶಿಬಿರ ಗದಗ.

ಶಿಬಿರದ ಕಾರ್ಯಕ್ರಮಗಳು ದಿ. ೨೫-೧೨-೫೨ಕ್ಕೆ ಬೆಳಗಿನ ೭ ಘಂಟೆಗೆ ವಿದ್ಯಾದಾನ ಸಮಿತಿಯ ಶಾಲೆಯಲ್ಲಿ ಪ್ರಾರಂಭವಾದವು. ಪ್ರತಿದಿನ ಬೆಳಗ್ಗೆ ಸ್ಥಾನಿಕ ಗುಡಿ ಮಠಗಳ ದರ್ಶನ, ಮಧ್ಯಾಹ್ನ ೩-೪೫ ಘಂಟೆಗೆ ಭಾಷಣಗಳ ಹಾಗೂ ರಾತ್ರಿ ೮ ಘಂಟೆಗೆ ಶಿಬಿರಾಳುಗಳ ವಿವಿಧ ವಿನೋದಾವಳಿಗಳ ಏರ್ಪಾಡನ್ನು ಮಾಡಲಾಗಿತ್ತು.

ಅಂದು ಶಿಬಿರದ ಸಂಚಾಲಕರಾದ ಶ್ರೀ. ಆರ್. ಬಿ. ಹಾವೇರಿಯವರು ಶಿಬಿರದವಿವಿಧ ಉದ್ದೇಶಗಳನ್ನು ವಿವರಿಸಿ ಸಭಿಕರ ಸ್ವಾಗತವನ್ನು ಕೋರಿದರು. ಕರ್ನಾಟಕ, ಕಾಲೇಜದ ಕು. ಸರೋಜನಿ ಶಿಂತ್ರಿ ಎಂ.ಎ. ಅವರು ಈ ಪ್ರಥಮ ಶಿಬಿರದ ಉದ್ಘಾಟನೆಯನ್ನು ಮಾಡುತ್ತ, ಶಿಬಿರದ ಶೈಕ್ಷಣಿಕ ಮಹತ್ವವನ್ನು ಚನ್ನಾಗಿ ವಿವರಿಸಿ ಸಾಹಿತ್ಯ ಮತ್ತು ಸೌಂದರ್ಯಗಳ ಮನೋಹರವಾದ ದೃಷ್ಟಿಯನ್ನು ನಮಗೆ ಕಲ್ಪಿಸಿ ಕೊಟ್ಟರು.

ತಾ.೨೬ ರಂದು ವೀರಮಾತೆಯ ಸಂಪಾದಕಿಯರಾದ, ಕು. ಸರೋಜನಿ ಮಹಿಷಿ ಎಂ.ಎ. ಇವರು " ಜೀವನದಲ್ಲಿ ಹಾಸ್ಯದ ಸ್ಥಾನ " ಈ ವಿಷಯವನ್ನು ವಿವೇಚಿಸುತ್ತ ಎಲ್ಲರನ್ನು ಹಾಸ್ಯ ಸಾಗರದಲ್ಲಿ ತೇಲಿಸಿದರು. ಸಂಜೆ ೬॥ ಘಂಟೆಗೆ ಧಾರವಾಡದ ಪಬ್ಲಿಸಿಟಿ ಆಫಿಸರರು ಸುಂದರವಾದ ರಂಗೀತ ಚಿತ್ರಗಳ ಮೂಲಕವಾಗಿ ಸಂತೋಷ ಮತ್ತು ಜ್ಞಾನವನ್ನು ನಮ್ಮೆಲ್ಲರಿಗೂ ನೀಡಿದರು.

೨೭ ರಂದು ವಿಜಯ ಕಲಾಮಂದಿರದಲ್ಲಿ ಕಲಾಮಂದಿರದ ಸಂಚಾಲಕರು ನಮೆಲ್ಲರಿಗೂ ಕಲೆಯ ವಿವಿಧ ಪ್ರಗತಿಯನ್ನು ಕಣ್ಣಾರೆ ಕಾಣುವಂತೆ ಚಿತ್ರಗಳ ಏರ್ಪಾಟನ್ನು ಮಾಡಿದ್ದರು. ಇದಲ್ಲದೆ ಶ್ರೀಮಾನ್ ಅಕ್ಕಿಯವರು ಕು. ಮಹಿಷಿಯವರ ಅಧ್ಯಕ್ಷತೆಯಲ್ಲಿ " ಸ್ತ್ರೀಯರ ಜೀವನದಲ್ಲಿ ಕಲೆಯಸ್ಥಾನ " ದ ಮೇಲೆ ಒಳ್ಳೇ ಪರಿಣಾಮಕಾರಿಯಾದ ಭಾಷಣವನ್ನು ಮಾಡಿದರು.

ಮಧ್ಯಾನ್ಹ ಕು. ಕೆರೂರ ಎಂ.ಎ. ಇವರ ಅಧ್ಯಕ್ಷತೆಯಲ್ಲಿ " ಸ್ತ್ರೀಯರಿಗೆ ಸೈನಿಕ ಶಿಕ್ಷಣ ಅವಶ್ಯ" ಎನ್ನುವಬಗ್ಗೆ ಶಿಬಿರಾಳುಗಳ ವಾದ ವಿವಾದಗಳನ್ನು ಏರ್ಪಡಿಸಲಾಗಿತ್ತು. " ಸ್ತ್ರೀಯರಿಗೆ ಸೈನಿಕ ಶಿಕ್ಷಣ ಅವಶ್ಯ ಎಂಬ ಠರಾವು ಬಹುಮತದಿಂದ ಪಾಸಾಯಿತು.

ದಿ. ೨೮-ರಂದು ಬೆಳಗ್ಗೆ ಲಕ್ಕುಂಡಿಗೆ ಪ್ರಯಾಣ ಮಾಡಿ ಕಲೆಯ ಬೀಡಾದ ಎಲ್ಲ ದೇವಾಲಯಗಳನ್ನು ಸಂದರ್ಶಿಸಿದರು.

ಈ ಶಿಬಿರದಲ್ಲಿ ದಿ. ಗರ್ಲ್ಸ ಇಂಗ್ಲಿಷ ಶಾಲೆಯ ಹಾಗೂ ಲ್ಯಾಮಿಂಗ್ಟನ್ ಹೈಸ್ಕೂಲಿನ ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ಹಂಪಿ, ತುಂಗಭದ್ರಾ ಆಣೆಕಟ್ಟುಗಳ ಸಂದರ್ಶನದಿಂದ ನಮ್ಮ ಸಂತೋಷಕೂಟದ ಕಾರ್ಯಕ್ರಮ ಕೊನೆಗಂಡಿತು.

ಬಾಗಿಲುಕೋಟೆಯಲ್ಲಿ ಭಗಿನಿ ಮಂಡಳದವರು ತಾ ೧೪-೧-೫೩ ರಂದು ರಮ್ಯವಾದ ಕಲಾಪ್ರದರ್ಶನವೊಂದನ್ನು ಸೇವಾದಲದ ಕಟ್ಟಡದಲ್ಲಿ ಏರ್ಪಡಿಸಿದ್ದರು. ಪ್ರದರ್ಶನದಲ್ಲಿ, ಕಸೂತಿ, ಹೆಣಿಕೆ, ಕುಸುರೆಳ್ಳು, ರಂಗವಲ್ಲಿಗಳಲ್ಲಿ ಎಲ್ಲ ಸೋದರಿಯರು ವಿಶೇಷ ಉತ್ಸಾಹದಿಂದ ಭಾಗವಹಿಸಿದ್ದರು. ಪ್ರದರ್ಶನದ ಉದ್ಘಾಟನವನ್ನು ಧಾರವಾಡದ ಶ್ರೀಮತಿ ಸರೋಜಿನಿ ಮಹಿಷಿ ಯವರು ನೆರವೇರಿಸುತ್ತ 'ಸ್ತ್ರೀಯರು ಮತ್ತು ಲಲಿತಕಲೆಗಳ ಬೆಳವಣಿಗೆ' ಎಂಬ ವಿಷಯವನ್ನು ಕುರಿತು ಮನಮುಟ್ಟುವಂತೆ ಭಾಷಣ ಮಾಡಿದರು. ಬಾದಾಮಿಯ ತರುಣ ಕಲಾವಿದರಾದ ಶ್ರೀ ಹಡಪದರವರ ಚಿತ್ರಗಳು, ಮಹಾರೂಪದ ಸರಸ್ವತಿಯ ಮೂರ್ತಿಯು ಪ್ರೇಕ್ಷಣೀಯವಾಗಿದ್ದವು. ರಮ್ಯವಾದ ಕಲಾಪ್ರದರ್ಶನವನ್ನು ಏರ್ಪಡಿಸಿ ಕಲಾವಿದರಿಗೆ ಸುಸಂಧಿಯನ್ನು ಕೊಟ್ಟ ಶ್ರೇಯಸ್ಸು ಬಾಗಿಲುಕೋಟೆಯ ಭಗಿನೀಮಂಡಳದವರಿಗೆ ಸಲ್ಲಲೇಬೇಕು.

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ, ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮುದ್ರಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟೇವೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**

—✦—

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..........................................................................

..........................................................................................................

ಪೂರ್ಣ ವಿಳಾಸ..........................................................................................

(ಮನೆ ನಂಬರು ಸಹಿತ) .............................................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯನಾ/ಳಾಗಿದ್ದೇನೆ.

ತಾರೀಖು .............................                                        ಸಹಿ

## ಅಕ್ಕನ ಪೆಟ್ಟಿಗೆಯ ಸದಸ್ಯರು.

(೧) ಸಂಗಪ್ಪ ಬಸಪ್ಪ ಯಲಬುರ್ಗಿ ಶೆಟ್ಟರ, ಬ್ಯಾಡಗಿ. ವ. ೧೫ ಬ್ಯಾಡಗಿ ಮುನಸಿಪಲ್ ಹೈಸ್ಕೂಲಿನಲ್ಲಿ ೯ ನೇ ಇಯತ್ತೆಯಲ್ಲಿ ಓದುತ್ತಿದ್ದಾನೆ. ಕಥೆ ಓದುವದು, ಒಗಟ ಬಿಡಿಸುವದರಲ್ಲಿ ಒಳ್ಳೇ ಆಸಕ್ತಿಯಂತೆ; ವೀರಮಾತೆಯ ತಮ್ಮ ತಂಗಿಯರೊಡನೆ ಪರಿಚಯ ಮಾಡಿಕೊಳ್ಳಲು ಈ ಸಲ ತಾನೂ ಸದಸ್ಯನಾಗಿದ್ದಾನೆ.

(೨) ಮುರಲೀಧರ ವಾಸುದೇವರಾವ ಮೂದಪ್ಪನವರ, ಕಾಮನಕಟ್ಟಿ ಮೂದಪ್ಪನವರ ವಾಡೆ, ಧಾರವಾಡ. ವ. ೧೩ ಇಂಗ್ಲೀಷ ನಾಲ್ಕನೆಯ ಇಯತ್ತೆಯಲ್ಲಿ ಓದುತ್ತಿದ್ದಾನೆ. ನಮ್ಮ ಚಿಕ್ಕ ಸೋದರರಾದ ವಿಶಾಲ, ಮತ್ತು ಕಾಮೋಜಿ ಇವರು ಅವನ ಗೆಳೆಯರಂತೆ. ಕಥೆ ಪುಸ್ತಕಗಳನ್ನು ಓದುವಲ್ಲಿ ಅವನಿಗೆ ಹೆಚ್ಚು ಪ್ರೀತಿ; ಲೇಖನಗಳನ್ನು 'ಮುರಲಿ' ಎಂಬ ಹೆಸರಿನಿಂದ 'ವೀರಮಾತೆ'ಗೆ ಕಳಿಸುವನಂತೆ!

(೩) ಸಿದ್ಧಯ್ಯಾ ಬಸಲಿಂಗಯ್ಯಾ ಸಿದ್ಧೇಶ್ವರಮಠ. ಸ್ಟೆಶನ್ ರೋಡ, ಜಕಾತಿ ಚಾಳ, ಧಾರವಾಡ. ವ. ೧೧. ಆನೇ ಇಯತ್ತೆಯಲ್ಲಿ ಓದುತ್ತಿದ್ದಾನೆ. ೧೯೫೦ರಲ್ಲಿ ಮುಲ್ಕೀ ಪರೀಕ್ಷೆಯಲ್ಲಿ ಎರಡನೇ ನಂಬರು ಪಡೆದಿದ್ದಾನೆ. ಮೇಲೆ ಶಿಷ್ಯವೃತ್ತಿಯೂ ದೊರೆತಿದೆಯಂತೆ. ಹಿಂದೀ ಪ್ರವೇಶ ಪರೀಕ್ಷೆಯಲ್ಲಿಯೂ ಉತ್ತೀರ್ಣನು. ಕನ್ನಡದಲ್ಲಿ ಕಥೆ, ಕವನಗಳನ್ನು ಬರೆಯಲು ಅವನಿಗೆ ತುಂಬಾ ಇಷ್ಟವಂತೆ!

(೪) ರಾಘವೇಂದ್ರ ವೆಂಕಟರಾವ ಹರಪನಹಳ್ಳಿ, ಗದಗಕರ ಕಂಪೌಂಡ ಸಪ್ತಾಪುರ, ಧಾರವಾಡ. ಇನ್ನುಳಿದ ಯಾವ ಪರಿಚಯವನ್ನೂ ಕೊಟ್ಟಿಲ್ಲ.

---

## ಸದಸ್ಯರ ಪತ್ರಗಳಿಗೆ ಉತ್ತರ.

ಪ್ರಿಯ ತಮ್ಮ ಕೃಷ್ಣಾಜಿ,

ನಿನ್ನ ಓಲೆ ತಲುಪಿದೆ. ಒಗಟಿನ ಉತ್ತರವೂ, ಅಕ್ಷರಗಳನ್ನು ತುಂಬಿದ ಮನೆಯೂ ಕೈಸೇರಿವೆ. ಅವಶ್ಯವಾಗಿಯೂ ಪ್ರಕಟಿಸುತ್ತೇನೆ. ಹೋದಸಲ ಪ್ರಕಟಿಸಲಿಲ್ಲವೆಂದು ನೊಂದುಕೊಳ್ಳಬೇಡ ಹೀಗೆ ಉತ್ತರಗಳನ್ನು ಕಳಿಸುತ್ತಿರು, ನಿನ್ನ ಸೂಚನೆ ನನಗೆ ಸಮ್ಮತವಿದೆ.

ನಿನ್ನ ಪ್ರೀತಿಯ ಅಕ್ಕ.

ಪ್ರಿಯ ತಂಗಿ ಲತಾ,

ನೀನು ಹಾಡಿನ ಸ್ಪರ್ಧೆಯಲ್ಲಿ ಕೊನೆಗೂ ಭಾಗವಹಿಸಿದ್ದೀಯೆಂಬುದನ್ನು ಕೇಳಿ ಸಂತೋಷವಾಯಿತು. ಅದಕ್ಕೇಕೆ ಸಂಕೋಚ ? ಶಾಲೆಯ ವಾರ್ಷಿಕೋತ್ಸವದಲ್ಲಿ ನಾಟಕದಲ್ಲಿ ಭಾಗವಹಿಸಲೋ ಹೇಗೆ ಎಂದು ಕೇಳಿದ್ದೀ. ಅಭಿನಯದಲ್ಲಿ ಆಸಕ್ತಿಯಿದ್ದರೆ, ನಿನ್ನ ಓದಿಗೆ ಅಡ್ಡಿಯಾಗದಂತೆ ಭಾಗವಹಿಸಲು ನನಗೇನೂ ಆತಂಕ ತೋರದು. ಏನು ಮಾಡಿದೆಯೆಂಬುದಕ್ಕೆ ಪತ್ರ ಬರೆ.

ನಿನ್ನ ಒಲುಮೆಯ ಅಕ್ಕ.

ಪ್ರಿಯ ತಂಗಿ ಶಕುಂತಲಾ,

ನಾವು ಜಾನೇವರಿ ಸಂಚಿಕೆಯನ್ನು ನಿನಗೆ ಕಳಿಸಿದ್ದೇವೆ. ಅದೇಕೆ ತಲುಪಲಿಲ್ಲವೋ ತಿಳಿಯಲಿಲ್ಲ. ನವ್ಹಂಬರ ತಿಂಗಳಲ್ಲಿ, ಒಂದು ಪ್ರತಿ ಲೇಖಕ್ಕಾಗಿ, ಇನ್ನೊಂದು ಪ್ರತಿ ಚಂದಾದಾರಳಿಗಾಗಿ ಬಂದಿರಬೇಕು. ಅದನ್ನು ತಿರುಗಿ ಏಕೆ ಕಳಿಸಿದೆ ? ಮುಂದಿನ ಸಲ ಸಂಚಿಕೆ ತಲುಪಿದ ಬಗ್ಗೆ ತಿಳಿಸು.

ನಿನ್ನಾದರದ ಅಕ್ಕ.

ಪ್ರಿಯ ತಮ್ಮ ಧ್ರುವ,

ಹೋದ ಸಲ ನೀನು ಒಗಟಿದ ಉತ್ತರ, ಅಕ್ಷರ ತುಂಬಿದ ಮನೆಯನ್ನು ಕಳಿಸಿದ್ದರೂ, ಹಾಕಲು ಮರೆತು ಹೋಯಿತು. ಕೋಪಿಸಿಕೊಳ್ಳಬೇಡ ಮತ್ತೆ ತುಂಬಿ ಕಳಿಸು.

ನಿನ್ನ ಒಲುಮೆಯ ಅಕ್ಕ.

ಪ್ರಿಯ ತಮ್ಮ ತಂಗಿಯರಿರಾ,

ಸ್ಪರ್ಧೆಗೆ ಪ್ರವೇಶ ಹಣವನ್ನಿಟ್ಟಿರುವಾಗ, ಹಾಗೇ ಕಳಿಸಿದರೆ ಹೇಗೆ ? ನಿಮ್ಮ ಕೆಲವರು ಹಾಗೇ ಕಳಿಸಿಬಿಟ್ಟಿದ್ದೀರಿ. ಪ್ರವೇಶಧನವನ್ನು ಕೊಟ್ಟವರಿಗೆ ಮಾತ್ರ ವೀರ ಮಾತೆಯ ಪ್ರತಿಯನ್ನು ಕಳಿಸಲಾಗುವದು, ಗೊತ್ತೇ ?

ಒಗಟಕ್ಕೆ ಉತ್ತರಗಳನ್ನು ಕಳಿಸುವಾಗ, ಅಕ್ಷರಗಳ ಮನೆಯನ್ನು ತುಂಬುವಾಗ, ಸ್ಪಷ್ಟವಾಗಿ ತುಂಬಬೇಕು. ಮಸಿ ಚೆಲ್ಲಿ, ಕಾಟು ಹಾಕಿ ತುಂಬಿದರೆ ಹೇಗೆ ತಿಳಿಯಬೇಕು ? ಮತ್ತೆ, ಕಥೆ, ಒಗಟುಗಳನ್ನು ಕಳಿಸುವಾಗ, ಕಥೆ ಎಲ್ಲಿಯೂ ಪ್ರಕಟವಾಗದಿದ್ದರೆ, ಒಗಟುಗಳ ಉತ್ತರ ನಿಮಗೆ ಗೊತ್ತಿದ್ದರೆ ಮಾತ್ರ ಕಳಿಸಿರಿ. ಇದನ್ನು ನೆನಪಿನಲ್ಲಿಡುವಿರಲ್ಲವೇ ?

ಇತಿ ನಿಮ್ಮೆಲ್ಲರ ಪ್ರೀತಿಯ
ಹಿರಿಯ ಅಕ್ಕ.






ಇಬ್ಬರು ಒಂದೇ ಸೈಕಲ್ ಮೇಲೆ ಕುಳಿತು ಹೋಗುತ್ತಿದ್ದರು. ಡಬಲ್ ರೈಡಿಂಗಿಗಾಗಿ ಸ್ವಲ್ಪ ದೂರದ ಮೇಲೆ ಪೋಲಿಸನೊಬ್ಬನು ಅವರನ್ನು ಹಿಡಿದನು. ಬಳಿಕ ಮೂವರೂ ಅದೇ ಸೈಕಲ್ ಮೇಲೆ ಕುಳಿತು, ಕಚೇರಿಗೆ ಬಂದರು !

**ಎಸ್. ಎಮ್. ಖನ್ನೂರ. ಧಾರವಾಡ.**

† † † † †

**(ಕ್ಲಾಸಿನಲ್ಲಿ ಇತಿಹಾಸದ ಮಾಸ್ತರರು ವಿದ್ಯಾರ್ಥಿಯನ್ನು ಕುರಿತು.)**

**ಮಾಸ್ತರರು:** ಲೇ ರಾಮ್ಯಾ ನೂರಜಹಾನಳ ಬಗ್ಗೆ ಏನು ಗೊತ್ತಿದೆ ನಿನಗೆ?

ವಿದ್ಯಾರ್ಥಿ : ನೂರಜಹಾನ ಇವಳು ಒಬ್ಬ ನಟಿ, ಮತ್ತು ಹಿಂಬದಿಯ ಗಾಯಕಿ. ಈಗ ಅವಳು ಪಾಕಿಸ್ತಾನದಲ್ಲಿದ್ದಾಳೆ; ಮೊದಲು ಇಲ್ಲಿಯೇ ಇದ್ದಳು.

**ಕೃಷ್ಣಾಜಿ ದೇಶಪಾಂಡೆ.**

**(ವರ್ಗದಲ್ಲಿ.)**

**ಕಿಟ್ಟು :** ಇದೀಗ ಏನೋ ಅಂದ್ರಿ ಸಾರ್, ಅದೇನು ?

**ಮೇಷ್ಟ್ರು :** ಯಾವಾಗಲೂ ಸ್ಪಷ್ಟವಾಗಿ ಮಾತಾಡಬೇಕು,ಎಂದು ಹೇಳಿದೆ.

**ಕಿಟ್ಟು :** ಅದೇ ! ನನಗೆ ತಿಳಿದಿರಲಿಲ್ಲ ನೀವು ಹೇಳಿದ್ದು.

**ದಾನಪ್ಪಾ ಕಾಮೋಜಿ.**

* * * * * *

**ನಗೆಮಾತು:—** ಒಬ್ಬ ಹೆಂಗಸು ಒಂದು ಕತ್ತೆಯ ಮೇಲೆ ಬಟ್ಟೆಯನ್ನು ಹೇರಿಕೊಂಡು ಹೋಗುತ್ತಿದ್ದಳು. ಆಗ ಬೀದಿಯಲ್ಲಿ ಹೋಗುತ್ತಿದ್ದ ಹುಡುಗರು ಆ ಹೆಣ್ಣುಮಗಳನ್ನು ಕುರಿತು, ಏ, ಕತ್ತೆ ಅವ್ವಾ, ಎಲ್ಲಗೆ ಹೊರಟಿದ್ದೀ ಎಂದು ಕೇಳಿದರು. ಅವಕ್ಕೆ ಆ ಹೆಂಗಸು, ಎಲ್ಲೀ ಇಲ್ರೋಪ್ಪಾ ! ಇಲ್ಲೇ ಹೊಂಟಿದ್ದೀನ್ರಪ್ಪಾ ನನ್ನ ಮಕ್ಕಳಿರಾ ಎಂದು ಉತ್ತರ ಕೊಟ್ಟಳು.

# ಹುಚ್ಚೆದ್ದ

ಶಾಲೆಯಲ್ಲಿ ಗುರುಗಳು ವಿದ್ಯಾರ್ಥಿಗಳಿಗೆ ಒಂದು ದಿನ ಕೆಲವು ಗಾದೆಮಾತುಗಳನ್ನು ಕಲಿಸಿದರು. ಆಗ " ಈ ಎಲ್ಲ ಗಾದೆಮಾತುಗಳು ನಿಜವಿರುತ್ತವೋ ಹೇಗೆ " ಎಂದು ಪ್ರಶ್ನಿಸಿದ ಪೆದ್ದ.

" ಅಹುದು, ಅವು ನಿಜವಾಗಿರುತ್ತವೆ, ಅಲ್ಲದೆ ನೀತಿ ಬೋಧಕವಾಗಿರುತ್ತವೆ." ಮಾಸ್ತರರೆಂದರು.

ಕೂಡಲೆ ಪೆದ್ದ ಹೇಳಿದ, " ಅವುಗಳಲ್ಲಿ ಕೆಲವು ನಿಜವಾಗಿರುವದಿಲ್ಲ. ಉದಾಹರಣೆಗೆ ದೀಪದ ಕೆಳಗೆ ಕತ್ತಲು, " ಎಂದಿದೆ ನೋಡಿ, ಅದು ಸುಳ್ಳು. ನಮ್ಮ ವಿದ್ಯುದ್ದೀಪಗಳ ಕೆಳಗೆ ಕತ್ತಲೆಯಿರದೆ ಮೇಲೆ ಕತ್ತಲೆಯಿರುತ್ತದಲ್ಲ ಸಾರ್ "

† † † † † †

' ಕಾಲ ' ಗಳೆಷ್ಟು ಎಂದು ಪೆದ್ದನಿಗೆ ಗುರುಗಳು ಕೇಳಿದರು.

" ಎರಡೇ ಸರ್, ಮೂರು ಕಾಲಿನವರಾದರೂ ಇರ್ತಾರೆಯೇ ? " ಪೆದ್ದ ಕೇಳಿದ.

‡ ‡ ‡ ‡ ‡

ನಾಳೆ ಎಲ್ಲರೂ ' ಕತ್ತೆ ' ಯ ಮೇಲೆ ನಿಬಂಧ ಬರೆದುಕೊಂಡು ಬರಬೇಕು ಎಂದು ವರ್ಗದಲ್ಲಿ ಮಾಸ್ತರರು ಹೇಳಿದರು.

ಪೆದ್ದ ಕೇಳಿದ, ' ಬರೆದು ಕತ್ತೆಯನ್ನು ಇಲ್ಲಿಗೇ ತರಬೇಕೋ ' ಅಥವಾ ನೀವೇ ಅಲ್ಲಿಗೆ ಬರುತ್ತೀರೋ ? "

' ವಿಶಾಲ '

* * * * *

# ಒಗಟುಗಳು

ವೇಳೆ ತಿಳಿಸುವದಾದರೂ ಗಡಿಯಾರವಲ್ಲ; ಗಡಿಪಕ್ಕಗಳಿದ್ದು ಹಾರುತ್ತಿದ್ದರೂ ಹಕ್ಕಿಯಲ್ಲ. ಎರಡು ಕಾಲುಗಳಿದ್ದರೂ ಮನುಷ್ಯನಲ್ಲ. ಹಾಗಾದರೆ ಅದಾವುದು ?

' ವಿಶಾಲ '

ನಿಂತಲ್ಲಿ ನಿಲ್ಲುವದು, ಕೂತಲ್ಲಿ ಕೂಡುವದು; ಬೆಂಕಿಗೆ ಸುಡುವದು, ತಂಪಿಗೆ ಅಳುಕುವದಿಲ್ಲ. ಯಾವಾಗಲೂ ಒಂದು ವಸ್ತುವಿನ ಜೊತೆಯಲ್ಲಿಯೇ ಇರುವದು. ಅದಾವುದು ?

ಪಾನಸ್ಕಾ.

## ಜಾಣ್ಮೆಯ ಲೆಕ್ಕ.

ಒಂದು ತೋಟದಲ್ಲಿ ಕೆಲವು ಗಿಡಗಳೂ, ಗಿಳಿಗಳೂ ಇವೆ. ಪ್ರತಿಯೊಂದು ಗಿಡದ ಮೇಲೆ ೧೨ ರಂತೆ ಗಿಳಿಗಳು ಕುಳಿತರೆ ೨೨ ಗಿಳಿಗಳು ಉಳಿಯುವವು. ೧೩ ರಂತೆ ಕುಳಿತರೆ ೨೨ ಗಿಳಿಗಳು ಕಡಿಮೆ ಬೀಳುವವು. ಹಾಗಾದರೆ ಗಿಳಿಗಳೆಷ್ಟು ? ಗಿಡಗಳೆಷ್ಟು?

## ಹೋದ ತಿಂಗಳ ಒಗಟುಗಳಿಗೆ ಉತ್ತರ.

(೧) ಅಜ್ಜ, ಮಗ, ಮೊಮ್ಮಗ.
(೨) ಪ್ರಭಾಕರನ ಬೆಳಕು. ನಸುಕಿನಲ್ಲಿ ಏಳುತ್ತ ಸಂಜೆಗೆ ಆರುತ್ತ ಸದಾ ಕಾಲ ನಡೆದಿರುತ್ತದೆ.
(೩) ಗಡಿಯಾರ.

## ಜಾಣ್ಮೆಯ ಒಗಟಿಗೆ ಉತ್ತರ.

"EDUCATED"

**ಒಗಟುಗಳಿಗೆ ಸರಿಯಾಗಿ ಉತ್ತರ ಕಳಿಸಿದವರು:—**

ಡಿ. ಜಿ. ನಾಡಗೌಡ, ಧಾರವಾಡ.

ಕೊನೆಯ ಎರಡಕ್ಕೆ ಸರಿಯಾಗಿ ಉತ್ತರ ಕೊಟ್ಟವರು:—

'ವಿಶಾಲ' ಧಾರವಾಡ. ದಾನಪ್ಪಾ ಕಾವೋಜಿ; ಶಿವಪುತ್ರ, ಧಾರವಾಡ. ಷಣ್ಮುಖ ಪೂಜಾರ.

**ಹೊದ ತಿಂಗಳ ಸ್ಪರ್ಧೆಗೆ ಉತ್ತರ ಕಳಿಸಿದವರು:—**

ದುಷ್ಯಂತ ರಾಜ ನಾಡಗೌಡ, ಧಾರವಾಡ. ಸಿದ್ದಪ್ಪ ಚೆನ್ನಮಲ್ಲಪ್ಪ ಬಡೇಮಿ, ಬನಹಟ್ಟಿ; ಎಚ್. ಎಮ್. ಕುಲಕರ್ಣಿ, ಮಂಗಾಳವಾರಪೇಟೆ, ಧಾರವಾಡ. ರಾಘವೇಂದ್ರ ವೆಂಕಟರಾವ ಹರಪನಹಳ್ಳಿ, ಧಾರವಾಡ; ಕೃಷ್ಣಾಜಿ ಭೀಮರಾವ ದೇಶಪಾಂಡೆ ಧಾರವಾಡ.

'ವೀರಮಾತೆ' ಯ ಪ್ರತಿಗಳನ್ನು ಸರಿಯಾದ ಉತ್ತರ ಕಳಿಸಿದವರಿಗಷ್ಟೇ ಕೊಡಲಾಗುವದು.

| | | | | | | |
|---|---|---|---|---|---|---|
| ೧ | ಥ | ೨ | ■ | ವಿ೩ | ೪ | ೫ |
| ತ್ರಿ | ■ | ರೆ | ■ | ೬ | | ಗೆ |
| ೭ | ರ೮ | | ■ | ಲ | ■ | ■ |
| ■ | | ■ | ೯ | ■ | ೧೦ | ಸ |
| ೧೧ | ಣ | ■ | ಮ೧೨ | | ನ | ■ |
| ಡಾ | ■ | ೧೩ ಹೊ | | ■ | ೧೪ | ಣ |
| ೧೫ | ಥ | ■ | ■ | ■ | ■ | ■ |

**ಪ್ರವೇಶ ಫೀ ೨ ಆಣೆ**

**ಸರಿಯುತ್ತರಕ್ಕೆ**

**ಒಂದು**

**ವೀರಮಾತೆ**

**ಪುಕ್ಕಟೆ.**

**ಎಡದಿಂದ ಬಲಕ್ಕೆ:—** (೧) ಮೊದಲನೆಯದು (೩) 'ಮಿಲನ' ದ ವಿರುದ್ಧ (೬) ಒಂದು ತಿನ್ನುವ ಪದಾರ್ಥ (೭) ಒಂದು ದೇಶ (೧೦) ನೆಲೆಸು (೧೧) ಸ್ವಭಾವಗ್ಳ ಸೇರಿದ್ದು (೧೨) ಧ್ಯಾನಿಸುವದು (೧೩) ಭೂಮಿ, (ಜಮೀನು) (೧೪) ಯುದ್ಧ (೧೫) ಬಂಡಿ (ವಾಹನ)

**ಮೇಲಿನಿಂದ ಕೆಳಕ್ಕೆ:—** (೧) ತೇಜಸ್ಸು (೨) 'ಮರೆ' ಇದರ ರೂಪ (೩) ದೊಡ್ಡ, ಹರವಾದ (೪) ಸೂರ್ಯ (೫) ವೈರತ್ವ (೮) ಗಂಡ (೯) ಹೂವು (೧೦) ಮಂಗ (೧೧) ಹಾಸುವ ವಸ್ತು.

**ರಚಿಸಿದವರು. 'ವಿಶಾಲ' ಧಾರವಾಡ.**

ಇದರ ಉತ್ತರವು ಫೆಬ್ರುವರಿ ೧೮ ರೊಳಗಾಗಿ ತಲ್ಪುವಂತೆ ಕಳುಹಿಸಬೇಕು. ಪ್ರವೇಶಧನವಿಡದವರ ಹೆಸರನ್ನು ಪ್ರಕಟಿಸಲಾಗುವದಿಲ್ಲ.

* * * * *

## ಒಗಟುಗಳು

(೧) ನನ್ನ ದೊಡ್ಡ ಅಣ್ಣ,
ಅವನ ಹೆಸರು ತಿಮ್ಮ,
ಅವನ ಕಾಟ ತಡೆಯಲೆಂದು,
ಕೊಟ್ಟಳೊಂದು ಅಮ್ಮ.

(೨) ನಮ್ಮ ಮಾವಿನ ತೋಟ
ಆದರೆ ಕೋತಿಯ ಕಾಟ,
ಸಮಯ ಕಾಯ್ದು ತೋಟದಾಳು
ಕೊಟ್ಟನೊಂದು ಏಟ.

(೩) ಮಳೆ ಬಂತು ಜೋರಾಗಿ,
ನೀರು ಬಂತು ಕೆರೆಗೆಲ್ಲ,
ಬೆಳೆ ಬಂತು ಹುಲು ಸಾಗಿ,
ಸುಖವಾಯ್ತು ನಮಗೆಲ್ಲ.

**ಷಣ್ಮುಖ ಪೂಜಾರ, ಧಾರವಾಡ.**

ಮಕ್ಕಳಿಗಾಗಿ ಈ ತಿಂಗಳ ಕಥೆ

## ' ಅತ್ಯಾಸೆ '

**ಲೇ:— ವಿಶಾಲ ಧಾರವಾಡ.**

ಒಂದೂರಿನಲ್ಲಿ ಒಬ್ಬ ಕಡುಲೊಭಿ ಇದ್ದನು; ಅವನೊಂದುದಿನ ತೆಂಗಿನಕಾಯಿಯ ಅಂಗಡಿಗೆ ಹೋದನು; ಅಲ್ಲಿ ಕಾಯಿಗಳ ಧಾರಣೆ ಕೇಳಿದನು. ಒಂದಾಣೆ ಎಂದ ವ್ಯಾಪಾರಿ. ಆಗ ಮೂರುದುಡ್ಡಿಗೆ ಕೊಡಪ್ಪಾ ಎಂದ ಲೋಭಿ; " ಮುಂದೆ ಹೋಗು " ಎಂದ ಆ ವ್ಯಾಪಾರಿ ಮುಂದೆ ಆ ಲೋಭಿ ಒಂದು ಮೈಲು ದೂರಬಂದು ಅಲ್ಲಿಯೊಂದು ಅಂಗಡಿಗೆಹೋಗಿ ಅಲ್ಲಿಯೂ ಧಾರಣೆ ಕೇಳಿದನು. ಆಗ ಮೂರು ದುಡ್ಡು ಹೇಳಿದ ಆ ವ್ಯಾಪಾರಿ. ಅರ್ಧಾಣೆಗೆ ಕೊಡಪ್ಪಾ " ಎಂದ ಈ ಲೋಭಿ; " ಇಲ್ಲ. " ಮುಂದೆ ಹೋದರೆ ಸಿಗುವವು " ಎಂದ ಆ ವ್ಯಾಪಾರಿ ಹಿಗೆಯೇ ಮತ್ತೆ ಅರ್ಧಮೈಲು ಬಂದು ಮತ್ತೊಂದು ಅಂಗಡಿಯಲ್ಲಿ ಬೆಲೆವಿಚಾರಿಸಿದ ಅಲ್ಲಿಯ ವ್ಯಾಪಾರಿ ಅರ್ಧಾಣೆಗೆ ಎಂದು ಹೇಳಿದನು; ಆಗ " ಅಯ್ಯಾ ನಾನು ಇಷ್ಟು ದೂರ ಬಂದಿರುವೆ, ಪಾಪ ! ಬಡವ ಬ್ರಾಹ್ಮಣ ದಕ್ಷಿಣೆ ಅಂತ ತಿಳಕೊಂಡು ಪುಕ್ಕಟೆ ಕೊಡು " ಎಂದ ಆ ಲೋಭಿ ! ಆಗ ಆ ವ್ಯಾಪಾರಿ ಗಿಡಹತ್ತಿ ಬೇಕಾದಷ್ಟು ಹರಿದಕೊ ! ಎಂದ. ಆ ಕಡು ಲೋಭಿ ಗಿಡ ಹತ್ತಿದ ೪-೫ ಕಾಯಿ ಹರಿದು ಅಷ್ಟಕ್ಕೇ ಬಿಡದೇ ಮತ್ತಷ್ಟುಹರಿಯಲು ಹೋಗಿ ಕೈಜಾರಿ ಕೆಳಗೆ ಬಿದ್ದು ಪ್ರಾಣ ನೀಗಿದ.

**ನೋಡಿದಿರಾ ! ಅತ್ಯಾಸೆಯ ಫಲವನ್ನು !**

# — ಚಿಂದಿ ಬಟ್ಟೆಗಳ ಚೀಲ —

**ಲೇ:— ಪಾರ್ವತಿಬಾಯಿ ಭಟ್ಟ, ಧಾರವಾಡ.**



ನಾವು ಕಟಿಂಗ ಮಾಡಿದ ವ ಬಟ್ಟೆಗಳಲ್ಲಿ, ಉಳಿದ ಚೂರು ಬಟ್ಟೆಗಳಿಂದ ದುಪ್ಪಟಿ, ಕವದಿಗಳನ್ನು ಮಾಡುತ್ತೇವೆ, ಚೀಟಿನ ಅರಿವೆ, ಜೊತೆಗೆ ಸಾಟಿನ್, ರೇಶ್ಮೆ ಅರಿವೆಗಳ ಚೂರು ಇದ್ದರೂ ಸಹಿತ ಅದನ್ನು ಕೂಡಿಸಿ ಹೊಲಿಯುತ್ತೇವೆ. ಹಾಗೆ ಮಾಡದೆ ಸಾಟಿನ್, ಶಿಲ್ಕ, ರೇಶ್ಮೆ ಇಂಥವುಗಳ ತುಂಡುಗಳನ್ನು ಬೇರೆಯಾಗಿಟ್ಟು ಈ ಚೀಲವನ್ನು ತಯಾರಿಸಬಹುದು. ಅಥವಾ ಕೂಡಲು ಆಸನಗಳನ್ನೂ ತಯಾರಿಸಬಹುದು. ಚೀಲ ಮೃದುವಾಗಿರುತ್ತದೆ.

ಒಂದು ಪಾಟಿನ ಚೀಲವನ್ನು (ಅದರ ತೂತುಗಳು ಸರಿಯಾಗಿರುವಂಥಹದು) ತಂದು ಸ್ವಚ್ಛವಾಗಿ ಒಗೆದುಹಾಕಬೇಕು. ಒಂದು ಟಿಂಗಿನ ಕಸಬರಿಗೆ ಕಡ್ಡಿಯಲ್ಲಿ ಗಟ್ಟಿಯಾಗಿರುವ ಭಾಗವನ್ನು ತೆಗೆದು ತುದಿಯನ್ನು ಸರಿಯಾದ ಅಳತೆಯಲ್ಲಿ ಅಂದರೆ ೧½" ಅಗಲ. ¼" ಉದ್ದ ಆಗುವಷ್ಟು ಚೂರುಗಳನ್ನು ಕತ್ತರಿಸಿಟ್ಟುಕೊಳ್ಳಬೇಕು. ಬಳಿಕ ಆ ತಟ್ಟಿನ ಒಂದೊಂದು ತೂತಿಗೆ ಒಂದೊಂದರಂತೆ ಕಡ್ಡಿಯ ಸಹಾಯದಿಂದ ಪೋಣಿಸುತ್ತಾ ಹೋಗಬೇಕು. ಹೀಗೆ ತಯಾರಿಸಿದ ಚೀಲವು ಬಹಳ ಅಂದವಾಗಿ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ. ಇದರೊಳಗೆ ಚೌಕಟ್ಟು, ಪಂಚಕೋನ, ಸ್ವಸ್ತಿಕ ಮುಂತಾದ ನಮೂನೆಗಳನ್ನು ಹಾಕಬಹುದು. ಹೀಗೆ ತಯಾರಿಸಿದ ತಟ್ಟನ್ನು ಒಳಗೆ ಶುಭ್ರವಾದ ಅರಿವೆಯನ್ನು ಜೋಡಿಸಿ ಹೊಲಿದು ಹಿಡಿಕೆ ಹಚ್ಚಬೇಕು. ಅಂದರೆ ಅದು ದಪ್ಪಾಗಿ ಗಟ್ಟಿಮುಟ್ಟಾಗುವದು. ಇದರಂತೆ ಉಲನ್‌ದಿಂದಕೂಡಾ ಮಾಡಬಹುದು. ಇದರಂತೆ ಗಿರ್ದೆಯಕವರು, ಕೂಸಿನ ದುಪ್ಪಟಿಗಳನ್ನು ಮಾಡುವರು.

## ಉಲನದಿಂದ ತಯಾರಿಸುವ ಚೀಲ.

ಉಲನ್‌ದಿಂದ ಕ್ರಾಸ ಸ್ಟಿಚ್ ಬಟ್ಟೆಯಲ್ಲಿ ಹಾಕಿದಂತೆ ಪಾಟಿನ ಚೀಲದಲ್ಲಿ ತುಂಬುವರು. ಹೀಗೆ ತುಂಬಿ ಪರ್ಸ್, ಚೀಲ. ಮುಂತಾದವುಗಳನ್ನು ತಯಾರಿಸುತ್ತಾರೆ ಉಲನ್‌ನ್ನು ಒಂದು ದೊಡ್ಡ ಸೂಜಿಯಲ್ಲಿ ಪೋಣಿಸಿ ಎರಡೆರಡೇ ಖಾನೆಯಲ್ಲಿ ಹಾಯಿಸಬೇಕು. ಅಂದರೆ ನಡುವೆ ೨ ಉದ್ದ ಎಳೆಗಳನ್ನು ಬಿಟ್ಟು ಅಡ್ಡ ಎಳೆಯಲ್ಲಿ ಹಾಯಿಸಬೇಕು. ಹೀಗೆ ೪ ಬಾಜುವಿಗೂ ಚೌಕಟ್ಟಾಗುವಂತೆ ಕ್ರಾಸ ಸ್ಟಿಚ್ ಹೊಲಿಗೆಯನ್ನು ಹಾಕಬೇಕು. ನಂತರ ೧೦ ಇಲ್ಲವೆ ೧೨ ಎಳೆಗಳಿಗೆ ಒಂದೊಂದರಂತೆ ಎಣಿಸಿ ಕ್ರಾಸಸ್ಟಿಚ್ ಹಾಕಬೇಕು. ಉದ್ದ ಸಾಲು ಮುಗಿದಕೂಡಲೇ ಅಡ್ಡ ಸಾಲುಗಳನ್ನು ಹಾಕಬೇಕು. ಉದ್ದದಲ್ಲಿ ಎಷ್ಟು ಎಳೆ ಬಿಟ್ಟಿರುತ್ತೇವೋ ಅಷ್ಟೇ ಎಳೆಯನ್ನು

ಅಗಲ ಸಾಲಿನಲ್ಲಿ ಬಿಡಬೇಕು. ಬಳಿಕ ಎರಡನೇ ಖಾನೆಯಲ್ಲಿ, ಅದರ ಮೇಲೆ ಸಾಲಾಗಿ ಹಾಕುತ್ತಾಹೋಗುವದು. ಹೀಗೆ ಆ ತಟ್ಟಿನ ಖಾನೆಗಳೆಲ್ಲ ಪೂರ್ಣ ತುಂಬುವವರೆವಿಗೂ ಹಾಕುತ್ತಾ ಹೋಗಬೇಕು. ಉದ್ದ ಸಾಲಿನಲ್ಲಿ ಕೆಂಪು ಉಲನ್ ಹಾಕಿದ್ದರೆ ಅಗಲ ಸಾಲಿನಲ್ಲಿ ಹಸರು ಹೀಗೆ ಬೇರೆ ಬೇರೆ ಬಣ್ಣಗಳ ಉಲನ್ ಚೂರುಗಳನ್ನು ಉಪಯೋಗಿಸಬಹುದು. ಪೂರ್ಣ ಖಾನೆಗಳು ತುಂಬಿದವೆಂದರೆ ಮೊದಲಿಗೆ ಹೊಲಿದ ಒಂದು ಹೊಲಿಗೆಯನ್ನಷ್ಟೇ ಬಿಟ್ಟು ಉಳಿದ ಎಲ್ಲ ಕ್ರಾಸ್ ಸ್ಟಿಚ್‌ಗಳನ್ನು ನಡುವೆ ಕತ್ತರಿಸಬೇಕು. ಅಂದರೆ ಅದು ಉಬ್ಬಿದ ಬಣ್ಣ ಬಣ್ಣದ ಚಿರೋಟಿಯಂತೆ ಚಂದಕಾಣಿಸುವದು. ಬಳಿಕ ಅದಕ್ಕೆ ಒಳಗಿನಿಂದ ಶುಭ್ರವಾದ ಬಟ್ಟೆಯನ್ನು ಹಚ್ಚಿ ಹಿಡಿಕೆ ಹಚ್ಚಬೇಕು. ಹಿಡಿಕೆಯು ಚೀಲದ ನಾಲ್ಕೂಕಡೆಗೆ ಬರುವಂತೆ ಹಚ್ಚಬೇಕು. ಹೀಗೆ ತಯಾರಿಸಿದ ಚೀಲವು ಗಟ್ಟಿಮುಟ್ಟಾಗಿ ಚಂದಕಾಣಿಸುವದು. ಹೀಗೆ ಜಮಖಾನೆಯಂತೆ ಹಾಸಲು ಕೂಡ ತಯಾರಿಸಬಹುದು.



[ ೩ನೇ ಪುಟದಿಂದ ]

" ಏಕೆ ಸೀತಾ, ಪ್ರದರ್ಶನ ನೋಡಿಕೊಂಡೇ ಮನೆಗೆ ಹೋಗುವಿಯಂತೆ, ಹೇಗಾದರೂ ನಾವಿದ್ದೇವೆ ನಿನ್ನ ಜೊತೆಗೆ, " ಲ್ಯೂಸಿ ಮನವೊಲಿಸಲೆತ್ನಿಸಿದಳು.

ಸೀತಾ ಹಿಂಜರಿದಳು. "ಈಗಲೇ ಒಂಬತ್ತೂ ಕಾಲು ಗಂಟೆ; ಮನೆಯಲ್ಲಿ...."

" ಮನೆಯಲ್ಲಿ ಏನು ? ಅದಕ್ಕೇ ನಾನು ಹೇಳುವದು, ಹಿಂದೂ ಸ್ತ್ರೀಯರಿಗೆ ಯಾವ ಬಗೆಯ ಸ್ವಾತಂತ್ರ್ಯವೂ ಇಲ್ಲs ಎಂದು, " ಲ್ಯೂಸಿ ಕೆಣಕಿದಳು.

" ಅಲ್ಲದೆ ಬಣ್ಣ ಬಣ್ಣದ ಬೆಳಕಿನಲ್ಲಿ ಪ್ರದರ್ಶನ ನೋಡಲು ಅಂದವಾಗಿರುತ್ತದೆ, " ಜಾರ್ಜ ಹೇಳಿದರು.

ಸೀತಾ ಸ್ವಾತಂತ್ರ್ಯ ಪಡೆದ ಧೈರ್ಯದಿಂದ, ಕಾರಿನಲ್ಲಿ ಹತ್ತಿದಳು, ಬಳಿಕ ಜಾರ್ಜ, ಬಳಿಕ ಲ್ಯೂಸಿ: ಸಂಕೋಚವೆನಿಸಿದರೂ ವ್ಯಕ್ತಮಾಡದೆ ಸೀತಾ ಧೈರ್ಯವಾಗಿದ್ದಂತೆ ತೋರಿಸುವ ಯತ್ನ ಮಾಡಿದಳು. ಕಾರು ದಿಬ್ಬವನ್ನೇರಿ ಕೆಳಗಿಳಿದಾಗ, ಜಾರ್ಜ ಸೀತೆಯ ಕೈಯನ್ನು ಮೆಲ್ಲಗೆ ಅದುಮಿದರು. ಸೀತಾ ಒಳಗೊಳಗೇ ಬೆಂದಳು. ಇನ್ನೊಂದು ಸಲ ಲ್ಯೂಸಿಯ ಮನೆಗೆ ಕಾಲಿಕ್ಕಕ್ಕಿಲ್ಲವೆಂತಿಲ್ಲವೆಂದು ಆಣೆಮಾಡಿದಳು !

ಸೀತಾ ಅಂದು ಮನೆಗೆ ಬಂದಾಗ ಹತ್ತು ಗಂಟೆ !

ರಾಮನಾಥ ಲೇಡಿಜ ಕ್ಲಬ್ಬಿಗೆ ಹೋಗಿ ಸೀತಾ ಲ್ಯೂಸಿಯ ಜೊತೆಗೆ ಹೋದ ಸಮಾಚಾರ ತಿಳಿದುಕೊಂಡು, ಬಂದು ಹಾಗೇ ಓದುತ್ತ ಮಲಗಿದ್ದನು: ಸೀತೆ ಬಂದರೂ ಇತ್ತ ಹೊರಳಲಿಲ್ಲ.

ಸಂಕೋಚದಿಂದ ಅವಳೇ ಹೇಳಿದಳು, " ಲ್ಯೂಸಿಯ ಮನೆಗೆ ಹೋಗಿದ್ದೆ ಅವಳ ಗಂಡ ಪೋಲೀಸ ಇನ್‌ಸ್ಪೆಕ್ಟರು. ಮುಂದೆ ಮೂವರೂ ಪ್ರದರ್ಶನ ನೋಡಲು ಹೋಗಿದ್ದೆವು. ಅದಕ್ಕೇ ಇಷ್ಟು ಹೊತ್ತು ! "

" ಸರಿ, ನಾನೇನಾದರೂ ಕಾರಣ ಕೇಳಿದೆನೇ ? " ರಾಮನಾಥ ಪ್ರಶ್ನಿಸಿದನು.

ಸೀತೆಗೆ ಮತ್ತೂ ಸಂಕೋಚವಾಯಿತು.

" ಇಷ್ಟು ಲೇಟಾಗಿ ಇನ್ನೆಂದೂ ಬರುವದಿಲ್ಲ " ಕ್ಷಮಾಯಾಚನೆಯ ಮಾರ್ದವತೆ ಸೀತೆಯ ದನಿಯಲ್ಲಿತ್ತು

ರಾಮನಾಥ ಸುಮ್ಮನೆ ನಕ್ಕುಬಿಟ್ಟನು. " ಬೇಕಾದಾಗ ಬರಲು ನಿನಗೂ ಸ್ವಾತಂತ್ರ್ಯವಿದೆ, ಸೀತಾ, ಹಾಗೆ ನನಗೂ ಇದೆ; "

ಸೀತಾ ಮರುಮಾತಾಡದೆ ತನ್ನ ಕೋಣೆಗೆ ಹೋಗಿ ವಿರಮಿಸಿದಳು.

ಮರುದಿನ ಮುಂಜಾನೆ ಅದಾರೊ ಅಮೇಚ್ಯುಅರ ನಾಟಕ ಕಂಪನಿಯವರು ಲೇಡೀಜ ಕ್ಲಬ್ಬಿನ ಸೆಕ್ರೆಟರಿಯ ಶಿಫಾರಸಿನಿಂದ ಸೀತಮ್ಮನ ಬಳಿಗೆ ಬಂದಿದ್ದರು.

" ನಮಗೆ ಶ್ರೀಮತಿ ಸೀತಾದೇವಿ ರಾಮನಾಥನ್ ಅವರನ್ನು ಕಾಣಬೇಕಾಗಿದೆ, ನಮ್ಮ ನಾಟಕದಲ್ಲಿ ಹಿಂದು ಸ್ತ್ರೀಯ ಪಾತ್ರಕ್ಕೆ ಅವರೇ ಯೋಗ್ಯರೆಂದು ಅವರ ಬಳಿ ಬಂದಿದ್ದೇವೆ " ರಾಮನಾಥ ಮರು ಮಾತನಾಡಲಿಲ್ಲ; ಅವರಿಗೆ ಕುಳಿತು ಕೊಳ್ಳಲು ಹೇಳಿ, ಅಡುಗೆ ಮನೆಯವರೆಗೆ ವಾರ್ತೆ ಮುಟ್ಟಿಸಿದನು; ಸೀತಾ ಆ ಮಾತು

ಕೇಳ ಅವಾಕ್ಕಾದಳು. ತಾನೇ ಹೊರಬಂದು ಉತ್ತರಕೊಡದೆ ಬೇರೆ ವಿಧಿಯಿರಲಿಲ್ಲ. ಆ ಕಂಪನಿಯವರನ್ನು ಏನು ಮಾತಾಡಲಿಕ್ಕೂ ಕೊಡದೆ ಸೀತಾ ಒಂದೇ ಸಲಕ್ಕೆ 'ಇಲ್ಲ'ವೆಂದು ಹೇಳಿ ಕಳಿಸಿಬಿಟ್ಟಳು.

ರಾಮನಾಥನಿಗೆ ಅವಳ ಮನಸ್ಸಿನಲ್ಲಿ ಮೂಡುತ್ತಿದ್ದ ಪರಿವರ್ತನೆ ಆಗಾಗ ಹೊಳೆಯುತ್ತಿತ್ತು.

ಮರುದಿನ ಸೀತಾ ಲೇಡಿಜ ಕ್ಲಬ್ಬಿಗೆ ಹೋದವಳು ಸಂಜೆ ಏಳು ಗಂಟೆಗೆ ಮನೆಗೆ ಬಂದಳು. ರಾಮನಾಥ ಆಗಲೇ ಆಫೀಸಿನಿಂದ ಮನೆಗೆ ಬಂದಿರಬಹುದು ಎಂದು ಅವಳ ವಿಚಾರ! ಆದರೆ ದಾದಿ ಹೇಳಿದ್ರಳು, "ಬೇಗನೇ ಬಂದು ಹೊರಟು ಹೋದರು—ಹೋಗುವ ಮುಂದೆ ಸಿನೆಮಾಕ್ಕೆ ಹೋಗುತ್ತಿದ್ದೇನೆ, ಬಾಗಿಲು ಮುಚ್ಚಿ ಕೊಂಡಿರು. ಅಮ್ಮಾ ಅವರು ಬರುವದು ಲೇಟ ಆಗಬಹುದು, ಎಂದು ಹೇಳಿದರು.

"ಸರಿ, ಯಾವ ಸಿನೆಮಾ ಅಂತೆ?" ಸೀತಾ ಕೇಳಿದಳು.

"ನನಗೆ ಅದೆಲ್ಲಾ ಗೊತ್ತಾಗದಮ್ಮ."

"ಜೊತೆಗೆ ಅವರ ಮಿತ್ರರಾರಾದರೂ ಇದ್ದರೆ?"

"ಗಂಡುಮಕ್ಕಳಲ್ಲಮ್ಮ, ಹೆಣ್ಮಗಳೊಬ್ಬಳು ಇದ್ದಳು; ಅವಳೂ ಈ ಕಾಲ ದೋಳೆ!"

"ಯಾರವಳು? ನಮ್ಮ ಮನೆಗೆ ಬರುವ ಲೀಲಾನೇ?"

ಅಲ್ಲಮ್ಮ, ಅವಳು ನನಗೆ ಗೊತ್ತು.

"ಹಾಗಾದರೆ ಯಾರೇ?"

"ಅವಳನ್ನು ನಾನು ಈವರೆಗೂ ನೋಡಿದ್ದಿಲ್ಲಮ್ಮಾ"

ಸೀತೆಯು ಮನಸ್ಸು ಹೊಯ್ದಾಡಿತು. "ಅವಳು ಯಾರಿರಬಹುದು? ಎಂದೂ ನನ್ನನ್ನು ಬಿಟ್ಟು ಸಿನೇಮಾಕ್ಕೆ ಹೋಗದವರು, ಇಂದು ಅವಳೊಡನೆ ಹೋಗಿದ್ದಾರೆಂದ ಮೇಲೆ?........ಮನೆಗಂತೂ ಬರಲಿ;........ ಓ ನಾನೂ ಕೇಳು ವಂತಿಲ್ಲ, ಅವರಿಗೂ ಸ್ವಾತಂತ್ರ್ಯ!....ಅಯ್ಯೊ ಈ ಸ್ವಾತಂತ್ರ್ಯ ತಲೆ ಹಿಡಿಯಿತು!!"

* * * * * *

"ಸಿನೇಮಾ ಚೆನ್ನಾಗಿದ್ದಿತೇ?" ರಾಮನಾಥ ಮನೆಗೆ ಬಂದೊಡನೆಯೇ ಸೀತಾ ಕೇಳಿದಳು.

"ಜೊತೆಗೆ ಅವಳಿದ್ದದರಿಂದ ಇನ್ನೂ ಚೆನ್ನಾಗಿದ್ದಿರಬೇಕು," ಸೀತಾ ವ್ಯಂಗ ವಾಗಿ ನುಡಿದಳು.

"ಹುಂ" ರಾಮನಾಥನ ಉತ್ತರ ಅಷ್ಟೇ ಸಮಾಧಾನಪೂರ್ಣವಿತ್ತು. ಉತ್ತರದಿಂದ ಸೀತೆಯು ಸಹನೆ ಮೀರಿತು: "ಅವಳಾರು?" ಕಿರಿಚಿಬಿಟ್ಟಳು ಸೀತಾ!

“ ಯಾರಿದ್ದರೇನು ? ಕೇಳಲು ನಿನಗೇನು ಅಧಿಕಾರ ?........ನನಗೂ ಅಷ್ಟೇ ಸ್ವಾತಂತ್ರ್ಯವಿದೆ ”

“ ಅಯ್ಯೋ ಈ ಹಾಳು ಸ್ವಾತಂತ್ರ್ಯಕ್ಕೆ ಬೆಂಕಿ ಹಾಕಲಿ ! ನನಗೆ ಈ ಸ್ವಾತಂತ್ರ್ಯ ಬೇಡವೇಬೇಡ. ನೀವೇ ತೆಗೆದುಕೊಳ್ಳಿರಿ, ” ದುಃಖದಿಂದ ಕಣ್ಣೀರೊರಸುತ್ತ ಸೀತಾ ರಾಮನಾಥನ ಮೈಮೇಲೆ ಬಿದ್ದುಬಿಟ್ಟಳು.

ಅವಳನ್ನು ಎತ್ತಿ ಮೈದಡವುತ್ತ ರಾಮನಾಥ ಕೇಳಿದ, “ ನೀನೇ ಅಲ್ಲವೇ ಸೀತಾ, ಸ್ವಾತಂತ್ರ್ಯ ಬೇಡಿದವಳು ?........ ಈಗ ಹೇಳು, ಸ್ವತಂತ್ರರಾರು ?........ ನಾನೇ.........ನೀನೆ ? ”



## ಕಾಯದೆ-ಕಾನೂನು

[ ಪ್ರಶ್ನೆಗಳನ್ನು ಕಳಿಸಿದವರು ತಮ್ಮ ಪ್ರಶ್ನೆಗಳಿಗೆ ಉತ್ತರ ದೊರೆಯಲಿಲ್ಲವೆಂದು ನಿರಾಶರಾಗಬೇಕಿಲ್ಲ. ಪ್ರಶ್ನೆಗಳು ಬಂದ ಕ್ರಮದಲ್ಲಿ ಅವುಗಳಿಗೆ ಉತ್ತರಗಳನ್ನು ಕೊಡಲಾಗುವದು. ]

೧. ಪ್ರಶ್ನೆ:— ನಾನೋರ್ವವಳು ೨೦ ವಯಸ್ಸಿನ ಬ್ರಾಹ್ಮಣ ವಿಧವೆ ಇರುವೆನು. ನನ್ನ ಲಗ್ನವು ೧೫ನೇ ವರ್ಷದಲ್ಲಿ ಆಗಿ ನನಗೆ ಓರ್ವ ಮಗನಿರುವನು. ನನ್ನ ಗಂಡನು ತೀರಿಕೊಂಡಿರುವನು. ನನ್ನ ಪಾಲಿಗೆ ಒಂದು ಚಿಕ್ಕ ಹೊಲ ಬಂದಿರುವದು. ಅದರ ಲಾವಣಿಯ ಹಣವು ನನಗೆ ಸಿಗುತ್ತಿರುವದಿಲ್ಲ. ತಂದೆಯವರ ಪರಿಸ್ಥಿತಿಯು ಚನ್ನಾಗಿದ್ದು ಅವರ ಹತ್ತಿರವೇ ನಾನು ಇರುತ್ತೇನೆ. ಶಿಕ್ಷಕಿಯು ಆಗುವಷ್ಟು ಶಿಕ್ಷಣವು ನಂದಾಗಿರುತ್ತದೆ. ಎಡಬಲಕಿನ ವಾತಾವರಣದ ನಿಮಿತ್ತ ಮನಸ್ಸಿನಲ್ಲಿ ಹಲವು ವಿಚಾರಗಳು ಬರುತ್ತಲಿವೆ. ಲಗ್ನವಾಗಬೇಕೋ ? ಲಗ್ನವಾದಲ್ಲಿ ಹೊಲವು ಮಗನಿಗೆ ಸಿಗುವದೋ ? ಇಲ್ಲವೊ ? ಕ್ಯಾಶ್ ಸರ್ಟಿಫಿಕೆಟ್ಟುಗಳು, ಬ್ಯಾಂಕಿನೊಳಗಿನ ಹಣ ಮೊದಲಿನ ಹೆಸರಿನಲ್ಲಿಯೇ ಸಿಗಬಲ್ಲವೋ ? ನೌಕರಿ ಮಾಡಿ ಮಗನನ್ನು ತೆಗೆದುಕೊಂಡು ಇರುವದು ಒಳ್ಳೆಯದೋ ? ಅಥವಾ ಎರಡನೆಯ ಲಗ್ನವಾಗುವದು ಒಳ್ಳೆಯದೋ ? ಇದರಲ್ಲಿ ಹೆಚ್ಚಿಗೆ ಒಳ್ಳೆಯದು ಯಾವದು ?

೨. ಉತ್ತರ:— ತಾವು ಎರಡನೆಯ ಲಗ್ನವಾದಲ್ಲಿ ಮೊದಲು ಲಗ್ನವಾದ ಮನೆತನದ ಆಸ್ತಿಯಮೇಲೆ ತಮಗೆ ಎಳ್ಳಷ್ಟು ಹಕ್ಕು ಉಳಿಯಲಾರದು. ಮತ್ತು ತಮ್ಮ ಮಗನ ಹಕ್ಕು ಸಂಪೂರ್ಣವಾಗಿ ಉಳಿಯುವದು. ಮುಂದಿನ ತೊಡಕುಗಳನ್ನು ತಪ್ಪಿಸುವ ದೃಷ್ಟಿಯಿಂದ ಲಗ್ನದ ಮೊದಲೇ ಅವುಗಳ ವ್ಯವಸ್ಥೆ ಮಾಡುವದು ಒಳ್ಳೆಯದು. ೨ನೇ ಲಗ್ನವಾಗುವ ವಿಷಯವು ವೈಕ್ತಿಕ ವಿರುವದರಿಂದ ಅದರ ಸಲ್ಲ

ವಾಗಿ ಸಲಹಕೊಡುವದು ಬಹಳ ಬಿಗಿಇರುತ್ತದೆ. ಅದರಲ್ಲಿಯೂ ಒಂಡೆರಡು ಮಾತು ಹೇಳಬಹುದು. ೧ ಮಾತು:— ತಮ್ಮ ವಯಸ್ಸು ತೀರ ಚಿಕ್ಕದಿರುವದು. ಈಗಿನ ಕಾಲದ ಎಷ್ಟೋ ಹುಡುಗೆಯರ ಲಗ್ನವು ಕೂಡ ಆಗುತ್ತಿರುವದಿಲ್ಲ. ಮತ್ತೊಂದು ಮಾತೆಂದರೆ ತಮ್ಮದೂ ಮತ್ತು ತಮ್ಮ ಮಗನದು ಎಷ್ಟೇ ಜೀವದ ಸಂಬಂಧವಿದ್ದರೂ ತಮ್ಮದೊಂದು ಸ್ವತಂತ್ರ್ಯ ಜೀವನವು ತಮ್ಮ ಮಕ್ಕಳ ಮರಿಗಳಿಂದ ಬೇರೆ ಇದ್ದದ್ದು ಸೃಷ್ಟಿಯ ಧರ್ಮ. ಆದರದಾದರೂ ಬಯಕೆಗಳನ್ನು ಪೂರ್ಣಮಾಡುವದರಲ್ಲಿ ತಪ್ಪು ಯಾವದೂಇಲ್ಲ. ಆದ್ದರಿಂದ ಮೊದಲು ನೀವು ಸ್ವಾವಲಂಬಿಯಾಗಿ ನಿಮ್ಮನ್ನು ಸ್ವಾವಲಂಬಿಯಾಗಿಯೇ ಉಳಿಗೊಡುವಂಥ ಉದಾರಮತವಾದಿ ಗಂಡ ಸಿಕ್ಕಲ್ಲಿ ಮತ್ತು ನಿಮ್ಮ ಮಗನನ್ನು ತನ್ನ ಮಗನಂತೆ ತಿಳಿಯಲು ಸಿದ್ಧನಿದ್ದಲ್ಲಿ ತಾವು ಲಗ್ನವಾಗುವದರಲ್ಲಿ ಯಾವ ಪಾಪವೂ ಇಲ್ಲ. ತಮ್ಮ ಮಗನ ಸಂಬಂಧವಾದ ತಮ್ಮ ಕರ್ತವ್ಯವನ್ನು ತಮ್ಮ ಗಂಡನ ಸಂಬಂಧವಾಗಿದ್ದ ಕರ್ತವ್ಯವನ್ನು ಏನೇಆದರೂ ತಮ್ಮ ಸ್ವಂತ ವಿಕಾಸದ ಬಗ್ಗೆ ಮಾಡತಕ್ಕಂಥ ಕರ್ತವ್ಯದ ಅರಿವನ್ನೂ ಯಾವಾಗಲೂ ಇಟ್ಟುಕೊಂಡು ನಡೆಯುವದು ನಿಮ್ಮ ಮೊದಲನೇ ಕರ್ತವ್ಯ ಇರುತ್ತದೆ ಈ ಮೂರು ಕರ್ತವ್ಯಗಳ ತಾರತಮ್ಯ ದೃಷ್ಟಿಕೋನವನ್ನು ಇಟ್ಟುಕೊಳ್ಳದೆ ಸ್ತ್ರೀಯರು ನಡೆದದ್ದರಿಂದ ಅವರು ವೈಯಕ್ತಿಕ ಹಾಗೂ ಸಾಮಾಜಿಕ ದುಃಖಕ್ಕೆ ಈ ಛಲನೆಗೆ ಮತ್ತು ಧರ್ಮ ನೀತಿ ಕಾಯದೆಗಳ ತೊಂದರೆಗಳಿಗೆ ಈಡಾಗಿದ್ದಾರೆ.

---

## ಸಾದರ ಸ್ವೀಕಾರ

(೧) **ಹನ್ನೊಂದನೆಯ ಅವತಾರ :** ಲೇ. ಬೀಚಿ. ಬಳ್ಳಾರಿಯ ತಿಮ್ಮ ಸಾಹಿತ್ಯ ಮಾಲೆಯಿಂದ ಪ್ರಕಾಶಿತ ಪುಟ ೧೪೮. ಬೆಲೆ ೨-೮-೦.

(೨) **ಗಾಳಿ ಮಾತು :** ಲೇ. ಸಪ್ತಋಷಿಗಳು. ಬಳ್ಳಾರಿಯ ತಿಮ್ಮ ಸಾಹಿತ್ಯ ಮಾಲೆಯ ಪ್ರಕಟನೆ. ಪುಟ ೬೩. ಬೆಲೆ ೧-೦-೦

(೩) **ತ್ರಿಶೂಲಿಗಳು :** ಲೇ. ಜಿ. ಪಿ. ಸು. ಎನ್ಕೆ ಬೀಚಿ. ತಿಮ್ಮ ಸಾಹಿತ್ಯ ಮಾಲೆಯಿಂದ ಪ್ರಕಾಶಿತ. ಪುಟ ೯೨. ಬೆಲೆ ೧-೪-೦

(೪) **ಯುಗ ಪುರುಷ :** ಲೇ. ಎಸ್. ಎಲ್. ನಾರಾಯಣ ಭಟ್ಟ, ಮತ್ತು ಕೊಡತ್ತೂರು ಅನಂತ ಪದ್ಮನಾಭ ಉಡುಪ. ಕೆ. ಎ. ಉಡುಪ ಯುಗ ಪುರುಷ ಆಫೀಸ ಕಿನ್ನಿಗೋಲಿಯಿಂದ ಪ್ರಕಾಶಿತ. ಕನ್ನಡ ಮಾಸಪತ್ರಿಕೆ. ಪುಟ ೨೬. ಬೆಲೆ ೦-೪-೦

(೫) **ಕುಡಿಮಿಂಚು :** ಲೇ. ಎನ್. ಎಸ್. ಗದಗಕರ. ಬೆಲೆ ೦-೧೪-೦ ಮನೋಹರ ಗ್ರಂಥ ಭಾಂಡಾರ, ಧಾರವಾಡದ ಪ್ರಕಾಶನ. ಪು. ೬೪

**ಡಾಕ್ಟರ:—** [ ಮುಂಗೈಯಲ್ಲಿಯ ಘಡಿಯಾರ ನೋಡುತ್ತಾ ] ಮೀಟಿಂಗಿನ ಟೈಮು ಆಯಿತು. ಹೋಗುವುದರೊಳಗೆ ಐದ ಹತ್ತು, ನಿಮಿಷ " ಲೇಟ್ " ಆಗುವುದು. ಹಾಗೆ ' ಲೇಟು ' ಮಾಡಿ ಹೋಗುವುದರಲ್ಲೆ ಗಾಂಭೀರ್ಯ ಮತ್ತು ಮರ್ಯಾದೆ. ಈ ದಿನ ಸಭೆಯಲ್ಲಿ ಜೋರಾಗಿ ಭಾಷಣ ಮಾಡಿ ಎಲ್ಲರು ಚಪ್ಪಾಳೆ ತಟ್ಟುವಂತೆ ಮಾಡುತ್ತೇನೆ. ಕುಚೇಷ್ಟೆ ಮಾಡದ ವಿನಹಾ ಪ್ರತಿಷ್ಠೆ ಬೆಳೆಯುವದಿಲ್ಲವೆಂದು ಮರಾಠಿಯಲ್ಲಿ ಗಾದೆ ಮಾತೇ ಇದೆ. ಕೂಲಿಕಾರರಿಗೆ ಹುರಿದುಂಬಿಸಿದರೆ ಅವರ ಮತ್ತು ಶ್ರೀಮಂತರ ತಿಕ್ಕಾಟದಲ್ಲಿ ನಮ್ಮ ನಾಯಕತ್ವಕ್ಕೆ ಹೆಚ್ಚು ಶೋಭೆಯು ದೊರೆಯುವುದು. ನಾಯಕರಲ್ಲಿ ಚೆನ್ನಾಗಿ ಭಾಷಣ ಮಾಡುವ ಯೋಗ್ಯತೆ, ಸಾಮಾನ್ಯ ಜನರಲ್ಲಿದ್ದ ಪರ ಪ್ರತ್ಯಯನೇಯ ಬುದ್ಧಿಯು ಲಾಭ ಪಡೆಯುವ ಜಾಣತನ, ಆತ್ಮ ಪ್ರತಿಷ್ಠೆಯ ಹವ್ಯಾಸ, ಇವೇ ಮುಂತಾದ ಗುಣಗಳಿದ್ದರೆ ಸಾಕು. " ಉತ್ಸವ ಪ್ರಿಯೋಽಯಂ ಜನಾಃ " ಸಭೆ, ' ಕಾನ್ಫರೆನ್ಸ್ ' ಮುಂತಾದ ಆಧುನಿಕ ಸಮಾರಂಭಗಳಲ್ಲಿ ನನ್ನ ಪ್ರೌಢಿಯು ಜನರಿಗೆ ಕಂಡು ಬಂದರೆ ನನ್ನ ' ಪ್ರ್ಯಾಕ್ಟೀಸು ' ಹೆಚ್ಚಾಗುವದು. ಬರೆ ಒಂದು ಮೂಲೆಯಲ್ಲಿ M.B.B.S. ಎಂದು ಬೋರ್ಡು ಹಾಕಿಕೊಂಡರೆ ಕೇಳೋರು ಯಾರು ? ' ಪ್ರಾಕ್ಟೀಸು ' ಹೆಚ್ಚಿದನಂತರ ಈ ಸಾರ್ವಜನಿಕ ಕೆಲಸಗಳನ್ನು ಬಿಟ್ಟರಾಯಿತು. ಉದ್ಯೋಗಗಳಿಲ್ಲದವರ ಕೆಲಸಗಳಿವು. ಉದ್ಯೋಗಿಲ್ಲದ ಹಜಾಮನಂತೆ. [ ಎಂದು ನಗುತ್ತ ಹೊರಡುವನು. ]



## ಅಂಕ ೨ [ ದೃಶ್ಯ ೫ ]

[ ಸ್ಥಳ : " ಟವುನ್ ಹಾಲ್ " ಸಾಯಂಕಾಲದ ಆರುಘಂಟೆ ]

[ ರತಿಲಾಲ್ ಸೇಟ್, ಶ್ರೀಧರಲಾಲ, ಭಾಗ್ಯವತಿ, ಸಮಶೀಲ, ಮುಂತಾದ ಪ್ರತಿಷ್ಠಿತ ಜನರು ಮತ್ತು ಭೀಮಪ್ಪ, ಇನ್ಸುರೆನ್ಸ್ ಎಜೆಂಟ್ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಆರೆಂಟು ಪೋಲಿಸರು—ಕೂಲಿಕಾರರು ಕುಳಿತಿರಲು ತೆರೆಯೇಳುವುದು. ]

**ಶ್ರೀಧರಲಾಲ:—**

I most heartily propose Mr. Ratilal to the chair. We can not have a better president than the young but wealthy and influential friend who has got to deal with thousands of mill hands and is well experianced in the art of Commrcial use of labour Power in the Country.

**ಸಮಶೀಲ:—** I second the proposal.

[ ರತಿಲಾಲರು ಅಧ್ಯಕ್ಷಸ್ಥಾನವನ್ನು ವಹಿಸುವರು. ಕಾರ್ಯಕ್ರಮದ ಪಟ್ಟಿ ಯೊಂದನ್ನು ಅವರಿಗೆತ್ತಿಕೊಡುವನು.]

**ರತಿಲಾಲ:—** [ ಪ್ರೊಗ್ರ್ಯಾಮವನ್ನು ಓದುತ್ತ ]

ಶ್ರೀ. ಭಾಗ್ಯವತಿಯವರಿಂದ ಪ್ರಾರ್ಥನೆ.

**ಭಾಗ್ಯವತಿ:—** [ ಪ್ರಾರ್ಥನೆ ಪ್ರಾರಂಭಿಸುವಳು.]

[ ಹಾಡು : " ರಭಿ ಸುಭಮೆ ಸದಾ ಭಗವಾನ್ " ಎಂಬಂತೆ ]

ಕೇಳಿ ಜಗದಿ ಸದಾ ಶ್ರಮಜೀವಿಗಳೇ
ಮಾಡಿರಿ ಐಕ್ಯದೀ..........
ಸುಕಾರ್ಯ ಮಾಡಿರಿ ಐಕ್ಯದೀ ‖ ಪಲ್ಲ ‖
ಐಕ್ಯತೆಯೇ ಜಗದೇಳಿಗೆಯು ಗುಟ್ಟು
ಬೇಡಾ ಬಡಿದಾಟ........
ಧರ್ಮರೂಪದಲಿ, ರಾಜದಾಶೆಯಲಿ
ಕುಣಿವುದು ಅದು ಮುಂದಾಳು
ಜನರಲಿ ಬೆಳೆವುದು ಅದು ಮುಂದಾಳು
ಸ್ವಾರ್ಥಿ ಸಿರಿವಂತ ಜನರ
ಸ್ವಾರ್ಥವದುವೆ ಮುಂದಾಳು ‖ ೧ ‖
ಹೊಟ್ಟೆಗೆ ರೊಟ್ಟಿಯಿಲ್ಲದ ಮನುಜರೆ
ಸಮತಾ ಬಾವುಟವ,
ಸಾಮ್ಯದ ಸೂಚಕ, ಶುಭ್ರ, ಸುಜ್ಯೋತಿ
ಸಮತಾ ಬಾವುಟವ,
ಸೊಬಗಿನ ಬಾವುಟವ ಧರಿಸಿರಿ
ಮಾಡಿರಿ ಐಕ್ಯದೀ
ಸುಕಾರ್ಯ ಮಾಡಿರಿ ಐಕ್ಯದೀ ‖ ೨ ‖

**ರತಿಲಾಲ:—** [ ಪ್ರಾರ್ಥನೆ ಮುಗಿದನಂತರ-ರತಿಲಾಲ ಮತ್ತೆ ಪ್ರೊಗ್ರಾಮವನ್ನು ನೋಡಿ ]

ಈಗ ಸ್ವಯಂಸೇವಕರಿಂದ ಕೂಲಿಕಾರರ ಹಾಡು :

**ಸ್ವಯಂಸೇವಕ:—** [ಕೂಲಿಕಾರರನ್ನು ಪ್ರೊತ್ಸಾಹಿಸುವ ಒಂದು ಹಾಡನ್ನು ಹೇಳುವನು]

ಬನ್ನಿ ಬನ್ನಿರೆಲ್ಲ ಸಂಘವನ್ನು ಸೇರುವಾ
ನಮ್ಮ ನಮ್ಮ ಹಕ್ಕಿಗಾಗಿ ಒಂದು ಗೂಡಿ
ಸಾಗುವ– ಒಂದುಗೂಡಿ ಕಾದುವ ‖ ಪಲ್ಲ ‖
ನಾವು ದುಡಿದುದೆಲ್ಲ ನಮ್ಮ ಧನಿಯ ಲಾಭಕ್ಕಾಗಿದೆ
ದುಡಿದು ದುಡಿದು ಸಾಯುವುದೊಂದೆ ನಮ್ಮ ಪಾಡು ಆಗಿದೆ
ನಮ್ಮ ದೇಶದಲ್ಲಿ ಇಂದು ಧನಿಕ ರಾಜ್ಯವೀಗಿದೆ

ಇಂಥ ರಾಜ್ಯ ಅಳಿಸಲಿವಾಗೆ ಸಂಘ ಶಕ್ತಿ ಬೇಕಿದೆ ॥ ೧ ॥
ಮನುಜರಾಗಿ ಹುಟ್ಟಿ ನಾವು ಗುಲಾಮರಂತೆ ಬಾಳ್ವದೆ
ಯುವಕರೇಳಿ ಮುದುಕರೇಳಿ ಜಯ ಪತಾಕೆ ನೆತ್ತುವ
ನಮ್ಮ ರಾಜ್ಯ ನಾವು ರಚಿಸ ಸ್ವರ್ಗ ಸುಖದಿ ಬಾಳುವ ॥ ೨ ॥

ಬನ್ನಿ ಬನ್ನಿ ಬನ್ನಿರೆಲ್ಲ ಸಂಘವನ್ನು ಸೇರುವ
ನಮ್ಮ ನಮ್ಮ ಹಕ್ಕಿಗಾಗಿ ಒಂದುಗೂಡಿ ಕಾದುವ

[ಡಾಕ್ಟರ್‌ರು ಪ್ರವೇಶಿಸುವರು]

**ಸಮಶೀಲ:—** ಶ್ರಮಜೀವಿಗಳ ಜೀವನವು ಬಹಳ ಹೀನತರಗತಿಯದಾಗಿದೆ ಎಂಬುದು ಎಲ್ಲರಿಗೂ ತಿಳಿದ ಮಾತಾಗಿದೆ. ಅವರ ಸ್ಥಿತಿಯನ್ನು ಸುಧಾರಿಸಲು ಬೇರೆ ಬೇರೆಯವರಿಗೆ ಇದ್ದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ಅವುಗಳಲ್ಲಿ ಹೆಚ್ಚು ಜನರಿಗೆ ಸಮ್ಮತವಾದ ಉಪಾಯವನ್ನು ನಿರ್ಧರಿಸಿ ಅದನ್ನು ಕಾರ್ಯಾಚರಣೆಗೆ ತರಬೇಕೆಂಬುದರ ಸಲುವಾಗಿ ಈ ಸಭೆಯನ್ನು ಕರೆಯಲಾಗಿದೆ.

**ಶ್ರೀಧರಲಾಲ:—** ಕಾಯಿದೆ ಮಂಡಳವನ್ನು ನಮ್ಮ ಅಧೀನದಲ್ಲಿ ತೆಗೆದುಕೊಂಡು ಬಡವರಿಗೆ ಅನುಕೂಲವಾಗುವಂಥಾ ಕಾನೂನುಗಳನ್ನು ಮಾಡುವ Constitutional ಮಾರ್ಗವೇ ನನಗೆ ಸಮ್ಮತ.

**ಡಾಕ್ಟರ್:—** ಶ್ರೀಮಂತರಿಗೆ ಇಂಥ ಹೇಡಿದಾರಿಗಳೆ ಸಮ್ಮತವಾದವು. [ಚಪ್ಪಾಳೆ ಬೀಳುವುವು] ಶ್ರಮಜೀವಿಗಳು ಒಂದಾಗಿ, ಕೆಲಸವನ್ನು ಬಿಟ್ಟು ಅಸಹಕಾರ ಮಾಡುವುದೇ ನನಗೆ ಸಮ್ಮತವು. ನಮ್ಮಂಥಾ ಸುಶಿಕ್ಷಿತ ಮೇಲಿನತರಗತಿಯ ಮಧ್ಯಮವರ್ಗದ ಯುವಕ ಜನಾಂಗದಿಂದ ಸಹಾಯ ಪಡೆದು ಬಡವರು ಶ್ರೀಮಂತರಿಂದ ಅನೇಕ ಸೌಕರ್ಯಗಳನ್ನು ಸಂಪಾದಿಸಬಲ್ಲರು.

**ಸಮಶೀಲ:—** ಈಗಿನ ಕಾಯಿದೆಮಂಡಳಗಳೆಂದರೆ ಶ್ರೀಮಂತರ ಕೈಯೊಳಗಿನ ಕೈಗೊಂಬೆ ಇದ್ದಹಾಗೆ. ಸರಕಾರವೆಂದರೆ ಆಸ್ತಿವಾನರ ಸಹಾಯದಮೇಲೆ ಅವರ ಸಂರಕ್ಷಣೆ ಮತ್ತು ಪೋಷಣೆಗಳಿಗಾಗಿದ್ದ ಒಂದು ಸಂಸ್ಥೆಯು. ಕಾಯದೆ ಮಂಡಳ ಮತ್ತು ಸರಕಾರದ ಸಹಾಯದಿಂದ ಬಡವರ ಸ್ಥಿತಿಯನ್ನು ಸುಧಾರಿಸುವುದೆಂದರೆ ಬೆಕ್ಕಿನ ಸಹಾಯದಿಂದ ಇಲಿಗಳು ಕಾಶೀಯಾತ್ರೆ ಮಾಡಿದಂತೆಯೇ ಸರಿ. ಡಾಕ್ಟರು ಹೇಳಿದ ಹಾಗೆ ಕೆಲಸ ಬಿಟ್ಟು ಮನ್ಯಾಗೆ ಕೂಡುವುದು ಅಸಾಧ್ಯ. ಒಂದು ಹೊತ್ತಿನ ಊಟಕ್ಕಾದರೂ ಇಲ್ಲದ ಬಡಜನರು ಧನಿಕರ ಜೊತೆಯಲ್ಲಿ ಆರ್ಥಿಕಯುದ್ಧವನ್ನು ಹೂಡುವುದು ಸಾಧ್ಯವಿಲ್ಲ ಕಾರಣ ನನ್ನ ತಿಳುವಳಿಕೆಯ ಪ್ರಕಾರ ಶ್ರಮಜೀವಿಗಳ ಸರಕಾರವನ್ನು ಸ್ಥಾಪಿಸಲು ಶ್ರಮಜೀವಿ ಮಂಡಳವನ್ನು ಸ್ಥಾಪಿಸಬೇಕು. ಮತ್ತು ಶ್ರಮಜೀವಿಗಳ ಮಾನವ ಮುಕ್ತಿದಳವನ್ನು ಸ್ಥಾಪನೆಮಾಡಿ ಈಗಿನ ಈ ವೈಯಕ್ತಿಕ ಆಸ್ತಿ ಮತ್ತು ಅದರಿಂದಾಗಿ ಉಂಟಾಗಿದ್ದ ಆರ್ಥಿಕ ವ್ಯಭಿಚಾರವನ್ನು ನಿರ್ಮೂಲ ಮಾಡಬೇಕು.

[ ಇಷ್ಟರಲ್ಲಿ ‘ ಸರ್ಕಲ್ ಇನ್ಸ್‌ಪೆಕ್ಟರ್ ’ ಎದ್ದು ಪೋಲಿಸರಿಗೆ ಸಂಜ್ಞೆ ಮಾಡುವನು ]

ಇನ್ಸ್‌ಪೆಕ್ಟರ್:— [ಸಭೆಯ ಕಡೆಗೆ ತಿರುಗಿ] ನಿಲ್ಲಿಸಿರಿಲ್ಲಿ—ನಿಮ್ಮ ಭಾಷಣಗಳನ್ನು ರಾಜದ್ರೋಹದ ಮಾತು. ಹೂಂ !........[ಗರ್ಜಿಸುತ್ತಾ] ಈ ಸರಕಾರದ ಬದಲು ಮತ್ತೊಂದು ಸರಕಾರ ಅದೂ ವಿಮುಕ್ತಿಧಳಗಳ ಸಹಾಯದಿಂದ ಹೂಂ !

Mr. President ! you must disolve this meeting. I declare this meeting to be on unlawful assembly. If it is not immediately disolved I will order lathi charge.

[ ರತಿಲಾಲ ಗಾಬರಿಗೊಂಡು ಎದ್ದುನಿಲ್ಲುವನು. ಎಲ್ಲರಿಗೂ ಹೋಗಿರೆಂದು ಸೂಚನೆ ಮಾಡಿ ತ್ವರದಿಂದ ತಾನೂ ಎದ್ದುಹೋಗುವನು. ಸಮಶೀಲ ಮತ್ತು ಭಾಗ್ಯವತಿ ಇಬ್ಬರೆ ನಿಲ್ಲುವರು. ಇನ್ಸ್‌ಪೆಕ್ಟರ್ ಅವರ ಕಡೆ ರೋಷದಿಂದ ಹೋಗುತ್ತ ನೋಡುವನು.]



# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ
ಕನ್ನಡ ಮಾಸಪತ್ರಿಕೆ.

ಸಂಪುಟ ೧ | ಫಾಲ್ಗುಣ ಮಾರ್ಚ ೧೯೫೩ | ಸಂಚಿಕೆ ೧೦

## ಸಂಪಾದಕೀಯ



ಮೊನ್ನೆ ಫೆಬ್ರುವರಿ ೨೮ ರಂದು ಹೊಸ ದೆಹಲಿಯ ಕೌನ್ಸಿಲ್ ಆಫ್ ಸ್ಟೇಟ್ಸ್ ಭವನದಲ್ಲಿ, ಭಾರತದ ಆಧುನಿಕ ಸಾಹಿತ್ಯದ ಆರೋಗ್ಯವನ್ನು ಕುರಿತು ಸರಸವಾದ ಚರ್ಚೆಯೊಂದು ನಡೆಯಿತು. ಮದರಾಸಿನ ಪ್ರತಿನಿಧಿಗಳು, ಗ್ರಂಥಕರ್ತೃಗಳಿಗೆ ಅವರ ಕಾರ್ಯಕ್ಕೆ ಅವಕಾಶ ಸಿಗುವಂತೆ ಆರ್ಥಿಕ ಸಹಾಯನ್ನು ಮಾಡಿ, ತಮ್ಮ ಕೃತಿಗಳನ್ನು ತಾವೇ ಪ್ರಕಾಶಗೊಳಿಸಿ, ಯೋಗ್ಯ ಬೆಲೆಗೆ ಮಾರುವಂತಾಗಬೇಕು ಎಂದು ತಮ್ಮ ಅಭಿಪ್ರಾಯವನ್ನು ಮುಂದಿಟ್ಟರು. ಸ್ವದೇಶ ವಿದೇಶಗಳ ಹಿಂದಿನ ಮತ್ತು ಇಂದಿನ ಒಳ್ಳೆಯ ಸಾಹಿತ್ಯವನ್ನು, ಹಿಂದುಸ್ತಾನದ ಎಲ್ಲ ಭಾಷೆಗಳಲ್ಲಿ ಪರಿವರ್ತಿಸಿ, ಎಲ್ಲ ಜನರಿಗೂ ಅದರ ಸವಿಯು ದೊರೆಯುವಂತಾಗಬೇಕು. ಗದ್ಯ, ಪದ್ಯ, ನಾಟಕ, ವಿಮರ್ಶೆ, ರಾಜನೀತಿ,

ತತ್ವಜ್ಞಾನ ಎಲ್ಲವೂ ಅದರಲ್ಲಿ ಸೇರಬೇಕು. ಅಲ್ಲದೆ ವಿವಿಧ ಭಾಷೆಗಳಲ್ಲಿ ನುರಿತ ಬರಹಗಾರರ ಮಧ್ಯೆ ಸಂಪರ್ಕವನ್ನುಂಟುಮಾಡಲು, ಪರಸ್ಪರರ ಪರಿಚಯದಿಂದ ಅವರವರ ಕೃತಿಗಳಿಗೆ ಮೆರುಗನ್ನು ಕೊಡಲು ರಾಷ್ಟ್ರೀಯ ಸಾಹಿತಿಕ ದಳ್ಳಾಳಿಗಳ ಕವಿಒಟಿಯೊಂದಿರಬೇಕು. ಶಾಲೆ, ಕಾಲೇಜ ವಿಶ್ವವಿದ್ಯಾಲಯಗಳ ಎಲ್ಲ ವರ್ಗಗಳಿಗೆ ಬೇಕಾಗುವ ಎಲ್ಲ ಭಾಷೆಗಳ ಪಠ್ಯಪುಸ್ತಕಗಳ ರಾಷ್ಟ್ರೀಕರಣವಾಗಬೇಕು.

ರಾಷ್ಟ್ರದಲ್ಲಿ ಎಂತಹ ಅಘಟಿತ ಘಟನೆ ನಡೆದರೂ ಅದರ ಪ್ರತಿಬಿಂಬ ಮಾತ್ರ ಇಂದಿನ ಸಾಹಿತ್ಯದಲ್ಲಿ ಮೂಡಿಬಾರದಾಗಿದೆ. ಪ್ರಗತಿಶೀಲರಾಷ್ಟ್ರ ಎಲ್ಲ ಕ್ಷೇತ್ರಗಳಲ್ಲೂ ಮುಂದೆ ಕಾಲಿಕ್ಕಲೇಬೇಕು. ಆದರೆ ಸಾಹಿತ್ಯಕ್ಷೇತ್ರದಲ್ಲಿ ಇಂದು ನಾವು ಎಲ್ಲಿದ್ದೇವೆ ? ಮುಂದುವರಿಯಲು ಅನುವುಮಾಡಿಕೊಡುವದು ಸರಕಾರದ ಉದ್ದೇಶವಾಗಿರಬೇಕು. ಯೋಜನಾ ಆಯೋಗದವರು ಇದರೆಡೆಗೆ ದುರ್ಲಕ್ಷ್ಯಮಾಡಿದರೆ ಘಟನೆಯನ್ನು ಸಿದ್ಧಪಡಿಸುವವರೂ ಇತ್ತಕಡೆಗೆ ಲಕ್ಷ್ಯಕೊಡಬೇಡವೇ ? ದೇಶದ ಬೌದ್ಧಿಕ, ಸಾಂಸ್ಕೃತಿಕ ತಳಹದಿ, ನಿರ್ದಿಷ್ಟ ಮಟ್ಟವನ್ನಾದರೂ ಮುಟ್ಟದಿದ್ದರೆ ಘಟನೆ ಕಾರ್ಯಗತವಾಗುವದು ಹೇಗೆ ? ಜಗತ್ತಿನ ಇತಿಹಾಸವನ್ನು ಹೊರಳಿಸಿ ನೋಡುವದಾದರೆ, ರಾಜಕೀಯ ಪುನರುಜ್ಜೀವನವಾದಾಗ ಸಾಹಿತ್ಯಕ ಪುನರುಜ್ಜೀವನವೂ ಅದನ್ನು ಹಿಂಬಾಲಿಸಿದೆ ಎಂಬುದು ನಮ್ಮ ಲಕ್ಷ್ಯಕ್ಕೆ ಬರುವ ಮಾತು. “ ದಾಸ್ಯದ ಮಾಗಿ ಕಳೆಯಿತು; ಸ್ವಾತಂತ್ರ್ಯದ ವಸಂತ ಆಗಮಿಸಿತು. ಆದರೆ ನವನವೋನ್ಮೇಷಶಾಲಿಗಳಾದ ಸಾಹಿತ್ಯ ಸುಮನಗಳೆಲ್ಲಿವೆ ?

ಮದರಾಸಿನ ಪ್ರತಿನಿಧಿ ಶ್ರೀ ರಾಮರಾಯರು ಹಿಂದುಸ್ತಾನದಲ್ಲಿ ಗ್ರಂಥಕಾರ ಮತ್ತು ಪ್ರಕಾಶಕರಿಗೆ, ಕೃತಿರಚನೆ, ಪ್ರಕಾಶನಗಳಿಗೆ ಸಾಕಷ್ಟು ಅವಕಾಶವಿಲ್ಲ, ಪ್ರೋತ್ಸಾಹವಿಲ್ಲ ಎಂಬ ಮಾತಿನ ಮೇಲೆ ಜೋರುಕೊಟ್ಟು ಮಾತನಾಡಿದರು. ಆದರೆ ಕಾಕಾ ಕಾಲೇಲಕರರು, ಗ್ರಂಥಕಾರನಿಗೆ ಸರಕಾರದಿಂದ ನಿಯಮಿತವಾಗಿ ನಿರ್ದಿಷ್ಟವಾದ ಆರ್ಥಿಕ ಪ್ರೋತ್ಸಾಹ ದೊರೆತಲ್ಲಿ, ಅವನ ಬೌದ್ಧಿಕ ಸ್ವಾತಂತ್ರ್ಯ ಉಳಿಯಲಾರದು ಎಂಬ ತಮ್ಮ ಅಭಿಪ್ರಾಯವನ್ನು ಪ್ರಕಟಗೊಳಿಸಿದರು.

ಶ್ರೀಮತಿ ಮುನಷಿಯವರು ಪಠ್ಯಪುಸ್ತಕಗಳ ರಾಷ್ಟ್ರೀಕರಣದ ಬಗ್ಗೆ ತಮ್ಮ ಸಮ್ಮತಿಯನ್ನು ಸೂಚಿಸಿದರು. ಕಾಪಿ ರೈಟ ಕಾಯ್ದೆಯಲ್ಲಿ ತಿದ್ದುಪಡಿಯಾಗಬೇಕೆಂಬ ಸೂಚನೆಗೆ ಎಲ್ಲರ ಬೆಂಬಲವೂ ದೊರೆಯಿತು, ಒಳ್ಳೆಯ ಸಾಹಿತ್ಯವನ್ನು ಉಳಿದೆಲ್ಲ ಭಾಷೆಗಳಿಗೂ ತರ್ಜುಮೆ ಮಾಡುವ ವಿಚಾರವನ್ನು ಗೃಹಮಂತ್ರಿ ಡಾ. ಕಟಜು ಅವರು ಸಮರ್ಥಿಸಿದರು.

ಸಾಹಿತ್ಯ, ಸಂಸ್ಕೃತಿ, ಆಚಾರ ವಿಚಾರಗಳಲ್ಲಿ, ದೇಶ, ಕಾಲ, ಭಾಷಾನಿರಪೇಕ್ಷ ಬುದ್ಧಿಯಿಂದ ಒಳ್ಳೆಯದಾದುದನ್ನು ಸ್ವೀಕರಿಸೋಣ. ಆದರೆ ಅನ್ಯ ಸಂಸ್ಕೃತಿಯ ಮೋಹಕ್ಕೆ ನಮ್ಮನ್ನು ಮಾರಿಕೊಳ್ಳುವದು ಬೇಡ. ನಮ್ಮ ಜನಕ್ಕೂ, ದೇಶಕ್ಕೂ ಹಿಡಿಯುವ ಅಂಶವನ್ನಷ್ಟೇ ನಾವು ಆಯ್ದುಕೊಳ್ಳಬೇಕಲ್ಲವೆ ?

* * * * * *

ರಾಷ್ಟ್ರದಲ್ಲಿ ಮಾಧ್ಯಮಿಕ ಶಿಕ್ಷಣ, ಉಚ್ಚ ಶಿಕ್ಷಣ, ಯಾವ ಭಾಷೆಯಲ್ಲಿ ಕೊಡಲ್ಪಡಬೇಕು ಎಂಬುದು ಇಂದು ನಮ್ಮೆದುರಿದ್ದ ಒಂದು ಸಮಸ್ಯೆ. ಅಪಾರ ಜನಸಂಖ್ಯೆಯುಳ್ಳ ಚೈನಾದಲ್ಲಿಯೂ ಈಗ ಈ ಪ್ರಶ್ನೆಗೆ ಅವಕಾಶವಿಲ್ಲ. ಬಳಿಕ ನಮ್ಮಲ್ಲಿಯೇ ಹೇಗೆ ಬಂತು ? ರಾಜ ಭಾಷೆ, ರಾಷ್ಟ್ರಭಾಷೆಗಳು ಎಂದಿನಿಂದಲೂ ಒಂದೇ ಆಗಿದ್ದರೆ ಈ ಪ್ರಶ್ನೆ ಇಷ್ಟೊಂದು ತೀಕ್ಷ್ಣವಾಗಿ ಬರುತ್ತಿರಲಿಲ್ಲ, ಒಂದು ಕಾಲದಲ್ಲಿ ರಾಷ್ಟ್ರಭಾಷೆಗಿಂತ ರಾಜಭಾಷೆಗೆ ಪ್ರಾಧಾನ್ಯವಿತ್ತು. ಆಗಿನಿಂದ ಮಾಧ್ಯಮಿಕ, ಉಚ್ಚ ಶಿಕ್ಷಣಗಳನ್ನು ರಾಜಭಾಷೆಯಲ್ಲಿಯೇ ತಿಳಿದುಕೊಳ್ಳುವದು ನಮಗೆ ರೂಢವಾಗಿದೆ. ರಾಷ್ಟ್ರದಾದ್ಯಂತ ವ್ಯವಹಾರಕ್ಕೆ ಒಬ್ಬ ವ್ಯಕ್ತಿಗೆ ಮಾತೃಭಾಷೆ ಪ್ರಾಂತಭಾಷೆ (ಎರಡೂ ಒಂದೇ ಆಗಿದ್ದರೆ ಬಹಳ ಒಳ್ಳೆಯದು) ರಾಷ್ಟ್ರಭಾಷೆ, ರಾಜಭಾಷೆ ಹೀಗೆ ನಾಲ್ಕು ಭಾಷೆಗಳನ್ನಾದರೂ ಕನಿಷ್ಟ ಪಕ್ಷ ಕಲಿಯಲೇಬೇಕಿತ್ತು ! ಮಾತೃಭಾಷೆಯಲ್ಲಿಯೇ ಎಲ್ಲ ಶಿಕ್ಷಣವೂ ದೊರೆಯಬಹುದಾದರೆ ಒಳ್ಳೆಯದೇ. ಆದರೆ ಅಸಂಖ್ಯ ಭಾಷೆ, ಉಪಭಾಷೆಗಳಿಂದ ತುಂಬಿರುವ ಭಾರತದಲ್ಲಿ, ಈ ವಿಚಾರವನ್ನು ಸಾಮೂಹಿಕವಾಗಿ ಬಳಕೆಯಲ್ಲಿ ತರುವದು ಹೇಗೆ ? ಮಾಧ್ಯಮಿಕ ಶಿಕ್ಷಣದ ಆಯೋಗದವರು ಒಪ್ಪಿಸಿದ ವರದಿಯನ್ನು ಕುರಿತು ಶ್ರೀ ಅಗರವಾಲರು ಹೇಳುವ ಮಾತಿನಲ್ಲಿ ಮಾತೃಭಾಷೆಗೆ, ಎಲ್ಲ ಅವಸ್ಥೆಗಳಲ್ಲೂ ಹೆಚ್ಚಿನ ಮಹತ್ವವಿದೆ ಎಂಬ ಮಾತು ಸ್ಪಷ್ಟವಾಗುತ್ತದೆ. ಮೂಲ ಶಿಕ್ಷಣವು (Basic Education) ಇಂದು ನಮ್ಮ ಶಿಕ್ಷಣದ ಅಡಿಗಲ್ಲಾಗಬೇಕೆಂಬುದು ಎಲ್ಲರಿಗೂ ಸಮ್ಮತವೇ; ಇದರ ಯಶಸ್ಸು ಈಗ ಪ್ರಾಯೋಗಿಕ ಅವಸ್ಥೆಯಲ್ಲಿಲ್ಲ, ಆದರೆ ನಿಶ್ಚಿತವಾಗಿದೆ, ಮಾಧ್ಯಮಿಕ ಶಾಲೆಗಳಲ್ಲಿ ಇಂಗ್ಲೀಷು ಐಚ್ಛಿಕವಿಷಯವಾಗಿದ್ದರೆ ಸರಿ; ಆದರೆ ಆಶ್ಚರ್ಯ ! ಹಲವಾರು ಪಾಲಕರು ಮತ್ತು ಶಿಕ್ಷಕರು ಇಂಗ್ಲೀಷೇ ಶಿಕ್ಷಣದ ಮಾಧ್ಯಮವಾಗಬೇಕೆಂದು ಆಗ್ರಹತೊಡುತ್ತಿದ್ದಾರೆ ! ಅದೇಕೆ ? ಅದನ್ನು ಬಿಟ್ಟರೂ ಅಷ್ಟೇ ಯಶಸ್ವಿಯಾಗಿ ಕಾರ್ಯವಾಗುತ್ತಿದ್ದರೆ ಅದೇಕೆ ಬಿಡಬಾರದು ? ನಾವು ಅನ್ಯ ಸಂಸ್ಕೃತಿಗೆ ಮಾರುಹೋದುದಕ್ಕೆ ಒಂದು ಉದಾಹರಣೆಯೇ ಇದು ?

‡ ‡ ‡ ‡ ‡

ಬಳ್ಳಾರಿ ಜಿಲ್ಹೆಯನ್ನು ಆಂಧ್ರದಲ್ಲಿ ಸೇರಿಸಬೇಕೆಂಬ ನ್ಯಾ. ಮೂ. ವಾಂಚೂರ ವರದಿಯನ್ನು ಕೇಳಿ ಕನ್ನಡ ನಾಡು ದಿಗಿಲುಗೊಂಡಿದೆ. ಬಳ್ಳಾರಿಯಲ್ಲಿ ಬಹುಸಂಖ್ಯಾಕರ ಮಾತೃಭಾಷೆ ಕನ್ನಡ. ಅಲ್ಲಿರುವ ಒಂಬತ್ತು ತಾಲೂಕುಗಳಲ್ಲಿ ಆರು ನಿರ್ವಿವಾದವಾಗಿ ಕನ್ನಡ ನಾಡಿಗೆ ಸೇರತಕ್ಕವು, ಉಳಿದ ಮೂರರಲ್ಲಿ ಕನ್ನಡ ತೆಲುಗು ಎರಡೂ ಇದೆ. ಭಾಷೆ, ಭೂಗೋಲಗಳೆರಡರ ದೃಷ್ಟಿಯಿಂದ ಪರಿಶೀಲಿಸಿದರೂ ಬಳ್ಳಾರಿ ಕನ್ನಡ ಪ್ರಾಂತಕ್ಕೇ ಸೇರಬೇಕಾದುದು.

ಅಲ್ಲದೆ ನಿರ್ವಿವಾದ ಭಾಗಗಳನ್ನಷ್ಟೇ ಸೇರಿಸಿ ಪ್ರಾಂತರಚನೆ ಮಾಡುವದಾಗಿ ಸರಕಾರ ಎಂದೋ ಆಶ್ವಾಸನವಿತ್ತಿದೆ. ಹೀಗಿದ್ದ ಬಳಿಕ ವಾದಗ್ರಸ್ತ ಭಾಗಗಳನ್ನು ಆಂಧ್ರದಲ್ಲಿ ಸೇರ್ಪಡೆ ಮಾಡಿ, ನಾಡಿನ ಶಾಂತಿಯನ್ನು ಕೆದಕಿ ತೊಡರುಗಳನ್ನು

ಸ್ವಾಗತಿಸುವದು ಎಂದಿಗೂ ಸರಿಯಾಗಲಾರದು. ಬಳ್ಳಾರಿಯವರು ಈಗಾಗಲೇ ತಮ್ಮ ವಿರೋಧವನ್ನು ವ್ಯಕ್ತಪಡಿಸಿದ್ದಾರೆ. ಕರ್ನಾಟಕ ಪ್ರಾಂತ ರಚನೆಯಾಗುವ ವರೆಗೆ ಬಳ್ಳಾರಿಯು ಮದ್ರಾಸಿನಲ್ಲಿಯೇ ಇರಲಿ ಅಥವಾ ಮೈಸೂರಿಗೆ ಸೇರಲಿ ಆದರೆ ಆಂಧ್ರಕ್ಕೆ ಬೇಡ ಎಂಬ ಆಶಯದ ಬಿನ್ನಹ ಪತ್ರ ಒಂದನ್ನು, ಮುಂಬಯಿ ವಿಧಾನ ಸಭೆಯ ಅರುವತ್ತು ಜನ ಸದಸ್ಯರು ಮುಖ್ಯ ಮಂತ್ರಿಗಳಿಗೆ ಕಳಿಸಿದ್ದಾರೆ. ಗಡಿ ಪ್ರದೇಶದ ಬಗ್ಗೆ, ರಾಜಧಾನಿಯ ಬಗ್ಗೆ ಒಮ್ಮತವಿಲ್ಲದ್ದರಿಂದ ಆಂಧ್ರಪ್ರಾಂತರಚನೆ ಮುಂದೆ ಬೀಳುತ್ತಿದೆ. ಆ ಮಾತು ಬೇರೆ. ಆದರೆ ಯಾವ ತತ್ವಗಳಿಗಾಗಿ ಆಂಧ್ರ ಪ್ರಾಂತ ರಚಿತವಾಗಲಿದೆಯೋ ಅವೇ ತತ್ವಗಳಿಗಾಗಿ, ಕರ್ನಾಟಕ ಪ್ರಾಂತವೂ ಬೇಗ ರಚಿತವಾಗಬೇಕಾದುದು ನ್ಯಾಯ.

* * * * *

## ನಮ್ಮ ಮಾತು

ಈ ಸಂಚಿಕೆಯಿಂದ ಪ್ರಾರಂಭಿಸಿ ಪ್ರತಿಸಲ, ಕಲಾವಿದ, ಕಲಾವಿದೆಯರೊಬ್ಬರ ಪರಿಚಯವನ್ನು ವಾಚಕವರ್ಗಕ್ಕೆ ಮಾಡಿಕೊಡುವ ಆಶೆ, ' ವೀರಮಾತೆ, ' ಗಿದೆ. ಆದಕ್ಕನುಗುಣವಾಗಿ ಚಿತ್ರಕಲೆಯಲ್ಲಿ ನಿಷ್ಣಾತರಾದ ಶ್ರೀ ಬಡಿಗೇರರ ಪರಿಚಯವನ್ನು ತಾವಿಲ್ಲಿ ಕಾಣಬಹುದು. ಈ ದೃಷ್ಟಿಯಿಂದ ದೂರ ದೂರದ ಸೋದರ-ಸೋದರಿಯರು ಲೇಖಗಳನ್ನು ಕಳಿಸಿದರೆ, ಅವುಗಳಿಗೆ ಸ್ವಾಗತವಿದೆ. ಮುಂದಿನ ಸಂಚಿಕೆಗಾಗಿ, ಶ್ರೀ ಗದಗಕರರ ಲೇಖನಿಯಿಂದ ಹೊರಹೊರಟ, ಪ್ರಸಿದ್ಧ ವಂಗ ಕಾದಂಬರಿಕಾರ ಶರಚ್ಚಂದ್ರರ ಪರಿಚಯ ಕಾದಿದೆ.

ಈ ಸಂಚಿಕೆಯಲ್ಲಿ ಶ್ರೀಮತಿ ಕೊಪ್ಪರರ ' ದಿನಚರಿಯಲ್ಲಿಯ ಕೆಲಪುಟಗಳು, ' ಸುಧಾದೇವಿಯ, ' ಅಂತರ್ಮುಖಿ ' ಗಮನಾರ್ಹವಾಗಿವೆ.

' ಅಕ್ಕನ ಪೆಟ್ಟಿಗೆ ' ಯ ಗಾತ್ರ ದಿನದಿನಕ್ಕೆ ದೊಡ್ಡದಾಗುತ್ತ ನಡೆದದ್ದರಿಂದ ಅನಿವಾರ್ಯವಾಗಿ ನಾವು ಕೆಲವು ನಿಯಮಗಳನ್ನು ಮಾಡಬೇಕಾಗಿದೆ. ೧೮ ನೆಯ ತಾರೀಖನ್ನು ಮೀರಿಬಂದ, ಚಿಕ್ಕ ಸೋದರ, ಸೋದರಿಯರನ್ನು ನಿರಾಶೆಗೊಳಿಸಬೇಕಾದುದಕ್ಕೆ ವಿಷಾದವಾಗುತ್ತದೆ. ಪ್ರತಿತಿಂಗಳ ೧೮ ನೆಯ ತಾರೀಖಿಗೆ ಮೊದಲು ಓಲೆ ನಮ್ಮ ಕೈಸೇರಿರಬೇಕು.

ಸ್ಪರ್ಧೆಯ ಮನೆಗಳನ್ನು ತುಂಬುವಾಗ, ' ವೀರಮಾತೆ, ' ಯ ಪ್ರತಿಯಿಂದಲೇ ಮುದ್ರಿತ ಮನೆಗಳನ್ನೆತ್ತಿಕೊಂಡು ತುಂಬಿ ಕಳಿಸಬೇಕು. ಜೊತೆಗೆ ಅಂಚೆಯ ತಿಕೀಟನ್ನು ಇಡಲು ಮರೆಯಬಾರದು.

' ಅಕ್ಕನ ಪೆಟ್ಟಿಗೆ ' ಗೆ ಒಗಟಗಳನ್ನು ಕಳಿಸುವಾಗ, ಒಗಟಗಳ ಉತ್ತರಗಳನ್ನು ಕೆಳಗೇ ಬರೆಯಬೇಕು. ಉತ್ತರಗಳಿಲ್ಲದೆ, ನಾವು ಒಗಟಗಳನ್ನು ಪ್ರಕಟಿಸುವದಿಲ್ಲ. ಅಲ್ಲದೆ ನೀವು ಕಳಿಸುವ, ಕಥೆ, ಕವನ, ನಗೆಹನಿ, ಒಗಟ ಇನ್ನೆಲ್ಲಿಯೂ ಪ್ರಕಟವಾಗಿರಕೂಡದು ತಿಳಿಯಿತೇ ?

'ಪೆದ್ದನ ಪ್ರಶ್ನೋತ್ತರ' ಗಳನ್ನು ಕುರಿತು ಸೋದರಿಯೊಬ್ಬರು, "ವಿದ್ಯಾದಾನವು ಪವಿತ್ರ ಕಾರ್ಯ. ಇದನ್ನು ನೀಡುವ ಶಿಕ್ಷಕನನ್ನು ಹೀಗಳೆದು ಬರೆವುದೇಕೆ? ಹಾಸ್ಯಕ್ಕೀಡುಮಾಡುವದೇಕೆ?" ಎಂದು ಪ್ರಶ್ನಿಸಿದ್ದಾರೆ. ನಿಜ, ಯಾರನ್ನೂ ನೋಯಿಸದೆ, ಎಲ್ಲರನ್ನೂ ನಗಿಸುವದೇ ಒಳ್ಳೆಯ ನಗೆ. ಒಂದೊಂದು ಸಲ ಯಾವುದೇ ವ್ಯಕ್ತಿಯ ದೋಷಕ್ಕಾಗಿ ನಗೆ ಬಂದಾಗ, ನಗೆಯು ಪರಿಣಾಮವಾಗಿ ಆ ವ್ಯಕ್ತಿ ದೋಷವನ್ನು ಬಿಟ್ಟುಕೊಟ್ಟರೆ ಒಳ್ಳೆಯದೇ; ಪರಿಣಾಮವಾಗದೆ, ಮನಸ್ಸಿನ ಅಂಚಿಗೂ ತಾಗದೆ ಹೋದರೆ ಅದೂ ಒಂದು ವಿಧ! ಈ ಮಾತನ್ನು ಪೆದ್ದನ ಹೆಡ್ಡತನವನ್ನು ಅನುಲಕ್ಷಿಸಿ ಹೇಳಲಾಗಿದೆ, ಅಷ್ಟೇ; ನಗೆ ಮೂಡಿ ಮಾಯವಾದಾಗ, ಸಂದರ್ಭದೊಡನೆ ಹೊಂದಿಕೊಂಡು ಹೋಗದ ಪೆದ್ದನ ಮಂದಮತಿಗೆ ಮನ ಕರಗುತ್ತದೆ.

ಯಾವುದೇ ಲೇಖನವನ್ನು ಕುರಿತು ನಮ್ಮ ಓದುಗರು ಸೂಕ್ತ ಸೂಚನೆ ಕೊಟ್ಟಲ್ಲಿ ನಾವು ಅವರಿಗೆ ಆಭಾರಿ.

ಬರುವ ಜೂನ ತಿಂಗಳ ಸಂಚಿಕೆಯೇ ವಾರ್ಷಿಕ ಸಂಚಿಕೆ, ಅದರಲ್ಲಿ ಎಲ್ಲ ರೀತಿಯಿಂದಲೂ ಸಾಧ್ಯವಿದ್ದಷ್ಟು ಸೂಕ್ತ ವ್ಯತ್ಯಾಸಗಳನ್ನು ಮಾಡಬೇಕೆಂದು ನಮ್ಮ ಆಶೆ; ಆ ಸಂಚಿಕೆಗೆ ಲೇಖನಗಳನ್ನು, ಕವಿತೆ, ನಾಟಕಗಳನ್ನು ಕಳಿಸುವವರು ಮಾತ್ರವೇ ಒಂದನೆಯ ತಾರೀಖಿನೊಳಗಾಗಿ ನಮ್ಮ ಕೈಸೇರುವಂತೆ ಕಳಿಸಬೇಕು ಜಾಹೀರಾತುಗಳನ್ನು ಕಳಿಸುವವರು ವಿವರಗಳಿಗಾಗಿ ನಮ್ಮ ಕಾರ್ಯಾಲಯಕ್ಕೆ ಬರೆಯಬೇಕು.

---

# ಆಶಾ

(ಒಂದು ಡಾಯರಿಯೊಳಗಿನ ಕೆಲವು ಪುಟಗಳು)

ಬರೆದವರು:—ಶ್ರೀಮತಿ ಸುಶೀಲಾ ಕೊಪ್ಪರ, ಅಜಮೀರ.

ಜೂನ ೧೨-೧೯೪೪

ಇಂದು ನಮ್ಮ ಲಗ್ನದ ಹುಟ್ಟದದಿವಸ ಆಚರಿಸಿದೆವು. ಅದಕ್ಕಾಗಿ ಅರವಿಂದರು ನನಗಾಗಿ ಒಂದು ಡಾಯರಿ ತಂದರು. ಅವರಿಗೇನೋ ಎಷ್ಟೋ ವರ್ಷಗಳಿಂದ ಡಾಯರಿ ಬರೆಯುವ ಅಭ್ಯಾಸವಂತೆ. ದಿನಾಲು ಯಾರಿಗೆ ಗೊತ್ತು ಅಂಥವಿಷಯಗಳು ಏನಿರುತ್ತವೆಯೋ ಬರೆದಿಡುವಂಥ ಮಹತ್ವದವು! "ಕಾಣಿಕೆ ಎಂದರೆ ಏನಾದರೂ ಆಭರಣ ಸೀರೆ ನೆನಪು ಉಳಿಯುವಂಥ ಸುಂದರ ವಸ್ತುಗಳನ್ನು ತರುತ್ತಾರೆ ಜನ! ನೀವೇನು ತಂದಿರಿ ನೋಟಬುಕ್ಕಿನಂಥ ಡಾಯರಿ! ಅದರಲ್ಲಿ ನಾನು ಬರೆಯುವದಾದರೂ ಏನು? ಅರವಿಂದರಿಗಾಗಿ ಎಲೆ ಮಡಿಚಿ ಕೊಟ್ಟೆ, ಅವರ ಕಾರು ಮರೆ

ಯಾಗುವ ತನಕ ನೋಡುತ್ತ ನಿಂತೆ, ಸಂಜೆಗೆ ಸಿನೆಮಾಕ್ಕೆ ಹೋದೆ ಮುಂಜಾನೆ ಮೆರೆಯಲಿಕ್ಕೆ ಹೋದೆ ಇನ್ನೇನು ಬರೆಯುವದು ? ನಿಮ್ಮ ಹೊರತು ಎರಡನೇ ಸುದ್ದಿಯೇ ನನಗಿಲ್ಲ. ನಿಮ್ಮ ಕಲ್ಪನೆಗಳನ್ನು ಬರೆಯುತ್ತ ಕೂತರೆ ಈ ಡಾಯರಿ ಮೂರು ದಿವಸಕ್ಕೂ ಸಾಲಲಿಕ್ಕಿಲ್ಲ ! " ಎಂದು ಹಾಸ್ಯಮಾಡಿದೆ.

" ಆಶಾ, ಡಾಯರಿ ಎಂದರೆ ಹೃದಯವನ್ನು ತೋರಿಸುವ ಕನ್ನಡಿ. ಮನುಷ್ಯನ ನಿಜ ಸ್ವರೂಪ ತೋರಿಸುವದು. ನೀನೂ ಇಂದಿನಿಂದ ಬರೆಯಲು ಸುರುವು ಮಾಡು " ಎಂದರು. " ಅದರಿಂದೇನಾಗಬೇಕಾಗಿದೆ " ಎಂದೆ. " ಆ ಕನ್ನಡಿಯಲ್ಲಿ ನೋಡಿಕೊಂಡು ತಮ್ಮನ್ನು ತಾವೇ ತಿದ್ದಿಕೊಳ್ಳಬಹುದು " ಎಂದರು. " ನಿಮ್ಮ ಮೋರೆಯಮೇಲಿನ ಎರಡು ಸುಂದರ ಕನ್ನಡಿಗಳು ನನಗೆ ನೋಡಲಿಕ್ಕೆ ಇದ್ದಾಗ ಇನ್ನಾವ ಕನ್ನಡಿಯ ಅವಶ್ಯಕತೆಯೂ ನನಗಿಲ್ಲ " ಎಂದು ಅವರ ಕಣ್ಣಲ್ಲಿ ನನ್ನ ಮೋರೆಯನ್ನು ನೋಡಿಕೊಳ್ಳುವವರಂತೆ ತೀರ ಸಮೀಪಕ್ಕೆ ಹೋಗಿ ಬಾಗಿದೆ. ಆದರೆ ಅರವಿಂದರು ಆ ಸುಸಂಧಿಯ ಲಾಭ ಪಡೆಯದೆ ಬಿಡಲಿಲ್ಲ.......... ಛಿಃ— ಇದನ್ನೇನು ಬರೆದೆ! ಅರವಿಂದರು ಇದನ್ನುನೋಡಿದರೆ ಬರೆದ ತಪ್ಪಿಗೆ ಅದೇ ಪ್ರಾಯಶ್ಚಿತ್ತ ಕೊಟ್ಟಾರು !

† † † † †

ಜೂನ ೧೩-೧೯೪೮

ನಿನ್ನೆಗೆ ಲಗ್ನವಾಗಿ ಒಂದು ವರುಷವಾಗಿಹೋಯಿತು. ಆದರೂ ನಿನ್ನೆಯೇ ಮದಿವೆಯಾದವರಂತೆ ಮೆರೆಯುತ್ತೇವಲ್ಲ. ಲಗ್ನದ ಧ್ಯೇಯವೇ ಸುಖವಿಲಾಸ ಎಂದು ತಿಳಿದುಬಿಟ್ಟಿದ್ದೇವೆ. ಹೌದು ! ಎಲ್ಲರಿಗೂ ನನಗೆ ದೊರೆತಂಥ ರತ್ನ ದೊರೆಯುವದು ಸಾಧ್ಯವೆ ?.... ಅರವಿಂದರಂಥ ರೂಪ ಗುಣ ಸಂಪತ್ತು ಇದ್ದ ಪತಿ ನನಗೆ ದೊರೆಯಬೇಕಾದರೆ ಅದೆಷ್ಟು ಜನ್ಮದ ಪುಣ್ಯಬೇಕೊ ! (ಅರ್ಥಾತ್ ಪೂರ್ವಜನ್ಮಗಳಿದ್ದರೆ!) ನಾನೇನೋ ಬಹಳೇ ಚಲುವೆ ಎಂದು ಕಾಲೇಜಿನಲ್ಲಿ ಎಲ್ಲರ ತಿಳುವಳಿಕೆಇತ್ತು. ಆದರೆ ಅರವಿಂದರು ಮಾತ್ರ ನನ್ನ ಮೇಲೆ ಎಲ್ಲರೂ ' ಚಾಕಲೇಟ ' ಎಸೆದಂತೆ ಎಂದೂ ಎಸೆಯಲಿಲ್ಲವಲ್ಲ ! ಅದೇ ನನಗೆ ಅವರಮೇಲೆ ಪ್ರೀತಿಯನ್ನು ಹುಟ್ಟಿಸಿರಬಹುದು. ಕಾಲೇಜಿನಲ್ಲಿ ನಾನು ಚಲುವೆ ಮತ್ತು ' ಸ್ಕಾಲರ ' ಎಂದು ಮೆರೆಯುವ ಜಂಭದ ಕೋಳಿ. ಆದರೆ ನಾನೇ ಅರವಿಂದರಿಗೆ ಒಂದು ಸಲ ಪ್ರೇಮಭಿಕ್ಷೆ ಬೇಡಿದೆನಲ್ಲ ! ಹಾಯ್ ! ಎಂಥ ನಾಚಿಕೆಗೇಡಿತನ ಮಾಡಿದೆ ಅಂದು ! ನೆನಪಾದರೆ ಇಂದೂ ನಾಚಿಕೆ ಬರುತ್ತಿದೆ ! ನಾನು ಮಾತ್ರ ಹುಚ್ಚು ಹುಚ್ಚಾಗಿ ಸುರಿದಿರಬಹುದೆಂದು ನನಗೆ ನಿಸಿತು. ಆದರೆ ಅರವಿಂದರ ಚಿತ್ತ ಮಾತ್ರ ಅಂದು ಚಲಿಸಲಿಲ್ಲ. ಅವರು ಮುಗುಳ್ನಗೆ ನಗುತ್ತ ನನ್ನ ಬೆನ್ನಮೇಲಿಟ್ಟ ಕೈ ಒಂದು ವರ್ಷವಾಗಿಹೋದರೂ ಅಲ್ಲಿಯೇ ಇದ್ದಂತೆ ಭಾಸವಾಗುತ್ತದೆ ! ಆ ಸುಖಸ್ಪರ್ಶ ಬೆನ್ನಮೇಲೆ ಮೂಡಿದಂತಾಗಿದೆ. ಆ ವೇಳೆಗೆ ನಾನು ಭೂಮಿಯಲ್ಲಿದ್ದೆನೋ ಸ್ವರ್ಗದಲ್ಲಿದ್ದೆನೋ ಎಂದು ಹೇಳಲಿಕ್ಕೆ

ಇಂದಿಗೂ ಬಾರದೂ. ಛೆ! ಹುಚ್ಚಳಂತೆ ಅಂದಿನ ಮಾತನೆಲ್ಲ ಇಂದೇಕೆ ಬರೆದೆನೋ! ಅಂದಿನದೆಲ್ಲ ಇಂದೇ ಆದಷ್ಟೆಂದು ತಿಳಿದಿದ್ದೇನೋ ಏನೋ! ಇಷ್ಟೊತ್ತಿನವರೆಗೆ—

* * * * * *

ನವ್ಹೆಂಬರ ೧೬-೧೯ಳಲ

ಇಂದು ಕ್ಲಬ್ಬಿನಲ್ಲಿ ನೋಡಿದ ಆ ಪಂಜಾಬೀ ಹುಡಿಗೆ ಎಂಥ ಚುರುಕು! ಹುಡಿಗೆ ಎಂದರೆ ಹುಡಿಗೆಯಲ್ಲ ಹೆಂಗಸೆಂದರೆ ಅವರಲ್ಲಿಯೂ ಕೂಡಿಕೊಳ್ಳಲಿಕ್ಕೆ ಬಹಳ ಚಿಕ್ಕವಳು. 'ತರುಣಿ' ಎಂದರೆ ಒಪ್ಪುವದು ಆದರೆ ನನಗೆ ಆಶ್ಚರ್ಯವಾದದ್ದೆಂದರೆ ಇಂದೆಯೇ ಹೊಸವಾಗಿ ಮುಂಬಯಿಗೆ ಬಂದವಳು. ಎಲ್ಲರೊಡನೆಯೂ ಎಷ್ಟು ನಿಸ್ಸಂಕೋಚವಾಗಿ (Free) ಮಾತನಾಡುತ್ತಿದ್ದಳು? ನನ್ನ ಹತ್ತರ ಮಾತನಾಡುವಾಗಲಂತೂ ಎಷ್ಟೋವರ್ಷಗಳಿಂದಲೂ ಪರಿಚಯವಿದ್ದ ಗೆಳತಿಯಂತೆ ಮಾತನಾಡಿದಳು. ಅಷ್ಟೇಏಕೆ? "ಆಶಾ ಬೇಹೆನ್ ನೀನು ಕಟ್ಟಿಕೊಂಡ ತುರುಬು ಚನ್ನಾಗಿಲ್ಲ ಇದು ನೋಡು ನಾನೊಂದು ತರ ತೋರಿಸುವೆ ಎಂದವಳೇ ನನ್ನ ತಲೆಯಲ್ಲಿಯ 'ಹೇರಪಿನ್'ಗಳನ್ನು ಒಮ್ಮೆಲೇ ತೆಗೆಯಲಿಕ್ಕೇ ಸುರುವು ಮಾಡಿದಳು. "ಇರಲಿ ಬಿಡೇ" ಎಂದರೂ ಕೇಳಲಿಲ್ಲ. ತಾನೂ ನನ್ನ ಮನೆಗೆ ಬರುವದಾಗಿ ತಾನೇ ಹೇಳಿದಳು. ಆ ಹುಡಿಗೆ ನನ್ನ ಮನಸ್ಸನ್ನೇ ಸೆಳೆದಿದ್ದಾಳೆ, ಕೇವಲ ಒಂದು ತಾಸಿನ ಪರಿಚಯದಲ್ಲಿ ನನ್ನ ಹೃದಯದಲ್ಲೊಂದು ಸ್ಥಾನ ಪಡೆದಿದ್ದಾಳೆ. ಕಾಣಿಸಲಿಕ್ಕೇನೋ ಚನ್ನಾಗಿಯೇ ಇದ್ದಾಳೆಂದರೆ ಅಡ್ಡಿ ಇಲ್ಲ. ಆದರೆ ತುಟಿಗೆ ಸ್ವಲ್ಪ ಬಣ್ಣ ಹಚ್ಚದೇ ಇದ್ದರೆ ಗಲ್ಲದ ಮೇಲ್ಭಾಗದಕ್ಕೆ ಹಚ್ಚಿದ ಗುಲಾಬೀ ಬಣ್ಣ ಇನ್ನೂ ಸ್ವಲ್ಪ ತೆಳ್ಳಗಾಗಿದ್ದರೆ ಇನ್ನೂ ಚನ್ನಾಗಿ ಕಾಣಬಹುದಾಗಿತ್ತೇನೋ! ಇರಲಿ ಅದನ್ನೆಲ್ಲ ತೆಗೆದುಕೊಂಡು ನನಗೇನು ಮಾಡತಕ್ಕದ್ದಿದೆ? ಹುಚ್ಚು ಹುಚ್ಚಾಗಿ ಇವಳ ವಿಷಯವನ್ನೆಲ್ಲ ಯಾಕೆ ಬರೆದೆನೋ ನನಗೇ ಗೊತ್ತಿಲ್ಲ. ಅರವಿಂದರು ಇದನ್ನು ಓದಿದರೆ "ಸುಶಿಕ್ಷಿತರಿರಲಿ ಅಶಿಕ್ಷಿತರಿರಲಿ ನಮ್ಮ ಹೆಂಗಸರಿಗೆ ಎರಡನೇ ಉದ್ಯೋಗವೇ ಇಲ್ಲ. ಎರಡನೆಯವರ ಸೀರೆ ರೂಪ ಬಣ್ಣ ಇದನ್ನೇ ನೋಡುವದು. ನೋಡಿದ್ದು ನೋಡಲಿ ಅದನ್ನು ಅವನ್ನು ಡಾಯರಿಯಲ್ಲಿಯೂ ಬರೆಯುವದೆ?" ಎಂದು ಹಾಸ್ಯಮಾಡಬಹುದು. ಕಾರಿನ ಸಪ್ಪಳವಾಯಿತು. ಬಂದೇಬಿಟ್ಟರೇನೋ!

* * * * * *

ನವ್ಹೆಂಬರ ೩೦-೧೯ಳಲ

ಇಂದು ಮಧ್ಯಾಹ್ನ ಕ್ಲಬ್ಬಿನಲ್ಲಿ ಭೆಟ್ಟಿಯಾದ ಆ ಹುಡಿಗೆ ಮನೆಗೆ ಬಂದಿದ್ದಳು. ಅವಳ ಹೆಸರು ಚಂದ್ರಪ್ರಭೆಯಂತೆ ಚಹಾ ಉಪಹಾರದ ನಂತರ ನನ್ನ ಮನೆಯನ್ನು ನೋಡಲು ಅಪೇಕ್ಷಿಸಿದಳು. ಅವಳಿಗೇನೋ ನನ್ನ ಮನೆ ಬಹಳೇ ಸೇರಿತಂತೆ, ನನ್ನ ಮನೆಯಲ್ಲಿಯ ಪ್ರತಿಯೊಂದು ವಸ್ತುವು 'ಕಲಾ' ಈ ದೃಷ್ಟಿಯಿಂದಲೇ ಆರಿಸಿ ತಂದು ಇಟ್ಟಂತೆ ಅವಳಿಗೆನಿಸಿತಂತೆ. ನಾನೂ ಮತ್ತು ಅರವಿಂದರು ಕಲಾಕಾರರೂ

(Artists) ಆದರ್ಶ ದಂಪತಿಗಳೂ ಇರುವವೆಂದು ವರ್ಣನೆಮಾಡಿದಳು. ಅವಳು ಹೇಳಿದಂತೆ ನಾವೇನೂ ಕಲಾಕಾರರಲ್ಲ ಕಲಾಪ್ರೇಮಿಗಳು ಎನ್ನಲು ಏನೂ ಅಭ್ಯಂತರವಿಲ್ಲ. ಅವಳೆಂದಂತೆ ಆದರ್ಶದಂಪತಿಗಳಿಲ್ಲದಿದ್ದರೂ ' ಸುಖಿದಂಪತಿಗಳು ' ಎನ್ನಲಡ್ಡಿ ಇಲ್ಲ ! ಹಾಂ ! ' ಸುಖಿದಂಪತಿಗಳು ' ಎಂದೊಡನೆ ನೆನಪಾಯಿತು ಇತ್ತೀಚೆಗೆ ಎಷ್ಟೋ ಕಡೆಗೆ ವರ್ತಮಾನಪತ್ರದ ಸುದ್ದಿಗಾರರು, ಸಿನೆಮಾ ನಟಿಯರಿಗೆ ಅವರು ಸುಪ್ರಸಿದ್ಧ ನಟಿ ಹೇಗೆ ಆದರು ? ಎಂಬದನ್ನು ತಿಳಿದು ಅದನ್ನು ಜನಕ್ಕೆ ತಿಳಿಸಿ ಕೊಡಲು ಅವರ ಸಂದರ್ಶನಪಡೆಯುವರು. ಆಗ ಅವರು ತಮ್ಮ ಅಡಿಗೆಯ ವಿಷಯದ ಅಭಿರುಚಿಯನ್ನೂ ತಮ್ಮ ಆಟ ನೋಟಗಳ ಅಂದಚಂದಗಳನ್ನೂ ತಾವು ಸಾಕಿದ ನಾಯಿಯ ಬಾಲವನ್ನೂ ವರ್ಣಿಸುವರು. ಮತ್ತೊಬ್ಬ ಸುದ್ದಿಗಾರ ಯಾವನಾದರೊಬ್ಬ ' ಶತಾಯುಷಿ ' ಯನ್ನು ಸಂದರ್ಶಿಸಿದಾಗ ಅವನು ತನ್ನ ನಿತ್ಯದ ' ವಾಕಿಂಗ ' ತಪ್ಪದ ' ವ್ಯಾಯಾಮ ' ಅರಹೊಟ್ಟೆ ಊಟಗಳನ್ನು ಬಣ್ಣಿಸುವನು. ಇಂಥ ಸಂದರ್ಶನದ ಸುದ್ದಿಗಳು ಆಗೀಗ ವರ್ತಮಾನಪತ್ರಗಳಲ್ಲಿ ಓದಲು ಸಿಗುವವು. ಇಂಥ ಒಬ್ಬ ಸುದ್ದಿಗಾರ " ನಿಮ್ಮ ಸುಖಿದಾಂಪತ್ಯದ ರಹಸ್ಯವೇನು ? " ಎಂದು ನನ್ನನ್ನು ಕೇಳಿದರೆ ನನಗೆ ಹೇಳಲಿಕ್ಕೆ ವಿಷಯಗಳೇ ಇಲ್ಲವಲ್ಲ ! ತೋರಿಸಲಿಕ್ಕೆಮಾತ್ರ ಒಂದು ಸುಂದರ ಮುಖವಿರುವದು. ಅದೂ ನನ್ನದಲ್ಲ. ಅರವಿಂದರದು ! ನೋಡಿದವರು ಕೇಳಿದವರು ಮೂರ್ಖ ಎನ್ನಲಿಕ್ಕಿಲ್ಲವೆ ? ಇದನ್ನೇನು ಬರೆದೆ ! ಒಂದು ವೇಳೆ ವರ್ತಮಾನಪತ್ರದ ಸಂಪಾದಕರಿಗೆ ಇಂಥ " ಸುಖದಾಂಪತ್ಯದ ರಹಸ್ಯ " ಗಳನ್ನು ಬರೆಯುವದೇ ಆದರೆ ಲಗ್ನವಾಗಿ ಒಂದೆರಡು ವರ್ಷಗಳಾದ ನನ್ನಲ್ಲಿಗೆ ಏತಕ್ಕೆ ಬಂದಾರು ? ಕಡಿಮೆ ಎಂದರೆ ಒಂದು ' ಡಝನ್ ' ಅಥವಾ ಅದಕ್ಕೂ ಹೆಚ್ಚು ಮಕ್ಕಳಿದ್ದ ಮನೆಗೆ ನುಗ್ಗಬಹುದು. ಆಗ ಆ ತಾಯಿತಂದೆಗಳಿಗೆ ತಮ್ಮ ಮಕ್ಕಳ ಪಾಲನೆ ಪೋಷಣೆಯಲ್ಲಿ ವೇಳೆ ದೊರೆಯದೆ ಆ ಸುದ್ದಿಗಾರರಿಗೆ ತಮಗೆ " ಈಗ ವೇಳೆ ಇಲ್ಲ " ಎಂದು ' ಅಪಾಯಿಂಟಮೆಂಟ ' ಕೊಡಲಿಕ್ಕೆ ತಡಮಾಡಿ ನಂತರ ಸ್ವಲ್ಪವೇ ವೇಳೆಯನ್ನು ಅವರಿಗೆ ಕೊಟ್ಟರೆ ಆ ಸುದ್ದಿ ಸಂಪಾದಕರು ಎಂಥ ಧನ್ಯರು !

* * * * * *

ಜೂನ ೧೩-೧೯೫೦

ಇಂದಿಗೆ ನಮ್ಮ ಲಗ್ನವಾಗಿ ಮೂರು ವರ್ಷಗಳು ಸಂದವು. ಹೋದ ವರ್ಷದಂತೆಯೇ ಈ ವರ್ಷವೂ ಮಿತ್ರರೊಂದಿಗೆ ಚಹಾ ಉಪಹಾರ ಸೇವಿಸಿ ಕೆಲವು ವೇಳೆಯನ್ನು ಸಂತೋಷದಲ್ಲಿ ಕಳೆದೆವು. ಈ ವರ್ಷ ಹಬ್ಬದ ಸಂತೋಷವನ್ನು ಸೂರೆಗೊಳ್ಳಲಿಕ್ಕೆ ನಮ್ಮಿಬ್ಬರ ಹೊರ್ತು ಪುಟ್ಟ ಕುಮಾರನೂ ಸೇರಿಕೊಂಡಿದ್ದಾನೆ. ಹೋದ ವರ್ಷ ನಮ್ಮ ಲಗ್ನದ ಹುಟ್ಟ ಹಬ್ಬಕ್ಕೆ ಒಂದು ಚಿಕ್ಕಗೊಂಬೆಯನ್ನು ಹತ್ತಿಪ್ಪತ್ತು ಕಾಗದಗಳಲ್ಲಿ ಸುತ್ತಿ ದೊಡ್ಡದೊಂದು ಪ್ಯಾಕ ಮಾಡಿ ಅದರ ಮೇಲೆ ' ರಿಬ್ಬನ್ ' ಕಟ್ಟಿ ಕಾಣಿಕೆಯಾಗಿ ಕೊಟ್ಟ ಅರವಿಂದರ ಮಿತ್ರ. ಇಂದು ಕುಮಾರನನ್ನು ನಗೆಸು

[ ೪೪ ನೇ ಪುಟ ನೋಡಿರಿ. ]

# ಗರತಿ

ಲೇ:— ಸೀತಾರಾಮ ಅಡಿಗ, ಕುರಾಡಿ ದ. ಕ.

ದಿನಮಣಿಯ ಕೆಂಪು ರಥ।
ಕನಸಿನಲಿ ಹೊಳೆ ಹೊಳೆದು।
ಕಿಲಕಿಲನುಲಿವ ನಾದ-
ಗಾಳಿಯಲಿ ಮೇಳೈಸಿ।
ಕಿವಿದೆರೆಗೆ ಬಡಿಬಡಿಯೆ।
ಜವದಿ ಮೆದುಹಾಸಿನಿಂ। ಮೇಲೆದ್ದು ಪತಿಯಡಿಗೆ ಎರಗೀ॥

ವಿರಹದಾ ನಿಡುಜ್ವಾಲೆ।
ಸರಿಸುತಲಿ ಆಬಾಲೆ।
ಮನೆವಾರೆ, ದೇವನನು,
ಕ್ಷಣಕ್ಷಣಕು ಮುನ್ನಡೆಸಿ।
ಸುಖಸಾರ ಸಂಸಾರ।
ಸುಖಗಮನ ವಿರಲೆಂದು।
ತವಕದಲಿ ಭಕ್ತಿಯಿಂ। ಸರ್ವೇಶನಂಘ್ರಿಗಳಿಗೆರಗೀ॥

ಗೃಹಕೃತ್ಯ ಸೊಗಸಾಗಿ
ಸಹನೆಯಲಿ ಕೈಕೊಂಡು।
ಮೂಡ್ದೆಸೆಯೊಳ್ ರವಿಬರಲು।
ಹಾಡುತ್ತ ಸುಸ್ವರದಿ।
ಮುದ್ದು ಕುವರನ ಎತ್ತಿ।
ಶ್ರದ್ಧೆಯಿಂ ಹಾಲುಣಿಸಿ। ಸಂತಸದ ಹಾಲ್ಜೇನನುಂಡು॥

ಅರಳ್ವ ಮಲ್ಲಿಗೆಯಂತೆ।
ಸರಮಾಲೆ ನಗೆ ಹರಿಸಿ।
ಪತಿಯೆ ಬಾಳಿಗೆ ಬೆಳಕು।
ಸತಿಯೆ ಬೆಳಕಿನ ಮಿರುಗು।
ಹೊರಸುರಿದ ಕಾಂತಿಯೇ (ಕುವರ)
ಹರಣಕ್ಕೆ ಉಸಿರೆಂದು। ಬಾಳ್ನಡೆಸಿ ಎಂದೆಂದು ಸುಖವನುಂಡು॥
ಧರ್ಮದಾ ಚಿರಬೆಳಕ ಸಂತಸದಿ ಕಂಡು॥

# ಸ್ತ್ರೀಯರ ಆರೋಗ್ಯ ಅರ್ಥಾತ್ ಸ್ವಾಸ್ಥ್ಯ

ಲೇ:— ವೈದ್ಯ ಗುಂಡಾಚಾರ್ಯ ಸವಣೂರ ಹುಬ್ಬಳ್ಳಿ.

(ಜೂನ ೧೯೩೭ನೇ ಸಂಚಿಕೆಯಿಂದ)

**ಸ್ತ್ರೀಪುರುಷರ ಶರೀರ ರಚನೆಯ ಭೇದಗಳು:—** ಸ್ತ್ರೀಪುರುಷರ ಶರೀರಗಳೆರಡೂ ರಸರಕ್ತಾದಿ ಧಾತುಘಟಕಗಳಿಂದಲೇ ತಯಾರಾಗಿದ್ದರೂ, ಅವುಗಳ ಹೊಂದಿಕೆಯಲ್ಲಿಯೂ ಶಾರೀರಿಕ ಮಾನಸಿಕ ಭಾವಗಳಲ್ಲಿಯೂ ವ್ಯತ್ಯಾಸವಿದ್ದೇ ಇದೆ. ಈ ವ್ಯತ್ಯಾಸಕ್ಕೆ ಕಾರಣವೇನು ? ಇದನ್ನು ತಿಳಿದುಕೊಳ್ಳಬೇಕಾದರೆ ಶರೀರ ಅಥವಾ ಅದರಿಂದ ಕೂಡಿದ ವ್ಯಕ್ತಿಯ ಜ್ಞಾನವನ್ನು ಮಾಡಿಕೊಳ್ಳಬೇಕಾಗುವದು ಶರೀರವು ಚೈತನ್ಯವಸ್ತುವಾದ ಜೀವಾತ್ಮ ಮತ್ತು ತದತಿರಿಕ್ತವಾದ ಜಡವಸ್ತು ಇವೆರಡರ ಸಂಯೋಗದಿಂದ ಆಗಿರುವದು. ಇವಕ್ಕೇ ಸಾಂಖ್ಯರು ತಮ್ಮ ಪರಿಭಾಷೆಯಲ್ಲಿ ಪುರುಷ ಮತ್ತು ಪ್ರಕೃತಿಗಳೆಂದು ಕರೆಯುವರು. ಪುರುಷ ಪ್ರಕೃತಿ ಸಂಯೋಗದಿಂದ ತಯಾರಾಗುವ ಈ ದೇಹದಲ್ಲಿ ಪುರುಷಾಂಶ ಹೆಚ್ಚಾಗುವದರಿಂದ ಗಂಡಸಿನ ಶರೀರಾಂಶಗಳೂ ಪ್ರಕೃತಿ ಅಂಶ ಹೆಚ್ಚಾಗುವದರಿಂದ ಸ್ತ್ರೀಶರೀರಾಂಶಗಳೂ ಪ್ರಾಯಶಃ ಉತ್ಪತ್ತಿಯಾಗುವವೆಂದು ಹೇಳಬಹುದು ಸಾಂಖ್ಯಶಾಸ್ತ್ರದಲ್ಲಿ ಪುರುಷ ಪ್ರಕೃತಿಗಳಲ್ಲಿ ವೈಷಮ್ಯ ಹೇಳುವಾಗ ಕೆಳಗೆ ಬರೆದಂತೆ ಹೇಳಿದ್ದಾರೆ. ಪುರುಷರು ಅನೇಕ ಚೇತನಾವಂತರು, (ಪ್ರಕೃತಿಯಿಂದ ಕೂಡದಿರುವಾಗ) ತ್ರಿಗುಣರಹಿತರು, ಅಬೀಜಧರ್ಮಿಗಳು, ಸುಖದುಃಖಗಳಿಂದ ರಹಿತರು, ಎಂದು ಹೇಳಿರುವರು. ಪ್ರಕೃತಿಯು ಒಂದೇ ಅಚೇತನವಾದದ್ದು, ಸತ್ವರಜ ತಮೋ ಗುಣವುಳ್ಳದ್ದು, ಪ್ರಸವ ಧರ್ಮಿಣಿ, ಬೀಜಧರ್ಮಿಣಿ, ಸುಖದುಃಖಗಳಿಂದ ಕೂಡಿರತಕ್ಕದ್ದು ಎಂದು ವರ್ಣನೆಮಾಡಿರುವರು. ಈ ವಿಧವಾಗಿರತಕ್ಕ ಪ್ರಕೃತಿಪುರುಷರ ಸ್ವಭಾವ ಜನ್ಯ ಧರ್ಮಗಳಿಂದ ರೂಪುಗೊಂಡ ಕೆಲವು ಲಕ್ಷಣಗಳನ್ನು ಸ್ತ್ರೀ ಮತ್ತು ಗಂಡಸಿನ ಶರೀರ ಭಾವಗಳಲ್ಲಿ ನಾವು ಕಾಣಬಹುದು. ಅದು ಹೇಗೆಂದರೆ— ಪ್ರಕೃತಿಯು ಒಂದೇ ಎಂಬದನ್ನು ಸ್ತ್ರೀ ಶರೀರ ಪ್ರಕೃತಿಯಲ್ಲಿ ರುತುಕಾಲದಲ್ಲಿ ಪ್ರತಿಸಲವೂ ಫಲಿತವಾದ ಒಂದೇ ಸ್ತ್ರೀ ಬೀಜವು ಗರ್ಭಧಾರಣೆ ಮಾಡಲು ಸಮರ್ಥವಾಗುವದರಿಂದಲೂ, ಅಚೇತನ ಎಂಬದನ್ನು ಸ್ತ್ರೀ ಬೀಜವು ಇದ್ದಲ್ಲಿಯೇ ಉಳಿದಿದ್ದು ಪುಂಬೀಜಸಂಯೋಗದಿಂದ ಗರ್ಭಾಭಿವೃದ್ಧಿಗೆ ಕಾರಣವಾಗುವದರಿಂದಲೂ, ಬೀಜಧರ್ಮಿಣಿಎಂಬುದನ್ನು ಮುಂದಾಗತಕ್ಕ ಶಿಶುವಿನ ಗರ್ಭದ ಬೆಳವಣಿಗೆ ಸಾಮಗ್ರಿಗಳೆಲ್ಲವನ್ನು ಬೀಜದೋಷಾದಿ ತನ್ನಲ್ಲಿ ಹಿಡಿದುಕೊಂಡಿರುವದರಿಂದಲೂ, ಪ್ರಸವಧರ್ಮಿಣಿ ಎಂಬದನ್ನು ಹಿಡಿದಿಟ್ಟುಕೊಂಡ ಗರ್ಭವನ್ನು ವಿಕಾಸಗೊಳಿಸಿ ಹೊರಗೆ ಕಾಲಕ್ಕೆಸರಿಯಾಗಿ ಹಾಕುವದರಿಂದಲೂ, (ಇವುಗಳನ್ನು

ಸ್ತ್ರೀ ಶರೀರ ಪ್ರಕೃತಿಯಲ್ಲಿ ಗರ್ಭಿಣಿ ಮತ್ತು ಹೆರಿಗೆ ಕಾಲಗಳಲ್ಲಿ ಕಾಣುತೇವು.) ಸುಖ ದುಃಖಗಳಿಂದ ಕೂಡಿರತಕ್ಕದ್ದೆಂಬದನ್ನು ಪ್ರಕೃತಿ ಸ್ವಭಾವ ಜನ್ಯವಾದ ಸತ್ವರಜ ತಮೋಗುಣಗಳ ಪ್ರಾಚುರ್ಯವಿರುವ ಕಾರಣದಿಂದ ಸ್ತ್ರೀಯರಿಗೆ ಸುಖ ದುಃಖಗಳ ಉದ್ರೇಕವು ತೀವ್ರವೇ ಆಗುವದರಿಂದಲೂ ತಿಳಿದುಕೊಳ್ಳಬೇಕು, ಸ್ತ್ರೀಯು ಪ್ರಕೃತಿ ಸ್ವರೂಪವಾಗಿದ್ದು ತದ್ಗುಣಧರ್ಮಗಳ ವಿಕಾಸದ ಮೂರ್ತಿಮಂತಳಾಗಿರುವಳು. ಎಂದು ಹೇಳಬಹುದು.

ಪುರುಷರು ಅನೇಕರೆಂಬುವದನ್ನು ಗಂಡಸಿನ ಪ್ರಕೃತಿಯಲ್ಲಿ ವಯಸ್ಕರಾದ ಮೇಲೆ ಶುಕ್ರಧಾತುವಿನಲ್ಲಿ ಒಂದೇಕಾಲಕ್ಕೆ ಅನೇಕ ಪುಂಬೀಜಗಳ ಸುಫಲಿತವಾಗಿ ಗರ್ಭದ ಬೀಜಾಧಾನಕ್ಕೆ ಸಿದ್ಧವಾಗಿರುವದರಿಂದಲೂ, ಚೇತನತ್ವವನ್ನು ಗರ್ಭಶಯ್ಯೆ ಯಲ್ಲಿ ಬಿದ್ದ ಪುಂಬೀಜವು ಗರ್ಭಾಶಯದಿಂದ ದಿಂಬದವರೆಗೆ ಇರುವ ಮಾರ್ಗದಲ್ಲಿ ವಾಸವಾಗಿರುವ ಸ್ತ್ರೀ ಬೀಜದತ್ತ ಧಾವಿಸಿ ಅದನ್ನು ಎಳೆದುಕೊಂಡು ಕೂಡಿಕೊಳ್ಳುವ ಸಾಮರ್ಥ್ಯದಿಂದಲೂ; ಶುದ್ಧ ಸತ್ವಗುಣದಿಂದಲೂ ಕೂಡಿದ ಜೀವಾತ್ಮನು ಈ ಶರೀರದಲ್ಲಿ ಪ್ರಕೃತಿಜನ್ಯ ತ್ರಿಗುಣಗಳಿಂದ ಅತೀತನಾಗಿ ಇರುವದರಿಂದ, ತ್ರಿಗುಣ ರಹಿತತ್ವವನ್ನೂ; ಪ್ರಕೃತಿಯಿಂದ ಅಲಿಪ್ತವಾಗಿರಲು ಸಾಧ್ಯವಿದ್ದವನು ಬೀಜಧರ್ಮ ತ್ವದಿಂದ ರಹಿತನಾಗಿರುವದರಿಂದ ಅಬೀಜಧರ್ಮಿಯಾಗಿರುವನೆಂಬದನ್ನೂ; ಸ್ವಭಾವ ಜನ್ಯವಾದ ಶುದ್ಧ ಸತ್ವಗುಣದಿಂದ ಕೂಡಿದ ಆತ್ಮನು ಪ್ರಕೃತಿಜನ್ಯ ತ್ರಿಗುಣಗಳಿಂ ದುಂಟಾಗುವ ಸುಖದುಃಖಗಳನ್ನು ಮೆಟ್ಟುವ ಸಾಮರ್ಥ್ಯವುಳ್ಳವನಾದ್ದರಿಂದ ಅವು ಗಳ ಉದ್ದೇಶಕ್ಕೆ ಸ್ವಾಧೀನವಾಗದಿರುವಿಕೆಯನ್ನು ತಿಳಿದುಕೊಳ್ಳಬೇಕು. ಈ ಪ್ರಕಾರ ಗಂಡಸು ಪುರುಷಸ್ವರೂಪನಾಗಿದ್ದು ತದ್ಗುಣಧರ್ಮಗಳು ವಿಕಾಸ ಹೊಂದಿ ಅವನ ಶರೀರಪ್ರಕೃತಿಯಲ್ಲಿ ಅವು ಪ್ರಾಯಶಃ ಹೆಚ್ಚಾಗಿ ವಾಸ್ತವ್ಯವಾಗಿರುವದನ್ನು ನೋಡಬಹುದು.

ಇದು ಸಾಂಖ್ಯಶಾಸ್ತ್ರಕ್ಕನುಸಾರವಾಗಿ ಪೌರ್ವಾತ್ಯ ಶಾರೀರಶಾಸ್ತ್ರವನ್ನು ತಿಳಿದ ಆಯುರ್ವೇದ ತಜ್ಞರ ಮತ. ಇದೇರೀತಿಯಿಂದ ಈಗಿನ ಪಾಶ್ಚಾತ್ಯ ಶಾರೀ ರವೇತ್ತರೂ, ತಮ್ಮ ಶಾರೀರಶಾಸ್ತ್ರದಲ್ಲಿ ಹೇಳಿರುವ ರಚನೆಗನುಸಾರವಾಗಿ ಸ್ತ್ರೀ ಮತ್ತು ಗಂಡಸರಲ್ಲಿ ವ್ಯತ್ಯಾಸವಿದ್ದೇ ಇರುವದೆಂದು ಹೇಳಿರುವರು. ಅದರ ವರ್ಣನೆ ಹೀಗೆ— ಸ್ತ್ರೀಯರ ಶರೀರಚನೆಯಲ್ಲಿ ಎಲುಬುಗಳೂ, ಸ್ನಾಯುಗಳೂ, ಪುಪ್ಪಸಹೃದಯಗಳೂ, ಕೋಮಲವಾಗಿರುವವಲ್ಲದೆ ಗಾತ್ರದಲ್ಲಿ ಚಿಕ್ಕವಾಗಿರುವವು. ಆದಕಾರಣ ಶಾರೀರಕ ಶ್ರಮಗಳಲ್ಲಿ ಅತಿಭಾರವಾದ ಕೆಲಸಗಳನ್ನು ಹೆಚ್ಚುಕಾಲ, ಮತ್ತು ಸರಿಯಾಗಿ ಸ್ತ್ರೀ ಶರೀರವು ಮಾಡಲು ಸಮರ್ಥವಿರುವದಿಲ್ಲ. ಸ್ತ್ರೀಯರಲ್ಲಿ ಅಂತಃಸ್ರಾವಕ ಸ್ರೋತೋ ಗ್ರಂಥಿಗಳ (Ductless glands) ಪ್ರಾಧಾನ್ಯತೆ ಹೆಚ್ಚು. ಈ ಗ್ರಂಥಿಗಳು ಪ್ಯಾರಾ ಸಿಂಥಿಟಿಕ್ ಎಂಬ ನಾಡಿಗಳ ಸ್ವಾಧೀನವಾಗಿರುವವು. ಈ ನಾಡೀತಂತುಗಳ ಸಮೂಹವು ಬಹಳ ಅಸ್ಥಿರವಿರುವದರಿಂದ ಮನೋವಿಕಾರಗಳ ಪರಿಣಾಮವು ಈ

ನಾಡೀ ತಂತುಗಳ ಮೇಲೆ ಬಹುಬೇಗನೇ ಪರಿಣಾಮವಾಗುವದು. ಇದರ ಪರಿಣಾಮವಾಗಿಯೇ ಸ್ತ್ರೀಶರೀರಕ್ಕೆ ಆನಂದವನ್ನಾಗಲೀ, ದುಃಖವನ್ನಾಗಲೀ, ಹೆಚ್ಚು ಸಹನೆಮಾಡಲಾಗುವದಿಲ್ಲ. ಆದ್ದರಿಂದಲೇ ಆನಂದ ಹಾಗೂ ದುಃಖದ ಎರಡೂ ಸಮಯಗಳಲ್ಲಿ ಹೆಂಗಸಿಗೆ ಬಹು ಬೇಗನೇ ಕಂಣಲ್ಲಿ ನೀರು ಬರುವವು. ಅಲ್ಲದೆ ಬಹು ತೀವ್ರವಾಗಿ ಭಾವಗಳಲ್ಲಿ ಉದ್ವೇಗಗೊಳ್ಳುವಳು.

ಗಂಡಸಿನ ಶರೀರ ವೃತ್ತಿಗಳು ನ್ಯೂರೋಮಸ್ಕ್ಯೂಲರ್(Neuro-muscular) ನಾಡಿಗಳ ಅಧಿಕಾರದಿಂದ ನಡೆಯುವವು. ಅವು ಹೆಂಗಸಿನಷ್ಟು ಅಸ್ಥಿರವಾದವುಗಳಲ್ಲ. ಗಂಡಸಿನ ವೃತ್ತಿಗಳು ಅಂತಸ್ರಾವಕ ಗ್ರಂಥಿಗಳ ಮೇಲೆ ಅವಲಂಬಿಸಿರುವದು ತೀರ ಕಡಿಮೆ. ಅವನ ವೃತ್ತಿಗಳ ಶಕ್ತಿಯ ಉಗಮವು ಎಲುಬು ಮತ್ತು ಸ್ನಾಯುಗಳಿದ್ದು ಅಲ್ಲಿಂದಲೇ ಚೇತನೆಯು ಅವುಗಳಿಗೆ ದೊರೆಯುವದು.

ಸ್ತ್ರೀ ಶರೀರ ವೃತ್ತಿಗಳ ಚೇತನಾ ಶಕ್ತಿಯ ಉಗಮವು ಅಂತಸ್ರಾವಕ ಸ್ರೋತೋ ಗ್ರಂಥಿಗಳ ಸ್ರಾವವನ್ನು ಹೆಚ್ಚಿಗೆ ಅವಲಂಬಿಸಿರುವದರಿಂದ ಅವುಗಳಿಗೆ ಅಂದರೆ ಗ್ರಂಥಿಗಳಿಗೆ ಉತ್ತೇಜನಕರವಾದಂಥ ಹಗುರಾದ ವ್ಯಾಯಾಮಗಳೇ ಸ್ತ್ರೀಯ ಸ್ವಾಸ್ಥ್ಯವನ್ನು ರಕ್ಷಿಸಲು ಸಹಾಯವಾಗುವವು. ಗಂಡಸಿನ ಶರೀರ ವೃತ್ತಿಗಳಿಗೆ ಚೇತನಾಶಕ್ತಿಯು ಸ್ನಾಯು ಮತ್ತು ಎಲುಬುಗಳಿಂದ ಹುಟ್ಟುವದರಿಂದ ಅವುಗಳನ್ನು ದಣಿಸ ತಕ್ಕ ಕಷ್ಟಕರವಾದ, ಭಾರವಾದ ವ್ಯಾಯಾಮಗಳೇ ಗಂಡಸಿನ ಸ್ವಾಸ್ಥ್ಯ ರಕ್ಷಣೆಗೆ ಸಹಾಯವಾಗುವವು. ಸ್ತ್ರೀ ಶರೀರವು ಕೋಮಲವಾದದ್ದು. ಪುರುಷನ ಶರೀರವು ಬಿರುಸಾದದ್ದು. ಸ್ತ್ರೀ ಸೌಂದರ್ಯ ನಿಧಿ. ಪುರುಷನು ಶೌರ್ಯದ ನಿಧಿ. ಈ ಪ್ರಕಾರವಾಗಿ ಸ್ತ್ರೀ ಪುರುಷರ ಶರೀರ ಪ್ರಕೃತಿಗಳಲ್ಲಿ ವಿರುದ್ಧವಾದ ಗುಣಧರ್ಮಗಳಿದ್ದು ಅವು ಪರಸ್ಪರ ಪೂರಕವಾಗಿರುವವು. ಸ್ತ್ರೀಯಲ್ಲಿಲ್ಲದ್ದು ಪುರುಷನಲ್ಲಿಯೂ, ಪುರುಷನಲ್ಲಿಲ್ಲದ್ದು ಸ್ತ್ರೀಯಲ್ಲಿಯೂ ಇರುವದರಿಂದ ಪರಸ್ಪರರಲ್ಲಿ ಆಕರ್ಷಣೆಯು ಹೆಚ್ಚಿರುವದು. ಶರೀರ ರಚನೆಯಲ್ಲಿ ಮಾತ್ರ ಈ ಭೇದವಿರದೆ ಶರೀರ ಬೆಳವಣಿಗೆಯ ಕಾಲದಲ್ಲೂ ಈ ವಿಧವಾದ ಭೇದವನ್ನು ನಾವು ಕಾಣಬಹುದು.

**ತಾರುಣ್ಯ ಪ್ರಾಪ್ತಿ:—** ಹೆಂಗಸಿಗೆ ತಾರುಣ್ಯವು ೧೨ನೇ ವರ್ಷಕ್ಕೆ ಆರಂಭವಾಗಿ ೧೮ನೇ ವರ್ಷಕ್ಕೆ ಪೂರ್ತಿಯಾಗುವದು. ಈ ಕಾಲಕ್ಕೆ ಉಂಟಾಗುವ ಶರೀರ ವ್ಯಾಪಾರಕ್ಕೆ ಮೈನೆರೆಯುವದು ಎನ್ನುವರು. ಇದಕ್ಕೆ ಮುಟ್ಟಾಗುವದು, ಕಡೆಗೆ ಆಗುವದು ಎಂಬ ಪದಗಳು ರೂಢಿಯಲ್ಲಿವೆ. ಸಂಸ್ಕೃತದಲ್ಲಿ ಪುಷ್ಪವತಿಯಾಗುವದು, ರಜಸ್ವಲೆಯಾಗುವದು ಎಂದು ಹೇಳುವರು. ಹೊರಗೆ ಪ್ರಕೃತಿಯಲ್ಲಿ ಸಸ್ಯಾದಿಗಳು ಪೂರ್ಣ ಬೆಳೆದ ಮೇಲೆ ಮುಂದಿನ ತಮ್ಮ ಭಾವಿಸಂತಾನಕ್ಕಾಗಿ ಬೀಜಧಾರಣೆಮಾಡಲು, ಫಲಪ್ರಾಪ್ತಿಯಾಗುವದಕ್ಕೆ ಮುಂಚೆ ಹೂಬಿಡುವ ಕಾಲವನ್ನು ಹೊಂದುವಂತೆ ಹೆಂಗಸಿನ ಪ್ರಕೃತಿಯಲ್ಲೂ ಪುಷ್ಪವತಿಯಾಗುವ ಕಾಲವು ಇರುವದು.

ಇದಕ್ಕೆ ಋತು ಕಾಲವೆಂದು ಹೆಸರು. ಈ ಕಾಲ ಬರುವ ಹೊತ್ತಿಗೆ ಶರೀರವು ಪೂರ್ಣ ಬೆಳೆದು ನೆರೆಯುವದು ಅಂದರೆ ವಯಸ್ಸಿಗೆ ಬರುವದು ಆಗ ಶರೀರದಿಂದ ರಕ್ತವು ಹೊರಗೆ ಹೋಗುವದರಿಂದ ರಕ್ತದಲ್ಲಿಯ ಲೋಹಾದಿಗಳ ಅಂಶ ಕಡಿಮೆಯಾಗಿ ಬಿಳಿಚಿಕೊಳ್ಳುವಳು ದೌರ್ಬಲ್ಯ ಉಂಟಾಗುವದು. ಕೆಲವರಿಗೆ ಬಾಧಿಗಳೂ ಬರುವವು. ಮಂದ ಚಟವಟಿಕೆಯುಳ್ಳವಳಾಗಿ, ಬಳಲಿಕೆಯಿಂದ ಕೂಡಿದವಳಾಗಿರುವಳು. ಗಂಡಸರಿಗೆ ವಯಸ್ಕರಾಗಿ ತಾರುಣ್ಯಪ್ರಾಪ್ತಿಯಾಗುವವಯಸ್ಸು ೧೫ ನೇ ವರುಷದಿಂದ ಆರಂಭವಾಗಿ ೨೩-೨೪ ವರುಷಗಳವರೆಗೆ ಇರುವದು.

ಈ ತಾರುಣ್ಯ ಪ್ರಾಪ್ತಿಯಾಗುವ ಕಾಲದಲ್ಲಿ ಗಂಡಸರಲ್ಲಿ ಮತ್ತು ಹೆಂಗಸರಲ್ಲಿ ಗಂಡಸುತನದ ಮತ್ತು ಹೆಂಗಸುತನದ ಲಕ್ಷಣಗಳೆಲ್ಲ ಪೂರ್ಣ ಬೆಳೆದು ನಿಲ್ಲುವವು.

ಈ ಕಾಲವು ಹೆಂಗಸರಲ್ಲಿ ೬-೭ ವರುಷಗಳವರೆಗೆ ಇದ್ದರೆ ಗಂಡಸರಿಗೆ ೮-೯ ವರುಷಗಳವರೆಗೆ ಇರುವದು.

ಪ್ರಜೋತ್ಪಾದನೆ ಸಾಮರ್ಥ್ಯವು ಸಾಮಾನ್ಯವಾಗಿ ಸ್ತ್ರೀಯರಲ್ಲಿ ೪೦-೪೫ ನೇ ವಯಸ್ಸಿಗೆ ನಿಲ್ಲುವದು. ಗಂಡಸರಿಗೆ ೫೦ ರಿಂದ ೭೦ ವರುಷಗಳವರೆಗೆ ಇರುವದು.

ಈಪ್ರಕಾರವಾಗಿ ಸ್ತ್ರೀ ಮತ್ತು ಪುರುಷರ ಶರೀರರಚನೆ ಬೆಳವಣಿಗೆ ಮುಂತಾದವುಗಳಲ್ಲಿಯ ಭೇದವನ್ನು ತಿಳಿಯಬೇಕು.

(ಮುಂದುವರೆಯುವದು)

# ಅಂತರ್ಮುಖಿ

## ೧ನೇ ದೃಶ್ಯ.

**ಲೇ:— ಸುಧಾ.**

**ಬೇಕಾದಷ್ಟು ಬಿ.ಎ. ಎಂ.ಎ; ಪಿ.ಎಚ್‌ಡಿ; ಎಂ.ಬೀ.ಬಿ.ಎಸ್; ಸಮಾಜ ಸುಧಾರಿಕಾ, ವಿದುಷಿ ಸನ್ಯಾಸಿನಿಗಳಾಗಿದ್ದರೂ ಹೆಣ್ಣುಮಕ್ಕಳು ಇಷ್ಟು ದುಸ್ಥಿತಿಗೆ ಈಡಾಗಿರಲು ದೂಷಿತ ಸಮಾಜ ರಚನೆ ಕಾರಣವೋ ಸ್ತ್ರೀಯರ ಆತ್ಮವಂಚನೆ ಕಾರಣವೋ ನೀವೇ ತಿಳಿದು ನೋಡಿ.**

"ಏ ಅಂತರ್ಮುಖಿ! ಇದೇನು ನಡೆಸಿರುವಿ ಗಂಡರಾಮಿಯಂತೆ?" ಎಂದು ನಮ್ಮ ಅವ್ವ ಗೋದಕ್ಕಾ ಒಂದು ದಿನ ಒಳ್ಳೆ ಚೀರಧ್ವನಿಯಿಂದ ದೆವ್ವ ಮೈಮೇಲೆ ಬಂದಂತೆ ಕವಕ್ಕನೆ ಒದರಿದಳು. ಆವಾಗ ನಾನು ೬-೭ ವರ್ಷದವಳಿರಬಹುದು. ಆವಾಗ ನಾನು ನೆರೆಹೊರೆ ನನ್ನ ವಾರಿಗೆ ವಯಸ್ಸಿನ ಶಾಮಸುಂದರನೊಡನೆ ಆಟನೋಟಗಳಲ್ಲಿ, ಹಾಸ್ಯ ವಿನೋದಗಳಲ್ಲಿ ಒಳ್ಳೆ ಮಗ್ನಳಾಗಿ ಹೋಗಿದ್ದೆ. ಈ ಅವ್ವನ ಆಕಸ್ಮಿಕ ಒದರುವಿಕೆಯಿಂದ ಬೆಚ್ಚುಬಿದ್ದಂತೆಯಾಗಿ ಆಟದ ಆನಂದ ಸ್ವರ್ಗದಿಂದ ಪಾತಾಳಕ್ಕೆ ಬಿದ್ದಂತಾಯಿತು. ಆಟವೆಲ್ಲವು ರಸಭಂಗವಾಯಿತು. ನಿರಾಶೆಯು ಮೋಡದಂತೆ ಕವಿಯಿತು. ಈಗ ನಾನು ದೊಡ್ಡವಳಾಗಿ ಪೀ.ಎಚ್.ಡೀ. ಪದವಿ ಪಡೆದು ಸಮಾಜಶಾಸ್ತ್ರದ ಅಭ್ಯಾಸ ಮಾಡುತ್ತಿರುವೆ. ಚಿಕ್ಕಂದಿನಿಂದ ಘಟಿಸಿದ ಒಂದೊಂದು ಸಂಗತಿ ನೆನಪಾಗಿ ಅದರ ಸಂಬಂಧವಾಗಿ ಸಾಧಕಬಾಧಕ ವಿಚಾರಗಳ ಪರಂಪರೆಯು ಮನಸಿನಲ್ಲಿ ಬಂದು ಇಡೀ ಸಮಾಜರಚನೆಯನ್ನೆ ಬದಲಾಯಿಸಬೇಕೆಂದು ಹುಮ್ಮಸಹುಟ್ಟುತ್ತದೆ. ಅವ್ವನು ಕರೆದ ಕೂಡಲೆ ಆಟದ ಆನಂದಮಯ ತೊಂದರೆಯೊಳಗಿಂದ ಎಚ್ಚತ್ತು "ಈಗ ಬರುವೆನು! ಅಂಗಳದಲ್ಲಿಯ ಮಂಚದಮೇಲೆ ಇಲ್ಲಿಯೆ ಕುಳಿತುಕೊ" ಎಂದು ಶಾಮಸುಂದರನ ಕಿವಿಯಲ್ಲಿ ಹೇಳಿ ಅವ್ವನ ಕಡೆಗೆ ಓಡಿ ಹೋದೆನು. "ಅವ್ವ! ಅವ್ವ! ಏನಾಯಿತು? ಹೀಗೇಕೆ ಒದರುತ್ತಿ?" ಎಂದು ಕೇಳಿದೆನು. "ಹೀಗೇಕೆ ಒದರುತ್ತಿ! ಎಂದು ಕೇಳುವಿಯಾ" "ಒದರದೇ ಮತ್ತೇನು ಮಾಡಲಿ! ಏಳು ವರ್ಷದ ಧಡವಿಯಾಗಿರುವಿ! ಮೊದಲಿನ ಕಾಲವಿದ್ದರೆ ಇಷ್ಟರಲ್ಲಿ ನಿನ್ನ ಲಗ್ನವಾಗಿಬಿಡುತ್ತಿತ್ತು! ಇಷ್ಟು ಮುದಿ ಕೋಣವಾಗಿದ್ದರೂ ಆಟದ ಚಟ ಅದರಲ್ಲಿ ಸರೀಕ ಗಂಡುಹುಡುಗರ ಕೂಡ ಚಲ್ಲಾಟ ಬಿಟ್ಟಿಲ್ಲ!" "ನಾನು ಧಡಿವೆಯೋ ಬಾಲೆಯೋ! ಈಗ ಅಪ್ಪ ರಾಮಣ್ಣ ಬಂದನಂತರ ಹೇಳುತ್ತೇನೆ. ನಿನ್ನ ಫಜೀತಿ ಮಾಡಿಯೆಬಿಡುತ್ತೇನೆ" "ಹೂಂ ಆಗಲಿ! ಇವರು ಮಕ್ಕಳನ್ನು ತಲೆಯ

ಮೇಲೆ ಕೂಡ್ರಿಸಿಕೊಂಡು ಕೂತಾರೆ." ಸ್ವಲ್ಪ ಹೊತ್ತಿನಲ್ಲಿ ರಾಮಣ್ಣನು ಕಚೇರಿಯಿಂದ ಬಂದು ತಮ್ಮ ಕೋಣೆಯಲ್ಲಿ ಮೈಮೇಲಿನ ಭಾರವನ್ನು (ತಮ್ಮ ಬೂಟ ಪ್ಯಾಂಟನ್ನು) ಇಳಿಸುತ್ತಿದ್ದರು. ಇಷ್ಟರಲ್ಲಿ ಅಳುತ್ತ ಅಳುತ್ತ ಅಂತರ್ಮುಖಿಯು ಅವರ ಹತ್ತರ ಹೋಗಿ " ಅಪ್ಪ ! ಅಪ್ಪ ! ಇಂದು ನನಗೆ ಅವ್ವ ' ಧಡವಿ ! ಕೋಣ ! ಗಂಡರಾಮಿ ಯೆಂದು ಏನೇನೋ ಬೈದಳು. ನಾನೇನೂ ಮಾಡಿರುವದಿಲ್ಲ. ಶ್ಯಾಮಸುಂದರ ನೊಡನೆ ಆಡುತ್ತ ಕೂತಿದ್ದೆ "

" ಇರಲಿ ಬಿಡೇ. ಅವಳೇನೋ ಹಳೇ ಮಾದರಿ ಹೆಣ್ಣುಮಗಳು."

" ಅಪ್ಪ ! ಅಪ್ಪ ! ಇಷ್ಟೇ ಅಲ್ಲ. ನೀನಿಲ್ಲದಾಗ ಏನೇನೋ ಬೈಯ್ಯುತ್ತಾಳೆ. ಈ ಗಂಡಸರು ಸುಧಾರಣೆ ! ಸುಧಾರಣೆ ! ಶಿಕ್ಷಣ ! ಶಿಕ್ಷಣ ! ಎಂದು ಈ ಹೆಣ್ಣು ಮಕ್ಕಳಿಗೆ ಬೇಕಾದ ಹಾಗೆ ಸವಲತ್ತು ಕೊಟ್ಟು ಕೊಟ್ಟು ಗಂಡುರಾಮಿಯರನ್ನ ಮಾಡಿ ಟ್ಟಿದ್ದಾರೆ. ಎಂದು."

" ಇರಲಿ ಬಿಡು ! ನಾನೆಲ್ಲ ಅವಳಿಗೆ ತಿಳಿಸಿ ಹೇಳುತ್ತೇನೆ."

" ಈಗಲೆ ಕರತರುವೆನು." ಎಂದು ಓಡುತ್ತ ' ಅವ್ವ ! ಅವ್ವ ! ಅಪ್ಪ ಕರೆ ಯುತ್ತಾನೆ ! ಬೇಗ ಬಾ ! ಬೇಗ ಬಾ ! " ಎಂದು ಒದರಿದಳು.

ಗೋದಕ್ಕ ಬರುತ್ತ ಬರುತ್ತ " ಏತಕ್ಕೆ ಕರಿಸೋಣವಾಗಿತ್ತು ! ಒಂದು ಸ್ವಲ್ಪೊತ್ತು ವಿಶ್ರಾಂತಿ ತೆಗೆದುಕೊಳ್ಳುವದು ಬಿಟ್ಟು ಇಷ್ಟು ಅವಸರದಿಂದೇಕೆ ಕರೆಸಿದ್ದು "

" ಅಂತರ್ಮುಖಿ ಪ್ರಕರಣವೇನು ? " ಎಂದು ಕೇಳಿದನು.

" ಹೂಂ ! ಇದಕ್ಕೇ ! ಅವಳೇನು ಚಾಡಿ ಹೇಳಿದಳೋ ! ನೀವು ನನ್ನನ್ನು ವಿಚಾರಿಸಲು ನ್ಯಾಯಾಲಯಕ್ಕೆ ಕರಿಸಿರುವಿರಾ ! ನ್ಯಾಯಾಲಯದಲ್ಲಿಯ ಕೇಸು ಗಳನ್ನು ಕೇಳಿಕೇಳಿ ನಡೆಯಿಸಿ ಇನ್ನು ಸಾಕಾಗಲಿಲ್ಲವೆ ಮನೆಗೆ ಬರುವದರೊಳಗಾಗಿ ಇಲ್ಲಿಯ ಪ್ರಕರಣಗಳನ್ನು ಕೈಯಲ್ಲಿ ತೆಗೆದುಕೊಳ್ಳಲು ! ಹೀಗೆ ಮಾಡಿಯೆ ನೆರೆಹೊರೆ ಗೋವಿಂದರಾಯರು ತಮ್ಮ ಒಳ್ಳೆ ಚಲುವಿಯಾದ ಸುಬ್ಬಿಯನ್ನು ಚಿಕ್ಕಂದಿನಿಂದಲೆ ತಲೆಮೇಲೆ ಕೂಡಿಸಿ ಶಿಕ್ಷಣಕೊಟ್ಟು ಬಿ.ಏ. ಪಾಸು ಮಾಡಿ ಅವಳನ್ನು ಕಳೆದು ಕೊಂಡು ಕೂತಿದ್ದು ! ಯಾವ ಮಹಾರಾಯನು ಓಡಿಸಿಕೊಂಡು ಹೋದನೋ ದೇವರೆ ಬಲ್ಲ ! ಅವಳಿಗೆ ಸಿಟ್ಟು ಮಾಡದೆ ಮತ್ತೇನು ಮಾಡಲಿ ! ಸರೀಕರ ಹೆಣ್ಣು ಮಕ್ಕಳು ಮನೆಗೆ ಬಂದರೆ ಅವರೊಡನೆ ಸರಿಯಾಗಿ ಆಡದೆ ಆ ಗಂಡುಮಕ್ಕಳು ಮನೆಗೆ ಬಂದರೆ ಇವಳಿಗೆಷ್ಟು ಹಿಗ್ಗು ! ಈಗಿನಿಂದಲೆ ಇಷ್ಟು ಗಂಡುಮಕ್ಕಳು ಇವಳಿಗೆ ಸೇರಿದರೆ ಮುಂದೆ ಇವಳೇನು ಸಂಸಾರ ಮಾಡಬಲ್ಲಳು ಮೇಲೆಯೆ ಕಾಣು ತ್ತದೆ! ಬೇಕಾದರೆ ನೀವು ಬೆನ್ನ ಚಪ್ಪಡಿಸಿ ಕೂತ ಬಿಡಿರಿ! ನನಗೇನು ಇದು ಸೇರುವ ದಿಲ್ಲೆಂದು." ಹೇಳಿ ಬಿರ್ರನೇಕಾಲ ಅಪ್ಪಳಿಸುತ್ತ ಗೋದಕ್ಕ ಹೊರಟು ಹೋದಳು.

ರಾಮಣ್ಣ ಬೆಪ್ಪಾಗಿ ನಿಂತು ವಿಚಾರ ಮಗ್ನನಾದ. " ಏನಿದು ! ಪಾಪ ! ಅಂತರ್ಮುಖಿಯ ವಯಸ್ಸೆಷ್ಟು ? ಇಂಥ ಮಾತುಗಳನ್ನು ಅವಳೆದುರಿನಲ್ಲಿ ಆಡಿದರೆ

ಅವಳಿಗೇನು ಅರ್ಥವಾಗಬೇಕು ! ಏನು ಅರಿಯದ ನಿಷ್ಪಾಪಿ ಕಂದಮ್ಮ ಅದು ! ಏನು ! ಅವಳಂದಿದ್ದರಲ್ಲೇನು ಅರ್ಥವಿರಲಿಕ್ಕಿಲ್ಲವೆ ! ಏನರಿಯದವಳಾದ ನಿಷ್ಪಾಪಿಯಾದ ಕಂದಮ್ಮನವಳಿದ್ದರೆ ತಮ್ಮ ಜೊತೆ ವಯಸ್ಕರಾದ ರಮಾ, ಲಕ್ಷ್ಮಿ, ಸುನಂದಾ ಗೋಪಿ ಇವರೊಡನೆ ಆಡುವದು ಬಿಟ್ಟು ಶಾಮ, ಗೋಪ, ವಸಂತ ಇವರೊಡನೆ ಆಡಲು ಅವಳಿಗೇಕೆ ಹಿಗ್ಗು, ಆತುರ ಹುಮ್ಮಸ ! ಇದೇನು ಭಾವಿ ವಿಕಾರದ ಕುರುಹವೋ ! ಇದೇ ಅಂಕುರವು ಈ ಆಟನೋಟ ಮುಂತಾದ ಪ್ರೇಮರಸದ ಸಿಂಚನೆಯಿಂದ ವಿಕಾರದ ವೃಕ್ಷವಾಗಿ ಬಗ್ಗದೆ ಮುಂದೆ ಪೀಡಿಸುತ್ತಿರಬಹುದೆ ! ಹಾಗಾದರೆ ತಡೆ ಎಂದಿನಿಂದ ಹಾಕಬಹುದು !

ಅವ್ವನ ಛಜೀತಿಯಂತು ಆಗಲೆ ಇಲ್ಲ. ಅಪ್ಪನಂತು ವಿಚಾರ ಮಗ್ನನಾಗಿ ಕೂತುಬಿಟ್ಟನು. ಇದೇನೆಂದು ತಿಳಿಯದೆ ಅಂತರ್ಮುಖಿಯು ಖಿನ್ನಮುಖಿಯಾಗಿ ಅಲ್ಲಿಂದ ಜಾರಿದಳು. ಮತ್ತು ಶ್ಯಾಮಸುಂದರ ಬಂದಿದ್ದನ್ನು ನೋಡಿ ಅವನೊಡನೆ ಆಡುವದರಲ್ಲಿ ಎಲ್ಲವನ್ನು ಮರೆತುಬಿಟ್ಟಳು.



# ಗ್ರಹಗಳು
## ಮತ್ತು
# ಮನುಷ್ಯನ ಮೇಲೆ ಅವುಗಳ ಪರಿಣಾಮ

ಲೇಖಾಂಕ ೪

**ಲೇ:— ಶ್ರೀ. ಹುಚ್ಚಪ್ಪ.**

**ಕನ್ಯಾರಾಶಿ:—** ಪೃಥ್ವಿತತ್ವದ ಮೂವರಲ್ಲಿ ಮಧ್ಯಮ ಎಂದು ತಿಳಿಯಲ್ಪಡುತ್ತದೆ. ಅದರ ಪರಿಣಾಮ ವ್ಯಕ್ತಿಗಳ ದೇಹದಮೇಲೆ ಸಣ್ಣ ಮತ್ತು ದೊಡ್ಡ ಜ್ಞಾನ ತಂತುಗಮೇಲೆ ಶುಷುಮ್ನಾನಾಡಿಯ ಮೇಲೆ (Solar plexus) ಮತ್ತು ಪ್ಲೀಹಾ (Spleen) ಇವುಗಳ ಮೇಲೆ ಬಹಳವಾಗುತ್ತದೆ. ಅಭಿಸರಣ ಮತ್ತು ಆಂಧೋಲನ ಇವು ಎರಡಕ್ಕೂ ಪೋಷಕವಿರುತ್ತದೆ. ಈ ರಾಶಿ ಪೃಥ್ವಿಯಲ್ಲಿ ಗುಪ್ತವಾಗಿರತಕ್ಕಂಥ ಅಗ್ನಿಯ ಸೂಚಕವಿರುತ್ತದೆ.

ನಿಯಮಿತ ಮತ್ತು ವ್ಯವಸ್ಥಿತವಾಗಿ ಕೆಲಸ ಮಾಡುವವರು ಈ ರಾಶಿಯುವರಿರುತ್ತಾರೆ. ಬೇರೆಯವರ ವ್ಯಾಧಿಗಳನ್ನು ಹೋಗಲಾಡಿಸುವ ಸಾಮರ್ಥ್ಯವು ಇವರಲ್ಲಿ ಒಳ್ಳೆಯ ತೆರನಾಗಿ ಇರುತ್ತದೆ. ಇವರ ಹಸ್ತದಲ್ಲಿ ವಹಿಸುತ್ತಿರುವ ಸೂಕ್ಷ್ಮ ದ್ರವ್ಯ

ದಿಂದಲೇ ಇವರಲ್ಲಿ ವ್ಯಾಧಿ ನಿವಾರಕ ಸಾಮರ್ಥ್ಯವು ಇರುತ್ತದೆಂದು ಗೊತ್ತಾಗುತ್ತದೆ. ಉದಾರ್ ಮತ್ತು ಒಳ್ಳೆಯ ಸ್ವಭಾವದ ನಿಮಿತ್ತ ಇವರು ಎರಡನೆಯವರ ಬಯಕೆಗಳ ಸಲುವಾಗಿ ಬಹಳ ಎಚ್ಚರಿಕೆಯನ್ನು ತೆಗೆದುಕೊಳ್ಳುವವರಿರುತ್ತಾರೆ. ತಮ್ಮ ಗೆಳೆಯರ ಹಾಗೂ ಆಪ್ತೇಷ್ಟರ ವಿವಾಹ ಸಂಬಂಧವಾದ ಕೆಲಸಗಳಲ್ಲಿ ಬಹಳ ಲಕ್ಷ್ಯ ಹಾಕುತ್ತಾರೆ. ಆ ವಿವಾಹಗಳನ್ನು ಮುರಿಯುವುದರಲ್ಲಿಯಾಗಲಿ, ಜೋಡಿಸುವುದರಲ್ಲಾಗಲಿ ಇವರು ಸ್ವಲ್ಪ ಸಹ ಯೋಚನೆ ಮಾಡುವುದಿಲ್ಲ.

ಈ ರಾಶಿಯವರು ಬಹಳ ವಿದ್ವಾನರೂ, ಸಂಗೀತ ಕಲೆಯಲ್ಲಿ ವರ್ಚಸ್ಸುಳ್ಳವರೂ ಇರುತ್ತಾರೆ. ತಮ್ಮ ಅಥವಾ ತಮ್ಮ ಮಿತ್ರರ ಗುಪ್ತ ಸಂಗತಿಗಳನ್ನು ಸತ್ತರೂ ಕೂಡ ಯಾರ ಮುಂದೆ ಎಂದೂ ಹೇಳುವುದಿಲ್ಲ. ಎಡಬಲಕ್ಕಿನ ಅವ್ಯವಸ್ಥೆಯಿಂದ ಅಭ್ಯಾಸವಾಗಲಿ ಅಥವಾ ಮತ್ಯಾವುದೇ ಕೆಲಸವಾಗಲಿ ಮಾಡಲು ಸಮರ್ಥರಾಗುವುದಿಲ್ಲ. ಯಾವುದಾದರೂ ಒಂದು ಕೆಲಸಮಾಡಲು ಮೈಮೇಲೆ ತೆಗೆದುಕೊಂಡರೆ ಅದನ್ನೇ ಅವರು ಒಳ್ಳೆಯ ಉತ್ತಮರೀತಿಯಿಂದ ಮಾಡಬಲ್ಲರು. ವಸ್ತ್ರಪ್ರಾವರ್ಣಗಳಲ್ಲಿ ಇವರು ಬಹಳ ಟಾಕಂ, ಠೀಕಂ ಇರುವರು. ಆದರಲ್ಲಿ ಹೆಂಗಸರು ಹೆಚ್ಚು ಅಚ್ಚುಕಟ್ಟಾಗಿರುವರು. ಬಹಳ ರಬ್ಬ್ ಬಟ್ಟೆಗಳನ್ನು ಉಡುವುದರಲ್ಲಿ ಇವರು ನಿಸ್ಸಾಥರು. ತಮ್ಮ ಸಂಬಂಧಿಕರ ಮೇಲೆ ಬಹಳ ಪ್ರೇಮ ಮಾಡುವರು. ತಮ್ಮ ಉಚ್ಚಕುಲದ ಬಹಳ ಅಭಿಮಾನ ಇವರಿಗಿರುವುದು. ವ್ಯವಹಾರ ಅಥವಾ ಪರಮಾರ್ಥ ಯಾವ ಬೇಕಾದ ತತ್ವವನ್ನು ಇವರು ಅಗತ್ಯ ಬಿದ್ದಂತೆ ಸ್ವೀಕರಿಸುವರಿರುವರು. ಗಾಳಿಗೋಪುರ ಕಟ್ಟುವುದರಲ್ಲಿ ಇವರ ಮನಸ್ಸು ವ್ಯಗ್ರವಾಗುವುದಿಲ್ಲ. ಉಪಯುಕ್ತ ಕೆಲಸಗಳಲ್ಲಿಯೇ ತೊಡಗುವರು. ಕೆಲವು ದಿವಸ ಗೊತ್ತಾದ ಮನುಷ್ಯರ ಎಲ್ಲ ದೋಷಗಳನ್ನು ತಮ್ಮವುಗಳೆಂದೇ ತಿಳಿಯುವರು.

ಆಧ್ಯಾತ್ಮಕ ವಿಷಯಗಳಲ್ಲಿ ಪ್ರವೇಶಮಾಡದೆ ಇದ್ದ ಈ ರಾಶಿಯ ಜನರು, ಮನಬಂದಂತೆ ಬೇರೆಯವರ ಟೀಕೆಯನ್ನು ಮಾಡುವರು. ಏಕೆಂದರೆ ಎಲ್ಲ ಮನುಷ್ಯರ ಚೇಷ್ಟೆಮಾಡುವ ಸ್ವಭಾವದವರಿರಬಾರದೆಂದು ಆಶೆಯು ಇವರಲ್ಲಿರುತ್ತದೆ. ಆಶ್ಚರ್ಯಕಾರಕವಾಗಿ ಇವರು ರೂಪವಂತರು. ಎರಡನೆಯವರನ್ನು ಆಕರ್ಷಣೆ ಮಾಡುವಂತಹವರು. ಮತ್ತು ಒಳ್ಳೆಯ ಪ್ರತಾಪಶಾಲಿಗಳಿರುವರು. ಎಲ್ಲಿಯವರೆಗೆ ಎಲ್ಲ ಕಡೆಗೂ ವ್ಯವಸ್ಥೆ ಇದೆಯೆಂದು ಇವರಿಗೆ ಅನಿಸುವುದೋ, ಅಲ್ಲಿಯವರೆಗೆ ಇವರ ಆರೋಗ್ಯವೂ ಸರಿಯಾಗಿರುವುದು. ಅವ್ಯವಸ್ಥೆಯ ಅರಿವು ಉಂಟಾದ ಕೂಡಲೆ, ಇವರ ಪ್ರಕೃತಿಯು ಕೆಡುವುದು. ಯಾವ ಸ್ಥಳದಲ್ಲಿ ಕಲಹ ಮತ್ತು ಸಿಟ್ಟು ಇರುತ್ತದೆಯೋ, ಅಲ್ಲಿ ಬೇಕಾದಂಥ ಸುಗ್ರಾಸ ತಿನ್ನಲು ಇದ್ದರೂ ಕೂಡ ಲಾಭವಾಗುವುದಿಲ್ಲ. ದೇಹದ ಕಟ್ಟಡವು ಬಹಳ ಸಶಕ್ತವಾಗಿರುವುದು. ಎತ್ತರಿಕೆಯಲ್ಲಿ ಇವರು ಮಧ್ಯಮ ಪ್ರಮಾಣದವರು, ಅಥವಾ ಸ್ವಲ್ಪ ಹೆಚ್ಚು ಎತ್ತರವಿರುವರು. ಇವರ ಮುಖವು ಉದ್ದಾಕಾರದ್ದಿರುವುದು. ಆದರಲ್ಲಿದ್ದ ಬುದ್ಧಿಪ್ರಭಾವದ ಅರಿವು ಉಂಟುಮಾಡಿಕೊಡುವುದು. ಸ್ವರವು ಮಧುರ.

ಈ ಜನರ ನಡತೆಯಲ್ಲಿ ಬಹಳ ವಿನಯತುಂಬಿರುವುದು. ಎರಡನೆಯುವರ ಪರಿಚಯುವು ಇವರಿಗೆ ಎಳ್ಳಷ್ಟೂ ಪ್ರಿಯವಾಗಿರುವದಿಲ್ಲ. ಮಿತ್ರರನ್ನು ಆರಿಸುವುದ ರಲ್ಲಿ ಇವರು ಬಹಳ ವಿಚಾರಶೀಲರಿರುವರು. ತುಲ, ಧನು, ಅಥವಾ ತಮ್ಮ ರಾಶಿಯು ವರೊಡನೆ ಮಿತ್ರತ್ವವು ಬಹಳ ಅನುಕೂಲವಾಗಿ ಕಂಡುಬರುವುದು. ಶ್ರೀಮಂತ ಮತ್ತು ಪ್ರಸಿದ್ಧ ಜನರ ಗೆಳೆತನವು ಇವರಿಗೆ ಬಹಳ ಸೇರುವುದು. ಎರಡನೆಯವರ ಮೇಲೆ ಅಧಿಕಾರ ನಡೆಸುವ ಪ್ರವೃತ್ತಿಯವರಿರುವರು. ಎರಡನೆಯುವರ ದೋಷ ಅಥವಾ ಕುಂದುಕೊರತೆಗಳ ಮೇಲೆ ನಿರಂಕುಶವಾಗಿ,ಅಖಂಡವಾಗಿ ಟೀಕೆಮಾಡುವ ಇವರ ಸ್ವಭಾವವು ಇವರಲ್ಲಿಯ ಒಂದು ದೊಡ್ಡ ದೋಷವಾಗಿರುವುದು. ಸ್ವಂತದ ದೋಷಗಳ ಕಡೆಗ ಇವರ ಲಕ್ಷ್ಯ ಇರುವುದಿಲ್ಲ. ಯಾರಾದರೂ ಅವುಗಳನ್ನು ತೋರಿಸಲು ಹೋದರೆ ಇವರು ಅವುಗಳನ್ನು ಒಪ್ಪುವುದಿಲ್ಲ ಮತ್ತು ಸ್ವೀಕರಿಸುವುದಿಲ್ಲ. ದುಡ್ಡು ಮತ್ತು ಪದವಿಯು ಕಟ್ಟಾಅಭಿಮಾನಿಗಳಿರುವರು. ಈ ರಾಶಿಯು ಅಶಿಕ್ಷಿತ ಮನುಷ್ಯನು ಶ್ರೀಮಂತನಾದರೆ ಒಣ ಡೌಲು ಮಾಡುವವನು, ಮತ್ತು ಮುಖಸ್ತುತಿ ಯಿಂದ ಬಹಳ ಕೆಟ್ಟುಹೋಗುವನು. ಸ್ವಂತಮನಸ್ಸಿನಿಂದ ಗೃಹಿಸಲ್ಪಟ್ಟಂತಹ ಎಷ್ಟೋ ರೋಗಗಳೂ ಮತ್ತು ಬೇನೆಗಳೂ ಇದಿರಿಗೆ ಬರುವುದು. ಸೃಷ್ಟಿನಿಯಮ ದಂತೆ ನಡೆಯುವುದೇ ಇವರಿಗೆ ನಿಷ್ಫಲವಾಗದಂತಹ ಒಂದೇ ಒಂದು ಔಷಧವಿರು ವುದು. ಇವರ ಆರೋಗ್ಯ ಸ್ವಭಾವದ ನಿಮಿತ್ತ ಎಡಬಲಕ್ಕಿನ ಮನುಷ್ಯರ ಮತ್ತು ಪ್ರಾಣಿಗಳ ಚಿತ್ತವು ಅವ್ಯವಸ್ಥಿತವಾಗುವುದು. ಹೀಗಾದಲ್ಲಿ ಇವರು ತಿಳಿದುಕೊಳ್ಳು ವುದೇನಂದರೆ ಅವರೇ ದೊಡ್ಡ ಸಂಕಟದಲ್ಲಿ ಬಿದ್ದಿರುವರು.

ಅನವಶ್ಯಕವಾಗಿ ಎರಡನೆಯುವರ ದೋಷಗಳನ್ನು ಎಣಿಸುವವರು ಮತ್ತು ಇಲ್ಲದ ಸೊಲ್ಲದ ಗೊಂದಲವನ್ನು ಹಾಕುವ ಸ್ವಭಾವದವರು ಇರುವರು. ಎಲ್ಲೆಲ್ಲಿ ಹೋಗುವರೋ ಅಲ್ಲಲ್ಲಿ ರಸಭಂಗ ಮಾಡುವರು. ಈ ತೆರನಾಗಿ ಎರಡನೆಯುವರ ಮೇಲೆ ಸಂತಾಪಮಾಡಿ ಪೀಡೆಯನ್ನು ಮತ್ತು ನಿರಾಶೆಯನ್ನು ಉಂಟುಮಾಡುವುದ ರಿಂದ ಸ್ವತಃ ವಿಕಾರಿಗಳಾಗಿ ಸ್ವಂತದ ಜೀವವನ್ನು ದುಃಖಮಯುವನ್ನಾಗಿ ಮಾಡಿ ಕೊಳ್ಳುವರು. ವಾಯು ಮತ್ತು ಅಗ್ನಿ ತತ್ವದ ರಾಶಿಯು ಜನರಿಗೆ, ಈ ರಾಶಿಯುವ ರಿಂದ ಎಷ್ಟೋಸಲ ಬಹಳ ಸಂಕಟವುಂಟಾಗುವ ಸಂಭವವಿದೆ.

ಸ್ವಂತದ ನಿರ್ದಯ ವಾಕ್ಪ್ರಹಾರಗಳಿಂದ ಇದಿರಾಳುಗಳ ಮರ್ಮಸ್ಥಳದ ಭೇದವನ್ನು ಮಾಡಿ ಎಷ್ಟೋಸಲ ಪ್ರಾಣವನ್ನಾದರೂ ಸಹ ತೆಗೆದುಕೊಳ್ಳಬಹುದು. ಎರಡನೆಯುವರ ಹಿತದಸಲುವಾಗಿ ತಾವು ಈ ಪ್ರಕಾರವಾಗಿ ಮಾಡುತ್ತಿರುವರೆಂದು ತಿಳಿದುಕೊಳ್ಳುತ್ತಿರುವರು. ಆದರೆ ತಮ್ಮ ಈ ಪ್ರವೃತ್ತಿಗಳಿಂದ ಈ ಜಗತ್ತಿನಲ್ಲಿ ಎಷ್ಟು ಹೃದಯಗಳು ಛಿನ್ನ ವಿಚ್ಛಿನ್ನ ವಾಗುತ್ತಿರುವವು ಎಂಬ ಅರಿವು ಇವರಲ್ಲಿ ಉಂಟಾ ದಲ್ಲಿ ಇವರು ಆಮರಣ ಮೌನವ್ರತವನ್ನು ಸೇವಿಸದೆ ಇರಲಾರರು. ಇಂತಹ ಪ್ರಸಂಗಗಳಲ್ಲಿ ಹೀಗೇ ಆಗೇ ತೀರುವವೆಂಬ ಭವಿಷ್ಯವರ್ತಿಸುವ ಪ್ರವೃತ್ತಿಯು ಇವ

ರಲ್ಲಿ ಕಂಡುಬರುವುದು. ಬಾಹ್ಯಾಡಂಬರದ ಮೋಹವು ಇವರಲ್ಲಿ ಬಹಳವಿರುವುದರಿಂದ ಬಹಿರಂಗವಾಗಿ ಅಚ್ಚುಕಟ್ಟುತನದಿಂದ ಇರುವ ಪ್ರಬಲ ಇಚ್ಛೆಯು ಇವರಲ್ಲಿರುವುದರಿಂದ, ಅವರು ಹಲವು ಸಲ ಡಾಂಭಿಕತನದಿಂದ ಒಣ ಡೌಲು ಇವರಿಗೆ ಮಾಡಬೇಕಾಗುವದು. ಇದರಿಂದ ವೆಚ್ಚದ ಮಡುವಿನಲ್ಲಿ ಬಿದ್ದು ಸಾಲಗಾರ ಆಗಬೇಕಾಗುವುದು.

ಎಲ್ಲ ರಾಶಿಗಳ ಮನುಷ್ಯರಿಗಿಂತ, ಈ ರಾಶಿಯು ಜನರು ಸ್ವಾಭಾವಿಕವಾಗಿಯೇ ಎಲ್ಲ ತೆರನಾದ ರೋಗಗಳಿಂದ ಮುಕ್ತರಾಗಿರುವರು. ದಣಿದಿರುವೆವು, ಅಥವಾ ಯಾವದಾದರೂ ಬೇನೆ ಉಂಟಾಗಿರುವುದೆಂವೆನಿಸಿದಲ್ಲಿ ಇವರು ಸ್ವಲ್ಪ ಕಾಲ ಸೃಷ್ಟಿ ದೇವತೆಯ ಸಂಘದಲ್ಲಿ ಕಳೆದರೆ, ಇವರು ಕುದುರೆಯಂತೆ ಚುರುಕಾಗುವರು. ಇವರಲ್ಲಿ ಸೌಂದರ್ಯವು ಮತ್ತು ತಾರುಣ್ಯವು ಬಹುಕಾಲ ಉಳಿಯುವುದು. ಆದರೆ ಇವರು ತಮ್ಮ ಅಜ್ಞಾನದ ನಿಮಿತ್ತ ಯಾವಾಗಲೂ ಔಷಧಿಗಳನ್ನು ತಮ್ಮ ಒಡಲಲ್ಲಿ ಹಾಕುತ್ತಲೇ ಇರುವರು. ಇದರಿಂದ ಅವರು ತಿನಿಸು ಉಣಿಸುಗಳಲ್ಲಿ ಅಮಿತಾಹಾರಿಯಾಗುವರು. ಇಂಥವರಿಗೆ ಈ ನಿಯಮ ಹತ್ತುವದಿಲ್ಲ

ಈ ಜಗತ್ತಿನಲ್ಲಿ ಯಾವದೂ ನಿರ್ದೋಷ ಮತ್ತು ಪೂರ್ಣ ಇರುವುದಿಲ್ಲ ಎಂಬ ವಿಚಾರ ಸರಣಿಯಿಂದ ನಿರ್ಣಯಮಾಡಿ, ಸ್ವಂತ ದೋಷಗಳನ್ನು ತಿಳಿದುಕೊಂಡು ನಡೆಯಬೇಕು. ಸ್ವತಃ ಉದಾರರಿರುವರು. ಆದ್ದರಿಂದ ಎರಡನೆಯವರ ಯೋಗಕ್ಷೇಮ ನೋಡುವುದು ಇವರಿಗೆ ಬಹಳ ಸೇರುವುದು. ಆದ್ದರಿಂದ ತಮ್ಮ ವ್ಯವಹಾರವನ್ನು ಗುಪ್ತವಿಡಲು ಯತ್ನಿಸುವರು. ಮತ್ತು ತಮ್ಮ ಹತ್ತಿರ ಒಂದು ಕಾಸು ಸಹ ಇಲ್ಲವೆಂಬುದನ್ನು ಎರಡನೆಯವರಿಗೆ ತೋರಗೊಡರು. ಈ ಸ್ವಭಾವ ಗೆಲ್ಲುವ ಪ್ರಯತ್ನದಿಂದ ಮನಸ್ಸು ಸ್ವಚ್ಛಮಾಡಿಕೊಳ್ಳಲು ಯತ್ನಿಸಬೇಕು. ತಾವು ಬಡವರೆಂದು ಜನರು ತಿಳಿದುಕೊಂಡಲ್ಲಿ ತಮ್ಮ ಪ್ರತಿಷ್ಠೆಗೆ ಕುಂದೆಂಬ ತಪ್ಪು ಹೆದರಿಕೆಯನ್ನು ಗೆಲ್ಲತಕ್ಕದ್ದು, ತೀಕ್ಷ್ಣವಾದ, ವಿವೇಕಬುದ್ಧಿ, ಅಧ್ಯಾತ್ಮಿಕ ಪ್ರೇಮ ಮತ್ತು ಅನ್ಯರಹಿತಮಾಡುವ ಇಚ್ಛೆಯನ್ನು ಇವರು ಪೋಷಿಸಿದರೆ ಇವರು ಬಹಳ ವಿಶ್ವಾಸಕ್ಕೆ ಪಾತ್ರರು. ಮತ್ತು ಪ್ರೋತ್ಸಾಹಕರೂ ಆಗುವ ಸ್ವಂತದ ರಾಶಿಯುವರಕೂಡ ಇವರು ಲಗ್ನ ಆಗುವದು ಬಹಳ ಸುಖವನ್ನುಂಟುಮಾಡುವದು. ಕನ್ಯಾ ಮತ್ತು ತುಲಾ ರಾಶಿಯುವರ ಲಗ್ನದಿಂದ ಬುದ್ಧಿವಾನ್ ಪ್ರಜಾ ಉಂಟಾಗುವುದು. ಆದರೆ ಅವರ ಶರೀರ ಪ್ರಕೃತಿಯಿಂದ ಅಷ್ಟುಬಲವಾನರಿರಲಾರರು. ಕನ್ಯಾ ಮತ್ತು ಧನು ರಾಶಿಯುವರ ಲಗ್ನದಿಂದ ಪ್ರಜೆಯು ಅಸಾಧಾರಣ ಬುದ್ಧಿಯುಳ್ಳದ್ದು, ವೈಭವಶಾಲಿ,ಅಪೂರ್ವ ಶಕ್ತಿಯುಳ್ಳದ್ದಾಗುವುದು.

ಈ ರಾಶಿಯಲ್ಲಿ ಹುಟ್ಟಿದ ಮಕ್ಕಳು ಸೃಷ್ಟಿ ಸೌಂದರ್ಯವನ್ನು ಬಹಳ ಮೆಚ್ಚುವರು. ಕೆಲವುವಸ್ತುಗಳ ಕಡೆಗೆ ಹೆಚ್ಚಿಗೆ ಗಮನ ಕೊಡುವವರು. ಕೆಲವು ವಸ್ತುಗಳಮೇಲೆ ಎಳ್ಳಷ್ಟೂ ಗಮನ ಕೊಡಲಾರರು.

ಬಹಳ ನಿಶ್ಚಯ ಶಕ್ತಿಯುಳ್ಳವರು. ತೀವ್ರ ವಿವೇಕಬುದ್ಧಿಯುಳ್ಳವರು ಮತ್ತು ತಿಳುವಳಿಕೆಯುಳ್ಳವರು. ಧಂಧೆಗಳಕಡೆಗೆ ಪ್ರವೃತ್ತಿಯುಳ್ಳವರು. ಪ್ರಪಂಚ ದಲ್ಲಿಯ ದುಃಖದ ಕಡೆಗೆ ಅಥವಾ ಮಿತ್ರರ ದೋಷಗಳಕಡೆಗೆ ಅವರು ಎಂದೂ ಲಕ್ಷ್ಯಕೊಡಬಾರದು. ಏಕಂದರೆ ಅದರಿಂದ ಲಾಭದ ಬದಲು ಹಾನಿಯೇ ಆಗು ವುದು. ಬುದ್ಧಿವಾನ್ ತಾಯಿತಂದೆಗಳು ಸಂಸಾರದಲ್ಲಿ ಪ್ರಾಣಿಗಳ ಸಂರಕ್ಷಣೆ ಕಡೆಗೆ ಶುಭ ಮತ್ತು ಸೌಂದರ್ಯವುಳ್ಳ ವಸ್ತುಗಳ ಕಡೆಗೆ ಅವರ ಲಕ್ಷ್ಯವು ಹೆಚ್ಚಿಗೆ ಸೆಳೆಯು ವಂತೆ ಮಾಡಬೇಕು. ಎರಡನೆಯವರ ಸಲುವಾಗಿ ಅವರು ಕೊಟ್ಟ ಅಭಿಪ್ರಾಯ ಗಳನ್ನು ಧರಿಸಿದಂತೆ ಎಚ್ಚರಿಕೆ ತೆಗೆದುಕೊಳ್ಳಬೇಕು.

ನಿಸರ್ಗದ ಅಭ್ಯಾಸವು ಅವರಿಗೆ ಬಹಳ ಸೇರುವುದು. ಆದ್ದರಿಂದ ಅಂತಹ ಕೆಲಸಗಳನ್ನೂ, ಗಿಡಗಂಟೆಗಳನ್ನು ಹಚ್ಚುವುದನ್ನೂ, ಅವುಗಳನ್ನು ಕತ್ತರಿಸುವುದನ್ನೂ ಮಾಡಿಸಬೇಕು. ಸಂಗೀತಕಲೆಯ ಶಿಕ್ಷಣವನ್ನು ಕೊಡಬೇಕು. ಯಾವಾಗಲೂ ಯೋಗ್ಯಗ್ರಂಥಗಳ ಮತ್ತು ಯೋಗ್ಯ ಆನಂದಿ ಮಿತ್ರರುಗಳ ಗೆಳೆತನವನ್ನು ಮಾಡಿಸ ಬೇಕು. ಶರೀರ ಸ್ವಚ್ಛವಿಡುವುದನ್ನು ಕಲಿಸಬೇಕು. ಶಕ್ಯವಿದ್ದಷ್ಟು ಎಂದೆಂದೂ ಔಷಧಿಗಳನ್ನು ಕೊಡಕೂಡದು.

ಸ್ವಾಮಿ ಬುಧ, ಆಕಾಶ ಬಣ್ಣದ ಚಟ, ಸುವರ್ಣ ಮತ್ತು ಕರಿಬಣ್ಣವುಳ್ಳದ್ದು.

ಎರಡನೆಯವರ ದೋಷಗಳನ್ನು ಎಣಿಸುವ ಮತ್ತು ಬೇರೆಯವರ ಮೇಲೆ ಅಧಿಕಾರನಡೆಸುವ ಸ್ವಭಾವವನ್ನು ಗೆಲ್ಲಲು ಕಲಿಸಬೇಕು. ಮಿಥ್ಯಾಭಿಮಾನ, ಮಿಥ್ಯಾ ಲೋಭ, ಕೆತ್ತೆಬಝಿ ಕಾರಬಾರ ಮಾಡುವ ಪ್ರವೃತ್ತಿ ಮನಸ್ಸಿನಿಂದ ಕಾಲ್ಪನಿಕ ರೋಗಗಳನ್ನು ಕಲ್ಪಿಸುವ ಪ್ರವೃತ್ತಿ ಒಣ ಬಾಯ್ಬುಢಾಯಿ, ಆತ್ಮಸ್ತುತಿ, ಕೊಟ್ಟು ಬಿಡುವ ಸ್ವಭಾವ ಈ ಎಲ್ಲ ದುರ್ಗುಣಗಳೂ ಇರುವ ಸಂಭವವಿದೆ. ಅವುಗಳ ಪ್ರವೃತ್ತಿಗಳನ್ನು ಚಿಕ್ಕಂದಿನಿಂದಲೇ ಗೆಲ್ಲುವ, ತಡೆಯುವ ಪ್ರಯತ್ನ ಮಾಡಬೇಕು.

ಸಿಂಹ ಮತ್ತು ಕನ್ಯಾರಾಶಿಯ ಸಂಧಿ ಸಮಯ. ಅಗ್ನಿ ಮತ್ತು ಪೃಥ್ವಿ ತತ್ವದ ಬಹಳ ಬಲವುಳ್ಳ ಸಂಯೋಗ. ಅಗ್ನಿ ತತ್ವ: ಸ್ವಂತದನಾಶವನ್ನು ತೋರಿಸದೆ ಉತ್ಪಾದನವನ್ನೇ ತೋರಿಸುವುದು ಅನುಭವಕ್ಕೆ ಬರುತ್ತದೆ. ಈ ಸಂಧಿ ಸಮಯ ದಲ್ಲಿ ಹುಟ್ಟಿದ ಸ್ತ್ರೀಯರು ಪ್ರತಿಯೊಂದು ವಸ್ತುವಿನೊಳಗೆ ಪ್ರೇಮ ಮಾಡುವವರಿ ರುತ್ತಾರೆ. ಅವಿಶ್ರಾಂತ ಶ್ರಮಮಾಡುವರು, ಎರಡನೆಯವರ ಅಂತಃಕರಣಕ್ಕೆ ಸಮಾ ಧಾನಮಾಡುವ ಶಕ್ತಿಯುಳ್ಳವರಿರುವುದರಿಂದ ಅವರು ಉತ್ತಮ ಶಿಕ್ಷಕರೂ, ವೈದ್ಯರೂ, ಮತ್ತು ಮಾನಸ ಶಾಸ್ತ್ರಜ್ಞರೂ ಆಗಬಲ್ಲರು.

ಕ್ವಚಿತವಾಗಿಯೇ ಯಾರಾದರೂ ಅಪಮಾನ ಮಾಡುವಂತಹವರು ಕ್ಷೋಭ ವನ್ನುಂಟುಮಾಡುವಂಥವರು ಹುಟ್ಟುವರು. ಬೇರೆ ಬೇರೆ ರಾಶಿಗಳಲ್ಲಿ ಹುಟ್ಟಿ ದಂತಹ ಜನರಲ್ಲಿ ಅಪಮಾನ ಮಾಡುವಂತಹ ಅಥವಾ ತಿಳಿದುಕೊಳ್ಳುವಂತಹ ಕಂಡು ಬರುವ ಚಟವು ಈ ರಾಶಿಯ ಜನರಲ್ಲಿ ಕಂಡುಬರುವುದಿಲ್ಲ. ನಿಸರ್ಗದ ಸಹ

ವಾಸದಲ್ಲಿ ಶಕ್ಯವಿದ್ದಷ್ಟು ಕಡಿಮೆ ಬಟ್ಟೆಗಳನ್ನು ಧರಿಸಿ ಕಾಲಕಳೆಯುವುದು ಇವರಿಗೆ ಬಹಳ ಸೇರುವುದು. ಗಲೀಜು ಮನೆಯ ವಾತಾವರಣದಲ್ಲಿ ಇರುವುದು ಇವರಿಗೆ ಸೇರುದಿಲ್ಲ. ಉತ್ತಮ ತೆರನಾದ ವಸ್ತುಗಳನ್ನು ಧರಿಸುವರು. ಇವರು ಬಹಳ ಮಾಡಿ ಉತ್ತಮ ಮತ್ತು ಬುದ್ಧಿವಾನ ನಾಗರಿಕರಾಗುವರು.



# ಗೋಕರ್ಣ ಮಹಾತ್ಮೆ

ಸಂಗ್ರಹಿಸಿದವರು :– ಶ್ರೀಮತಿ ಪಾರ್ವತೀಬಾಯಿ ಭಟ್ಟ.

[ ಶಿವರಾತ್ರಿ ಕನ್ನಡಿಗರಿಗೆ ಪವಿತ್ರವಾದ ಹಬ್ಬ. ಉತ್ತರ ಕನ್ನಡ ಜಿಲ್ಹೆಯಲ್ಲಿ ಗೋಕರ್ಣದಲ್ಲಿ ಬಳ್ಳೇ ವಿಜ್ರಂಭಣೆಯಿಂದ ಆಚರಿಸಲ್ಪಡುತ್ತದೆ. ಈ ಜ್ಯೋತಿರ್ಲಿಂಗವನ್ನು ಕುರಿತ ಹಾಡು ಜನಸಾಮಾನ್ಯರಲ್ಲಿ ಹಿಂದಿನಿಂದಲೂ ನೆಲೆಸಿ ನಿಂತಿದೆ. ]



( ಜಯದೇವ ಜಯದೇವ ಎಂಬಂತೆ. )

ಗಜಮುಖ ಗಣಪನ ಭಜಿಸಿ ಶಾರದೆಯನೆ ಸ್ತುತಿಸಿ
ಒರೆವೆನು ಗೋಕರ್ಣದ ಮಹಿಮೆಯ ವಿಸ್ತರಿಸಿ
ನರಲೋಕದಲಿ ಪಾಪ ಅಧಿಕವೆಂದೆನಿಸಿ
ಸುಲಭದ ಗೋಕರ್ಣದ ಮಹಿಮೆಯ ವಿಸ್ತರಿಸಿ, ಜಯದೇವ
ಜಯದೇವ ॥ ೧ ॥

ಒಂದು ದಿನ ಕೈಕಸೆಯೂ ಲಿಂಗವ ಪೂಜಿಸಲು
ಬಂದು ರಾವಣನು ಕಾಲಿಂದ ಛೇದಿಸಲು
ತಂದುಕೊಡುವೆನು ಪ್ರಾಣಲಿಂಗವೆಂದೆನುತ
ಬಂದನೆ ಕೈಲಾಸಕ್ಕೆ ಹರಗೆ ವಂದಿಸುತ ಜಯದೇವ ಜಯದೇವ ॥ ೨ ॥

ಬಂದ ರಕ್ಕಸನಾತಾ ಕಂಡು ಉಪಚರಿಸಿ
ಪ್ರಾಣಲಿಂಗವ ಕೊಡಲು ಸುರರು ಸಂಸ್ತುತಿಸಿ
ಕಂದ ಗಣಪತಿಯು ಭಕ್ತಿಂದಲೆ ಪೂಜಿಸಿ
ವಂದಿಸಿ ಕಳುಹಿದರಾಗಲೆ ಸುರರು ಸಂಸ್ತುತಿಸಿ ಜಯದೇವ
ಜಯದೇವ ॥ ೩ ॥

ಕಂಜಸಖಗರ್ಘ್ಯವನು ಕೊಡುವೆನೆಂದೆನುತ
ಹಂಬಲಿಸಿ ಬರುತಿರಲು ಕಂಡು ಬಾಲಕನಾ
ಕಂದಾ ಹಿಡಿಲಿಂಗವನು ಎಂದೆ ಘರ್ಜಿಸುತಾ
ಲಿಂಗವಕೊಟ್ಟು ನಡೆದನೆ ಅರ್ಘ್ಯಕ್ಕೆಂದೆನುತ ಜಯದೇವ
ಜಯದೇವ || ೪ ||

ಆಡಿದ ಮಾತಿಗೆ ತಪ್ಪದೆ ಬಾಲಕ ಗಣಪಾ
ಮೂರು ಬಾರಿಯು ಕರೆದು ಲಿಂಗವ ಸ್ಥಾಪಿಸಿದಾ
ಆವೇಳೆಗೆ ಸುರರೆಲ್ಲಾ ಜಯ ಜಯ ಶಬ್ದಾ
ಮಂದಾರದ ಮಳೆಗಳನು ಕರೆದರು ಆಶ್ಚರ್ಯ
ಜಯದೇವ ಜಯದೇವ || ೫ ||

ಕೆಟ್ಟ ಬಾಲಕನೆಂದು ಸಿಟ್ಟಲೆ ರಾವಣನು
ಮುಷ್ಟಿಲಿ ಜಾಡಿಸಿ ತೆಗೆದನು ಸಜ್ಜೆಲಿಂಗವನು
ಪಂಚ ದಿಕ್ಕಿಗೆ ಒಗೆಯೆ ಪಂಚಕ್ಷೇತ್ರೆನುತ
ವಂಚಿಸಿ ತೆಗೆದರು ಬಾರದು ಶ್ರೀ ಮಹಾ ಬಲತಾನೆನುತ
ಜಯದೇವ ಜಯದೇವ || ೬ ||

ಕಡುನಾಚಿ ರಕ್ಕಸನು ಜಡಿದನಾಕ್ಷಣದಿ
ಸುರರು ಭೂಸುರರೆಲ್ಲರು ನೆರೆದರು ಅರ್ತಿಯಲಿ
ನಿರ್ವಿಘ್ನದಾಯಕವೆಂದು ಮೊದಲೇ ಪೂಜಿಸಿ
ಮೊದಲಾದ ರಣವೆ ಇತ್ತರು ವಿಘ್ನೇಶ್ವರಗೆನುತ
ಜಯದೇವ ಜಯದೇವ || ೭ ||

ಅಷ್ಟದಿಕ್ಪಾಲಕರೊಳು ಮಧ್ಯದಿಮಹಾಬಲನು
ಅರ್ಧಾಂಗಿ ಸಹಿತ ಸಾಗರನು ಷಣ್ಮುಖನು
ನಿತ್ಯಮಂಗಳದಾ ಜೋಗುಳದಾಮಧ್ಯದಲಿ
ನಿತ್ಯ ರುದ್ರಭಿಷೇಕದ ಭಕ್ತವತ್ಸಲಗೇ ಜಯದೇವ ಜಯದೇವ || ೮ ||

ವರುಷಕೆ ಬರುವದು ಮಹಾಯೋಗ ಶಿವರಾತ್ರಿ
ದರುಶನಕೆಂದ ನೆರೆವರು ಪರುಷೆ ಗಲಾಟೆ
ಪರಮ ಪುರುಷರ ತೇರ ಎಳೆವ ಗಲಾಟೆ
ವೈಕುಂಠ ದೊಡೆಯ ಶ್ರೀವೆಂಕಟನ ಭೇಟಿ
ಜಯದೇವ ಜಯದೇವ || ೯ ||

ಗೋಕರ್ಣದ ಮಹಿಮೆಯನು ಪೇಳಲಾಶ್ಚರ್ಯ
ಸ್ಥಾಪಿಸಿ ಬರೆದರೆ ಗುರು ಚರಿತ್ರೆ ವಿಶೇಷ
ಮಹಾಪಾತಕ ಚಂಡಾಳಿ ಪಾಪವಿನಾಶ
ಕಾಶಿಗಿಂತಲೆ ಅಧಿಕ ಶ್ರೀ ಮಹಾಬಲಲಿಂಗೇಶಾ
ಜಯದೇವ ಜಯದೇವ ॥ ೧೦ ॥

ಗೋಕರ್ಣದ ಒಳಗಿರುವ ತಾಮ್ರದ ಗೌರಿ
ತ್ರಾಸ ಹಿಡಿದು ತೂಗಲು ಗೋಕರ್ಣವೆ ಮೇಲು
ಯಾತ್ರೆ ಮಾಡಿದವರಿಗೆ ಪಾಪ ಪರಿಹಾರ
ಸಪ್ತಜನ್ಮದ ಪಾಪ ಅಳಿದು ಹೋಗುವದು ಜಯದೇವ ಜಯದೇವ ॥ ೧೧ ॥

ಗೋಕರ್ಣದ ಮಹಿಮೆಯನು ನಿತ್ಯಪೇಳಿದರೆ
ಏಳು ಜನ್ಮದ ಪಾಪ ಅಳಿದು ಹೋಗುವದು
ಭಕ್ತಿಮುಕ್ತಿ ಸಂತಾನ ಸೌಭಾಗ್ಯ
ತಪ್ಪದೆ ಕೊಡುವನು ಶ್ರೀ ಮಹಾಬಲಲಿಂಗೇಶಾ
ಜಯದೇವ ಜಯದೇವ ॥ ೧೨ ॥

ಸ್ತ್ರೀಹತ್ಯಾ ಶಿಶುಹತ್ಯಾ ಬ್ರಹ್ಮಹತ್ಯಾಗಳನು
ನಿರ್ಮಿಸಿದನು ಬ್ರಹ್ಮನು ಮಹಾಪಾತಕಗಳನು
ದುಕರ್ಣಿಕ ಚಂಡಾಳಿಕ ರಜಸ್ವಲ ದೋಷಂಗಳನು
ಶಿವಸ್ಮರಣೆಯೆ ತಾಸುಡುವದು ಭಕ್ತಿಂಪೇಳಿಗರೆ
ಜಯದೇವ ಜಯದೇವ ॥ ೧೩ ॥



# "ಬೇಕು" ಗಳ ಕಡಿತದಲ್ಲಿಯೇ ಸ್ವಾತಂತ್ರ್ಯವಿದೆ!

ಲೇ:— ಪ್ರಿ. ಎನ್. ಕರಮುಚಂದ, ಕೆ. ಇ. ಬೊರ್ಡ್ಸ್ ಕಾಲೇಜ, ಧಾರವಾಡ.

ಜಗತ್ತಿನಲ್ಲಿ ಉದ್ಭವಿಸುವ ಬಹುಸಂಖ್ಯಾಕ ತೊಂದರೆಗಳಿಗೆ ಲೋಭವೇ ಮೂಲ ಕಾರಣವಾಗಿದೆ. ಹಿರಿಯ ರಾಷ್ಟ್ರಗಳು ಇಂದು ಜಗತ್ತನ್ನೇ ಆಕ್ರಮಿಸಬೇಕೆಂದು ಆಶಿಸುತ್ತವೆ. ಜಗತ್ತಿನ ಪೇಟೆಯಲ್ಲಿ ತಮ್ಮ ಸರಕುಗಳೇ ಬೆಳಕಿಗೆ ಬರಬೇಕೆಂದು ಅವುಗಳ ಉದ್ದೇಶ. ವೈಯಕ್ತಿಕ ಲಕ್ಷ್ಯ ಪೂರೈಸಲಾರದ, ಒಟ್ಟು ಕುಟುಂಬದಲ್ಲಿ ಬೆಳೆದು, ದುಷ್ಚಟಗಳಿಗೆ ಬಲಿಬಿದ್ದು, ನೌಕರಿಗಾಗಿ ಒದ್ದಾಡಿ, ಕೊಡುವ ಯಜಮಾನನೆದುರು ತಲೆಬಗ್ಗಿಸಿ, ಹೀನ ಪರಿಸ್ಥಿತಿಯಲ್ಲಿ ಇಂದು ಎಷ್ಟು ಜನ ಗೋಳಾಡುತ್ತಿಲ್ಲ? ಇದೆಲ್ಲಕ್ಕೆ ಕಾರಣ ಇಂದು ಅಳತೆಮೀರಿ ಬೆಳೆದ ನಮ್ಮ 'ಬೇಕು' ಗಳು, ಬೇಡಿಕೆಗಳು! ತಿಂಡಿ ತಿನಿಸು, ವೇಷಭೂಷಣಗಳಲ್ಲಿಯ ವ್ಯರ್ಥವಾದ ವೆಚ್ಚವನ್ನು ಕಡಿಮೆಮಾಡಿ, ಜೀವನದಲ್ಲಿ ಆರ್ಥಿಕ ಸ್ವಾತಂತ್ರ್ಯ ದೊರೆತಾಗಲೇ ಮದುವೆಯಾಗಿ, ಮಿತವಾಗಿ ಎರಡೋ, ಮೂರೋ ಮಕ್ಕಳನ್ನು ಪಡೆದು, ಕರ್ತವ್ಯದಕ್ಷನಾಗಿದ್ದರೆ, ಯಾವ ವ್ಯಕ್ತಿಯಲ್ಲಿ ತಾನೇ ಸ್ವಾಭಿಮಾನ, ದೇಶಪ್ರೇಮ, ಸಾರ್ವಜನಿಕಸೇವಾಭಾವ ಮೂಡಿ ಬರಲಾರವು? ನಮ್ಮ ಬೇಡಿಕೆಗಳನ್ನು ಕಡಿಮೆಮಾಡಿ, ರಾಜಕೀಯ ಸ್ವಾತಂತ್ರ್ಯದ ಸಹಾಯದಿಂದ ಇಂದು ನಾವು ವೈಯ್ಯಕ್ತಿಕ ಸ್ವಾತಂತ್ರ್ಯವನ್ನು ಗಳಿಸಬೇಕಾಗಿದೆ.

ನನ್ನ ಪರಿಚಯದ ಹಿರಿಯರೊಬ್ಬರಿದ್ದಾರೆ. ಅವರ ಬಗ್ಗೆ ಹೇಳುವದೆಂದರೆ, ಇದುವರೆಗೂ ಅವರು ತಾಯಿತಂದೆ, ಗುರುಹಿರಿಯರು, ದೇವರುಗಳನ್ನು ಬಿಟ್ಟು ಇನ್ನಾರಿಗೂ ವಂದನೆ ಮಾಡಿಲ್ಲ. ಅವರ 'ಬೇಕು' ಗಳೇ ಕಡಿಮೆಯಾದ್ದರಿಂದ ಯಾರೊಬ್ಬರೆದುರಿಗೂ ತಲೆ ತಗ್ಗಿಸಿ ಪಡೆಯಬೇಕಾದ ಸೌಭಾಗ್ಯ ಅವರಿಗಿಲ್ಲವೇ ಇಲ್ಲ! ಅವರಿಗೆ, ಹಿಂದುಸ್ಥಾನದ ಒಳಹೊರಗೆ ದೊರೆಯಬಹುದಾದ ಎಲ್ಲ ಪದವಿಗಳೂ ಇವೆ! ಪೌರ್ವಾತ್ಯ, ಪಾಶ್ಚಾತ್ಯ ರಾಷ್ಟ್ರಗಳ ಬಹು ಭಾಗವನ್ನು ಅವರು ಸಂದರ್ಶಿಸಿದ್ದಾರೆ. ಯುರೋಪ ಖಂಡದಲ್ಲಿಯ ಎಲ್ಲ ದೇಶಗಳಿಗೂ ಭೆಟ್ಟಿಯಿತ್ತಿದ್ದಾರೆ. ಅಮೇರಿಕಾ, ಕಾನಡಾ, ಅರ್ಜೆಂಟಿನಾ, ಆಸ್ಟ್ರೇಲಿಯ, ಬರ್ಮಾ, ಮಲಯಾ, ಚೈನಾ, ಜಪಾನಗಳೆಲ್ಲ ಅವರು ಕಂಡ ದೇಶಗಳು! ಹಿಂದುಸ್ತಾನದಲ್ಲಿಯ ಸಮಶೀತೋಷ್ಣ ಹವೆಯ ಎಲ್ಲ ಪ್ರದೇಶಗಳಲ್ಲಿ— ಕೊಡಕ್ಕೆನಲ್, ಉಟಕಮಂಡ, ಶಿಲ್ಲಾಂಗ, ದಾರ್ಜಿಲಿಂಗ, ಮೌಂಟಅಬು, ನೈನಿತಾಲ, ಮಸೂರಿ, ಸಿಮ್ಲಾ, ಪಾಚ್ಮಾರಿ, ಮಹಾಬಳೇಶ್ವರ, ಧರ್ಮಶಾಲಾ, ಮರಿ, ಕಾಶ್ಮೀರ ಇತ್ಯಾದಿಗಳಲ್ಲೆಲ್ಲ ಒಂದೆರಡು ಬೇಸಿಗೆಗಳನ್ನಾದರೂ ಕಳೆದಿದ್ದಾರೆ. ಹಿಂದುಸ್ಥಾನದ ಅಳತೆಯ ಕೋಲಿನಿಂದಳೆದರೆ, ಅವರು ಬಡವರಲ್ಲ. ನಿಜ. ಆದರೆ ಹಿಂದುಸ್ಥಾನದ ಒಳಹೊರಗಿನ ಯಾವ ಪ್ರವಾಸದಲ್ಲೂ ಅವರು ಚಹ, ಕಾಫೀ, ಕೋಕೋ, ಯಾವುದನ್ನೂ ಸೇವಿಸಿಲ್ಲ, ಇನ್ನುಳಿದ ಮಾದಕ ಪೇಯಗಳ ಮಾತಂತೂ ದೂರವೇ! ತಂಬಾಕನ್ನೂ ಸೇದಲಾಗಲಿ, ಎರಿಸಲಾಗಲಿ, ಯಾವದೇ

ರೂಪದಲ್ಲಿ ಉಪಯೋಗಿಸಿಲ್ಲ; ಜನ್ಮದಲ್ಲಿ ಹಪ್ಪಳ, ಉಪ್ಪಿನಕಾಯಿಗಳನ್ನು ಮುಟ್ಟಿಲ್ಲ ! ಯುರೋಪಿನಲ್ಲಿದ್ದಾಗಲೂ, ದಿನಕ್ಕೆರಡು ಸಲ ತೀರ ಸಾದಾ ಊಟದ ಮೇಲೆಯೇ ಅವರಿದ್ದುದು. ಬಹಳ ತಡವಾಗಿ ಮದುವೆಯಾದರು; ಹುಟ್ಟಿದ ಮಕ್ಕಳು ಮೂರು ಮಾತ್ರ. ಅವರು ಕೂಡ, ತಂದೆಗೆ ಐವತ್ತು ವರ್ಷಗಳಾಗುವದರೊಳಗಾಗಿ ಪ್ರಬುದ್ಧರಾಗಿ ಜೀವನದಲ್ಲಿ ಸುವ್ಯವಸ್ಥಿತವಾಗಿ ನೆಲೆಸಿದರು ! ಆ ಹಿರಿಯ ಮನುಷ್ಯರು, ತಿಂಗಳದ ತಮ್ಮ ಆದಾಯದಲ್ಲಿ ಅರ್ಧಕ್ಕಿಂತ ಹೆಚ್ಚನ್ನು ದೈನಂದಿನ ಕಾರ್ಯಗಳಿಗೆ, ಎಂದೂ ವೆಚ್ಚಮಾಡಲಿಲ್ಲ. ಮಿಕ್ಕ ಹಣ, ಜ್ಞಾನಾರ್ಜನೆ, ಪ್ರವಾಸ, ಆರೋಗ್ಯ ಸಂಪಾದನೆ, ದೀನರಿಗೆ ಸಹಾಯ ಇತ್ಯಾದಿಗಳ ರೂಪದಲ್ಲಿ ವೆಚ್ಚವಾಗುತ್ತಿತ್ತು. ಆ ವ್ಯಕ್ತಿ, ಒಳ್ಳೆ ಗಂಭೀರವ್ಯಕ್ತಿ ! ಯಾರ ಔದಾರ್ಯವು ಅವರಿಗೆ ಬೇಕಿಲ್ಲವಾದ್ದರಿಂದ, ಯಾರೆದುರೂ ಅವರು ತಲೆ ತಗ್ಗಿಸಿಲ್ಲ. ಆರ್ಥಿಕ ದೃಷ್ಟಿಯಿಂದ ಅವರು ಪೂರ್ಣ ಸ್ವತಂತ್ರರು. ಇದಕ್ಕೆ ತಮ್ಮ ಬಗ್ಗೆಯೇ ಅವರು ಕೊಂಚ ನಿಷ್ಠುರರಾಗಬೇಕಾಯಿತು, ನಿಜ ! ಆದರೆ ಇದರ ಪರಿಣಾಮವಾಗಿ ಅವರಿಗಿಂತ ಹಿರಿಯ ಅಧಿಕಾರಿಗಳು ಕೂಡ ಅವರ ಕೈಯ್ಯಲ್ಲಿದ್ದಾರೆ ! ಅವರು ತೆಗೆದುಕೊಳ್ಳುತ್ತಿರುವ ದಿನದ ಅಲ್ಪ ಆಹಾರದಿಂದಲೇ ಅವರು ದೃಢಕಾಯರಾಗಿದ್ದಾರೆ; ಉತ್ಸಾಹ ಅವರಲ್ಲಿ ತುಂಬಿ ತುಳುಕುತ್ತಿದೆ. ಅವರ ಪರಿಶ್ರಮದ ಅವಧಿ ದಿನಕ್ಕೆ ಹದಿನಾಲ್ಕು ತಾಸು ! ಹೆಚ್ಚಿಗೆ ಒಂದು ಕಾಸನ್ನು ಕೂಡ ಅವರು ಯಾರಿಂದಲೂ ಸ್ವೀಕರಿಸಲಾರರು. ಒಳ್ಳೆ ಯೋಗ್ಯತಾ ಸಂಪನ್ನರಾದ ಅವರ ಮಿತ್ರರು ಜಗತ್ತಿನಲ್ಲೆಲ್ಲ ಇದ್ದಾರೆ. ಪಂಡಿತ ನೆಹರೂ, ಸರ್ ಮಿರ್ಝಾ ಇಸ್ಮಾಯಿಲ್ ಅವರಲ್ಲಿಬ್ಬರು !

ಜೀವನದ ಸಂಧ್ಯಾಕಾಲದಲ್ಲಿ, ರಮ್ಯನಗರದಲ್ಲಿ ಮನೆ ಮಕ್ಕಳ ಸುಖವನ್ನು ಬಿಟ್ಟು, ಕರ್ನಾಟಕದ ಯುವಕರಿಗೆ ಮಾರ್ಗದರ್ಶನ ಮಾಡಲೆಂದೂ, ಜನತಾ ರಾಜ್ಯವಾದ ಭಾರತದ ಗಣ್ಯ ನಾಗರಿಕರನ್ನಾಗಿ ಮಾಡಲಿಕ್ಕೂ ಆಸ್ಥೆಯಿಂದ ಮುಂದೆ ಬಂದ ಆ ಹಿರಿಯರು ಇನ್ನಾರೂ ಅಲ್ಲ, ನಿಮ್ಮ ಮೆಚ್ಚಿಕೆಯ ಪ್ರಿನ್ಸಿಪಾಲರೇ ! ಅವರನ್ನು ಕಾಣಲು ಆಶಿಸುವಿರಾದರೆ, ಅವಶ್ಯವಾಗಿಯೂ ಬನ್ನಿ !



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು. ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..................................................

..................................................................................

ಪೂರ್ಣ ವಿಳಾಸ..........................................................

(ಮನೆ ನಂಬರು ಸಹಿತ) ..............................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು ..... ಸಹಿ

## ಅಕ್ಕನ ಪೆಟ್ಟಿಗೆಯ ಹೊಸ ಸದಸ್ಯರು.

೧. ವಿಠ್ಠಲ ಹನುಮಂತರಾವ ರೋಣ, ರೋಣ ವಕೀಲರ ಕಂಪೌಂಡ, ಮಾಳಮಡ್ಡಿ, ಧಾರವಾಡ. ವಯಸ್ಸು ೯. ೪ ನೇ ವರ್ಗದಲ್ಲಿ ಓದುತ್ತಾನೆ.

೨. ವಿನೋದಿನಿ ಕಾಶೀನಾಥ ಜೋಗಳೇಕರ C/o ಕೆ. ವ್ಹಿ. ಜೋಗಳೇಕರ, ರಾಣೆಬೆನ್ನೂರ. ವಯಸ್ಸು ೯. ಇಂಗ್ಲೀಷ ೧ ನೇ ವರ್ಗದಲ್ಲಿ ಓದುತ್ತಿದ್ದಾಳೆ.

೩. ಗಂಗೂ ಗುರುರಾವ ನರಸಾಪುರ. ಸಪ್ತಾಪುರ, ಧಾರವಾಡ. ವಯಸ್ಸು ೧೪. ಒಂಬತ್ತನೆಯ ವರ್ಗದಲ್ಲಿ ಓದುತ್ತಿದ್ದಾಳೆ. 'ವೀರಮಾತೆ' ಯ ಸ್ಪರ್ಧೆಯಲ್ಲಿ ಭಾಗವಹಿಸಲು ಅವಳಿಗೆ ತುಂಬಾ ಇಷ್ಟವಂತೆ !

೪. ಶಿವಾನಂದ ಹೂಲೀಕಂತಿಮಠ ವಯಸ್ಸು ೧೬. ಹತ್ತನೆಯ ವರ್ಗದಲ್ಲಿ ಓದುತ್ತಿದ್ದಾನೆ ಎಸ್. ಜೆ ಜೆ. ಎಮ್. ಹೈಸ್ಕೂಲ, ಬ್ಯಾಡಗಿಯಲ್ಲಿ.

೫. ಕಲ್ಲೂರ ಕುಸುಮ ನಾರಾಯಣ ಪುರಂಧರೆ. ಲಕಮನಹಳ್ಳಿಗಲ್ಲಿ,ಧಾರವಾಡ. ವಯಸ್ಸು ಹನ್ನೆರಡು.ಮುಲ್ಕೀ ಕ್ಲಾಸಿನಲ್ಲಿ ಓದುತ್ತಾಳೆ. ಬಿಡುವಿನಲ್ಲಿ ಸಂಗೀತ ಕಲಿಯುತ್ತಾಳೆ. ಮನೆಗೆಲಸಗಳಲ್ಲಿ ತುಂಬಾ ಜಾಣೆ !

೬. ಕುಸುಮ ತಮ್ಮಣ್ಣ ಪುರಂಧರೆ, ಧಾರವಾಡ. ವಯಸ್ಸು ೭ ಹೆಚ್ಚಿನ ಪರಿಚಯ ವಿಲ್ಲ.

೭. ಪುಷ್ಪಾ ಭೀಮರಾವ ಕಲ್ಲೂರ, ಧಾರವಾಡ. ವಯಸ್ಸು ೯. ನಾಲ್ಕನೇ ವರ್ಗದಲ್ಲಿ ಓದುತ್ತಿದ್ದಾಳೆ.

೮. ರಾಮಚಂದ್ರ. ಕೃ. ತೆರಗಾಂವಕರ, ಮಹಿಂದ್ರಕರ ಚಾಳ, ಧಾರವಾಡ. ಕರ್ನಾಟ ಹಾಯಸ್ಕೂಲ, ಹೆಚ್ಚು ಪರಿಚಯವಿಲ್ಲ.

೯. ವೆಂಕಟೇಶ. ಕೃ. ತೆರಂಗಾಂವಕರ. ಮಹಿಂದ್ರಕರ ಚಾಳ, ಧಾರವಾಡ. ಕರ್ನಾಟಕ ಹಾಯಸ್ಕೂಲ, ಹೆಚ್ಚು ಪರಿಚಯವಿಲ್ಲ.

೧೦. ಶಿವಾಜಿ ಜಿವಾಜಿ ಕುಲಕರ್ಣಿ. ವಯಸ್ಸು ೧೫. ಎಂಟನೇ ಇಯತ್ತೆಯಲ್ಲಿ ಇದ್ದಾನೆ. ಓದುವದು ಮನಸಿಪಲ್ ಹೈಸ್ಕೂಲ ಬ್ಯಾಡಗಿಯಲ್ಲಿ.

೧೧. ವ್ಹಿ ಎಸ್. ಕುಲಕರ್ಣಿ. ವಯಸ್ಸು ೧೪. ಎಂಟನೇಇಯತ್ತೆಯಲ್ಲಿ ಓದುವದು. ಮುನಸಿಪಲ್ ಹೈಸ್ಕೂಲ ಬ್ಯಾಡಗಿ.

೧೨. ಲಕ್ಷ್ಮೀಕಾಂತ ನಾರಾಯಣಪ್ಪ ರಟ್ಟೀಹಳ್ಳೀ, ಬ್ಯಾಡಗಿ. ಕನ್ನಡ ಮೂರನೆಯ ಇಯತ್ತೆಯಲ್ಲಿ ಓದುತ್ತಿದ್ದಾನೆ. ವಯಸ್ಸು ೮ ವರ್ಷ.

೧೩. ಸಿದ್ದಪ್ಪ ಚೆನ್ನಮಲ್ಲಪ್ಪ ಬಡೇಮಿ C/o ಬಸವೇಶ್ವರ ವೀವ್ಹಿಂಗ ಮಿಲ್ಸ, ಬನಹಟ್ಟಿ. ವಯಸ್ಸು ೧೨. ಕನ್ನಡ ೬ ನೇ ಇಯತ್ತೆಯಲ್ಲಿ ಓದುತ್ತಿ

ದ್ದಾನೆ. ಹಿಂದೀ ಎಂದರೆ ತುಂಬಾ ಪ್ರೀತಿಯಂತೆ ! ಕತೆ, ಒಗಟುಗಳನ್ನೂ ಬರೆಯುತ್ತಾನೆ. ನಮ್ಮ ಪೆಟ್ಟಿಗೆಯ ' ವಿಶಾಲ ' ಇವನ ಗೆಳೆಯನಂತೆ !

೧೪. ಶಂಕರ ಜಿ. ಘಟಪಣದಿ. ಮಹಾಂಲಿಪೂರ ೧೪ ವಯಸ್ಸು. ೫ ನೇ ವರ್ಗದಲ್ಲಿ ಒಂದನೇ ನಂಬರು ಪಡೆದಿದ್ದಾನೆ. ಕತೆ, ಕವನಗಳೆಂದರೆ, ಕನ್ನಡವೆಂದರೆ ಬಹಳ ಅಭಿಮಾನ !

೧೫. ಮೃತ್ಯುಂಜಯ ಬಸಯ್ಯಾ ದುರ್ಗದಮಠ, ಧಾರವಾಡ. ವಯಸ್ಸು ೧೪. ಇಂಗ್ಲೀಷ ೪ ನೇ ವರ್ಗದಲ್ಲಿ ಓದುತ್ತಿದ್ದಾನೆ. ಹಿಂದೀ, ಕನ್ನಡ, ಇಂಗ್ಲೀಷಗಳಲ್ಲಿ ಹೆಚ್ಚಿನ ಆಸಕ್ತಿ. ರಾಷ್ಟ್ರಭಾಷೆಯಲ್ಲಿ ಪಾಸಾಗಿದ್ದಾನಂತೆ !

೧೬. ಮಹಾದೇವ. ಫ. ವಾಲೀಕಾರ, ಧಾರವಾಡ. ವಯಸ್ಸು ೧೪, ಇಂಗ್ಲೀಷ ೪ ನೇ ಇಯತ್ತೆಯಲ್ಲಿ ಓದುತ್ತಾನೆ. ಹಿಂದಿ, ಕನ್ನಡ, ಗಣಿತಗಳೆಂದರೆ ಪ್ರೀತಿ. ಆಟದಲ್ಲಿ ನಿಪುಣ.

೧೭. ಗದಿಗೆಯ್ಯ ಅಲ್ಲಮಪ್ರಭು ಪುರಾಣಿಕ ವಯಸ್ಸು ೧೩. ಎಂಟನೇ ವರ್ಗದಲ್ಲಿ ಓದುತ್ತಾನೆ. ' ಮಧ್ಯಮಾ ' ದಲ್ಲಿ ಉತ್ತೀರ್ಣನಂತೆ ! ಚಿತ್ರಕಲೆಯಲ್ಲಿಯೂ ತುಂಬಾ ಆಸಕ್ತಿ ! ' ಮಧುಕರ ' ಇವನ ಸಾಹಿತ್ಯನಾಮ.

---

## ಸದಸ್ಯರ ಪತ್ರಗಳಿಗೆ ಉತ್ತರ.

ಪ್ರಿಯ ತಮ್ಮ ಮುರಲೀಧರ,

ಹೋದಸಲ ನಿನ್ನ ಹೆಸರಿನಲ್ಲಿ, ' ಯಾದಪ್ಪನವರ ' ಇದಕ್ಕೆ ಬದಲಾಗಿ ' ಮಾದಪ್ಪನವರ ' ಎಂದು ಮುದ್ರಿತವಾದುದನ್ನು ನೋಡಿ, ವಿಷಾದವಾಯಿತು. ಯೋಚಿಸಬೇಡ, ಇನ್ನೊಂದು ಸಲ ಹೀಗಾಗದಂತೆ ನೋಡಿ ಕೊಳ್ಳುವೆ.

ನಿನ್ನ ಹಿರಿಯ ಅಕ್ಕ.

ಪ್ರಿಯ ತಮ್ಮ ವಿಠ್ಠಲ,

ನಿನ್ನ ಪತ್ರ ತಲುಪಿತು. ಶಾಲೆಯ ಮಂತ್ರಿಮಂಡಲದಲ್ಲಿ ಅಧ್ಯಕ್ಷನಾಗಿದ್ದೇನೆಂದು ಬರೆದಿದ್ದೀ. ಸಂತೋಷ ! ಆದರೆ ಗಂಡು ಹುಡುಗರಲ್ಲಿ ಒಂದನೇ ನಂಬರು ಬರುತ್ತೇನೆ ಎನ್ನುತ್ತೀ ! ಹುಡುಗಿಯರಲ್ಲಿಯೂ ಬರುವಂತೆ ಪ್ರಯತ್ನಿಸು.

ನಿನ್ನ ಪ್ರೀತಿಯ ಅಕ್ಕ.

ಪ್ರಿಯ ತಮ್ಮ ಕೃಷ್ಣಾಜಿ,

ಒಗಟಗಳನ್ನು ಬಿಡಿಸಲು, ಸ್ವಲ್ಪ ತಲೆ ತುರಿಸುವಂತಿರಬೇಕು ಅಲ್ಲವೇ ? ಸಪ್ಪೆಯಾಗಿದ್ದರೆ ಅವರಲ್ಲೇನು ಅರ್ಥ? ಒಳ್ಳೇ ಒಗಟಗಳನ್ನು ಕಳಿಸುವಿಯಾದರೆ, ಅವಶ್ಯವಾಗಿಯೂ ಪ್ರಕಟಿಸುವೆ.

ನಿನ್ನ ಹಿರಿಯ ಅಕ್ಕ.

ಪ್ರಿಯ ತಂಗಿ ವಿನೋದಿನಿ,

ನಿನ್ನ ನಗೆಹನಿ ತಲುಪಿತು. ಆದರೆ ನೀನು ಒಳ್ಳೆಯ ನಗೆಹನಿಗಳನ್ನು ಕಳಿಸಬೇಕು ನೋಡು. ಓದಿದಾಗ ಮನಸ್ಸಿಗೆ ಸಂಕೋಚವೆನಿಸಬಾರದು. ತಿಳಿಯಿತೆ ?

ನಿನ್ನ ಪ್ರೀತಿಯ ಅಕ್ಕ

ಪ್ರಿಯ ತಮ್ಮ ಶಂಕರ, (ಮಹಾಲಿಂಗಪೂರ)

ನಿನ್ನ ಪತ್ರ ಮುಟ್ಟಿತು. ಒಗಟಗಳನ್ನು ಕಳಿಸುವಾಗ ಅವುಗಳ ಉತ್ತರವನ್ನೂ ಜೊತೆಗೇ ಬರೆಯಬೇಕಾಗುವದು. ಗೊತ್ತೆ ?

ನಿನ್ನ ಹಿರಿಯ ಅಕ್ಕ

ಪ್ರೀಯ ತಮ್ಮ ತಂಗಿಯರಿರಾ,

ಈ ಸಲ ನೀವೆಲ್ಲ ಬಹುಸಂಖ್ಯೆಯಲ್ಲಿ ಅಕ್ಕನ ಪೆಟ್ಟಿಗೆಗೆ ಸದಸ್ಯರಾದದ್ದು ನೋಡಿ ಸಂತೋಷವಾಯಿತು. ನೀವು ಸ್ಪರ್ಧೆಯ ಮನೆ ತುಂಬಿ ಕಳಿಸುವಾಗ, ನೀವು ಪೆಟ್ಟಿಗೆಯ ಸದಸ್ಯರಿದ್ದರೆ ಅವಶ್ಯವಾಗಿಯೂ ತಿಳಿಸಬೇಕು. ಮತ್ತು ನೀವು ಕಳಿಸುವ ಕತೆ, ಫಾರ್ಮ್ ಇತ್ಯಾದಿಗಳನ್ನೆಲ್ಲ ಅಂಟಿನಿಂದ ಜೋಡಿಸಿ ಕಳಿಸಲು ಮರೆಯಬಾರದು. ಈ ವಿಷಯವನ್ನು ನಿಮ್ಮ ಗೆಳೆಯರಿಗೂ ತೋರಿಸುವಿರಲ್ಲವೇ ?

ನಿಮ್ಮೆಲ್ಲರ ಆದರದ ಅಕ್ಕ.

* * * * *




**ಮಾಸ್ತರು:—** (ಕ್ಲಾಸಿನಲ್ಲಿ ವಿದ್ಯಾರ್ಥಿಗಳನ್ನು ಕುರಿತು) ದಿನಾಲು ಸೂರ್ಯ ಹುಟ್ಟುವದಕ್ಕಿಂತ ಮೊದಲು ಏಳಬೇಕು.

**ವಿದ್ಯಾರ್ಥಿ:—** ನಮ್ಮ ತಂದೆ ಹೇಳ್ತಾರ್ರಿ, ಚಹಾ ಮಾಡುದಕಿಂತ ಮೊದಲು ಏಳಬೇಕು, ಅಂತ.

ಒಬ್ಬರು ಹೀಂಗ, ಒಬ್ಬರು ಹಾಂಗ ಹೇಳಿದರ ನಾನೇನು ತಿಳಕೋಬೇಕರಿ ?

ಕೃಷ್ಣಾಜಿ ದೇಶಪಾಂಡೆ.

‡ ‡ ‡ ‡ ‡

**ಮಾಸ್ತರು:—** (ಕ್ಲಾಸಿನಲ್ಲಿ) : ಶಾಲೆಗಳಲ್ಲಿ ಉತ್ತಮ ಶಾಲೆ ಯಾವುದು ?

**ವಿದ್ಯಾರ್ಥಿ:—** ಭೋಜನ ಶಾಲೆ, ಸಾರ್.

ಸುಧಾ ಕುಲಕರ್ಣಿ

* * * * * *

ಮಾಸ್ತರು:—(ವರ್ಗದಲ್ಲಿ): ಎಲೋ ಸೋಮು, ಅಣೆಗೆ ಪೈಗಳೆಷ್ಟು ?
ಸೋಮು:— ನಾನು ನಿಮಗೆ ಉತ್ತರ ಕೊಡುವದಿಲ್ಲ ಸಾರ್.
ಮಾಸ್ತರು:— ಯಾಕೋ ?
ಸೋಮು:— ನಮಮ್ಮ ಹಿರಿಯರಿಗೆ ತಿರುಗಿ ಉತ್ತರ ಕೊಡಬಾರದೆಂದು ಹೇಳಿದ್ದಾಳೆ ಸಾರ್.

ಎಸ್. ವ್ಹಿ. ಸಿದ್ದೇಶ್ವರಮಠ.

ಒಂದು ದಿನ ವರ್ಗದಲ್ಲಿ ಕಿಲಾಡಿ ಕಿಟ್ಟನ ಗುರುಗಳು ಹೇಳಿದರು " ನೀವು ಮಾಡಿದ ಪ್ರವಾಸದ ಬಗ್ಗೆ ನಿಬಂಧ ಬರೆದು ತನ್ನಿ " ಎಂದು, " ಮತ್ತೆ ನಾಳೆ ಸಾಹೇಬರು ಬರುವವರಿದ್ದಾರೆ. ನೀವಾರೂ ತಪ್ಪಿಸಬೇಡಿರಿ."

ಮರುದಿನ ಕಿಟ್ಟು ಹಾಗೇ ಶಾಲೆಗೆ ಹೋದನು. ಸಾಹೇಬರು ಕೇಳಿದರು, " ಯಾಕೆ ಬರೆಯಲಿಲ್ಲ ? "

" ನಾನಿನ್ನೂ ಪ್ರವಾಸಕ್ಕೆ ಹೋಗಿಲ್ಲ ಸಾರ್. ನಾಳೆ ಪ್ರವಾಸ ಮಾಡಿ, ನಾಡದು ತರುವೆ, " ಕಿಟ್ಟೂ ಉತ್ತರಕೊಟ್ಟ.

ದಾನಪ್ಪಾ ಕಾಮೋಜಿ.

## ಒಗಟುಗಳು

ನೀರಿನಲ್ಲಿ ಇರುವದು, ಮೀನಲ್ಲ, ಮೊಸಳೆಯುಲ್ಲ; ಕೈಯಿಲ್ಲ, ಕಾಲಿಲ್ಲ, ಊರಿಂದೂರಿಗೆ ಸುರಕ್ಷಿತವಾಗಿ ಹೋಗಬಲ್ಲದು. ಅದಾವುದು ?

ಗಿರಿಜಾ ಬೋಳನ್

ಹತ್ತು ತಲೆ ಉಂಟು, ರಾವಣನಲ್ಲ. ಕಿರೀಟ ಉಂಟು ರಾಮನಲ್ಲ, ಬಾಲ ವುಂಟು ಹನುಮಂತನಲ್ಲ, ಇದೇನು ನಿಮಗೆ ಗೊತ್ತೇ ?

ಲಕ್ಷ್ಮೀಕಾಂತ ರಟ್ಟೀಹಳ್ಳಿ, ಬ್ಯಾಡಗಿ.

ನೀತಿಯನ್ನು ಹೇಳುವದಾದರೂ ಪ್ರಾಣಿಯಲ್ಲ, ಮನಸ್ಸಿನ ಭಾವವನ್ನು ಹೊರಸೂಸುವದಾದರೂ ಮಾನವನಲ್ಲ, ಕವನಗಳನ್ನು ತೋರಿಸುವದಾದರೂ ಕವಿಯಲ್ಲ, ಚಿತ್ರವನ್ನು ತೋರಿಸುವದಾದರೂ ಚಿತ್ರಗಾರನಲ್ಲ, ಹಾಗಾದರೆ ನಾನಾರು ?

ದಾನಪ್ಪ ಕಾಮೋಜಿ

ದೇಹ ಒಂದಿದ್ದರೂ ತಲೆಗಳೆರಡಿದ್ದ ಪಕ್ಷಿ ಯಾವುದು ?

ರಾಘವೇಂದ್ರ ಹರಪನಹಳ್ಳಿ.

### ಹೋದ ತಿಂಗಳ ಒಗಟುಗಳಿಗೆ ಉತ್ತರ.

(೧) ಕೋಳಿ
(೨) ನೆರಳು
ಜಾಣ್ಮೆಯ ಲೆಕ್ಕದ ಉತ್ತರ

**ಒಗಟುಗಳಿಗೆ ಸರಿಯಾಗಿ ಉತ್ತರ ಕಳಿಸಿದವರು:—**

ಸುನೀತಾ ಹರಪನಹಳ್ಳಿ, ಧಾರವಾಡ; ಗಂಗೂ ನರಸಾಪುರ, ಸಪ್ತಾಪುರ, ಧಾರವಾಡ; ದಾನಪ್ಪಾ ಕಾಮೋಜಿ, ಧಾರವಾಡ; ಸುಂದರಾ ಮಾತಂಗಿ, ಧಾರವಾಡ; ಎಸ್. ಬಿ. ಸಿದ್ಧೇಶ್ವರಮಠ, ಧಾರವಾಡ; ಶಿವಾಜಿ ಕುಲಕರ್ಣಿ, ಬ್ಯಾಡಗಿ.

**ಹೋದತಿಂಗಳ ಸ್ಪರ್ಧೆಗೆ ಉತ್ತರ ಕಳಿಸಿದವರು:—**

ದಾನಪ್ಪಾ ಕಾಮೋಜಿ ಧಾರವಾಡ; ಕುಮಾರಿ ಪ್ರಭಾವತಿ ಆಶ್ರಿತ, ವಿಜಾಪೂರ; ಇಂದಿರಾ ದೀಕ್ಷಿತ, ಧಾರವಾಡ; ಶಿವಾಜಿ ಜೀವಾಜಿ ಕುಲಕರ್ಣಿ, ಬ್ಯಾಡಗಿ; ಸುಂದರಾ ಮಾತಂಗಿ, ಧಾರವಾಡ; ವಿಮಲಾ ಪಾರ್ಶ್ವನಾಥ ಬಸ್ತಿ, ಕಣಬರಗಿ; ಗಿರಿಜಾ ಬೋಳನ್, ಧಾರವಾಡ; ಲಕ್ಷ್ಮೀಕಾಂತ ರಟ್ಟೀಹಳ್ಳಿ, ಬ್ಯಾಡಗಿ; ಸುಧಾ ಬೆಂಗೇರಿ, ಹಾವೇರಿ; ವಿಠ್ಠಲ ರೋಣ, ಧಾರವಾಡ; ಸಿದ್ಧೇಶ್ವರಮಠ, ಎಸ್. ಬಿ; ಸುನೀತಾ ಹರಪನಹಳ್ಳಿ, ಧಾರವಾಡ; ಸರೋಜಿನಿ ಕೊೇಯಿಮುತ್ತೂರ, ಧಾರವಾಡ;

ಶಕುಂತಲಾ ಬಿಲಕರ, ಸಂಕೇಶ್ವರ; ಎಸ್. ಜಿ. ಮಯ್ಯ, ಹುಬ್ಬಳ್ಳಿ; ವ್ಹಿ. ಎಸ್. ಕುಲಕರ್ಣಿ, ಬ್ಯಾಡಗಿ; ವಾಮನ ಬಿಟಗೇರಿ, ಹುಕ್ಕೇರಿ; ಕೃಷ್ಣಾಜಿ ದೇಶಪಾಂಡೆ, ಧಾರವಾಡ; ಗಂಗೂ ನರಸಾಪುರ. ಸಪ್ತಾಪುರ, ಧಾರವಾಡ; ರಾಮಚಂದ್ರ ತೆರಗಾಂವಕರ, ಧಾರವಾಡ: ಡಿ. ಜಿ. ನಾಡಗೌಡ, ಧಾರವಾಡ.

**ಹೋದ ತಿಂಗಳ ಸ್ಪರ್ಧೆಯ ಸರಿಯುತ್ತರ:—**

**ಎಡದಿಂದ ಬಲಕ್ಕೆ:—** (೧) ಪ್ರಥಮ (೩) ವಿರಹ (೬) ಶಾವಿಗೆ (೭) ಭಾರತ (೧೦) ವಾಸ (೧೧) ಗುಣ (೧೨) ಮನನ (೧೩) ಹೊಲ (೧೪)ರಣ (೧೫) ರಥ.

**ಮೇಲಿನಿಂದ ಕೆಳಕ್ಕೆ:—** (೧) ಪ್ರತಿಭಾ (೨) ಮರೆತ (೩) ವಿಶಾಲ (೪) ರವಿ (೫) ಹಗೆ (೮) ರಮಣ (೯) ಕಮಲ (೧೦) ವಾನರ (೧೧) ಗುಡಾರ.



| | | | | | |
|---|---|---|---|---|---|
| ೧ ಹ | | ೨ | | ಸ | ೫ |
| | ೪ ವಿ | | ೬ ಹ | | ೭ ರಿ |
| ೮ | | | ೯ | ೧೦ ಬಿ | |
| ೧೧ | ನಾ | | | | |
| | ೧೨ | ೧೩ ರಿ | | | ೧೪ |
| ೧೫ | ನ | | | ೧೬ | ಸ್ತ್ರ |

**ಪ್ರವೇಶ ಫೀ ೨ ಆಣೆ**

**ಸರಿಯುತ್ತರಕ್ಕೆ**

**ಒಂದು**

**ವೀರಮಾತೆ**

**ಪುಕ್ಕಟೆ.**

ಎಡದಿಂದ ಬಲಕ್ಕೆ:—(೧)........ ಇದು ಹೆಂಗಸರ ಪ್ರಿಯವಸ್ತು (೪) ಹರಿಶ್ಚಂದ್ರನ ಸತ್ಯದ........ ಪರೀಕ್ಷೆಯಾಯಿತು. (೬)........ ದಿಂದ ತಾಪವಾಗುವದು. (೮)........ ಇದೂ ಒಂದು ಪೇಯ (೯) 'ಗೊತ್ತಾದ,' ಅರ್ಥವುಳ್ಳದ್ದು (೧೧)........ ತಿಂಡಿಗಳನ್ನು ತಯಾರಿಸಲು ಬೇಕೇ ಬೇಕು. (೧೨)........ ವಾದುದು ಅಪಾಯಕರವಲ್ಲವೇ ? (೧೫) ಕಷ್ಟದ........ ಬಂದರೆ ದುಃಖವಾಗುವದು. (೧೬)........ ದಿಂದಲೇ ಅಲ್ಲವೇ ಮನುಷ್ಯನಿಗೆ ಬೆಲೆ ಈಗ ?

ಮೇಲಿನಿಂದ ಕೆಳಕ್ಕೆ:—(೨)........ ತಾರಕಾಸುರನನ್ನು ಗೆದ್ದವನು (೩)........ ಈಗ ಎಲ್ಲಕ್ಕೂ ಇದೆ. (೫)........ ದಿಂದ ಕಾರ್ಯ ಮಾಡುವದು ಉಚಿತ (೭)........ ಯನ್ನು ಯಜ್ಞಗಳಲ್ಲಿ ಉಪಯೋಗಿಸುವದುಂಟು (೮)........ ಅತಿಥಿಗಳಿಗೆ ಸಲ್ಲಿಸುವ ಬಹುಮಾನ (೧೦)........ತಪ್ಪಿದರೆ ದಾರಿ ತೋರುವರಾರು ? (೧೩) ತನ್ನ........ ಗಳನ್ನೇ ಗೆಲ್ಲುವದು ಮನುಷ್ಯನಿಗೆ ಆಗದು (೧೪)........ ಅಪಾಯದ ವೇಳೆಯಲ್ಲಿ ಮನುಷ್ಯನನ್ನು ರಕ್ಷಿಸುವದು.

ರಚಿಸಿದವರು : ನಿಶಾಲ.

ಇದರ ಉತ್ತರವು ಮಾರ್ಚ ೧೫ ರೊಳಗಾಗಿ ನಮಗೆ ತಲುಪಬೇಕು. ಸ್ಪರ್ಧೆಯನ್ನು 'ವೀರಮಾತೆ' ಯ ಅಚ್ಚಿನ ಮನೆ (ಕೂಪನ) ಗಳಲ್ಲಿಯೇ ತುಂಬಿ ಕಳಿಸಬೇಕು. ಹಾಗೆ ಕಳಿಸದಿದ್ದರೆ ಮತ್ತು ಪ್ರವೇಶಧನವನ್ನಿಡದಿದ್ದರೆ, ಅವರ ಹೆಸರನ್ನು ಪ್ರಕಟಿಸಲಾಗುವದಿಲ್ಲ.



# ನಾನು ದೇವರಾಗಿದ್ದರೆ ! !

ಸಜ್ಜನರಿಗೆ ಸಗ್ಗವ ಕೊಡುತಿದ್ದೆ
ದುರ್ಜನರನು ನಾ ದೂರಿಡುತಿದ್ದೆ
ಕಾಡುವ ಅಸುರರ ಕೊಲ್ಲುತಲಿದ್ದೆ
ಬೇಡಿದ ವರಗಳ ನೀಡುತಲಿದ್ದೆ ॥ ೧ ॥

ಶಾಂತಿಯ ಮರ್ಮವ ಬೀರುತಲಿದ್ದೆ
ಶಾಂತಿಯ ತೆರೆಗಳ ಎಬ್ಬಿಸುತಿದ್ದೆ
ಕ್ರಾಂತಿಯ ಸೆಳೆಯನು ಮಸೆಯುತಲಿದ್ದೆ
ಗಾಂಧಿಯ ಜೀವವ ತಿರುಗಿಸುತಿದ್ದೆ ॥ ೨ ॥

ಭೂಮಿಗೆ ಮಳೆಯನು ಸುರಿಸುತಲಿದ್ದೆ
ಭೂಮಿಗೆ ಬೆಳೆಯನು ಬರಿಸುತಲಿದ್ದೆ
ಭೂಮಿಗೆ ಹಸುರನು ಲೇಪಿಸುತಿದ್ದೆ
ಭೂಮಿಗೆ ಭಾಗ್ಯವ ನೀಡುತಲಿದ್ದೆ ॥ ೩ ॥

ಕಂಟ್ರೋಲ ಕಾಲವ ಮರೆಸುತಲಿದ್ದೆ
ಕನ್ನಡ ಬಾವುಟ ಏರಿಸುತಿದ್ದೆ
ಕನ್ನಡ ಗೀತೆಯ ಹಾಡುತಲಿದ್ದೆ
ಕನ್ನಡ ಭಾಷೆಯ ನಾಡುತಲಿದ್ದೆ ॥ ೪ ॥

ಕನ್ನಡ ಕಲಿಗಳ ಹುಟ್ಟಿಸುತಿದ್ದೆ
ಕನ್ನಡ ವೈಭವ ಹರಡಿಸುತಿದ್ದೆ
ಕನ್ನಡ ಕವನವ ಹೆಚ್ಚಿಸುತಿದ್ದೆ
ಕನ್ನಡ ತಾಯಿಗೆ ವಂದಿಸುತಿದ್ದೆ ॥ ೫ ॥

ಎಸ್. ಬಿ. ಶಿದ್ಧೇಶ್ವರಮಠ ಧಾರವಾಡ.

# ಇಬ್ಬರ್ಹೆಂಡರ ಕಾಟ

ಲೇ:— **ಸುನೀತಾ ಹರಪನಹಳ್ಳಿ.**

ರಂಗಪ್ಪ ನಾಯಕರು ತಮ್ಮ ಊರಿಗೆ ಶ್ರೀಮಂತರು. ನಾಯಕರಿಗೆ ಭೂಲೋಕದ ಕುಬೇರ ಎಂದು ಜನರು ಹೇಳಿಕೊಳ್ಳುತ್ತಿದ್ದರು. ನಾಯಕರ ಮನೆಯಲ್ಲಿ ಕಾಳುಕಡಿ ಸಮೃದ್ಧವಾಗಿದ್ದಿತು. ಆಳುಹೋಳಿಗೇನೂ ಕಡಿಮೆ ಇಲ್ಲ. ಆದರೆ ರಂಗಪ್ಪನಾಯಕರನ್ನು ಮಕ್ಕಳಿಲ್ಲದ ಒಂದೇ ಒಂದು ಕೊರತೆ ಬಹಳ ಪೀಡಿಸುತ್ತಿತ್ತು.

ರಂಗಪ್ಪನಾಯಕರ ಪತ್ನಿ ತುಂಗಾಬಾಯಿ ಮಕ್ಕಳಿಗೋಸುಗ ಅದೆಷ್ಟೋ ದೇವರಿಗೆ ಹರಕೆ ಹೊತ್ತಿದ್ದರು. ಆದರೆ ಯಾವ ದೇವರೂ ಅವರ ಇಚ್ಛೆಯನ್ನು ಪೂರ್ಣಮಾಡಲಿಲ್ಲ. ಮಕ್ಕಳಿಂದಲೆ ಮೋಕ್ಷ ಎಂದು ತಿಳಿದ ರಂಗಪ್ಪನಾಯಕರು ಬೇರೆ ಮದುವೆಗಾಗಿ ಮನಸ್ಸು ಮಾಡಿದರು. ಸಿರಿವಂತರು ಮನಸ್ಸು ಮಾಡಿದರೆ ಯಾವದು ಅಸಾಧ್ಯ ? ನಾಯಕರಿಗೆ ೫೦ ವರ್ಷ ಮೀರಿದರೂ ಕನ್ಯಾಪಿತೃಗಳು ನಾಯಕರ ಮನೆಯನ್ನು ಮುತ್ತತೊಡಗಿದರು. ಮುಂದೆ ಒಂದು ದಿನ ಒಂದು ಶುಭ ಮುಹೂರ್ತದಲ್ಲಿ ಸರಲೆಯು ನಾಯಕರ ಧರ್ಮಪತ್ನಿಯಾದಳು.

ಸರಲೆ ನವ ಯುವತಿ. ಅವಳಿಗೆ ಹೊಸ ಹೊಸ ಸುಂದರವಾದ ವಸ್ತುಗಳ ಕಡೆಗೆ ಆಸೆ. ಯಾವುದರಲ್ಲಿಯೂ ಅವಳಿಗೆ ಬೇಕಾದುದು ನವೀನತೆ. ಹೀಗಾಗಿ ತಾರುಣ್ಯವನ್ನು ದಾಟಿದ ರಂಗಪ್ಪನಾಯಕರಿಗೂ ಸರಲೆಗೂ ಎಷ್ಟೋ ವ್ಯತ್ಯಾಸ. ಯುವತಿ ಸರಲೆಗೆ ತನ್ನ ಪತಿಯ ತಲೆಯಲ್ಲಿಯ ಬಿಳಿ ಕೂದಲನ್ನು ನೋಡಿದೊಡನೆ ಮನಸ್ಸಿನಲ್ಲಿ ಹೇಗೋ ಅನಿಸುತ್ತಿತ್ತು. ತನ್ನ ವೇಳೆಯ ಬಹುಭಾಗವನ್ನು ಸರಲೆಯು ನಾಯಕರ ತಲೆಯಲ್ಲಿಯ ಬಿಳಿಕೂದಲನ್ನು ತೆಗೆಯುವದರಲ್ಲಿ ಕಳೆಯುತ್ತಿದ್ದಳು.

ನಾಯಕರ ಮೊದಲನೆಯ ಪತ್ನಿ ತುಂಗಾಬಾಯಿ ಅರ್ಧ ಸಂಸಾರ ಸಾಗರವನ್ನು ಈಸಿದ್ದರಿಂದ ಅವಳಿಗೆ ಯಾವ ವಿಷಯದಲ್ಲಿಯೂ ಅಷ್ಟೊಂದು ಕುತೂಹಲವಿರುತ್ತಿರಲಿಲ್ಲ. ಹೊಸ ಹೊಸ ವಸ್ತುಗಳಿಗಾಗಿ ಆಸೆ ಪಡುತ್ತಿರಲಿಲ್ಲ. ವಯಸ್ಸು ಆಗಿದ್ದರಿಂದ ಅವಳಿಗೆ ಸಂಸಾರದಲ್ಲಿ ಆಸೆ ಕಡಿಮೆಯಾಗಿ ವೈರಾಗ್ಯದ ಕಡೆಗೆ ಒಲವು ಆಯಿತು. ಅವಳಿಗೆ ತನ್ನ ಗಂಡ ರಂಗಪ್ಪ ನಾಯಕರ ತಲೆಯಲ್ಲಿಯ ಕರಿಯ ಕೂದಲನ್ನು ಕಂಡರೆ ಹೇಗೋ ಎನಿಸುತ್ತಿತ್ತು. ಕಾರಣ ಸಮಯ ಸಿಕ್ಕಾಗೆಲ್ಲ ತುಂಗಾಬಾಯಿ ನಾಯಕರ ತಲೆಯ ಕರಿಯ ಕೂದಲನ್ನು ಕಿತ್ತತೊಡಗಿದಳು.

ಇಬ್ಬರ್ಹೆಂಡರ ನಡುವೆ ಪಾಪ ! ರಂಗಪ್ಪನಾಯಕರ ಅವಸ್ಥೆ ಚೆನ್ನಾಗಿರಲಿಲ್ಲ. ಮಕ್ಕಳ ಆಸೆಗಾಗಿ ನಾಯಕರು ಇಬ್ಬರು ಹೆಂಡರನ್ನು ಲಗ್ನವಾದರು. ಆದರೆ ಅವರಿಗೆ ಈಗ ಮಕ್ಕಳಂತೂ ಇಲ್ಲವೇ ಇಲ್ಲ, ಸಾಲದ್ದಕ್ಕೆ ಅವರ ತಲೆ ಒಂದು ತಿಂಗಳೊಳಗಾಗಿ ತಾಮ್ರದ ತಂಬಿಗೆಯಂತೆ ಮಿಂಚತೊಡಗಿತು !

# ಕರ್ನಾಟಕದ ಕಲಾ ರತ್ನ



ಶ್ರೀ. ಡಿ. ಜಿ. ಬಡಿಗೇರ.

ಲೇಖಕಿ :

ಶ್ರೀಮತಿ

ತಾರಾ ಪವಾರ.

ಕಲಾಮಂದಿರ

ಧಾರವಾಡ.



ಡ್ರಾಯಿಂಗ ಇನಸ್ಪೆಕ್ಟರರಾದ ಶ್ರೀಮಾನ ಡಿ. ಜಿ. ಬಡಿಗೇರವರ ಹೆಸರನ್ನು ಕೇಳದ ಕನ್ನಡಿಗರಿಲ್ಲ. ಮುಂಬಯಿ ರಾಜ್ಯದ ಮಾಧ್ಯಮಿಕಶಾಲೆಯ ವಿದ್ಯಾರ್ಥಿವೃಂದದಿಂದ ಶಿಕ್ಷಕರವರೆಗೂ ಅವರನ್ನು ತಿಳಿಯದವರು ವಿರಳ. ಶೈಕ್ಷಣಿಕ ಮತ್ತು ಕಲಾಕ್ಷೇತ್ರದಲ್ಲಿ ಅವರ ಹೆಸರು ಎಲ್ಲರ ನಾಲಿಗೆಯ ಮೇಲೆ ನಲಿದಾಡುತ್ತಲಿದೆ. ಇವರು ಇನಸ್ಪೆಕ್ಷನ್ನಿಗೆ ಯಾವ ಶಾಲೆಗೆ ಹೋದರೂ ಅಧಿಕಾರಿಗಳಾಗಿ ಹೋಗುವದಿಲ್ಲ. ಆದರೆ ಆಪ್ತಮಿತ್ರರಂತೆ ಹೋಗಿ ವಿದ್ಯಾರ್ಥಿಗಳ, ಶಿಕ್ಷಕರ, ಅಡೆತಡೆಗಳನ್ನು ವಿಚಾರಿಸಿ, ಸೂಕ್ತ ಸಲಹೆ ಸೂಚನೆಗಳನ್ನು ಕೊಡುತ್ತಾರೆ. ಕಲಾವಿದ್ಯಾರ್ಥಿಗಳ ಮೇಲೆ ಪ್ರೇಮ ಬಹಳ. ವಿದ್ಯಾರ್ಥಿಗಳು ಎಷ್ಟೋ ತರದ ಪ್ರಶ್ನೆಗಳನ್ನು ಕೇಳಿದರೂ ಸಹ ಬೇಸರಗೊಳ್ಳದೆ ಮಂದಸ್ಮಿತದಿಂದ ಎಲ್ಲರನ್ನೂ ಸಮಂಜಸ ಉತ್ತರಕೊಟ್ಟು ತೃಪ್ತಿಗೊಳಿಸುತ್ತಾರೆ, ಮತ್ತು ಅವರ ತೊಂದರೆಗಳನ್ನು ಸಾಧ್ಯವಿದ್ದಮಟ್ಟಿಗೆ ನಿವಾರಣೆ ಮಾಡಿ ಉತ್ತೇಜನನೀಯುತ್ತಾರೆ.

ಇಂಥ ಸುವಿಚಾರ ಸುಹೃದಯಿಗಳು ಹುಬ್ಬಳ್ಳಿಯಿಂದ ಒಂಬತ್ತು ಮೈಲು ದೂರ " ಮಿಶ್ರಿಕೋಟಿ " ಎಂಬ ಗ್ರಾಮದಲ್ಲಿ ಗಣಂತಿ ನೆಯ ಇಸ್ವಿಯಲ್ಲಿ ಶ್ರೀಮತಿ

ತಂಗೆವ್ವಾತಾಯಿಯವರ ಉದರದಲ್ಲಿ ಜನಿಸಿದರು. ಇವರ ತಂದೆಯವರಾದ ದಿವಂಗತ ಗೂಳಪ್ಪನವರು ಉತ್ತಮ ಬಡಿಗರಾಗಿದ್ದರು. ಶ್ರೀಮಾನ ಬಡಿಗೇರವರ ಹೆಸರು ದೇವಪ್ಪನವರು. ದೇವಪ್ಪನವರೆಂದರೆ ಕಲೆಯಲ್ಲಿ ದೇವೇಂದ್ರನೇ ಸರಿ. ಇವರು ತಮ್ಮ ಮಾಧ್ಯಮಿಕ ಶಿಕ್ಷಣವನ್ನು ಹುಬ್ಬಳ್ಳಿಯ ಕೋಟಿ ಹಾಯಸ್ಕೂಲಿನಲ್ಲಿ ಮುಗಿಸಿ, ೧೯೨೨ನೆಯ ಇಸ್ವಿಯಲ್ಲಿ ಮುಂಬಯಿಯ ಸರ್. ಜೆ. ಜೆ. ಸ್ಕೂಲ ಅಫ್ ಆರ್ಟ್ಸ ಎಂಬ ಕಲಾಶಾಲೆಗೆ ಸೇರಿದರು. ಆಗಿನ ಕಾಲದಲ್ಲಿ ಮುಂಬಯಿಯಲ್ಲಿ ಕಲಿಯುವ ದೆಂದರೆ ಎಂತಹ ಕಷ್ಟದ ಮಾತು ! ಆದರೂ ಇವರ ತಂದೆಯವರು ಕಷ್ಟವನ್ನು ಸಹಿಸಿ ಕಲಾಶಿಕ್ಷಣವನ್ನು ಮುಂದುವರಿಸಲು ಉತ್ತೇಜನಕೊಟ್ಟರು. ಇವರಾದರೂ, ವೇಳೆಕಳೆಯದೆ ತಮಗೆ ಅವಕಾಶ ಸಿಕ್ಕಾಗ ಪೋರ್ಟ್ರೆಟ ಮುಂತಾದವುಗಳನ್ನು ಚಿತ್ರಿಸಿ ಅದರ ಹಣದಿಂದ ತಮಗಾದ ಸಲಕರಣೆಗಳ ಅಭಾವಗಳನ್ನು ಹೊಗಲಾಡಿಕೊಳ್ಳುತ್ತಿದ್ದರು. ಇದರಿಂದ ಇವರು ತಂದೆಯವರಿಗೂ ಎಷ್ಟೋ ಹಗುರು ಮಾಡುತ್ತಿದ್ದರು.

ಇವರು ಸರ್. ಜೆ ಜೆ. ಸ್ಕೂಲಿನಲ್ಲಿ ಕಡೆಯವರೆಗೂ ಶ್ರೇಷ್ಠ (Scholar) ತರಗತಿಯ ಮಾದರಿಯ ವಿದ್ಯಾರ್ಥಿಯಾಗಿದ್ದರು. ಇವರ ಕಲಾವ್ಯಾಸಂಗವು ರಾವ ಬಹಾದ್ದೂರ ಧುರಂಧರ, ಎಲ್. ಎನ್. ತಾಸಕರ, ಕೆ. ಬಿ. ಚೂಡೆಕರ ಮುಂತಾದ ಗಣ್ಯ ಕಲಾವಿದರ ನೇತೃತ್ವದಲ್ಲಿ ಕೊನೆಗಂಡಿತು. ಆರ್ಟ ಸ್ಕೂಲಿನಲ್ಲಿ ಉತ್ತಮ ದರ್ಜೆಯ ಮಾದರಿಯ ವಿದ್ಯಾರ್ಥಿಯ ಸಲುವಾಗಿ ಮೀಸಲಾಗಿದ್ದ (Miss Meyo Medal) ಮಿಸ್ ಮೇಯೋ ಪದಕವನ್ನು ದೊರಕಿಸಿದರು. ಮತ್ತು ಎಷ್ಟೋ ತರದ ಇನಾಮು ಪದಕಗಳು " ಸರ್. ಜೆ. ಜೆ ಸ್ಕೂಲ ಅಫ್ ಆರ್ಟ್ಸ " ದ ಆಗಿನ ಡಾಯರೆಕ್ಟರರಾದ Captain W. E. Gladston-Soloman ರವರು ಶ್ರೀ ಬಡಿಗೇರವರ ಕಲಾಕೃತಿಗಳನ್ನು ಬಹಳ ಮೆಚ್ಚುತ್ತಿದ್ದರು. ಇವರ ಕಲಾ ನೈಪುಣ್ಯವನ್ನು ಅರಿತು ಡಾಯರೆಕ್ಟರರು ಉದಾರಾಂತಃಕರಣದಿಂದ ಬಡಿಗೇರವರು ಮುಂದೆಬರಲು ಸಹಾಯ ಮಾಡಿದರು. ಇವರ ಕಲಾಕೃತಿಗಳನ್ನು ಎಷ್ಟೋ ಪ್ರದರ್ಶನಗಳಿಗೆ ಕಳಿಸಿಕೊಟ್ಟರು. ಇನ್ನೂ ವಿದ್ಯಾರ್ಥಿ ದೆಶೆಯಲ್ಲಿದ್ದಾಗಲೇ The Dooms of Viceregal lodge, New Delhi (ದಿಲ್ಲಿಯ ಈಗಿನ ರಾಷ್ಟ್ರಪತಿ ಭುವನದ ಗುಮುಟ) ಗಳನ್ನು ಚಿತ್ರಿಸಲು (೧೯೨೭-೨೮ ರಲ್ಲಿ) ಡಾಯರೆಕ್ಟರರಿಂದ ಆರಿಸಲ್ಪಟ್ಟರು. ಇಂದಿಗೂ ಶ್ರೀ ಬಡಿಗೇರವರ ಕಲಾಕೃತಿಗಳು ಅಲ್ಲಿ ಕಂಗೊಳಿಸುತ್ತವೆ. ಅವು Angles ದ ಚಿತ್ರಗಳು. ಕ್ಯಾಪ್ಟನ್, ಸಾಲೋಮನ್‌ರವರ ನೇತೃತ್ವದಲ್ಲಿ ಸುಪ್ರಸಿದ್ಧ ಬಾರಿಸ್ಟರ M. R. Jaykar (ಜಯಕರ) ರ ಅರಮನೆಯನ್ನು ಚಿತ್ರಿಸಲು ಒಂದು ಸುಸಂಧಿಯೊದಗಿತು, ಮತ್ತು ಅಜಂತೆಯ ಚಿತ್ರದ ಪ್ರತಿಗಳನ್ನು ತಯಾರಿಸಲು ಔಂಧದ ಅರಸರಿಂದ ಕರೆ ಬಂತು. ಈ ಎಲ್ಲ ಕೆಲಸಗಳನ್ನು ತಮ್ಮ ಪ್ರತಿಭಾನ್ವಿತ ಕುಂಚದಿಂದ ಪೂರೈಸಿದರು. ನಂತರ ಇವರು Diploma (ಡಿಪ್ಲೋಮಾ) ಪರೀಕ್ಷೆಯಲ್ಲಿ ಅತ್ಯುತ್ತಮ ರೀತಿಯಿಂದ (Distinction) ಯಶಗಳಿಸಿದರು. ಪರೀಕ್ಷೆಯ ವಿಷಯ (ನೃತ್ಯ). ಶಿವನ ತಾಂಡವ ನೃತ್ಯದ ಪ್ರತಿಭೆಯನ್ನು ಬೆಳಗಿಸಿ, ಪದಕವನ್ನು ಪಡೆದರು.

ಶ್ರೀ ಬಡಿಗೇರವರು ಕಲಾಶಾಲೆಯನ್ನು ಸೇರಿದ ಮರುವರುಷವೇ ಹುಬ್ಬಳ್ಳಿಯ ಹತ್ತಿರ ಇರುವ ಉಣಕಲ್‍ದ, ಗೌರವಾನ್ವಿತ ಮನೆತನದ "ದೇವಿಬಾಯಿ" ಯವರೊಡನೆ ಲಗ್ನವಾಯಿತು. Diploma ಪರೀಕ್ಷೆಯ ಜೊತೆಗೆ ಪುತ್ರೋತ್ಸವವೂ ಆಯಿತು.

ಮುಂಬಯಿ ಕಲಾಶಾಲೆಯ ವಿದ್ಯಾಭ್ಯಾಸವು ಮುಗಿದ ಮೇಲೆ ಇವರು ಅಷ್ಟಕ್ಕೇ ತೃಪ್ತರಾಗಲಿಲ್ಲ. ಪರದೇಶದಲ್ಲಿ ಉಚ್ಚತರಗತಿಯ ಶಿಕ್ಷಣವನ್ನು ಪಡೆಯಬೇಕೆಂಬ ಲವಲವಿಕೆಯಿಂದ ಪ್ರಯತ್ನ ನಡೆಯಿಸಿದರು. ಪ್ರಯತ್ನವು ಫಲಿಸಿತು. ಶ್ರೀ ಶಿರಸಂಗಿಯವರ ಸ್ಕಾಲರಶಿಪ್ ಮತ್ತು ಮನೆಯಲ್ಲಿ ಆಭರಣಗಳನ್ನು ಮಾರಿದ ಹಣದ ಸಹಾಯದಿಂದ ೧೯೩೦ ರಲ್ಲಿ ಪರದೇಶಕ್ಕೆ ಪ್ರಯಾಣ ಬೆಳೆಸಿದರು. ಲಂಡನ್‍ದ ಬರ್ಲಿಂಗಟನ್ ಹೌಸದಲ್ಲಿರುವRoyal Academy of Fine Arts ಕಲಾಭ್ಯಾಸಕ್ಕಾಗಿ ಆರಿಸಲ್ಪಟ್ಟರು. ಅಲ್ಲಿಯೂ ಸಹ ಇವರ ಕಲಾಸೌರಭವು ಹರಡಿತು. ಲಂಡನ್, ಪ್ಯಾರಿಸ್, ಬರ್ಲಿನ್ ನಗರಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶಿಸಲ್ಪಟ್ಟವು. ಅಲ್ಲಿಯ ಹೆಸರಾಂತ ಕಲಾವಿದರ, ಜನತೆಯ, ಮೆಚ್ಚಿಕೆಯನ್ನು ಪಡೆದು ಅಂತರಾಷ್ಟ್ರೀಯ ಕೀರ್ತಿಯನ್ನು ಪಡೆದರು.

Royal Academy ಯ ಶಿಕ್ಷಣ ಮುಗಿಸಿ Bloomsbury (ಬ್ಲೂಮ್ಸಬರಿ) ಗ್ಯಾಲರಿಯಲ್ಲಿ ತಮ್ಮ ಚಿತ್ರಗಳದೇ ಒಂದು ಪ್ರದರ್ಶನವನ್ನು (One man's show) ಏರ್ಪಡಿಸಿದರು. ಜಗತ್ ಪ್ರಸಿದ್ಧ ಸಾಹಿತಿಯಾದ "Rudyard kipling" ಅವರಿಂದ ೧೯೩೧ ರಲ್ಲಿ ಅದು ಉದ್ಘಾಟಿಸಲ್ಪಟ್ಟಿತು. ಆಪ್ರದರ್ಶನದಲ್ಲಿ ೨೦೦ ಚಿತ್ರಗಳಿದ್ದವು. ಎಷ್ಟೋ ಚಿತ್ರಗಳು ಮಾರಲ್ಪಟ್ಟವು. ಅದರಲ್ಲಿಯ ಒಂದು ಚಿತ್ರವನ್ನು "ಮಹಾರಾಣಿ ಮೇರಿ" ಯವರು ಕೊಂಡರು.

ಕ್ಯಾಪ್ಟನ್ ಸಾಲೋಮನ್‍ರವರು "ಸರ್. ಜೆ.ಜೆ. ಸ್ಕೂಲ ಆಫ್ ಆರ್ಟ" ದ ವಿದ್ಯಾರ್ಥಿಗಳ ಚಿತ್ರಗಳನ್ನು ಇಂಗ್ಲಂಡದಲ್ಲಿ ಪ್ರದರ್ಶಿಸಿದಾಗ ಶ್ರೀ ಬಡಿಗೇರರವರ ಒಂದು ಕಲಾಕೃತಿಯಾದ Creation of Tilottama (ತಿಲೋತ್ತಮೆಯ ಉಗಮ) ವೆಂಬ ಚಿತ್ರವು ಇಂಗ್ಲಂಡದ ಮುಖ್ಯಮುಖ್ಯ ಪತ್ರಿಕೆಗಳಲ್ಲಿ ಬಹಳ ಪ್ರಸಿದ್ಧಿ ಪಡೆಯಿತು. ಆ ಚಿತ್ರವು ಭಾರತೀಯರ ಪುರಾಣದ ತಿಲೋತ್ತಮೆಯ ಚಿತ್ರವು. ಈ ಚಿತ್ರವನ್ನು ಸಹ ಮಹಾರಾಣಿ ಮೇರಿಯವರು ಬಹಳವಾಗಿ ಮೆಚ್ಚಿ ಖಾಸಗೀ ಸಂಗ್ರಹವೆಂದು ಬಂಕಿಂಗ ಹ್ಯಾಮ ಅರಮನೆಯಲ್ಲಿ ಅಲಂಕರಿಸಲು ಕೊಂಡುಕೊಂಡರು.

ಶ್ರೀಯುತರು ಇಂಗ್ಲಂಡದಲ್ಲಿದ್ದಾಗ ಕೆಲವು ಕಡೆ ಪ್ರವಾಸ ಮಾಡಿದರು. ಎಷ್ಟೋ ಆರ್ಟ ಗ್ಯಾಲರಿ, ಮ್ಯುಜಿಯಮ್ ಮುಂತಾದವುಗಳನ್ನು ಸಂದರ್ಶಿಸಿದರು. ಇನ್ನು ಬರ್ಲಿನ್ ಪ್ಯಾರಿಸ್ ಮತ್ತು ರೋಮ ನಗರಗಳ ಪ್ರವಾಸದ ಜೊತೆಗೆ ಪ್ರದರ್ಶನವನ್ನೂ ಕೈಕೊಳ್ಳಬೇಕೆನ್ನುವಷ್ಟರಲ್ಲಿಯೇ ೧೯೩೨ ರಲ್ಲಿ ಮಾತೃಭೂಮಿಯು ಕರೆ ಬಂತು.

ಕಲಾದೇವಿಯ ಸೇವೆಯೆಂದು ಹುಬ್ಬಳ್ಳಿಯ ಮೂರು ಸಾವಿರ ಮಠದ ಸ್ವಾಮಿಗಳ ಆಶೀರ್ವಾದದಿಂದ, ಮುಂಬಯಿಯಲ್ಲಿ "ನೂತನ ಕಲಾಮಂದಿರ" ವೆಂಬ ಕಲಾಶಾಲೆಯನ್ನು ಸ್ಥಾಪಿಸಿದರು. ವ್ಹಿ. ಆರ್. ರಾವ್ ಮತ್ತು ಜಿ. ಎಸ್. ದಂಡಾವತಿ ಮಠರವರಿಂದೊಡಗೂಡಿ ಶಾಲೆಯನ್ನು ಸುರುವು ಮಾಡಿದ ಸ್ವಲ್ಪ ದಿವಸಗಳಲ್ಲಿಯೇ ಡ್ರಾಯಿಂಗ ಇನಸ್ಪೆಕ್ಟರರಾಗಿ ನಿಯಮಿಸಲ್ಪಟ್ಟರು. ಕಲಾವಿದರಿಗೆ ಹೆಚ್ಚು ಹೆಚ್ಚು ಸೇವೆ ಸಲ್ಲಿಸುವದಕ್ಕಾಗಿ, "ನೂತನ ಕಲಾಮಂದಿರ" ವನ್ನು ಬಿಡಬೇಕಾಯಿತು. ಆ ಶಾಲೆಯನ್ನು ಶ್ರೀ ದಂಡಾವತಿಮಠರವರು ಉತ್ತಮ ರೀತಿಯಿಂದ ಈಗ್ಯೂ ನಡೆಸುತ್ತ ಬಂದಿದ್ದಾರೆ.

ಶ್ರೀ ಬಡಿಗೇರರವರು "ಕರ್ನಾಟಕ ಆರ್ಟ ಸೊಸಾಯಿಟಿ" ಎಂಬ ಸಂಸ್ಥೆಯನ್ನು ಡಾ. ಶ್ರೀ. ನಂದೀಮಠ, ಪಿ. ಎಚ್. ಡಿ. ಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ಸ್ಥಾಪಿಸಿದರು. ಆ ಸಂಸ್ಥೆಯವತಿಯಿಂದ ೧೯೩೩ ರಲ್ಲಿ ಬೆಳಗಾಂವಿಯಲ್ಲಿ ಪ್ರದರ್ಶನ ಏರ್ಪಡಿಸಿದರು. ಅಲ್ಲಿಯ ಮುಖ್ಯ ಮುಖ್ಯ ಜನರಿಂದೊಡಗೂಡಿ ಸಾವಿರಾರು ಜನರು ಪ್ರದರ್ಶನದ ಲಾಭಪಡೆದರು. ಶ್ರೀ. ಬಡಿಗೇರರವರು ಮಾಧ್ಯಮಿಕ ಶಾಲೆಯಲ್ಲಿ ಡ್ರಾಯಿಂಗ ಶಿಕ್ಷಣದ ಹೊಸ ಯುಗವನ್ನು ಸ್ಥಾಪಿಸಿ ಇವರು ಸೇವಾ ನಿವೃತ್ತಿಯಾಗುವದರೊಳಗೆ ಹೆಚ್ಚು ಹೆಚ್ಚು ಸಾಹಸ ಮಾಡಿ ಕಲಾದೇವಿಯ ಕೀರ್ತಿಯನ್ನು ಬೆಳಗಿಸುವರೆಂಬಲ್ಲಿ ಸಂಶಯವಿಲ್ಲ. ದೇವರು ಶ್ರೀಮಾನ್ ಮತ್ತು ಶ್ರೀಮತಿ ಬಡಿಗೇರವರಿಗೆ ಆಯುರಾರೋಗ್ಯಗಳನ್ನು ಕೊಡಲಿ, ಎಂದು ದೇವರಲ್ಲಿ ನಮ್ಮ ಪ್ರಾರ್ಥನೆ.

ಶ್ರೀಯುತರಿಗೆ ತಮ್ಮ ಮಾತೆಯಲ್ಲಿ ಅಪರಿಮಿತ ಭಕ್ತಿ. ಮಗನ ಈ ಕಲಾಭ್ಯುದಯವನ್ನು ಕಂಡು ಅವರಿಗೆ ಎಲ್ಲಿಲ್ಲದ ಆನಂದ! ಕನ್ನಡ ತಾಯಿಗೆ ಈ ಕಲಾರತ್ನವನ್ನು ಪಡೆದುದಕ್ಕೆ ಎಲ್ಲಿಲ್ಲದ ಅಭಿಮಾನ!!



# ಸುದ್ದಿ-ಸಮಾಚಾರ

## ಮನೆಗೆಲಸದ ಸೇವಿಕೆಯರ ಸಂಪು.

ಕಲಕತ್ತೆಯ ಬಾಟಾನಗರ ಪ್ರದೇಶದ ಮನೆಗೆಲಸದ ಸೇವಿಕೆಯೊಬ್ಬಳನ್ನು ಕೆಲಸದಿಂದ ಕಿತ್ತಿಹಾಕಿದ್ದಕ್ಕೆ ಅಲ್ಲಿದ್ದ ಸುಮಾರು ನೂರು ಜನ ಸೇವಿಕೆಯರು ಮಂಗಳವಾರದಿಂದ ಸಂಪು ಪ್ರಾರಂಭಿಸಿದ್ದಾರಂತೆ! ಈ ಸೇವಿಕೆಯರದೇ ಆದ ಸಂಘ-ಸಂಸ್ಥೆ ಯಾವುದಿಲ್ಲದೆಯೂ, ಇವರು ಒಕ್ಕಟ್ಟಿನಿಂದ ಸಂಪು ಹೂಡಿದ್ದು ಆಶ್ಚರ್ಯಕರ! ಕಿತ್ತುಹಾಕಲ್ಪಟ್ಟ ಆ ಸೇವಿಕೆಯನ್ನು ಕೆಲಸಕ್ಕೆ ತೆಗೆದುಕೊಳ್ಳದ ಇದ್ದಲ್ಲಿ, ತಾವು ಕೆಲಸಕ್ಕೆ ಹೋಗುವದಿಲ್ಲವೆಂದು ಆ ಸ್ತ್ರೀಯರ ಹಟ!

## ಸಭೆ! (ಎಂತಹದು ?)

ಮೆಲ್‌ಬೋರ್ನದಲ್ಲಿ ೪೦೦ ಜನ ಪುರುಷರು ಸಭೆಯೊಂದಕ್ಕೆ ಸದಸ್ಯರಾಗಿದ್ದಾರಂತೆ! ಹೆಂಡಂದಿರ ಕಾಟದಿಂದ ತಪ್ಪಿಸಿಕೊಳ್ಳಲು, ಅವಳ ತವರುಮನೆಯವರು ಸೂಚಿಸುವ ಉಪಾಯಗಳಿಂದ ಪಾರಾಗಲು ಯೋಚಿಸುವದೇ ಈ ಸಭೆಯ ಉದ್ದೇಶ! ಈ ಸಭೆಗೆ ಸದಸ್ಯರ ಸಂಖ್ಯೆ ದಿನದಿನಕ್ಕೆ ಹೆಚ್ಚಾಗುತ್ತಿದೆಯಂತೆ!

## ಬ್ರಾಝಿಲದ ಕವಯಿತ್ರಿ

ಬ್ರಾಝಿಲದ ಕವಿಯಿತ್ರಿ ಸೆಸಿಲಿಯಾ ಮೆರಿಲ್ಸ ಅವರು ಗಾಂಧೀಜಿಯ ಕೊಲೆಯನ್ನು ಕುರಿತು ಅಮರಕೃತಿಯೊಂದನ್ನು ರಚಿಸಿದ್ದಾರೆ. ಅವರ ಸನ್ಮಾನಾರ್ಥವಾಗಿ ಮೊನ್ನೆ ಮಂಗಳವಾರ ಮುಂಬಯಿಯಲ್ಲಿ ಪಿ. ಇ. ಎನ್‌ದ ವತಿಯಿಂದ ಅವರಿಗೆ ಸತ್ಕಾರಕೂಟವನ್ನೇರ್ಪಡಿಸಲಾಗಿತ್ತು.

## ಶ್ರೀಮತಿ ಶಕುಂತಲಾ ಭಾರ್ಗವೇಶ್ವರ

ಶ್ರೀಮತಿ ಶಕುಂತಲಾದೇವಿಯವರು ದಿಲ್ಲಿಯ ಸಾರ್ವಜನಿಕ ವಾಚನಾಲಯದಲ್ಲಿ ಮಕ್ಕಳ ವಿಭಾಗದ ವ್ಯವಸ್ಥಾಪಕರಾಗಿದ್ದರು. ಇದೀಗ ಅವರು ಬ್ರಿಟಿಷ ಕೌನ್ಸಿಲ್ಲಿನ ಶಿಷ್ಯವೃತ್ತಿಯೊಂದನ್ನು ಪಡೆದು, ವಿದೇಶದಲ್ಲಿಯ ವಾಚನಾಲಯಗಳಲ್ಲಿ ಮಕ್ಕಳ ವಿಭಾಗದ ವ್ಯವಸ್ಥೆಯನ್ನು ನೋಡಲು ತೆರಳಿದ್ದಾರೆ. ಅವರ ಜಿಜ್ಞಾಸೆ ಸಫಲವಾಗಿ, ಮಾತೃಭೂಮಿಯ ಸೇವೆಯನ್ನು ಅವರು ಹೆಚ್ಚಾಗಿ ಮಾಡುವಂತಾಗಲಿ ಎಂಬುದೇ ನಮ್ಮ ಆಶೆ!

ಶ್ರೀಮತಿಯವರು ಧಾರವಾಡದವರೇ ಎಂಬುದು ನಮ್ಮೆಲ್ಲರಿಗೆ ಇನ್ನೂ ಅಭಿಮಾನದ ಮಾತು!

## ಕೈದಿಗಳೂ ವಿದ್ಯಾರ್ಥಿಗಳಾದರು!

ಹೈದರಾಬಾದ ರಾಜ್ಯದಲ್ಲಿ ಹಿಂದೀ ಪ್ರಚಾರ ಸಭೆಯವರು ನಡೆಸಿದ ಪರೀಕ್ಷೆಗಳಿಗೆ, ಹೈದರಾಬಾದ ಕೇಂದ್ರ ಸೆರೆಮನೆಯ ೬೦ ಕೈದಿಗಳೂ ಕುಳಿತಿದ್ದರಂತೆ! ಅವರಿಗಾಗಿ ಸೆರೆಮನೆಯಲ್ಲಿಯೇ ಪರೀಕ್ಷಾಕೇಂದ್ರವನ್ನು ಏರ್ಪಡಿಸಲಾಗಿತ್ತು!

### ಮಹಿಳಾ ಸಂಸ್ಥೆಗಳು !

ಅಜಮೀರಿನಲ್ಲಿ, ತಮ್ಮ ರೋಗಿಗಳನ್ನು ಕಾಣಲು ಹೋಗುವ ಸ್ತ್ರೀ ವೈದ್ಯರೊಂದಿಗೆ, ಅಲ್ಲಿಯ ಮಹಿಳಾ ಸಂಸ್ಥೆಯ ಒಬ್ಬಿಬ್ಬರು ಸದಸ್ಯೆಯರೂ ಹೋಗುತ್ತಾರಂತೆ! ಹೋಗಿ ಬಂದ ಸದಸ್ಯೆಯರು ಅಲ್ಲಿಯ ಸ್ತ್ರೀ ಸಮಾಜದ ಸ್ಥಿತಿಗತಿಗಳ ಬಗ್ಗೆ ಕಂಡ ವರದಿಯನ್ನು ಮಾತ್ರ ಒಪ್ಪಿಸಲೇಬೇಕು. ಆ ವರದಿಯ ಆಧಾರದಿಂದ ಸರಕಾರವು ವಿಧಾಯಕ ಕಾರ್ಯ ಕೈಕೊಳ್ಳುವದು.

### ಕೊಡಗಿನಲ್ಲಿ ಮಕ್ಕಳ ಹಿತಕ್ಕಾಗಿ ಸಂಸ್ಥೆ.

ಅಖಿಲ ಭಾರತ ಮಕ್ಕಳ ಹಿತಕ್ಕಿರುವ ಸಂಸ್ಥೆಯ ನಿರ್ದೇಶನದಂತೆ, ಕೊಡಗಿನಲ್ಲಿ ಮಕ್ಕಳ ಹಿತರಕ್ಷಣೆಗಾಗಿ ಒಂದು ಸಮಿತಿಯು ಸರ್ಕಾರದಿಂದ ನಿರ್ಮಿತವಾಗಿದೆ. ಇವರು ಮಕ್ಕಳನ್ನು ಯೋಗ್ಯ ರೀತಿ ಪೋಷಿಸುವ ತರಬೇತು ಕೊಡುವ ಸಂಸ್ಥೆ ತೆರೆದು, ಮಕ್ಕಳ ಅಭಿವೃದ್ಧಿಗೆ ಸಂಬಂಧಿಸಿದ ವಿಷಯಗಳನ್ನು ಕಲೆಹಾಕುವ ಮತ್ತು ಮಕ್ಕಳಿಗೆ ಒಂದು ರಾಷ್ಟ್ರೀಯ ಶಾಸನವನ್ನು ನಿರೂಪಿಸಿ ಅದನ್ನು ಪ್ರಚಾರದಲ್ಲಿ ತರಲು ಯತ್ನಿಸುವರು !



# ಹೋಳೀ ಉತ್ಸವ !

ಲೇ:— **ಸುಮತಿ.**

ನಿಸರ್ಗಕ್ಕೂ, ಮಾನವನಿಗೂ ನಿಕಟವಾದ ಸಂಬಂಧ; ನಿಸರ್ಗ ನಲಿದರೆ ಮಾನವನಿಗೂ ನಲಿವು. ಆ ನಲಿವನ್ನು ಅನಾದಿಕಾಲದಿಂದಲೂ ಮಾನವನು ವಿವಿಧ ರೀತಿಯಲ್ಲಿ ವ್ಯಕ್ತಮಾಡುತ್ತ ಬಂದಿದ್ದಾನೆ. ಹೊಸ ಬೆಳೆ ಕೈಗೆ ಬಂದಾಗಲೇ ಗ್ರೀಕರ 'ಕಮೋದಿಯ' (ಕೊಮೆಡಿ) ಹುಟ್ಟಿದ್ದು ! ಆಗಿನ ಆನಂದವನ್ನೇ ವ್ಯಕ್ತಪಡಿಸಿ, ಹೊಸ ಅನ್ನದ ಪ್ರಥಮ ಆಹುತಿಯನ್ನು, "ಜ್ಯೋತಿಷ್ಟೋಮ," ದ ರೂಪವಾಗಿ, ನಮ್ಮ ಪೂರ್ವಜರು ಆಚರಿಸುತ್ತಿದ್ದರು. ಈಚಿನ ಸಾಹಿತ್ಯದಲ್ಲಿ ಕಂಡು ಬರುವ ವಸಂತೋತ್ಸವ, ಕುಸುಮೋತ್ಸವಗಳು ಇದರ ಪ್ರತೀಕಗಳೇ ; ವಿಷಯೋಪಭೋಗದ ಸ್ವಾತಂತ್ರ್ಯ ಕೆಲಮಟ್ಟಿಗೆ ಇದರಲ್ಲಿ ಅಡಕವಾಗಿದೆಯೆಂಬ ಭಾವನೆಯೂ ನಮ್ಮಲ್ಲಿ ಬೇರೂರುತ್ತ ಬಂದಿದೆ.

ಶಿವನಿಂದ ಕಾಮದಹನ, ಕಾಮನು ದಗ್ಧನಾದರೂ ರತಿಗೆ ಅನಂಗನಾಗಿ ಸುಖಕೊಡುವನೆಂಬ ಶಿವನ ವಾಗ್ದಾನ ಮೊದಲಾದವುಗಳು ಈ ಹೋಳೀಹುಣ್ಣಿಮೆಯ ಆಚರಣೆಯ ಅಂಗವಾಗಿ ಬಂದಿವೆ. ಈ ಕಥೆಯನ್ನನುಸರಿಸಿ ಒಂದೊಂದು ಪ್ರದೇಶದಲ್ಲಿ ಒಂದೊಂದು ಬಗೆಯ ಆಚರಣೆಗಳು ಪ್ರಚಾರದಲ್ಲಿ ಬಂದಿವೆ. ಹೊಲದಲ್ಲಿಯ

ಬೆಳೆಯನ್ನು ಮನೆಗೆ ತಂದಮೇಲೆ, ಅಲ್ಲಿದ್ದ ಕಸವನ್ನೆಲ್ಲ ಕೂಡಿಸಿ ಸುಟ್ಟು, ಮುಂದಿನ ಬೆಳೆಗೆ ಭೂಮಿಯನ್ನು ಹಸನಮಾಡುವದು ಪದ್ಧತಿ. ಆದರೆ ಇದರ ರೂಪ ಕರ್ನಾಟಕ ದಲ್ಲಿ ವಿಕೃತವಾಗಿ ಬಂದು ಬಿಟ್ಟಿದೆ. ಯುವಕರೂ ಕೂಡ ಸೇರಿ, ಒಳ್ಳೇ ಕಟ್ಟಿಗೆಯ ತುಂಡುಗಳನ್ನೂ ಇಮಾರತಿಯ ಕಟ್ಟಿಗೆಗಳನ್ನೂ ಶೇಖರಿಸಿ, ಮನೆಯ ಬಾಗಿಲು ಗಳನ್ನು ಮುರಿದುಕೊಂಡೊಯ್ದು, ಒಂದೆಡೆ ರಾಶಿಹಾಕುವರು. ಹೋಳೀಹುಣ್ಣಿಮೆ ಯಲ್ಲಿ ಕಳವು ಮಾಡಲು ಅಧಿಕಾರವಿದೆ; ಕಳವು ಮಾಡಿದಷ್ಟೂ ಹೆಮ್ಮೆ! ಮನೆಯ ವರೂ ಈ ಕಳುವಿಗೆ ಆಕ್ಷೇಪವೆತ್ತಕೂಡದಂತೆ! ಅಶ್ಲೀಲ ಮಾತುಗಳನ್ನು ಹೇಳುತ್ತ, ಜೋಲಿ ಹೊಡೆಯುತ್ತ ಹೋಗಲು ಈ ಹಬ್ಬದಲ್ಲಿ ಸ್ವಾತಂತ್ರ್ಯವಿದೆ! ಬಳಿಕ ಮರು ದಿನ, ಕಾಮನ ವಿಕೃತ ಚಿತ್ರವೊಂದನ್ನು ಕಟ್ಟಿಗೆಯ ರಾಶಿಯಲ್ಲಿಟ್ಟು, ನೆಗೆಯುವ ಜ್ವಾಲೆಯನ್ನು ನೋಡಿಬಿಟ್ಟರೆ ಆಯಿತು, ಬಣ್ಣ ಚಿಮುಕಿಸಲು ಪ್ರಾರಂಭ! ಒಳ್ಳೇ ಬಟ್ಟೆ ಬರೆ, ಸಂಸ್ಕೃತಿಯೆನ್ನದೆ ಹೋಗಬರುವವರ ಮೇಲೆ ಬಣ್ಣ ಹಾಕಿದರೆ ಅರ್ಥವೇನು?

ಹಳ್ಳಿಗಳಲ್ಲಿ ಕಾಮನ ಹಬ್ಬ ದೊಡ್ಡದು. ಇದ್ದ ಬಿದ್ದ ವೈಯ್ಯಕ್ತಿಕ ಸೇಡನ್ನು ಇದೇ ಸಂದರ್ಭದಲ್ಲಿ ತೀರಿಸಿಕೊಳ್ಳುವದು! ಒಂದೊಂದು ಭಾಗದಲ್ಲಿ ಒಂದು ಕಾಮನ ಚಿತ್ರವನ್ನೋ, ಗೊಂಬೆಯನ್ನೋ ಇಟ್ಟು, ಅದಕ್ಕೊಂದು ಹೆಸರಿಡುವದು ವಾಡಿಕೆ; ಪೇಟೆಯ ಕಾಮ, ಗೌಡರ ಕಾಮ ಇತ್ಯಾದಿಯಾಗಿ! ಈ ಕಾಮನಿಗೆ ಬೆಂಕಿಹಚ್ಚುವ ಅಧಿಕಾರ ವಿಶಿಷ್ಟ ವ್ಯಕ್ತಿಯದೇ! ಮೊದಲು ಬೆಂಕಿ ತರಲು ಉತ್ಸವ ಹೋಟು, ಮರುದಿನ ನಸುಕಿನಲ್ಲಿ ಅದೇ ಬೆಂಕಿಯಿಂದ ಕಾಮ ಭಸ್ಮೀ ಭೂತನಾಗುತ್ತಾನೆ. ಈ ಬೂದಿಯ ಮಹತ್ವವೂ ಬಹಳ. ಕಾಮದಹನದ ಬೆಂಕಿಯಲ್ಲಿ ಕಡಲೆ ಹುರಿದು ತಿಂದರೆ ಹಲ್ಲು ಬಹಳ ಗಟ್ಟಿಯಾಗುತ್ತವಂತೆ! ಕಾಮದಹನದ ದಿನ ಸಂಜೆ ಮಳೆ ಬೀಳಲೇ ಬೇಕು, ಎಲ್ಲಿದ್ದರೂ, ಬೂದಿಯನ್ನು ತೋಯಿಸಲು! ಅದೇ ರತಿಯ ಕಣ್ಣೀರು!

ದಕ್ಷಿಣದಲ್ಲಿ ಈ ಬೂದಿಗೆ ಇನ್ನೂ ಬೆಲೆ. ದೇಶಾಂತರ ಹೋದದ್ದರಿಂದಲೋ ಅಥವಾ ಇನ್ನಾವ ಕಾರಣದಿಂದಲೋ ಪತಿಯ ಸಾನ್ನಿಧ್ಯ ದೊರೆಯದ ಸ್ತ್ರೀ ಈ ಬೂದಿ ಗಾಗಿ ಕಾದಿರುತ್ತಾಳೆ. ದಹನದ ದಿನ, ಹುಡಗರು ಬಾಯಿ ಬಡಿದುಕೊಳ್ಳುತ್ತ ಆ ಸ್ತ್ರೀಯ ಸುತ್ತಲು ಮೂರು ಸಲ ಪ್ರದಕ್ಷಿಣೆ ಹಾಕಿ, ಆ ಬೂದಿಯನ್ನು ಅವಳ ತಲೆಯ ಮೇಲೆ ಎರಚಿ ಬಿಡುತ್ತಾರೆ. ಈ ಜನ್ಮದಲ್ಲಾಗದಿದ್ದರೂ ಮುಂದಿನ ಜನ್ಮದಲ್ಲಿ ಪತಿಯ ಸುಖ ದೊರೆತೀತೆಂದು ಅವಳು ಸಮಾಧಾನಪಟ್ಟುಕೊಳ್ಳುತ್ತಾಳೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಈ ಹಬ್ಬಕ್ಕೆ ವಿಶೇಷ ಮನ್ನಣೆ ಇಲ್ಲವೇ ಇಲ್ಲ. ಇದು ಕರ್ನಾಟಕದ ಪರಿಸ್ಥಿತಿ. ಇನ್ನು ಮಹಾರಾಷ್ಟ್ರದಲ್ಲಿ, ಕಟ್ಟಿಗೆಯ ರಾಶಿಯನ್ನು ಸುಡುವದೂ, ಅಶ್ಲೀಲ ಶಬ್ದಗಳನ್ನುಚ್ಚರಿಸುವದೂ ಈ ಪ್ರಮಾಣದಲ್ಲಿಲ್ಲ. ಹೋಳೀ ಹುಣ್ಣಿಮೆಯನ್ನು ಸ್ವಾಗತಿಸಲು ಹದಿನೈದು ದಿನಗಳ ಸಿದ್ಧತೆ ಬೇಕಾಗಿಲ್ಲ.

ಉತ್ತರ ಹಿಂದುಸ್ಥಾನದಲ್ಲಿ ಇದೊಂದು ಸಾರ್ವಜನಿಕ ಹಬ್ಬ. ಶ್ರೀಕೃಷ್ಣನೂ ಗೋಪಿಯರೂ ಓಕುಳಿಯಾಡಿದ ವಿಷಯ ಭಕ್ತಕವಿಯ ಕೈಯ್ಯಿಂದ ಪಾರಾಗದು. ಆದರೆ ಅಲ್ಲಿ ಅಶ್ಲೀಲತೆ, ಸಂಕೋಚಗಳಿಗೆ ಎಡೆಯಿಲ್ಲ.

ಸರಿ, ಹೋಳೀ ಹಬ್ಬವನ್ನು ಆಚರಿಸುವದಾದರೂ ಅದಕ್ಕೊಂದು ಅರ್ಥ ಬೇಕು. ೧೯೪೮ ನೇ ಕಲವನ್ನು ಬಳಿಕೆಯಲ್ಲಿ ತರುವವರೆಗೂ ನಾಗರಿಕ ಸಂಸ್ಕೃತಿ ಮುಟ್ಟದರೆ ಇನ್ನೇನು ? ಊರಲ್ಲಿಯ ಹೊಲದಲ್ಲಿಯ ಕಸವನ್ನೆಲ್ಲ ಸುಟ್ಟು, ಹೊಸ ಬೆಳೆಯನ್ನು ಸ್ವಾಗತಿಸಲು, ಇಮ್ಮಡಿ ಉತ್ಸಾಹದಿಂದ ದುಡಿಯಲು ಇದು ನಾಂದಿ !



## ಕಂಬನಿ!

ಜ್ಞಾನವೃದ್ಧರೂ, ನಾಡಿನ ಹಿರಿಯರೂ, ಕರ್ತವ್ಯದ ಮೂರ್ತಿಗಳೂ ಆಗಿದ್ದ ಶ್ರೀ ಗೋಪಾಲಸ್ವಾಮಿ ಅಯ್ಯಂಗಾರರು ಕಳೆದ ಫೆಬ್ರುವರಿ ೧೦ನೆಯ ತಾರೀಖಿನಂದು ಭಾರತಭೂಮಿಯ ಋಣವನ್ನು ಸಲ್ಲಿಸಿ ಹೊರಟುಹೋದರು. ಮದರಾಸಿನಲ್ಲಿ ಸಿವ್ಹಿಲ್ ಸರ್ವ್ಹಿಸ ಖಾತೆಯಲ್ಲಿ ಪೂರ್ಣ ಸೇವೆ ಸಲ್ಲಿಸಿ, ಕಾಶ್ಮೀರದಲ್ಲಿ ದಿವಾನರಾಗಿ, ಕೊನೆಗೆ ಕೇಂದ್ರ ಸರಕಾರದಲ್ಲಿ ಮಂತ್ರಿಗಳಾಗಿ ತಮ್ಮ ಹಾರ್ದಿಕ ಸೇವೆಯನ್ನು ಸಲ್ಲಿಸಿದರು. ಗೋಪಾಲಸ್ವಾಮಿಯವರ ಸಂಪರ್ಕದಲ್ಲಿ ಬಂದ ಜನ ಅವರನ್ನು ಮರೆವುದು ಸಾಧ್ಯವೇ ಇಲ್ಲ. " ನಿದ್ರೆ ಬಾರದೆ ಹೋಗಿದ್ದರೆ, ಆ ನಾಲ್ಕು ಗಂಟೆಗಳಲ್ಲೂ ಕೆಲಸ ಮಾಡಬಹುದಿತ್ತು, " ಎಂದು ಅವರು ಹೇಳುತ್ತಿದ್ದರಂತೆ.

ಗೋಪಾಲಸ್ವಾಮಿಯವರ ನಿಧನದಿಂದ ರಾಷ್ಟ್ರಕ್ಕೆ ತುಂಬಿಬಾರದ ಹಾನಿಯಾಗಿದೆ.

† ✤ † ✤ † ✤ †

ಹಾಗೆಯೇ ಕೀರ್ತಿಶೇಷರಾದ ಡಿ. ಕೆ. ಭಾರದ್ವಾಜರು ಕನ್ನಡಿಗರನ್ನಗಲಿ ಹೋದುದು ಶೋಚನೀಯ. ಕನ್ನಡನಾಡಿಗಾಗಿ, ದೇಶಕ್ಕಾಗಿ ಅವರು ಮಾಡಿದ ತ್ಯಾಗ, ನೀಡಿದ ಸೇವೆ ಅಪಾರ; ಸಾಹಿತ್ಯ, ರಾಜಕೀಯ, ವೈದ್ಯಕೀಯ ಎಲ್ಲವೂ ಅವರ ದುಡಿಮೆಯ ಕ್ಷೇತ್ರಗಳು; ಆ ಆ ಕ್ಷೇತ್ರಗಳಲ್ಲಿ ಬೆಳೆವ ತರುಣರಿಗೆ ಪ್ರೋತ್ಸಾಹ ನೀಡಿ ಮುಂದೆ ಕರೆತಂದವರೂ ಅವರೇ ! " ಹಲವಾರು ಹೊಸ ಸತ್‌ಪಂಥಗಳನ್ನು ಧೈರ್ಯದಿಂದ ಸಾಧಿಸಿ ದುಡಿದದ್ದೇ ನನಗೆ ಸುಖ ! " ಎಂದರು ಕರ್ಮಯೋಗಿ ಭಾರದ್ವಾಜರು ! ಅವರ ಆಶೀರ್ವಾದ ಕನ್ನಡ ನಾಡಿಗಿರಲಿ !!



[ ೮ ನೆಯ ಪುಟದಿಂದ ಮುಂದುವರಿದುದು ]
ತ್ತಿದ್ದ ತಾನು ಹೋದಸಲ ಕೊಟ್ಟಕಾಣಿಕೆಯ ಫಲವೇ ಈ ಕುಮಾರನೆಂದು ಸಾರಿ ಹೇಳುತ್ತಿದ್ದ. ಕುಮಾರ ತಾಯಿಯಂತೆಯೇ ಇರುವನೆಂದು ಕೆಲವರು ಅಭಿಪ್ರಾಯ ಪಡುತ್ತಿದ್ದರು. ಚಂದ್ರಪ್ರಭೆ ಇಲ್ಲ ಈ ಕುಮಾರ ಪ್ರತಿ ಅರವಿಂದರಂತೆಯೇ ಇರುವನು ಹಣೆಯಮೇಲಿನ ಈ ಕೂದಲ ಸುಳಿಸಹಿತ ಹಾಗೆಯೇ ಇದೆಯಲ್ಲ" ಎಂದು ಅರವಿಂದರ ಕಡೆಗೊಮ್ಮೆ ಕುಮಾರನ ಕಡೆಗೊಮ್ಮೆ ನೋಡಿ ಖಚಿತ ಪಡಿಸುತ್ತಿದ್ದಳು. ಅದೇಕೋ ಯಾರಾದರೂ ಕುಮಾರ 'ತಂದೆಯಂತೆ' ಎಂದು ಹೇಳಿದಾಗ ನನ್ನ ಮನಸ್ಸಿನ ಸಂತೋಷ ಇಮ್ಮಡಿಯಾಗುತ್ತಿತ್ತು. ತಾಯಿಯಂತೆ ಎಂದು ಹೇಳುವವರಿಗೆ ಅರವಿಂದರು ಪುಷ್ಟಿ ಕೊಡುತ್ತಿದ್ದರು. ಯಾರಂತೆಯಾದರೂ ತಮಗೇನು ? ಎನ್ನುವವರಂತೆ ಕೆಲವರು ಸುಮ್ಮನೆ ಕೆಟ್ಲಿಯಲ್ಲಿಯ ಚಹಾ ಕಪ್ಪಿಗೆ ಬಗ್ಗಿಸುತ್ತಿದ್ದರು. ಅತಿಥಿಗಳು ಹೊರಟನಂತರ ಅವರನ್ನು ಗೇಟಿನವರೆಗೆ ಕಳಿಸಿಬಂದೆವು. ತಿರಿಗಿಬರುವದರಲ್ಲಿ ಕುಮಾರ ದಾದಿಯ ಕೈಯಲ್ಲಿ ಕಿರಿಚುತ್ತಿದ್ದ ಕುಮಾರನಿಂದ ಅವರನ್ನು ತಿವಿದೆ. ನನ್ನ ಕೈಯಲ್ಲಿಯ ಕುಮಾರನನ್ನು ಮಿದುವಾಗಿ ಎತ್ತಿಕೊಂಡು ತಮ್ಮ ಎದೆಗವಚಿಕೊಂಡು ಸಮಾಧಾನಮಾಡುತ್ತ " ಆಶಾ, ಇವನು ನಿನ್ನಂತೆಯೇ ಆಗಲೆಂದು ನನ್ನ ಅಪೇಕ್ಷೆ. ನನ್ನಂತೆ ಆಗುವದು ಬೇಡ." ಎಂದು ನಿಟ್ಟುಸಿರು ಬಿಟ್ಟರು. ಅವರ ಮುಖ ದೀನವಾಗಿತ್ತು. ಇಲ್ಲದ ನಗೆಯನ್ನು ತರಲು ಯತ್ನಿಸುತ್ತಿದ್ದರು. " ಅದಿರಲಿ ಸಿನೇಮಾಕ್ಕೆ ಹೋಗುವದಲ್ಲವೆ ? " ಎಂದೆ. " ಇಂದು ಬೇಡ ಆಶಾ ನನಗೇಕೋ ಮನಸ್ಸಿಗೆ ಸಮಾಧಾನವಿಲ್ಲ ನೀನು ಬೇಕಾದರೆ ಹೋಗಿಬಾ " ಎಂದರು. " ಈ ವರಿಗೆ ನೆಟ್ಟಗಿತ್ತು ಈಗೇನಾಯಿತು ? " ಎಂದೆ. " ಆಶಾ ಎಷ್ಟೋ ದಿವಸಗಳ ಮಾತು ಒಂದೇ ಉಸಿರಿಗೆ ಹೇಳಲು ಸಾಧ್ಯವಿಲ್ಲ. ನಾಳೆ ನನ್ನ ಡಾಯರಿ ತೋರಿಸುವೆನು " ಎಂದರು. " ನಾನು ಯಾವಾಗಲೂ ಸಂತೋಷದಲ್ಲಿಯೇ ಇರುವೆನು. ವಿಷಯವೇ ಇದ್ದರೆ ಇಂದೇನು ಎಂದೇನು ? " ಎಂದು ಅವರ ಕೈ ಹಿಡಿದು ತೋರಿಸಲೇ ಬೇಕೆಂದು ಹಟ ಹಿಡಿದೆ. ಎರಡನೆಯವರ ಡಾಯರಿ ತೋರಿಸೆಂದು ಹಟ ಮಾಡಬಾರದು ಆಶಾ ತೋರಿಸಿದಾಗ ಮಾತ್ರ ನೋಡಬೇಕು. " ಎಂದು ಹೇಳಿ ಒಮ್ಮೆಲೇ ಏನೋ ನೆನಪಾದವರಂತೆ " ಅದಿರಲಿ ಸಿನೆಮಾಕ್ಕೆ ಹೋಗಿಯೇ ಬಿಡೋಣ ನಡೆ " ಎಂದರು. ಹೊರಟೇಬಿಟ್ಟೆವು.

ಎಂದಿನಂತೆ ಅವರೇಕೋ ಇಂದು ಡಾಯರಿ ಬರೆಯಲು ಕುಳಿತಿಲ್ಲ. ರಾತ್ರಿ ಹನ್ನೆರಡು ಹೊಡೆದಿದೆ. ನನಗೆ ಮಾತ್ರ ಇಂದಿನ ಅವರ ಅಸ್ವಾಸ್ಥ್ಯದ ಕಾರಣವನ್ನು ತಿಳಿಯದೆ ನಿದ್ರೆಬರಲೊಲ್ಲದು ಅದರ ಕಾರಣವನ್ನು ನಾಳೆ ಡಾಯರಿ ಮೂಲಕ ತಿಳಿಸುವೆನೆಂದಿದ್ದಾರೆ. ಈಗ ಅವರಿಗೆ ನಿದ್ರೆ ಹತ್ತಿದೆ. ಸಾವಕಾಶವಾಗಿ ಅವರ ಡಾಯರಿ ತೆಗೆದು ನೋಡಿ ಬಿಡಲೆ ? ಅಂದರೆ ನನಗೆ ಸಮಾಧಾನವಾಗಬಹುದು. ಕುತೂಹಲ ತಡೆಯಲೊಲ್ಲದು. ಅದಕ್ಕೆ ಸೌಜನ್ಯ ಅಡ್ಡಬರುತ್ತಿರುವದು. ಸೌಜನ್ಯಕ್ಕೆ ಜಯ ದೊರೆಯಲೇಬೇಕು. ಅವರು ಬೇಡವೆಂದಾಗ ನೋಡುವದು ನನ್ನ ಕರ್ತವ್ಯವಲ್ಲ.

ನಮ್ಮ ಮನಸ್ಸಿನಮೇಲೆ ಇಷ್ಟೂ ಸಂಯಮ ಇಲ್ಲದಿರುವದು ಒಳಿತಲ್ಲ. ನಾಳೆ ಅವರಾಗಿ ತೋರಿಸಿದ ಹೊರ್ತು ನಾನು ಮಾತು ಸಹ ತೆಗೆಯುವದಿಲ್ಲ.

* * * * * *

ಜೂನ ೧೪-೧೯೫೦

ನಿನ್ನಿನದಿವಸವೆಲ್ಲ ಏನೋ ಒಂದು ವಿಚಿತ್ರ ಸುಖ ದುಃಖಗಳಲ್ಲಿ ಕಳೆಯಿತು ದುಃಖದಲ್ಲಿಯೂ ಸುಖವೆಂದರೆ ಅವರ ಮಗುವಿನಂಥ ಮನಸ್ಸು. ತಾಯಿ ತನ್ನ ಅಪರಾಧವನ್ನು ಕ್ಷಮಿಸುವಳೆಂಬ ಭರವಸೆ ಇದ್ದ ಮಗು ತನ್ನ ತಪ್ಪನ್ನು ಒಪ್ಪಿಕೊಳ್ಳುವಂತೆ ಅರವಿಂದರು ನಿನ್ನೆ ಒಪ್ಪಿಕೊಂಡರು. ಅಪರಾಧವನ್ನೇನೋ ಎಷ್ಟೋ ತಾಯಂದಿರು ಕ್ಷಮಿಸುವರು. ಆದರೆ ಆ ಅಪರಾಧವನ್ನು ಮತ್ತೊಮ್ಮೆ ಮಾಡದಂತೆ ನೋಡಿಕೊಳ್ಳುವ ಯೋಗ್ಯತೆ ಇದ್ದ ತಾಯಂದಿರೆಷ್ಟು ? ಆ ತಾಯಿಯ ಯೋಗ್ಯತೆ ನನ್ನಲ್ಲಿದೆಯೆ ? ನಿನ್ನೆ ನಾನೇನೂ ಅವರಿಗೆ ಡಾಯರಿ ತೋರಿಸಲು ಮತ್ತೊಮ್ಮೆ ಕೇಳಲಿಲ್ಲ ಎಂದಿನಂತೆ ಬೆಳಗಿನ ಕಾರ್ಯಕ್ರಮ ಮುಗಿಸಿಕೊಂಡು ಆಫೀಸಿಗೆ ಹೋದರು. ಅವರು ಹೋಗುವಾಗ ಪರಿಪಾಠದಂತೆ ಕಾರಿನವರೆಗೆ ಹೋಗಿ ಕಳಿಸಿಬಂದೆ. ಕಾರು ಹೊರಡಿಸುವಾಗ ರೂಢಿಯಂತೆಯೇ ಅವರೂ ನನ್ನ ಕಡೆಗೊಮ್ಮೆ ನೋಡಿ ಮಂದಸ್ಮಿತಬೀರಿ ಕಾರು ' ಸ್ಟಾರ್ಟ ' ಮಾಡಿದರು. ನನಗೇನೋ ಒಳಗೊಳಗೇ ಒಂದು ತರದ ಅಸಮಾಧಾನ. ಡಾಯರಿ ನನ್ನ ಕೈಯಲ್ಲಿ ಕೊಟ್ಟು ಹೋಗಲಿಲ್ಲವಲ್ಲ ಎಂದು. ಆ ಅಸಮಾಧಾನದ ವಿಚಾರಗಳಲ್ಲಿ ಕಾರು ಮರೆಯಾದದ್ದು ಕಾಣಿಸಲೇಇಲ್ಲ. ಒಳಗೆ ಬಂದ ನಂತರ ಕುಮಾರನೊಂದಿಗೆ ಕೆಲವುವೇಳೆ ಕಳೆದು ಆಮೇಲೆ ಅರವಿಂದರ ಮೇಜಿನಮೇಲಿನ ವಸ್ತುಗಳನ್ನು ಅಚ್ಚುಕಟ್ಟಾಗಿರಿಸಲು ಹೋದೆ, ಹಾಗೆ ನೋಡಿದರೆ ಅವರ ಮೇಜಿನ ಮೇಲೆ ಅವ್ಯವಸ್ಥಿತವಾಗಿ ಅದರದರ ಸ್ಥಳಗಳಲ್ಲಿಯೇ ಇಡುವರು. ಆದರೂ ಆಳು ತಂದಿಟ್ಟ ಹೂ ಗುಚ್ಛದ ಪಾತ್ರೆಯನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸರಿಸುವದು ಅದರಲ್ಲಿಯ ಹೂಗಳನ್ನು ಒಂದು ಕಡೆಯಿಂದ ಕಿತ್ತಿ ಮತ್ತೊಂದು ಕಡೆಗೆ ಅವುಗಳ ಬಣ್ಣ ಸುಂದರವಾಗಿ ಒಂದಕ್ಕೊಂದು ಒಪ್ಪುವಂತೆ ಹಚ್ಚುವದು ಇವೇ ಮೊದಲಾದ ಅಚ್ಚುಕಟ್ಟುತನ ನಾನು ಅವರ ಮೇಜಿನಮೇಲೆ ಮಾಡುವದು. ಆದರೆ ನಿನ್ನೆ ಅವರ ಮೇಜಿನ ಹತ್ತರ ಹೋದೊಡನೆ ಯಾವ ವಸ್ತುಗಳ ಕಡೆಗೂ ನನ್ನ ದೃಷ್ಟಿ ಹೋಗಲಿಲ್ಲ. ಮೇಜಿನ ಮೇಲೆ ಅವರ ಡಾಯರಿ ಅದರ ಮೇಲೊಂದು ಚಿಕ್ಕ ಚೀಟಿ ಇವು ಮಾತ್ರ ನನ್ನ ದೃಷ್ಟಿಯನ್ನು ತಮ್ಮ ಮೇಲೆ ಸೆಳೆದುಕೊಂಡವು. ಆ ಚಿಕ್ಕ ಚೀಟಿಯಲ್ಲಿ " ಆಶಾ ನಿನ್ನ ವಿಶ್ವಾಸಕ್ಕೂ ಪ್ರೇಮಕ್ಕೂ ಪಾತ್ರಸಲ್ಲದ್ದ ಅರವಿಂದನನ್ನು ಈ ಡಾಯಿರಿ ಓದಿದ ನಂತರವೂ ಮೊದಲಿನಂತೆಯೇ ಕಾಣುವಿ ಎಂಬ ಭರವಸೆಯಿಂದ ನಿನಗಿದನ್ನು ಓದಲು ಇಟ್ಟಿದ್ದೇನೆ. " ಇಷ್ಟೇ ಬರೆದಿತ್ತು. ಉದ್ವೇಗದಿಂದ ಡಾಯರಿಯ ಒಂದೊಂದು ಪಾನು ಓದುತ್ತ ಅಲ್ಲಿಯೇ ಕುಳಿತೆ. ಹಿಂದಿನ ಪಾನು ಓದಿದ್ದನ್ನು ನೆನೆಸುವದರಲ್ಲಿಯೂ ಮುಂದಿನ ಪಾನು ಓದುವ ಕುತೂಹಲದಲ್ಲಿಯೂ ವೇಳೆಕಳೆದದ್ದು

ತಿಳಿಯಲೇ ಇಲ್ಲ. ನಾನು ಓದಿದ ಸಾರಾಂಶವೆಂದರೆ, ಅರವಿಂದರು ಸುಂದರ ಪುಷ್ಪಗಳಲ್ಲಿ ಚಂದ್ರಪ್ರಭೆಯೂ ಒಬ್ಬಳೆಂದು ತಿಳಿದಾಗ ಮಾತ್ರ ನನಗೆ ಆಶ್ಚರ್ಯವಾಯಿತು. ಜೊತೆಗೆ ಸ್ವಲ್ಪ ಅವಳ ವಿಷಯಕ್ಕೆ ತಿರಸ್ಕಾರವೂ ಉತ್ಪನ್ನವಾಯಿತು. ಚಂದ್ರಪ್ರಭೆಯಂಥ ಸುಂದರ ಸುಶಿಕ್ಷಿತ ಆಕರ್ಷಕ ಯುವತಿಯರನ್ನು ರಸಿಕ ಪುರುಷರು ಅಪೇಕ್ಷಿಸುವದು ಆಶ್ಚರ್ಯವಲ್ಲ. ಆದರೆ ಆಶ್ಚರ್ಯದ ಮಾತೆಂದರೆ ಆ ಯುವತಿಯರೇ ಇವರನ್ನು ಮೋಹದ ಬಲೆಗೆ ಎಳೆಯುವದು. ಅದನ್ನು ಬಿಡಿಸಿಕೊಳ್ಳುವದು ಮಾತ್ರ ತಮ್ಮಿಂದ ಸಾಧ್ಯವಾಗುವದಿಲ್ಲ. ಇದು ತಮ್ಮಲ್ಲಿಯ ದೊಡ್ಡ ದೋಷ ಎಂದು ಬರೆದಿದ್ದಾರೆ. ಆದರೆ ಆ ದೋಷವೂ ಅರವಿಂದರದಲ್ಲವೆಂದೇ ನನ್ನ ಅಭಿಪ್ರಾಯ. ಆ ದೋಷ ನನ್ನ ಪ್ರಾರಬ್ಧದ್ದು. ಅರವಿಂದರನ್ನು ಸುಂದರನನ್ನಾಗಿ ಮಾಡಿದ ನಿಸರ್ಗದ್ದು! ಚಂದ್ರಪ್ರಭೆಯಂಥ ಯುವತಿಯರ ವಯಸ್ಸಿನದು, ಆಧುನಿಕ ಲಗ್ನಗಳ ಸಮಸ್ಯೆಯದು, ಸಂತತಿ ನಿಯಮನದಂಥ ಶಾಸ್ತ್ರದ್ದು !

ನಿನ್ನಿನ ದಿವಸವೆಲ್ಲ ಅರವಿಂದರು ನನಗೆ ಮರೆಯಾಗಿಯೇ ಇದ್ದರು. ನನ್ನ ಮನಸ್ಸಿನಲ್ಲಿ ನಡೆದ ತಾಕಲಾಟಗಳ ತ್ರಾಸಿನಿಂದ ನಾನೂ ಅವರ ಗೊಡವೆಗೆ ಹೋಗಿರಲಿಲ್ಲ. ಸುಮ್ಮನೆ ದಿನವೆಲ್ಲ ಕಣ್ಣು ಮುಚ್ಚಿ ಮನಸ್ಸಿನ ಬಾಗಿಲ ತೆಗೆದು ನೋಡುತ್ತ ಮಲಗಿಕೊಂಡಿದ್ದೆ. “ ತಮ್ಮ ಪ್ರಕೃತಿ ಚನ್ನಾಗಿಲ್ಲ ಸಂಜೆ ಊಟವನ್ನು ಮಾಡುವದಿಲ್ಲ ” ಎಂದು ಅಡಿಗೆಯವನಿಗೆ ಹೇಳಿ ಆಚೆ ಕೋಣೆಯಲ್ಲಿ ಮಲಗಿದ್ದರು. ಯಾವ ವಿಷಯವೂ ಗೊತ್ತಿದ್ದೂ ಇಲ್ಲದಂತೆ ಸ್ವಲ್ಪ ಹೊತ್ತು ಮನೆಯಲ್ಲಿ ತಿರುಗಾಡಿದೆ. ಆ ಮೇಲೆ ಡಾಯರಿ ಓದದೇ ಇದ್ದವರಂತೆಯೇ ನಟಿಸಿದೆ. ನಾನೇನೆನ್ನಬಹುದೋ ನನ್ನ ಮನಸ್ಸು ಎಷ್ಟು ನೊಂದಿರಬಹುದೋ ಎಂಬ ಚಿಂತೆಯೇ ಅವರು ಊಟಮಾಡದೆ ಮಲಗಿದ ಕಾರಣ ಎಂಬದು ನನಗೆ ಚನ್ನಾಗಿ ಗೊತ್ತಿತ್ತು. ನಾನೇ ಹೋಗಿ ಅವರಿಗೆ ಒಂದು ಗ್ಲಾಸ ಬಿಸಿ ಹಾಲು ಕುಡಿಯಲು ಆಗ್ರಹಮಾಡಿ ಸ್ವಲ್ಪ ಹಣ್ಣು ತಿನ್ನಿಸಿ ಮಂದಸ್ಮಿತ ಬೀರಿದರೆ ಅವರ ಎಲ್ಲ ಮನಸ್ತಾಪವೂ ಮಾಯವಾಗುವದು ಎಂಬದೂ ಗೊತ್ತಿತ್ತು. ಮುಂಜಾನೆಯಿಂದಲೂ ವಿಚಾರ ಮಾಡಿ ಮಾಡಿ ನನ್ನ ಮನಸ್ಸು ಒಂದು ಸ್ಥಿತಿಗೆ ಬಂದಿತ್ತು. ಎಂಥ ಸದ್ಗುಣಿ ಮನುಷ್ಯನಿದ್ದರೂ ಅವನಲ್ಲಿ ಏನಾದರೂ ದೋಷ ಇದ್ದೇ ಇರುವದು. ವಜ್ರದಲ್ಲಿ ಸಹ ವಿಷದ ಗುಣವಿರುವದು. ಅರವಿಂದರು ಈ ನಿಯಮಕ್ಕೆ ಹೊರತಾಗಿಲ್ಲ. ಎಂಬ ವಿಚಾರದೊಂದಿಗೆ ಅರವಿಂದರನ್ನು ಎಬ್ಬಿಸಲು ಹೋದೆ. ನಿದ್ರೆ ಹತ್ತಿದವರಂತೆ ಮಲಗಿದ್ದರೂ ಹತ್ತಿಲ್ಲವೆಂಬುದು ಅವರ ಮೋರೆಯ ಮೇಲೆ ಸ್ಪಷ್ಟವಾಗಿ ಕಾಣಿಸುತ್ತಿತ್ತು. ಸಾವಕಾಶವಾಗಿ ಮಂಚದ ಅಂಚಿನಮೇಲೆ ಕುಳಿತು ಅವರ ಮೈಮೇಲಿನಿಂದ ಆಚೆಗೆ ಕೈಯಿಟ್ಟು ಜ್ವರಬಂದಿದೆಯೆ ? ಎಂದೆ. ಬಂದಿಲ್ಲವೆಂದು ಖಾತ್ರಿ ಇದ್ದರೂ ‘ ಇಲ್ಲ ’ ಎಂದು ನನ್ನ ಮೋರೆಯನ್ನೇ ನಿರಿಕ್ಷಿಸಿದರು. “ ಸ್ವಲ್ಪ ಬಿಸಿ ಹಾಲಾದರೂ ಕುಡಿಯಿರಲ್ಲ ” ಎನ್ನುತ್ತ ಅವರ ಅಸ್ತವ್ಯಸ್ತವಾದ ಜೈತಲನ್ನು ಬೆರಳಿನಿಂದ ನಯವಾಗಿ ಸರಿಪಡಿಸಿದೆ. “ ಆಶಾ ನೀನು ನಿಜವಾಗಿಯೂ

ಕ್ಷವಮಾದೇವಿ " ಎಂದರು. ಧ್ವನಿ ಗಂಭೀರವಾಗಿತ್ತು. " ನಿಮ್ಮ ಡಾಯರಿಯನ್ನು ನನಗೆ ತೋರಿಸದೇ ಇದ್ದರೇನೆ ಚನ್ನಾಗಿರುತ್ತಿತ್ತಲ್ಲ " ಎಂದು ತುಂಟನಗೆ ನಕ್ಕೆ. " ಹಾಗಿದ್ದರೆ ನನ್ನ ಹೃದಯ ಒಳಗೊಳಗೇ ಕೊರೆಯುತ್ತಿತ್ತು. ನನ್ನ ದೋಷಗಳು ನಿನಗೆ ತಿಳಿಯಲೇಬೇಕು ಆಶಾ " ಎಂದರು. ' ದೋಷ ' ಎಂದು ಗೊತ್ತಿದ್ದರೂ ಸುಧಾರಿಸುವದು ಶಕ್ಯವಿಲ್ಲವೆ ? " ಎಂದೆ. ಗಂಭೀರತೆಯಿಂದ " ಇದೆ ಆದರೆ ನೀನು ಅದಕ್ಕೆ ನೇಳಿ ಕೊಡಬೇಕು. " ಎಂದು ನನ್ನ ಕೈಯನ್ನು ತಮ್ಮ ಕೈಯಲ್ಲಿ ತೆಗೆದು ಕೊಂಡರು. ' ಇದೆ ' ಎಂಬ ಎರಡಕ್ಷರಗಳಲ್ಲಿಯೇ ಭವಿಷತ್ ಜೀವನದಲ್ಲಿ ಸುಖದ ಆಶೆಯ ಕಿರಣವನ್ನು ಕಂಡೆ.

## ಕಾಯದೆ-ಕಾನೂನು

**ಪ್ರಶ್ನೆ:—** ನನ್ನ ಲಗ್ನವು ೧೫ ವರ್ಷದ ಕೆಳಗೆ ಹಿಂದೂ ವೈದಿಕ ಪದ್ಧತಿಯಿಂದ ಆಗಿರುತ್ತದೆ. ಈ ೭-೮ ವರ್ಷಗಳಲ್ಲಿ ನನ್ನ ಹೆಂಡತಿಯು ನನ್ನ ಕಡೆ ಇರಲಿಕ್ಕೆ ಒಮ್ಮೆ ಬಂದಿದ್ದಳು. ಇಂತಹಪರಿಸ್ಥಿಯಲ್ಲಿ ನನಗೆ ಬಿಡುಗಡೆ ಸಿಗಬಹುದೆ ?

**ಉತ್ತರ:—** ಕಾಯಿದೆಯಿಂದ ಗಂಡಹೆಂಡರು ಒಬ್ಬರಿಗೊಬ್ಬರು ಬಿಟು ನಾಲ್ಕು ವರ್ಷಗಳಾಗಿವೆಯೆಂದು ಸಿದ್ಧವಾದಲ್ಲಿ ಮುಂಬಯಿ ಪ್ರಾಂತದಲ್ಲಿ ಬಿಡುಗಡೆ ಸಿಕ್ಕುವುದು. ಆದರೆ ನೀವು ಹೆಂಡತಿಯನ್ನು ಕರೆತರಲು ಪ್ರಯತ್ನಮಾಡುವಿರೆಂದು ಮತ್ತು ನಿಮ್ಮ ಹೆಂಡತಿಯು ಬರಲು ನಕಾರಿಸಿದಳೆಂದು ಅದರಂತೆ ಹೆಂಡತಿಯು ಗಂಡನ ಜೊತೆಯಲ್ಲಿ ಇರಲಿಕ್ಕೆ ಒಪ್ಪಿದಾಗ್ಗೆ ಗಂಡನು ಒಪ್ಪಿಲ್ಲವೆಂದು ಕೋರ್ಟಿನ ಮುಂದೆ ಸಿದ್ಧಮಾಡಿದಲ್ಲಿ ಪರಸ್ಪರರಿಗೆ ಕೋರ್ಟಿನಿಂದ ಬಿಡುಗಡೆ ಸಿಗಬಹುದು.

ಗಂಡಸರಿಗಿಂತ ಹೆಣ್ಣುಮಕ್ಕಳಿಗೆ ಸಿದ್ಧಮಾಡಿ ತೋರಿಸುವುದುಬಿಗಿಹೋಗುವುದು. ಯಾಕೆಂದರೆ ಹೆಣ್ಣುಮಕ್ಕಳಿಗೆ ಕಾಯಿದೆಯ ಜ್ಞಾನವಾಗಲಿ, ಸಾಮಾನ್ಯ ಶಿಕ್ಷಣವಾಗಲಿ ಸಾಕಷ್ಟು ಇಲ್ಲದರಲಾಭ ಗಂಡಸರು ತೆಗೆದುಕೊಳ್ಳುತ್ತಾರೆ ಮತ್ತು ಬರೆಹ ಮೂಲಕ ಪುರಾವೆಗಳು ಸಿಗದಂತೆಪ್ರಾರಂಭದಿಂದಲೇ ಎಚ್ಚರಿಕೆತೆಗೆದುಕೊಳ್ಳುತ್ತಾರೆ.

## ಸಾದರ ಸ್ವೀಕಾರ

೧. **ಬಡವರಹೆಣ್ಣು:—** ಸಂಗ್ರಾಮ ಸಾಹಿತ್ಯಸದನದ ಮೊದಲನೇ ಅಸ್ತ್ರ. (ಕಥಾಸಂಕಲನ) ಬೆಲೆ ಎಂಟಾಣೆ.ಲೇ.ಹ ರಾ. ಕಿದಿಯೂರು. ಪುಟ ೫೯

೨. **ದೇವತಾತ್ಮ:—** ಲೇ. ಶ್ರೀ. ಮಹಾದೇವಿಯಮ್ಮ ದೊಡ್ಮನೆ. ಸಾ ದಾ ಪ್ರತಿ ೧ ರೂ. ಪುಟ ೯೬ (ಯಾತ್ರೆಯ ಚಿತ್ರ) ಮಿಂಚಿನ ಬಳ್ಳಿ ಧಾರವಾಡ ದಿಂದ ಪ್ರಕಾಶಿತ.

೩. **ಜನತಾ ಆರೋಗ್ಯ:** ಕನ್ನಡ ಮಾಸಪತ್ರಿಕೆ. ಸಂಪಾದಕರು ಧೀರೇಂದ ಕುಲಕರ್ಣಿ. ಬಿ. ಎ (ಆನರ್ಸ್) ಸಂಪುಟ ೧, ಸಂಚಿಕೆ ೨. ವಾರ್ಷಿಕ ಚಂದಾ ೬ ರೂ. ಜನತಾ ಆರೊಗ್ಯಧಾಮ. ಸಾಂಗಲಿಯಿಂದ ಪ್ರಕಾಶಿತ.



## — ದೇವತಾತ್ಮಾ —

ಲೇಖಕಿ:— **ದೊಡ್ಮನೆ ಮಹಾದೇವಿಯಮ್ಮ. ಪುಟ ೯೬, ೧ ರೂ.**
**ಮಿಂಚಿನ ಬಳ್ಳಿಯಿಂದ ಪ್ರಕಾಶಿತ.**

ಹೊತ್ತಿಗೆಗಳನ್ನು ಓದಿ ಪಡೆದ ಅನುಭವ ಮಹಾದೇವಿಯಮ್ಮನದಲ್ಲ; ಭಾವನೆಯ ಮಿಡಿತದಿಂದ ಹೃದಯದ ಆಳದಿಂದ, ಚೇತನಗೊಂಡ ಅವಳ ಅಂತಃಶಕ್ತಿ ಅನೇಕ ವಿಧವಾಗಿ ರಾಷ್ಟ್ರಕ್ಕೆ ಸೇವೆಯನ್ನು ಸಲ್ಲಿಸಿತು. ೧೭ ನೆಯ ಶತಮಾನದಲ್ಲಿ ಸಂಚಿಯ ಹೊನ್ನಮ್ಮನ ಶಕ್ತಿಯನ್ನು ಕುರಿತು ನಾವು ಕೇಳುವ ಮಾತು ಇಂದ ಮತ್ತೆ ನಮ್ಮ ಕಣ್ಣೆದುರು ನಿಂತಿದೆ.

ಮಹಾದೇವಿಯಮ್ಮನ ಸಂಸಾರ ಸಂಕುಚಿತವಾಗಿರಲಿಲ್ಲ. ವಿಶ್ವವೇ ಅವಳ ಸಂಸಾರ; ಅನಾಥ ಬಾಲಬಾಲಕಿಯರೇ ಅವಳ ಮಕ್ಕಳು. ೧೯೩೦ ರ ಅಸಹಕಾರ ಚಳವಳಿ ಅವಳ ಶಕ್ತಿಯನ್ನು ಪರೀಕ್ಷಿಸಿತು. ಮಹಾದೇವಿಯಮ್ಮ ಉತ್ತೀರ್ಣಳಾದಳು!

ಪ್ರಸ್ತುತ ರಚನೆಯಲ್ಲಿ ನಾವು ಕಾಣುವದು ಅವಳ ವಿದ್ವತ್ತೆಯನ್ನಲ್ಲ, ರಾಜಕೀಯದೊಡನಿದ್ದ ಅವಳ ಸಂಬಂಧ ಸೇವಾಭಾವಗಳನ್ನೂ ಅಲ್ಲ; ಇದೊಂದು, ಮಹಾದೇವಿಯಮ್ಮನ ಲೇಖನಿಯಿಂದ ಹೊರಹೊರಟ, ನಿಸರ್ಗಸೌಂದರ್ಯ ಒಬ್ಬುಳಿಗೂಡಿದಂತಿದ್ದ, ಹಿಮಾಲಯದ ವರ್ಣನೆ. ಆದರೂ ಕುಸುಮ ವನದಲ್ಲಿರಳಿದರೇನು, ಅದರ ಸುವಾಸನೆ ಹರಡದಿದ್ದೀತೇ? ಇಲ್ಲಿಯೂ ಸುಸಂಸ್ಕೃತ ಜೀವನದ ಮಿಡಿತವನ್ನು ನಾವು ಹೆಜ್ಜೆ ಹೆಜ್ಜೆಗೂ ಕಾಣುತ್ತೇವೆ. " ನಮ್ಮ ಯಾತ್ರೆ ಆತ್ಮದ ಯಾತ್ರೆಯಲ್ಲದ್ದರಿಂದ ನಮ್ಮ ವ್ಯವಹಾರಗಳೆಲ್ಲ ಯಾಂತ್ರಿಕವಾಗಿರುವವು. " ಎಂಬ ಒಂದೇ ಉದಾಹರಣೆ ಇದಕ್ಕೆ ಸಾಕು. ಚೆಲುವೇ ದೇವರು, ಒಲವೇ ಪೂಜೆ, ಚೆಲುವಿನ ಸಾಗರ ಮೂರ್ತಿಮಂತವಾದುದೇ ಹಿಮಾಲಯ, ದೇವತಾತ್ಮಾ !



# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ
ಕನ್ನಡ ಮಾಸಪತ್ರಿಕೆ.

ಸಂಪುಟ ೧ } ಎಪ್ರಿಲ್ ೧೯೫೩ ಚೈತ್ರ { ಸಂಚಿಕೆ ೧೧

## ಸಂಪಾದಕೀಯ

### ಆಂಧ್ರ ಪ್ರಾಂತ ರಚನೆ

ಮಹಾಪ್ರಧಾನರಾದ ಪಂಡಿತ ನೆಹರೂವರು ಪಾರ್ಲಿಮೆಂಟನಲ್ಲಿ ಆಂಧ್ರ ಪ್ರಾಂತವು ಇದೇ ಅಕ್ಟೋಬರ ೧ರಿಂದ ಕಾರ್ಯಕಾರಿಯಾಗುವುದಾಗಿ ಸಾರಿದರು. ಈ ಪ್ರಾಂತದ ರಾಜಧಾನಿಯು ಆಂಧ್ರದಲ್ಲಿಯೇ ಇರಬೇಕೆಂದು ಕೂಡ ಸ್ಪಷ್ಟಪಡಿಸಿದರು. ಆದರೆ ಕೆಲವೊಂದು ಸಮಯ ಕೆಲವು ಮುಖ್ಯ ಕಚೇರಿಗಳು ಮದ್ರಾಸಿನಲ್ಲಿಯೇ ಇರುವದಕ್ಕೆ ತಕ್ಕ ಅನುಕೂಲತೆಯನ್ನು ಮಾಡಿಕೊಡುವದಾಗಿಯೂ ಹೇಳಿದರು. ಆಂಧ್ರರಿಗೂ ಹಾಗೂ ಮಹಾಪ್ರಧಾನರಿಗೆ ಅಭಿನಂದನೆ.

### ಆಂಧ್ರ ಕರ್ನಾಟಕ ಸಮಸ್ಯೆ

ಆಂಧ್ರಪ್ರಾಂತವಾಗುವದಕ್ಕೆ ನಮಗೂ ತುಂಬಾ ಸಂತೋಷವೇ. ಆದರೆ ಬಳ್ಳಾರೀ ಜಿಲ್ಹೆಯ ೧೧ ತಾಲೂಕುಗಳಲ್ಲಿ ಆರು ಕನ್ನಡ ತಾಲೂಕುಗಳು ಮೈಸೂರಿನಲ್ಲಿ ಸೇರಿಸಲ್ಪಟ್ಟವೆ. ಸರಿ. ಆದರೆ ಉಳಿದ ೩ ತಾಲೂಕುಗಳಾದ ಆದವಾನಿ, ಆಲೂರು, ರಾಯದುರ್ಗ ಇವು ತೆಲಗು ತಾಲೂಕುಗಳೆಂದು ಶರಾ ಹೊಡೆದು ಅವು

ಗಳನ್ನು ಆಂಧ್ರದಲ್ಲಿ ಸೇರಿಸಿದ್ದು ಗಡಿಬಿಡಿಯ ಕೆಲಸವಾಗಿದೆ. ಇಲ್ಲಿ ಆಂಧ್ರರ ಛಾಯೆ ಇರಬಹುದು. ಆದರೆ ನಾಡು, ನುಡಿ ಇವು ಮಾತ್ರ ಕನ್ನಡಿಗರವು. ನಮ್ಮ ಕನ್ನಡಿಗರ ಆಲಸ್ಯತನದಿಂದ ಇಂಥ ಹಾನಿಯನ್ನು ಹೊಂದುವದರಲ್ಲಿ ಬಂದರೆ ಅನ್ಯಾಯ! ಬಳ್ಳಾರೀ ತಾಲೂಕು ತ್ರಿಶಂಕು! ವಿಚಾರವು ಸರಿಯಾಗಿ ನಡೆಯಲಿ! ಗಡಿನಿರ್ಣಯ ಪ್ರಶ್ನದ ಕಾಲಕ್ಕಾದರೂ ಈ ಮಾತುಗಳು ಹೊರಡುವವೋ? ಕನ್ನಡಿಗರು ಮಲಗದಿರಲಿ.

## ಮಧ್ಯಮ ವರ್ಗವು ಸುಸ್ಥಿತಿಯಲ್ಲಿದೆಯೇ?

ಹೋದವಾರದಲ್ಲಿ ಮುಂಬಯಿ ರಾಜ್ಯದ ಮುಖ್ಯ ಮಂತ್ರಿಗಳು ಬುಲಸಾರದ ಒಂದು ಸಭೆಯಲ್ಲಿ ಆಡಿದ ಕೆಲವು ಮಾತುಗಳು ತೀರ ವಿಚಿತ್ರವಾಗಿವೆ. ದೇಶದಲ್ಲಿ ಬಡತನವು ಹಿಂಗುತ್ತಿದೆ. ಮಧ್ಯಮ ವರ್ಗದ ಸ್ಥಿತಿಯು ಸುಧಾರಿಸಿ ಸುಖಿಯಾಗುತ್ತಿದೆ ಎಂದವರ ಅಭಿಪ್ರಾಯ. ಉಗೆಬಂಡಿ ಬಸ್ಸುಗಳು ಮೊದಲಾದ ಪ್ರವಾಸ ಮಾರ್ಗಗಳಲ್ಲಿ ಜನರು ಕಿಕ್ಕಿರಿದು ತುಂಬುತ್ತಾರೆ. ನಾಟಕ ಸಿನೇಮಾ ಮೊದಲಾದ ಮನರಂಜನೆಗೆ ಬರುವ ಜನರ ಸಂಖ್ಯೆಯು ಹೆಚ್ಚಿದೆ ಎಂಬ ಆಧಾರಗಳನ್ನು ಈ ಮಾತಿಗೆ ಸಾಕ್ಷಿಯಾಗಿ ಉದಹರಿಸಿರುವರು. ಮಧ್ಯಮ ವರ್ಗವೆಂದರೆ ಯಾರು? ಎಂಬದನ್ನು ಮಾತ್ರ ಅವರು ಸ್ಪಷ್ಟಪಡಿಸಿಲ್ಲ. ಉಗೆಬಂಡಿ, ಬಸ್ಸುಗಳಲ್ಲಿ ಹಾಗೂ ಸಿನೇಮಾ ನಾಟಕ ಗೃಹಗಳಲ್ಲಿ ಯಾವ ವರ್ಗವು ಹೆಚ್ಚಾಗಿ ಸೇರಿರುತ್ತದೆಂಬದು ನಮ್ಮ ಮುಖ್ಯ ಮಂತ್ರಿಗಳಿಗೆ ಸರಿಯಾಗಿ ಗೊತ್ತಿದ್ದಂತೆ ತೋರುವದಿಲ್ಲ. ಮನೆಗಳಲ್ಲಿ ಯಾವತ್ತರೂ ಶ್ರಮಮಾಡುವ ಶ್ರಮಜೀವಿಗಳು ಮಧ್ಯಮ ವರ್ಗದವರನ್ನು ಹಿಂದೆ ಹಾಕಿದ್ದಾರೆ. ಇವರು, ಯೋಗ್ಯವಾದ ಉಂಬಳಿಯು ದೊರೆತು, ತಮ್ಮ ಆಹಾರ ಉಡಿಗೆತೊಡಿಗೆಗಳನ್ನು ಪೂರೈಸಿಕೊಂಡು, ಹಣವನ್ನು ಉಳಿತಾಯ ಮಾಡುತ್ತಾರೆ. ಅದನ್ನೇ ಮೇಲ್ಕಾಣಿಸಿದ ಮನರಂಜನೆಗಳಲ್ಲಿ ಉಪಯೋಗಿಸುತ್ತಾರೆ. ಆದರೆ ಮಧ್ಯಮ ವರ್ಗದವರು ಮನೆಯ ಅಂದಾಜ ಪತ್ರಿಕೆಯನ್ನು ಹ್ಯಾಗೋ ಮಾಡಿಕೊಂಡು ಮಕ್ಕಳ ಆರೈಕೆ, ಶಿಕ್ಷಣ ಮುಂತಾದ ಅವಶ್ಯಕ ಭಾಗಗಳಲ್ಲಿ ಕತ್ತರಿಯನ್ನು ಹಾಕಹತ್ತಿದ್ದಾರೆಂಬದನ್ನು ಮುಖ್ಯ ಮಂತ್ರಿಗಳು ಆಲೋಚಿಸಲಿ! ಸಮಾಜದ ಬೆನ್ನೆಲವು, ತಲೆ ಆದ ಈ ವರ್ಗವು ಅಧೋಗತಿಯನ್ನು ಹೊಂದುತ್ತಲಿದೆ!

## ಪಂಚವಾರ್ಷಿಕ ಯೋಜನೆ

ಪಂಚವಾರ್ಷಿಕ ಯೋಜನೆಯು ನಮ್ಮ ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಯನ್ನು ವಿಕಾಸಗೊಳಿಸಿಕೊಳ್ಳುವದಕ್ಕಾಗಿ ಕಲ್ಪಿಸಿದ ಒಂದು ಮಹತ್ವದ ಯೋಜನೆ. ಈ ಯೋಜನೆಗೆ ಬೇಕಾಗುವ ಸಾಧನ ಸಲಕರಣೆಗಳು, ಜನರ ಮನ ಮುಟ್ಟಿ ದುಡಿತ, ತಾಂತ್ರಿಕ ಕೌಶಲ್ಯ ಹಾಗೂ ಬಂಡವಲು ಇವು ಮೂರಾಗಿವೆ ಯೆಂದೆನ್ನಬಹುದು. ಸಾಧನ ಸಂಪತ್ತಿಯು ಬೆಳೆಯಬೇಕು. ಇದಕ್ಕೆ ಸ್ತ್ರೀಪುರು

ಷರು ಮುಂದೆಬಂದು ಮನಃಪೂರ್ವಕವಾಗಿ ದುಡಿದು ಯೋಜನೆಯನ್ನು ಕಾರ್ಯ ರೂಪದಲ್ಲಿ ತರಬೇಕು. ಮಹಾ ಪ್ರಧಾನರ ಕಳಕಳಿಯ ಕೂಗಿಗೆ ನಾವೆಲ್ಲರೂ ಓಗೊಟ್ಟು ಕಾರ್ಯರಂಗಕ್ಕಿಳಿಯಬೇಕು. ಸಮಾಜ ರಚನೆ, ಶಿಕ್ಷಣ, ಯಾಂತ್ರಿಕ ಸೌಲಭ್ಯ, ಒಕ್ಕಲುತನ ಮುಂತಾದ ಎಲ್ಲವುಗಳಲ್ಲಿ ಪ್ರಗತಿಯನ್ನು ಪಡೆದು ಜಗತ್ತಿನಲ್ಲಿ ನಾವು ಬಾಳಬೇಕಾಗಿದೆ. ನಮ್ಮ ಅಕ್ಕತಂಗಿಯರೂ ವಿಚಾರ ಮಾಡಲಿ.

ಈ ಯೋಜನೆಯ ಮೂಲೋದ್ದೇಶ, ಇಂಗ್ಲಂಡ, ಅಮೇರಿಕಾ, ರಶಿಯಾ ಮುಂತಾದ ದೇಶದವರಂತೆ ಶೀಘ್ರದಲ್ಲೇ ಹೆಚ್ಚಿನಮಟ್ಟಕ್ಕೆ ಏರಬೇಕೆಂಬುದು. ಈ ಆಶೆಯಿಂದಲೇ ಈಗಿನ ಕೆಲಸಗಳನ್ನು ಸಾಗಿಸುತ್ತಿದ್ದಾರೆ. ಆದರೆ ಶಾಂತ, ಸಮಾಧಾನ, ಒಕ್ಕಟ್ಟು ಇವು ಇಲ್ಲದೆ ಯಾವ ಕೆಲಸವೂ ಸಾಗಲಾರದು. ಕಾರಣ ಶಾಂತಿ ಪಡೆಯಬೇಕಾದುದು ಮೊದಲನೆಯ ಕೆಲಸ. ದೃಢ ನಿಶ್ಚಯ ಮಾಡಿದರೆ (ನಮ್ಮ ಹುತಾತ್ಮರಾದ ಮಹಾತ್ಮಾ ಗಾಂಧಿಜೀಯವರು ಹೇಳಿದಂತೆ) ಎಲ್ಲಾ ಕಾರ್ಯವನ್ನು ಸುಸೂತ್ರವಾಗಿ ಸಾಧಿಸಲಾಗುವುದು. ಮತ್ತು ಈಗ ನರಳುತ್ತಿರುವ ಬಡಬಗ್ಗರನ್ನು ಬದುಕಿಸುವ ಮಾರ್ಗವು ಸಿಗುತ್ತದೆ. ಇಂತಹ ಯೋಜನೆ ಮಾಡಲಿ.

ಇದಕ್ಕೆ ಶಿಕ್ಷಣವೇ ಮುಖ್ಯವಾಗಿಬೇಕು. ಶಿಕ್ಷಣದಿಂದ ಮನುಷ್ಯನಿಗೆ ಶಾಂತಿ ಸಮಾಧಾನ ಸಿಗುತ್ತದೆ. ಪೂರ್ವಜರು ಇದೇ ರೀತಿಮಾಡಿದ್ದರು. ಇದರಿಂದ ಬೇಕಾದಂಥ ಕಷ್ಟಬಂದರೂ ಎದುರಿಸುವ ಶಕ್ತಿ ಬರುತ್ತದೆ.

## ಕರ್ನಾಟಕದಲ್ಲಿಯ ಬರಗಾಲ

ನಮ್ಮ ಕರ್ನಾಟಕದ ಹಳ್ಳಿಗಳಲ್ಲಿ ತಾಂಡವವಾಡುತ್ತಿರುವ ಬರಗಾಲವನ್ನು ನೆನಿಸಿದರೆ ಮನಸ್ಸು ಉದ್ವಿಗ್ನಗೊಳ್ಳುವದು. (ಇದೇರೀತಿ ಬೇರೆ ಪ್ರಾಂತಗಳಲ್ಲಿ ಕೂಡ ಇದೆ.) ಕಾರಣ ಮುಂಬಯಿ ರಾಜ್ಯ ರಕ್ಷರಿಗೆ ಹಾಗೂ ಅವರ ಅಧಿಕಾರಿಗಳಿಗೆ,ಯಾರೂ ಆಹಾರವಿಲ್ಲದೆ ಇರುವಂತೆ, ಸಾಯದಂತೆ, ಆತ್ಮಹತ್ಯೆ ಮಾಡಿಕೊಳ್ಳದಂತೆ ಸಾಮೂಹಿಕವಾಗಿ ಆಹಾರ ಬಟ್ಟೆಗಳನ್ನು ಒದಗಿಸಿ ಕೆಲಸವನ್ನು ಮಾಡಿಸಿಕೊಳ್ಳಬೇಕು. ಬಡವ, ಶ್ರೀಮಂತ,ಜಾತಿ–ಪಂಥಗಳನ್ನು ಲಕ್ಷ್ಯದಲ್ಲಿ ತರದೇ ಹಾಗೂ ಸಾಮೂಹಿಕ ಪದ್ಧತಿಯನ್ನು ಅಗತ್ಯವಾಗಿ ಅನುಸರಿಸುವ ಪರಿಪಾಠವನ್ನು ಹಾಕಬೇಕೆಂದು ಸೂಚಿಸದಿರಲಾರೆವು. ಎಲ್ಲಿಯ ವರೆಗೆ ಹಾದಿ ನೋಡುವದು ?

* * * *

## ನಮ್ಮ ಮಾತು

ಮದ್ರಾಸದ ಡೈರೆಕ್ಟರ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಶನ್ ಅವರು 'ವಿರಮಾತೆ' ಪತ್ರಿಕೆಯನ್ನು, ಸೆಕಂಡರಿ ಸ್ಕೂಲುಗಳಲ್ಲಿ ಉಪಯೋಗಿಸಲು ಮಂಜೂರಾದ ಪತ್ರಿಕೆಗಳ ಯಾದಿಯಲ್ಲಿ, ಸಮಾವೇಶಗೊಳಿಸಿದೆಯೆಂದು ತಮ್ಮ 32/N. 53 ದಿನಾಂಕ ೫–೩–೧೯೫೩ನೆಯದರ ಮೂಲಕ ತಿಳಿಸಿದ್ದಾರೆ.

ಮತ್ತು

ನಮ್ಮ ಪುಣೆಯ ಡೈರೆಕ್ಟರ ಆಫ್ ಎಜ್ಯುಕೇಶನ್ ಅವರು ಸಾಲೆಗಳಲ್ಲಿ ಪತ್ರಿಕೆಯನ್ನು ಉಪಯೋಗಿಸುವದಕ್ಕೆ ವಿಶಿಷ್ಟ ಮಂಜೂರಿಯ ಅವಶ್ಯಕತೆಯಿಲ್ಲ ವೆಂದೂ ನೀವು ನಿಮ್ಮ ಪತ್ರಿಕೆಯನ್ನು ಕೊಂಡುಕೊಳ್ಳಲು ಶಾಲೆ ಕಾಲೇಜಗಳ ಮುಖ್ಯಾಧಿಕಾರಿಗಳಿಗೆ ಬಿನ್ನವಿಸಿಕೊಳ್ಳಬಹುದೆಂದೂ ತಿಳಿಸಿದ್ದಾರೆ. ಈ ಅಧಿ ಕಾರಿಗಳಿಗೆ ವೀರಮಾತೆಯು ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತಿದೆ.

## — ವಿ ನಂ ತಿ —

ಇದು ಈ ವರ್ಷದ ಹನ್ನೊಂದನೆಯ ಸಂಚಿಕೆ. ಗ್ರಾಹಕರು ತಾವು ಸಲ್ಲಿಸ ಬೇಕಾದ ಚಂದಾ ಹಣವನ್ನು ಕಳುಹಿಸಿಕೊಟ್ಟು ಉಪಕಾರಮಾಡಬೇಕು. ವ್ಹಿ. ಪಿ. ಕಳುಹಿಸಿದರೆ ಸ್ವೀಕರಿಸಬೇಕು.

ಧಾರವಾಡ ಹುಬ್ಬಳ್ಳಿಗಳ ಗ್ರಾಹಕರು ವೀರಮಾತೆಯ ಕಚೇರಿಗೆ ತಾವು ಕೊಡಬೇಕಾದ ಚಂದಾ ಹಣವನ್ನು ಮುಟ್ಟಿಸಿದರೆ ಉಪಕಾರವಾಗುವದು. ಅವರಿಗೆ ವ್ಹಿ. ಪಿ. ಕಳುಹಿಸುವದು ಯೋಗ್ಯವೆನಿಸುವದಿಲ್ಲ.



# ಒಂದು ನೆನಪು !

ಲೇ:— ಶ್ರೀ. ಸಮತಿಬಾಯಿ ಕೊಪ್ಪೀಕರ, ಧಾರವಾಡ.



'ಗಂಗೀ, ಏ ಗಂಗೀ'

ಧ್ವನಿ ಲಕ್ಷ್ಮಿಯದಾಗಿತ್ತು; ನೆರಳುತ್ತಿದ್ದಳು !

ನಮ್ಮ ಮನೆಯ ಪಕ್ಕದಲ್ಲಿ ಈಗಾರು ತಿಂಗಳಿಂದ, ಉತ್ತರದಿಂದ ಗುಳೇ ಬಂದ ಹತ್ತಾರು ಲಂಬಾಣಿ ಕುಟುಂಬಗಳು ವಾಸವಾಗಿದ್ದವು. ಅನಿವಾರ್ಯ ಕಾರಣಕ್ಕಾಗಿಯಾದರೂ ತೀರ ಕಡಿಮೆ ಹಣದಲ್ಲಿ ಜೀವನ ಸಾಗಿಸುವ ಅವರನ್ನು ಕಾಣಲು ನನಗೆ ಕುತೂಹಲ. ಬೆಳಗಿನಿಂದ ಸಂಜೆಯ ವರೆಗೆ ಅವರ ಜೀವನವನ್ನು ನಿರೀಕ್ಷಿಸುತ್ತಿದ್ದೆ. ಆ ಲಂಬಾಣಿ ಸ್ತ್ರೀಯರು ನಮ್ಮ ಮನೆಗೆ ನಿತ್ಯ ನೀರಿಗೆ ಬರು ತ್ತಿದ್ದುದರಿಂದ ಅವರೆಲ್ಲರ ಪರಿಚಯ ನನಗೆ ಸುಮಾರಾಗಿ ಆಗಿತ್ತು. ಯಾರ ಜೀವನದಲ್ಲಾದರೇನು ! ಎಡರುಗಳು ಬಂದೇ ಬರುತ್ತವೆ. ಆದರೆ ಅಚ್ಚರಿಯ ಮಾತು ! ನಮಗೆ ಎಡರುಗಳಾಗಿ ಕಂಡುಬರುವಂಥವು ಆ ಲಂಬಾಣಿ ಸ್ತ್ರೀಯರಿಗೆ ಕಂಡುಬರುವದಿಲ್ಲವಲ್ಲಃ ಎಂದು !

ಲಕ್ಷ್ಮೀ ಆಗ ಪೂರ್ಣ ಗರ್ಭಿಣಿ; ಪ್ರಸವವೇದನೆ ಪ್ರಾರಂಭವಾಗಿತ್ತು. ಆಚೇ ಗುಡಿಸಲಿನ ಮುದುಕಿಯನ್ನು ಕರೆತರಲು ಗಂಗೆಯನ್ನು ಕಳಿಸಿದ್ದಳು. ಆ ನೋವನ್ನು ತಾಳಲಾರದೆ, ಗಂಗೆಯು ಬಂದಳೇನೋ ಎಂದು, ಮತ್ತೆ ಮತ್ತೆ ಕೂಗುತ್ತಿದ್ದಳು. ಗಂಗೆಯ ಹಿಂದಿನಿಂದ ಅವಸರದಿಂದ ಸಾಗಿದ್ದ ಲಂಬಾಣಿ ಮುದುಕಿಯನ್ನು ನಾನೂ ಸಾಧಿಸಿ ಕೇಳಿದೆ, “ ಮುದುಕಮ್ಮಾ, ಏಕೆ ಅವಸರ ?”

“ ಲಕ್ಷ್ಮೀಗೆ ಪ್ರಸವವೇದನೆಯಂತೆ !.... ಸಮಯವಿದ್ದರೆ ನೀವೂ ಒಂದು ಸಲ ಬನ್ನಿ ಅಮ್ಮಾ” ಮುದುಕಿ ಹೊರಹೊರಟಳು. ನಾನೂ ಅವಳ ಹಿಂದೆಯೇ ಸಾಗಿದೆ. ಗುಡಿಸಲಿಗೆ ಬಂದು ಇಣಿಕಿ ಹಾಕುವಷ್ಟರಲ್ಲಿ ಮಗುವಿನ ಅಳುವಿನ ಧ್ವನಿ ಕೇಳಿಸಿತು. ಮುದುಕಿ ಒಳಗೆ ಹೋದಳು, ನಾನು ಹೊರಗೇ ನಿಂತಿದ್ದೆ. ವೇದನೆಯಲ್ಲಿದ್ದರೂ ನಾನು ಬಂದುದನ್ನು ತಿಳಿದು ಲಕ್ಷ್ಮೀ, ‘ ಒಳಗೆ ಬನ್ನಿ ಅಮ್ಮಾ,’ ಎಂದು ಕರೆದಳು. ಅವಳ ಸೌಜನ್ಯಕ್ಕೆ ನಾನು ನಿಜವಾಗಿಯೂ ಬೆರಗಾದೆ ! ಹುಟ್ಟಿದ್ದು ಗಂಡು ಮಗು, ಚೆನ್ನಾಗಿತ್ತು. ಹಾಗೇ ಐದು ನಿಮಿಷ ನೋಡುತ್ತ ನಿಂತಿರುವಷ್ಟರಲ್ಲಿ ಮತ್ತೂ ಒಂದು ಮಗು ಭೂಮಿಗಿಳಿಯಿತು. ಲಕ್ಷ್ಮೀಯ ಕಡೆಗಣ್ಣಿನಿಂದ ಕಣ್ಣೀರು ಇಳಿಯುತ್ತಿತ್ತು. ನೋಡಿ ಅಮ್ಮಾ, ಮಕ್ಕಳಿಲ್ಲವೆಂದು ಒರಲುವವರಿಗೆ ಮಕ್ಕಳಿಲ್ಲ, ನಮಗೆ ನೋಡಿ, ’ ಎಂದು ಕನಿಕರದಿಂದ ನುಡಿದಳು. “ ಆಗಲಿ ಬಿಡು ಸಂತಾನ ಸಂಪತ್ತು ! ಮಕ್ಕಳು ಸಲಕ್ಷಣವಾಗಿದ್ದಾರೆ,” ನಾನೂ ಹೇಳಿದೆ.

“ ಹೌದು ತಾಯಿ, ಈಗಿನ ನಾಲ್ಕು ಮಕ್ಕಳ ಹೊಟ್ಟೆಗೆ ಕೂಳು ಹಾಕುವದರಲ್ಲಿಯೇ ನನ್ನ ಪ್ರಾಣ ಹೋಗುತ್ತೆ. ಇನ್ನು ಈ ಮಕ್ಕಳ ಗತಿಯೇನು ? “

“ ನೀನು ಯೋಚಿಸಬೇಡ ಲಕ್ಷ್ಮಿ, ಸ್ನಾನ ಮಾಡು. ನಿನ್ನ ಮಕ್ಕಳು ದೊಡ್ಡವರಾಗುವ ವ್ಯವಸ್ಥೆಯನ್ನೆಲ್ಲ ನಾನು ಮಾಡುತ್ತೇನೆ ಇಷ್ಟೊಂದು ಜನ ಬಾಲಕರು ಅನಾಥಾಶ್ರಮದಲ್ಲಿ ಬೆಳೆಯುತ್ತಿರುವಾಗ ಅದಕ್ಕೇಕೆ ಚಿಂತೆ ? ” ನಾನು ಸಮಾಧಾನ ಹೇಳಿದೆ.

ಲಕ್ಷ್ಮಿ ಸುಮ್ಮನಾದಳು ! ಮುದುಕಿ ಅವಳಿಗೆ ಸ್ನಾನ ಮಾಡಿಸಿ ಹರಕು ಬಟ್ಟೆ ಹೊದಿಸಿದಳು. ಈ ಸ್ನಾನಕ್ಕೆ ಬೇಕಾಗುವ ನೀರನ್ನು ಈಗೊಂದು ತಾಸಿನ ಹಿಂದೆ ಲಕ್ಷ್ಮಿಯೇ ತಂದು ಕಾಸಿಟ್ಟಿದ್ದಳಂತೆ ! ಈ ಸ್ನಾನ ಬಿಟ್ಟರೆ ಇನ್ನೆಷ್ಟು ದಿನಗಳಿಗೆ ಸ್ನಾನವೋ ಅವಳಿಗೆ ! ಅವಳ ಗಂಡ, ಅವಳ ಬಳಿ ಹಣವಿದ್ದಾಗಷ್ಟೇ ಮನೆಗೆ ಬರುವವನು ! ಕೊಡದಿದ್ದರೆ ರಂಪ ಮಾಡುವನು, ಹೊಡೆಯುವನು, ಬಡಿಯುವನು ! ಈಗೇನು ?

ನಮ್ಮ ಮಾವ ರೇಂಜರರಾಗಿದ್ದಾಗಿನ ಮಾತು ! ಅವರೊಂದು ಸಲ ಗಾಡಿಯಲ್ಲಿ ಕುಳಿತು ಘಟ್ಟದ ಮೇಲೆ ಹೋಗುವಾಗ, ತುಂಬು ಗರ್ಭಿಣಿಯಾದ ಲಂಬಾಣಿ ಸ್ತ್ರೀಯೊಬ್ಬಳು ತಲೆಯಮೇಲೆ ಕಟ್ಟಿಗೆಯ ಹೊರೆಯೊಂದನ್ನು ಹೊತ್ತು ಪೇಟೆಗೆ

ಸಾಗಿದ್ದಳು. ಮೂವ ಹೊಟಲಿನಲ್ಲಿಳಿದು ವಿಶ್ರಾಂತಿ ಪಡೆದು ಮುಂದೆ ಸಾಗುವಷ್ಟರಲ್ಲಿ, ಅನಳೇ ! ತಲೆಯ ಮೇಲೆ ಕಟ್ಟಿಗೆಯ ಹೊರೆಯಿದೆ ಉಡಿಯಲ್ಲಿ ಮಗುವಿದೆ, ಹೊರಟಿದ್ದಾಳೆ ಸಹಜವಾಗಿ ! ಅವಳ ಸಹನಶೀಲತೆಯನ್ನು ಕಂಡು ಆಶ್ಚರ್ಯವಾಯಿತಂತೆ ! ಕೈಸಾಗದವರೆಂದು ನಮ್ಮನ್ನು ಮೂದಲಿಸಿ, ಪದೇ ಪದೇ ಅವಳ ಉದಾಹರಣೆಯನ್ನು ಹೇಳುತ್ತಿದ್ದರು. ಆ ನೆನಪಾಯಿತೀಗ !

ಲಕ್ಷ್ಮಿಗೆ ನಮ್ಮ ಮನೆಯಲ್ಲಿದ್ದ ಹರಕಲು ಬಟ್ಟೆಯನ್ನೆಲ್ಲ ಕೊಟ್ಟು ಬಿಟ್ಟೆ; ಆಗಾಗ ತಿಂಡಿಯನ್ನೂ ಕೊಡುತ್ತಿದ್ದೆ. ಅವಳ ಗಂಡ ಮಾತ್ರ ಹತ್ತು ದಿನಗಳಾದರೂ ಮನೆಯ ಕಡೆಗೆ ಹಾಯ್ದಿರಲೇ ಇಲ್ಲ. ಲಕ್ಷ್ಮೀ ತನ್ನ ಕೈಯಲ್ಲಿಯ ಬೆಳ್ಳಿಯ ಕಡಗಗಳನ್ನು ಅಡವಿಟ್ಟು ಇಪ್ಪತ್ತು ರೂಪಾಯಿ ತರಿಸಿದಳು. ಹತ್ತು ದಿನಗಳನ್ನು ಹೇಗೋ ನೂಕಿದಳು. ಹನ್ನೊಂದನೆಯ ದಿನದಿಂದಲೇ ಅವಳ ಗಿರಣಿಯ ಕೆಲಸಕ್ಕೆ ಪ್ರಾರಂಭವಾಯಿತು ! ಮಕ್ಕಳನ್ನು ನೋಡುವವಳು ಗಂಗೆಯೇ ! ಮೂರು ಗಂಟೆಗೊಮ್ಮೆ ಲಕ್ಷ್ಮಿ ಬಂದು ಹಾಲೆರೆದು ಹೋಗುತ್ತಿದ್ದಳು. ಅವಳು ಕೆಲಸಕ್ಕೆ ಸೇರಿ ಒಂದು ವಾರದ ನಂತರ ಅವಳ ಗಂಡ ಮತ್ತೆ ಆ ಗುಡಿಸಿಲಿನಲ್ಲಿ ಕಾಣಿಸಿಕೊಂಡ ! ಲಕ್ಷ್ಮಿ ಆದರೂ ಅವನನ್ನು ಎಂದೂ ತಿರಸ್ಕರಿಸಿಲ್ಲ. ಬೇಡಿದುದನ್ನು ಕೊಟ್ಟು, ಸಮಾಧಾನ ಮಾಡಿ ಕಳಿಸುತ್ತಿದ್ದಳು. ಅವನೂ ಕಾಡಿ ಬೇಡುವ ಒಂದು ಮಗುವಿನಂತೆ ! ಆದರೆ ಲಕ್ಷ್ಮಿಯ ಕೈ ಮತ್ತೆ ಬರಿದು ! ಅವಳ ಗೋಳಾಟವನ್ನು ನೋಡಲಾರದೆ ನಾನೇ ಒಂದು ದಿನ ನೆನಪು ತೆಗೆದು, “ಲಕ್ಷ್ಮೀ, ಈ ಮಕ್ಕಳನ್ನು ಅನಾಥಾಲಯಕ್ಕೆ ಸೇರಿಸೋಣವೇ ? ಅಲ್ಲಿ ಅವರಿಗೆ ಯಾವುದೂ ಕೊರತೆಯಾಗದು.”

“ಬೇಡಮ್ಮಾ, ನನ್ನ ರಾಮ ಲಕ್ಷ್ಮಣರನ್ನು ನಾನೆಲ್ಲಿಯೂ ಕಳಿಸುವದಿಲ್ಲ. ಇದ್ದ ಒಂದು ರೊಟ್ಟಿಯಲ್ಲಿ ನಾವೇ ಹಂಚಿಕೊಂಡು ತಿನ್ನುತ್ತೇವೆ ! ಮಕ್ಕಳನ್ನು ಕೊಟ್ಟ ದೇವರಿಗೆ ನನ್ನ ಯೋಚನೆಯಿಲ್ಲವೇ ?”

ಲಕ್ಷ್ಮಿಯ ಮಾತೃಹೃದಯ-ಅವಳು ಬಡವಳಾಗಿದ್ದರೂ-ನನ್ನನ್ನು ಚುಚ್ಚಿತು. ಅಂದಿನಿಂದ ಹಾಗೆಂದು ನಾನು ಅವಳನ್ನು ಎಂದೂ ಕೇಳಿಲ್ಲ !

† ✤ † ✤ † ✤

# ಮುಂಬಯಿಯಲ್ಲಿಯ ಗೃಹಿಣಿಯರ ಪರಿಷತ್ತು

ಜಾಗೃತ ಮಧ್ಯಮವರ್ಗದ ಮಹಿಳೆಯರು ಮಾಡಿದ ವಿಧಾಯಕ ಕಾರ್ಯಕ್ರಮದ ಸಂರಕ್ಷಣೆಯ ಒಂದು ಹೊಸ ಉಪಕ್ರಮ.

ಈ ಪರಿಷತ್ತಿನ ವೈಶಿಷ್ಟ್ಯವೆಂದರೆ ಇದರಲ್ಲಿ ಪ್ರತಿನಿಧಿಗಳ ಫೀ ಇರಲಿಲ್ಲ ಮತ್ತು ಯಾವ ಠರಾವುಗಳೂ ಇರಲಿಲ್ಲ. ಮುಂಬಯಿ ಮಧ್ಯವರ್ತಿಸಮಿತಿಯ ಅಧ್ಯಕ್ಷರಾದ ಸೌಭಾಗ್ಯವತಿ ಇಂದುಮತಿ ಜೋಶಿಯವರು ಗೃಹಿಣಿಪರಿಷತ್ತಿನ ಉದ್ದೇಶವನ್ನು ವಿಸ್ತಾರವಾಗಿ ಹೇಳಿ, ಅಂದದ್ದೇನೆಂದರೆ, ಸದ್ಯದ ಈ ಜೀವನ ಕಲಹದಲ್ಲಿ ಇರುವಿಕೆಯ ಮಟ್ಟ ಅತಿಶಯ ಬೆಳೆದದ್ದರಿಂದ ಮಧ್ಯಮವರ್ಗದೊಳಗಿನ ಗೃಹಿಣಿಯರಿಗೆ ತಮ್ಮ ಬಡ ಕುಟುಂಬದ ವೆಚ್ಚ ಬಾಯಿಗೂಡಿಸುವುದು ಅವಶ್ಯವಾಗಿದೆ. ಅನ್ನ, ವಸ್ತ್ರ, ನೀರು, ಮನೆ, ಮುಂತಾದ ತೊಂದರೆಗಳ ನಿಮಿತ್ತ ಮಧ್ಯಮವರ್ಗದ ಗೃಹಿಣಿಯರ ಪರಿಸ್ಥಿತಿಯು ಬಿರುಗಾಳಿಯಲ್ಲಿ ಸಿಗಿಬಿದ್ದ ಅಸಹಾಯ ಪಕ್ಷಿಯಂತೆ ಆಗಿದೆ. ನಿಜವಾಗಿ ನೋಡಿದರೆ ಮಧ್ಯಮವರ್ಗವಿದು ಯಾವುದೇ ಸಮಾಜದ ಬೆನ್ನಲುಬಿನಂತಿದೆ. ಕೂಲಿಕಾರರ ವರ್ಗದಂತೆ ಈ ವರ್ಗಕ್ಕೆ, ಸಂಘಟನೆಗಳಿಲ್ಲ, ಒಕ್ಕಟ್ಟು ಮತ್ತು ಸಹಕಾರದ ಅಭಾವ ಪರಂಪರೆಗೆ ಅಂಟಿಕೊಂಡಿರುವ ಪ್ರವೃತ್ತಿ ಇವುಗಳ ಮೂಲಕ ಈ ವರ್ಗಕ್ಕೆ ತಮ್ಮ ತೊಂದರೆ ತೊಡಕುಗಳನ್ನು ನಿವಾರಿಸಿಕೊಳ್ಳುವುದು ಶಕ್ಯವಾಗುವುದಿಲ್ಲ. ತಮ್ಮ ಕಾಲುಮೇಲೆ ತಾವೇ ನಿಲ್ಲಬೇಕು ಎಂಬುದನ್ನು ಅರಿತು ವಿಚಾರವಂತ ಭಗಿನಿಯರು ತಮ್ಮ ತಮ್ಮೊಳಗೆ ಚರ್ಚೆಮಾಡಿ ಯಾವುದಾದರೊಂದು ದಾರಿಕಂಡುಹಿಡಿಯುವ ಉದ್ದೇಶದಿಂದ, ಈ ಪರಿಷತ್ತಿನವರ ಪ್ರಯತ್ನವು ಮೂರು ತೆರನಾಗಿರುತ್ತದೆ.

(೧) ಮಧ್ಯಮ ವರ್ಗದ ಇರುವಿಕೆಯ ಮಟ್ಟವನ್ನು ತಿಳಿದುಕೊಳ್ಳಲು ಪ್ರಶ್ನೆಪತ್ರಿಕೆಗಳನ್ನು ಛಾಪಿಸಿಕೊಂಡು ಮಾಸಿಕವೇತನ ೫೦ ರಿಂದ ೫೦೦ ರವರೆಗೆ ಇದ್ದ ಕುಟುಂಬದವರಿಂದ ಈ ಪ್ರಶ್ನೆಪತ್ರಿಕೆಗಳನ್ನು ತುಂಬಿಕೊಳ್ಳುವ ಕೆಲಸ ನಡೆದಿದೆ.

(೨) ಆ ಪ್ರಶ್ನೆಪತ್ರಿಕೆಗಳಮೇಲಿಂದ ಒಂದು ಮೆಮೋರ್‍ಯಾಂಡಂ ಸಿದ್ಧಗೊಳಿಸಿ ಸರ್ಕಾರಕ್ಕೆ ಸಹಕಾರಗೊಳಿಸುವುದು.

(೩) ತಮ್ಮ ಜೀವಿತದ ಜೀವಾಳವಾದಂತಹ ಮತ್ತು ಬಿಗಿಯಾದಂತಹ ಪ್ರಶ್ನೆಗಳ ವಿಚಾರ ಮತ್ತ ಚರ್ಚೆಮಾಡಿ ಮನೆಯಲ್ಲಿಯೇ ಕೂತು ದ್ರವ್ಯಗಳಿಸಿ ಕುಟುಂಬಕ್ಕೆ ಹೇಗೆ ನೆರವಾಗಲು ಬಂದೀತೊ ಮತ್ತು ಕೌಟುಂಬಿಕ ಸಾಸ್ಥ್ಯವು ಉಳಿಸಲು ಬಂದೀತೋ ?

೧. ಪ್ರಶ್ನೆ:— ಅಲ್ಲಿ ಚರ್ಚಿಸಲ್ಪಟ್ಟ ಜೀವಾಳದ ಪ್ರಶ್ನೆಗಳು.

(೧) ಈಗಿನ ಬಿಕ್ಕಟ್ಟಿನ ಪರಿಸ್ಥಿಯಲ್ಲಿ ಬಹುತೇಕ ಹೆಣ್ಣುಮಕ್ಕಳಿಗೆ ತಮ್ಮ ಸಂಸಾರಕ್ಕೆ ನೆರವು ಕೊಡಲು ಏನಾದರೂ ದುಡ್ಡುಗಳಿಸಬೇಕೆಂದು ಅನಿಸುತ್ತದೆ.

ಆದ್ದರಿಂದ ಸಾಧಾರಣ ಕಲಿತಂಥಾ ಹೆಣ್ಣುಮಗಳಿಗೆ ಪುರಸತ್ತು ಸಿಕ್ಕಾಗ ಏನುಕೆಲಸ ಮಾಡಲು ಬಂದೀತು ?

ಉತ್ತರ:— ಸ್ಥಳದ ಅವಕಾಶವಿದ್ದಲ್ಲಿ (೧) Paying guest ಇಟ್ಟು ಕೊಳ್ಳುವುದು. (೨) ತಮ್ಮ ನೆರೆಹೊರೆಯವರು ಕೆಲಸಕ್ಕೆ ಹೋಗುವಂತಹವರಿದ್ದರೆ ಅನ್ನದ ಡಬ್ಬಿಗಳಲ್ಲಿ ತುಂಬಿಕೊಡುವುದು. (೩) ಕೆಲಸದಮೇಲೆ ಹೋಗುವಂತಹ ಸ್ತ್ರೀಯರ ಮೂರು ಅಥವಾ ನಾಲ್ಕು ಮಕ್ಕಳನ್ನು ಸಂಭಾಳಿಸಿ ೪೦-೫೦ ರೂ. ಗಳನ್ನು ಸಹಜವಾಗಿ ಗಳಿಸಬಹುದು. (೪) ಮಾತೃಭಾಷೆಯ ವ್ಯತಿರಿಕ್ತ ಮತ್ತ್ಯಾವುದಾದರೂ ಭಾಷೆ ಬರುತ್ತಿದ್ದರೆ ಅದರ ವರ್ಗ ನಡೆಸುವುದು.

(೫) ಆರ್ಡರ್‌ಗಳನ್ನು ತೆಗದುಕೊಂಡು ಬೇಕರಿ ಒಳಗಿನ ಬ್ರೆಡ್ಡಿನಂತೆ ಬಕರಿ, ಚಪ್ಪಾತಿ ಕಾಯಿಪಲ್ಲೆ ಕುಟುಂಬದವರಿಗೆ ಪೂರೈಸುವುದು.

(೬) ಹೊಲಿಗೆ, ಕಸೂತಿ ಮುಂತಾದವುಗಳನ್ನು ಕಲಿಸುವುದು. ಇವೇ ಮೊದಲಾದವುಗಳನ್ನು ದಂದೆಗಳನ್ನು, ತಮಗೆ ಬಾರದೆ ಇದ್ದಲ್ಲಿ ಸಂಘ, ಸಂಸ್ಥೆಗಳಲ್ಲಿ ಹೋಗಿ ಕಲಿತು ಮಾಡಬಹುದು.

ಮನೆ ಬಿಟ್ಟು ಹೊರಬಿದ್ದು ಮಾಡಲಿಕ್ಕೆ ಬರುವಂತಹ ಗಂಡಸರ ಕೆಲಸಗಳನ್ನು ಅವರಿಂದ ಕಸಿದುಕೊಂಡು ಮಾಡುವುದು ಯೋಗ್ಯವಲ್ಲ. ಇದನ್ನು ತಿಳಿದು ಸ್ತ್ರೀ ಸ್ವಭಾವಕ್ಕನುಸರಿಸಿ ಕೆಳಗಿನಂತೆ ಕೆಲಸಗಳನ್ನು ಆರಿಸಬೇಕು.

(೧) ಸಾಮಾನುಗಳನ್ನು ಮಾರಾಟಮಾಡುವುದು.
(೨) ವಿಮಾ ಏಜಂಟ ಮತ್ತು
(೩) ಶುಶ್ರೂಷೆ.

(ಹೆಣ್ಣು ಮಕ್ಕಳ ಅಜ್ಞಾನ ಮತ್ತು ಪರಂಪರಾಗತವಾದ ಮೂಢರೂಢಿ ಕಲ್ಪನೆಗಳ ಮೂಲಕ ಮೇಲೆ ಹೇಳಿದ ಕೆಲಸಗಳಾದರೂ ಶಕ್ಯವಿಲ್ಲ. ಇವುಗಳನ್ನು ಸಾಧಿಸಬೇಕಾದರೂ ಗಂಡಸರಲ್ಲಿ ಬೆರೆತು ಹೋಗುವ ಪ್ರಸಂಗಗಳು ಬರುತ್ತದೆ. ಇದರಿಂದ ಉಂಟಾಗತಕ್ಕ ನೈತಿಕ ಪ್ರಶ್ನೆಗಳನ್ನು ಇದುರಿಸಬೇಕಾದರೆ ಹೆಣ್ಣುಮಕ್ಕಳು ನೈತಿಕ ಸ್ವಾತಂತ್ರ್ಯವನ್ನು ಮೊದಲು ಪಡೆಯಬೇಕಾಗುವುದು)

೨. ಪ್ರಶ್ನೆ:— ಹೆಣ್ಣು ಮಕ್ಕಳ ಸಂಸ್ಥೆಗಳು ಮಧ್ಯಮವರ್ಗದ ಹೆಣ್ಣು ಮಕ್ಕಳ ಕೊರತೆಗಳನ್ನು ಹೋಗಲಾಡಿಸಲು ಬೌದ್ಧಿಕ ಮನರಂಜನದ ವ್ಯತಿರಕ್ತ ಮತ್ತ್ಯಾವ ವಿಧಾಯಕ ಕಾರ್ಯ ಮಾಡಬೇಕು ?

ಉತ್ತರ:— ಉದ್ಯೋಗಮಂದಿರಗಳನ್ನು ಸ್ಥಾಪಿಸಿ ಅಲ್ಲಿ ಖಾದ್ಯ ಪದಾರ್ಥಗಳನ್ನು, ಅವುಗಳಿಗೆ ಬೇಕಾಗುವ ಸಾಮಾನಗಳನ್ನು, ಕೆಲಸಮಾಡುವ ಹೆಣ್ಣುಮಕ್ಕಳಿಂದ ಮಾಡಿಸಿ ಅವುಗಳಲ್ಲಿ ಆಕರ್ಷ ಸ್ವರೂಪಿನಲ್ಲಿ ಪೇಟಿಯಲ್ಲಿ ಇಡಬೇಕು. ಅವಶ್ಯಕ ಇದ್ದವರಿಗೆ ಸಹಾಯಕ ನಿಧಿಯನ್ನು ತೆಗೆದು ಬಡಹುಡುಗರಿಗೆ ಫೀ ಮತ್ತು

[ ಪುಟ ೪೧ ನೋಡಿರಿ. ]

# ಹೊಸ ವರುಷದ ಕಾಣಿಕೆ

**ಲೇ:- ಶ್ರೀಮತಿ ಪ್ರಭಾ ಹುನಗುಂದ ಧಾರವಾಡ.**

---

ಬಂತು ಬಂತು ಹೊಸದಿನಾ
ತಂತು ತಂತು ಹೊಸತನಾ
ನಾಡ ನಾಡ ಜನತೆಯಲ್ಲಿ ಪ್ರೇಮರಸವ ತುಂಬುತ ॥
ನಾಡಿಗೆಲ್ಲ ಬೀಡಿಗೆಲ್ಲ
ಸಂತಸವನೆ ಬೀರುತ
ಊರಿಗೆಲ್ಲ ಕೇರಿಗೆಲ್ಲ ಒಂದೆತನವ ಸಾರುತ ॥ ೧॥

ಎಂಬಂತೆ ಯುಗಾದಿ ಮತ್ತೆ ಬಂದಿದೆ. ಹೊಸ ವರುಷದ ಮುಂದೆ ಬೆಳಕು ಎಲ್ಲೆಡೆಗೂ ಬಿದ್ದಿದೆ! ಎಲ್ಲರೂ ಹೊಸ ವರುಷದ ನವಚೈತನ್ಯವನ್ನು ಪಡೆದು ಹುರುಪಿನಿಂದ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದ್ದಾರೆ. ಎಲ್ಲರೂ ಹಳೆಯ ಅರಿವೆಗಳನ್ನು ಕಳಚಿ ಹೊಸ ಬಟ್ಟೆಬರೆಗಳನ್ನು ಹಾಕಿಕೊಂಡು ಆದರಂತೆ, ಹಳೆಯ ಅರಿವೆಯ ಸಂಗಡವೇ, ತಮ್ಮ ಹಳೆಯ ಅಂದರೆ ಹಿಂದಿನ ಕಷ್ಟ ದುಃಖಗಳನ್ನು ಮರೆತು ಹೊಸ ಹುರುಪಿನಿಂದ ತಮ್ಮ ಮುಂದಿನ ಬಾಳು ಸುಗಮವಾಗಲೆಂದು ದೇವರಲ್ಲಿ ಬೇಡಿಕೊಳ್ಳುತ್ತಿದ್ದಾರೆ. ಇತ್ತ ಬನ್ನಿ, ಒಬ್ಬ ಸಾವುಕಾರರ ಮನೆಯಲ್ಲಿ ನಡೆದ ದೃಶ್ಯ ನೋಡುವಾ.

ಅಗೋ ನೋಡಿ ಸಾಹುಕಾರ ಗೋವಿಂದರಾಯರ ಪತ್ನಿ ರಾಧಾಬಾಯಿ ಮಕ್ಕಳಿಗೆಲ್ಲ ಎಣ್ಣೆ ಹೂಸಿ ಹೊಸ ಬಟ್ಟೆಬರೆಗಳನ್ನೂ ಬಂಗಾರದ ವಸ್ತ ಒಡವೆಗಳನ್ನೂ ತೊಡಿಸಿ ಶೃಂಗರಿಸಿದ್ದಾಳೆ. ಅಡಿಗೆಯವಳು, ಪುರಿ ಬಾಸುಂದಿ, ಕೇಸರೀ ಅನ್ನ, ಚಿತ್ರಾನ್ನ. ಮುಂತಾದ ವೃಷ್ಟಾನ್ನ ಭೋಜನ. "ಏ ಲೀಲಾ ಯಾಕೋ ನಿಮ್ಮ ತಂದಿ ಹೊರಗೆ ಹೋದವರು ಇನ್ನೂ ಬಂದೇ ಇಲ್ಲ, ಸ್ವಲ್ಪ ರಸ್ತೆಯೊಳಗೆ ಮುಂದ ಕತ್ತ ಹೋಗಿ ನೋಡಿಕೊಂಡರೆ ಬರ್ರಿ ಹೋಗ್ರಿ ಶಶಿ, ಕಿಟ್ಟ್ಯಾ." ಶಶಿ ಕಿಟ್ಟ್ಯಾ— "ಇಲ್ಲವ್ವಾ ಅಪ್ಪಾ ಇವತ್ತ ನಮಗ ಒಂದ ಮೊಜಾ ತರತೀನಿ ಅಂತ ಹೇಳ್ಯಾನ ಬಂದ ಘಳಿಗ್ಗೆ ಅದನ್ನ ಇಸಕೊಂಡ ಬಿಡೂಣ, ನಡಿಯೋ ಕಿಟ್ಟ್ಯಾ ನೋಡಕೊಂಡ ಬರೂಣ ಅಪ್ಪನ್ನ."

ಶಶಿ, ಕಿಟ್ಟ್ಯಾ, ಇಬ್ಬರೂ ಬೀದಿಯಲ್ಲಿ ತಂದೆಯ ದಾರಿಕಾಯುತ್ತಿದ್ದಾರೆ. ಅಜೋ ಬಂದೇಬಿಟ್ಟ ಅವರ ತಂದೆ, ಸಾಯಕಲ್ ಮೇಲೆ. ಕೈಯಲ್ಲೇನದು?

ಯಾತರ ಪೆಟ್ಟಿಗೆ? ಒಳ್ಳೇ ಅಂದವಾಗಿ ಅದಕ್ಕೆ ರಿಬ್ಬನ್ ಸುತ್ತಿದ್ದಾರೆ. ಹೌದು ಅದೇ ಮಕ್ಕಳಿಗಾಗಿ ತಂದ ಹೊಸ ವರುಷದ ಕಾಣಿಕೆ. ಶಶಿ ಕಿಟ್ಟ್ಯಾ ತಂದೆಯನ್ನು ನೋಡಿ ಆತುರರಾಗಿ ಓಡಿಬಂದು ಕೈಯಲ್ಲಿಯ ಪೆಟ್ಟಿಗೆಯನ್ನು ಇಸಿದುಕೊಂಡರು. ಆಗ ಅವರಿಗಾದ ಆನಂದವನ್ನು ಬರೆಯಲು ಸಾಧ್ಯವೇ?

ಆ ಪೆಟ್ಟಿಗೆಯನ್ನು ಅಲ್ಲೇ ಬೀದಿಯ ಹತ್ತಿರಿರುವ ಒಂದು ಮನೆಯಲ್ಲಿ ನಿಂತಿದ್ದ ಕಿಟ್ಟ್ಯಾನ ಗೆಳೆಯ ರಾಮು ನೋಡಿದ! ಅದನ್ನು ಕೈಯಲ್ಲಿ ಹಿಡಿದು ನೋಡ ಬೇಕೆಂಬ ಲವಲವಿಕೆಯಿಂದ ರಾಮು ಕಿಟ್ಟ್ಯಾನ ಹತ್ತರ ಓಡಿ ಬರುತ್ತಿದ್ದಾನೆ. ಅಷ್ಟರಲ್ಲಿಯೇ ಕಿಟ್ಟ್ಯಾ ತನಗಾದ ಆನಂದದ ಭರದಲ್ಲಿ ರಾಮೂನ ಕಡೆಗೆ ತಿರುಗಿ ಕೂಡ ನೋಡದೇ ಓಡಿಹೋಗುತ್ತಾನೆ. ರಾಮು ನಿರಾಶನಾಗಿ ಮನೆಗೆ ಬಂದ.

ಕಂದನ ಬಾಡಿದ ಮುಖವನ್ನು ನೋಡಿ ರಾಮೂನ ತಾಯಿ ಅವನನ್ನು ಎದೆಗೆ ಅವಚಿಕೊಂಡು ಬೆನ್ನ ಮೇಲೆ ಕೈಯಾಡಿಸುತ್ತ "ಮಗು ಏನಾಯಿತು" ಎಂದು ಕೇಳಿದಳು. ರಾಮು ನಡೆದ ಸಂಗತಿಯನ್ನು ಬಿಕ್ಕಿ ಬಿಕ್ಕಿ ಅಳುತ್ತ ಹೇಳತೊಡಗಿದ. ಇವನ್ನೆಲ್ಲ ಕೇಳಿದ ತಾಯಿಯು ಮನಕರಗಿ ನುಡಿದಳು "ಮಗು ಏನು ಮಾಡಬೇಕು ನಾವು ಬಡವರು ಹೊಸ ವರುಷಕ್ಕಾಗಿ ಇದ್ದ ಒಬ್ಬ ಮಗನಿಗೂ ಕೂಡ ಕಾಣಿಕೆ ತಂದು ಕೊಡುವಷ್ಟು ನಾವು ಸಮರ್ಥರಿಲ್ಲ. ದೈವಲೀಲೆ" ಅವಳ ಕಣ್ಣಲ್ಲಿ ನೀರು ಧಾರೆಗಟ್ಟಿ ಹೋಗಹತ್ತಿದವು. ಇದನ್ನು ನೋಡಿ ರಾಮು ಮನಸ್ಸಿನಲ್ಲಿ ಒಂದು ದೃಢ ನಿರ್ಧಾರಕ್ಕೆ ಬಂದ "ಅವ್ವಾ ನೀನು ಈ ರೀತಿ ರೋದಿಸುವದನ್ನು ನಾನು ನೋಡಲಾರೆ. ಕಣ್ಣೊರಿಸಿಕೊ. ಇಂದಿನಿಂದ ನಾನು ಹುಡುಗಾಟಿಕೆಯನ್ನು ಬಿಟ್ಟು ಒಂದೇ ಮನಸ್ಸಿನಿಂದ ಓದುಬರೆಹ ಕಲಿತು ಜಾಣನಾಗಿ ಹಣ ಸಂಪಾದಿಸಲು ಶಕ್ತನಾಗಿ ನಿಮ್ಮಿಬ್ಬರ ಕಷ್ಟವನ್ನು ಪರಿಹರಿಸುವೆ. ಆಶೀರ್ವದಿಸು, ತಾಯಿಯ ಪಾದವನ್ನು ಮುಟ್ಟಿ ನಮಸ್ಕರಿಸಿದನು. ತಾಯಿಯು ತಬ್ಬಿ ಆವನಿಗೆ ಶೀರ್ವದಿಸಿದಳು.

# ಸೀತಾ ಜನ್ಮ

## (ಚಿಕ್ಕ ರೂಪಕ)

ಬರೆದವರು:— **ಸೌ. ರಮಾ ಹರಪನಹಳ್ಳಿ.**

(ಲಂಕಾಧಿಪತಿಯಾದ ರಾವಣನು ಬೇಟೆಗೋಸುಗ ಅಲೆದಾಡುತ್ತಿರುವಾಗ ಒಂದು ತಪೋವನಕ್ಕೆ ಬರುತ್ತಿದ್ದಾನೆ.)

**ರಾವಣ:—** ಆಹಾ ! ಏನಿದಾಶ್ಚರ್ಯ ? ಈ ತಪೋಭೂಮಿಗೆ ಬಂದೊಡನೆ ನನ್ನ ಮನಸ್ಸು ವಿಲಕ್ಷಣವಾದ ನೆಮ್ಮದಿಯನ್ನು ಅನುಭವಿಸುತ್ತಿದೆ? ಬೆಳಗಿನಿಂದಲೂ ಬೇಟೆಯಾಡಿ ಕದಡಿದ ನನ್ನ ಮನಸ್ಸುಈ ಸ್ಥಳದಲ್ಲಿ ಅಪೂರ್ವ ಆನಂದವನ್ನು ಅನುಭವಿಸುತ್ತಿದೆ. ಈ ತಪೋಭೂಮಿಯ ಪುಣ್ಯದ ಪ್ರಭಾವದಿಂದಲೆ ನಾನಿಷ್ಟು ಪುಲಕಿತನಾಗಿದ್ದೇನೆ. ಸಂತ್ಸಂಗವು ನಿಜವಾಗಿಯೂ ಸುಖಪ್ರದಾಯಿ. (ಸ್ವಲ್ಪತಡೆದು) ಯಾರೋ ಮಹರ್ಷಿಗಳು ಇಲ್ಲಿ ತಪವನ್ನಾಚರಿಸುತ್ತಿರುವಂತೆ ಕಾಣುತ್ತದೆ. ಏನಿದು, ನಾನು ಕೇಳುತ್ತಿರುವುದು ಸ್ತ್ರೀಕಂಠಧ್ವನಿ ! ಎಲ್ಲಿ ಕುಳಿತಿರಬಹುದು ? ಹಾಂ, ಹೌದು, ಅದೋ, ಅಲ್ಲಿ ಮರದಡಿಯಲ್ಲಿ ಪದ್ಮಾಸನಸ್ಥಳಾಗಿ ತಪವನ್ನಾಚರಿಸುತ್ತಿದ್ದಾಳೆ. (ಸ್ವಲ್ಪ ತಡೆದು) ಆಹಾ, ಏನಿವಳ ರೂಪಲಾವಣ್ಯ ! ಸೌಂದರ್ಯವೆ ಮೂರ್ತಿವೆತ್ತಂತಾಗಿದೆ. ಅಂತಃಪುರದಲ್ಲಿ ನನಗೆ ಅದೆಷ್ಟೋ ರಾಣಿಯರಿರುವರು. ಆದರೆ ಇವಳ ಚಲುವಿಕೆಯ ಎದುರು ಅವರದೇನು ಲಂಕಾಧೀಶನಾದ ರಾವಣನಿಗೆ ಇಂತಹ ರೂಪವತಿ ಸ್ತ್ರೀ ಅವಶ್ಯ ಬೇಕಲ್ಲವೆ ? ಹೇಗಾದರೂ ಮಾಡಿ ಇವಳ ಮನವೊಲಿಸುವೆ. (ಸ್ತ್ರೀಯನ್ನು ಉದ್ದೇಶಿಸಿ) ಎಲೈ ಸೌಂದರ್ಯವಾರಿಧಿಯೆ, ಕಣ್ದೆರೆ, ಮಾತನಾಡು. ಏತಕ್ಕಾಗಿ ಈ ಉಗ್ರ ತಪವನ್ನು ಆಚರಿಸುತ್ತಿವೆ, ಈ ಕೋಮಲಕಾಯವನ್ನು ಏಕೆ ಕುಂದಿಸುತ್ತಿರುವೆ ? ಲಂಕಾಧೀಶನಾದ ಈ ರಾವಣಾಸುರನು ನಿನ್ನ ಅಭೀಷ್ಟವನ್ನು ನೆರವೇರಿಸಲು ನಿಂತಿದ್ದಾನೆ. ಕಣ್ದೆರೆದು ನೋಡು.

**ತಪಸ್ವಿನಿ:—** (ಕೋಪದಿಂದ) ಯಾರದು, ನನ್ನ ತಪಸ್ಸಿಗೆ ವಿಘ್ನತರುತ್ತಿರುವವರು ? ಈ ತಪಸ್ವಿನಿಯಲ್ಲಿ ಪಾಪದೃಷ್ಟಿಯುಳ್ಳವನಾಗಿ ಯಾವ ಘೋರನರಕಕ್ಕೆ ಹೋಗುವಿ ?

**ರಾವಣ:—** (ನಗುತ್ತ) ಶಾಂತಳಾಗು, ವೃಥಾ ಕೋಪವೇಕೆ ? ಅಪ್ರತ್ಯಕ್ಷನಾದ ಆ ದೇವನನ್ನು ಯಾಕೆ ಯಾಚಿಸುವೆ ? ನಿನ್ನ ಎಲ್ಲ ಅಭೀಷ್ಟಗಳನ್ನು ಈಡೇರಿಸಿ, ನಿನ್ನನ್ನು ನನ್ನ ಪಟ್ಟದರಾಣಿಯನ್ನಾಗಿ ಮಾಡಿಕೊಳ್ಳಲು ಸಮರ್ಥನಾದ ಈ ಲಂಕಾಧಿಪತಿಯು ನಿನ್ನೆದುರು ಪ್ರತ್ಯಕ್ಷನಾಗಿ ನಿಂತಿದ್ದಾನೆ. ತಪಸ್ಸು ಬಿಟ್ಟು ನನ್ನೆಡೆಗೆ ಬಾ.

ತಪಸ್ವಿನಿ:— ಛೀ ನೀಚಾ, ಹೆಚ್ಚಿಗೆ ಮಾತನಾಡಬೇಡ. ಬಂದ ಹಾದಿಯಿಂದ ತಿರುಗು. ಇಲ್ಲವಾದರೆ ನೀನು ನಿನ್ನ ಜೀವದಾಸೆಯನ್ನು ಬಿಡಬೇಕಾದೀತು.

ರಾವಣ:— ಒಹೊ, ನನಗೆ ಮರಣದ ಭಯವೆ ಇಲ್ಲ. ನನ್ನಂಥ ಪ್ರತಾಪಶಾಲಿಯಾದ ಅಸುರಾಧಿಪತಿಯನ್ನು ಕೊಲ್ಲುವವರು ಯಾರು ?

ತಪಸ್ವಿನಿ:— ಯಾರೇಕೆ, ನಾನೇ ನಿನ್ನನ್ನು ಕೊಲ್ಲುವೆನು. ನಿನ್ನ ಮಗಳಾಗಿ ಹುಟ್ಟಿ ನಿನ್ನನ್ನು ಸರ್ವನಾಶಮಾಡುವೆ, ನೆನಪಿನಲ್ಲಿಡು.

ರಾವಣ:— (ವಿಕಟವಾಗಿ ನಗುತ್ತ) ಹ ಹ ಹ ಹ ನಿನ್ನಂಥ ಅಬಲೆಯಿಂದ ನನ್ನ ಮರಣವೆ ? ಎಂದಿಗೂ ಶಕ್ಯವಿಲ್ಲ ಹ ಹ ಹ ಹ ಎಂದಿಗೂ ಶಕ್ಯವಿಲ್ಲ.

(ಲಂಕಾ ಪಟ್ಟಣದಲ್ಲಿ ಉತ್ಸಾಹವೆ ಉತ್ಸಾಹ. ರಾವಣನ ಮಡದಿ ಮಂಡೋದರಿಗೆ ಕನ್ಯಾರತ್ನ ಪ್ರಾಪ್ತವಾಗಿ ಇಂದಿಗೆ ೧೨ ದಿನಗಳಾದವು. ಈ ದಿನ ಮಗುವಿನ ನಾಮಕರಣದ ಉತ್ಸವ. ಮಂಗಳವಾದ್ಯಗಳು ಮೊಳಗುತ್ತಿವೆ. ರಾವಣನು ಒಳ್ಳೆ ಹರುಷದಿಂದ ಮಂಡೋದರಿಯ ಅಂತಃಪುರಕ್ಕೆ ಬರುತ್ತಿದ್ದಾನೆ.)

ರಾವಣ:— (ಆಶ್ಚರ್ಯದಿಂದ) ಏನಿದು, ಮಂಡೋದರಿಯ ಅಂತಃಪುರದಲ್ಲಿ ನೀರವತೆ ! ನನ್ನ ಅಖಿಲ ರಾಜ್ಯವೆ ಈ ದಿನ ಸಂತೋಷಸಾಗರದಲ್ಲಿ ಲೋಲಾಡುತ್ತಿರುವಾಗ ಇಲ್ಲಿ ಈ ಶೂನ್ಯತೆ, ಕಾರಣವೇನು ? (ಸ್ವಲ್ಪ ತಡೆದ) ಅಲ್ಲಾ, ಮಗುವು ಒಂದೆ ಸವನೆ ಅಳುತ್ತಿದೆ, ಇಲ್ಲಿ ಯಾರೂ ಇಲ್ಲವೆ ? ಮಂಡೋದರಿ, ಮಂಡೋದರಿ ಎಲ್ಲಿರುವೆ ? ಏನು ನಿನ್ನ ಕಣ್ಣಲ್ಲಿ ನೀರು ! ಕಾರಣವೇನು ? ರಾವಣನ ಮಡದಿಯಾದ ನೀನು ದುಃಖಿಸುವದೆಂದರೇನು ಇದೊ ಈ ಮಗುವನ್ನು ಎತ್ತಿಕೊ. ಶಾಂತಳಾಗು. ನಿನ್ನ ದುಃಖದ ಕಾರಣವನ್ನು ಹೇಳು.

ಮಂಡೋದರಿ:— ನಾಥಾ, ಏನೆಂದು ಹೇಳಲಿ, ಈ ನನ್ನ ಮಗುವೆ ನನ್ನ ದುಃಖದಮೂಲ.

ರಾವಣ:— (ಆಶ್ಚರ್ಯದಿಂದ) ಮಂಡೋದರಿ, ನಿನ್ನ ಮಾತಿನ ಅರ್ಥವೆ ಆಗಲೊಲ್ಲದು.

ಮಂಡೋದರಿ:— ರಾಜಾ, ಹೆಚ್ಚಿಗೇನು ಹೇಳಲಿ, ಮಗುವು ಹುಟ್ಟಿದಂದಿನಿಂದ ಒಂದರಮೇಲೊಂದು ಅಪಶಕುನಗಳು ಆಗುತ್ತಿವೆ. ದಿನಾಲು ಭಯಂಕರವಾದ ದುಃಸ್ವಪ್ನಗಳನ್ನು ಕಾಣುತ್ತಿದ್ದೇನೆ. ಅಬ್ಬಾ ! ನಿನ್ನಿನ ಸ್ವಪ್ನವನ್ನು ನೆನೆದರೆ ನನಗೆ ಈಗಲೂ ಮೈಗೆ ನಡುಕ ಹುಟ್ಟುತ್ತದೆ.

ರಾವಣ:— ಮಂಡೋದರಿ, ಅದೆಂತಹ ಸ್ವಪ್ನ—ನನಗೂ ಹೇಳಬಾರದೆ ?

ಮಂಡೋದರಿ:— ನಾಥಾ ಈ ನನ್ನ ಮಗುವು ತೊಟ್ಟಿಲಲ್ಲಿ ಮಲಗಿಕೊಂಡಿರುವಾಗ ಅದರ ಕಣ್ಣುಗಳೊಳಗಿಂದ ಎರಡು ಜ್ಯೋತಿಗಳು ಹೊರಬಿದ್ದವು. ಮುಂದೆ ಆ ಜ್ಯೋತಿಗಳು ಅಗ್ನಿಜ್ವಾಲೆಯಾಗಿ ನಮ್ಮ ಲಂಕಾಪಟ್ಟಣವನ್ನು ಸುಡಹತ್ತಿದವು. ಆಮೇಲೆ…………

ರಾವಣ:— ಮುಂದೇನು ?

ಮಂಡೋದರಿ:— ಲಂಕಾಪಟ್ಟಣವನ್ನು ಧ್ವಂಸಮಾಡಿದನಂತರ ಆ ಜ್ವಾಲೆಗಳು ನಮ್ಮ ಅರಮನೆಯನ್ನು ಹೊಕ್ಕು ಸಿಂಹಾಸನಸ್ಥರಾದ ನಿಮ್ಮನ್ನು ಮುತ್ತಿ ಪ್ರಖರವಾಗಿ ಧಗಧಗಿಸಹತ್ತಿದವು. ನಾಥಾ, ಆಗಿನ ನಿಮ್ಮ ಆ ಆರ್ತಧ್ವನಿ ಈಗಲೂ ನನ್ನ ಕರುಳನ್ನು ಕೊರೆಯುತ್ತಿದೆ.

ರಾವಣ:— (ನಗುತ್ತ ) ಇಷ್ಟೆ, ಅಲ್ಲವೆ ನಿನ್ನ ಸ್ವಪ್ನದ ಸಮಾಚಾರ, ಇದಕ್ಕೇಕಿಷ್ಟು ಭಯ, ಈ ರಾವಣನ ಕೂದಲೆಳೆಯನ್ನು ಕೂಡ ಸೋಂಕುವ ಧೈರ್ಯ ಯಾರಿಗೂ ಇಲ್ಲ? ಮಂಡೋದರಿ, ಧೈರ್ಯ ತಂದುಕೊ.

ಮಂಡೋದರಿ:— ಆದರೆ, ನೀವು ಅಂದು ನನಗೆ ಹೇಳಿದ ಮಾತು ಈಗಲೂ ಪೀಡಿಸುತ್ತಿದೆ.

ರಾವಣ:— ನಾನು ನಿನಗೆ ಅಂದು ಏನೆಂದು ಹೇಳಿದೆ ?

ಮಂಡೋದರಿ:— ಆ ತಪಸ್ವಿನಿಯು ಮಾತು ಮರೆತು ಬಿಟ್ಟಿರಾ ? ಈ ನಮ್ಮ ಮಗುವು ಆ ತಪಸ್ವಿನಿಯೆ ಆಗಿರಬಹುದೆ ?

ರಾವಣ:—(ನಗುತ್ತ)ಎಂತಹ ಹುಚ್ಚಿ ನೀನು; ಆ ತಪಸ್ವಿನಿ ಎಲ್ಲಿ, ನಾನೆಲ್ಲಿ? ಆ ಅಬಲೆ ಅಂದು ನನ್ನಿಂದ ಪಾರಾಗಲು ಹಾಗೆ ಹೇಳಿದಳು, ಅದನ್ನೆಲ್ಲವನ್ನು ನಿಜವೆಂದು ನಂಬಬೇಕೆ ?

ಮಂಡೋದರಿ:— ಅದೇನೆ ಇರಲಿ, ನನ್ನದೊಂದು ಬಿನ್ನಹವನ್ನು ಮನ್ನಿಸುವಿರಾ ?

ರಾವಣ:— ಮಂಡೋದರಿ, ನಿನ್ನ ಯಾವ ಅಭೀಷ್ಟವನ್ನು ಈಡೇರಿಸಿಲ್ಲ ?

ಮಂಡೋದರಿ:— ಹಾಗಾದರೆ ಈ ಮಗುವು ಈ ಕ್ಷಣ ನನ್ನಿಂದ ದೂರ.... ದೂರ....ದೂರ ಒಯ್ಯಲ್ಪಡಲಿ. (ಸ್ವಲ್ಪತಡೆದು) ಏಕೆ ಸುಮ್ಮನೆ ನಿಂತಿರಿ ?

ರಾವಣ:— (ಖಿನ್ನನಾಗಿ, ನಿಟ್ಟುಸಿರು ಬಿಡುತ್ತಾ) ಆಗಲಿ, ಮಾತೃಹೃದಯವೆ ಮಗುವನ್ನು ತ್ಯಜಿಸಲು ಸಿದ್ಧವಾದ ಪಕ್ಷದಲ್ಲಿ ನನ್ನದೇನು ನಡೆಯುತ್ತದೆ, ಉಪಾಯವಿಲ್ಲ. ನಿನ್ನ ಇಚ್ಛೆಯಂತೆ ಮಾಡುವೆ.

ಮಂಡೋದರಿ:— ರಾಜನೆ, ಯಾವ ಮಗುವಿನಿಂದ ಮಾತೆಯ ಮಾಂಗಲ್ಯವು ಮಾಯವಾಗುವದೊ ಅಂತಹ ಮಗುವಿನಿಂದ ಏನು ಪ್ರಯೋಜನ ? ನನ್ನಂಥ ಪತಿವ್ರತೆಗೆ ಅದನ್ನು ತ್ಯಜಿಸುವದೊಂದೇ ಮಾರ್ಗ.

ರಾವಣ:— ಆಗಲಿ, ಮಗುವನ್ನು ಪೆಟ್ಟಗೆಯಲ್ಲಿರಿಸಿ ದೂತರೊಡನೆ ದೂರ ಪ್ರದೇಶಕ್ಕೆ ಕಳಿಸುವೆ.

* * * * * *

ಮಿಥಿಲಾ ಪಟ್ಟಣ. ಬ್ರಾಹ್ಮಣನೊಬ್ಬನು ತನ್ನ ಹೊಲದಲ್ಲಿ ನೇಗಿಲವನ್ನು ಹೊಡೆಯುತ್ತಿದ್ದಾನೆ.

ಬ್ರಾಹ್ಮಣ:—ಹಲ್ಯಾ, ಬ ಬ ಬ ಹಲ್ಯಾ ಆಹಾ, ಎಂಥ ಫಲವತ್ತಾದ ಭೂಮಿ ಇದು. ಈ ಹೊಲವೆ ನನ್ನ ಜೀವನದ ಆಧಾರ. ಇಂತಹ ಫಲವತ್ತಾದ ಭೂಮಿಯನ್ನು ನಮ್ಮ ಜನಕಮಹಾರಾಜರು ನನಗೆ ದಾನವಾಗಿ ಕೊಟ್ಟರಲ್ಲ. ಅವರ ಪುಣ್ಯವನ್ನು ಆಜನ್ಮ ಮರೆಯಲಾರೆ. ನನ್ನಂತೆ ಎಷ್ಟೋ ಬ್ರಾಹ್ಮಣರಿಗೆ ಭೂಮಿಯನ್ನು ದಾನ ಮಾಡಿ ಮಹಾರಾಜರು ಪುಣ್ಯಕಟ್ಟಿಕೊಂಡಿರುವರು. (ಸ್ವಲ್ಪತಡೆದು) ಆದರೆ ಇಂಥ ದಯಾಮಯ ರಾಜರು ನಿಪುತ್ರಕರಾಗಿರುವರಲ್ಲ, ಎಂತಹ ಅನ್ಯಾಯವಿದು? (ಸ್ವಲ್ಪ ತಡೆದು) ಹಲ್ಯಾ ಹಲ್ಯಾ, ಇದೇನು ಒಮ್ಮಿಂದೊಮ್ಮೆಲೆ ನೇಗಿಲವನ್ನು ಎಳೆಯದೆ ಸುಮ್ಮನೆ ನಿಂತುವಲ್ಲ ಎತ್ತುಗಳು. ಹಲ್ಯಾ, ವಿಶೇಷವೇನಾದರೂ ಇರಬಹುದೆ? ಅರೆರೆರೆ, ಭೂಮಿಯ ಬಿರುಕಿನಲ್ಲಿ ಏನೋ ಹೊಳೆಯುತ್ತಿದೆ. ಮಣ್ಣು ಅಗೆದು ತೆಗೆಯಲಾ? ಆಹಾ ಬಂಗಾರದ ಪೆಟ್ಟಿಗೆ ಇದರಲ್ಲಿ ಏನಿರಬಹುದು? ಇದೇನು ಕೂಸಿನ ಅಳುವ ಧ್ವನಿ! ಆಹಾ! ನಕ್ಷತ್ರದಂತಹ ಕೂಸು ಪೆಟ್ಟಿಗೆಯಲ್ಲಿ ಮಲಗಿದೆಯಲ್ಲ. ಮಹಾರಾಜರು ನನಗೆ ದಾನ ಮಾಡಿದ ಈ ಭೂಮಿಯಲ್ಲಿ ಮಗುವು ಸಿಕ್ಕಿತು. ನಿಪುತ್ರಕರಾದ ನಮ್ಮ ಮಹಾರಾಜರಿಗೆ ಈ ಮಗುವನ್ನು ಅರ್ಪಿಸಿ ಕೃತಾರ್ಥನಾಗುವೆ.

ಜನಕ ಮಹಾರಾಜನ ಅರಮನೆ. ರಾಜನು ಪುತ್ರಕಾಮೇಷ್ಠಿ ಯಜ್ಞವನ್ನು ಮಾಡುತ್ತಿದ್ದಾನೆ. ಮಹರ್ಷಿಗಳೂ, ಪಂಡಿತರೂ, ಕುಲಪುರೋಹಿತರೂ ಮಂತ್ರ ಘೋಷವನ್ನು ಗಂಭೀರವಾಣಿಯಿಂದ ಮಾಡುತ್ತಿದ್ದಾರೆ.

ದೂತ:— ಮಹಾಪ್ರಭು, ಬ್ರಾಹ್ಮಣ ಮಹಾಶಯರೊಬ್ಬರು ತಮ್ಮನ್ನು ಕಾಣಲು ಒಳ್ಳೆ ಉತ್ಕಂಠಿತರಾಗಿರುವರು.

ರಾಜ:— ದೂತ, ಬೇಗನೆ ಅವರನ್ನು ಇಲ್ಲಿಗೆ ಬರಮಾಡು. (ಸ್ವಲ್ಪತಡೆದು) ಏನು ಬ್ರಾಹ್ಮಣರೇ ಏನು ಸಮಾಚಾರ?

ಬ್ರಾಹ್ಮಣ:— ಮಹಾರಾಜರೆ, ನಿಮಗಾಗಿ ಈ ಎಳೆ ಮಗುವನ್ನು, ಈ ಸೌಭಾಗ್ಯಲಕ್ಷ್ಮಿಯನ್ನು ತಂದಿದ್ದೇನೆ, ಸ್ವೀಕರಿಸಬೇಕು.

ರಾಜ:— (ಆಶ್ಚರ್ಯದಿಂದ) ಏನು ಈ ಮಗುವು ನನಗೋಸ್ಕರವೆ? ಈ ಮುದ್ದು ಮಗುವು ಎಲ್ಲಿ ಸಿಕ್ಕಿತು?

ಬ್ರಾಹ್ಮಣ:— ಪ್ರಭು, ಈ ದಿನ ಬೆಳಿಗ್ಗೆ ನೇಗಿಲು ಹೊಡೆಯುತ್ತಿರುವಾಗ್ಗೆ ಭೂಮಿಯ ಬಿರುಕಿನಲ್ಲಿ ಚಿನ್ನದ ಪೆಟ್ಟಿಗೆಯೊಂದು ಹೊಳೆಯುತ್ತಿರುವುದನ್ನು ಕಂಡೆ. ನೋಡಲಾಗಿ ಈ ಮಗುವು ಅದರಲ್ಲಿದ್ದಿತು. ನಿಮ್ಮ ಭೂಮಿಯಲ್ಲಿ ದೊರೆತ ಮಗುವು ನಿಮಗೆ ಸಲ್ಲತಕ್ಕದ್ದಲ್ಲವೆ?

ರಾಜ:— ನಾನು ಸ್ವೀಕರಿಸಬೇಕೆ ಈ ಮಗುವನ್ನು? ಕುಲಪುರೋಹಿತರೆ, ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?

**ಕುಲ. ಪು:—** ಮಹಾಜನೆ, ಸಂಶಯವೇಕೆ? ಈ ಮಗುವು ನಿಜವಾಗಿ ನಿನ್ನ ಪುತ್ರಕಾಮೇಷ್ಠಿಯಜ್ಞದ ಫಲವು. ದೇವರು ಈ ರೀತಿಯಿಂದ ನಿನಗೆ ಮಗುವನ್ನು ದಯಪಾಲಿಸಿದ್ದಾನೆ. ಮಗುವಂತೂ ಸಕಲ ರಾಜಲಕ್ಷಣಗಳಿಂದ ಶೋಭಿಸುತ್ತದೆ. ನೇಗಿಲಿನಿಂದುಂಟಾದ ಭೂಮಿಯ ಸೀಳಿನೊಳಗಿಂದ ಈ ಮಗುವು ದೊರೆತುದರಿಂದ, ಇದಕ್ಕೆ ' ಸೀತೆ ' ಎಂದು ನಾಮಕರಣಮಾಡು. ರಾಜಾ, ಸ್ವೀಕರಿಸು, ಈ ದೇವ ದತ್ತ ಪುತ್ರಿಯನ್ನು.

[ ಅಖಿಲ ಭಾರತ ಆಕಾಶವಾಣಿ, ಧಾರವಾಡದಿಂದ ಪ್ರಸಾದಿತ ]

# ಭಾಗೀರಥಿ

( ಸಮಾಜದ ಮಾತೆ ಶ್ರೀ ಮಾಯಿಯವರನ್ನು ಕಂಡಾಗ )

**ಶ್ರೀಮತಿ ಪಾರ್ವತೀದೇವಿ ಹೆಗಡೆ ಸೊಲ್ಲಾಪುರ.**

ಹೆಣ್ಣುಬಾಳ್ ಕಣ್ಣೀರು ಎಂದು ಹೇಳುವರೆಲ್ಲ
ಆದರೇ ಕಣ್ಣೀರ ನೊರೆಸುವವರಾರಿಲ್ಲ
ಮುಳ್ಳು ಬೇಲಿಯೊಳೆಲ್ಲ ಹೂಮಾಲೆ ಎಳೆದಂತೆ
ಬಾಳ ಸಾಗಿಸುವವರ ಕಂಡರೂ ಏನಂತೆ?
ಮರಕವೊಂದಿನಿತಿಲ್ಲ! ಮಾತು ಗಾಳಿಯಲಾಯ್ತು
ಬಡಹೆಣ್ಣೆ ಈ ಬಯಲು ನೈರಾಶ್ಯಗತಿಯಾಯ್ತು
ಹುಣ್ಣೆಗೆಬರೆಎಳೆದಂತೆ ಅಪಹಾಸ್ಯ ಹಿರಿದಾಯ್ತು
ಪೂಜ್ಯನಾರಿಗೆ ನರಕ ಬಾಳನ್ನು ಕೊಟ್ಟಾಯ್ತು

ಇದಕಂಡು ಕನಿಕರದಿ ಸಗರ ಸಂತತಿಯನ್ನು
ಎತ್ತಬಂದಾ ಧೀರ ಗಂಗೆಯೊಲು ಕನ್ನಡದಿ
ಬಂದ ಭಾಗೀರಥಿಯೆ ಬಾಳಿನಲಿ ಮುನ್ನಡೆದೆ
ತೆಗಳುವವರನು ಕಂಡು ಕುಗ್ಗದೆಯೆ ನಿನ್ನನ್ನು
ಅಪವಾದ ಅಪಮಾನಗಳನೆಲ್ಲಸಹಿಸುತ್ತ
ಗೆಲುಪಿರಲಿ ಶ್ರೀಮಾತೆ ನಿಂತಿಹಳು ಹರಿಸುತ್ತ!

# — ಶರತ್‌ಚಂದ್ರ —

## ವಂಗ ಮಹಾ ಕಾದಂಬರಿಕಾರ

### ( ಪರಿಚಯ )

ಲೇ:— **ಎನ್. ಎಸ್. ಗದಗಕರ** ಬಿ.ಎ. ಧಾರವಾಡ.

ವಂಗ ಕಾವ್ಯ ಪ್ರಪಂಚದಲ್ಲಿ ರವೀಂದ್ರನಾಥ ಠಾಕುರರು ನಾಮಾಂಕಿತ ಕವಿಗಳಾಗಿ ಹೋದಂತೆ, ಕಾದಂಬರಿ ಲೋಕದಲ್ಲಿ ಡಾ. ಶರತ್‌ಚಂದ್ರ ಚಟರ್ಜಿಯುವರನ್ನು ಮೀರಿಸುವವರು ಅತಿ ವಿರಳ. ವಂಗ ಓದುಗರಿಗಂತೂ ಶರತ್‌ಚಂದ್ರರ ಹೆಸರು ತೀರ ಮನೆ ಮಾತಾಗಿದೆ. ಇಂಥ ಒಂದು ಲೇಖನದ ಚಿಕ್ಕ ಗಾತ್ರದಲ್ಲಿ ಅವರ ಪ್ರತಿಭೆಯ ಪರಿಪೂರ್ಣ ಕಲ್ಪನೆ ತಂದುಕೊಡುವದು ಅಸಾಧ್ಯ ಕೋಟಿಯ ಸಂಗತಿ. ಅನೇಕ ವಿದ್ವಾಂಸರು ಅವರ ಘನತೆಯ ಬಗೆಗೆ ವಿವೇಚಿಸಿದ್ದುಂಟು. ಕಲಕತ್ತೆಯ ಡಾ. ಎಸ್. ಸಿ. ಸೇನಗುಪ್ತ ಎಂ. ಎ. ಪಿಎಚ್. ಡಿ. ಇವರು ಶರತ್‌ಚಂದ್ರರ ಕಾದಂಬರಿಗಳನ್ನೆಲ್ಲ ಅವಲೋಕಿಸಿ ಒಂದು ಹೆಬ್ಬೊತ್ತಿಗೆಯನ್ನೇ ಪ್ರಕಟಿಸಿ ಮಹಾ ಕಾದಂಬರಿಕಾರರ ಹೆಸರು ಅಜರಾಮರ ಉಳಿಯುವಂತೆ ಮಾಡಿರುವರು. ವಂಗ ಕಾದಂಬರಿಕಾರರಲ್ಲಿಯೇ ಶರತ್‌ಚಂದ್ರರು ಸುದೈವಿಗಳು, ಯಾಕಂದರೆ ಅವರ ಪುಸ್ತಕಗಳಷ್ಟು ಮತ್ತಾವ ಲೇಖಕರವೂ ಮಾರಾಟವಾಗುವದಿಲ್ಲ. ಈ ಹಣದಿಂದ ಅವರು ಸಿರಿವಂತರೂ ಆದರು.

ಶರತ್‌ಚಂದ್ರರ ಲೋಕಪ್ರಿಯತೆಯ ಗುಟ್ಟೇನು ?— ಎಂಬ ಪ್ರಶ್ನೆ ಸಹಜವಾಗಿ ಯಾರೂ ತಟ್ಟನೆ ಕೇಳಬಹುದಾಗಿದೆ. ಇದಕ್ಕೆ ಮುಖ್ಯ ಕಾರಣವೆಂದರೆ ಇವರು ಹದಿನಾರಾಣೆ ಬಂಗಾಲಿಗಳು. ಅಂತೇ ಬಂಗಾಲಿಗಳ ಸುಖದುಃಖಗಳನ್ನು ಮಾರ್ಮಿಕವಾಗಿ ಚಿತ್ರಿಸಲು ಅನುವಾಯಿತು. ಅವರ ಶೈಲಿ ದೇಶೀಯ, ಸರಳ, ಗಾಂಭೀರ್ಯ ಪೂರ್ಣ, ಮಾರ್ಮಿಕ ಸಮಾಜದ ಮಧ್ಯಮ ವರ್ಗದ ಗಲಿತ ಜನರೇ ಇವರ ಮಮತೆಯ ಪಾತ್ರಗಳು. ವಂಗ ಸಮಾಜದ ಸಂದುಗೊಂದುಗಳೆಲ್ಲ ಇವರಿಗೆ ಅತಿ ಪರಿಚಿತ. ಈ ವರ್ಗಕ್ಕಾಗಿ ಇವರು ತೋರುವ ಸಹಾನುಭೂತಿಗೆ ಸೀಮೆ ಇಲ್ಲ. ಒಳ್ಳೆ ಲೇಖಕನಾದವನೇ ಸಜೀವ ಪಾತ್ರ ನಿರ್ಮಿಸಬಲ್ಲ ಕೌಶಲ ಮೈಗೂಡಿಸಿಕೊಂಡಿರುವನು ಎಂಬ ಉಕ್ತಿಯುಂಟು. ಹಾಗೆ ಶರತ್‌ಚಂದ್ರರ ಸುವರ್ಣ ಲೇಖನಿಯಿಂದ ಹೊರಹೊಮ್ಮಿದ ಪಾತ್ರಗಳು ಪುಸ್ತಕದುದ್ದಕ್ಕೂ ತಮ್ಮ ಹೃದಯವನ್ನೇ ತೆರೆದಿಟ್ಟು ಒಡನುಡಿಯುವವು. ಶ್ರೀಕಾಂತ ಕಾದಂಬರಿ ಓದುವಾಗ ಯಾರ ಮನಃಪಟಲದಿಂದ ಇಂದ್ರನಾಥನ ಪಾತ್ರ ನುಸುಳಿ ಹೋದೀತು ? ಮನೋವಿಶ್ಲೇಷಣೆಯಲ್ಲಂತೂ ಶರತ್‌ಚಂದ್ರರಿಗೆ ಸರಿಕರಿಲ್ಲವೆನ್ನುವದು ಅತಿರಂಜಕತೆಯಲ್ಲ.

ರವೀಂದ್ರನಾಥರಂತೆ ಚಂದ್ರರಿಗೂ ವಿಶ್ವವಿದ್ಯಾಲಯದ ಶಿಕ್ಷಣದಲ್ಲಿ ಅಂತಹ ಯಶ ದೊರೆಯಲಿಲ್ಲ. ಶರತ್‌ಚಂದ್ರರು ಕೇವಲ ಮ್ಯಾಟ್ರಿಕ್ ಆಗಿದ್ದರು, ಅಷ್ಟೆ. ಆದರೂ ಅವರ ಬುದ್ಧಿಮತ್ತೆಗೆ ಹೆಸರಿಡುವಂತಿಲ್ಲ. 'ನಾರಿರ ಮೂಲ್ಯ' ಎಂಬ ಅವರ ಕಲಾಕೃತಿಯನ್ನು ಓದಿದವರಿಗೆ ಅವರ ಪ್ರತಿಭೆಯ ಬಗೆಗೆ ತಿಳಿಹೇಳುವ ಅಗತ್ಯವಿಲ್ಲ. ಹುಗಳಿ ಜಿಲ್ಹೆಯಲ್ಲಿಯ ಬಡ ಕುಟುಂಬ ಇವರದು. ಸಣ್ಣವರಿರುವಾಗ ಬ್ರಹ್ಮದೇಶದ ಸರಕಾರಿ ನೌಕರಿಯಲ್ಲಿದ್ದರು. ಬ್ರಹ್ಮದೇಶದ–ಅವರ ಪ್ರವಾಸದ–ರಂಜಕ ದೃಶ್ಯ ಚಿತ್ರ ಕಾಣಬೇಕಿದ್ದರೆ ಶ್ರೀಕಾಂತ ಕಾದಂಬರಿ ಓದಲು ಮರೆಯಕೂಡದು. ಅಲ್ಲಿಯ ಹವೆ ಒಗ್ಗದ್ದರಿಂದ, ಅನೇಕ ಗೆಳೆಯರ ಮಾತಿನಂತೆ, ಕಲಕತ್ತೆಗೆ ಬಂದು ಶರತ್‌ಚಂದ್ರರು ಕತೆ ಕಾದಂಬರಿಗೆ ಕೈಹಾಕಿ ಪಾಂಗಾಲಿ ಪತ್ರಿಕೆಗಳಿಗೆ ಬರೆಯಹತ್ತಿದರು. ಹಾ ಹಾ ಎನ್ನುವದರಲ್ಲಿ ಜಯಶ್ರೀ ಇವರಿಗೆ ಮಾಲೆ ಹಾಕಿದಳು. ಕಾದಂಬರಿಕಾರರೆಂದು ಕ್ಷಿಪ್ರದಲ್ಲಿಯೇ ಹೆಸರು ಪಡೆದರು. ಬಂಕಿಮಚಂದ್ರರು ತೀರಿಕೊಂಡದ್ದರಿಂದ ತೆರವಾದ ಕಾದಂಬರಿ ಸಿಂಹಾಸನವು ಶರತ್‌ಚಂದ್ರರ ವಶವಾಯಿತೀಗ! ಆದರೂ ಆಗಿನ ನಿಷ್ಠಾವಂತ ಜನರಿಗೆ ಶರತ್‌ಚಂದ್ರರ ಕ್ರಾಂತಿಕಾರಕ ವಿಚಾರಸರಣಿ ಒಪ್ಪಿಗೆ ಎನಿಸದೆ 'ಅನೈತಿಕ' ಎಂಬ ಉಡುಗೊರೆ ಶರತ್‌ಚಂದ್ರರಿಗೆ ಸಿಕ್ಕಿತು. ಇದೆಲ್ಲಕ್ಕೂ ಮೂಲವೆಂದರೆ, ಶರತ್‌ಚಂದ್ರರ ನಿರ್ಭಯವೃತ್ತಿ. ಅವರು ಹಿಂದುಮುಂದು ನೋಡದೆ ನಮ್ಮ ಸಮಾಜದ ಕುಂದುಕೊರತೆಗಳನ್ನು ಬಯಲಿಗೆಳೆಯುತ್ತಿದ್ದರು. ಆಂಗ್ಲ ವ್ಯಂಗ ಲೇಖಕ ಸ್ವಿಫ್ಟನಷ್ಟಾಗಲಿ, ನಗುನಗುತ್ತ ಸಮಾಜವನ್ನು ತಿದ್ದುವ ಆ್ಯಡಿಸನ್ನನಂತಾಗಲಿ ಇವರಲ್ಲ. ಆದರೆ ಶರತ್‌ಚಂದ್ರರು ಸಮಾಜದ ಸಮ್ಯಗ್ ದರ್ಶನಮಾಡಿಕೊಂಡು ಅಲ್ಲಿಯ ಕೀಳು ಪರಂಪರೆ ಅತ್ಯಾಚಾರಗಳನ್ನು ನಿರ್ದಾಕ್ಷಿಣ್ಯವಾಗಿ ಹೀಗಳೆದರು. ಅದೇ ಅವರ ಕಾರ್ಯರಂಗ! ಶರತ್‌ಚಂದ್ರರು ಮುಖ್ಯವಾಗಿ ವಾಸ್ತವವಾದಿಗಳು. ಆಂಗ್ಲ ಕಾದಂಬರಿಕಾರ ಗ್ಯಾಲ್ಸವರ್ದಿಯಂತೆ ಸಮಾಜ ಸುಧಾರಕರೂ ಅಹುದು. ಶರತ್‌ಚಂದ್ರರು ಅಂದು ಕೊಂಡಿರಲಿ ಬಿಡಲಿ, ಬರ್ನಾರ್ಡ ಶಾರಂತೆ ಅದರ ಪ್ರಚಾರಕರೆನ್ನುವಲ್ಲಿ ಸಂದೇಹವಿಲ್ಲ.ಇವರ ಕೃತಿಗಳೆಷ್ಟೋ ನಾಟಕಗಳ ರೂಪತಳೆದು ರಂಗಭೂಮಿಗೆ ಬಂದಿವೆ. ಯಶಸ್ವಿಯಾಗಿವೆ ಕೆಲವು ಕತೆಗಳಂತೂ ಹಿಂದಿ, ಬಂಗಾಲಿಚಿತ್ರಪಟಗಳಿಗೆ ಒಳ್ಳೇ ಆಹಾರ ಒದಗಿಸಿಕೊಟ್ಟವೆ. ಭಿನ್ನ ಭಾಷೆಗಳಲ್ಲಿ ಅನುವಾದವಾದದ್ದಕ್ಕಂತೂ ಲೆಕ್ಕವೇ ಇಲ್ಲ. ಅವರು ಸುಮಾರು ನಾಲ್ವತ್ತು ಕೃತಿಗಳಲ್ಲಿ ಪರಿಣೀತಾ, ಗ್ರಹದಾಹ, ಶೇಷಪ್ರಶ್ನೆ, ಶ್ರೀಕಾಂತ, ಪಳ್ಳಿಸಮಾಜ ದತ್ತ —ಇವುಗಳು ವಿಖ್ಯಾತವಾದುವು.

ಕಲ್ಕತ್ತಾ ವಿಶ್ವವಿದ್ಯಾಲಯದವರು ಶರತ್‌ಚಂದ್ರರ ಪ್ರತಿಭೆಗೆ ಮನಸೋತು 'ಜಗತ್ತಾರಿಣಿ' ಸುವರ್ಣ ಪದಕ ಸಲ್ಲಿಸಿದರು. ಡಾಕ್ಕಾ ವಿಶ್ವವಿದ್ಯಾಲಯವು ಇವರಿಗೆ "ಡಿ. ಲಿಟ್," ಪದವಿ ಕೊಟ್ಟಿತು. ಬಹಿರಂಗ ಮರ್ಯಾದೆ ಎಂತಹದೆ ಇರಲಿ, ಅವರ ಕಲಾಕೃತಿಗಳನ್ನು ಓದುವ ಸೌಕರ್ಯ ಮಾತ್ರ ನಿರಂತರವಾಗಿ ಎಲ್ಲ ನಾಡಿನವರಿಗೂ ಮುಟ್ಟಲಿ!

---

# — ಪುರುಷ —

**ಲೇ:— ಅಂಜಿಕಾತನಯ ದತ್ತ.**



ಪುರುಷನಾಕೃತಿಯಲ್ಲಿ ಪೌರುಷವೆ ಇಲ್ಲವೆನೆ
ವಿಕೃತಿಯಲ್ಲಿ ಪ್ರಕೃತಿ ಇಂಗೆ
ಸುಕೃತಿಯದೊ ತಪಿಸುತಿದೆ ಉತ್ತರೊತ್ತರೆಯಲ್ಲಿ
ಸುಕೃತವನೆ ಪ್ರಕೃತಿ ನುಂಗೆ
ಅಜ್ಞಾತವಾಸವಿದೆ ಆಬೃಹನ್ನಳೆಗೀಗ
ಭೌತವೇ ಮೈವಡೆದಿದೆ
ಭಾರತದ ಪೌರುಷಕೆ ಅರ್ಧಾಂಗವಾಯಿತೆನೆ
ಅರ್ಧಾಂಗಿ ಮನಕದಡಿದೆ ॥ ೧ ॥

( ಹೋದ ಸಂಚಿಕೆಯಲ್ಲಿಯ " ನ್ಯಾರೀ " ಓದಿ )



# — ಬಾರೆ ಬಾ ಮಾಹೇಶ್ವರಿ —



ಬಾರೆ ಬಾ ಮಹೇಶ್ವರೀ
ಬಾ, ಬಾ, ಬಾ, ಬಾ
ಮಹಾಕಾಳಿ ಮಹಾಲಕ್ಷ್ಮಿ
ಬಾ ಮಹಾಸರಸ್ವತೀ
ಇಹುದು ನಿಮಗೆ ಶಾಶ್ವತಿ ॥ ಪಲ್ಲ ॥

(೧)

ಹಗಲು ಇರುಳು ನಿಮ್ಮ ಕೂಟ
ಅರಿವೆ ನಿಮಗೆ ದಿನದ ಊಟ
ಬೆಳಕೊಗೆವುದು ಒಂದು ಆಟ
ಚಿದಾನಂದ ಲಹರಿ ಬಾ
ಸದಾಶಿವನ ಗೌರಿ ಬಾ

ನಿಮ್ಮ ಮಗುವು ಹುಸಿಯ ನಗುವು
ಬಗಿಸಿವಿಗಿಸಿ ಬರುತಿರೇ
ನೀವೆ ಕರೆಯದಿರುತಿರೇ
ಛಂದವೇನು ನೀವೆ ಹೇಳಿ
ಕೂಸು ನಾನು ಹೇಳಿಕೇಳಿ

ನೀವೇ ನನಗಹುದು ಹಸಿಯು
ಬೆಳೆವೀತೇ ಒಣಕೆ ಸಸಿಯು
ನಿಲ್ಲಿರವ್ವಾ ನಿಲ್ಲಿರಿ
ಕೃಪಾದೃಷ್ಟಿ ಚಲ್ಲಿರಿ
ಬಾರೆ ಬಾ ಮಾಹೇಶ್ವರಿ



# ಗ್ರಹಗಳು

## ಮತ್ತು

# ಮನುಷ್ಯನ ಮೇಲೆ ಅವುಗಳ ಪರಿಣಾಮ

ಲೇಖಾಂಕ ೫

**ಲೇ:—ಶ್ರೀ. ಹುಚ್ಚಪ್ಪ.**



**ಮಕರ ರಾಶಿ:—**ಪೃಥ್ವಿತತ್ವದ ಮೂರು ರಾಶಿಗಳಲ್ಲಿ ಇದು ಕಡಿಮೆಯದೆಂದು ತಿಳಿಯುತ್ತಾರೆ. ಇದರ ಅಧಿಕಾರವು ಶರೀರದ ಮೊಳಕಾಲ ಕೆಳಗಿನಭಾಗ ಮತ್ತು ಅದರ ಹಿಂದಿನಭಾಗದ ಮೇಲೆ ಇರುತ್ತದೆ. ಏಕಾಗ್ರತೆ ಮತ್ತು ಅಂತರಜ್ಞಾನ ಇವು ಎರಡಕ್ಕೂ ಇದು ಪೋಷಕವಿರುತ್ತದೆ. ಇದು ಪೃಥ್ವಿತತ್ವದ ಗೂಢರಾಶಿ ಇರುತ್ತದೆ. ಇತಿಹಾಸ, ಏಕಾಂತವಾಸ ಮತ್ತು ಧ್ಯಾನ ಇದರೊಳಗಿನ ಗೌಪ್ಯಗಳ ಸೂಚಕಗಳಾಗಿರುತ್ತದೆ. ಒಳ್ಳೆಯ ಸಾಮರ್ಥ್ಯವುಳ್ಳ ವಿಚಾರಶಕ್ತಿ, ಸ್ವಾಭಾವಿಕ ವಕ್ತೃತ್ವ ಮತ್ತು ಒಳ್ಳೆಯ ಶಿಕ್ಷಕರ ಗುಣಗಳು ಈ ರಾಶಿಯಲ್ಲಿರುತ್ತದೆ. ಅತ್ಯಂತ ಶ್ರಮಪಡುವವರು ಏಕಕಾಲಕ್ಕೆ ಎಷ್ಟೋ ಕೆಲಸಗಳ ಹೊಣೆಯನ್ನು ಹೊತ್ತು ಕೆಲಸ ಮಾಡುವ ಪ್ರವೃತ್ತಿಯುಳ್ಳವರಿರುವುದರಿಂದ ಕೂಡಲೇ ದಣಿದುಹೋಗುವರು. ಏಕಕಾಲಕ್ಕೆ ಒಂದೇ ವಿಷಯಕ್ಕೆ ಅಂಟಿಕೊಂಡು ಕೆಲಸ ಮಾಡುವ ಚಟ ಎಲ್ಲಿಯವರೆಗೆ ಹಚ್ಚಿಕೊಳ್ಳುವುದಿಲ್ಲವೋ, ಅಲ್ಲಿಯವರೆಗೆ ತನ್ನ ಉನ್ನತಿಯನ್ನು ಮಾಡಿಕೊಳ್ಳಲಾರರು.

ಇವರು ಎರಡನೆಯವರ ಕೆಲಸದಲ್ಲಿ ಕೈಹಾಕುವದಿಲ್ಲ ಮತ್ತು ಎರಡನೆಯವರು ಇವರ ಕೆಲಸದಲ್ಲಿ ಕೈಹಾಕಿ ಸಲಹೆಕೊಡಹೋದರೆ ಇವರಿಗೆ ಎಳ್ಳಷ್ಟು ಸರಿಬೀಳುವುದಿಲ್ಲ. ತಮ್ಮಸಲುವಾಗಿ ತಾವೇ ಪ್ರಯತ್ನಪಡುವರು. ಈ ಲೋಕದಲ್ಲಿ ತಮಗಾಗಿ ಸ್ವತಃಕಷ್ಟಪಡಲು ಅವರು ಸಿದ್ಧರಿರುವರು ಎರಡನೆಯವರ ಸಲುವಾಗಿ ಕಷ್ಟಪಡುವದೆಂದರೆ ಇವರಿಗೆ ಬಹಳ ವ್ಯಥೆ ಎನಿಸುವುದು. ಸಿದ್ಧರಿಂದ ಈ ಜನರಿಗೆ ಅವರವರ ಕೆಲಸ ಮಾಡಿಕೊಡುವುದೇ ಉತ್ತಮ. ಎರಡನೆಯವರಲ್ಲಿ ಆನಂದವನ್ನು ಉಂಟುಮಾಡುವ ಕಲೆಯಲ್ಲಿ ಇವರು ಬಹಳ ಕುಶಲರು. ಸುದ್ದಿಗಳನ್ನು ಹೇಳುವುದು ಇವರಿಗೆ ಬಹಳ ಸೇರುವುದು. ಹಾಸ್ಯ ಉತ್ಪನ್ನಮಾಡುವಂತ ನಗೆಯಬುಗ್ಗೆಗಳಲ್ಲಿ ಇವರಿಗೆ ಆನಂದವೆನಿಸುವುದಲ್ಲದೆ ಇವರಲ್ಲಿ ಅದರ ಭಾಂಡಾರವಿರುವುದು. ಆದ್ದರಿಂದ ಇವರ ಸ್ಮರಣಶಕ್ತಿಯು ಬಹಳ ಚೆನ್ನಾಗಿರುತ್ತದೆ. ಪ್ರಸಂಗವಶಾತ್ ಇವರು ಬಹಳ ಆನಂದಿಯಾಗಿರುವರು ಮತ್ತು ಪ್ರಸಂಗವಶಾತ್ ಬಹಳ ಉದಾಸೀನರಿರುವರು. ದಯಾಳುಸ್ವಭಾವದವರು, ಉದಾರರು ಮತ್ತು ವಿಶ್ವಾಸಕ್ಕೆ ಪಾತ್ರರಿರುವರು. ಮಿತ್ರನನ್ನು ಎಂದೂ ಬಿಡಲಾರರು, ಮಿತ್ರನ ಜೊತೆಯಲ್ಲಿ ಶಕ್ತಿಮೀರಿ

ಸಂಕಟದಲ್ಲಿ ಬೀಳುವರು. ರೊಕ್ಕದ ವ್ಯವಹಾರದಲ್ಲಿಯಾಗಲಿ ಬಹಳ ಎಚ್ಚರ ತೆಗೆದು ಕೊಳ್ಳುವರು. ವಚನಭ್ರಷ್ಟರೆಂದೂ ಆಗಲಾರರು. ಬೇಕಾದ ಸಂಗತಿ ಬೇಕಾದಷ್ಟು ಗುಪ್ತಇಡಬಲ್ಲರು. ಮಿತ್ರರಿಗೆ ಶಕ್ತಿಮೀರಿ ಸಹಾಯಮಾಡುವರು. ಇದೊಂದು ಇವರಲ್ಲಿ ದೋಷವಿರುವದು. ಸ್ವಾಭಾವಿಕವಾಗಿಯೇ ದೊಡ್ಡ ದೊಡ್ಡ ಯೋಜನೆಮಾಡುವುದ ರಲ್ಲಿ ಕುಶಲರಿರುವರು.

ಇವರು ಸೃಷ್ಟಿನೇಮಗಳನ್ನು ಸರಿಯಾಗಿ ತಿಳಿದುಕೊಳ್ಳುವರು. ದೊಡ್ಡ ದೊಡ್ಡ ಯೋಜನೆಗಳನ್ನು ಕೊನೆಗಾಣಿಸುವುದರಲ್ಲಿ ಇವರು ಬಹಳ ಕುಶಲರು. ಯಾವಕಾರ್ಯದಲ್ಲಿ ಒಳ್ಳೆ ಯಶಸ್ಸು ಸಿಗುವುದೆಂದು ಇವರಿಗೆ ಅನಿಸುವುದೋ ಇಂತಹ ಕೆಲಸಗಳಲ್ಲಿ ಒಳ್ಳೆ ಆಶ್ಚರ್ಯಕಾರಕವಾಗಿ ಧುಮುಕುವರು. ಎಲ್ಲಿ ಲಾಭವು ಕಡಿಮೆ ಅನಿಸುವುದೋ ಅಲ್ಲಿ ಇವರು ನಿರಾಶರಾಗಿ ಉತ್ಸಾಹವನ್ನು ಕಳೆದುಕೊಳ್ಳುವರು. ಈ ಮನುಷ್ಯರು ಬಹಿರಂಗವಾಗಿ ಒಣ ಡೌಲಮಾಡುವುರದಲ್ಲಿ ಬಹಳ ಎಚ್ಚರಿಕೆ ತೆಗೆದು ಕೊಳ್ಳುವರು. ಈ ರಾಶಿಯ ಹೆಣ್ಣುಮಕ್ಕಳು ಗಂಡುಮಕ್ಕಳಿಗಿಂತ ಹೆಚ್ಚು ಅಚ್ಚು ಕಟ್ಟಾಗಿರುವರು. ಇಂತಹವರಿಗೆ ಸಂಗೀತದ ಅಭ್ಯಾಸವು ಲಾಭಕರವಿರುತ್ತದೆ. ಇವರು ಬಹಳ ಅಭಿಮಾನಿಗಳು, ಉದಾರರು, ಧೃಢನಿಶ್ಚಯವುಳ್ಳವರು, ಸ್ವತಂತ್ರ ಪ್ರವೃತ್ತಿ ಯವರು, ಸೌಂದರ್ಯದ ಉಪಾಸಕರಿರುವರು.

ಬಹಿರಂಗದ ಅಚ್ಚುಕಟ್ಟುತನದಲ್ಲಿ ಆಯುಷ್ಯಕಳೆಯುವ ಸ್ವಭಾವದವರಿರು ವರು. ದುಡ್ಡು ಮತ್ತು ಕೀರ್ತಿಗಳಿಸುವದಕ್ಕಾಗಿ ಅವರು ತಮ್ಮ ತನು ಮನದ ಶಕ್ತಿ ಸರ್ವಸ್ವವನ್ನು ವೆಚ್ಚಮಾಡುವರು.

ಎಷ್ಟೋ ಸಲ ದಾನ ಧರ್ಮಮಾಡುವುದರಲ್ಲಿ, ಅದರಂತೆ ಧಂದೆ ಮಾಡುವು ದರಲ್ಲಿ ಅವಿಚಾರಿ ಅನ್ನುವಷ್ಟು ಮಿತವ್ಯಯಿ ಆಗುವರು. ಒಮ್ಮೊಮ್ಮೆ ಆ ವಸ್ತು ಗಳನ್ನು ಕೊಂಡುಕೊಳ್ಳುವುದರಲ್ಲಿ ಶಕ್ತಿಮೀರಿ ಹಾಳುಮಾಡುವರು. ಒಮ್ಮೊಮ್ಮೆ ಅತಿ ಕಂಜೂಶತನವನ್ನು ವ್ಯಕ್ತಪಡಿಸುವರು. ಇವರ ಮಾನಸಿಕಸ್ಥಿತಿಯಂತೆ ಅತಿ ಉದಾರತನವು ಅಥವಾ ಅತಿ ಕಂಜೂಶತನವನ್ನು ತೋರಿಸುವರು, ಕಂಜೂಶತನ ಯಾವುದು ಮಿತವ್ಯಯ ಯಾವುದು ಇವರಿಗೆ ತಿಳಿಯುವುದಿಲ್ಲ. ಭವಿಷ್ಯತ್ ಕಾಲದ ಸಂಕಟದ ಹೆದರಿಕೆಯು ಇವರಿಗೆ ಇರುವುದಿಲ್ಲ. ವೆಚ್ಚಮಾಡುವುದರಲ್ಲಿ ಬಹಳ ವಿಚಾರಿಗಳಾಗಿರುವರು. ಇವರು ಯಾವಾಗಲೂ ಆಶಾವಾದಿಗಳೂ ಮತ್ತು ಭವಿ ಷ್ಯತ್ ಕಾಲದಲ್ಲಿ ಸುಖಸಿಗುವುದೆಂದು ಬಹಳ ಹುಮ್ಮಸ್ಸುಳ್ಳವರೂಇರುತ್ತಾರೆ. ಸಣ್ಣ ಸಣ್ಣ ವಿಷಯಗಳಲ್ಲಿ ಬಹಳ ಧೈರ್ಯಉಳ್ಳವರು ಮತ್ತು ಚಿಕಿತ್ಸಕಬುದ್ಧಿಯುಳ್ಳವರಿ ರುತ್ತಾರೆ. ಮಕ್ಕಳಮೇಲೆ ಬಹಳ ಮಾಯಾ ಮಾಡುವರು. ಮುಖಸ್ತುತಿಯು ಇವರಿಗೆ ಎಳ್ಳಷ್ಟೂ ಸೇರುವುದಿಲ್ಲ. ಆದರೆ ಇವರಿಗೆ ತಕ್ಕಪ್ರಶಂಸೆಯನ್ನು ಮಾಡುವ ವರಮೇಲೆ ಇವರು ಬಹಳ ಪ್ರೇಮಮಾಡುವರು. ಇವರ ಒಂದು ಮಾದರಿ ಆಕ ರ್ಷಕ ಶಕ್ತಿಯುಳ್ಳವರು. ಇದರಿಂದ ಜನರು ಇವರ ಕಡೆಗೆ ಆಕರ್ಷಿಸಲ್ಪಟ್ಟು ಇವರ

ಮೇಲೆ ಪ್ರೇಮಮಾಡುವರು. ಯಾರಾದರೂ ಮುದ್ದಾಮು ಕೃತ್ರಿಮ ಪ್ರೇಮ ಮಾಡುವುದೆಂದು ಅನಿಸಿದರೆ ಇವರಿಗೆ ಸೇರುವುದಿಲ್ಲ. ಖರೆ ಪ್ರೇಮವನ್ನು ಇವರು ಕಂಡುಹಿಡಿಯುವರು. ಹಾಗೆ ಕಂಡುಹಿಡಿದಲ್ಲಿ ಇವರಿಗೆ ನಿಜವಾದ ಸಮಾಧಾನ ವೆನಿಸುವುದು. ಗಂಡನ ಪ್ರೀತಿಯಿಂದ ಹೆಣ್ಣುಮಕ್ಕಳು ತಾವಾಗಿಯೇ ವಿನಯದಿಂದ ಅವನ ದಾಸರಾಗುವರು. ಇದರಿಂದ ಅವರು ಬಹಳ ದುಃಖಿಯಾಗುವರು. ಯಾರ ಸಲುವಾಗಿ ಇವರಿಗೆ ಖರೆ ಪ್ರೇಮವೆನಿಸುವದೊ, ಅವರ ಸಲುವಾಗಿ ಇವರು ಬಹಿರಂಗ ವಾಗಿ ಪ್ರೇಮ ಚಿನ್ಹೆಗಳನ್ನು ಕಡಿಮೆ ತೋರಿಸುವರು. ನಿಜವಾಗಿ ಜಿತೇಂದ್ರಿಯರಿದ್ದವರು ಆಧ್ಯಾತ್ಮಿಕ ವಿಷಯದಲ್ಲಿ ಬಹಳ ಅತ್ಯಂತ ಉತ್ಸಾಹ ತೋರಿಸುವರು. ಮತ್ತು ಆದರಲ್ಲಿ ಸಿದ್ಧಿಗಾಗಿ ಬಹಳ ಶ್ರಮಪಡುವರು.

ಬಹಿರಂಗದಲ್ಲಿ ಅಚ್ಚುಕಟ್ಟುತನದ ಚಟ ಹತ್ತಿದವರಿಗೆ ಪಾರಮಾರ್ಥಿಕ ವಿಷಯದಲ್ಲಿ ರುಚಿ ಹುಟ್ಟಿಸುವುದು ಬಹಳ ಬಿಗಿಯಿರುವುದು. ಆದರೂ ಒಮ್ಮೆ ರುಚಿಹುಟ್ಟಿದಲ್ಲಿ ಅವರು ಬೇರೆ ರಾಶಿಯವರಿಗಿಂತ ಹೆಚ್ಚು ಚಮತ್ಕಾರ ತೋರಿಸುವರು. ಇವರು ಗಿಡ್ಡಾಕೃತಿಯುಳ್ಳವರು. ಶರೀರದ ಬಣ್ಣ ಸಾದ ಕಪ್ಪು ಕೂದಲು ಕಪ್ಪು ಸುಂದರವಾದ ಕಣ್ಣುಗಳು. ಹೃದಯದ ಭಾವನೆಯನ್ನು ವ್ಯಕ್ತಪಡಿಸುವಂತಹವು. ವೃಷಭ, ಕನ್ಯ, ಮತ್ತು ತುಲಾ ಅಥವಾ ಸ್ವಂತದ ರಾಶಿಯವರದೂ ಕೂಡ ಸ್ನೇಹ ಸಂಬಂಧ ಬಹಳ ಉತ್ತಮ ಪರಿಣಾಮಕಾರಿಯಾಗುತ್ತದೆ.

ಸ್ವಾರ್ಥವೃತ್ತಿ ಮತ್ತು ಆತ್ಮಸಾಮರ್ಥ್ಯದ ಸಲುವಾಗಿ ಅವಿಶ್ವಾಸ, ಇವು ಮಕರರಾಶಿಯವರಲ್ಲಿಯ ದೊಡ್ಡ ದೋಷಗಳು. ಶಕ್ತಿಮೀರಿಮಾತಾಡುವರು ಮತ್ತು ಸ್ವಂತದ ಕ್ಷುದ್ರ ದುಃಖಗಳನ್ನು ವಿವಿಧ ತೆರನಾಗಿ ಬಣ್ಣಿಸಿ ಮುಂದಿಗೆ ಬೇಸರ ಉಂಟು ಮಾಡುವರು. ಇವರಲ್ಲಿ ಆಧ್ಯಾತ್ಮಿಕ ಪ್ರವೃತ್ತಿ ಹುಟ್ಟಿಸುವುದು ಬಹಳ ಬಿಗಿ. ಒಮ್ಮೆ ಹುಟ್ಟಿತೆಂದರೆ ಅದರ ಶಿಖರವನ್ನು ಮುಟ್ಟಲು ಸಮರ್ಥರಿರುವರು. ಸುಲಭ ಕೋಪಿಗಳು ಇರುವದಿಲ್ಲ. ಮಿತಿಮೀರಿ ಸಿಟ್ಟಿಗೆಬ್ಬಿಸಿದರೆ ಬಹಳ ನಿರ್ದಯರೂ ಆಗುವರು. ಯಾವಾಗಲೂ ಅಜೀರ್ಣರೋಗದಿಂದ ಯುಕ್ತರು ಮತ್ತು ಇಡೀ ದಿವಸ ಉದಾಸೀನರಾಗಿರುವರುವ ರೋಗ ವಿರುವಸಂಭವವಿದೆ. ಮೌನ ವ್ರತದಿಂದ ಮತ್ತು ಧ್ಯಾನದ ಅಭ್ಯಾಸದಿಂದ ಬಹಳ ಲಾಭಉಂಟು. ಆಯೋಗ್ಯ ಅಭಿಪ್ರಾಯ ವನ್ನು ಕಟ್ಟುವ ಚಟವನ್ನು ಬಹಳ ವಿವೇಕದಿಂದ ತಪ್ಪಿಸಬೇಕು. ಅಜ್ಞಾನ ಮತ್ತು ಅವಿದ್ಯೆಯಿಂದ ಆಗಾಗ್ಗೆ ದುಃಖವನ್ನು ವ್ಯಕ್ತಪಡಿಸುವ ಚಟವು ನಿಂದ್ಯವಿರುವುದರಿಂದ ಬಿಡಲು ಯತ್ನಿಸಬೇಕು. ಪೃಥ್ವಿಯ ಆಕರ್ಷಣವು ಬಹಳ ವಿರುವದು. ಅದರ ಮೋಹವನ್ನು ಗೆಲ್ಲಬೇಕು. ಈ ರಾಶಿಯು ಪೃಥ್ವಿಯ ಕೆಟ್ಟಮಗ್ಗಲನ್ನು ತೋರಿಸು ವಂತಹದು. ಆದ್ದರಿಂದ ಈ ರಾಶಿಯಲ್ಲಿ ಹುಟ್ಟಿದವರು ಸ್ವಂತದ ದೋಷಗಳನ್ನು ಮತ್ತು ವಿಕಾರಗಳನ್ನು ಗೆಲ್ಲಲು ಯತ್ನಿಸಬೇಕು. ಮಕರ ಮತ್ತು ವೃಷಭ ರಾಶಿಯು ಕೂಡ ಲಗ್ನವಾಗುವುದು ಈ ರಾಶಿಯವರಿಗೆ ಅತ್ಯಂತ ಹಿತಕರ. ಗೃಹಸ್ಥಾಶ್ರಮವು

ಸುಖದ್ದಾಗುವುವದು. ಪ್ರಜೆಯು ಅತ್ಯಂತ ನಿರೋಗಿ ಮತ್ತು ಬಲವಾನವಾಗುವದು. ಮಕರ ಮತ್ತು ತುಲಾರಾಶಿಯ ಲಗ್ನದಿಂದ ಪ್ರಜೆಯು ಹೆಚ್ಚು ಬುದ್ಧಿಶಾಲಿಯಾಗುವರು. ಮಕರ ಮತ್ತು ಕನ್ಯಾರಾಶಿಯ ಲಗ್ನದಿಂದ ಪ್ರಜೆಯು ಇದಕ್ಕೂ ಹೆಚ್ಚು ಬುದ್ಧಿವಂತ ಮತ್ತು ಸಾಮರ್ಥಉಳ್ಳದಾಗುವದು.

ಮಕ್ಕಳಮೇಲೆ ಗೆಳೆತನ ಪರಿಣಾಮವು ಕೂಡಲೇ ಆಗುವುದರಿಂದ ಹಟಮಾರಿ ಮತ್ತು ಗ್ರಾಮಜನ್ಯರ ಗೆಳೆತನವು ಸ್ವಲ್ಪವೂ ಸಹ ಆಗದಂತೆ ಎಚ್ಚರಿಕೆ ತೆಗೆದುಕೊಳ್ಳಬೇಕು. ತಾಯಿತಂದೆಗಳು ಎಂತಹ ಪ್ರಸಂಗದಲ್ಲಿಯೂ ತಮ್ಮ ಹಟಮಾರಿತನ ಅಥವಾ ಸಿಟ್ಟಿನ ಸ್ವಭಾವವನ್ನು ತೋರಿಸಕೂಡದು. ಯೋಗ್ಯನಿಯಂತ್ರಣ ಮಾಡದೆಇದ್ದಲ್ಲಿ ಮಕ್ಕಳು ಬಹಳ ಅಭಿಮಾನಿ, ಉದ್ಧಟ ಮತ್ತು ತ್ರಾಸುಕೊಡುವಂತಹವು ಆಗುವುವು. ಉತ್ತಮ ತೆರನಾಗಿ ಅತ್ಯಂತ ಪ್ರೇಮದಿಂದ, ಧೃಡನಿಶ್ಚಯದಿಂದ, ಹಟಮಾರಿತನ ಬಂದಲ್ಲಿ ಅದಕ್ಕೆ ಸೊಪ್ಪುಹಾಕದಂತೆ ಎಚ್ಚರಿಕೆತೆಗೆದುಕೊಳ್ಳಬೇಕು. ಅದರಲ್ಲಿಯೇ ಸ್ಫೂರ್ತಿ ಹುಟ್ಟುವಂತೆ ಶಿಕ್ಷಣಕೊಡಬೇಕು. ಆಹಾರ ಹೆಚ್ಚಾಗದಂತೆ ಕಾಳಜಿತೆಗೆದುಕೊಳ್ಳಬೇಕು. ಬಹಿರಂಗ ಒಣ ಡೌಲು ಬಹಳ ಕೆಟ್ಟೆಂದು ಬಾಲ್ಯದಿಂದಲೇಕಲಿಸಬೇಕು. ಸ್ತ್ರೀಪುರುಷರ ಯೋಗ್ಯಸಂಬಂಧ ಯಾವುದು ಅಯೋಗ್ಯಸಂಬಂಧ ಯಾವುದು ಅದರಿಂದ ಲಾಭ ಲುಕ್ಸಾನಗಳಾವುವು ಇದನ್ನು ಕಲಿಸಿದಷ್ಟು ಕಡಿಮೆಯೇ. ತಮ್ಮ ಹಿತದಕ್ಕಿಂತ ಎರಡನೆಯವರ ಹಿತದ ಕಡೆಗೆ ಹೆಚ್ಚಿಗೆ ಲಕ್ಷ್ಯಕೊಡುವಂತೆ ಕಲಿಸಬೇಕು. ಮಾನವಜಾತಿಗೆ ಹಿತದ ಸಲುವಾಗಿ ಅಂತಃಕರಣದಲ್ಲಿ ಶುದ್ಧ ಮತ್ತು ಖರೇ ಪ್ರೇಮಹುಟ್ಟುವಂತೆ ಮಾಡಬೇಕು.

" ಆತ್ಮವತ್ಸರ್ವ ಭೂತೇಷು " ಎಂಬ ಭಾವನೆಯು ಅವರಲ್ಲಿ ಹುಟ್ಟುವಂತೆ ಮಾಡಬೇಕು. ಸ್ವಾಮಿ ಶನಿ, ಮಕರ ರಾಶಿಯುಲ್ಲಿ ಹುಟ್ಟಿದ ಮನುಷ್ಯರು ಹಿತಕರವಾದಂತಹವನ್ನು ಬಹಳ ಓದಬೇಕು, ವಿಚಾರಮಾಡಬೇಕು. ಈ ಉಪದೇಶವು ಅವರಿಗೆ ಬಹಳ ಲಾಭಕಾರಕವಿರುತ್ತದೆ. ಎಲ್ಲ ಮಾದರಿ ವಿದ್ಯೆ ಮತ್ತು ಜ್ಞಾನ ಅವರಿಗೆ ಹಿತಕರವಾಗಿರುವುದರಿಂದ ಪ್ರತಿಯೊಂದೂ ಮತ್ತು ಜ್ಞಾನವನ್ನೂ ಅದರದಿಂದ ಬೆಳೆಸಬೇಕು. ಏಕಕಾಲಕ್ಕೆ ಬಹಳ ಕೆಲಸಗಳನ್ನು ಮಾಡಲು ಪ್ರಯತ್ನಪಡದೆ, ಏಕಕಾಲಕ್ಕೆ ಒಂದೇ ಕೆಲಸ ಮನಮುಟ್ಟಿ ಮಾಡಲು ಪ್ರಯತ್ನ ಮಾಡಬೇಕು. ನಿಮ್ಮ ವಿಚಾರದಂತೆ ನಡೆಯಬೇಕು. ಎರಡನೆಯವರಿಗೆ ನಿಮ್ಮ ವಿಚಾರದಲ್ಲಿ ಕೈಹಾಕಗೊಡಬಾರದು.

ನಿಮ್ಮ ಉದಾಸವೃತ್ತಿ ಮತ್ತು ಆಳುಮೋರೆಯಿಂದ ಇರುವ ಸ್ವಭಾವವನ್ನು ಗೆಲ್ಲಲು ಯತ್ನಿಸಬೇಕು. ಪ್ರೇಮಲ, ಉದಾರ, ಮತ್ತು ನಮ್ರಸ್ವಭಾವದಿಂದಲೇ ಎಲ್ಲರೂ ನಿಮ್ಮನ್ನು ಪ್ರೀತಿಸುವರು. ಎಂದಿಗೂ ಸಿಟ್ಟಿಗೆ ಅಧೀನರಾಗಬೇಡಿ. ದ್ರವ್ಯವನ್ನು ಚೆನ್ನಾಗಿ ಕಾಪಾಡಿಕೊಳ್ಳಿ. ಎರಡನೆಯವರಿಗೆ ಶಕ್ತಿಮೀರಿ ಸಹಾಯಮಾಡಬೇಡಿ. ಜಗತ್ತು ಎಷ್ಟು ಮುಂದೆ ನಡೆದಿದೆ ಇದರ ಜ್ಞಾನವನ್ನು ಗಳಿಸಬೇಕು.

ಎರಡನೆಯವರ ವಿಚಾರವು ತಮಗೆ ಮಾನ್ಯವಾಗಿರದಿದ್ದರೂ ಅದನ್ನು ತಿಳಿದುಕೊಳ್ಳಲು ಯಾವಾಗಲೂ ಸಿದ್ಧರಿರಬೇಕು. ದಂಡೆ ಶಿಕ್ಷಣವಾದರೂ ಅಗತ್ಯವಾಗಿ ಚೆನ್ನಾಗಿ ಸಂಪಾದನೆಮಾಡುವದು ಅಗತ್ಯವಿದೆ. ದುಡ್ಡು ಗಳಿಸುವದರಲ್ಲಿಯೂ, ಬಳಸುವುದರಲ್ಲಿಯೂ ಚನ್ನಾಗಿ ವಿಚಾರಮಾಡು. ಹೀಗೆಮಾಡುವುದರಲ್ಲಿ ಕಂಜೂಶನಾಗಬೇಡ. ಉದಾರತನವಿಲ್ಲದೆ ಅಭ್ಯೋದಯ ಆಗಲಾರದು. ಸಂಗೀತದ ಅಭ್ಯಾಸವು ನಮಗೆ ಲಾಭಕಾರಕವಾಗಿರುವುದು. ಏನುಮಾಡುತ್ತೀರಿ ಅದರಲ್ಲಿ ಬಹಳ ಧುಮುಕಬೇಡಿ. ಹಿಡಿದ ಕೆಲಸದಲ್ಲಿ ಯಶಸ್ಸು ಸಿಗದೆ ನೀವು ಸುಮ್ಮನೆ ಕೂಡಲಾರಿರಿ. ಅಭಿಮಾನಿ ಮತ್ತು ಗರ್ವಿಷ್ಟರಾಗಬೇಡಿ. ದೇವರ ಮೇಲೆ ಭಕ್ತಿಮಾಡಿ. ಅವನ ನೇಮದಂತೆ ನಡೆಯಿರಿ. ಬಹಳ ಕೇಳುವವನಾಗಿ ಆದರೆ ಮಾತನಾಡುವವನಾಗಬೇಡ. ಸಂಸಾರದ ಸ್ವರೂಪವೇನು ? ಮನುಷ್ಯನ ಕರ್ತವ್ಯವೇನು ? ತಿಳಿಯತಕ್ಕದ್ದೇನು ಇದರ ವಿಚಾರ ಹೆಚ್ಚಾಗಿಮಾಡು. ತತ್ವಜ್ಞಾನದ ಗೂಢವಿಧ್ಯೆಯ ಅಭ್ಯಾಸ ಮಾಡು. ವಿವಿಧ ಮನೋವಿಕಾರಗಳನ್ನು ವಿವಿಧ ಸಂಕಲ್ಪದಿಂದ ತಡೆದು ಹಿಡಿ. ಶಕ್ತಿಮೀರಿ ಕಷ್ಟಪಡಬೇಡ.

ಧನರಾಶಿ ಮತ್ತು ಮಕರರಾಶಿ ಸಂಧಿಸಮಯ. ಡಿಸೆಂಬರ ೨೧ ರಿಂದ ೨೭ ರ ವರೆಗೆ ಹುಟ್ಟಿದ ಸಮಯ. ಈ ಸಮಯದಲ್ಲಿ ಹುಟ್ಟಿದವರು ಮಕರರಾಶಿಯವರಿಗಿಂತ ಹೆಚ್ಚಿಗೆ ಸುಖಿ, ಒಳ್ಳೆಯ ವಿಚಾರವಂತರು ಮಹತ್ವದ ಕೆಲಸ ಮಾಡುವಂತಹವರು. ಶಿಕ್ಷಣದೊರಕಿಸುವುದರಲ್ಲಿ ಬಹಳ ಕುಶಲರು. ಮಕರರಾಶಿಯವರಿಗಿಂತ ಹೆಚ್ಚಿಗೆ ವನವು ವೈಯ್ಯಾರ ಮಾಡುವವರು. ಸಂಗೀತದ ಅಭ್ಯಾಸ ಮಾಡಿದರೆ ಬಹಳ ಕುಶಲತೆಯನ್ನುಗಳಿಸುವರು. ಬಹಳ ಅವಲೋಕನ ಮತ್ತು ಸೂಕ್ಷ್ಮಚಿಕಿತ್ಸಕ ಬುದ್ಧಿಯುಳ್ಳವರು. ಧನು ಮತ್ತು ಮಕರ ರಾಶಿಯವರಿಗಿಂತ ಹೆಚ್ಚು ಚಿಕಿತ್ಸಕರು ಮತ್ತು ಪ್ರೇಮಳರಿರುವರು. ಗೆಳತನದಲ್ಲಿ ಪ್ರೇಮದಲ್ಲಿ ಇವರು ಬೀಳುವವರಲ್ಲ. ಪ್ರೇಮವೇ ಇವರ ಲಗ್ನಕ್ಕೆ ಕಾರಣ. ಯಾವ ಯಾವ ಕೆಲಸಗಳನ್ನು ಮಾಡುವರು ಅದನ್ನು ಅಚ್ಚುಕಟ್ಟುತನದಿಂದ ನೇಮಿತತನದಿಂದ, ಕುಶಲತನದಿಂದ ಮಾಡಿದರೂ ನೃತ್ಯದಲ್ಲಿ ಕುಶಲರು. ಭಾಷೆ ಜ್ಞಾನವು ಉತ್ತಮ. ಪ್ರವಾಸದಲ್ಲಿ ಇವರ ಗೆಳೆತನವು ಬಹಳ ಸುಖದಾಯಕ.

# ಇಂದಿನ ಹೆಣ್ಣು

## ( ಒಂದು ವಿಚಾರ )

ಲೇ:- ಟ. ಬಾ. ಕುಲಕರ್ಣಿ ಧಾರವಾಡ.



ಹೆಣ್ಣು ಅಬಲೆಯೆಂದೂ ದಾಸ್ಯದಲ್ಲಿ ದೂಡಲ್ಪಟ್ಟಿದ್ದಾಳೆಂದೂ ಹೇಳಲಾಗುತ್ತಿತ್ತು. ಮುಂದೆ ಅದೇ ಕಾರಣದಿಂದ ಅವಳು ಗಂಡಿನ ಕರುಣೆಗೆ ಪಾತ್ರಳಾದಳು.

"ಹೆಂಗಸು ಮಾಯೆ; ಗಂಡಸು ನಾಯಿ" ಎಂಬೊಂದು ಗಾದೆ ರೂಢವಾಗಿದೆ. ಗಂಡನ್ನು ಹೆಣ್ಣು ತನ್ನ ತಾಳಕ್ಕೆ ಕುಣಿಸಬಲ್ಲಳು ಎಂದಾಯಿತು.

ಇದು ಯಾವುದೂ ಅವಳ ಮೇಲ್ಮೆಗೆ ಕಾರಣವಾಗುವಂಥದಲ್ಲ. ಅವಳ ದೈಹಿಕ ದುರ್ಬಲತೆಯ ದುರುಪಯೋಗವನ್ನು, ಗಂಡು ಮಾಡಿಕೊಂಡಂತೆ, ಅವಳು ತಂತಾನೆಯೇ ಗುರಿಯಾದುದೂ ಉಂಟು ಕೇವಲ ಸ್ತ್ರೀ ಸಹಜ ದೌರ್ಬಲ್ಯಕ್ಕೆಂದೇ ಅವಳು ಕೈಂಕರ್ಯದಲ್ಲಿರುವುದೂ ಅವಳ ಸ್ಥಾನ-ಮಾನ ರಕ್ಷಣೆಗೆ ಸಹಕಾರಿಯಾದುದಲ್ಲ. ಗಂಡು ಇವಳ ಮುಂದೆ ನಾಯಿಯಾಗಿ ತಿರುಗುವದೂ ಪರಸ್ಪರ ಗೌರವದ ಕುರುಹಲ್ಲ.

ಆದರೆ ಸ್ತ್ರೀಯ ಉನ್ನತಿಯ ಪ್ರಶ್ನೆಯೆಲ್ಲಿ ಬರುತ್ತದೆ? ಅವಳು ಅವನತಮುಖಿಯಾಗಿರುವಳೆಂದೇ ಈ ಪ್ರಶ್ನೆಯೇ? ಅವಳಲ್ಲಿ ತನ್ನತನದ ಪ್ರಜ್ಞೆ ಸಾಲದು ಎಂದೇ? ಪುರುಷ ವರ್ಗಕ್ಕೆ ಎಷ್ಟು ಪ್ರಮಾಣದಲ್ಲಿ ಆತ್ಮ ಪ್ರಜ್ಞೆಯಿದೆ? ಪರಿಸರದ ಪ್ರಭಾವವೇನು ಅನಾದಿಕಾಲದ್ದಲ್ಲ. ಅದರ ತಾಳಕ್ಕೆ ಸಮಾಜ ರೂಪ-ವಿರೂಪಗೊಳ್ಳುವಂತೆ ಸ್ತ್ರೀಯೂ ಸಮಾಜದ ಅರ್ಧಾಂಗವಾದುದರಿಂದ ಬದಲುಗೊಳ್ಳುತ್ತ ಬಂದಿದ್ದಾಳೆ.

ಜಗತ್ತಿನ ಯಾವ ರಾಷ್ಟ್ರವೂ ನಮ್ಮಲ್ಲಿರುವಂತೆ ಸ್ತ್ರೀ ಗವ್ಹರ್ನರುಗಳನ್ನೂ ಸಚಿವ ರಾಯಭಾರಿಗಳನ್ನೂ ಪಡೆದಿಲ್ಲವೆಂದು ಎತ್ತಿ ಆಡಿಕೊಳ್ಳಲಾಗುತ್ತಿದೆ. ಇದು ಸ್ತ್ರೀಗೆ ಗೌರವವೆ? ಅಲ್ಲವೇ?

ಇಂದು ಪ್ರತಿಯೊಂದು ಖಾತೆಯಲ್ಲಿ ಮಹಿಳಾ ನೀತಿ ಇದ್ದೇ ಇದೆ. ಸಾಮಾನ್ಯವಾಗಿ ಇಂದಿನ ಕಲಿತ ಹೆಣ್ಣು ನೌಕರಿಯ ಬಲೆಯಲ್ಲಿ ಬೀಳಲು ಹಾತೊರೆಯದೆ ಇಲ್ಲ. ನೌಕರಿ ತನ್ನ ದೈಹಿಕ ಮಾನಸಿಕ ಪ್ರವೃತ್ತಿಗೆ ಪೂರಕವಾಗಿರಬೇಕೆಂಬ ನಿರ್ಬಂಧವೇನಿಲ್ಲ. ಗೀಚುವ ಯಾವ ಕೆಲಸಕ್ಕೂ ಇಂದವಳು ಸಿದ್ಧ. ಬರಬರುತ್ತ ಕಾರಕೂನಿಕೆ ಹೆಣ್ಣಿನ ಕಾಯ್ದಿಟ್ಟ ನೌಕರಿಯಾದರೆ ಆಶ್ಚರ್ಯಪಡಬೇಕಾಗಿಲ್ಲ.

ಅಖಿಲ ಭಾರತ ಮಹಿಳಾ ಮಂಡಲವಿದೆ. ಅಲ್ಲಿ ಮುಂದುವರಿದ ಸ್ತ್ರೀ ಯನ್ನು ಗೌರವಿಸಲಾಗುತ್ತಿದೆ. ಶಾಸನ ವಿಧಾನ ಸಭೆಗಳ ಸ್ತ್ರೀ ಸದಸ್ಯೆಯರು ತಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಡುತ್ತಿದ್ದಾರೆ. ಹಿಂದು ಕೋಡ ಮಸೂದೆ ಅವ ರನ್ನು ಚಿರಂತನವಾಗಿ ರಕ್ಷಿಸುವ ಸಾಧನವಾಗಲಿದೆ.

'ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ' ಎಂದರೆ ಇಂದಿನ ಹೆಣ್ಣು ಸಹಿಸು ವಂತಿಲ್ಲ. ಆದರವಳು ಇಂದು ನಿರ್ಗತಿಕಳಾದರೆ, ಬಹಿಷ್ಕೃತಳಾದರೆ, ಬಸಿರಾದರೆ, ಬಾವಿಗೆ ಬಿದ್ದರೆ, ನೊಂದರೆ-ಬೆಂದರೆ,—ಎಲ್ಲಕ್ಕೂ ಒಂದು ನಿಶ್ಚಿತ ಕಾರಣವಿದೆ. ಗಂಡಸಿನ ಕ್ರೌರ್ಯ! ಸಮಾಜದ ಸೂತ್ರಗಳೆಲ್ಲ ಇರುವದು ಗಂಡಿನ ಕಡೆಗೆ-ಎಂದು ಹೇಳಲಾಗಿರುವುದರಿಂದ ಅವನಿಗೆ ಈ ಗೂನೆ ತಪ್ಪಿದಲ್ಲ.

ಆದರೆ ಗಂಡಸಿನ ಸೂತ್ರಗಳೆಲ್ಲ ಹೆಣ್ಣಿನ ಕಡೆಗೆ ಎಂದು ನಾವು ಸಮಾಜ ದೃಷ್ಟಿಯಲ್ಲಿ ಅನ್ನಲಾರೆವು. ಅದರ ಘಟಕವಾದ ಕುಟುಂಬ ದೃಷ್ಟಿಯಲ್ಲಿ ಈ ಮಾತು ವಿನೋದವಾಗಿ ಆಡಲ್ಪಡುತ್ತಿದೆ.

( ೨ )

ಕುಟುಂಬಕ್ಕೂ ಸಮಾಜಕ್ಕೂ ನಿಕಟ ಸಂಬಂಧವಿಲ್ಲವೆನ್ನಬಹುದೇ? ಕುಟುಂಬ ವ್ಯಕ್ತ; ಸಮಾಜ ಅವ್ಯಕ್ತ, ಪ್ರತಿಯೊಬ್ಬ ವ್ಯಕ್ತಿ ಸಮಾಜದ ಹೆಸರಿನ ಮರೆಯಲ್ಲಿ ತನ್ನ ತಪ್ಪುಗಳನ್ನು ತೂರಿ ತಾನು ಮುಖ ಮೇಲೆ ಮಾಡಿಕೊಂಡು ಅಲೆಯುತ್ತಾನೆ. ಸಮಾಜ ಪರಿಸ್ಥಿತಿಯ ಕೂಸು. ಪರಿಸ್ಥಿತಿ ತಂದೊಡ್ಡುವದು ಪ್ರಕೃತಿ-ಎಂದರೆ ನಿಸರ್ಗವೆಂದೇ ಅಲ್ಲ. ಮಾನವನ ಪ್ರಕೃತಿ ನಿಸರ್ಗದತ್ತವಾದ ಬುದ್ಧಿಯ ವಿಕೃತಿ.

ವರದಕ್ಷಿಣೆಯನ್ನು ಕಾನೂನಿನಿಂದ ನಿರ್ಬಂಧಿಸಿದಂತೆ ರೂಢಿಯಲ್ಲಿ ಪ್ರತಿ ಬಂಧಿಸಲು ಸಾಧ್ಯವಾಗಿದೆಯೇ? ದ್ವಿಭಾರ್ಯ ಪ್ರತಿಬಂಧ ಕಾನೂನು, ಮದ್ಯ ಪ್ರತಿ ಬಂಧ ಕಾನೂನಿನಷ್ಟೆ ಪ್ರಯೋಜನಕಾರಿಯಾಗಿದೆ. ನಾಳೆ ಬರಲಿರುವ ಹಿಂದೂ ಕೋಡ ಮಸೂದೆಯ ಬಳಕೆಯೂ ನಗ್ನ ಸಮಾಜ ರೂಢ ವ್ಯವಸ್ಥೆಯಲ್ಲಿ ಎಂಥ ಪರಿಣಾಮ ಮಾಡೀತೆಂದು ಇಂದು ಊಹಿಸಬಹುದಷ್ಟೆ.

ಕಾನೂನಿನಿಂದ ಅನ್ಯಾಯವನ್ನು ಪ್ರತಿಬಂಧಿಸುವದಕ್ಕಿಂತ ಅದನ್ನು ಕಂಡು ಹಿಡಿದು ಕಾನೂನಿನ ಪ್ರಕಾರ ನ್ಯಾಯ ಬೇಡಬೇಕಾಗುತ್ತದೆ. ಒಂದೊಂದು ಖಟ್ಲೆ ಗಳಿಸಬೇಕಾಗುವ ಆಯುರ್ಮಾನದ ಲೆಕ್ಕ ಮನುಷ್ಯನ ಆಯುಷ್ಯವನ್ನು ಕಡೆಗಣಿಸುವಂತಿದೆ.

ಹಾಗಿದ್ದರೆ ಈ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವದು ಹೇಗೆ? ಇದನ್ನು ಯಾರು ವಿಚಾರ ಮಾಡುವವರು? ಅದನ್ನು ಆಚರಣೆಯಲ್ಲಿ ತರುವದು ಹೇಗೆ? ಎಂಬ ಪ್ರಶ್ನೆಗಳು ತಂತಾನೆ ತೆರೆಯೇಳುತ್ತವೆ.

ಕೇವಲ ತನ್ನ ಸಮಸ್ಯೆಗಳನ್ನು ಪ್ರಬುದ್ಧಳಾದ ಭಾರತ ಬಿಡಿಸಿಕೊಳ್ಳಬೇಕು. ಅವಳಿಗೆ ಕಾಯದೆಯು ರಕ್ಷೆಯಿದೆ. ಸ್ತ್ರೀ ಎಂಬ ಪದವಿಯಿಂದವಳು ಒಬ್ಬ ಪುರುಷ ನಿಂದಾದ ಅನ್ಯಾಯವನ್ನು ಇನ್ನೊಬ್ಬ ಪುರುಷನಿಂದ ಪರಿಹರಿಸಿಕೊಳ್ಳಬಲ್ಲಳು, ಎಂದು ಗಂಡು ಕೈ ಕೊಡವಿ ಕೂಡುವಂತಿಲ್ಲ. ಅದು ಕೇವಲ ಹೆಣ್ಣಿನ ಪ್ರಶ್ನೆಯಲ್ಲ. ಕಾಲದ ಪ್ರಶ್ನೆ; ಸಮಾಜದ ಪ್ರಶ್ನೆ. ಅದನ್ನು ಅಸಡ್ಡೆ ಮಾಡುವದೂ ನೆರೆಮನೆಯ ಬೆಂಕಿಯನ್ನು ನಿರ್ಲಕ್ಷಿಸುವದೂ ಬೇರೆಯಾಗಲಾರವು.

ಆದರೆ ಪುರುಷನಿಗೆ ಸ್ತ್ರೀ ಸೃಷ್ಟಿಯೇ ಅನಾದಿಕಾಲದಿಂದ ಸಮಸ್ಯೆಯಾಗಿ ಉಳಿದಿದೆ. ಅವನು ಸ್ತ್ರೀ ರಹಿತ ಬಾಳನ್ನು ನಡೆಸಲಾರ. ಪುರುಷ ರಹಿತ ಬಾಳನ್ನು ಸ್ತ್ರೀಗೂ ಬಿಟ್ಟುಕೊಡಲಾರ. ಸ್ವಾವಲಂಬನ ಆರ್ಥಿಕ ಕ್ಷೇತ್ರದ ಮಾತು. ಇಂದು ಗಳಿಸುವ ಹೆಣ್ಣು ತಾನೂ ಸ್ವಾವಲಂಬಿಯೆಂದರೆ ಅವಳನ್ನು ದುಡಿಯಗೊಟ್ಟ ಗಂಡು ತನ್ನ ಕರ್ತವ್ಯ ಚ್ಯುತಿಯನ್ನು ಚಿಂತಿಸುವದಿಲ್ಲ. ಈ ಬುದ್ಧಿ ಸ್ವಾರ್ಥ ರಂಜಿತವೇ ? ರೂಢಮೂಲವೇ ? ಅಧಿಕಾರ ಚಲಾವಣಿಯೇ ? ಕರ್ತವ್ಯ ಪ್ರಜ್ಞೆಯೇ ?— ಏನೆನ್ನಬೇಕು ?

ಅಜ್ಞ ಜಗತ್ತಿಗೆ ಸಮಸ್ಯೆಗಳಿಲ್ಲವೇನು ? ಆದರೆ ಅವುಗಳನ್ನು ಬಿಡಿಸಲು ಅದು ವಿಧಾಯಕ ಮಾರ್ಗ ಹುಡುಕುವುದಿಲ್ಲ. ಅದಕ್ಕೆ ಬದುಕೇ ಇಂದು ಸಮಸ್ಯೆ. ಆದರ ಪರಿಹಾರ ಕಾರ್ಯ ಆ ಬುದ್ಧಿಗೆ ನಿಲುಕುವ ಸ್ವಾರ್ಥಗಮ್ಯವಾದದ್ದು. ಅಲ್ಲಿ ಗಂಡು–ಹೆಣ್ಣು ಎಂಬ ಭೇದವಿಲ್ಲ. ಹೆಣ್ಣನ್ನು ತುಳಿದು ಬದುಕುವುದೂ ಗಂಡನ್ನು ತುಳಿದು ಬದುಕುವದೂ ಅಲ್ಲಿ ಒಂದೇ.

ಸೂಜ್ಞ ಜಗತ್ತಿಗೂ ಬದುಕೇ ಸಮಸ್ಯೆ. ಆದರೆ ಅದು ತಾನೇ ಸೃಷ್ಟಿಸಿಕೊಂಡ ನ್ಯಾಯ-ಅನ್ಯಾಯ, ಸುಖ-ದುಃಖ, ಗೌರವ ಅವಮಾನ,—ಗಂಡು–ಹೆಣ್ಣು ಎಂಬ ಕಲ್ಪನೆಗಳಿವೆ. ಅವೇ ಕ್ಷಣಕ್ಷಣಕ್ಕೂ ಸಮಸ್ಯೆಗಳಾಗಿ ಈ ಜಗತ್ತಿನ ಘಟಕಗಳನ್ನು ಕಾಡುತ್ತಿವೆ. ಅಗ್ನಿ–ಸಾಕ್ಷಿ, ಮನಸ್ಸಾಕ್ಷಿ ಧರ್ಮ-ಅರ್ಥ-ಮೋಕ್ಷಗಳ ಸಾಕ್ಷೀ ಭೀತ ಬದುಕನ್ನು ನಡೆಸಬೇಕಾಗಿದೆ.

( ೩ )

ನಮ್ಮ ದೇಶ ಸಮಾನಾವಕಾಶವೊದಗಿಸಿದೆ. ಗಂಡು-ಹೆಣ್ಣು ಎಂಬ ಭೇದ ಭಾವಕ್ಕೆ ಕಾನೂನಿನಿಂದ ಪ್ರತಿಬಂಧ ರಕ್ಷೆಯಿದೆ. ಪ್ರತಿಯೊಂದು ಕಾರ್ಯ ಕ್ಷೇತ್ರ ದಲ್ಲೂ ಪ್ರಾತಿನಿಧ್ಯವಿದೆ. ಆದರೆ ಇದೆಲ್ಲ ಆ–ವೈಯಕ್ತಿಕ ಕ್ಷೇತ್ರದಲ್ಲಿ ನಡೆಯುವ ನಾಟಕ. ವೈಯಕ್ತಿಕ ಜೀವನದ ಮೇಲೆ ಈ ರಕ್ಷೆಗಳ ಪರಿಣಾಮ ವ್ಯಕ್ತವಾಗಲು ಬಹಳ ಕಾಲಬೇಕು. ಆದರ ವಿಕಾಸವನ್ನು ಗುರುತಿಸುವುದಕ್ಕೂ ಕಾಲದ ಅಂದಾಜೇ ಗತಿ.

ಸ್ತ್ರೀ-ಪುರುಷ ಪಕ್ಷಪಾತಿಗಳಾದ ಯಾರೂ ಸಮಾಜ ಜೀವನದಲ್ಲಿ ಗೌರವಾ ದರಗಳನ್ನು ಪಡೆಯಬಹುದು. ಇದು ಸಮಾಜದ ಒಂದು ರಂಗದ ಮೇಲೆ ಆಡುವ

ನಾಟಕ. ಒಬ್ಬ ಏಕಸ್ತ್ರೀಪಕ್ಷಪಾತಿಯಾದರೆ ಅವರು ಗಂಡ-ಹೆಂಡಿರೆಂದು ಸಮಾಜ ರೀತ್ಯಾ ಒಪ್ಪಲ್ಪಟ್ಟವರಾಗದ ವಿನಾ ಗೌರವಕ್ಕೆ ಪಾತ್ರರಾಗುವದಿಲ್ಲ. ಈ ಏಕಾನೇಕ ಮುಖಗಳೇ ನಿಜವಾದ ಸಮಸ್ಯೆಗಳು.

ಇಂದು ಕಲಿತವರಾದ ಅನೇಕ ಸ್ತ್ರೀಯರಲ್ಲಿ ನೌಕರಿಮಾಡಲೊಲ್ಲರೇಕೆ ಎಷ್ಟು ಜನ ಆತ್ಮೋದ್ಧಾರ ಪಕ್ಷಪಾತಿಯರಾಗಿದ್ದಾರೆ ? ಒಬ್ಬ ಕಲಿತ ಹೆಣ್ಣು ಇನ್ನೊಬ್ಬ ಕಲಿತ ಹೆಣ್ಣನ್ನೊ, ಗಂಡನ್ನೊ ಗೌರವಿಸುತ್ತಾಳೆ. ಸ್ತ್ರೀವರ್ಗದ ಉದ್ಧಾರಕಾರ್ಯ, ವೇದಿಕೆಯ ಭಾಷಣದ ವಸ್ತುವಾಗಿರಬಹುದು. ಜೀವನದಲ್ಲಿ ಅನುದಿನ ಬರುವ ಕೊರತೆ ಛರತೆಗಳತ್ತ ಈ ಉದ್ಧಾರ ದೃಷ್ಟಿಯು ತಕ್ಕಡಿಯ ಕೆಲಸ ಸಾಧ್ಯವೇ ? ಶ್ರೀಮಂತರಿಗೆ ಶ್ರೀಮಂತ ಸ್ನೇಹಿತರು ಬೇಕು. ಕಲಿತವರಿಗೆ ವಿದ್ಯಾವಂತರ ಸಹವಾಸವೇಸಾಕು. ನೌಕರಿಯಲ್ಲಿರುವವರಿಗೆ ಅದೇ ಖಾತೆಯ ನೌಕರುದಾರರೊಂದಿಗೆ ಮೇಲಧಿಕಾರಿಗಳ, ಗ್ರೇಡುಗಳ ಮಾತಗಳೇಸಾಕು. ಹೀಗೆ ವ್ಯಕ್ತಿಗಳು ತಮ್ಮ ವಿದ್ಯಾಸಂಪನ್ನತೆಯನ್ನು ನಿರ್ದಿಷ್ಟ ಕ್ಷೇತ್ರಗಳಲ್ಲಿ ನಿರ್ದಿಷ್ಟ ವೈಯಕ್ತಿಕ ಕಾರ್ಯ ಕ್ಷೇತ್ರಗಳಿಗೆ ಪರಿಮಿತಗೊಳಿಸಿಕೊಂಡರೆ ವೇದಿಕೆಯ ಮೇಲೆಯೇ ಸಮಾಜೋದ್ಧಾರ.

ಒಬ್ಬ ಶ್ರೀಮಂತ ಒಬ್ಬ ಬಡವನಕೂಡ, ಒಬ್ಬ ವಿದ್ಯಾವಂತೆ ಇನ್ನೊಬ್ಬ ಅವಿದ್ಯಾವಂತಳೊಡನೆ ಮಾತಾಡುವದೂ ವ್ಯವಹರಿಸುವದೂ ಕರ್ತವ್ಯಕ್ಷೇತ್ರ ಬಾಹಿರವಾದ ಉಪಕಾರದ ಮಾತಾಗಿರುವವರೆಗೆ ಅಜ್ಞಸೂಜ್ಞದ ವ್ಯಾಖ್ಯೆಯನ್ನು ನಿಘಂಟಿನ ಅರ್ಥದಿಂದ ನೋಡಬರುವದಿಲ್ಲ.

( ೪ )

ಇಂದಿನ ಅನೇಕ ಆಕರ್ಷಣೆಗಳಲ್ಲಿ ಅಸಡ್ಡೆಯಂಥ ದುರಾಕರ್ಷಣೆ ಮತ್ತೊಂದಿಲ್ಲ. ' ನಮಗೇಕೆ ಬೇಕು ' ಎಂಬ ಕಣ್ಣು ಮುಚ್ಚಾಟದ ಆಟವನ್ನು ನಾವು ಆಟವೆಂದು ಆಡುತ್ತಿದ್ದೇವಾದರೆ ನಿರಂತರವಾಗಿ ಅದು ಮಕ್ಕಳಾಟವೇ ?

ಸಹಶಿಕ್ಷಣ, ಸೈನಿಕ ಶಿಕ್ಷಣಗಳ ಮಾತು ಚರ್ಚೆಯ ವಸ್ತುವಾಗಿದೆ. ಗೃಹಶಿಕ್ಷಣವನ್ನು ಪರದೇಶಿಗಳಂತೆ ನಾವು ಶಾಲೆಯಲ್ಲಿ ಕಲಿಯಬೇಕಾಗಿದೆ ಪಾಕಶಾಸ್ತ್ರ ಪುಸ್ತಕದಿಂದ ಸಾಧಿಸಬೇಕಾಗಿದೆ. ಸಂಗೀತವನ್ನೂ ಹಿಂದೀ ಭಾಷೆಯನ್ನೂ ರೇಡಿಯೋ ಮೂಲಕ ಕಲಿತಾಯಿತು ಈಸುಕಲಿಯಲು ಗಾಳಿಯೇ ಸಾಕಾದೀತು. ಎಲ್ಲಾ ಸ್ಯಾಂಟಿಫಿಕ್ ಶಾಸ್ತ್ರೀಯವಾಗುವ ಕಾಲವಿದು. ಕನ್ನಡದಲ್ಲಿ ' ಶಾಸ್ತ್ರಕ್ಕೆ ' ಎಂಬ ಪದ ಪ್ರಯೋಗ ಹಳೆಯ ಆಚಾರಕ್ಕೆ ಮಾತ್ರ ಸಂಬಂಧಿಸಿದೆ ; ವಿಚಾರಕ್ಕಲ್ಲ.

ಕಾಯ್ದೆ ಕಾನೂನುಗಳು, ಶಾಸ್ತ್ರಪರಂಪರೆಗಳು ಸಾಯುವವನ ಬಾಯಲ್ಲಿ ನೀರು ಬಿಡುವದಕ್ಕಲ್ಲ. ಬುದ್ಧಿ ಮನಸ್ಸು, ವಿವೇಕ ಮುಂತಾದ ಮಾನವೀಯ ಕಲ್ಪನೆಗಳು ಕೇವಲ ವೈಯಕ್ತಿಕ ಪ್ರಯೋಜನ ಕ್ಷೇತ್ರದ ವಸ್ತುಗಳಾಗದೆ, ಸಮಾಜ ಜೀವನದ ನಡೆವಳಿಕೆಯಲ್ಲಿ ಬಳಸಲು ಯಾವ ಕಾಯದೆಯ ಪ್ರತಿಬಂಧವೂ ಇಲ್ಲ.

ಹಕ್ಕುಬಾಧ್ಯತೆಗಳು ಕೋರ್ಟಿನ ವ್ಯಾಖ್ಯೆಯನ್ನು ಮಾತ್ರ ಪಡೆಯದೆ ನಿತ್ಯ ಜೀವನದಲ್ಲಿ ಆತ್ಮಸಾಕ್ಷಿಗೆ ನಿಲುಕುವಂತಾದರೆ ಬಾಳು ಬಂಗಾರವಾದೀತು.

ಆಕ್ರಮಣ ವಿಮೋಚನೆ, ಪಾಲನೆ-ಪೋಷಣೆ ಉದ್ಧಾರ-ಅದಃ ಪಾತ ಇಂತೆಲ್ಲ ಶಬ್ದಗಳ ಕೂಡ ಚಿನ್ನಾಟವಾಡುವದು ಮಾತ್ರ ವಿದ್ಯಾಸಂಪನ್ನತೆಯಾಗಿದೆ.

ಗತವೈಭವ, ಆಗಿನ ಮೈತ್ರೇಯಿ, ಝಾಂಸಿರಾಣಿ, ಕಿತ್ತೂರ ಕೇಸರಿ, ಅಕ್ಕ ಮಹಾದೇವಿ, ಹೊನ್ನಮ್ಮ ಈ ಹೆಸರುಗಳ ರಕ್ಷೆಯಲ್ಲಿ 'ಉಪಾಯ ವೇದಾಂತ' ಸಾಧಿಸುವದಕ್ಕಿಂತ ಆತ್ಮ ನಿರೀಕ್ಷಣೆಯಿಂದಲೇ ಕಾರ್ಯಗಳಾಗುತ್ತಿದ್ದರೆ ಕೊಡಗಿನ ಉಪವಾಸ ಕುಮಾರಿ ಜಗತ್ತಿನ ಅನ್ನಸಮಸ್ಯೆ ಬಿಡಿಸಲು ಪ್ರೇರಕಳಾಗಬಹುದಲ್ಲವೇ ?



# ಅಂತರ್ಮುಖಿ

## ೨ನೇ ದೃಶ್ಯ.

**ಲೇ:— ಸುಧಾ.**

[ ೧ನೇ ದೃಶ್ಯ:— ಸಾರಾಂಶ ತಾಯಿ ಗೋದಕ್ಕನ ವಿರುದ್ಧವಾಗಿ ಅಂತರ್ಮುಖಿಯು ಅಪ್ಪ ರಾಮಣ್ಣನ ಕಡೆಗೆ ದೂರು ಒಯ್ದಳು. ತಾಯಿಗೆ ಶಿಕ್ಷೆಯಾಗದೆ ತಂದೆಯು ವಿಚಾರಮಗ್ನನಾಗಿದ್ದು ನೋಡಿ ಅಂತರ್ಮುಖಿಯು ಖಿನ್ನಳಾಗಿದ್ದು ಶ್ಯಾಮಸುಂದರನ ಕೂಡ ಆಡುವದರಲ್ಲಿ ಮರೆತಳು. ]

ಅಂತರ್ಮುಖಿಯು ಶ್ಯಾಮಸುಂದರನೊಡನೆ ತೂಗುಮಂಚದ ಮೇಲೆ ಕೂತು ಬಳ್ಳಿ ಗಂಭೀರ ಮುಖ್ರೆಯಿಂದ ಸಲ್ಲಾಪಗಳನ್ನು ನಡೆಸಿದಳು.

" ಏನೋ ಶ್ಯಾಮಾ ! ನಮ್ಮ ಗೋದಕ್ಕಾ ರಾಮಣ್ಣನೊಡನೆ ನಗುತ್ತ ಕೆಲೆಯುತ್ತ ಹರಟೆಗಳನ್ನು ಹೊಡೆಯುತ್ತಾಳೆ! ನಾನು ನೀನು ಆಟವಾಡಿ ನಕ್ಕು ಕಲೆದರೆ ಅವ್ವ ಸಿಟ್ಟೇಕೆ ಮಾಡುತ್ತಾಳೆ ?" ಎಂದು ಅಂತರ್ಮುಖಿ ಶ್ಯಾಮನನ್ನು ಕೇಳಿದಳು.

" ದೊಡ್ಡವರೆಂಬವರೆಲ್ಲ ಹೀಗೆ ! " ತಾವು ಬೇಕಾದ್ದು ಮಾಡುವವರು ! ಅದನ್ನೆ ಮತ್ತೊಬ್ಬರು ಮಾಡಿದರೆ ಹೆಸರಿಡುವರೆಂದಂದ ಶ್ಯಾಮ ಉದಾಸೀನವಾಗಿ.

ಇಷ್ಟರಲ್ಲಿ ಗೋಪ, ಗೋಪಿ, ರಮಾ, ಸುಲಭಾ, ವೇಣು ಗೋಪಾಲ ಮೊದಲಾದ ಗೆಳತಿ ಗೆಳೆಯರು ಬಂದು " ಏನದು ! ಏನದು !" ಎಂದು ಗಲಾಟೆ ಎಬ್ಬಿಸಿದರು.

" ಏನಿಲ್ಲ ! ನಾವು ಹೆಣ್ಣು ಹುಡುಗಿಯರು ಗಂಡು ಹುಡುಗರ ಕೂಡ ಮಾತುಕಥೆಗಳನ್ನಾಡಿದರೆ ನಮ್ಮವ್ವಂದಿರು ನಮಗೆ ಸಿಟ್ಟು ಮಾಡುತ್ತಾರೆ ತಾವು ಮಾತ್ರ ನಮ್ಮ ಅಪ್ಪಂದಿರ ಕೂಡ ಬೇಕಾದ ಹಾಗೆ ಕೆಲೆಯುತ್ತಾರೆಂಬ ಪ್ರಶ್ನೆ !' ಎಂದು ಅಂತರ್ಮುಖಿಯೆಂದಳು.

" ಅಪ್ಪಂದಿರ ಕೂಡವೇಕೆ ! ನಮ್ಮವ್ವ ನಮ್ಮ ಮನೆಯ ಪೂಜೆಗೆ ಬರತಾರಲ್ಲ, ಆ ಗೋವಿಂದ ಭಟ್ಟರು ! ಅವರ ಕೂಡ ಅಪ್ಪ ರಾತ್ರಿ ಕ್ಲಬ್ಬಿನಿಂದ ಬರುವ ೧೦ ಗಂಟೆ ತನಕ ಹರಟೆಕೊಚ್ಚುತ್ತಾಳೆಂದು " ರಮಾ ನಡುವೆ ಬಾಯಿ ಹಾಕಿದಳು.

" ಇದೇನು ದೊಡ್ಡ ಮಾತು ಬಿಡು. ಆ ಜನಳಿ ವ್ಯಾಪಾರಿ ಪೋಪಟಲಾಲ ಇದ್ದಾನಲ್ಲ, ಅವನ ಮಗ ಪುನಮಚಂದಾ, ಏನು ಅವನ ಡೌಲು ! ಪಾನಪಟ್ಟಿ ತಿಂದು ಕೆಂಪಾದ ತುಟಿ, ಸ್ನೋ ಪಾವಡರ, ಅತ್ತರದಿಂದ ಘಮಘಮಿಸುವ ಅವನ ಬಟ್ಟೆಗಳು ! ರಿಸ್ಟವಾಚ ಇವೆಲ್ಲ ಡೌಲು ಮಾಡುತ್ತ ಬಿಲ್ಲುಬೇಡುವ ನೆವದಿಂದ ರಾತ್ರಿಲ್ಲ ಹಗಲಿಲ್ಲ ಬೇಕಾದ ವೇಳೆಗೆ ಬಂದು ಸಿಕ್ಕ ಸಿಕ್ಕಹಾಗೆ ಅಕ್ಕನೊಡನೆ ಹರಟೆ ಹೊಡೆಯುತ್ತ ತಾಸುಗಟ್ಲೆ ಕೂಡ್ರುತ್ತಾನೆ. ಅದಕ್ಕೆ ನಮ್ಮವ್ವ ಸಿಟ್ಟೆಂದು ಅನ್ನುವದಿಲ್ಲೆಂದು " ವೇಣು ಗೋಪಾಲ ಥೂ ಬಿಟ್ಟ.

" ಆ ಅನಂತರಾವು ಡಾಕ್ಟರರಿದ್ದಾರಲ್ಲ! ಏನವರ ಬೂಟು ಪ್ಯಾಂಟಿನ ದರ್ಪ! ಆ ಎದೆಗೆ ಹಚ್ಚುವ ನಳಿ! ಮುಗಳನಗೆಯಿಂದ ಬೂಟಿನ ಸಪ್ಪಳ ಮಾಡುತ್ತ ಲೆಫ್ಟ ರಾಯಿಟ ಲೆಫ್ಟ ರಾಯಿಟ ಅನ್ನುತ್ತ ಬಂದು ನಮ್ಮ ಅತ್ತಿಗೆಯ ಮೈಮೇಲೆ ಮೋರೆಯ ಮೇಲೆ ಕೈಯಾಡಿಸುತ್ತ "ಮಾಯ ಡಾರ್ಲಿಂಗ! ಹೌ ಆರ್ ಯು? ಬಾಯಿಯವರೆ ಹೇಗಿದೆ! ಹಾಃ! ಹಾಃ! ಹಾಃ! ಎಂದು ನಿರ್ಲಜ್ಜನಂತೆ ಹಾಸ್ಯ ಮಾಡುತ್ತಾರೆ. ಅಂದರೂ ಅವ್ವ ಅವರದು ಕೌತುಕ ಮಾಡುತ್ತಾಳೆಂದು" ಸುಲಭಾ ಅಣಕು ಮಾಡಿ ತೋರಿಸಿದಳು.

" ಆ ಹಸರು ಶಾಲು ಹೊತ್ತುಕೊಂಡು ಕಿವಿಯಲ್ಲಿ ಭದ್ರಾಕ್ಷಿ ಕೊರಳಲ್ಲಿ ಸ್ಫಟಿಕಮಣಿಗಳನ್ನು ಧರಿಸಿದ ಪುರಾಣಿಕ ಸೇತುರಾಮಾಚಾರ್ಯರು ಹೆಂಗಸರ ಕೂಡ ಮಾತನಾಡಬಾರದೆಂದು ಪ್ರತಿಜ್ಞೆಮಾಡಿ ತಮ್ಮ ಪುರಾಣ ಮುಗಿದಕೂಡಲೆ ಆ ಶಾರದಕ್ಕನ ಕೂಡ ಪುರಾಣದ ಮೇಲೆ ಚರ್ಚೆ ಮಾಡಿ ಕಣ್ಣುಗಳ ಎವೆಗಳನ್ನು ಹಾರಿಸುತ್ತಿರುವರು ಆದರೂ ಆ ಶ್ರೀಮಂತರ ಮನೆಯ ಪಾರ್ವತೆವ್ವನವರು ಗಪ್ಪ " ಎಂದು ಗೋಪನು ಚೇಷ್ಟೆಮಾಡಿ ತೋರಿಸಿದನು.

" ಇದೆಲ್ಲ ದೊಡ್ಡವರ ಮಾತಾಯಿತು. ಆ ಬುಡಬಡಕಿಯವ ಮನೆಗೆ ಬಂದೆಂದರೆ ಏನೇನೋ ಬಡಬಡಿಸುವಾ, ಅಡ್ಡತಿಡ್ಡಮೋರೆ ಮಾಡುವ! ನಗೆಯುವಾ ಕೆಲೆಯುವಾ ! ಏನೇನೋ ಕಥೆಗಳನ್ನು ಹೇಳುವಾ ನಗಿಸುವಾ ! ಆ ಕಾಲಕ್ಕೆ ಮನೆ ಹಿರಿಯರೆಲ್ಲ ಗಪ್ಪ " ಎಂದು ಗೋಪಿ ಅಲ್ಲಗಳೆದಳು.

" ಗುರುಗಳು, ಪೀಠಾಧಿಪತಿಗಳು, ಮಠಾಧಿಪತಿಗಳು, ವ್ಯಾಪಾರಸ್ಥರು ಒಟ್ಟಾರೆ ಎಲ್ಲರೂ ಒಂದಿಲ್ಲೊಂದು ನೆವದಿಂದ ಹೆಣ್ಣುಮಕ್ಕಳಕೂಡ ಮಾತಾಡಬಾರದೆಂದನ್ನುವವರೆಲ್ಲ ಮಾತಾಡುವವರೆಂದು " ವೇಣು ಗೋಪಾಲ ಸಮರ್ಥಿಸಿದನು.

" ಇದಕ್ಕೆಲ್ಲ ಕಾರಣವೇನು ಗೊತ್ತೆ ? ಇವರೆಲ್ಲರೂ ಲಗ್ನವಾದವರಿರುವರೆಂದು " ಶ್ಯಾಮಸುಂದರ ಮಾರ್ಮಿಕವಾಗಿ ಸೂಚಿಸಿದನು.

" ಲಗ್ನವೆಂದರೇನೆಂದು " ಅಂತರ್ಮುಖಿಯೂ ಬಾಲಿಶತನದಿಂದ ಮತ್ತು ಕುತೂಹಲದಿಂದ ಪ್ರಶ್ನಿಸಿದಳು.

" ಛೀ ಹುಚ್ಚಿ! ಲಗ್ನವೆಂದರೆ ಗೊತ್ತಿಲ್ಲ ನಿನಗೆ ?" ಅಣುಕವಾಡಿದಳು ಗೋಪಿ. " ಲಗ್ನವೆಂದರೆ ವಯಸ್ಸಿಗೆ ಬಂದ ಹುಡುಗಿಯರನ್ನು ಸರೀಕ ವಯಸ್ಸಿನವರಿರಲಿ ಬಿಡಲಿ, ವೃದ್ಧರಿರಲಿ ಮಕ್ಕಳುಳ್ಳವರಿರಲಿ ಬಿಡಲಿ, ತಂದೆ ತಾಯಿಗಳಾಗಲಿ ಪಾಲಕರಾಗಲಿ ಹಿಡಿದು ತಂದು ಕಾಯದೆಗೆ ಅನುಸರಿಸಿದ್ದ ಯಾವದಾದರೊಂದು ಪದ್ಧತಿಯಿಂದ ಅವರವರ ಜಾತಿಗನುಸಾರವಾಗಿ ಭಟ್ಟರ ಮುಖಾಂತರ ಇಂಥಿ ಥವರ ಲಗ್ನವಾಗಿದೆ. ಇಂದಿನಿಂದ ಇವರು ಗಂಡ ಹೆಂಡದಿರು ಎಂದು ಸಾರ್ವಜನಿಕ ರೀತ್ಯಾಸಾರಿದರಾಯಿತು. ಮುಂದೆ ಅವರು ಏನು ಬೇಕಾದರು ಮಾಡಿದರೆ ಯಾರೂ ಕೇಳುವರಿಲ್ಲೆಂದು ಸುಲಭಾ ತನಗೆಲ್ಲ ಗೊತ್ತಿದ್ದವರಂತೆ ವೈಯ್ಯಾರ ಮಾಡುತ್ತ ಹೇಳಿಬಿಟ್ಟಳು.

“ಇಷ್ಟರಿಂದಲೆ ನಮಗಿಷ್ಟು ಸ್ವಾತಂತ್ರ್ಯ ಸಿಗುವಂತಿದ್ದರೆ ನಾವಾದರು ನಮ್ಮ ನಮ್ಮೊಳಗೆ ಲಗ್ನವಾಗಿ ಬಿಡೋಣ. ಅಂದರೆ ಎಲ್ಲ ಹಿರಿಯರ ಕಾಟ ತಪ್ಪಿದಂತೆಯಾಗುವದು ಎಂಬ ವಿಚಾರ ಅಂತರ್ಮುಖಿ ಮುಂದೆ ಚಾಚಿದಳು.

“ಹೋ ! ಹೋ ! ಸರಿ ! ಸರಿ !” ಎಂದು ಎಲ್ಲರು ಚಪ್ಪಾಳೆ ತಟ್ಟಿದರು.

ಇವರೆಲ್ಲರ ಈ ವಾದವಿವಾದ ಗಲಾಟೆ ಅರ್ಧಮರ್ಧ ಅಲ್ಲಿಯೆ ಕೆಲಸ ಮಾಡುವಾಗ ಕೇಳುತ್ತಿರುವ ಗೋದಕ್ಕನವರ ಕಿವಿಗಳು ಹೆಚ್ಚು ನೇಟಾಗಿ ಅವರ ಮಾತುಗಳ ಕಡೆಗೆ ಹೊರಳಿದವು. “ಎಲ್ಲರೂ ಲಗ್ನವಾಗಿಬಿಡೋಣ”ವೆಂಬ ಮಾತು ಕಿವಿಗಳ ಮೇಲೆ ಬಿದ್ದೊಡನೆ ಅವರು ರೊಚ್ಚಿಗೆದ್ದು ಕಾಲಪ್ಪಳಿಸುತ್ತ ರಂಭಾಟಮಾಡಿ ರುದ್ರಾವತಾರ ತಾಳಿ ಹಲ್ಲುಗಳನ್ನು ಕಚ್ಚುತ್ತ “ಏನಿರೆ ರಂಡಾರ್ಯಾ ! ಎಷ್ಟು ಭುಂಡಾಗಿರುವಿರಿ ! ನಿಮ್ಮ ಲಗ್ನಗಳನ್ನು ನೀವೆ ಮಾಡಿಕೊಳ್ಳುವಿರಾ ! ಹರಹರಾ ! ಅಟಕಟಾ ! ಎಂಥ ಅನಾಹುತವಿದು !” ಆರ್ಭಟಿಸಿಬಿಟ್ಟರು.

ಇದನ್ನು ಕೇಳಿ ನೋಡಿ ಎಲ್ಲ ಹುಡುಗರು ದಾರಿ ಸಿಕ್ಕತ್ತ ಓಡಿಹೋದರು. ಅಂತರ್ಮುಖಿಯು ಬೆಪ್ಪಾಗಿ ನಿಂತುಬಿಟ್ಟಳು.

---

## ಮಾನವ ಧರ್ಮ

ನೆಲಬಗಿದು ಮಣ್ಣಗಿದು ಗೋಳಿಡುವ ವಿಧವೆಯನು
ನೋಡಲ್ಲಿ ! ಬವಣೆಯನು !! ಜನರವಳ ಪರಿಯನ್ನು
ಕಂಡು ಕಾಣದ ತೆರದಿ ಸಾಗಿಹರು, ಕರುಣೆಯನು
ಸೆರಗೊಡ್ಡಿ ಬೇಡುತಿಹ ಹೆಂಗರುಳು ಹೆಣವೆಂದು
ಮಸಣದಲಿ ಬಿಸುಟುತಲಿ ನರಕಗೈದಿಹರು
ನೆಲೆಯಿಲ್ಲ ತವರಿನಲಿ, ಎಡೆಯಿಲ್ಲ ಧರ್ಮದಲಿ
ನಲ್ಲನೊಲುಮೆಯಸೊಲ್ಲು ಜೀವಕೊನೆಯೊರೆಗಿಲ್ಲ
ಹೊಟ್ಟೆಹೊರೆಯಲು ದಾರಿ ಮೊದಲಿಲ್ಲ ಧರೆಯಲ್ಲಿ
ಮನುಜಪ್ರಾಣಿಗೆ ಮನುಜಲೋಕದಲಿ ಮರುಕವನು
ತೋರದಂಪದಿ ಕೊರಳಕೊಯ್ಯುತಿಹ ಧರ್ಮವನು
ಹೊಗಳುವೇತಕೆ ಮನುಜ? ವಿಧವೆ ಗೋಳನು ನೋಡು !!
ಮನುಜರೆಲ್ಲರ ಸಮತೆ ಸಾರುತಿಹ ಸದ್ಧರ್ಮ
ಸಮ್ಮತವು ಮನುಜ ಸಂಜಾತ ನರಲೋಕದಲಿ
ವಿಧವೆಗಡಿಗಡಿಗಳಲ ತಂದೊಡ್ಡಿ ಕೊಲ್ಲದಿರು

—“ಧೀರೇಂದ್ರ”

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು. ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ, ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

## ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**



**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..................................................................

..........................................................................................................

ಪೂರ್ಣ ವಿಳಾಸ..........................................................................................

(ಮನೆ ನಂಬರು ಸಹಿತ) ..............................................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು ......................................... ಸಹಿ

## ಅಕ್ಕನ ಪೆಟ್ಟಿಗೆಯ ಹೊಸ ಸದಸ್ಯರು.

೧. ಲೀಲಾ ಶಿವರಾಂ. C/o ಡಾ. ಎಂ. ಶಿವರಾಂ. 6th ಮೆಯಿನ್ ರೋಡ. ಮಲ್ಲೇಶ್ವರ. ಬೆಂಗಳೂರ. ೩. ವಯಸ್ಸು ೧೫. ಬೆಂಗಳೂರಿನ ಕಾಲೇಜಿನಲ್ಲಿ ವ್ಯಾಸಂಗಮಾಡುತ್ತಿದ್ದೇನೆ. ಕನ್ನಡವೆಂದರೆ ಬಲುಪ್ರೀತಿ.

೨. ವಿದ್ಯಾ ಗೋಪಾಲಕೃಷ್ಣ ಪುರಾಣಿಕ. ಮಹಾದೇವನಿವಾಸ, ರಾಸ್ತಾಪೇಟಿ. ಪುಣೆ. ೧೩೫.

೩. ಕುಮಾರಿ ಸುಶೀಲಾ ಬೆಲ್ಡೋಣ. C/o ಶ್ರೀ. ಬಿ. ಭೀಮರಾವ್ ಬಿ.ಎ.ಬಿಲ್. ಅಡ್ವೋಕೇಟ್. ಬಳ್ಳಾರಿ. ಐದನೇಫಾರ್ಮ್ ಓದುತ್ತಿದ್ದೇನೆ. ವಯಸ್ಸು ೧೫ ವರ್ಷ. ಡ್ರಾಯಿಂಗ್, ಪೈಂಟಿಂಗ್‌ಗಳಲ್ಲಿ ಪ್ರೀತಿಹೆಚ್ಚು. ಹಿಂದೀ ಸಿನೆಮಾ ನೋಡಲು ಬಹಳ ಪ್ರೀತಿ. ಪ್ರತಿಯೊಂದು ಕ್ಲಾಸಿನಲ್ಲೂ ಪ್ರಥಮ ವರ್ಗದಲ್ಲಿ ಪಾಸಾಗಿದ್ದೇನೆ. ಟೇಬಲ್ ಟೆನ್ನಿಸ್ ಆಟವಾಡಲು ಬಹಳ ಇಷ್ಟ. ಎಕ್ಸಿಬಿಷ ನಲ್ಲಿ ವಾಟರ್ ಕಲರ್ ಪೈಂಟಿಂಗ್‌ಗಾಗಿ ಮೊದಲನೆಯ ಬಹುಮತ ಸಿಕ್ಕಿದೆ.

೪. ಪ್ರೇಮಾ ಬಿಂದು ಬೈಚವಾಳ. ವಯಸ್ಸು ೧೪. ಕನ್ನಡ ೬ ನೆಯ ಇಯತ್ತೆ. ಎಲ್ಲಾ ಹುಡುಗಿಯರನ್ನು ಕೂಡಿಕೊಂಡು ಆಡುವುದು ಬಹಳ ಇಷ್ಟ. ಹಳೇ ಹುಬ್ಬಳ್ಳಿ ಕಿಲ್ಲೆಯಲ್ಲಿರುವುದು. ಮನೆ ನಂ. ೨೦೪೭೨. ಹುಬ್ಬಳ್ಳಿ.

೫. ಕು. ಶಾರದಾ C/o ಅನ್ನಪೂರ್ಣಮ್ಮ ಕಾರವೇಕರ ಸೇಡಬಾಳ ರೈಲ್ವೆ ಸ್ಟೇಶನ್ನ. ಜಿ ಬೆಳಗಾಂ. ನನಗೆ ಕಥೆ ಓದುವುದರಲ್ಲಿ, ರಂಗವಲ್ಲಿ ಇಡುವುದರಲ್ಲಿ ಹೆಚ್ಚು ಆಸಕ್ತಿಯುಳ್ಳವಳಾಗಿದ್ದೇನೆ.

೬. ಪ್ರಭಾಕರ. ಬಿ. ವಿ. ೧೩ ವಯಸ್ಸು. C/o ಬಿ. ವೆಂಕಟ ಕೃಷ್ಣಯ್ಯ ಕೊಪ್ಪಾ. ಪ್ರಭಾಕರ ಸ್ಟೋರ್ಸ. ನಂ. ೬.

೭. ಕಮಲಾಕ್ಷಿ ಕೆ. ಮಾಸಾಳ C/o ಕನ್ನಡ ಶಾಲಾ ಹೆಬ್ಬಳ್ಳಿ. ತಾ. ಜಿ.ಧಾರವಾಡ. ಹೆಬ್ಬಳ್ಳಿ ಪೋ. ನಂ. ೩೫.

೮. ಶಿವಕ್ಕ ಕಾಳಿ. ಹರಿಜನ ಓಣಿ. ಮು. ಹೆಬ್ಬಳ್ಳಿ. ತಾ. ಜಿ. ಧಾರವಾಡ. ಮ. ನಂ. ೧೧೦. ೬ ನೇ ಇಯತ್ತೆ. ವಯಸ್ಸು ೧೩ ವರ್ಷ.

೯. ಸುಂದರಾ ಬಡಿಗೇರ. ದುರಗವ್ವನಗುಡಿ ಓಣಿ. ಮು. ಹೆಬ್ಬಳ್ಳಿ. ತಾ. ಜಿ. ಧಾರವಾಡ. ಮನೆ. ನಂ. ೪೦೫. ೬ ನೆ ವರ್ಗದಲ್ಲಿ ಕಲಿಯುತ್ತಿದ್ದೇನೆ ವ. ೧೨

## ಸದಸ್ಯರ ಪತ್ರಗಳಿಗೆ ಉತ್ತರ.

ಪ್ರಿಯ ತಂಗಿ ಸುಶೀಲಾ,

ನಿನ್ನ ಪತ್ರ ತಲುಪಿತು. 'ವೀರಮಾತೆ,' ನಿನಗೆ ಮೆಚ್ಚಿಕೆಯಾಯಿತೇ? ತುಂಬ ಸಂತೋಷ! ಅಕ್ಕನ ಪೆಟ್ಟಿಗೆಯ ಸದಸ್ಯೆಯರಾಗಲು, ಇನ್ನುಳಿದ ನಿನ್ನ ಗೆಳತಿಯರಿಗೂ ತಿಳಿಸು. ಕಥೆ, ಕವನ, ನೀನು ನೋಡಿದ ಸಿನೇಮಾದ ಸಮಾಚಾರಗಳನ್ನು ಬರೆದು ಕಳಿಸಬಹುದಲ್ಲ? ಡ್ರಾಯಿಂಗ, ಪೇಂಟಿಂಗಗಳಲ್ಲಿದ್ದ ನಿನ್ನ ಅಭಿಮಾನ ನೋಡಿ ತುಂಬ ಸಂತೋಷವಾಯಿತು. ನಿಮ್ಮ ನಿಮ್ಮ ಮೆಚ್ಚಿಕೆಯ ಕಲೆಗಳನ್ನು ಅಭ್ಯಾಸ ಮಾಡಿ ಬೆಳೆಸಬೇಕು, ಗೊತ್ತೇ?

ನಿನ್ನ ಪ್ರೀತಿಯ ಅಕ್ಕ

ಪ್ರಿಯ ತಂಗಿ ಲೀಲಾ ಶಿವರಾಂ,

ನಿನ್ನ ಓಲೆ ತಲುಪಿತು. ಜೊತೆಗೆ ಸಮಸ್ಯೆಯೂ; ಅದನ್ನು 'ವೀರಮಾತೆ' ಯಲ್ಲಿ ನಿಶ್ಚಯವಾಗಿಯೂ ಪ್ರಕಟಿಸುತ್ತೇನೆ. ಹೀಗೆಯೇ ಪ್ರತಿತಿಂಗಳೂ ಕಳಿಸುತ್ತಿರು.

ನಿನ್ನ ಆದರದ ಅಕ್ಕ

ಪ್ರಿಯ ತಮ್ಮ ತಂಗಿಯರಿರಾ,

ಈ ಸಲ ನೀವೆಲ್ಲ ಅಕ್ಕನ ಪೆಟ್ಟಿಗೆಗೆ ಸದಸ್ಯರಾದದ್ದು ನೋಡಿ ಸಂತೋಷವಾಯಿತು. ನೀವು ಸ್ಪರ್ಧೆಯ ಮನೆ ತುಂಬಿ ಕಳಿಸುವಾಗ, ನೀವು ಪೆಟ್ಟಿಗೆಯ ಸದಸ್ಯರಿದ್ದರೆ ಅವಶ್ಯವಾಗಿಯೂ ತಿಳಿಸಬೇಕು. ಮತ್ತು ನೀವು ಕಳಿಸುವ ಕಥೆ, ಫಾರ್ಮ್ ಇತ್ಯಾದಿಗಳನ್ನೆಲ್ಲ ಅಂಟಿನಿಂದ ಜೋಡಿಸಿ ಕಳಿಸಲು ಮರೆಯಬಾರದು. ಈ ವಿಷಯವನ್ನು ನಿಮ್ಮ ಗೆಳೆಯರಿಗೂ ತೋರಿಸುವಿರಲ್ಲವೇ?

ನಿಮ್ಮೆಲ್ಲರ ಆದರದ ಅಕ್ಕ.

---

# ರೂಪಾಯಿ ಜಗತ್ತು

**ಲೇ:— ಅನಂತರಾವು ನಾಯ್ಕ ಜೆಡೆ ಹರಿಹರ.**

(೧)
ಮನವನು ಕುಣಿಸುವ ರೂಪಾಯಿ
ಮಾನವನಾ ಬಲ ರೂಪಾಯಿ
ಮಂಗಳ ಕಾರ್ಯಕೆ ರೂಪಾಯಿ
ಮಾನವ ಕಳಿಸುವ ರೂಪಾಯಿ

(೨)
ಮಕ್ಕಳ ಕುಣಿಸುವ ರೂಪಾಯಿ
ಮಂಕನು ತರಿಸುವ ರೂಪಾಯಿ
ಮುದುಕರ ನಗಿಸುವ ರೂಪಾಯಿ
ಮಾನವ ಮಂತ್ರದ ರೂಪಾಯಿ

(೩)
ಪುಣ್ಯವ ಗೈಸುವ ರೂಪಾಯಿ
ಪಾಪಕೆ ಇಳಿಸುವ ರೂಪಾಯಿ
ಪೃಥ್ವಿಗೆ ಪ್ರತ್ಯಕ್ಷ ರೂಪಾಯಿ
ಪುರುಷರಿಗಿಲ್ಲವ ರೂಪಾಯಿ

(೪)
ಬೆಳ್ಳಿಯ ತಗಡಿನ ರೂಪಾಯಿ
ಬಳ್ಳಿವನಾಬಲ ರೂಪಾಯಿ
ಬಕಣಕೆ ಭೂಷಣ ರೂಪಾಯಿ
ಬಿಂಕನು ಕಾಣುನು ರೂಪಾಯಿ

(೫)
ಭೂದೊಲು ಭವ್ಯದ ರೂಪಾಯಿ
ಭುವನದ ಬಂಡ್ಯಾಳ ರೂಪಾಯಿ
ಬಡವನ ಆ ಬಲ ರೂಪಾಯಿ
ಭಂಡರು ಭಜಿಸುವ ರೂಪಾಯಿ

(೬)
ಬೊಜ್ಜನುಬೆಳಿಸುವ ರೂಪಾಯಿ
ಬರದೊಳು ಗಳಿಸುವರೂಪಾಯಿ
ಬಳಗವ ಮೂರುವ ರೂಪಾಯಿ
ಬಾರವ ಬುದ್ಧಿಗೆ ರೂಪಾಯಿ

(೭)
ಝಣಝಣ ನಾದದ
ರೂಪಾಯಿ
ಝೋಕಿಸಿ ಬಂದಿಹ ರೂಪಾಯಿ
ರೂಪಾಯಿ ರೂಪಾಯಿ
ರೂಪಾಯಿ
ಇದಿಲ್ಲವವನೇ ಬಡಪಾಯಿ

---

## ಚುಟುಕುಗಳು

### ವೈದ್ಯರ ದಾಳಿ

ವೈದ್ಯರ ಗುಳಿಗಿ ಒಂದೇ ಗಳಿಗಿ
ವೈದ್ಯರ ಮಾತ್ರೆ ಪರಲೋಕಯಾತ್ರೆ
ವೈದ್ಯರ ಭಸ್ಮ ಕಾಲಾಭಸ್ಮ
ವೈದ್ಯರ ಮಾತು ಘಾಳೀಘೋರು
ವೈದ್ಯರ ದವ ಕುಡಿದೋರ ಶವ
ವೈದ್ಯರ ಬಿಲ್ಲು ತಂದೋರ ಗಲ್ಲು.

**ಹೋದ ತಿಂಗಳದ ಒಗಟುಗಳಿಗೆ ಉತ್ತರ.**

(೧) ಡೋಣಿ (೨) ಹೀರೇಕಾಯಿ (೩) ಪುಸ್ತಕ (೪) ಗಂಡ ಭೇರುಂಡ

**ಒಗಟುಗಳಿಗೆ ಸರಿಯಾದ ಉತ್ತರ ಕಳಿಸಿದವರು.**

(೧) ಪ್ರೇಮಾ ಬೈಚವಾಳ ಹುಬ್ಬಳ್ಳಿ; ವಾಮನ ಬೆಟಗೇರಿ, ಹುಕ್ಕೇರಿ; ವಿದ್ಯಾ, ಗೋಪಾಲಕೃಷ್ಣ ಪುರಾಣಿಕ, ಪುಣೆ; ಪ್ರಮೀಲಾ ಬೈಚವಾಳ, ಹುಬ್ಬಳ್ಳಿ.

**ಹೋದ ತಿಂಗಳ ಸ್ಪರ್ಧೆಗೆ ಉತ್ತರ ಕಳಿಸಿದವರು.**

ಪ್ರೇಮಾ ಬೈಚವಾಳ, ಪ್ರಮೀಲಾ ಬೈಚವಾಳ, ವಿದ್ಯಾ ಗೋಪಾಲಕೃಷ್ಣ ಪುರಾಣಿಕ.

**ಹೋದ ತಿಂಗಳ ಸ್ಪರ್ಧೆಯ ಸರಿಯುತ್ತರ.**

**ಎಡದಿಂದಬಲಕ್ಕೆ:—** (೧) ಕನಕ (೪) ಸತ್ವ (೬) ವಿರಹ (೮) ಚಹಾ (೯) ವಿದಿತ (೧೧) ರವಾ (೧೨) ಅರಿ (೧೫) ನೆನವು (೧೬) ವಸ್ತ್ರ

**ಮೇಲಿನಿಂದ ಕೆಳಕ್ಕೆ:—** (೨) ನವಿಲು ವಾಹನ (೩) ಕರ (೫) ತ್ವರಿತ (೭) ಹವಿ (೮) ಅರ್ಘ್ಯ (೧೦) ದಿಕ್ಕು (೧೩) ರಿಪು (೧೪) ಅಸ್ತ್ರ

## " ಈ ಸಮಸ್ಯೆಯನ್ನು ಬಿಡಿಸುವಿರಾ ?"

| | | | | | |
|---|---|---|---|---|---|
| ನಿ | ಸು | ಜಾ | ಕ | ಪ್ರ | ಮೀ |
| ಲಿ | ಮಾ | ತ | ವೀ | ಮಾ | ಳ |
| ಕ | ಜ | ಮಾ | ಲ | ಧ | ವಿ |
| ಪಂ | ಜ | ವಿ | ತ | ಶಾಂ | ಗಿ |
| ರ್ವ | ಪಾ | ಸಾ | ಸ | ಲ | ರಿ |
| ತಿ | ನಿ | ಜಿ | ರೋ | ಶೀ | ಜೆ |

ಪ್ರವೇಶ ಫೀ ೨ ಆಣೆ

ಸರಿಯುತ್ತರಕ್ಕೆ

ಒಂದು

ವೀರಮಾತೆ

ಪುಕ್ಕಟೆ.

ಮಕ್ಕಳೇ, ಮೇಲಿನ ಚೌಕವನ್ನು ನೋಡಿ. ಆ ಚೌಕದಲ್ಲಿ ೩೬ ಸಣ್ಣ ಸಣ್ಣ ಮನೆಗಳಿವೆ. ಪ್ರತಿಯೊಂದು ಮನೆಯಲ್ಲೂ ಒಂದೊ ಎರಡೊ ಅಕ್ಷರಗಳಿವೆ. ನೋಡಿದ ತಕ್ಷಣ " ಇದು ಏನೋ ಅರ್ಥವಿಲ್ಲದ ಚೌಕ " ಎಂದೆನಿಸುತ್ತದೆ ಅಲ್ಲವೇ ? ಆದರೆ, ಅದನ್ನು ಸರಿಯಾದ ರೀತಿಯಲ್ಲಿ ಓದಿದರೆ ನಿಮಗೆ ೧೨ ಜನ ಹುಡುಗಿಯರ ಹೆಸರು ತಿಳಿಯುವುದು ( ಅದರಲ್ಲಿ ನಿಮ್ಮ ಗೆಳತಿಯರ ಹೆಸರೂ ಇರಬಹುದು.)

ಮೊದಲು ಮೇಲ್ಕಂಡ ಚೌಕವನ್ನು ಒಂದು ಬಿಳಿ ಕಾಗದದ ಮೇಲೆ ದೊಡ್ಡದಾಗಿ ಬರೆದು ನಂತರ ಅದರಲ್ಲಿರುವ ಹೆಸರುಗಳನ್ನು ಓದಲು ಮೊದಲುಮಾಡಿ ಯಾವುದಾದರೊಂದು ಮನೆಯಿಂದ ಪ್ರಾರಂಭಿಸಿ ನಂತರ ಅದಕ್ಕೆ ಸೇರಿರುವ ಯಾವುದಾದರೊಂದು ಮನೆಗೆ ಹೋಗಬೇಕು. ಹೀಗೆ ಮುಂದುವರಿಸಿ ಪ್ರತಿಯೊಂದು ಮನೆಗೆ ಒಂದೊಂದು ಸಲ ಭೇಟಿ ಕೊಡಬೇಕು. ಆದರೆ ಎರಡು ನಿಯಮಗಳನ್ನು ನೀವು ಮರೆಯಬಾರದು, ಒಂದು, ಒಂದೇ ಮನೆಗೆ ಎರಡು ಸಲ ಹೋಗಬಾರದು ಇನ್ನೊಂದೇನೆಂದರೆ, ಒಂದು ಮನೆಯಿಂದ ಇನ್ನೊಂದು ಮನೆಗೆ ಹೋಗಬೇಕಾದರೆ ಅವು ಸೇರಿಯೇ ಇರಬೇಕು. ನೀವು ಸರಿಯಾದ ದಾರಿಯಲ್ಲಿ ಹೋದರೆ ನಿಮಗೆ ೧೨ ಹೆಸರುಗಳು ಸುಲಭವಾಗಿ ಸಿಕ್ಕುವುವು.

ರಚಿಸಿದವರು-- ಲೀಲಾ ಶಿವರಾಂ.



# ಪೆದ್ದನಿಗೆ ರಾಜ್ಯ

**ಲೇ:— ಕು. ಗಿರಿಜಾ ಬೋಳಿನ**

ಅನಂತ ಪುರದಲ್ಲಿ ಅನಂತನೆಂಬ ರಾಜನು ಆಳಿಹೋದನು. ಅವನ ಹೆಂಡತಿಯು ಲಕ್ಷ್ಮೀದೇವಿ. ಈಕೆಗೆ ಕಣ್ಣಿ, ಕಾಲಿ, ಎಂಬ ದಾಸಿಯರಿದ್ದರು. ಇವರು ಒಂದುದಿವಸ ರಾಣಿಯ ಹಾರವನ್ನು ಕಳವುಮಾಡಿದರು. ಆದುದರಿಂದ ರಾಜನು ಈ ಹಾರವನ್ನು ತಂದುಕೊಟ್ಟವರಿಗೆ ಅರ್ಧ ರಾಜ್ಯ ಕೊಡುವೆನೆಂದು ಡಂಗುರ ಹೊಡೆಸಿದನು. ಆ ಸಮಯದಲ್ಲಿ ಪೆದ್ದನು ತನ್ನ ಮಾವನ ಮನೆಗೆ ಬಂದಿದ್ದನು. ಇವನು ಊಟಕ್ಕೆ ಕುಳಿತಾಗ ಮಾವನ ಮನೆಯಲ್ಲಿ ಮಾಡುತ್ತಿದ್ದ ದೋಸೆಯನ್ನು ಎಣಿಸುತ್ತ ಊಟಮಾಡುತ್ತಿದ್ದನು. ದೋಸೆಗಳೆಲ್ಲ ಮುಗಿದಮೇಲೆ ಮಾವನ ಹೆಂಡತಿಯು ಯಾರು ಜಾಣರಿರಬಹುದೆಂದು ತಿಳಿದುಕೊಳ್ಳಲಿಕ್ಕೆ ಈ ದೋಸೆಯು ಎಷ್ಟಾಗಿವೆ ಎಂದು ಕೇಳಿದಳು. ಈ ಪ್ರಶ್ನೆಗೆ ಯಾರೂ ಉತ್ತರ ಕೊಡಲಿಲ್ಲ. ಆಗ ಪೆದ್ದ ಇವು ೨೦ ದೋಸೆಯಾಗಿವೆ ಎಂದನು. ಆಗ ಎಣಿಸಿನೋಡಿದರೆ ೨೦ ದೋಸೆಯಾಗಿದ್ದವು. ಆದುದರಿಂದ ಮಾವನ ಮನೆಯವರು ಇವನ ಜಾಣತನಕ್ಕೆ ಮೆಚ್ಚಿ ಅರಸನ ಹತ್ತರ ಹೋಗಿ ಇವನು ಹೇಗಾದರೂ ಮಾಡಿ ಸರವನ್ನು ತೆಗೆದುಕೊಂಡು ಬರುವನೆಂದು ಹೇಳಿದರು. ಆಗ ರಾಜನು ಪೆದ್ದನಿಗೆ ಸರವನ್ನು ತೆಗೆದುಕೊಂಡು ಬರಲು ಕಳುಹಿದನು. ಆಗ ಪೆದ್ದನು ಹೆದರಿ ಕಣ್ಣಿಗೆ ಬಂತು ಕಾಲಿಗೆ ಬಂತು ಎನ್ನುತ್ತ ಹೋದನು. ಆಗ ಅಲ್ಲಿದ್ದ ಕಣ್ಣಿ, ಕಾಲಿ ದಾಸಿಯರು ನಾವು ಸರವನ್ನು ತೆಗೆದುಕೊಂಡಿದ್ದು ಇವನಿಗೆ ಗೊತ್ತಾಗಿದೆಯೆಂದು ತಿಳಿದು ರಾಜನಿಗೆ ಹೇಳಬೇಡ ಎಂದು ಸರವನ್ನು ಕೊಟ್ಟುಬಿಟ್ಟರು. ಪೆದ್ದನು ಆ ಸರವನ್ನು ತೆಗೆದುಕೊಂಡು ಬಂದು ಅರಸನ ಮುಂದಿಟ್ಟನು. ಆಗ ಅರಸನು ಇವನ ಜಾಣತನಕ್ಕೆ ಮೆಚ್ಚಿ ಅರ್ಧ ರಾಜ್ಯವನ್ನು ಕೊಟ್ಟು ಮೇಲೆ ಸ್ವಲ್ಪ ಹಣ ಕೊಟ್ಟನು. ಇವನ ಜಾಣತನಕ್ಕೆ ಅನಂತ ಪುರದ ಜನರೆಲ್ಲರೂ ತಲೆದೂಗಿದರು. ನೋಡಿದಿರಾ ಪೆದ್ದನಿಗೆ ರಾಜ್ಯ !!



# ಸುದ್ದಿ-ಸಮಾಚಾರ

## (೧) ಕು. ಮೃದುಲಾ ಬೆನ್ ನೀಲಾಬಾಯಿಯವರ ಮೇಲೆ ಹಲ್ಲೆ.

ಅಖಿಲ ಭಾರತ ಕಾಂಗ್ರೆಸ್ಸಿನ ಹಿಂದಿನ ಜೊತೆ ಕಾರ್ಯದರ್ಶಿಗಳಾಗಿದ್ದ ಕುಮಾರಿ ಮೃದುಲಾ ಬೆನ್ ನೀಲಾಬಾಯಿಯವರ ಮೇಲೆ ಕೆಲ ಉಪದ್ವ್ಯಾಪಿಗಳು ಹಲ್ಲೆ ಮಾಡಲು ಸಂಚು ಹೂಡಿದರು. ಅದರ ವಿವರಗಳನ್ನು ದಿಲ್ಲಿ ಪೋಲೀಸರು ಕಂಡುಹಿಡಿಯುವುದರಲ್ಲಿ ತೊಡಗಿದ್ದಾರೆ. ಅವಳು ಜಮ್ಮು ಚಳುವಳಿಯು ನಡೆಯುತ್ತಿರುವ ಸ್ಥಳದಲ್ಲಿ ಕಾರಿನಿಂದ ಹಾಯ್ದುಹೋಗುತ್ತಿರುವಾಗ ಕೆಲ ಚಳುವಳಿಗಾರರು ಕಾರಿನ ಮೇಲೆ ಕಲ್ಲು ಒಗೆದರಲ್ಲದೆ ಓರ್ವನು ಅವಳಿಗೆ ಚೂರಿಯಿಂದ ಇರಿಯಲು ಬಂದಾಗ ಪೋಲಿಸರು ಅವನನ್ನು ದಸ್ತಗಿರ ಮಾಡಿದ್ದಾರೆಂದು ತಿಳಿಯುತ್ತದೆ.

## (೨) ವಿವಾಹದ ವಯಸ್ಸನ್ನು ಹೆಚ್ಚಿಸುವ ಪ್ರಯತ್ನ.

ಯುವಕ ಯುವತಿಯರ ವಿವಾಹದ ವಯಸ್ಸನ್ನು ಹೆಚ್ಚಿಸುವ ಒಂದು ಖಾಸಗೀ ಮಸೂದೆಗೆ ಬೆಂಬಲ ಕೊಡಬೇಕೆಂದು ಇಲ್ಲಿ ಮಂತ್ರಿಮಂಡಲವು ನಿರ್ಧರಿಸಿದೆ. ವಿಧಾನಪರಿಷತ್ತಿನ ಮುಂದೆ ಬರಲಿರುವ ಈ ಮಸೂದೆಯು ತರುಣರ ವಿವಾಹದ ವಯಸ್ಸನ್ನು ೨೧ ವರ್ಷಗಳಿಗೂ ತರುಣಿಯರ ವಯಸ್ಸನ್ನು ೧೬ ವರ್ಷಗಳಿಗೂ ಸೂಚಿಸುತ್ತದೆ.

## (೩) ಅನೈತಿಕ ವ್ಯವಹಾರ ತಡೆಗಟ್ಟುವ ಚಟುವಟಿಕೆ.

"ಸ್ತ್ರೀಯರನ್ನು ಮತ್ತು ಬಾಲಕರನ್ನು ಅನೈತಿಕ ವ್ಯವಹಾರಕ್ಕೆ ಉಪಯೋಗಿಸುವದನ್ನು ತಡೆಯಲು ಮತ್ತು ದೇಶದ ಸ್ತ್ರೀಯರ ಮತ್ತು ಬಾಲಕರ ಸಂಸ್ಥೆಗಳು ಲಾಯಸನ್ಸುಗಳನ್ನು ಪಡೆಯಬೇಕೆಂದು ಒತ್ತಾಯಪಡಿಸಲು ಲೋಕಸಭೆಯ ೧೦ ಮಹಿಳಾ ಸದಸ್ಯರು ಇಷ್ಟರಲ್ಲಿಯೇ ಎರಡು ಮಸೂದೆಗಳನ್ನು ತರಲಿದ್ದಾರೆ." ಎಂದು ಭಾರತದಲ್ಲಿಯ ನೈತಿಕ, ಸಾಮಾಜಿಕ ಸ್ವಾಸ್ಥ್ಯ ಸಂಸ್ಥೆಯ ಅಧ್ಯಕ್ಷರಾದ ಶ್ರೀಮತಿ ರಾಮೇಶ್ವರಿ ನೆಹರೂರವರು ಇಂದು ಹೇಳಿದರು.

ಈ ಮಸೂದೆಗಳಿಗೆ ಸಾರ್ವಜನಿಕರ ಬೆಂಬಲ ಅವಶ್ಯವಾಗಿದೆ. ಕಾರಣ ವಿಧಾನ ಮಂಡಳಗಳ ಸದಸ್ಯರು, ಪತ್ರಿಕೆಗಳು ಮತ್ತು ಸಾರ್ವಜನಿಕರು ಬೆಂಬಲ ನೀಡಬೇಕೆಂದು ನಾನು ಬಿನ್ನವಿಸುತ್ತೇನೆ ಎಂದಿದ್ದಾರೆ.

## (೪) ನ್ಯಾಯಾಧೀಶರ ಸ್ಥಳಕ್ಕೆ ಮಹಿಳೆಯರು.

ಸ್ಪೀಕರ್ ಶ್ರೀ. ಎಚ್. ಶಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಸೇರಿದ್ದ ಮೈಸೂರು ಶಾಸನ ಸಭೆಯಲ್ಲಿ ನ್ಯಾಯಾಂಗ ಸಚಿವರಾದ ಶ್ರೀ. ಎ. ಜಿ. ರಾಮಚಂದ್ರರಾಯರು ಪ್ರಶ್ನೆಯೊಂದಕ್ಕೆ ಉತ್ತರವಾಗಿ ನ್ಯಾಯಾಂಗವನ್ನು ಕಾರ್ಯಾಂಗದಿಂದ ಬೇರ್ಪಡಿಸುವ ಯೋಜನೆಯಲ್ಲಿದೆಯೆಂದು ಹೇಳಿದರು. ನ್ಯಾಯಾಧೀಶರ ವೃತ್ತಿಯು ಮಹಿಳೆಯರ ಮನೋಭಾವಕ್ಕೆ ಹೊಂದಿಕೊಳ್ಳುವುದೆಂದು ಉತ್ತರ ಹೇಳುತ್ತಾ, ಅವರು ಮಹಿಳೆಯರನ್ನು ಮುನ್ಸೀಫರನ್ನಾಗಿ ನೇಮಕ ಮಾಡುವ ವಿಷಯವನ್ನು ಗಮನದಲ್ಲಿಟ್ಟುಕೊಳ್ಳುವುದಾಗಿ ಹೇಳಿದರು.

[ ಆನೆಯ ಪುಟದಿಂದ ಮುಂದೆ ಸಾಗಿದ್ದು. ]

ಶಿಷ್ಯವೃತ್ತಿಯನ್ನುಕೊಡುವುದು. ಕೆಲಸದ ಅಗತ್ಯ ಇದ್ದವರಿಗೆ ಕೆಲಸ ಕೊಡಿಸುವ ವ್ಯವಸ್ಥೆಮಾಡುವುದು. ಕೆಲಸ ಮಾಡುವ ಅವಿವಾಹಿತ ಹೆಣ್ಣು ಮಕ್ಕಳಿಗಾಗಿ ವಸತಿಗೃಹಗಳನ್ನು ಏರ್ಪಡಿಸುವುದು.

೩. **ಪ್ರಶ್ನೆ:—** ಈಹೊತ್ತಿನ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಕುಟುಂಬದ ಸ್ವಾಸ್ಥ್ಯವನ್ನು ಹೇಗೆ ಉಳಿಸಲು ಬಂದೀತು.

**ಉತ್ತರ:—** ಪತಿಪತ್ನಿಯರಲ್ಲಿ ಪರಸ್ಪರರ ಬಗ್ಗೆ ಪೂರ್ಣ ವಿಶ್ವಾಸವು ಇರತಕ್ಕದ್ದು. ತಮ್ಮ ತಮ್ಮ ಮಕ್ಕಳ ಪ್ರವೃತ್ತಿಗಳಲ್ಲಿ ಬಹಳ ವ್ಯತ್ಯಾಸವಾಗದಂತೆ ತಮ್ಮ ಆಚಾರವಿಚಾರಗಳ ಮತ್ತು ಸಂಸ್ಕೃತಿಯ ಇಷ್ಟೇ ಪರಿಣಾಮವು ತಮ್ಮ ಮಕ್ಕಳ ಮೇಲೆ ಆಗುವಂತೆ ಎಚ್ಚರಿಕೆ ತೆಗೆದುಕೊಳ್ಳಬೇಕು. ಮಾನಸಶಾಸ್ತ್ರಜ್ಞರಿಂದ ಅತ್ಯಂತ ರಹಸ್ಯವಾಗಿ ಕುಟುಂಬಕ್ಕೆ ಬೇಕಾಗುವ ಸಲಹೆಯನ್ನು ಕೊಡುವ ಯೋಜನೆಯನ್ನು ಸ್ತ್ರೀಸಂಸ್ಥೆಗಳು ಮಾಡತಕ್ಕದ್ದು. ಸುಖವಿದು ಕೇವಲ ದುಡ್ಡನ್ನು ಅವಲಬಿಂಬಿಸಿದೆ. ಬದಲಾಯಿಸಿದ ಕಾಲಕ್ಕನುಸರಿಸಿ ತಮ್ಮ ಮತಗಳು ವ್ಯಾಪಕ ಮತ್ತು ಸಹಾನುಭೂತಿಪರ ಇರಬೇಕು. ಮತ್ತು ವ್ಯವಹಾರದಲ್ಲಿ ಶಕ್ಯವಿದ್ದಷ್ಟು ಆನಂದದ ವಾತಾವರಣವನ್ನು ಉಂಟುಮಾಡಲು ಪ್ರಯತ್ನಮಾಡಬೇಕು.

## ಕುಟುಂಬ ನಿಯೋಜನ ಮತ್ತು ವಿವಾಹ.

೪. **ಪ್ರಶ್ನೆ:—** ಮರ್ಯಾದಿತ ಕುಟುಂಬದ ಸಲುವಾಗಿ ಸಂತತಿ ಸಂಯಮನ ಮಾಡಲು ತೀರ ಕೆಳ ವರ್ಗದಲ್ಲಿ ಸಾಧನಗಳನ್ನು ಉಪಯೋಗಿಸುವುದು ಸ್ಥಳಾಭಾವದ ನಿಮಿತ್ತ ಸ್ವಚ್ಛತೆಯ ದೃಷ್ಟಿಯಿಂದ ಅಶಕ್ಯವಿರುತ್ತದೆ. ಮೇಲಾಗಿ ಸಾಧನಗಳ ನಿಶ್ಚಿತತೆಯು ಇನ್ನೂ ಅನಿಸುವುದಿಲ್ಲ. ಅಂದಮೇಲೆ ಅದಕ್ಕೆ ಆಪರೇಶನ್ ಇದೊಂದೇ ಉಪಾಯವೋ ಹೇಗೆ ಮತ್ತು ಇದರಿಂದ ಕೆಳವರ್ಗಗಳಲ್ಲಿ ಹೆಚ್ಚು ಅನೀತಿಯು ಬೆಳೆಯುವ ಸಂಭವವಿಲ್ಲವೇ ?

**ಉತ್ತರ:—** ನಮ್ಮ ದೇಶದಲ್ಲಿ ಕುಟುಂಬ ನಿಯೋಜನ ಕೇಂದ್ರಗಳ ಆವಶ್ಯಕತೆಯು ಬಹಳವಿದ್ದು ಅಲ್ಲಿ ಈ ವಿಷಯದ ಸಂಪೂರ್ಣಜ್ಞಾನವನ್ನು ಕೊಡಲ್ಪಡಬೇಕು. ಬದಲಾಯಿಸಿದ ಕಾಲಕ್ಕನುಗುಣವಾಗಿ ನಮ್ಮ ಮಕ್ಕಳನ್ನು ಸ್ವಲ್ಪ ಬದಲಾಯಿಸಿ ನಮ್ಮ ಸಂಸಾರವನ್ನು ಹಿಡತದಲ್ಲಿ ತರಬೇಕು. ನಾವು ಸಾಧನಗಳನ್ನು ಉಪಯೋಗಿಸುವುದರಲ್ಲಿ ಹೆಚ್ಚು ಎಚ್ಚರಿಕೆಯನ್ನು ತೆಗೆದುಕೊಳ್ಳುವುದಿಲ್ಲ. ಆದರಿಂದ ಅದರ ಪರಿಣಾಮ ಕಂಡುಬರುವುದಿಲ್ಲ. ನಿಜವಾಗಿ ನೋಡಿದರೆ ನಮ್ಮ ದೇಶದೊಳಗಿನ ಕಾಡು ಮತ್ತು ಅಶಿಕ್ಷಿತಭಗಿನಿಯರಿಗೆ ಸಜ್ಞಾನಿಗಳನ್ನು ಮಾಡಿ, ಅವರಿಗೆ ಈ ಸಂಗತಿಗಳನ್ನು ತಿಳಿಸಿ ಹೇಳಬೇಕು. ೩-೪ ಮಕ್ಕಳಾದಮೇಲೆ ಮಧ್ಯಮ ವರ್ಗದೊಳಗಿನ ಗಂಡಸರು ಆಪರೇಶನ್ ಮಾಡಿಸಿಕೊಂಡರೆ ಅವರ ಜೀವನದಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ.

(ಈಶ್ವರೀ ನೇಮದಂತೆ ನೋಡುತ್ತಿರಲಾಗಿ ಸಂತತಿ ನಿಯಮನದ ಉದ್ದೇಶವು ನಿಜವಾಗಿ ಸಫಲವಾಗುವುದಿಲ್ಲ. ಇದರಿಂದ ಸ್ತ್ರೀಪುರುಷರ ಮಿದುಳಿನಮೇಲೆ ಆಘಾತವಾಗುವುದಿಲ್ಲ. ವಿಶೇಷವಾಗಿ ಹೆಣ್ಣುಮಕ್ಕಳ ಜನನೇಂದ್ರಿಯಗಳಿಗೆ ಧಕ್ಕೆ ತಗಲಿ ಅವರ ವಿಶಿಷ್ಟರೋಗಗಳು ಹೆಚ್ಚಾಗುತ್ತವೆ. ಬಹಿರಂಗವಾಗಿ ಕುಟುಂಬ ನಿಯೋಜನೆ ಆದಾಗ್ಯೂ ಹೆಣ್ಣುಮಕ್ಕಳಿಗೆ ತೃಪ್ತಿಸಾಧ್ಯವಾಗಲಾರದು.)

೫. ಪ್ರಶ್ನೆ:—ಇತ್ತಿತ್ತಲಾಗಿ ಸುಶಿಕ್ಷಿತ ಗಂಡು ಹೆಣ್ಣು ಮಕ್ಕಳ ಲಗ್ನಗಳನ್ನು ಮಾಡುವದು ಪಾಲಕರಿಗೆ ಬಹಳ ಬಿಗಿಯಾಗಿ ಕೂತಿದೆ. ಇಂತಹ ವಿವಾಹಗಳು ಸುಲಭವಾಗಲು ಮಾರ್ಗ ಯಾವುದು?

ಉತ್ತರ:— ವಿವಾಹದ ವಿಷಯದಲ್ಲಿ ಪಾಲಕರು ಮತ್ತು ಹುಡುಗಿಯರು ತಮ್ಮ ತಮ್ಮ ಲಗ್ನವಿಷಯಕ್ಕೆ ದೃಷ್ಟಿಕೋನವನ್ನು ಬದಲಾಯಿಸಬೇಕು. ಹುಡುಗಿಯರಿಗೆ ಶಿಕ್ಷಣ ಕೊಡುವಾಗ, ಅದು ಯೋಜನೆಯುಕ್ತವಾಗಿರಬೇಕು. ಹುಡುಗಿಯರ ಆಕಾಂಕ್ಷೆಗಳು ದೊಡ್ಡವಿದ್ದಲ್ಲಿ ಸಾಧಾರಣವಾಗಿ ಹೆಣ್ಣುಮಕ್ಕಳ ಲಗ್ನ ಒದಗಿಸುವುದು ಬಿಗಿಯಿರುತ್ತದೆ. ಆದ್ದರಿಂದ ಅವರಿಗೆ ಪರಿಸ್ಥಿತಿಯ ಕಲ್ಪನೆಯನ್ನು ಚೆನ್ನಾಗಿ ಕೊಟ್ಟು ಶಿಕ್ಷಣಕೊಡಬೇಕು. ಮತ್ತು ಅವರ ಮನಸ್ಸುಗಳನ್ನು ಸಿದ್ಧಗೊಳಿಸಿಡಬೇಕು. ಹೆಣ್ಣುಮಕ್ಕಳಿಗೆ ಲಗ್ನ ಒದಗಿಸಿಕೊಳ್ಳಲು ಹೆಚ್ಚಿಗೆ ಸ್ವಾತಂತ್ರ್ಯಕೊಡಬೇಕು. ಮೊದಲು ತಪ್ಪುಗಳೇನೋ ಆಗಬಹುದು; ಆದರೆ ಅನುಭವದಿಂದ ಅವುಗಳನ್ನು ತಿದ್ದಿಕೊಳ್ಳಲಾಗುವುದು.

೬. ಪ್ರಶ್ನೆ:— ರೇಷನ್ ಮತ್ತು ಸಪ್ಲೈಡಿಪಾರ್ಟಮೆಂಟ್ ಮತ್ತು ಇತರ ಆಫೀಸುಗಳಲ್ಲಿ ಕೆಲಸಮಾಡುವಂಥ ಮಧ್ಯಮವರ್ಗದೊಳಗಿನ ಅವಿವಾಹಿತ ಹೆಣ್ಣುಮಕ್ಕಳ ಹಣೆಬರಹವೇನು ?

ಉತ್ತರ:— ಹೆಣ್ಣುಮಕ್ಕಳ ಭವಿತವ್ಯದ ವಿಚಾರಮಾಡುವಾಗ ಅವರ ಲಗ್ನದ್ದೇ ವಿಚಾರ ಮನಸ್ಸಿನಲ್ಲಿ ಬರುತ್ತದೆ. ಕೆಲವು ಹುಡುಗಿಯರು ತಮ್ಮ ಲಗ್ನವನ್ನು ತಾವೇ ಮಾಡಿಕೊಳ್ಳುವರು. ಕೆಲವು ಜನರಿಗೆ ಅಂಜಿಕೆ ಅಂಜಿಕೆ ಅನಿಸುವದೇನಂದರೆ, ಆರ್ಥಿಕ ಸ್ವಾತಂತ್ರ್ಯವು ಕಸಿದುಕೊಳ್ಳಲಾಗುವದೆಂಬ ಹೆದರಿಕೆಯಿಂದ ಕೆಲಸ ಮಾಡುತ್ತಿರುವ ಹುಡುಗಿಯರು ಲಗ್ನವೇ ಆಗಲಿಕ್ಕಿಲ್ಲ. ಆದರೆ ಈ ಅಂಜಿಕೆಯು ಸರಿಯಾಗಿಲ್ಲ. ಏಕೆಂದರೆ ತಮ್ಮ ಮನೆತನದ ಕುಟುಂಬದ ಸೇರಿಕೆಯು ಸ್ವಾಭಾವಿಕವಾಗಿರುವುದರಿಂದ ಲಗ್ನವಾಗದೆ ಹೆಣ್ಣುಮಕ್ಕಳು ಎಂದೂ ಇರಲಾರರು.

೭. ಪ್ರಶ್ನೆ:— ತುಟ್ಟಿ ರಾಕ್ಷಸವು ಎಲ್ಲರನ್ನೂ ಅಂಜಿಸುತ್ತಿದೆ. ಶಿಕ್ಷಣವು ತುಟ್ಟಿಯಾಗಿದ್ದರಿಂದ, ಶಿಕ್ಷಣದ ಪ್ರಶ್ನೆಯು ಪಾಲಕರಿಗೆ ಬಹಳ ತಾಪದಾಯಕದಾಗಿದೆ. ಬೆಳೆದ ಫೀ, ಪುಸ್ತಕ ಮುಂತಾದ ಖರ್ಚಿನ ಸಂಗತಿ ಸುಲಭ ಹೇಗೆ ಮಾಡಬಹುದು ?

**ಉತ್ತರ:—** ಸದ್ಯದ ಪರಿಸ್ಥಿತಿಯಲ್ಲಿ ಶಿಕ್ಷಣವು ತುಟ್ಟಿಆಗಿಯೂ ಹುಡುಗರಿಗೆ ಒಳ್ಳೆ ಶಿಕ್ಷಣವು ಸಿಗುತ್ತಿರುವುದಿಲ್ಲ. ಇದಕ್ಕಾಗಿ ಪಾಲಕರು ಮತ್ತು ಶಿಕ್ಷಕರ ಸಹಕಾರ ಆಗತ್ಯ. ಪಾಲಕರ ಸಂಘ ಬೇಕು. ಸಣ್ಣ ಪುಟ್ಟ ಫೀಗಳನ್ನು ಕಡಿಮೆಮಾಡಬೇಕು. ಹುಡುಗರ ಶಿಕ್ಷಣದ ಕಡೆಗೆ ಪಾಲಕರು ಅಲಕ್ಷ್ಯಮಾಡದೆ ಶಿಕ್ಷಕರ ಕೂಡ ಸಹಕಾರ ಮಾಡಬೇಕು ಮತ್ತು ವಿಚಾರವಿನಿಮಯಮಾಡಬೇಕು. ಶಾಲೆಯ ವಾಚನಾಲಯಗಳನ್ನು ಚೆನ್ನಾಗಿ ವಿಕಾಸ ಗೊಳಿಸಬೇಕು. ಟ್ಯೂರ್ಷ ಇಡುವುದು ಮಧ್ಯಮವರ್ಗಕ್ಕೆ ಬಹಳ ಜಡವಾಗುವುದು. ಶಾಲೆಯಲ್ಲಿಯ ಶಿಕ್ಷಣವೇ ಅಚ್ಚುಕಟ್ಟಾಗಿದ್ದರೆ ಟ್ಯೂರ್ಶ ಆಗತ್ಯವೇ ಅನಿಸಲಿಕ್ಕಿಲ್ಲ !



## § ಕಾಯದೆ-ಕಾನೂನು §

೧. **ಪ್ರಶ್ನೆ:—** ನನ್ನಗಂಡನು ನನ್ನನ್ನು ಬಿಟ್ಟುಹೋಗಿದ್ದಾನೆ ಮತ್ತು ಅವನು ಕೆಟ್ಟನಡತೆಯವನಿದ್ದಾನೆಂದು ಸುದ್ದಿಯಿದೆ. ವೃತ್ತಪತ್ರಗಳಲ್ಲಿ ಜಾಹೀರ ನೋಟೀಸು ಕೊಟ್ಟು ನನಗೆ ಎರಡನೆಯ ಲಗ್ನ ಆಗಲು ಬರುವುದೋ ?

**ಉತ್ತರ:—** ಇಲ್ಲ. ಜಾಹೀರ ನೋಟೀಸ ಕೊಡುವುದರಿಂದ ಕೆಲಸವಾಗದು. ಗಂಡನು ಬಿಟ್ಟು ನಾಲ್ಕುವರ್ಷಗಳಾಗಿವೆಯೆಂದು ಸಿದ್ಧಮಾಡಿ ಕೋರ್ಟಿನ ಮುಖಾಂತರ ಘಟಸ್ಫೋಟವನ್ನು ಪಡೆಯಿರಿ. ಕೆಟ್ಟನಡತೆಯವನೆಂದು ಕೇವಲ ಸುದ್ದಿ ಉಪಯೋಗದ್ದಿಲ್ಲ.

೨. **ಪ್ರಶ್ನೆ:—** ಲಗ್ನವಾಗಿ ೪-೫ ವರ್ಷಗಳಾಗಿವೆ. ಆಗಾಗ್ಗೆ ನನ್ನನ್ನು ಹೊಡೆದು ನನ್ನ ಗಂಡನು ತವರು ಮನೆಗೆ ಆಗಾಗ್ಗೆ ಕಳುಹಿಸುತ್ತಲಿದ್ದಾನೆ. ಮತ್ತು ಮನ ಬಂದಂತೆ ವರ್ತಿಸುತ್ತಲಿದ್ದಾನೆ. ಹೀಗೇಕೆ ಮಾಡುತ್ತೀರಿ ಎಂದು ಕೇಳಿದರೆ, ನಾನು ಗಂಡಸಿರುವೆನು ಕಾಯಿದೆ ಬೇಕಾದ್ದಿದ್ದರೂ ನನ್ನ ಕೈ ಹಿಡಿಯುವವರಾರು ಎಂದು ಕೇಳುತ್ತಾನೆ. ನನಗೆ ಎರಡನೆಯ ಲಗ್ನ ಆಗಲು ಬರುವುದೋ ? ನನ್ನ ಇಷ್ಟವು ಲಗ್ನದಕಿಂತ ನನ್ನ ಗಂಡನ ಕಾಟದಿಂದ ದೂರವಿಬೇಕೆನ್ನುವುದಿರುತ್ತದೆ.

**ಉತ್ತರ:—** ನೀವು ಹಿಂದೂ ಇದ್ದು ಹಿಂದೂ ಪದ್ಧತಿಯಿಂದ ಲಗ್ನವಾಗಿದ್ದರೆ ಮೇಲಿನ ಕಾರಣದ ಸಲುವಾಗಿ ಬಿಡುಗಡೆ ಸಿಗಲಾರದು. ಮುಂಬಯಿ ಪ್ರಾಂತದ ಕಾಯಿದೆ ಇರುವುದೇನೆಂದರೆ, ಯಾವದಾದರೂ ಹೆಣ್ಣುಮಗಳು ಯಾವಾತನ ಅಪವಸ್ತ್ರ ಇರುವಳೆಂದು ಸಿದ್ಧಮಾಡಿದಲ್ಲಿ ಮಾತ್ರ ಬಿಡುಗಡೆ ಸಿಗುವುದು. ಕೇವಲ

ಸಂಶಯದಿಂದ ಲಾಭವಿಲ್ಲ. ವಿಶೇಷವಾಗಿ ಗಂಡಸರ ವಿಷಯದಲ್ಲಿ ಇದನ್ನು ಸಿದ್ಧ ಮಾಡುವುದು ಬಹಳ ಬಿಗಿಯಿರುತ್ತದೆ. (೧) ಹೆಣ್ಣು ಮಕ್ಕಳು ಇಂತಹ ವಿಷಯ ಗಳಲ್ಲಿ ಸತ್ಯವಾಗಿರುವುದಿಲ್ಲ. (೨) ಲೋಕ ರೂಢಿಗೆ, ಪಾವಿತ್ರ್ಯಕ್ಕೆ ಮತ್ತು ಕೋರ್ಟು ಗಳಲ್ಲಿ ವಕೀಲರು ಕೇಳುವ ಅಡ್ಡ ತಿಡ್ಡ ಪ್ರಶ್ನೆಗಳಿಗೆ ಹೆಣ್ಣುಮಕ್ಕಳು ಹೆದರಿಕೊಂಡು ಬಾಯಲ್ಲಿ ಕಡುಬು ಹಾಕಿಕೊಂಡು ಕೂಡ್ರುವರು. ಆದ್ದರಿಂದ ಜ್ಞಾನಪ್ರಸಾರದಿಂದ ಕಾಯಿದೆ ಅರಿವು ಅವರಲ್ಲಿ ಹುಟ್ಟಿಸುವುದಕ್ಕಾಗಿ ಹೆಣ್ಣು ಮಕ್ಕಳಲ್ಲಿ ಸಂಘಟಿತ ಪ್ರಯತ್ನದ ಅವಶ್ಯಕತೆ ಇರುತ್ತದೆ. ಇದು ಸಾಧ್ಯವಾಗುವವರೆಗೆ ಎಂದಿನಂತೆ ಅವರು ಎಷ್ಟೋ ಅನ್ಯಾಯಗಳನ್ನು ಸಹಿಸಬೇಕಾಗುವುದು. ಯಾರಿಂದ ಯಾರಿಗೂ ತ್ರಾಸಾಗಬಾರದೆಂದು ಕಾಯಿದೆಯಿದ್ದಾಗ್ಯೂ ಇದ್ದ ಕಾಯಿದೆಗಳ ಉಪಯೋಗಮಾಡಿ ಕೊಳ್ಳುವಷ್ಟು ಅರಿವು ಹೆಣ್ಣುಮಕ್ಕಳಿಗೆ ಸಾಕಷ್ಟು ಇಲ್ಲದಿರುವುದರಿಂದ ಗಂಡ ಹೆಂಡರ ಜಗಳದಲ್ಲಿ ಹೆಂಗಸರಿಗೆ ಸಹಾಯ ಮಾಡುವವರು ಯಾರೂ ಸಿಗುವುದಿಲ್ಲ. ಈ ಕೆಲಸ ವನ್ನು ಸಂಘ ಸಂಸ್ಥೆಗಳೇ ಮೇಲೆ ತೆಗೆದುಕೊಳ್ಳಬೇಕು.



# ಹಿಂದುಳಿದ ಸಮಾಜದವರಿಗೆ ಸಾಂಸ್ಕೃತಿಕ ಶಿಕ್ಷಣ

ಬೇಡರ-ಸಮಾಜದವರಿಗೆ, ಸಾಂಸ್ಕೃತಿಕ ಶಿಕ್ಷಣಕೊಡುವ ಉದ್ದೇಶದಿಂದ ಬೆಳಗಾಂವಿಯ ಹತ್ತಿರಿರುವ ನರಸಿಂಹಪುರ ಸರ್ವೋದಯ ಕೇಂದ್ರದವರು ೧೯೫೦-೫೧. ಹಾಗು ೧೯೫೧-೫೨ ರಲ್ಲಿ ಗಂಡಸರಿಗಾಗಿ ಒಂದೊಂದು ಹಾಗು ಹೆಣ್ಣುಮಕ್ಕಳ ಸಲುವಾಗಿ ಒಂದೊಂದು, ಹೀಗೆ ನಾಲ್ಕು ಸಂಸ್ಕೃತಿ ಶಿಕ್ಷಣ ಶಿಬಿರಗಳನ್ನು ನಡೆಸಿದರು.

ಗಂಡಸರ ಶಿಬಿರದಲ್ಲಿ ನಾಗರಿಕ ನೀತಿ ಖಾದೀ ಹಾಗು ಗ್ರಾಮೋದ್ಯೋಗದ ಸುಲಭ ಅರ್ಥಶಾಸ್ತ್ರ. ನೂಲುವದು, ನೇಯುವದು, ಒಕ್ಕಲತನದ ಸುಧಾರಿಸಿದ ಪದ್ಧತಿ, ಸಾರ್ವಜನಿಕ ಆರೋಗ್ಯ, ಮುಂತಾದ ವಿಷಯಗಳ ಮೇಲೆ ತಜ್ಞರ ವ್ಯಾಖ್ಯಾನಗಳನ್ನು ಏರ್ಪಡಿಸಲಾಗಿತ್ತು. ೧೯೫೦-೫೧ ರ ಶಿಬಿರದಲ್ಲಿ, ೫೫ ಜನರೂ ೧೯೫೧-೫೨ ಶಿಬಿರದಲ್ಲಿ ೫೦ ಜನರೂ ಶಿಕ್ಷಣ ಹೊಂದಿದರು.

ಹೆಣ್ಣುಮಕ್ಕಳ ಶಿಬಿರದಲ್ಲಿ, ಗೃಹನಿರ್ವಹಣ ಶಾಸ್ತ್ರ, ಸ್ತ್ರೀಯರ ಸಾಮಾಜಿಕ ಕರ್ತವ್ಯಗಳೂ ಹೊಣೆಗಳೂ, ರಾಷ್ಟ್ರದ ಏಳ್ಗೆಯಲ್ಲಿ ಸ್ತ್ರೀಯರ ಸ್ಥಾನ, ಸಾರ್ವಜನಿಕ



[ ಸ್ತ್ರೀ ಶಿಕ್ಷಣ ಶಿಬಿರ ]

ಹಾಗೂ ವೈಯಕ್ತಿಕ ಸ್ವಚ್ಛತೆ, ಬಾಲಸಂಗೋಪನ, ಮುಂತಾದ ವಿಷಯಗಳ ಮೇಲೆ ವ್ಯಾಖ್ಯಾನಗಳನ್ನು ಏರ್ಪಡಿಸಲಾಗಿತ್ತು. ೧೯೫೦-೫೧ ರ ಶಿಬಿರವು ಕಾಮೇವಾಡಿಯಲ್ಲಿ ನಡೆಯಿತು. ಅದರಲ್ಲಿ ೩೫ ಮಹಿಳೆಯರು ಶಿಕ್ಷಣಹೊಂದಿದರು. ೧೯೫೧-೫೨ರ ಶಿಬಿರವು ಮಣೆಗುತ್ತಿಯಲ್ಲಿ ನಡೆಯಿತು. ಅದರಲ್ಲಿ ೨೦ ಮಹಿಳೆಯರು ಶಿಕ್ಷಣ ಹೊಂದಿದರು. ಈ ಶಿಬಿರದಲ್ಲಿ ನೂಲುವದಕ್ಕೆ ಪ್ರಾಧಾನ್ಯಕೊಡಲಾಗಿತ್ತು. ಶಿಕ್ಷಣ ಹೊಂದಿದವರೆಲ್ಲರೂ ವಸ್ತ್ರ ಸ್ವಾವಲಂಬಿಗಳಾಗಿರುವರು. ಅವರೀಗ ತಮ್ಮ ಬಟ್ಟೆಗಳನ್ನು ತಾವೇ ನೂತ ನೂಲಿನಿಂದ ತಯಾರಿಸಿಕೊಳ್ಳುತ್ತಿದ್ದಾರೆ.

ಈ ಸಾಂಸ್ಕೃತಿಕ ಶಿಕ್ಷಣ ಶಿಬಿರಗಳಲ್ಲಿ ಕೊಡಲಾದ ಶಿಕ್ಷಣದ ಪ್ರಭಾವವು ಶಿಕ್ಷಣ ಹೊಂದಿದವರ ಜೀವನದ ಮೇಲಂತೂ ಆಗಿಯೇ ತೀರಿದೆ. ಅಲ್ಲಿಗೆ ಅವರ ಬಾಳಿನ ಬೆಳಕು ಅನ್ಯರ ಮೇಲೂ ತನ್ನ ಪ್ರಭಾವ ಬೀರದೇ ಇಲ್ಲ. ಈ ಸ್ತ್ರೀ ಪುರುಷರು ಸರ್ವೋದಯ ಕ್ಷೇತ್ರದಲ್ಲಿ ನವಜೀವನದ ಸಂದೇಶವಾಹಕರಾಗಿದ್ದಾರೆ.

**ಎನ್. ಎಲ್. ಕುಲಕರ್ಣಿ,**

ಪ್ರಾದೇಶಿಕ ಪ್ರಸಿದ್ಧಿ ಅಧಿಕಾರಿಗಳ ಪರವಾಗಿ

ಧಾರವಾಡ.





# ಸಾದರ ಸ್ವೀಕಾರ

(೧) **ಅರುಣೋದಯ:**— ಬಳಗಾನೂರಿನಿಂದ ಹೊರಡುವ ಏಕೈಕ ಮಾಸಪತ್ರಿಕೆ. ಸಂಪಾದಕರು ಮತ್ತು ಪ್ರಕಾಶಕರು ಮೇರ್ಡಿಭುಜಂಗ ಹೆಗ್ಡೆ. ಬಿಡಿ ಪತ್ರಿಕೆ. ೬ ಆ. ವಾರ್ಷಿಕ ಚಂದಾ ೫ ರೂ ಭುಜಂಗ ಹೆಗ್ಡೆ ಇವರಿಂದ ಅರುಣೋದಯ ಕಾರ್ಯಾಲಯ ಬಳಗಾನೂರಿನಲ್ಲಿ ಪ್ರಕಾಶಿಸಲ್ಪಟ್ಟಿತು. ೪೧ ಪುಟಗಳು ಸಂಪುಟ ೧. ಸಂಚಿಕೆ ೩.

## —ವಿಮರ್ಶೆ—

೨. **ಜನತಾ ಆರೋಗ್ಯ :** ಜನತಾ ಆರೋಗ್ಯ ಧಾಮ, ಸಾಂಗಲಿಯಿಂದ ಹೊರಡುವ ಮಾಸಪತ್ರಿಕೆ. ಸಂಪಾದಕರು : ಡಿ. ಎಸ್. ಕುಲಕರ್ಣಿ, ಬಿ.ಎ.(ಆ.) ವಾರ್ಷಿಕ ಚಂದಾ ೬ ರೂಪಾಯಿ. (ಫೆಬ್ರುವರಿ ಸಂಚಿಕೆ)

ಜನತಾ ಆರೋಗ್ಯವು ಹೊಸ ವರುಷದ ಪ್ರಾರಂಭಕ್ಕೇ ಮೂರು ಭಾಷೆಗಳ ಸಾಹಿತ್ಯವನ್ನು ಹೊತ್ತುಕೊಂಡು ಹೊರಹೊರಟಿತು. ಮರುತಿಂಗಳಲ್ಲೇ ಮತ್ತೆ ಹೊಸ ರೂಪವನ್ನು ತಾಳಿತು. ಕನ್ನಡ, ಹಿಂದೀ ಲೇಖಗಳೆರಡೂ ಇದರಲ್ಲಿವೆ.

ಪೂರೈಕೆ ಶಾಖೆಯ ನೌಕರರ ನಿರುದ್ಯೋಗದ ಸಮಸ್ಯೆ, ಆಹಾರ ವಿಜ್ಞಾನದ ವಿಚಾರ, ನನ್ನ ತೋಟ, ಇವಿಷ್ಟನ್ನೇ ಓದಿದಾಗ ಇದೇನೋ ' Grow more Food ' ಪ್ರಚಾರಕ್ಕೆ ಸಂಬಂಧಪಟ್ಟದ್ದೇನೋ ಎಂದೆನಿಸುತ್ತದೆ. ಇವುಗಳಲ್ಲಿ ಬರುವ ವಿವರವಾದ ವೈಜ್ಞಾನಿಕ ವಿಚಾರವನ್ನು ಮೆಚ್ಚಲೇಬೇಕು. ಆದರೆ ಪ್ರಾರಂಭದಲ್ಲಿ ಬರುವ ವಿಚಾರ ಅಧ್ಯಾತ್ಮದ ಮೂಲಕ ಮಾನವರ ಒಕ್ಕಟ್ಟು ನಮ್ಮನ್ನು ಸ್ಥಳಾಂತರಿಸುತ್ತದೆ; ಇವುಗಳ ಮಧ್ಯೆ ಪತ್ತೇದಾರಿ ಕಥೆ ಮಾತ್ರ ದಾರಿ ತಪ್ಪಿಬಂದಂತೆ ಭಾಸವಾಗುತ್ತದೆ. ಇದಕ್ಕೆ ಬದಲಾಗಿ ಲಲಿತ ಸಾಹಿತ್ಯದ ಮಾದರಿಯೊಂದು ಬಂದಿದ್ದರೆ ಚೆನ್ನಾಗಿತ್ತು ! ಅಂತೂ ಪ್ರಸ್ತುತ ವಿಷಯಗಳನ್ನು, ವಾಸ್ತವಿಕ ಸಮಸ್ಯೆಗಳನ್ನು ಎದುರಿಸುವ ಪ್ರವೃತ್ತಿ ಪತ್ರಿಕೆಗಿದೆ.

ಹಿಂದೀ ಲೇಖನಗಳಲ್ಲೂ, ಒಳ್ಳೆಯ ವಿಷಯುಗಳನ್ನು ಜನತೆಗೆ ತಿಳಿಸಿಕೊಡುವದಾದರೆ ಇನ್ನಿಷ್ಟು ಪುಟಗಳನ್ನು ಕೊಡಬೇಕಾದುದು ಅನಿವಾರ್ಯವೆಂದೆನಿಸುತ್ತದೆ.

ಮುಖಪತ್ರದ ಹೊದಿಕೆ ಅಂದವಾಗಿದೆ : 'ಜನತಾ ಆರೋಗ್ಯ,' ಜನತೆಯ ಸಾಂಸ್ಕೃತಿಕ ಆರೋಗ್ಯವನ್ನೂ ಬೆಳಿಸಲು ಸಹಾಯಕಾರಿಯಾಗಲಿ !

**ಕುಡಿಮಿಂಚು:—** ಶ್ರೀ. ಎನ್. ಎಸ್. ಗದಗಕರ, ಧಾರವಾಡ.

ಇದೊಂದು ಚಿಕ್ಕ ಲೇಖನಗಳ ಸಂಗ್ರಹ. ವಿಚಾರ ಪ್ರಚೋದಕವಾದ ವಿಷಯ ವಿವೇಚನಾಕ್ರಮ, ಅದಕ್ಕೆ ತಕ್ಕ ಚುರುಕಾದ ಭಾಷೆ ಇವುಗಳಿಂದ ಪುಸ್ತಕವು ಆಕರ್ಷಣೀಯವಾಗಿದೆ.

ಮುನ್ನುಡಿಯ ಲೇಖಕರು ಹೇಳುವಂತೆ ಜನತೆಗೆ ಇಂಥ ಬರೆಹಗಳು ಆವಶ್ಯಕವೆನಿಸಹತ್ತಿದೆ. ಹೆಚ್ಚು ಕಾಲ ಪರಿಶ್ರಮಪಟ್ಟು ಓದಿ ವಿವೇಚಿಸಿ ತಿಳಿದುಕೊಳ್ಳಲು ಜನರಿಗೆ ಅವಕಾಶವಿಲ್ಲ. ಅಂಥ ಮನೋವೃತ್ತಿಯೂ ಇಲ್ಲ. ಇಂಗ್ಲಿಷಿನಲ್ಲಿ ಇಂಥ ಗ್ರಂಥಗಳು ಹೇರಳವಾಗಿವೆ. ಕನ್ನಡದಲ್ಲಿ ಈ ಹೊಸ ಮಾದರಿಯ ಬರೆಹಗಳು ಇನ್ನು ಹೆಚ್ಚಾಗಿ ಬೆಳಕಿಗೆ ಬರಬೇಕಾಗಿದೆ. ಓದುಗರು ಪ್ರೋತ್ಸಾಹಿಸಬೇಕು.

**ಅಮರವಾಣಿ:—** ಸಾರಸ್ವತ ಮಾಸಪತ್ರಿಕೆ. ಸಂಪಾದಕರು ಶ್ರೀ. ಬಿ. ಎಮ್ ಧೀರೇಶ್ವರ ಶಾಸ್ತ್ರಿಗಳು ಇದರಲ್ಲಿ ಚಿಕ್ಕ ಕವನ. ಸಂಪಾದಕೀಯ ವಿಚಾರಗಳು ಚಿಕ್ಕ ಕಥೆ ಮೊದಲಾದ ವಾಚನೀಯ ಬರೆಹಗಳು ಪ್ರಕಟವಾಗುವವು. ಕನ್ನಡಿಗರು ಓದಿ ಪ್ರೋತ್ಸಾಹಿಸಬಹುದೆಂದು ಆಶಿಸುತ್ತೇವೆ.

# ಸತ್ಯವಾನ – ಸಾವಿತ್ರಿ.



ದಿನಾಂಕ ೫-೩-೫೩ ಕ್ಕೆ ಬಿತ್ತರಿಸಿದ ಗೀತ ನಾಟಕ. ಶ್ರೀಮಾನ ಶಿವರಾಮ ಕಾರಂತರಿಂದ ಬರೆಯಲ್ಪಟ್ಟು ಅವರಿಂದಲೇ ನಿರ್ದೇಶಿಸಲ್ಪಟ್ಟಿದೆ.

ಇದರಲ್ಲಿ ಮುಖ್ಯವಾಗಿ ನಾರದನ ಪಾತ್ರವಹಿಸಿದವರು ಉತ್ತಮರೀತಿಯಿಂದ, ಭಾವ ಹೊರಹೊಮ್ಮುವಂತೆ ಹಾಡಿದರು. ಉಳಿದ ಮುಖ್ಯ ಪಾತ್ರಗಳಾದ ಸತ್ಯವಾನ ಸಾವಿತ್ರಿ ಸಾಧಾರಣಮಟ್ಟಿಗೆ ತಮ್ಮ ಪಾತ್ರವನ್ನು ವಹಿಸಿದರೆಂದು ಹೇಳಬಹುದು. ಸತ್ಯವಾನನ ಪಾತ್ರವಹಿಸಿದವರ ಕಂಠ ಇಂಪಾಗಿದೆ. ಆದರೆ ಭಾವವರಳುವಂತೆ ಹಾಡುವ ಶೈಲಿಯು ಇದ್ದಿಲ್ಲ.

ಸಾವಿತ್ರಿ ಪಾತ್ರವಹಿಸಿದವರ ಧ್ವನಿ ಕೆಲವು ಕಡೆಗೆ ಅನವಶ್ಯಕ ಕಂಪನಗೊಳ್ಳುತ್ತಿತ್ತು. ಅವರ ಧ್ವನಿಯು ಸ್ವಭಾವವೇ ಹಾಗಿದ್ದಲ್ಲಿ, ಆ ಕುಂದನ್ನು ಸುಧಾರಿಸಲು ಸಾಧ್ಯವಿಲ್ಲ. ತಮ್ಮ ಆಳವಿನಲ್ಲಿ ನಿಲ್ಲದ ಧ್ವನಿಯಿಂದ ಪಾತ್ರ ಪರಿಮಿತಿಯು ನಿಲ್ಲಲು ಸಾಧ್ಯವಿಲ್ಲ. ಭಾವದುಂಬಿ ಬರುವ ಸಹಜ ಧ್ವನಿ ಗೀತ ನಾಟಕಕ್ಕೆ ಒಪ್ಪುವುದು ಎಂದು ಬೇರೆ ಹೇಳಬೇಕಾಗಿಲ್ಲ.

ಇನ್ನುಳಿದ ಪಾತ್ರಗಳು ವಿಮರ್ಶೆಯ ಒರೆಗಲ್ಲಿಗೆ ಹತ್ತಲಾರವು. ಯಮನ ಪಾತ್ರವಂತೂ ಬಾಯ್ದೆರೆದರೆ ಅಣಕಿಸುವಂತೆ ಭಾಸವಾಗುತ್ತಿತ್ತು. ಒಟ್ಟಿನಮೇಲೆ ಗೀತನಾಟಕವು ಪರಿಣಾಮಕಾರಿಯಾಗಲಿಲ್ಲ. ರಾಗದಾರಿಯಿಂದ ಕೆಲವೊಂದು ವಾಕ್ಯ ಸಮುದಾಯವನ್ನು ಉಚ್ಚರಿಸಿದರೆ ನಾಟಕವಾಗಲಾರದು.

ಕೆಲವು ರಾಗಗಳು ರಸಕ್ಕೆ ತಕ್ಕಂತೆ ಇದ್ದಿಲ್ಲ. ಭೈರವಿಯು ಕೊನೆಯಲ್ಲಿ ಬಂದಿದ್ದರೆ ಒಳ್ಳೇದಿತ್ತು. ನಾಟಕದ ಮಧ್ಯದಲ್ಲಿ ಉಪಯೋಗಿಸಿದ್ದರಿಂದ ರಸಭಂಗವಾಯಿತು.

ಭಾವನೆ ತಿಳಿದು, ಶಬ್ದದೊಳಗಿನ ಅರ್ಥವು ಅರಳುವಂತೆ ಹಾಡುವ ಕಲಾವಿದರನ್ನು ಕಲೆಹಾಕಿ ಇನ್ನು ಮುಂದೆ ಗೀತನಾಟಕ ಮಾಡಬೇಕೆಂದು ಹೇಳದಿರಲಾರೆವು. ಕೇಳುಗರ ಮೇಲೆ ಒತ್ತಾಯದಿಂದ ಇಂಥನಾಟಕ ಹೇರುವದು, ತಲೆನೋವು ತಂದಂತೆಯೇ ಸರಿ.

"ಧೀರೇಂದ್ರ"



# ವೀರಮಾತೆ




**ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಿಟ್ಟ**

**ಕನ್ನಡ ಮಾಸಪತ್ರಿಕೆ.**

ಸಂಪುಟ ೧ } ನೋ ೧೯೫೪ ವೈಶಾಖ { ಸಂಚಿಕೆ ೧೨


## ಸಂಪಾದಕೀಯ

### ಕುಟುಂಬ ಯೋಜನೆಯ ಕ್ರಮ.

ಭಾರತದಲ್ಲಿ ಕುಟುಂಬ ಯೋಜನೆಯ ಕಾರ್ಯಕ್ರಮದ ಅವಶ್ಯಕತೆಯನ್ನು ಮನಗಂಡು, ಕೇಂದ್ರ ಸರಕಾರದ ಆರೋಗ್ಯ ಶಾಖೆಯವರು ಇದಕ್ಕಾಗಿ ಕೂಡಲೆ ಒಂದು ಸಮಿತಿಯ ರಚನೆಯನ್ನು ಕೈಕೊಳ್ಳಲಿದ್ದಾರೆ. ಈಗ ಸಿದ್ಧವಾಗಿರುವ ಪಂಚ-ವಾರ್ಷಿಕ ಯೋಜನೆಯಲ್ಲಿ, ಕುಟುಂಬ ಯೋಜನೆಯೂ ಒಂದಾಗಿದೆ. ಈ ಯೋಜನೆಯನ್ನು ಬಳಕೆಯಲ್ಲಿ ತರುವಾಗ ಬರುವ ಸಮಸ್ಯೆಗಳನ್ನು ಅಭ್ಯಸಿಸಿ, ಅವುಗಳಿಗೆ ನಿವಾರಣೋಪಾಯಗಳನ್ನು ಕೈಕೊಳ್ಳುವದೇ ಈ ಸಮಿತಿಯ ಉದ್ದೇಶ!

ತಾಯಿಯ ಆರೋಗ್ಯ ಸರಿಯಾಗಿ ಸುವ್ಯವಸ್ಥಿತವಾಗಿದ್ದು, ಮಕ್ಕಳಿಗೆ ಯೋಗ್ಯ ಪಾಲನೆ ಪೋಷಣೆ ದೊರೆಯದೆ ಕುಟುಂಬದ ಆರೋಗ್ಯ ಸರಿಯಾಗಿರದು; ಕುಟುಂಬ ಸಮಾಜದ ಘಟಕ. ಸಾರ್ವಜನಿಕ ಆರೋಗ್ಯವನ್ನು ಕುರಿತು ವಿಚಾರಿಸುವಾಗ ಸಂಬಂಧಪಟ್ಟ ಸಂಸ್ಥೆಗಳು ಈ ಕುಟುಂಬ ಯೋಜನೆಯ ಬಗ್ಗೆಯೂ ಲಕ್ಷ್ಯಪೂರೈಸುವದು ಅವಶ್ಯ. ಯೋಜನಾ ಆಯೋಗವು ಈ ಬಗ್ಗೆ ಈಗಾಗಲೇ

ಅಭ್ಯಾಸಮಾಡಿ, ಭಾರತದಲ್ಲಿ ಪ್ರಜಾಸಂಖ್ಯೆ ವೇರೆ ಮೀರಿ ಬೆಳೆಯುವದಕ್ಕೆ ಕಾರಣಗಳೇನು, ದೇಶದಲ್ಲಿ ಆರೋಗ್ಯ ಸಂಪನ್ನ ಪ್ರಜೆಗಳ ಸಂಖ್ಯೆ ಬೆಳೆಯಬೇಕಾದರೆ ಉಪಾಯವೇನು ಎಂಬುದಕ್ಕೆ ಸೂಕ್ತಸಲಹೆಗಳನ್ನು ಸೂಚಿಸಿದೆ. ಸರಕಾರೀ ದವಾಖಾನೆಗಳಲ್ಲಿ ಸಾರ್ವಜನಿಕ ಆರೋಗ್ಯ ಸಂಸ್ಥೆಗಳಲ್ಲಿ ಕುಟುಂಬ ಯೋಜನೆಯ ಬಗ್ಗೆ ಸರ್ವರಿಗೂ ಸೂಕ್ತಸಲಹೆ ದೊರೆಯುವಂತೆ ಏರ್ಪಾಟು ಮಾಡಲಾಗಿದೆ. ಅಲ್ಲದೆ ಪಂಚವಾರ್ಷಿಕ ಯೋಜನೆಯಲ್ಲಿ ಕೇಂದ್ರ ಸರಕಾರವು ಕುಟುಂಬ ಯೋಜನೆಯ ಕಾರ್ಯಕ್ರಮಕ್ಕಾಗಿ ಆರೋಗ್ಯ ಶಾಖೆಗೆ ೬೫ ಲಕ್ಷ ರೂಪಾಯಿ ಕೊಡಮಾಡಿದೆ.

ಭಾರತೀಯರ ದೈಹಿಕ, ಸಾಂಪತ್ತಿಕ ಮನೋವೈಜ್ಞಾನಿಕ ಸ್ಥಿತಿಗತಿಗಳ ಸೂಕ್ಷ್ಮ ಅಭ್ಯಾಸಮಾಡಿ, ಈ ಕುಟುಂಬ ಯೋಜನೆಯ ಮೇರೆಗೆ ಜನನ ನಿಯಂತ್ರಣವನ್ನು ಬಳಕೆಯಲ್ಲಿ ತರಲು ಸಂಶೋಧನ ಕೇಂದ್ರಗಳನ್ನು ಅಲ್ಲಲ್ಲಿ ತೆರೆಯಲಾಗಿದೆ. ಆದರೆ ಇವು ಸರಕಾರೀ ಸಂಸ್ಥೆಗಳಲ್ಲ, ಜನರೇ ನಡೆಸಿದವುಗಳು. ಯೋಜನಾ ಆಯೋಗದ ಸಹಾಯವನ್ನು ಈಗ ಈ ಸಂಸ್ಥೆಗಳು ಬೇಡುತ್ತಿವೆ. ಈಗ ನಿಯಮಿಸಲ್ಪಡುವ ಕುಟುಂಬ ಯೋಜನೆಯ ಸಮಿತಿಯು ಈ ಎಲ್ಲ ಸಂಘ ಸಮಿತಿಗಳ ಕಾರ್ಯವನ್ನು ಪರಿಶೀಲಿಸಿ, ಯಾವ ರೀತಿಯಲ್ಲಿ ಕಾರ್ಯ ಮುಂದುವರಿಯಬೇಕು, ಈ ಸಂಸ್ಥೆಗಳಿಗೆ ಎಂತಹ ಸಹಾಯ ಬೇಕು ಎಂಬುದನ್ನು ಕುರಿತು ಯೋಚಿಸಿ, ಕಾರ್ಯಕೈಕೊಳ್ಳಲಿದೆ.

ಕುಟುಂಬನಿಯೋಜನೆಯ ಕ್ರಮ ಒಂದು ಪೀಳಿಗೆಯ ಜನಕ್ಕೆ ಆಘಾತವಾದರೆ, ಇನ್ನೊಂದು ಪೀಳಿಗೆಗೆ ಸಹಜವಾದೀತು; ಇವೆರಡರ ನಡುವಿನ ಪೀಳಿಗೆ ಮಾತ್ರ ಸಂಘರ್ಷದಲ್ಲಿ ಸಿಕ್ಕು ಹೊಯ್ದಾಡುವದು!

* * * *

## ರಾಷ್ಟ್ರೀಯ ಸಾಹಿತ್ಯ ಸಂಸ್ಥೆ.

ಶಿಕ್ಷಣ ಶಾಖೆಯ ಉಪಮಂತ್ರಿಗಳಾದ ಶ್ರೀ. ಕೆ. ಡಿ. ಮಾಲವೀಯರು ಸಾಹಿತ್ಯದ ಅಭ್ಯಾಸಕ್ಕೆ ರಾಷ್ಟ್ರೀಯ ಸಂಸ್ಥೆಯೊಂದನ್ನು ದಿಲ್ಲಿಯಲ್ಲಿ ಬೇಗನೇ ಸ್ಥಾಪಿಸುವದಕ್ಕಾಗಿ ಮೊನ್ನೆ ರಾಜ್ಯಪರಿಷತ್ತಿನಲ್ಲಿ ಹೇಳಿದರು. ಸರಕಾರದ ಇನ್ನಿತರ ಶಾಖೆಗಳಂತೆ ಶಿಕ್ಷಣ ಶಾಖೆಯಾದರೂ ನಿಃಸತ್ವವಾಗಿದೆ, ನಿರ್ಜೀವವಾಗಿದೆ; ಬಳಕೆಯಲ್ಲಿ ಬಂದ ಬರೀ ಯೋಜನೆಯ ಕರಡುಗಳಿಂದ ಯಾವ ಪ್ರಯೋಜನವೂ ಇಲ್ಲ. ಆರ್ಥಿಕ ಅಭಿವೃದ್ಧಿಗೆ ಪಂಚವಾರ್ಷಿಕ ಯೋಜನೆಯನ್ನು ರೂಪಿಸಿದರೂ, ಬುದ್ಧಿ ಮತ್ತು ಆತ್ಮ ವಿಕಾಸಗಳ ಯೋಜನೆಗೆ ಅದರಲ್ಲಿ ಯಾವ ಸ್ಥಾನವೂ ಇಲ್ಲ ಎಂಬ ಕೂಗೂ ಅಲ್ಲಲ್ಲಿ ಕೇಳಬರುತ್ತಿದೆ. ಅದಕ್ಕಾಗಿ ಸಾಹಿತ್ಯವನ್ನು ಪೋಷಿಸಿ ಬೆಳೆಸಿ, ಸಾಂಸ್ಕೃತಿಕ ಏಕೀಕರಣಕ್ಕೆ ಸಹಾಯಮಾಡುವದಕ್ಕಾಗಿ ಮತ್ತು ಸಾಹಿತ್ಯದ ಉಚ್ಚ ಮಟ್ಟವನ್ನು ಕಾಯ್ದುಕೊಂಡು ಹೋಗುವದಕ್ಕಾಗಿ, ರಾಷ್ಟ್ರೀಯ ಸಾಹಿತ್ಯ ಸಂಸ್ಥೆ

ಯೊಂದನ್ನು ಸ್ಥಾಪಿಸುವದೆಂಬ ಮಾತು ಸರಿಯೇ. ಆದರೆ ಅದಕ್ಕೂ ಜಾತೀಯತೆಯ ಪ್ರಾಂತೀಯತೆಯ ಸಂಕರೋಗ ಅಂಟಿಕೊಳ್ಳಬಾರದಷ್ಟೇ !

* * * * *

## ವಿವಾಹಗಳ ನೋಂದಣಿ.

ಜನನ ಮರಣಗಳ ನೋಂದಣಿಯನ್ನು ಸಾಮಾನ್ಯವಾಗಿ ಪ್ರತಿ ಊರಿನಲ್ಲಿಯೂ ಇಡುವಂತೆ, ಇನ್ನುಮುಂದೆ ವಿವಾಹಗಳ ನೋಂದಣಿಯನ್ನೂ ಇಡಬೇಕೆಂಬುದನ್ನು ಕುರಿತ ಕರಡು ಸಿದ್ಧವಾಗಿದೆ. ಜನನದ ನೋಂದಣಿ ಮುಂದಿನದಾಯಿತು, ಇದಕ್ಕೆ ಹಿಂದಿನ ತಳಹದಿ, ಸಾಮಾಜಿಕ ದೃಷ್ಟಿಯಲ್ಲಿ ಹುಟ್ಟಿದ ಮಗುವು ಜೀವಿಸಿರುವಂತೆ, ಗಟ್ಟಿಯಾಗಿರಬೇಡವೇ ? ಮುಂಬಯಿ ಸರಕಾರದವರು ಈ ಕರಡನ್ನು ಈಗಾಗಲೇ ಗೆಝೆಟ್ಟಿನಲ್ಲಿ ಪ್ರಸಿದ್ಧ ಮಾಡಿದ್ದಾರೆ. ಇನ್ನುಮುಂದೆ ಎಲ್ಲ ವಿವಾಹಗಳು ಈ ಪದ್ಧತಿಯಿಂದಲೇ ಆಗಬೇಕೆಂದು ಇದರರ್ಥವಲ್ಲ. ಧಾರ್ಮಿಕ ವಿಧಿಯಿಂದ ಜರುಗಿದ ವಿವಾಹಗಳೂ, ಈ ರೀತಿ ವಿವಾಹ ಜರುಗಿದ ಬಗ್ಗೆ ನೋಂದಣೀ ಮಾಡಿಸಬೇಕು; ಅದರ ಬಗ್ಗೆ ಅಧಿಕೃತ ವಿವರ ಸರಕಾರದಲ್ಲಿ ಬೇಕಾದಾಗ ದೊರೆಯುವ ವ್ಯವಸ್ಥೆಯಿರಬೇಕು. ಈಗಾಗಲೇ ಮುಂಬೈ ಪ್ರಾಂತದಲ್ಲಿ ಬಹುಪತ್ನೀತ್ವ ನಿರೋಧಕ ಶಾಸನ, ಬಾಲವಿವಾಹನಿರೋಧಕ ಶಾಸನಗಳು ಬಳಕೆಯಲ್ಲಿ ಬಂದದ್ದರಿಂದ ನ್ಯಾಯಾಲಯಗಳಲ್ಲಿ ಆ ಶಾಸನಗಳ ಉಲ್ಲಂಘನೆಯನ್ನು ಸಿದ್ಧಮಾಡಿ ಕೊಡುವ ಪ್ರಸಂಗವು ಬಂದಾಗ, ಸರಕಾರದ ಬಳಿಯಲ್ಲಿ ವಿವಾಹಗಳ ಅಧಿಕೃತ ವಿವರಗಳಿರುವದು ಒಳ್ಳೆಯದು. ಈ ಮೂರೂ ಶಾಸನಗಳನ್ನು ಸಂಪೂರ್ಣವಾಗಿ ಬಳಕೆಯಲ್ಲಿ ತರಬೇಕೆಂದರೆ ಮುಂದೆ ಜರುಗುವ ವಿವಾಹಗಳ ಮಾಹಿತಿಯಷ್ಟೇ ಅಲ್ಲ, ಹಿಂದೆ ಜರುಗಿದ ವಿವಾಹಗಳ ಮಾಹಿತಿಯೂ ಬೇಕಾಗಿ ಆ ವಿವಾಹಗಳನ್ನು ನೋಂದಣೀ ಮಾಡಿಸಬೇಕಾದ ಪ್ರಸಂಗ ಬರಬಹುದು. ಆದರೆ ಆ ದಕ್ಷಿಣ ಆಫ್ರಿಕೆಯಲ್ಲಿ ಗಾಂಧೀಜಿಗೆ ಹೂಡಬೇಕಾದ ಚಳವಳಿಯ ಸ್ವರೂಪ ಮಾತ್ರ ಇದಕ್ಕೆ ಬರಬಾರದು ಕೇವಲ ಹಿಂದೀಯರಿಗೆ ನಾಗರಿಕ ಹಕ್ಕುಬಾಧ್ಯತೆಯನ್ನು ಕೊಡಬಾರದೆಂಬ ಉದ್ದೇಶದಿಂದಲೇ, ದಕ್ಷಿಣ ಆಫ್ರಿಕೆಯಲ್ಲಿ ಈ ನೋಂದಣಿಯ ವಿಚಾರ ಹುಟ್ಟಿದ್ದು. ಗಾಂಧೀಜಿ, 'ಬಾ' ಅವರಿಗೆ 'ನಮ್ಮ ವಿವಾಹದ ನೋಂದಣೀಯಾಗದ್ದರಿಂದ ಅದು ಕಾಯ್ದೆ ಬಾಹರ,' ಎಂದು ಹೇಳಿದಾಗ 'ಬಾ' ಅವರಿಗಾದಂತಹ ಆಘಾತ ಕೇವಲ ನೋಂದಣಿಯ ವಿಚಾರದಿಂದಲೇ ನಮ್ಮಲ್ಲಿ ಹಲವು ಸ್ತ್ರೀಯರಿಗಾದೀತು ! ಆದರೆ ಇಲ್ಲಿಯ ನೋಂದಣಿ, ಇನ್ನುಳಿದ ಕಾಯ್ದೆಗಳಿಗೆ ದೃಢಸ್ವರೂಪ ಕೊಡಲಿಕ್ಕೆಂದು ಮಾತ್ರ !

## ಕನ್ನಡಿಗರ ಭವಿತವ್ಯ

ನೆರೆಹೊರೆಯ ಪ್ರಾಂತಗಳಲ್ಲಿ ಬಿರುಗಾಳಿಯೆದ್ದರೂ ಕನ್ನಡಿಗರು ನಿದ್ದೆಯಲ್ಲಿಯೇ ಎಂದು ಜನ ಹೇಳುವದರಲ್ಲಿ ಅಭಿಮಾನಪಡುವ ಕಾಲ ಅಳಿಸಿಹೋಗಿ, ಸ್ವಂತದ, ಅಸ್ತಿತ್ವಕ್ಕಾಗಿಯೇ ಹೋರಾಡುವ ಪ್ರಸಂಗ ಬಂದಿದೆ. ಆಂಧ್ರ ಪ್ರಾಂತ

ರಚನೆಯಾದರೆ ಇನ್ನುಳಿದ ಪ್ರಾಂತಗಳ ರಚನೆಯೂ ಆಗುವದೆಂಬ ಆಶೆ ಮಾಡುವದೇನೋ ಸರಿಯೆ. ಆದರೆ ಅಷ್ಟು ತೀವ್ರವಾಗಿ ಆ ಪ್ರಾಂತ ರಚನೆಯಾದರೆ, ಕರ್ನಾಟಕದ ಬೇಡಿಕೆಯೂ, ಮಹಾಗುಜರಾಥದ ಬೇಡಿಕೆಯೂ ಅಷ್ಟೇ ತೀವ್ರವಾದರೆ ಸ್ವಾಭಾವಿಕವೇ ! ಉಪವಾಸದಿಂದ ಅಥವಾ ಇನ್ನಾವುದೇ ಇಂತಹ ಬಾಹ್ಯ ಹಿಂಸೆ ಕಾಣದಂತಹ ಸಾಧನೆಯಿಂದ; ವ್ಯಕ್ತಿಗಳನ್ನು ಆಹುತಿಕೊಡದ ಹೊರತು ಕಾರ್ಯ ಸಾಧಿಸದು ಎಂಬ ಕಲ್ಪನೆ ಮಾತ್ರ ತಪ್ಪು ! ಉಪವಾಸದ ನೈತಿಕ ಬೆಲೆಯಿಂದ ಕಾರ್ಯದ ಹಿರಿಮೆ, ತೀವ್ರತೆ ಹೆಚ್ಚುವದೇನೋ ಸರಿಯೆ ! ಆದರೆ ಅನುಕರಣದಿಂದ ಉಪವಾಸಮಾಡಿ ಆ ಬೆಲೆಯನ್ನು ಹೆಚ್ಚಿಸುವದೆಂಬ ಮಾತು ಸುಳ್ಳು. ಅಖಂಡ ಕರ್ನಾಟಕದ ಅಸ್ತಿತ್ವವಿಲ್ಲದೆ ಸ್ವಂತದ ಅಸ್ತಿತ್ವವೂ ಸಾಧ್ಯವಿಲ್ಲ ಎಂಬ ಮಟ್ಟಕ್ಕೆ ಮುಟ್ಟಿದಾಗ ವ್ಯಕ್ತಿ ಇಂತಹ ಕಾರ್ಯಕ್ಕೆ ಉದ್ಯುಕ್ತನಾಗುತ್ತಾನೆ. ಆಂಧ್ರಪ್ರಾಂತ ನಿರ್ಮಾಣಕ್ಕೆ ಮೊದಲೇ ಬಳ್ಳಾರಿ, ಆದವಾನಿ, ರಾಯದುರ್ಗ, ಮೊದಲಾದವುಗಳ ಭವಿತವ್ಯದ ಬಗ್ಗೆ ಆಗಲೇ ಸಮಿತಿಯೊಂದನ್ನು ನೇಮಿಸಿ ಸಲಹೆಪಡೆಯಬೇಕಾದದ್ದು ಇಲ್ಲಿಯವರೆಗೂ ಮುಂದೂಡಲ್ಪಡಲು ಕಾರಣವೇನು ?

† ✣ † ✣ † ✣

## ನಮ್ಮ ಮಾತು

ಸಹೃದಯ ಕನ್ನಡಿಗರ ಸಹಕಾರದಿಂದ, ಸಹಾನುಭೂತಿಯಿಂದ, ಉದಾರ ಪೋಷಕರ ಆಶ್ರಯದಿಂದ, ‘ ವೀರಮಾತೆ, ’ ತನ್ನ ಮೊದಲ ವರ್ಷದ ಕೊನೆಯ ತಿಂಗಳನ್ನು ದಾಟುತ್ತಿದೆ. ಹೊಸ ವೇಷಭೂಷಣದಿಂದ, ಹುಮ್ಮಸ್ಸಿನಿಂದ ಕಾಲಿಡುವ ಆಶೆಯೂ ಅದಕ್ಕಿದೆ

ಸೋದರಿಯರ ಜೀವನವಿಕಾಸಕ್ಕಾಗಿಯೇ ಮೀಸಲಾಗಿರಿಸಿದ ಈ ಪತ್ರಿಕೆಯಲ್ಲಿ ಉಳಿದವಿಷಯಗಳು ಇದುವರೆಗೆ ಬಂದಿಲ್ಲವೆಂದು ಅರ್ಥವಲ್ಲ ; ಆದರೆ ಅವುಗಳ ಸಂಖ್ಯೆ ಕಡಿಮೆ. ಕನ್ನಡಿತಿಯರೂ, ಜೀವನ ವಿಕಾಸದ ಮಾರ್ಗದಲ್ಲಿ ಬರುವ ಸಮಸ್ಯೆಗಳನ್ನು ಎದುರಿಸುವಲ್ಲಿ ಧೈರ್ಯತೋರಿದ್ದಾರೆ, ಎಂದು ‘ ವೀರಮಾತೆ ’ ಯ ಆಧಾರದಿಂದ ಹೇಳಬಹುದಾದರೂ, ಅವರಲ್ಲಿದ್ದ ಸಂಕೋಚದ ಅಂಶ ನಿರೀಕ್ಷಿಸಿದ ಪ್ರಮಾಣದಲ್ಲಿ ಕಡಿಮೆಯಾಗಿಲ್ಲ. ಇನ್ನು ಮುಂದಾದರೂ ಕನ್ನಡಿತಿಯರು, ಧೈರ್ಯವಾಗಿ ಮನಬಿಚ್ಚಿ ಹೇಳುವರೆಂದು ಆಶಿಸುತ್ತೇನೆ.

ಮಕ್ಕಳಬೇಡಿಕೆಯಂತೆ ‘ ವೀರಮಾತೆ ’ ಯ ಅಕ್ಕನ ಪೆಟ್ಟಿಗೆ ಮಧ್ಯದಲ್ಲಿಯೇ ಪ್ರಾರಂಭವಾದರೂ ಇಷ್ಟೊಂದು ವಿಸ್ತಾರದ ರೂಪವನ್ನು ತಾಳಿದ್ದು ಸಂತೋಷದ ಸಂಗತಿ ! ಇತ್ತೀಚೆಯಂತೂ ಉಳಿದ ಪುಟಗಳನ್ನೇ ನುಂಗುವಷ್ಟು ದೊಡ್ಡದಾಗಿತ್ತು ಅಕ್ಕನ ಪೆಟ್ಟಿಗೆ !

ಅಕ್ಕನ ಪೆಟ್ಟಿಗೆಯ ಸದಸ್ಯರಾಗುವಾಗ ಅಥವಾ, ಸ್ಪರ್ಧೆಯ ಮನೆಗಳನ್ನು ತುಂಬಿ ಕಳಿಸುವಾಗ ಅಂಚೆಯ ತಿಕೀಟನ್ನಿಡಲು ಮಾತ್ರ ಮರೆಯಬಾರದು.

# ಅಂತರ್ಮುಖಿ

೩ ನೇ ದೃಶ್ಯ

ಲೇ:— ಸುಧಾ.

(ಅಂತರ್ಮುಖಿಯ ತಾಯಿ ಗೋದಕ್ಕ ಇವಳ ವಿರುದ್ಧ ತಂದೆ ರಾಮಣ್ಣನ ಕಡೆಗೆ ದೂರೊಯ್ದಳು. ಏನೂ ಪ್ರಯೋಜನವಾಗಲಿಲ್ಲ. ಮುಂದೆ ಹುಡುಗ ಹುಡುಗಿಯರೆಲ್ಲ ಲಗ್ನದ ಚರ್ಚೆ ಮಾಡುತ್ತಿರುವಾಗ ಗೋದಕ್ಕನು ಎಲ್ಲರನ್ನು ಚದರಿಸಿಬಿಟ್ಟಳು. ಈ ತೆರನಾಗಿ ವರ್ಷಗಳು ಗತಿಸಿದವು ಅಂತರ್ಮುಖಿಯ ಶಿಕ್ಷಣವಾದರು ಪ್ರಗತಿ ಹೊಂದುತ್ತ ನಡೆದು ಈಗವಳು ಮ್ಯಾಟ್ರಿಕ್ಯುಲೇಶನದಲ್ಲಿ ಅಭ್ಯಾಸ ಮಾಡುತ್ತಲಿದ್ದಳು. ವಯಸ್ಸೇನೋ ೧೫–೧೬ ವರ್ಷದ್ದಾಗಿತ್ತು. ಒಂದು ದಿನ ರಾತ್ರಿ ಸುಮಾರು ೨ ಗಂಟೆಯಾಗಿತ್ತು. ಅಕಸ್ಮಿಕವಾಗಿ ಎಚ್ಚತ್ತಳು. ಗೋದಕ್ಕ ರಾಮಣ್ಣ ಅವಳ ಸಲುವಾಗೇನೋ ಮಾತಾಡುತ್ತಿದ್ದುದು ಕೇಳಿಸಿತು.)

ನಾನು ಒಂದು ದಿನ ಆಕಸ್ಮಿಕವಾಗಿ ರಾತ್ರಿ ೨ ಗಂಟೆಗೆಚ್ಚತ್ತೆನು. ಅವ್ವ ಮತ್ತು ಅಪ್ಪ ನನ್ನ ಸಲುವಾಗಿ ಏನೊ ಆಲೋಚನೆ ನಡೆಸಿದ್ದರು. ಮೊದಲು ಮೊದಲು ಅವರ ಮಾತು ನಾನೇಕೆ ಕೇಳಬೇಕು ! ನನ್ನ ವಿಷಯಕ್ಕೆ ಇದ್ದರೆ ಕೇಳಬಾರದೇಕೆ ! ಕೇಳಿ ಅದರ ದುರುಪಯೋಗವಾಗದಂತೆ ಎಚ್ಚರಿಕೆಯಿಂದ ನಡೆದರೆ ಸರ್ವರ ಕಲ್ಯಾಣವಲ್ಲವೆ ! ಎಂಬ ವಿಚಾರದಿಂದ ಲಕ್ಷ್ಯಕೊಟ್ಟು ಕೇಳಹತ್ತಿದೆನು.

“ ಏನ್ರಿ ! ಅಂತರ್ಮುಖಿಯ ಲಗ್ನವನಿನ್ನೆಂದು ಮಾಡುವದು ! ೧೫ ತುಂಬಿ ೧೬ ರಲ್ಲಿ ಬಿದ್ದವು. ಎಂದು ಗೋದಕ್ಕ ಒಳ್ಳೆ ಕಕ್ಕುಲತೆಯಿಂದ ಕೇಳಿದಳು.

“ ಹುಂ ! ನೋಡೋಣ ! ಇಷ್ಟೇಕೆ ಗಡಿಬಿಡಿ ! ಅವಳ ಕಲಿಯುವದಾದರೂ ಮುಗಿಯಲಿ ! ” ಎಂದು ರಾಮಣ್ಣನು ಉದಾಸೀನತೆಯಿಂದ ನಕ್ಕು ಬಿಟ್ಟನು.

“ ಸಾಕು ! ” ಧ್ವನಿಯುನ್ನೇರಿಸುತ್ತ “ ಸಾಕು ! ಈ ನಗೆಯ ಪರಿಣಾಮ ಕಂಡುಬಂದಾಗ ತಿಳಿದೀತು ! ಹೆಣ್ಣುಮಕ್ಕಳ ಸ್ವಭಾವ ಚಂಚಲವೆಂದು ತಿಳಿದೆ ನಮ್ಮ ಪೂರ್ವಜರು ಎಂಟು ವರ್ಷಕ್ಕೇನೇ ಲಗ್ನ ಮಾಡಿ ಬಿಡುತ್ತಿದ್ದರು ! ಎಂಟು ಹೋಗಿ ಹದಿನಾರುವರ್ಷಗಳಾದರೂ ಇನ್ನೂ ಉದಾಸೀನತೆಯೆ !” ಎಂದು ಗದ್ದರಿಸಿದಳು ಗೋದಕ್ಕ.

“ ಮೊದಲಿನ ಕಾಯಿದೆಗಳು ಈಗಿಲ್ಲವಲ್ಲ ! ಮೊದಲಾದರೂ ಎಲ್ಲರೂ ೮ ವರ್ಷ ವಯಸ್ಸಿಗೇನೇ ಎಲ್ಲಿ ಲಗ್ನ ಮಾಡುತ್ತಿದ್ದರು ! ಅಶಿಕ್ಷಿತರು ಅಜ್ಞಾನದಮೂಲಕ ! ಕೇವಲ ಪಾವಿತ್ರ್ಯವನ್ನೇ ತಮ್ಮ ಗುರಿಯಾಗಿಟ್ಟುಕೊಂಡಂಥ, ದೇಹ ಸೌಖ್ಯವನ್ನು

ಅಲ್ಲಗಳೆದು ದೇವರ ಬುದ್ಧಿಗಿಂತ ತಮ್ಮ ಬುದ್ಧಿಯೆ ಮಿಗಿಲಾದದ್ದೆಂದು ತಿಳಿದಂಥ ನೀತಿ ಧರ್ಮಕ್ಕೆ ಹೆಚ್ಚು ಬೆಲೆ ಕೊಟ್ಟಂಥ ಬ್ರಾಹ್ಮಣರೇನೂ ಎಂಟುವರ್ಷಕ್ಕೆ ಲಗ್ನ ಮಾಡುತ್ತಿದ್ದರು. ಮಿಕ್ಕವರೆಲ್ಲ ವಯಸ್ಸಿಗೆ ಬಂದ ಮೇಲೆ ಲಗ್ನ ಮಾಡುತ್ತಿದ್ದರು. ಅಥವಾ ವಾಗುತ್ತಿದ್ದರು ! ಮೇಲಾಗಿ ವೈದ್ಯ-ಶಾಸ್ತ್ರದಲ್ಲಿ ಹೆಣ್ಣುಮಕ್ಕಳ ೧೮ ವರ್ಷ ವಯಸ್ಸು ಲಗ್ನಕ್ಕೆ ಯೋಗ್ಯವಯಸ್ಸೆಂದು ಹೇಳಿರುವರು. ಯಾರಿಗೆ ದೃಢಕಾಯದ ದೀರ್ಘಾಯುಷ್ಯದ, ಅನಾರೋಗ್ಯದ ಅಪೇಕ್ಷೆ ಇರುವದೋ ಅವರೆಲ್ಲರೂ ಪ್ರೌಢವಯಸ್ಸಾದ ಮೇಲೆ ಲಗ್ನವಾಗಿರುವರು ! " ಎಂದು ರಾಮಣ್ಣನು ಸಮಾಧಾನ ಹೇಳತೊಡಗಿದನು.

" ಇನ್ನು ಚಿಕ್ಕವಳಿದ್ದಾಗ್ಯೇನೇ ನಮ್ಮ ಲಗ್ನ ನಾವು ಮಾಡಿಕೊಳ್ಳೋಣೆಂದ ಹುಡುಗರು ನೀವಿಷ್ಟು ಬೆಂಬಲ ಕೊಟ್ಟ ಮೇಲೆ ಎಷ್ಟು ಹುಚ್ಚೆದ್ದು ಕುಣಿಯುವರೋ!" ಎಂದು ಕಳಕಳಾತಿಯನ್ನು ವ್ಯಕ್ತಪಡಿಸಿದಳು ಗೋದಕ್ಕ.

" ಅದೇನೋ ಪ್ರೇಮವಿಕಾರವೊ ! ವಿಕಾರದ ಪ್ರೇಮವೋ ! ಕೇವಲ ಬೌದ್ಧಿಕ ವಿಚಾರಾಲಾಪವೋ ! " ಎಂದು ನಕ್ಕುಬಿಟ್ಟನು ರಾಮಣ್ಣ.

" ನಗಬೇಡಿ ! ನಗಬೇಡಿ ! ಹೊಟ್ಟೆಬಂತೆಂದರೆ ಈ ನಕ್ಕ ಹಲ್ಲುಗಳೆ ಅತ್ತು ತೋರಿಸಬೇಕಾದೀತು ಜನರಿಗೆ ! " ಎಂದು ರೇಗಿದಳು ಗೋದಕ್ಕ.

" ಅದರ ಹೊರ್ತು ಮತ್ತಾವ ಉದ್ಯೋಗವಿಲ್ಲೆಂದು ಹೆಣ್ಣುಮಕ್ಕಳಿಗೆ ತಿಳಿದು ತಪ್ಪಿ ಎಂದಾದರು ಹೊಟ್ಟೆಬರುವದೆಂಬ ಹೆದರಿಕೆಯಿಂದ ಅವರಲ್ಲಿ ವಿಕಾರ ಹುಟ್ಟಿದ ದಿನವೆ ಅದರ ಶಮನಾರ್ಥ ಉಪಾಯವೆಂದು ಚಿಕ್ಕವಯಸ್ಸಿನಲ್ಲಿಯೆ ಲಗ್ನ ಮಾಡುವದರಿಂದ ಲೌಕಿಕ ದೃಷ್ಟಿಯಿಂದ ಕಾಯದೆಯ ದೃಷ್ಟಿಯಿಂದ ಹೊಟ್ಟೆಬರುವಂತೆ ವ್ಯವಸ್ಥೆಮಾಡಿಟ್ಟದ್ದರಿಂದ ವರ್ಷದಲ್ಲಿ ಪ್ರಸಂಗ ಬಿದ್ದರೆ ೨-೩ ಸಲ ಹೊಟ್ಟೆ ಬಂದು ಹೋಗಿದ್ದರಿಂದ ಹೆಣ್ಣುಮಕ್ಕಳ ಅವಸ್ಥೆ ಏನಾಗಿದೆ ! ಅವರ ವಿಶಿಷ್ಟ ಬೇನೆಗಳೆಷ್ಟು ಹಬ್ಬಿವೆ ! ಇದರಿಂದ ಗಂಡು ಹೆಣ್ಣುಗಳು ಅಪಮೃತ್ಯುವಿಗೆ ಹೇಗೆ ತುತ್ತಾಗಿವೆ ! ಇಂಥ ಪರಿಸ್ಥಿತಿಯಲ್ಲಿ ಒಬ್ಬೆಗಟ್ಲೆ ಮಕ್ಕಳ ಭಾರದೊಡನೆ ಹೊಟ್ಟೆಗಾಗಿ ಗಂಡನಿಗೆ ಗಂಡನಿಲ್ಲದಲ್ಲಿ ಸ್ವತಃ ಹಲ್ಲುಗಳನ್ನು ಕಿಸಿಯುತ್ತ ಮನೆಮನೆಗೆ ತಿರಗುವದರಲ್ಲಾವ ಪುರುಷಾರ್ಥ " ವೆಂದು ಅಣಕಿಸಿದನು ರಾಮಣ್ಣ.

" ಹೌದು ! ಹೌದು ! ಹುಟ್ಟಿಸಿದ ದೇವರು ಹುಲ್ಲು ಮೇಯಿಸುವನೆಂದು ನಿಮ್ಮಂಥ ಜಾಣರು ಹುಟ್ಟಿಬಂದಿರುವಿರಿ ! ಪೂರ್ವಜರೆಲ್ಲ ದಡ್ಡರು ! ನೀವೆ ಜಾಣರೆಂದು " ಇದಿರಿಸಿದಳು ಗೋದಕ್ಕ.

" ದೇವರ ಯೋಜನೆಗಳಂತೆ ನಡೆದಿದ್ದರೆ ಅದರ ಕಾಳಜಿ ದೇವರಿಗಿರುತ್ತಿತ್ತು ! ಆದರೆ ಎಲ್ಲ ಪೂಜಾರಿಗಳು ದೇವರ ಹೆಸರಿನಲ್ಲಿ ತಮ್ಮ ಬೇಳೆಬೆಯಿಸಿಕೊಳ್ಳಲು ತಾವು

ಮಾಡಿದ ಸದೋಷ ನೀತಿನಿಯಮಗಳೆಲ್ಲ ದೇವರೆ ಮಾಡಿರುವನೆಂದು ಹುಯಿಲೆಬ್ಬಿಸಿದ ಮೇಲೆ ದೇವರು ಹುಲ್ಲು ಮೇಯಿಸುವ ಹೊಣೆಏಕೆ ವಹಿಸುವನು ! ಚಿಕ್ಕ ವಯಸ್ಸಿನಲ್ಲಿ ಹೆಣ್ಣುಮಕ್ಕಳಿಗೆ ಲಗ್ನದ ಬೇಡಿಹಾಕಿ ಹೊಟ್ಟೆಬರುವದನ್ನು ನಿಲ್ಲಿಸುವ ಹೊಣೆಹೊತ್ತ ನೀತಿವಂತರು ಬಾಲವಿಧವೆಯರ ವ್ಯವಸ್ಥೆ ಏನು ಮಾಡಿರುವರು ! ಮೇಲಾಗಿ ಭಾರತ ವರ್ಷವು ಉನ್ನತ ಶಿಖರವನ್ನೇರಿದಾಗ ಇಂಥ ಕ್ಷುದ್ರವಿಚಾರಗಳಿರಲಿಲ್ಲ. ಈವಾಗ ಸ್ವತಂತ್ರವಾದ ಘನತೆಗೇರಿದ ಪರರಾಷ್ಟ್ರಗಳಲ್ಲಿರುವದಿಲ್ಲ. ಶಕುಂತಲಾ, ಕುಂತಿ ಇಂಥ ಇತಿಹಾಸಪ್ರಸಿದ್ಧ ಹೊಟ್ಟೆ ತಂದುಕೊಂಡಂಥವರು ಇತಿಹಾಸ ಪ್ರಸಿದ್ಧ ಹೆಣ್ಣುಮಕ್ಕಳಾಗಿರುವರು. ಇದರ ಮೇಲಿಂದ ಪೂರ್ವಿಕರೆಷ್ಟು ವಿಚಾರವಂತರಿದ್ದರೂ, ಗಂಡಿಲ್ಲದೆ ಹಡೆದ ಮಕ್ಕಳನ್ನು ಶಿಕ್ಷಣಬಲದಿಂದೆಷ್ಟು ಮುಂದೆ ತರುತ್ತಿದ್ದರು. ದೈವಾಯತ್ತಂ ಕುಲೇಜನ್ಮ । ಪೌರುಷಂ ತು ಮದರ್ಪಿತಂ । ಜನ್ಮನಾಜಾಯತೆ ಜಂತುಃ । ಸಂಸ್ಕಾರಾದ್ವಿಜಮುಚ್ಯತೆ । ಇಂಥ ಉಜ್ವಲ ತತ್ವಗಳಿಂದ ತಮ್ಮ ದಿನದ ವ್ಯವಹಾರ ನಡೆಸಿದ್ದರೂ ಜಾತಿ ಭೇದದಕಿಂತ ವರ್ಣಭೇದದ ಕಡೆಗೆ ಹೆಚ್ಚಿಗೆ ಗಮನ ಕೊಡುತ್ತಿದ್ದರು. ಈಗಿನಂತೆ ಶೀಲವೆಂದರೆ ತಾತ್ವಿಕ ತಳಹದಿ ಇಲ್ಲದ ಗೊಡ್ಡ ಡಾಂಭಿಕ ಆಚಾರವೆಂದೆಂದು ಅವರು ತಿಳಿದಿರಲಿಲ್ಲೆಂದು " ತಿಳಿಸಿ ಹೇಳಲು ಯತ್ನಿಸಿದ ರಾಮಣ್ಣ.

" ಇಷ್ಟೆಲ್ಲ ನಮ್ಮಂಥ ಅಜ್ಞಾನಿ ಹೆಣ್ಣುಮಕ್ಕಳಿಗೇನು ತಿಳಿಯಬೇಕೆಂದು " ಅಲ್ಲಗಳೆದಳು ಗೋದಕ್ಕ

" ಹೆಣ್ಣುಮಕ್ಕಳಿಗೇನು ತಿಳಿಯುವದಿಲ್ಲ. ಅವರಿಗೇನು ತಿಳಿಯಗೊಡಬಾರದೆಂದು ನೀತಿ ಧರ್ಮ ಹೆಸರಿನಲ್ಲಿ ಅವರನ್ನು ಅಜ್ಞಾನದಲ್ಲಿಟ್ಟರೆ ಅವರು ನೀತಿವಂತರಾಗಿ ಉಳಿಯುವರೆಂದು ಹೆಚ್ಚಿಗೆ ಶಿಕ್ಷಣಕೊಟ್ಟು ಅವರು ವಿಚಾರ ಶೀಲರಾಗಬಾರದೆಂದು, ಅವರಿಗೆ ಶುದ್ಧಾಶುದ್ಧ ಆಚಾರದ ಅರಿವು ಆಗಬಾರದೆಂದು, ಅವರ ಲಗ್ನವನ್ನು ಬಾಲ್ಯದಲ್ಲಿ ಮಾಡಿ ಗಂಡಸರ ಮತಾನುವರ್ತಿಗಳು ಅವರಾಗುವಂತೆ ಆಚಾರ ಧರ್ಮದ ಪ್ರಚಾರಮಾಡಿರುವರು. ಅವರು ನೀತಿವಂತರಾಗಬೇಕು ಬಹಿರಂಗವಾಗಿಯೆಂದು ಕೆಲವರು ಅವರನ್ನು ದಾಸ್ಯದಲ್ಲಿಟ್ಟರು, ಕೆಲವರು ಗೋಷೆಯಲ್ಲಿಟ್ಟರು. ಒಟ್ಟಾರೆ ಮನಸಿನ ಸಂಯಮವಾಗುವಂತೆ ವಿದ್ಯೆಯನ್ನು ಕೊಡದೆ ದೇಹದ ಸಂಯಮನದ ವ್ಯವಸ್ಥೆ ಅಚ್ಚುಕಟ್ಟಾಗಿ ಮಾಡಿ ಗಂಡನ ಆಧೀನದಲ್ಲಿಟ್ಟರು. ಇದರಿಂದವರು ಗಂಡಸಂಯಮಿಯಾದರೆ ಸಂಯಮಿಯಾಗಬೇಕು. ಗಂಡಸು ಸ್ವೇರಾಚಾರಿಯಾಗಬೇಕು. ಒಟ್ಟಾರೆ ಅದು ಕಾಯಃದೇಶೀರ ಅಂದರೆ ಧರ್ಮ ನೀತಿ, ಲೌಕಿಕಕ್ಕನುಸಾರವಾಗಿದ್ದರಾಯಿತು. ಒಬ್ಬ ಅನುಭವಿಕಳಾದ ಹೆಣ್ಣುಮಗಳು ಉದ್ಗಾರ ತೆಗೆದಿದ್ದೇನೆಂದರೆ ಆಜನ್ಮ ಬ್ರಹ್ಮಚಾರಿಯಾಗಿ ಆನಂದದಿಂದ ಕಾಲಕಳೆಯಬಹುದು. ಆದರೆ ಕೆಲವುದಿನ ವಿಕಾರಿ ಗಂಡನಕೂಡ ಬಾಳಿವೆ ಮಾಡಿ ಅವನು ಸತ್ತರೆ ಒಂದು ಕ್ಷಣ ಸಂಯಮಿಯಾಗಿರುವದು ಶಕ್ಯವಿಲ್ಲ. ಶಾಸ್ತ್ರಜ್ಞರು ಹೇಳುವದೇನಂದರೆ ಈ ಕೃತ್ರಿಮ

ಲಗ್ನ ಪದ್ಧತಿಯಿಂದ ಹೆಣ್ಣುಮಕ್ಕಳು ವೇಶ್ಯೆಯರು ಹೆಚ್ಚಾಗಲು ಅನುವು ದೊರೆತಿದೆ' ಇಷ್ಟೆಲ್ಲ ಅನಾಹುತಗಳಿಗೆ ಹೆಣ್ಣುಮಕ್ಕಳ ಕಾಯದೆ ಶಾಸ್ತ್ರದ ಅಜ್ಞಾನವೆ ಕಾರಣವೆಂದು ಸಮರ್ಥಿಸಿದ ರಾಮಣ್ಣ.

"ಏನಾದರು ಕೇಳ ಹೋದರೆ ಏನಾದರು ಲತ್ತ ಲತ್ತ ಮುಂಡಗಿಗಳನ್ನು ಉರಳಿಸಿ ಬಾಯಿ ಕಟ್ಟುವರಲ್ಲ! ದೇವರೆ ನಶೀಬದಲ್ಲಿದ್ದದ್ದಾಗಲೆಂದು" ಹಣೆ ಹಣೆ ಕುಟ್ಟಿಕೊಂಡಳು ಗೋದಕ್ಕ.

"ಎಷ್ಟು ವಿಚಾರ ಶೀಲ ಉದಾರ ಮತವಾದಿ ವಾಸ್ತವವಿಚಾರವಾದಿ ನಮ್ಮ ರಾಮಣ್ಣ. ಇಂಥ ತಂದೆಯ ಮಗಳಾದ ನಾನೆ ಧನ್ಯಳೆಂದು" ಆನಂದ ಬಾಷ್ಪಗಳನ್ನು ದುರಿಸಿದಳು ಅಂತರ್ಮುಖಿ.



# — ಹಾಲ್ಜೇನ ಸುರಿದಳಿಂದು —

ಲೇ:— ಪರಶುರಾಮ ಹ. ಚಿತ್ರಗಾರ
ಶಿಕ್ಷಕ. ಜಾಲೀಹಾಳ.

ನನ್ನಾಶೆ ಕುಸುಮವೊಂದರಳಿ ಕನಸು ನನಸಾಯ್ತಿಂದು।
ಬಾಳಬಳ್ಳಿಯು ಕೊನರಿ ಹಬ್ಬಿತಿಂದು।
ನಸುನಗೆಯು ಬೀರುತಲೆ ಹೊಸತನವ ತೋರುತಲೆ।
ಮನನಲಿಸೆ ಚಲುರೂಪ ತಳೆದು ಬಂದು।
ಕಮಲಿಣಿಯು ಹರುಷದಲಿ ನಗುತಿಹಳು ಕೂಸಿನಾ
ಮೀಸಲಿನ ಎಳನಗೆಯು ಕಿರಣದಿಂದ।
ಹೊಸ ಜೀವ ಹೊಸ ಭಾವ ಹೊಮ್ಮಿಬಂದಿಹುದಹಾ?
ಈರ್ವರೊಲಿಮೆಯ ಪ್ರತಿಮೆಯುಂದದಿಂದ।
ತುಂಬಿ ಬಳಗವು ಎಲ್ಲ ನಲಿನಲಿದು ಕುಣಿಕುಣಿದು।
ಹಾಡುತಿವೆ ಇನಿದನಿಯು ಗಾನದಿಂದ।
ಬಳ್ಳಿಬಳಗಕೆ ಎಲ್ಲ ಒಳ್ಳೆ ಕಳೆತುಂಬಿಹುದು ಬಾಳ್ಬಳ್ಳಿ
ಕುಡಿಯ ಹಬ್ಬುವಿಕೆಯಿಂದ।
ಹಲಕೆಲವು ಮುಗುಡಗಳು ಒಂದು ಬದಿ ಮುಗ್ಗಿರಲಿ।
ಸಂತಸವೆ ಜೀವನಕೆ ಆಧಾರವು।
ಸಂಸಾರ ತೊಂದರೆಯು ಹಾರಿಹೋಗಲು ಒಲುಮೆಯಾ
ಚಲು ಹೂವು ಸೌಭಾಗ್ಯವು।
ಅಂಥ ಒಲವಿನ ಜೀವ ಕುಸುಮ್ಮವನು ಆರಿಸಲು
ಅನವರತವೆನ್ನಮನ ಬಯಸುತಿತ್ತು।
ಆತ್ಮಶಾಂತಿಯ ಸತ್ಯಸೌಂದರ್ಯ ರೂಪವನು।
ದೇವನೊಳು ನಿತ್ಯವೂ ಬೇಡುತಿತ್ತು।
ಅಂಥ ಬೇಡಿಕೆಗಾಗಿ 'ಗಿರಿಜೆ, ನಾಮದ ಹೂ।
ಅರಳಿ ಮಗುವಾಗಿ ತಾ ಬಂದಳಿಂದು।
ಹೊಸಬಾಳ ಹೊಂಬೆಳಗು ಮನೆಗೆಲ್ಲ ತುಂಬಿಸುತ।
ತುಟಿಗೆಲ್ಲ ಹಾಲ್ಜೇನ ಸುರಿದಳಿಂದು।

# ಶಿಕ್ಷಣದ ನಿಲುಮೆ

( ಯು. ರಾ.ಸಂ. ದ ಹೊತ್ತಿಗೆಯೊಂದರಿಂದ )

ಸಂಗ್ರಾಹಕರು— ಹು. ಶ್ರೀ. ದು.

**ಭಾರತ ಪ್ರಾ.ಶಿಕ್ಷಣ.** ಜೀವನ ಶಿಕ್ಷಣವೇ ಪ್ರಾಥಮಿಕ ಶಿಕ್ಷಣದ ತಳಹದಿಯಾಗಬೇಕೆಂದು ನಿಶ್ಚಿತಗೊಳಿಸಲಾಗಿದೆ. ಸ್ಥಳಿಕ ಕೈಗಾರಿಕೆಯೊಂದರ ಸುತ್ತಲು ಜ್ಞಾನವನ್ನು ಹೆಣೆದು ಅದನ್ನು ಮಕ್ಕಳ ಮನಸ್ಸಿನಲ್ಲಿ ಇಂಗಿಸುವದೇ ಇದರ ಮುಖ್ಯ ಲಕ್ಷಣವಾಗಿದೆ. ನೂಲು-ನೆಯ್ಗೆ, ಕುಂಬಾರಿಕೆ, ಒಕ್ಕಲತನ, ಬಡಿಗತನಗಳು ಭಾರತದಲ್ಲಿ ಕಂಡುಬರುವ ಮುಖ್ಯ ಕೈಗಾರಿಕೆಗಳಾಗಿವೆ. ಗಾಂಧಿ ಪ್ರಣೀತ ಈ ತತ್ವ ಪ್ರಣಾಲಿಯಲ್ಲಿ ಶಾಸ್ತ್ರೀಯಜ್ಞಾನ, ವನಸ್ಪತಿಶಾಸ್ತ್ರ, ವಿಜ್ಞಾನ ಶಾಸ್ತ್ರಗಳು ಕೈಗಾರಿಕೆಯ ಬೆಳವಣಿಗೆಯಿಂದಲೆ ಹೊರಹೊಮ್ಮಬೇಕೆಂಬ ಕಲ್ಪನೆ ಒಡಮೂಡಿದೆ. ಪ್ರಾಂತ ಪ್ರಾಂತಗಳಲ್ಲಿ ಇದು ಸ್ಥಳೀಕ ಪರಿಸ್ಥಿತಿ ಶಿಕ್ಷಕರ ಸ್ಥಿತಿಗತಿ ಮತ್ತು ಆರ್ಥಿಕ ಸ್ಥಿತಿಗಳಿಗೆ ಹೊಂದಿಕೊಂಡು ಬೆಳೆಯತೊಡಗಿದೆ. ಶಾಲೆಗಳು ಸ್ವಾವಲಂಬಿಯಾಗಿರಬೇಕೆಂಬ ಭಾವನೆಯೂ ಇದರಲ್ಲಿ ಒಡಮೂಡಿವೆ. ಜೀವನದ ವಿಷಯಕ್ಕಿದ್ದ ಜನತೆಯ ಭಾವನೆಯು ಈ ಕಲ್ಪನೆಯ ಒರೆಗಲ್ಲಾಗಿರುವದು. ಜನತೆಯು 'ಸಾದಾ ಜೀವನ' ಮತ್ತು 'ತತ್ವಾನ್ವೇಷಣದ ಕಡೆಗೆ ಲಕ್ಷ್ಯಗೊಟ್ಟರೆ ಈ ಮಾತು (ಸ್ವಾವಲಂಬನವು) ಬಿಕ್ಕಟ್ಟನದೆನಿಸುವದಿಲ್ಲ.

೩ ವರ್ಷದಿಂದ ೬ ವರ್ಷದ ವರೆಗಿನ ಮಕ್ಕಳ ಸಲುವಾಗಿರಬೇಕಾಗಿದ್ದ "ಶಿಶುವಿಹಾರಗಳು ಭಾರತದಲ್ಲಿ ಸಾಕಷ್ಟು ಕಂಡುಬರದಿದ್ದರೂ, ಆ ದಿಶೆಯಲ್ಲಿ ಪ್ರಯತ್ನವು ವಿಶೇಷವಾಗಿ ಕಂಡುಬರುತ್ತದೆ. ಯೋಗ್ಯ ಶಿಕ್ಷಕರ ಅಭಾವ, ಕಟ್ಟಡಗಳು, ಉಪಕರಣಗಳು ಮೊಂಟೆಸೋರಿ ಸನ್ನಾಹಗಳ ಅಭಾವಗಳು ಈ ಮಾರ್ಗದಲ್ಲಿದ್ದ ಮುಖ್ಯ ಅಡಚಣೆಗಳಾಗಿವೆ. ಹಳ್ಳಿ-ನಾಡಿನ ಉದ್ಧಾರಕ್ಕಾಗಿ ಹೆಣಗುವ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳು ಈ ದಿಶೆಯಲ್ಲಿ ಸಹಕಾರದಿಂದ ಪ್ರಯತ್ನ ನಡೆಸಿದರೆ ಇದು ಕೂಡಲೆ ಸಿದ್ಧಿಸಬಹುದು.

ಮಧ್ಯಂತರ ಮತ್ತು ಮಾಧ್ಯಮಿಕಶಾಲೆಗಳು—

ಇವು ಇಂಗ್ಲೀಷನ್ನು ಕಡ್ಡಾಯವಾಗಿ ಕಲಿಸುವ ಶಾಲೆಗಳಾಗಿವೆ. ಮಾಧ್ಯಮಿಕ ಶಾಲೆಗಳು ಕೇವಲ ವಿಷಯಗಳನ್ನು ಮಾತ್ರ ಕಲಿಸಿ ವಿಶ್ವವಿದ್ಯಾಲಯಗಳಿಗೆ 'ಕಚ್ಚಾ ಮಾಲ'ನ್ನು ಪೂರೈಸುವ ಸಂಸ್ಥೆಗಳಾಗಿವೆ. ಇದರ ಕೊನೆಯ ಪರೀಕ್ಷೆಯನ್ನು ಪಾಸಾದ ಬಳಿಕ ವಿದ್ಯಾರ್ಥಿಯು ವಿಶ್ವವಿದ್ಯಾಲಯಕ್ಕೆ ಹೋಗಲು ಅರ್ಹನಾಗುತ್ತಾನೆ. ಈ ಪರೀಕ್ಷೆಯನ್ನು ವಿಶ್ವವಿದ್ಯಾಲಯವೇ ನಡಿಸುವದು. ಒಮ್ಮೊಮ್ಮೆ ಇದಕ್ಕಾಗಿಯೆ ಮೀಸಲಾದ ಒಂದು "ಬೋರ್ಡು" ರಚಿತವಾಗಿರುತ್ತದೆ.

## ವಿಶ್ವವಿದ್ಯಾಲಯಗಳು.

ಪ್ರಸ್ತುತಕಾಲದಲ್ಲಿ ಭಾರತದಲ್ಲಿ ಒಟ್ಟಾರೆ ೧೯ ವಿಶ್ವವಿದ್ಯಾಲಯಗಳಿವೆ. ಅವುಗಳಲ್ಲಿ ಒಟ್ಟು ೧,೭೫೦೦೦ ವಿದ್ಯಾರ್ಥಿಗಳು ಓದುತ್ತಲಿದ್ದಾರೆ. ಇವು ಪರೀಕ್ಷೆಗಳನ್ನು ಏರ್ಪಡಿಸುತ್ತವೆ. ಇಂಗ್ಲೀಷನ್ನು ಕಡ್ಡಾಯದ ವಿಷಯವಾಗಿ ಇಟ್ಟುಕೊಂಡದ್ದೂ ಉಂಟು. ಮತ್ತು ಇದು ಬೋಧಭಾಷೆಯೂ ಅಹುದು. ಇಂಗ್ಲೀಷ ಭಾಷಾಭ್ಯಾಸದ ಮಟ್ಟಿಗೆ ಈ ಮಾತು ಸರಿಹೋಗುವದು. ಆದರೆ, ಇತರ ವಿಷಯಗಳನ್ನು ಆಳವಾಗಿ ಅಭ್ಯಸಿಸುವಾಗ ಇದೊಂದು ತೊಂದರೆಯಾಗಿ ಪರಿಣಮಿಸುವದು. ಮುಂಬರುವ ಕೆಲವು ವರ್ಷಗಳ ಮಟ್ಟಿಗೆ ಇಂಗ್ಲೀಷನ್ನು ಬೋಧ ಭಾಷೆಯಾಗಿ ಇಟ್ಟುಕೊಳ್ಳಬೇಕಾಗುವದು ಯಾಕಂದರೆ ವಿವಿಧ ವಿಷಯಗಳನ್ನು ಪ್ರತಿಪಾದಿಸುವ ಪುಸ್ತಕಗಳು ಭಾರತದ ಬೇರೆ ಬೇರೆ ಭಾಷೆಗಳಲ್ಲಿ ಅಷ್ಟೊಂದು ಹೇರಳವಾಗಿ ಸಿಗುವದಿಲ್ಲ. ಸ್ನಾತಕೋತ್ತರ ಅಭ್ಯಾಸವು ಭಾರತೀಯ ವಿಶ್ವವಿದ್ಯಾಲಯಗಳ ಮಹತ್ವದ ಲಕ್ಷಣವೆಂದು ಹೇಳಬಹುದು. ಇದು ಐಚ್ಛಿಕ ವಿಷಯಗಳಿಂದ ಕೂಡಿದ್ದು ಯೋಗ್ಯತಾಸಂಪನ್ನರಷ್ಟೆ ಇದನ್ನು ಕೈಕೊಳ್ಳುವರು. ಆದ್ದರಿಂದ ಸ್ನಾತಕೋತ್ತರ ಪರೀಕ್ಷೆಗಳಲ್ಲಿ ನಾಪಾಸಾಗುವವರ ಸಂಖ್ಯೆ ಕಡಿಮೆಯೆನ್ನಬಹುದು. ಈ ವರ್ಗದಲ್ಲಿ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸಂಪರ್ಕವು ವಿಶೇಷವಿದ್ದುದರಿಂದ ಅಭ್ಯಾಸಕ್ಕೆ ಇನ್ನೂ ಕಳೆ ಬಂದಿದೆ. ಪ್ರಾಧ್ಯಾಪಕರಾಗಲಿಚ್ಛಿಸುವವರು ಸ್ನಾತಕೋತ್ತರ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲೇಬೇಕಾದ್ದರಿಂದ ಈ ಅಭ್ಯಾಸಕ್ಕೆ ಮಹತ್ವ ಹೆಚ್ಚಿದೆ. ಎಷ್ಟೋ ವಿದ್ಯಾರ್ಥಿಗಳು ಹೆಚ್ಚಿನ ವ್ಯಾಸಂಗಕ್ಕಾಗಿ ಯುರೋಪ, ಅಮೇರಿಕೆಗಳಿಗೆ ಪ್ರಯಾಣ ಬೆಳೆಸುವರು. ಇತರ ದೇಶಗಳ ವಿದ್ಯಾರ್ಥಿಗಳ ಕೂಡ ಸ್ಪರ್ಧಿಸುವಾಗ ಭಾರತೀಯ ವಿದ್ಯಾರ್ಥಿಗಳು ಯಾವ ರೀತಿಯಲ್ಲಿಯೂ ಹಿಂದೆ ಬೀಳುವದಿಲ್ಲ.

## ವೃತ್ತಿ ಶಿಕ್ಷಣ

ಭಾರತದಲ್ಲಿ ಒಟ್ಟಾರೆ ೨೮ ಇಂಜನಿಯರಿಂಗ ಕಾಲೇಜುಗಳಿವೆ. ಇವುಗಳಿಂದ ಪ್ರತಿವರ್ಷ ೧೫೦೦ ತಜ್ಞರು ತಯಾರಾಗುವರೆಂದು ಅಂದಾಜುಮಾಡಲಾಗಿದೆ. ಆದರೆ ಬೆಳೆಯುತ್ತಿರುವ ಭಾರತದ ಉದ್ದಿಮೆಗಳಿಗಾಗಿ ಇದರ ನಾಲ್ಕು ಪಟ್ಟು ಹೆಚ್ಚು ತಜ್ಞರು ಬೇಕೆಂದು ಅಂದಾಜು ಮಾಡಲಾಗಿದೆ. ಡಾಕ್ಟರರ ಸಂಖ್ಯೆಯು ೪೮೦೦೦ ಎಂದು ಲೆಕ್ಕಮಾಡಲಾಗಿದೆ. ಭಾರತದ ಒಟ್ಟು ಜನತೆಯನ್ನು ಲೆಕ್ಕಿಸಲಾಗಿ ೭೦೦೦ ಜನಕ್ಕೆ ೧ ಡಾಕ್ಟರನಂತೆ ಪ್ರಮಾಣ ಬೀಳುವದು. ಮೆಡಿಕಲ್ ಕಾಲೇಜುಗಳ ಒಟ್ಟು ಸಂಖ್ಯೆಯು ೨೩ ಒಕ್ಕಲತನದ ಕಾಲೇಜುಗಳು ಭಾರತದಲ್ಲಿ ತೀರ ವಿರಳವಾಗಿವೆ. ಯಾಕಂದರೆ ಇದರಲ್ಲಿ ತೇರ್ಗಡೆ ಹೊಂದಿದವರಿಗೆ ಉದ್ಯೋಗ ಹುಡುಕುವ ಕ್ಷೇತ್ರ ಸಣ್ಣದಾಗುವದು. ಮತ್ತು ಒಕ್ಕಲತನವೂ ಒಂದು ಶಾಸ್ತ್ರವೆಂದು ಜನರು ನಂಬುವದಿಲ್ಲ.

## ಶಾಸ್ತ್ರೀಯ ಸಂಶೋಧನೆ.

ಕಳೆದ ಶತಮಾನದಲ್ಲಿ ಭಾರತವು ವಿಜ್ಞಾನ, ವನಸ್ಪತಿ ಮತ್ತು ರಸಾಯನ ಶಾಸ್ತ್ರಗಳಲ್ಲಿ ಪ್ರಗತಿ ತೋರಿಸಿದೆ. ದಿಲ್ಲೀ ವಿಶ್ವವಿದ್ಯಾಲಯದಲ್ಲಿ ಇತ್ತೀಚೆಗೆ (Origin of contribution)ನೆಲೆ ಸಿದ ಒಂದು ಸಂಶೋಧನ ಸಮಿತಿಯು ಹಿಂದುಸ್ತಾನ ಸರಕಾರದಿಂದ ಮನ್ನಣೆ ಪಡೆದು ತನ್ನ ಕೆಲಸ ನಡೆಸಿದೆ.

## ಪ್ರೌಢ ಶಿಕ್ಷಣ.

ಇದು ಇತ್ತೀಚೆಗೆ ಜನರ ಮನಸ್ಸನ್ನು ಆಕರ್ಷಿಸಿದೆ. ಯಾಕಂದರೆ ಹೊಸ ರಾಜ್ಯಘಟನೆಯಲ್ಲಿ ಪ್ರತಿಯೊಬ್ಬ ಪ್ರೌಢನಿಗೆ ಮತಾಧಿಕಾರವಿದೆ. ಆದ್ದರಿಂದ ಭಾರತೀಯ ಪ್ರೌಢನಿಗೆ ಅಕ್ಷರ ಜ್ಞಾನವು ಅವಶ್ಯವಾಗಿದೆ. ಈ ದಿಶೆಯಲ್ಲಿ ಹೇಳಿ ಕೊಳ್ಳುವಂತಹ ಪ್ರಗತಿಯೇನೂ ಆಗಿಲ್ಲ. ಆದರೂ ೧೯೩೯ ರಷ್ಟಕ್ಕೆ ಭಾರತದಲ್ಲಿ ೫೦೦೦ ಪ್ರೌಢರ ಶಾಲೆಗಳು ತಲೆಯೆತ್ತಿದವು. ಅವುಗಳ ಹಾಜರಿ ಸಂಖ್ಯೆಯು ೧೪೦೦೦೦ ಕ್ಕೆ ಮುಟ್ಟಿತು. ಇವುಗಳಲ್ಲಿ ಅಕ್ಷರ ಜ್ಞಾನ ಮಾತ್ರ ಕೊಡಲಾಗುವದು. ಬಿಹಾರ ಪ್ರಾಂತದಲ್ಲಿ ಇದರ ಪ್ರಗತಿಯು ನೋಡುವಂತಹದಾಗಿದೆ.

ಜನತೆಯು ಪ್ರೌಢ ಶಿಕ್ಷಣದಲ್ಲಿ ವಹಿಸುವ ಆಸ್ಥೆಯನ್ನು ನೋಡಿ ಕೆಲವು ಪ್ರಾಂತಗಳಲ್ಲಿ ಪ್ರತ್ಯೇಕ ಸಮಿತಿಗಳನ್ನು ನೇಮಿಸಲಾಗಿದೆ. ಭಾರತೀಯ ಪ್ರೌಢ ಶಿಕ್ಷಣ ಸಮಿತಿಯು ಏರ್ಪಟ್ಟು ಅದು ಈ ದಿಶೆಯಲ್ಲಿ ಬಹಳ ಕೆಲಸಮಾಡಿದೆ.

## ಕಲೆ ಮತ್ತು ಸಂಸ್ಕೃತಿಗಳು.

ಆಧ್ಯಾತ್ಮ ಜ್ಞಾನದ ಹೊರತಾಗಿ ಹಿಂದುಸ್ತಾನದಲ್ಲಿ ಗಾಯನ, ನೃತ್ಯ ಕಲೆ ಮತ್ತು ಚಿತ್ರಕಲೆಗಳು ಮೊದಲಿನಿಂದಲೂ ತಮ್ಮ ಪರಂಪರೆಯನ್ನು ಹರಡಿವೆ. ಮಧ್ಯಮವರ್ಗದವರು ಇವುಗಳನ್ನು ಮೊನ್ನಿನ ವರೆಗೆ ಒಳ್ಳೇ ತಾತ್ಸಾರದಿಂದ ಕಂಡರು. ಆದರೆ ದೇಶೀ ಸಂಸ್ಥಾನಿಕರು ಇವಕ್ಕೆ ಪ್ರೋತ್ಸಾಹನೆಕೊಟ್ಟು, ಬದುಕಿಸಿದರು. ಈ ಶತಮಾನದ ಪ್ರಾರಂಭದಿಂದ ಜನರು ಇವುಗಳಲ್ಲಿ ಆಸ್ಥೆ ತೋರಹತ್ತಿದ್ದಾರೆ. ಮುಂಬರುವ ದಿನಗಳಲ್ಲಿ ಇವು ಕಲೆ ಮತ್ತು ಮನರಂಜನೆಯ ದೃಷ್ಟಿಗಳಿಂದ ಒಳ್ಳೇ ಬಲವಂತದಿಂದ ಜನರನ್ನಾಕರ್ಷಿಸುವವೆಂದು ಕಂಡುಬರಹತ್ತಿದೆ. ಭಾರತದ ಕೇಂದ್ರ ಸರಕಾರವು ಒಂದು ಸಂಸ್ಕೃತಿ ವಿಶ್ವಸ್ಥಮಂಡಳಿಯನ್ನು ನೇಮಿಸಲಿದೆ. ಅದು ಸಾಹಿತ್ಯ, ಕಲೆ, ನೃತ್ಯ, ನಾಟಕ ಮತ್ತು ಗಾಯನಗಳ ಕಾಲೇಜುಗಳನ್ನು ನಡಿಸಿ ಇದನ್ನು ಮುಂದುವರಿಸಬಹುದೆಂದು ಆಶಿಸಲಾಗಿದೆ

ಈಗ ಭಾರತದಲ್ಲಿ ೨೦ ಕಲಾಮಂದಿರಗಳಿವೆ. ಇಲ್ಲಿ ಚಿತ್ರ ಮತ್ತು ವಾಸ್ತು ಶಿಲ್ಪಗಳು ಕಲಿಸಲ್ಪಡುವವು.

## ಯುದ್ಧೋತ್ತರ ಸುಧಾರಣೆಗಳು.

(೧) ಶಿಕ್ಷಣವು ಕೇಂದ್ರ ಸರಕಾರದ ಒಂದು ಮಹತ್ವ ವಿಷಯವಾಗಿದೆ.
(೨) ಸಾರ್ವತ್ರಿಕ ಪುಕ್ಕಟೆ ಒತ್ತಾಯದ ಶಿಕ್ಷಣದ ಪ್ರಸಾರ.
(೩) ಶಿಕ್ಷಕರ ತರಬೇತಿ ಕೇಂದ್ರಗಳ ನಿರ್ಮಾಣ.
(೪) ಈಗಿನ ಮಾಧ್ಯಮಿಕ ಶಿಕ್ಷಣದ ಅವಧಿಯನ್ನು ವಿಂಗಡಿಸಿ ಜ್ಯುನಿಯರ ಬೇಸಿಕ್ ಶಾಲೆ ಮತ್ತು ಸಿನಿಯರ ಬೇಸಿಕ್ ಶಾಲೆಗಳೆಂದು ಕರೆದದ್ದು.
(೫) ಮಾಧ್ಯಮಿಕ ಶಾಲೆಗಳಲ್ಲಿ ೨ ತರಹಗಳನ್ನು ಕಲ್ಪಿಸಿ, ಉದ್ಯೋಗ ಪ್ರಧಾನ ಮಾಧ್ಯಮಿಕ ಶಾಲೆಗಳು ಮತ್ತು ವಿಷಯ ಪ್ರಧಾನ ಮಾಧ್ಯಮಿಕ ಶಾಲೆಗಳೆಂಬ ಭೇಧಗಳಿರಬೇಕು.

## ಉಚ್ಚ ಶಿಕ್ಷಣ.

ಭಾರತೀಯರಲ್ಲಿ ಇಲ್ಲಿಯ ಉಚ್ಚ ಶಿಕ್ಷಣ ಪಡೆದು ಅನೇಕರು ತತ್ವಜ್ಞಾನ, ಸಾಹಿತ್ಯ, ಕಲೆಗಳಲ್ಲಿ ಮೇಲ್ಪಂಕ್ತಿಯನ್ನು ಪಡೆದಿರುವರು. ಈ ರೀತಿ ಪಾಶ್ಚಿಮಾತ್ಯ ವಿದ್ಯೆಯು ಕೆಲಮಟ್ಟಿಗೆ ಭಾರತೀಯರ ಹಿತವನ್ನೇ ಸಾಧಿಸಿತೆನ್ನಬಹುದು. ಮೊದಮೊದಲು ಇದು ಪಶ್ಚಿಮದವರನ್ನು ಅನುಕರಿಸಲು ಹಚ್ಚಿದರೂ, ಪರಿಣಾಮದಲ್ಲಿ ಹಿಂದೀ ವಿಶ್ವವಿದ್ಯಾಲಯಗಳು ಭಾರತದ ಪ್ರಾಚೀನ ಸಂಸ್ಕೃತಿ, ಮತ್ತು ರಾಷ್ಟ್ರೀಯ ಜ್ಞಾನದ ತವರು ಮನೆಗಳಾಗಿವೆ. ಯುದ್ಧೋತ್ತರ ಪುನರ್‌ರಚನೆಯಲ್ಲಿ ಭಾರತವು ಎಷ್ಟೋ ಹಿಂದೀ ವಿದ್ಯಾರ್ಥಿಗಳನ್ನು ಯುರೋಪ ಮತ್ತು ಅಮೇರಿಕೆಗಳಿಗೆ ಹೆಚ್ಚಿನ ಶಿಕ್ಷಣಕ್ಕಾಗಿ ಕಳುಹಿಸಿದೆ. ಆದರೆ, ಕಾಲಗತಿಯಲ್ಲಿ ಮೇಲ್ತರಗತಿಯ ವಿದ್ಯೆಯು ಭಾರತದಲ್ಲಿಯೇ ವಿದ್ಯಾರ್ಥಿಗಳಿಗೆ ಸಿಗಬೇಕೆಂಬ ಹಾರೈಕೆ ಇರುತ್ತದೆ.

ಒಕ್ಕಲತನದ ವಿದ್ಯೆಯು ನಮ್ಮ ದೇಶದಲ್ಲಿ ವಿಸ್ತಾರವಾಗಿ ಬೆಳೆಯಬೇಕೆಂದು ಆಶಿಸಲಾಗಿದೆ.

ಇವುಗಳಲ್ಲದೆ ಕೇಂದ್ರ ಶಿಕ್ಷಣ-ಪ್ರಸಾರ ಸಂಸ್ಥೆಯೊಂದನ್ನು ನಡೆಸಿ ಭಾರತದ ಶಿಕ್ಷಣ ಸಮಸ್ಯೆಗಳ ನಿವಾರಣೆಗಳಿಗೆ ಎಡೆಮಾಡಿಕೊಟ್ಟಿದೆ. ಜೊತೆಗೆ ಮಾನಸ ಶಾಸ್ತ್ರದ ಸಂಸ್ಥೆಯೊಂದನ್ನೂ ನಡೆಸಿದೆ.

ಶಾಸ್ತ್ರೀಯ ಸಂಶೋಧನೆಯೂ ಈಗ ಭಾರತದಲ್ಲಿ ಮಹತ್ವವನ್ನು ಪಡೆದಿದೆ.

## ಪ್ರೌಢ ಶಿಕ್ಷಣ.

ಇದರ ಪ್ರಚಾರದಲ್ಲಿ ಬರುವ ತೊಂದರೆಗಳು.

(೧) ಸಾಕಷ್ಟು ಶಿಕ್ಷಕರ ಅಭಾವ.
(೨) ಯೋಗ್ಯ ಸಾಹಿತ್ಯದ ಅಭಾವ.

ಪ್ರೌಢ ಶಿಕ್ಷಣದ ಅರ್ಥವು ಬರೆ ಸಾಕ್ಷರತಾ ಪ್ರಸಾರವೆಂದು ತಿಳಿದರೆ ಪ್ರಾಥಮಿಕ ಶಿಕ್ಷಕರು ಅದನ್ನು ಮಾಡಬಲ್ಲರು ಆದರೆ ಈ ಪ್ರೌಢ ಶಿಕ್ಷಣವು

ಸಮಾಜ ಶಿಕ್ಷಣವೆಂದು ತಿಳಿಯಲಾಗಿದೆ. ಆದ್ದರಿಂದ ಇದಕ್ಕಾಗಿಯೇ ತಯಾರಾದ ಶಿಕ್ಷಕರು ಬೇಕು. ಇದಕ್ಕಾಗಿಯೇ ತಯಾರಾದ ಸಾಹಿತ್ಯವು ಸಾಕಷ್ಟು ಬೇಕಾಗಿದೆ. ಕೇಂದ್ರ ಸರಕಾರವು ದಿಲ್ಲಿ ಪ್ರಾಂತದಲ್ಲಿ ಮನರಂಜನೆಗಳಿಂದ ಈ ಕಾರ್ಯವನ್ನು ಹಗುರು ಮಾಡಲು ಪ್ರಯತ್ನಿಸಿದೆ.

### ಸ್ತ್ರೀ ಶಿಕ್ಷಣ.

ಭಾರತದಲ್ಲಿ ಇದು ಬಹುಮಟ್ಟಿಗೆ ಅಲಕ್ಷಿಸಲ್ಪಟ್ಟಿದೆಯೆನ್ನಬಹುದು. ಹಣದ ಕೊರತೆ, ಶಿಕ್ಷಿಕೆಯರ ಅಭಾವ, ಪಾಲಕರ ವಿರೋಧಗಳು ಇದರ ಕಾರಣಗಳಾಗಿವೆ. ಶಿಕ್ಷಿಕೆಯರನ್ನು ತರಬೇತುಗೊಳಿಸುವದೂ ಭಾರತದಲ್ಲಿ ಒಂದು ಸಮಸ್ಯೆಯಾಗಿ ಪರಿಣಮಿಸಿದೆ. ಇದ್ದೂರ ಶಾಲೆಗೆ ಶಿಕ್ಷಕಿಯರಾಗಲು ಸ್ತ್ರೀಯರು ತಮ್ಮೂರಲ್ಲಿಯೆ ತರಬೇತು ಪಡೆಯಬಹುದೆಂದು ಸೂಚನೆ ಮುಂದೆ ಬಂದರೆ ಶಿಶು ಸಂಗೋಪನ ಮತ್ತು ಗೃಹವ್ಯವಸ್ಥೆ ಇವರ ಅಭ್ಯಾಸಪಟ್ಟಿಯಲ್ಲಿ ಮಹತ್ವದ್ದಾಗಿರಬೇಕೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ಹಿಂದುಳಿದ ವರ್ಗದ ಶಿಕ್ಷಣಕ್ಕಾಗಿ ಭಾರತ ಸರಕಾರವು ೩ ಲಕ್ಷ ರೂ. ಗಳನ್ನು ಪ್ರತಿವರ್ಷ ಶಿಷ್ಯ ವೃತ್ತಿಗಳ ಮೇಲೆ ವೆಚ್ಚ ಮಾಡುತ್ತದೆ. ಇದಕ್ಕಾಗಿ ಭಾರತ ಸರಕಾರಕ್ಕೆ ಹಣದ ಅನುಕೂಲತೆಯಾದರೆ ಶೈಕ್ಷಣಿಕ ಸವಲತ್ತುಗಳು ಸಮಾನವಾಗಿ ಸಿಗಬಹುದೆಂದು ಆಶಿಸಲಾಗಿದೆ.

( ಮುಂದಿನ ವಿಷಯ ಜೂನ ತಿಂಗಳ ಸಂಚಿಕೆಯಲ್ಲಿ )

# ಕಪ್ಪು ಕಂದ !

ಲೇ:— **ಕು. ಸೋನು ಆನೇಖಿಂಡಿ ಧಾರವಾಡ.**



ನಮ್ಮೂರ ದೇಸಾಯರು ಸುತ್ತಮುತ್ತಲಿನ ಏಳುಹಳ್ಳಿಗಳಲ್ಲಿ ವಿಖ್ಯಾತರು. ದೇಸಾಯಿ ರಾಮುರಾಯರ ಬಗ್ಗೆ ಎಲ್ಲರಿಗೂ ಆದರವಿದೆ. ದೇಸಾಯರ ಒಬ್ಬನೇ ಮಗನಾದ ಅನಂತನ ಮದುವೆ ಇಂದು ನೆರವೇರಲಿತ್ತು. ಮದುವೆಯ ಮನೆ ಜನ ರಿಂದ ಕಿಕ್ಕಿರಿದು ತುಂಬಿತ್ತು. ಮೊದಲೇ ದೇಸಾಯರ ಮನೆ. ಅದರಲ್ಲಿಯೂ ಅನಂತನ ಮದುವೆ, ದೇಸಾಯರ ನಾಲ್ಕು ಹೆಣ್ಣುಮಕ್ಕಳು,ಅಳಿಯಂದಿರೂ ಹಾಗೂ ಅವರ ಮಕ್ಕಳೂ ಉಳಿದ ಬಳಗದವರೂ ಎಲ್ಲರೂ ಮದುವೆಗೆ ಬಂದಿದ್ದರು.ತನ್ನ ಮದು ವೆಗಾಗಿ ಕೂಡಿದ ಜನರನ್ನು, ಅವರ ಗಡಿಬಿಡಿಯನ್ನು ಕಂಡಾಗ, ಅನಂತನ ತೂಕ ಒಂದು ಮುಷ್ಟಿಮಾಂಸದಿಂದ ಏರುತ್ತಿತ್ತು. ಅನಂತನ ಅಕ್ಕತಂಗಿಯರು ಕಳಸಿಗಿತ್ತಿಯ ರಾಗಿ ಸಡಗರದಿಂದ ಅಡ್ಡಾಡುತ್ತಿದ್ದರು. ಪ್ರತಿಯೊಬ್ಬರೂ ಮದುಮಗನನ್ನು ಮಾತನಾಡಿಸುತ್ತಿದ್ದರು. ಪ್ರತಿಯೊಬ್ಬರೂ ಅವನಿಗಾಗಿ ದುಡಿಯುತ್ತಿದ್ದರು. ಅನಂತನ ತಾಯಿಯಾದ ಸೀತಾಬಾಯರಿಗೆ ಕ್ಷಣಹೊತ್ತು ಬಿಡುವು ಇರಲಿಲ್ಲ. ಅಳಿಯಂದಿರ ಕಾಳಜೀ ತೆಗೆದುಕೊಳ್ಳಬೇಕು, ಬಳಗದವರನ್ನು ಮಾತನಾಡಿಸಬೇಕು, ಇದೆ ಲ್ಲಕ್ಕೂ ಮಿಗಿಲಾಗಿ, ಗಂಡಿನ ಬೀಗಿತ್ತಿಯಾಗಿ ಸೀತಾಬಾಯರಿಗೆ ಅಡ್ಡಾಡಬೇಕಾಗಿತ್ತು !

ಅನಂತನು ತನ್ನ ಅಕ್ಕತಂಗಿಯರ ಕಡೆಗೆ ದೃಷ್ಟಿಕ್ಷೇಪ ಬೀರಿದನು. ಕಮ ಲಕ್ಕ, ನೀಲಾ, ಮಾಲಾ, ಎಲ್ಲರೂ ಉತ್ಸಾಹದಿಂದ ಅಲೆದಾಡುತ್ತಿದ್ದರು. ಆದರೆ ಕೊನೆಯ, ಚಿಕ್ಕ ತಂಗಿಯಾದ ಸರೋಜಳ ಮುಖ ಮಾತ್ರ ಮ್ಲಾನವಾಗಿತ್ತು. ಅನಂತನಿಗೆ ಸರೋಜಳ ಮೇಲೆ ಪ್ರೀತಿ ಬಹಳ. ತನ್ನ ಮದುವೆಯಲ್ಲಿ ಸರೋಜ ಳಿಗೆ ಮನಬಂದಂತೆ ಚೇಷ್ಟೆಮಾಡಿ ಅವಳನ್ನು ನಗಿಸಬೇಕೆಂದು ಅನಂತನು ಅದೆಷ್ಟೋ ವಿಚಾರ ಹಾಕಿಟ್ಟಿದ್ದನು. ಆದರೆ ಸರೋಜಳ ಮುಖ ನೋಡಿದಾಗ ಮಾತ್ರ ಅವನ ವಿಚಾರಗಳೆಲ್ಲವೂ ಮಾಯವಾದುವು ! ಸರೋಜಳ ಈ ಉದಾ ಸೀನತೆಗೆ ಕಾರಣವೇನಿರಬಹುದು ? ಪತಿ, ಪುತ್ರರ ಸಮೇತಳಾಗಿ ಅವಳು ಅಣ್ಣನ ಮದುವೆಗೆ ಬಂದಿದ್ದಾಳೆ. ಉಟ್ಟಸೀರೆ ಬಿಚ್ಚಿ ಅವಳು ಹೊಸಸೀರೆ ಉಟ್ಟಿಲ್ಲ. ಮಗು ವಿನ ಅವತಾರ ಹಾಗೇ ಇದೆ. ಅನಂತನಿಗೆ ಸರೋಜಳನ್ನು ಕಂಡು ತಿರಸ್ಕಾರ ಉಂಟಾಯಿತು. ನನ್ನ ಮದುವೆ ವಿಜ್ರಂಭಣೆಯಿಂದ ನಡೆದದ್ದನ್ನು ನೋಡುವುದು ಅವಳಿಂದ ಆಗುವದಿಲ್ಲವೆ ?

ಅನಂತನಿಗೆ ಸರೋಜಳ ಮದುವೆಯ ನೆನಪಾಯಿತು. ಅವಳ ಮದುವೆ ಯನ್ನು ನೆರವೇರಿಸಬೇಕಾದರೆ ತಾನು ಅದೆಷ್ಟು ಅವಿಶ್ರಾಂತನಾಗಿ ದುಡಿದೆ. ನೀರಿ

ನಂತೆ ಹಣವನ್ನು ಅದೆಷ್ಟು ವೆಚ್ಚಮಾಡಿದೆ. ಅತ್ತೆಯಮನೆಗೆ ಹೋಗಬೇಕಾದರೆ ಸರೋಜಳು ತನ್ನನ್ನು ತಬ್ಬಿಕೊಂಡು ಅತ್ತದ್ದು, ಎಲ್ಲ ಚಿತ್ರಗಳೂ ಅನಂತನ ಕಣ್ಣ ಮುಂದೆ ಸುಳಿದು ಹೋದವು. ಆದರೆ ಇಂದು ತನ್ನ ಮದುವೆ! ಇವಳಿಗೇಕೆ ಉತ್ಸಾಹವಿಲ್ಲ! ಇವಳ ಮುಖಕ್ಕೆ ಗಂಟುಬಿದ್ದ ಕಾರಣವೇನು? ಹೋಗಲಿ. ಅಕ್ಕನಾದ ಕಮಲಕ್ಕ, ನೀಲಾ, ಮಾಲಾ, ಇವರಾದರೂ ಉತ್ಸಾಹದಿಂದ ಅಡ್ಡಾಡುವರಲ್ಲ! ಅವನಿಗೆ ಹೆಚ್ಚುವಿಚಾರ ಮಾಡಲು ವೇಳೆ ಇರಲಿಲ್ಲ. ಅಕ್ಷತೆಗೆ ಮದುಮಗನನ್ನು ಕರೆದುಕೊಂಡು ಹೋಗುವ ವೇಳೆ ತೀರ ಸಮೀಪಿಸಹತ್ತಿತ್ತು. ಗೋಧೋಳಿ ಮುಹೂರ್ತದಲ್ಲಿ ರತಿದೇವಿಗೂ ಸರಿಗಟ್ಟುವ ರೂಪವುಳ್ಳ ಮದುಮಗಳ ಕೈಯನ್ನು ಅನಂತನಿಗೆ ಹಿಡಿಯಬೇಕಾಗಿತ್ತು. ಆಂದಬಳಿಕ ಸರೋಜಳ ವಿಚಾರ ಅನಂತನ ತಲೆಯಿಂದ ತನ್ನಿಂದ ತಾನೇ ದೂರ ಸರಿಯಿತು.

ಅಷ್ಟರಲ್ಲಿ ಕಮಲಕ್ಕನ ಮಗಳು ವಿಜಯಾ, ಪಂಜಾಬಿ ಪೋಷಾಕಿನಲ್ಲಿ ಮುಂದೆ ಬಂದಳು. ಅವಳ ಪುಟ್ಟ ತಮ್ಮ ಹೊಸ ಅಂಗಿ ತೊಟ್ಟುಕೊಂಡು ತಾಯಿಯ ತೊಡೆಯಮೇಲೆ ಆಟವಾಡುತ್ತಿದ್ದನು. ನೀಲಾನ ಮಗ ಪ್ರಕಾಶ ಮಾವಾನ ಮದುವೆಗೆಂದು ಸರದಾರ ಪೋಷಾಕಿನಲ್ಲಿ ಶೋಭಿಸುತ್ತಿದ್ದನು. ಅವನ ಆ ನಡೆಯುವ ಠೀವಿ, ಮಾತನಾಡುವ ರೀತಿ ನೋಡುವಂತಿದ್ದವು. ಮಾಲಾನ ಮಗಳು ಶೈಲಜಾ ಜೋಡು ಹೆಳಲು, ಕುತ್ತಣಿಯ ಫ್ರಾಕು, ದ್ರಾಕ್ಷದ ಲೋಲಕುಗಳಿಂದ ಶೋಭಿಸುತ್ತಿದ್ದಳು. ಮಾವಾನ ಮದುವೆಗೆ ಕೂಡಿದ ಜನರನ್ನು ಮಂಕುಗೊಳಿಸುವಂತೆ ಇತ್ತು ಅವಳ ರೂಪ. ಅನಂತನು ಕ್ರಮೇಣ ಎಲ್ಲ ಚಿಕ್ಕ ಮಕ್ಕಳ ಗಲ್ಲಗಳನ್ನು ಸವರಿ ಮುದ್ದಿಟ್ಟನು.

ಸರೋಜಳಿಗೂ ಒಂದು ಗಂಡು ಮಗು ಇತ್ತು. ಮಗು ಕೇವಲ ಹತ್ತು ತಿಂಗಳದ್ದು. ಮಗು ನೆಲದಮೇಲೆ ಬಿದ್ದು ಅಳುತ್ತಿತ್ತು. ಸರೋಜಳ ಲಕ್ಷ ಮಗುವಿನ ಕಡೆ ಇರಲಿಲ್ಲ. ತನ್ನ ಅಕ್ಕಂದಿರ ಚಿಕ್ಕಮಕ್ಕಳನ್ನು ಮುದ್ದಿಟ್ಟು ಅಣ್ಣನು ಮುಂದೆಬಂದಾಗ, ತನ್ನ ಮಗುವನ್ನು ಎತ್ತಬಹುದೆಂದು ತಿಳಿದು, ಸರೋಜಳು ಮಗುವನ್ನು ಎತ್ತಿಕೊಂಡಳು. ತನ್ನ ಸೀರೆಯ ಸೆರಗಿನಿಂದ ಮಗುವಿನ ಮುಖವನ್ನು ಒರೆಸಿದಳು. ತಾಯಿ ಎತ್ತಿಕೊಂಡಾಗ ಮಗು ಅಳುವುದನ್ನು ನಿಲ್ಲಿಸಿತು. ಅನಂತನು ಸರೋಜಳ ಬಳಿಗೆ ಬಂದನು. "ಸರೋಜಾ ನಿನ್ನ ಕಂದಾ ಕುರೂಪಿ ಅಲ್ಲದೆ, ಅಳುಬುರಕನೂ ಆದನಲ್ಲ" ಎಂದು ಕೊಂಕು ನುಡಿಯೊಂದನ್ನಾಡಿ ಹೊರಟುಹೋದನು. ಸರೋಜಳು ಅಪೇಕ್ಷಿಸಿದಂತೆ ಸಂಭವಿಸಲಿಲ್ಲ. ಅಣ್ಣನು ಉಳಿದ ಅಕ್ಕಂದಿರ ಮಕ್ಕಳನ್ನು ಎತ್ತಿ ಮುದ್ದಿಟ್ಟು, ತನ್ನ ಕಂದನನ್ನು ಕಂಡಾಗ ಈ ಕೊಂಕುನುಡಿ ನುಡಿದದ್ದೇತಕ್ಕೆ? ಸರೋಜಳು ಮಗುವಿನ ಮುಖದ ಕಡೆಗೆ ನೋಡಿದಳು. ನಿಜವಾಗಿಯೂ ಮಗು ಸುರೂಪಿ ಆಗಿರಲಿಲ್ಲ. ಕಣ್ಣು ಮೂಗಿನಿಂದ ಸುಂದರವಾಗಿದ್ದರೂ, ಮಗುವಿನ ವರ್ಣಮಾತ್ರ ಕಪ್ಪು. ಸರೋಜಳ ಇಂದಿನ ಕೋಪಕ್ಕೆ ಈ ಕಪ್ಪುವರ್ಣವೇ

ಕಾರಣವಾಗಿತ್ತು ಆವಳ ಮುಂದೆ ಆಡುತ್ತಿದ್ದ ವಿಜಯಾ, ಶೈಲಜಾ, ಪ್ರಕಾಶ, ಕಮಲಕ್ಕನ ಪುಟ್ಟಪಾಪ, ಎಲ್ಲ ಮಕ್ಕಳು ಕೆಂಪುಬಣ್ಣದವರು. ಸರೋಜಳ ದೃಷ್ಟಿ ತನ್ನ ಅಕ್ಕಂದಿರ ಮೇಲೆ ಹರಿಯಿತು. ತನ್ನ ರೂಪಕ್ಕೂ ಅವರ ರೂಪಕ್ಕೂ ಹೋಲಿಕೆ ಮಾಡಿ ನೋಡಿದಳು. ಅವರಿಗಿಂತ ಚೆಲುವಿನಲ್ಲಿ ತಾನೇನೂ ಕಡಿಮೆಯಾಗಿರಲಿಲ್ಲ. ತನ್ನ ಬಣ್ಣವೂ ಕೆಂಪಾಗಿದೆ. ಉಂಗುರು ಕೂದಲುಗಳಿವೆ. ' ಅಕ್ಕಂದಿರ ಸಾಲಿನಲ್ಲಿ ನಿಂತಾಗ ಒಮ್ಮೆಲೆ ಚೆಲುವೆ ಎಂದು ತೋರುವ ರೂಪು ನಿನಗಿದೆ ' ಎಂದು ಎದುರು ಇರುವ ಕನ್ನಡಿ ಹೇಳುತ್ತಿತ್ತು. ಹಾಗಾದರೆ ತನಗೇಕೆ ಕಪ್ಪು ಕಂದ, ತನಗಿನ್ನು ಕೇವಲ ಇಪ್ಪತ್ತು ವರುಷ. ಮದುವೆಯಾಗಿ ಕೇವಲ ಎರಡೇ ವರುಷಗಳಾಗಿವೆ. ತಾನೆಲ್ಲಿ ಅತ್ತು ಕರೆದು, ದೇವರಲ್ಲಿ ಮಕ್ಕಳನ್ನು ಬೇಡಲು ಹೋಗಿದ್ದೆ. ನಾಲ್ಕು ಜನರು ಅಣಕಿಸುವಂತೆ ತನ್ನ ಪಾಡು ಈ ರೀತಿ ಆದದ್ದು ಏತಕ್ಕೆ ? ಈ ರೀತಿ ಮನಸ್ಸಿನಲ್ಲಿ ಎಣಿಕೆ ಹಾಕಿ, ಹಾಕಿ, ರೇಗಿದಳು. ರೇಗಿನ ಭರದಲ್ಲಿ ಮಗುವನ್ನು ನೆಲಕ್ಕೆ ಅಪ್ಪಳಿಸಿದಳು. ಅಳುವ ಮಗು ಸರೋಜಳ ಕಣ್ಣಿಗೆ ಇನ್ನೂ ವಿದ್ರೂಪವಾಗಿ ಕಂಡಿತು.

ವರನನ್ನು ಕರೆದೊಯ್ಯಲು ಹೆಣ್ಣಿನ ಬೀಗರು, ಶೃಂಗರಿಸಿದ ಕುದುರೆ, ವಾದ್ಯ ಮೇಳಗಳೊಂದಿಗೆ ದೇಸಾಯರ ಮನೆಗೆ ಬಂದರು. ಗಂಡಿನ ಬೀಗರೂ ಒಳ್ಳೇ ತಯಾರಾಗಿದ್ದರು. ಕಮಲಕ್ಕ ತನ್ನ ಪ್ರೀತಿಯ ಬನಾರಸಿ ಪತ್ತಲ ಉಟ್ಟು ಅದಕ್ಕೊಪ್ಪುವ ಕುಪ್ಪಸ ತೊಟ್ಟಿದ್ದಳು. ನೀಲಾ ಪುಣೆಯಲ್ಲಿ ವಾಸಿಸುವವಳು. ಆ ಬೂದಿ ಬಣ್ಣದ ಚಂದೇರಿ ಸೀರೆ ಅದೇ ಬಣ್ಣದ ಕುಪ್ಪಸ ತೊಟ್ಟು ತಯಾರಾದಳು. ಪತಿ ದೇವರ ಪೋಷಾಕಿಗೆ ತಕ್ಕಂತೆ, ಈಗಿನ ಕಾಲಕ್ಕನುಸಾರವಾಗಿ ನೀಲಿ ಬಣ್ಣದ ಸೀರೆ, ಕಂದಿ ಬಣ್ಣದ ಕುತ್ತಣಿಯ ಕುಪ್ಪಸಗಳು ಮಾಲಾನ ರೂಪಕ್ಕೆ ವಿಶೇಷ ಶೋಭೆಯನ್ನು ತಂದಿದ್ದವು. ಮೂವರು ಹೆಣ್ಣುಮಕ್ಕಳು, ಅಳಿಯಂದಿರು ಅವರ ಮಕ್ಕಳು, ಒಳ್ಳೇ ದಕ್ಷತೆವಹಿಸಿ ಸಜ್ಜಾಗಿದ್ದರು. ಆಭರಣಗಳಿಗಂತೂ ಕೊರತೆ ಇರಲಿಲ್ಲ. ಮದುವೆಗೆಂದು ತಯಾರಿಸಿದ ಪೊಷಾಕಿನಲ್ಲಿ ಅನಂತನು ಐಟನಿಂದ ಬಂದು ಅಶ್ವವನ್ನೇರಿದನು ಜನರ ಗುಂಪೊಂದು ಮದುಮಗನನ್ನು ಹಿಂಬಾಲಿಸಿತು. ವಾದ್ಯಗಳು ಮೊಳಗತೊಡಗಿದವು.

ಸರೋಜಳು ಮಾತ್ರ ಈ ಜನಸಂದಣಿಯಲ್ಲಿ ಇರಲಿಲ್ಲ. ಸರೋಜಳ ತಾಯಿಗೆ ನಿಲ್ಲುವದಾಗಲಿಲ್ಲ. ಬೇಗನೆ ಸರೋಜಳ ಕಡೆಗೆ ಓಡಿ ಬಂದರು.

" ಏಳು ಸರೋಜಾ. ಎಲ್ಲರೂ ಅಕ್ಷತಾಕ್ಕ ಹೊರಟಾರ. ನೀನೇಕೆ ಹೀಗೆ ಕುಳಿತಿರುವಿ ? ಮೈಯಲ್ಲಿ ಚೆನ್ನಾಗಿಲ್ಲೇನು ?" ಎಂದು ಕೇಳಿದರು. " ನನಗೇನೂ ಆಗಿಲ್ಲ ' ಸರೋಜಾ ಅಷ್ಟಕಷ್ಟೆ ಉತ್ತರವಿತ್ತಳು.

" ಹಂಗಾರ ಈ ಸೀರೆ ಉಟಗೊಂಡು ತಯಾರಾಗು." ತಾಯಿಯ ಕೈಯಲ್ಲಿದ್ದ ಸೀರೆ ನೋಡಿದಳು. ಅದು ತನ್ನ ಅಕ್ಕನ ಸೀರೆ ಆಗಿತ್ತು. ತನಗೇಕೆ ಅಕ್ಕನ

ಸೀರೆ ಬೇಕು. ಅಕ್ಕನ ಹಂಗು ತನಗೇತಕ್ಕೆ ? ಸರೋಜಾ ತನ್ನ ಪೆಟ್ಟಿಗೆಯನ್ನು ತೆರೆದಳು. ಕೈಗೆಸಿಕ್ಕ ಒಂದು ಸೀರೆಯನ್ನುಟ್ಟು, ಮಗುವನ್ನೂ ಶೃಂಗರಿಸಿದಳು. ಮಗುವನ್ನು ಕರೆದುಕೊಂಡು ಜನಸಂದಣಿಯಲ್ಲಿ ತಾನೂ ಕೂಡಿಕೊಂಡಳು. ವಿಜಯಾ, ಶೈಲಜಾ, ಪ್ರಕಾಶ ಮೂವರೂ ಮಾಮಾನ ಮುಂದೆ ಕುದುರೆಯಮೇಲೆ ಕುಳಿತುಕೊಂಡಿದ್ದರು. ಅವರು ಚೆಲುವರೆಂದು ಮಾಮಾ ಅವರನ್ನು ಕುದುರೆಯ ಮೇಲೆ ಕರೆದುಕೊಂಡಿದ್ದಾನೆ. ತನ್ನ ಮಗ ಕುರೂಪಿ. ತನ್ನನ್ನು ಕೇಳುವವರಾರು ? ಈ ಕಪ್ಪು ಕಂದನನ್ನು ಎತ್ತಿಕೊಂಡು ತಾನು ಹೋಗಬೇಕೆ ? ಮೆರವಣಿಗೆಯಲ್ಲಿ ಹೊರಟ ಜನರೆಲ್ಲರೂ ಸರೋಜಳ ಕಡೆಗೆ ನೋಡಿ " ನಿನಗೆ ಕಪ್ಪು ಕಂದ ಕಪ್ಪು ಕಂದನ ತಾಯಿ ನೀನು " ಎಂದು ಅಂದಂತೆ ಸರೋಜಳಿಗೆ ಭಾಸವಾಯಿತು. ಸರೋಜಳು ಮಗುವನ್ನು ತಿವಿದಳು. ಮಗು ಮತ್ತೆ ಅಳತೊಡಗಿತು. ಸರೋಜಳ ಪತಿ ಇದನ್ನು ನೋಡಲಾರದೆ ಮಗುವನ್ನು ಕರೆದುಕೊಳ್ಳಲು ಕೈ ಮುಂದೆ ಚಾಚಿದನು. ಸರೋಜಳ ದೃಷ್ಟಿ ಪತಿಯ ಕಡೆಗೆ ಹೋಯಿತು. ಸರೋಜಳ ಪತಿಯ ವರ್ಣವೂ ಕಪ್ಪಾಗಿದೆ. ಸರೋಜಳಿಗೆ ಈಗ ಹೊಳೆಯಿತು. ತನ್ನ ಪತಿ ಕಪ್ಪಾಗಿದ್ದಾರೆ. ಆದ್ದರಿಂದ ತನಗೆ ಕಪ್ಪು ಮಗು. ಉಳಿದ ಭಾವಂದಿರು ಬಿಳಿ ಬಣ್ಣದವರು. ತನಗೇಕೆ ದೇವರು ಕಪ್ಪುಪತಿಯನ್ನು ಗಂಟುಹಾಕಿದನು ? ಅವಳ ಸಿಟ್ಟು ನೆತ್ತಿಗೇರಿತು. ಸರೋಜಳ ಪತಿ ಹೆಂಡತಿಯ ಕೆಂಡದಂಥ ಕಣ್ಣನ್ನು ಕಂಡು, ಅಲ್ಲಿಂದ ಕಾಲ್ದೆಗೆದರು.

ಇದನ್ನು ನೋಡುತ್ತಿದ್ದ ಸರೋಜಳ ತಾಯಿ ಮೊಮ್ಮಗನನ್ನು ಎತ್ತಿಕೊಂಡಳು. ಅಜ್ಜಿಯ ಬಗಲಲ್ಲಿ ಕುಳಿತ ಕಂದ ಅಳುವದನ್ನು ನಿಲ್ಲಿಸಿತು. ತನ್ನ ಮೂರ್ಖತಾಯಿಯನ್ನು ಕಂಡೋ ಏನೋ ಫಕ್ಕನೆ ನಕ್ಕು ಬಿಟ್ಟಿತು. ಮಗುವಿನ ಈ ವಿಲಕ್ಷಣ ನಗೆಯನ್ನು ಕಂಡಾಗ ಸರೋಜಳ ವಿವೇಕ ಜಾಗೃತವಾಯಿತು.

" ಅಯ್ಯೋ ತಾನು ಅದೆಷ್ಟು ಹುಚ್ಚಿ ? ಮಗುವಿನ ಬಣ್ಣ ಕಪ್ಪಾಗಿದ್ದರೆ ತಾನೇಕೆ ಇಷ್ಟು ನೊಂದುಕೊಳ್ಳಬೇಕು ? ತನಗೆ ಕುರೂಪಿ ಮಗ ಹುಟ್ಟಿದರೆ ಅಣ್ಣನದೇನು ತಪ್ಪು ? ಒಬ್ಬನೇ ಅಣ್ಣ. ಅವನ ಮದುವೆಯಲ್ಲಿ ತಾನೇಕೆ ಕಣ್ಣೀರನ್ನು ಸುರಿಸಬೇಕು ? ಇದು ಅಪಶಕುನದ ಮಾತು. ಜನಸಂದಣಿಯತ್ತ ಅವಳ ಮನಸ್ಸು ಹರಿಯಿತು. ಎಲ್ಲರೂ ಆನಂದದಿಂದ, ಉತ್ಸಾಹದಿಂದ ಹೊರಟಾಗ, ತನ್ನಿಂದ ಅವಮಾನಿತರಾದ ತನ್ನ ಪತಿ ಮಾತ್ರ ಕೆಳಗೆ ಮುಖಮಾಡಿಕೊಂಡು ಹೊರಟಿದ್ದಾರೆ. ಇದೆಲ್ಲಕ್ಕೂ ತಾನೇ ಕಾರಣಳು. ಥಟ್ಟನೆ ಕಣ್ಣೀರನ್ನು ಒರಸಿಕೊಂಡಳು. ಆ ತಾಯಿಯ ಬಗಲಲ್ಲಿದ್ದ ಮಗುವನ್ನು ಎತ್ತಿಕೊಂಡು, ಅದರ ಮುಖವನ್ನು ಒರೆಸಿ, ಮುದ್ದಿಟ್ಟಳು. ಅವಳಿಗೆ ಆಗ ತನ್ನ ಮಗು ಸುಂದರವಾಗಿಯೇ ಕಂಡಿತು. ಅದೇ ಭರದಲ್ಲಿ ಮಗುವನ್ನು ಮತ್ತೊಮ್ಮೆ ಮುದ್ದಿಟ್ಟಳು. ಎಷ್ಟೆಂದರೂ ತಾಯಿಯ ಹೃದಯ ಸರೋಜಳಿಗೆ ಇತ್ತಲ್ಲವೆ ?

ಕುದುರೆಯ ಮೇಲೆ ಕುಳಿತ ಮದುಮಗನು ಇದೆಲ್ಲವನ್ನೂ ನೋಡಿದನು ತಂಗಿಯ ಸಮಾಧಾನಕರವಾದ ಮುಖವನ್ನು ನೋಡಿದಾಗ ಅವನಿಗೆ ಮಿತಿಮೀರಿದ ಸಂತೋಷವಾಯಿತು. ಸುಖ ಸಂತೋಷದಿಂದ ಸಾಗಿದ ಆ ಮೆರವಣಿಗೆಗೆ ಆಗ ಹೆಚ್ಚಿನ ಶೋಭೆ ಬಂದಿತ್ತು !



# ಗ್ರಹಗಳು
## ಮತ್ತು
# ಮನುಷ್ಯನ ಮೇಲೆ ಅವುಗಳ ಪರಿಣಾಮ

ಲೇಖಾಂಕ ೬

ಲೇ:—ಶ್ರೀ. ಹುಚ್ಚಪ್ಪ.



ಜಲ ತತ್ವದ ಮೂರು ರಾಶಿಗಳು— **ಕರ್ಕ, ವೃಶ್ಚಿಕ, ಮತ್ತು ಮೀನ.**

**ಕರ್ಕ ರಾಶಿ:—** ಜಲತತ್ವದಲ್ಲಿ ಇದು ಮುಖ್ಯ. ಅದರ ಅಧಿಕಾರವು ವ್ಯಕ್ತಿಯ ಶರೀರದಲ್ಲಿ ಎದೆ ಮತ್ತು ಮೊಲೆಗಳ ಮೇಲೆ ಸದುಃಖ ಮತ್ತು ಸಮಭಾವ ಇವೆರಡಕ್ಕೂ ಪೋಷಕವಿರುತ್ತದೆ.

ಹನ್ನೆರಡು ರಾಶಿಗಳಲ್ಲಿ ಈ ರಾಶಿಯು ವಿರೋಧಾಭಾಸವನ್ನುಂಟು ಮಾಡುವ ರಾಶಿಯೆಂದು ತಿಳಿಯಲ್ಪಡುತ್ತದೆ. ಈ ರಾಶಿಯಲ್ಲಿ ಹುಟ್ಟಿದ ಜನರ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳುವದು ನಿಜವಾಗಿ ಬಹಳ ಕಠಿಣವಿರುತ್ತದೆ. ಅತಿ ನಿಕಟ ಪರಿಚಯವುಳ್ಳ ಮಿತ್ರರಿಗೆ ಸಹ ಇವರ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳುವದು ಶಕ್ಯವಾಗುವದಿಲ್ಲ. ಒಂದು ಪಕ್ಷದಲ್ಲಿ ಕೆಲವರು ಬಹಳ ದೊಡ್ಡ ಮನುಷ್ಯರು. ಮತ್ತು ಕೆಲವರು ಹೀನ ಸ್ಥಿತಿಯಲ್ಲಿದ್ದುದು ಕಂಡುಬರುತ್ತದೆ. ಈ ರಾಶಿಯಲ್ಲಿ ಹುಟ್ಟಿದ ಕೆಲವೇ ಜನರು ಎಲ್ಲರ ಕೂಡ ಶಾಂತರೀತಿಯಿಂದ ಮತ್ತು ಸಮಾಧಾನದಿಂದ ಇದ್ದುದು ಕಂಡುಬರುತ್ತದೆ. ಅವರಲ್ಲಿ ನಿಜವಾಗಿ ಸುಖಿಯಾಗಿದ್ದುದು ಕ್ವಚಿತ್ತಾಗಿ ಕಂಡುಬರುತ್ತದೆ ಆದರೂ ಈ ರಾಶಿಯ ಮನುಷ್ಯನು ನಿಜವಾದ ಮನಸ್ಸಿನಿಂದ ಸ್ವಂತದ ದೋಷಗಳನ್ನು ಗೆಲ್ಲಲು ಯತ್ನಿಸಿದರೇ ಮತ್ತು ಅವುಗಳನ್ನು ಗೆಲ್ಲುವದರಲ್ಲಿ ಯಶ ದೊರಕಿಸಿದರೇ ಸುಖಿಯಾಗದೇ ಇರಲಾರನು.

ದೃಢ ನಿಶ್ಚಯವುಳ್ಳವರೂ ಮತ್ತು ಹಟಮಾರಿಗಳೂ ಆಗಿರುತ್ತಾರೆ. ಇವರು ಅಂತರಜ್ಞಾನಿಗಳಿರುತ್ತಾರೆ. ಅದರಂತೆ ಇವರು ಯಾವದಾದರೊಂದು ಉದ್ದೇಶ

ವನ್ನಿಟ್ಟುಕೊಂಡು ಕೆಲಸ ಮಾಡುವವರಿರುತ್ತಾರೆ. ಒಳ್ಳೇ ಆಗ್ರಹದಿಂದ ಸ್ವಂತದ ಉದ್ದೇಶವನ್ನು ಸಿದ್ಧಮಾಡುವದರಲ್ಲಿ ಯಾವಾಗ ತೊಡಗಿರುತ್ತಾರೋ ಆಗ ಅವರು ದೊಡ್ಡ ಯಶಸ್ಸನ್ನು ಬಯಸುತ್ತಾರೆ. ಹೀಗಾಗದಿದ್ದಲ್ಲಿ ಸಣ್ಣ ಪುಟ್ಟ ಕಾರಣಗಳ ಸಲುವಾಗಿ ಅಥವಾ ತೋರಿಕೆಗೆ ಯಾವ ಕಾರಣವಿಲ್ಲದೇ ಅವರು ತಮ್ಮ ಸ್ವಂತದ ನಿಶ್ಚಯವನ್ನಾಗಲಿ ಅಥವಾ ಹಟಮಾರಿತನವನ್ನಾಗಲಿ ಎಷ್ಟೋ ಸಲ ಬಿಡುತ್ತಾರೆ. ಬೇಕಾದಾಗ ಕಾರಣ ತೋರಿಸಿ ಮನವರಿಕೆ ಮಾಡಿಕೊಡಲು ಸಮರ್ಥರಾಗುವದಿಲ್ಲ. ಅವರು ಮನಸ್ಸಿಗೆ ಬಹಳ ತ್ರಾಸುಮಾಡಿಕೊಳ್ಳುವವರಿರುವದರಿಂದ ಸಹಜವಾಗಿ ಎರಡನೆಯವರ ಮನಸ್ಸನ್ನು ನೋಯಿಸಬಲ್ಲರು. ಮತ್ತು ಕೋಪಿಷ್ಠರಾದ ಕೂಡಲೇ ನಿರಾಶಹೊಂದುತ್ತಾರೆ. ಹೀಗಾದಲ್ಲಿ ಮನಸ್ಸಿಗೆ ಬಂದಾಗ ಯೋಚಿಸಿದ ಮಹತ್ವದ ಕಾರ್ಯಗಳನ್ನು ಸಹ ಬಿಟ್ಟು ಬಿಡುತ್ತಾರೆ.

ಅವರು ಪ್ರಸಂಗ ಬಂದಲ್ಲಿ ರಾಕ್ಷಸ ಶಕ್ತಿಯನ್ನು ತೋರಿಸುವರು. ಮತ್ತು ಪ್ರಸಂಗ ಬಂದಲ್ಲಿ ಬಾಲಕರಷ್ಟು ನಿರ್ಬಲರಾಗುವರು. ಇವರು ಮನಸ್ಸಿಗೆ ಬಹಳ ತ್ರಾಸುಮಾಡಿಕೊಳ್ಳುವ ಸ್ವಭಾವದವರಿರುವದರಿಂದ ಎಷ್ಟೋ ಸಲ ತಿಳಿಗೇಡಿತನದ ಕೆಲಸಗಳನ್ನು ಮಾಡುವರು. ಇದರಿಂದ ಅವರ ಮಿತ್ರರಿಗೆ ಬಹಳ ಆಶ್ಚರ್ಯವೆನಿಸುವದು. ಇವರು ಪ್ರಸಂಗವಶಾತ್ ಬಹಳ ನಿರಾಶ ಮತ್ತು ವ್ಯಾಕುಲರಾಗುವರು. ಪ್ರವಾಸದ ಉತ್ಸಾಹವು ಇವರಿಗೆ ಬಹಳ ಇರುವದು. ಅಂದರೆ ಇದರಲ್ಲಿ ಯಾವಾಗಲೂ ಲಾಭ ಆಗುತ್ತದೆಂತಲ್ಲ. ಶಕ್ಯವಿದ್ದಷ್ಟು ಇವರಿಗೆ ಪ್ರವಾಸದ ಸೌಖ್ಯವನ್ನು ಅನುಭವಿಸಗೊಡಬೇಕು.

ಉತ್ತಮ ಶಿಕ್ಷಣ ದೊರೆತಲ್ಲಿ ಇವರು ಬಹಳ ಅಸಾಧಾರಣ ಬುದ್ಧಿಯನ್ನು ವಿಕಾಸ ಗೊಳಿಸುವರು. ಮತ್ತು ಸಾಮಾನ್ಯ ಮನುಷ್ಯರಿಗಿಂತ ಇವರು ಬಹಳೇ ಮುಂದುವರಿಯುವರು. ಉತ್ತಮ ಶಿಕ್ಷಣ ಮತ್ತು ವಿದ್ಯಾಭ್ಯಾಸದಿಂದ ಹೇಳಲಸಾಧ್ಯವಾದಷ್ಟು ಲಾಭವಾಗುವದು. ಇವರಿಗೆ ಒಂದೇ ಉದ್ಯೋಗ ಅಥವಾ ಒಂದೇ ಸ್ಥಳ ಸೇರುವದಿಲ್ಲ. ಹೊಸ ಹೊಸ ಬದಲಾವಣೆಗಳು ಇವರಿಗೆ ಸೇರುವವು. ಉಚ್ಚ ತರಗತಿಯ ಬುದ್ಧಿ ಬಲ ಬಹಳ ಇರುವದರಿಂದ ಇವರಿಗೆ ಹೊಸ ಹೊಸ ಮಾತುಗಳನ್ನು ಕಲಿಯುವದಾಗಲಿ ಹೊಸ ವಿಚಾರವನ್ನು ಆಲೋಚಿಸುವದಾಗಲಿ ಸೇರುತ್ತದೆ. ಇವರು ಜನ್ಮತಃ ಉದಾರ ಸ್ವಭಾವದವರೂ, ಜನರ ಕಲ್ಯಾಣ ಮಾಡುವ ಅಭಿರುಚಿಯುಳ್ಳವರಿರುತ್ತಾರೆ. ಎರಡನೇಯವರ ಹಿತ ಮಾಡುವದರಲ್ಲಿ ಯಾವಾಗಲೂ ಇವರಿಗೆ ಫಲ ಸಿಗುವದಿಲ್ಲ ಆಗ ಇವರಿಗೆ ಬಹಳ ಕೆಡುಕೆನಿಸುವದು. ಪರಮಾರ್ಥದ ಮಾರ್ಗದಲ್ಲಿ ಪ್ರಗತಿ ಆಗದಿದ್ದಲ್ಲಿ ತಮ್ಮ ಮತ್ತು ತಮ್ಮ ಕೆಲಸದ ವಿಷಯವಾಗಿ ಮಿತಿಮೀರಿ ಮಾತುಗಳನ್ನಾಡುವ ಸ್ವಭಾವ ಅವರದಿರುತ್ತದೆ. ಕಾಲ ಗತಿಸಿದಂತೆ ತಮ್ಮ ಸ್ವಂತ ಗುಣಗಾನ ಮಾಡುವ ಸ್ವಭಾವವು ಅವರಲ್ಲಿಯ ಒಂದು ಮಹಾ ದೋಷ

ವಿರುತ್ತದೆ. ಮತ್ತು ಇದರಿಂದ ಬೇರೆಯವರ ಅವರ ಮೇಲಿನ ವಿಶ್ವಾಸವು ಹೋಗುತ್ತದೆ. ಹೀಗಾದಲ್ಲಿ ಅವರಿಗೆ ತಮ್ಮ ವ್ಯವಹಾರ ನಡೆಸುವದು ಬಹಳ ಕಠಿಣವಾಗುತ್ತದೆ. ಎರಡನೆಯವರ ವಶದಲ್ಲಿರುವದು ಇವರಿಗೆ ಬಹಳ ಕಠಿಣಹೋಗುತ್ತದೆ. ಯಾವ ಮನೆಯಲ್ಲಿ ಇವರಿಗೆ ಸರ್ವತೋಮುಖ ಅಧಿಕಾರವಿರುವದಿಲ್ಲವೋ ಅಲ್ಲಿಇವರು ಶಾಂತಿಯಿಂದ ಇರಲಾರರು. ಸರ್ವಾಧಿಕಾರ ಗಳಿಸುವ ಸರ್ವೋತ್ಕೃಷ್ಟ ಮಾರ್ಗವೆಂದರೆ ಅವರು ದೊಡ್ಡ ಯೋಗ್ಯತೆಯನ್ನು ಗಳಿಸಬೇಕು. ಎಲ್ಲಿಯವರೆಗೆ ಬಾಹ್ಯ ವಿಷಯುಗಳಲ್ಲಿ ಆಸಕ್ತಿ ಇರುವದೋ ಮತ್ತು ಅಂತರಾತ್ಮದ ಕಲಾಪ್ರವೃತ್ತಿಯು ಬೆರೆತು ಹೋಗುವದಿಲ್ಲವೋ ಅಲ್ಲಿಯವರೆಗೆ ಸರ್ವಾಧಿಕಾರವು ಪ್ರಾಪ್ತವಾಗಲಾರದು.

ಮನೆಯ ಮೇಲೆ ಅತ್ಯಂತ ಪ್ರೀತಿ ಇರುತ್ತದೆ. ಅದರ ಉತ್ತಮ ವ್ಯವಸ್ಥೆ ಇಡುವದೂ, ಸ್ವಂತದ ಮಕ್ಕಳ ಮೇಲೆ ಅತ್ಯಂತ ಪ್ರೀತಿ ತೋರಿಸುವದು ಸೇರುತ್ತದೆ. ತಮ್ಮ ಅತ್ಯಂತ ಪ್ರೀತಿಯ ಮತ್ತು ನಿಷ್ಠೆಯುಳ್ಳ ಮಿತ್ರರನ್ನು ಇವರು ಆಗಾಗ್ಗೆ ಬದಲಾಯಿಸುವರು. ಮತ್ತು ತಮ್ಮ ಮೊದಲಿನ ಗೆಳೆಯರೊಂದಿಗೆ ಪ್ರಸಂಗವಶಾತ್ ಕಟು ವೈರಿಯಾಗುವರು. ಒಮ್ಮೆ ಇವರು ಮನೋವಿಕಾರಗಳನ್ನು ಮತ್ತು ವಾಸನಾಗಳನ್ನು ಗೆದ್ದಲ್ಲಿ ಮತ್ತು ಹೆಚ್ಚು ಶಾಂತ ಮತ್ತು ವಿಚಾರ ಶೀಲರಾದಲ್ಲಿ ಇವರು ಬಹಳ ದ್ರವ್ಯಸಂಚಯಮಾಡಬಲ್ಲರು, ಗ್ರಹಣ ಶಕ್ತಿಯು ಇವರಲ್ಲಿ ಬಹಳ ಶೀಘ್ರ ಮತ್ತು ತೀಕ್ಷ್ಣವಾಗಿರುತ್ತದೆ. ಸ್ಮರಣ ಶಕ್ತಿಯು ಬಹಳ ಉತ್ತಮ. ಅವಿಶ್ರಾಂತ ಶ್ರಮಪಡುವ ಸ್ವಭಾವ ವಿದ್ವಾನ ಉತ್ತಮವಕ್ತಾ. ಈ ರಾಶಿಯಲ್ಲಿ ಹುಟ್ಟಿದವರಲ್ಲಿ ಕಂಡು ಬಂದಿವೆ. ಎಷ್ಟೋ ವಿಷಯುಗಳಲ್ಲಿ ಅವರು ತೀರ ವಿರುದ್ಧ ಇದ್ದುದು ಕಂಡು ಬಂದಿದೆ. ಇವರು ಬಹಳ ಲೋಭಿಗಳೂ, ಗಂಡಸರಲ್ಲಿ ಬಹಳ ಜೀನತನ ಸ್ವಭಾವದವರೂ, ಹೆಂಗಸರಲ್ಲಿ ದುಡ್ಡು ಗಳಿಸುವ ಮತ್ತು ಅವರಲ್ಲಿ ಅತಿಶಯ ಲೋಭವುಳ್ಳವರಾಗಿಯೂ ಕಂಡುಬರುತ್ತದೆ. ಈ ರಾಶಿಯ ಜನರಿಗೆ ನಿರ್ಧನತೆಯ ಹೆದರಿಕೆ ಬಹಳುಂಟು. ಸ್ವಂತದ ಬಡತನಕ್ಕಾಗಿ ಇವರಿಗೆ ಬಹಳ ನಾಚಿಕೆ ಎನಿಸುವದು. ಮಾನಸ ಶಾಸ್ತ್ರದ ಲೋಭ ಬಹಳ. ಗಂಡಸರು ಕಾರಖಾನೆಗಳಲ್ಲಿ ಕೆಲಸ ಮಾಡುವ ಅವರ ಎಲ್ಲ ತರದ ವ್ಯವಹಾರ ಮಾಡಿ ಎಲ್ಲ ರೀತಿಯಿಂದ ವಿಜಯಶಾಲಿಗಳಾಗುವರು. ಸ್ತ್ರೀಯರು ಬುದ್ಧಿವಂತಿಕೆ ತರ್ಕಶಾಸ್ತ್ರಕ್ಕನುಸರಿಸಿ ಉತ್ತಮ ಲೇಖ ಬರೆಯುವರು. ಉತ್ತಮ ಭಾಷಣಕಾರರು,ಸ್ವಂತ ವಿಚಾರಗಳನ್ನು ಯಾವಾಗಲೂ ಆಶ್ಚರ್ಯಕಾರಕ ರೀತಿಯಲ್ಲಿ ವಿಕಾಸಗೊಳಿಸುವರು, ಒಳ್ಳೇ ದಯದಿಂದ ತುಂಬಿದಂಥವರು, ಕೆಲಸಗಳಲ್ಲಿ ಯಾವಾಗಲೂ ಭಾಗವಹಿಸಿ ಮುಂದುವರಿಯುವವರು ಇರುವವರು, ಸುಶಿಕ್ಷಿತ ಕರ್ಕ ರಾಶಿಯ ಮನುಷ್ಯರು ಪುರೋಗಾಮಿಗಳಾಗಿದ್ದು ಜಗತ್ತಿನ ಸ್ಥಿತಿ ಸುಧಾರಿಸುವ ಬಗ್ಗೆ ಯಾವಾಗಲೂ ಆತುರರಿರುವರು. ಎಷ್ಟೋ ಪುಸ್ತಕಾಲಯಗಳೂ, ಶಾಲೆಗಳೂ, ದವಾಖಾನೆಗಳೂ ಮತ್ತು ಸಾರ್ವಜನಿಕ ಸಂಸ್ಥೆಗಳನ್ನು ಸ್ಥಾಪಿಸುವದರಲ್ಲಿ ಈ ರಾಶಿಯ ಜನರು ಒಲವಿನಿಂದ ಭಾಗತೆಗೆದುಕೊಳ್ಳುವರು.

ಈ ರಾಶಿಯ ಜನರು ಹಗಲಿನಲ್ಲಿ ಬಹಳ ಸುಖಿ ಮತ್ತು ಆನಂದಿಗಳಾಗಿರುವರು. ಮತ್ತು ಒಂದು ವೇಳೆ ಯಾರಿಂದಾದರೂ ಪರಾಭವ ಹೊಂದಿದರೆ ರಾತ್ರಿಯಲ್ಲಿ ಬಹಳ ವಿಚಾರದಿಂದ ಉದಾಸೀನ ಮತ್ತು ದುಃಖಿಯಾಗುವರು ಇಂಥ ಪ್ರಸಂಗದಲ್ಲಿ ಶಾಂತ ಸ್ಥಳಕ್ಕೆ ಹೋಗಿ ಆತ್ಮ ನಿರೀಕ್ಷಣೆಯಿಂದ ಸ್ವಂತದ ವ್ಯಾಕುಲತೆಯನ್ನು ಹೋಗಲಾಡಿಸಬೇಕು. ಧ್ಯಾನ ಮತ್ತು ಆತ್ಮ ನಿರೀಕ್ಷಣೆಯ ಅಭ್ಯಾಸ ಮಾಡಿದಲ್ಲಿ ರಾತ್ರಿಯಲ್ಲಿಯೂ ಸಹ ಆನಂದಿಗಳಾಗುವರು. ಸಲಹೆಯನ್ನು ಕೊಡುವದರಲ್ಲಿ ಇವರು ನ್ಯಾಯವನ್ನು ಅನುಸರಿಸುವರು. ಮತ್ತು ಮಹತ್ವದ ವಿಷಯದಲ್ಲಿ ಸಲಹೆ ಕೊಡುವದು ಇವರಿಗೆ ಬಹಳ ಸೇರುವದು.

ಸ್ವಭಾವದಿಂದ ದಯಾಳೂ, ಎರಡನೇಯವರ ದಾಸರಾಗಲು ಹಿಂಜರಿಯುವವರೂ, ದುಃಖದಲ್ಲಿ ಎರಡನೇಯವರ ಸಹಾಯ ಮಾಡುವವರೂ ಇರುವರು. ತೀರ ಕ್ಷುಲ್ಲಕ ಮನುಷ್ಯನಿಗೂ ಕೂಡ ತಮ್ಮಿಂದ ದುಃಖ ಉಂಟಾಗಿರುವದೆಂದು ಗೊತ್ತಾದರೆ ಇವರು ಮರುಗುವರು. ಇವರು ಮೂಲತಃ ಒಳ್ಳೇಯವರಿರುವದರಿಂದ ಒಂದು ವೇಳೆ ಇವರ ತಪ್ಪುಗಳು ಇವರಿಗೆ ಗೊತ್ತಾದಲ್ಲಿ ಹೆಚ್ಚಿಗೆ ಯೋಗ್ಯರಾಗಲು ಪ್ರಯತ್ನಿಸುವರು. ಸುಧಾರಣೆಯ ಪ್ರಯತ್ನ ಮಾಡುವವರಲ್ಲಿ ಇವರು ಯಶಸ್ವಿಯಾದರೆ ಇವರು ಬಹಳ ಉತ್ತಮ ತರಗತಿಯವರು. ಮತ್ತು ಪ್ರೀತಿಗೆ ಪಾತ್ರರಾಗುವರು ತಮ್ಮ ಪ್ರಿಯರಾಗಿದ್ದ ಜನರ ಹಕ್ಕುಗಳ ಸಂರಕ್ಷಣೆಯ ಸಲುವಾಗಿ ಪ್ರಯತ್ನ ಮಾಡುವದರಲ್ಲಿ ಶೂರ ವೀರರು ಮತ್ತು ಶಕ್ತಿಶಾಲಿಗಳಾದ ಬಹಾದ್ದೂರರಿರುವರು. ಹೆಣ್ಣು ಮಕ್ಕಳ ಸಲುವಾಗಿ ಬಹಳ ಹಟಮಾರಿಗಳು. ಮತ್ತು ಕಲಾಕುಸರಿನ ವಸ್ತುಗಳ ಮೇಲೆ ಸ್ವಭಾವತಃ ಇವರು ಪ್ರೇಮ ಮಾಡುತ್ತಿರುವದರಿಂದ ಇವರಲ್ಲಿ ಕೆಲವರು ಉತ್ತಮ ಗಾಯಕರೂ ಮತ್ತು ಕಲಾವಂತರಾಗಿದ್ದಾರೆ. ವ್ಯಾಯಾಮ ಮಾಡದೇ ಇರುವದರಿಂದ, ಆರೋಗ್ಯದ ನಿಯಮಗಳ ಕಡೆಗೆ ಲಕ್ಷ ಕೊಡದೇ ಇರುವದರಿಂದ, ಇವರ ಪ್ರಕೃತಿಯು ಅಶಕ್ತ ಇರುವ ಸಂಭವವುಂಟು. ಸಾಮಾನ್ಯವಾಗಿ, ಇವರು ಮಧ್ಯಮ ತರಗತಿಯ ಮೈಕಟ್ಟಿನವರಿರುವರು. ಶರೀರದ ಮೇಲ್ಭಾಗವು ಸ್ವಲ್ಪ ದೊಡ್ಡದೂ, ಮುಖವು ದುಂಡಗೆ, ಮೃದುವಾದ ತೊಗಲು, ಶರೀರದ ಬಣ್ಣ ಸುವರ್ಣದ್ದು ಅಥವಾ ಸ್ವಲ್ಪ ಬೆಳ್ಳಗೆ, ಮುಖದ ರಚನೆ ಸಣ್ಣದು, ಕಣ್ಣುಗಳೂ ಸ್ವಲ್ಪ ನೊರೆ ಬಣ್ಣದವೂ, ಮೈಕಟ್ಟು ಅಶಕ್ತ ಇರುವದು.

( ಮುಂದಿನ ವಿಷಯ ಜೂನ ತಿಂಗಳ ಸಂಚಿಕೆಯಲ್ಲಿ )

## ನಮ್ಮ ಪಟ

ಫತ್ತೇಪೂರ ಶಾಮುಣ್ಣಾ ಬೆಳವಣಿಕೆ.

ಸಂಸಾರಗಾಳಿಯಲಿ
ಹಾರುತಿದೆ
ನಮ್ಮ ಪಟ
ಅದೇ ನಮ್ಮ ಬಾಳು ಪಟ–೧

ಪ್ರೇಮ ಅದುವೆ
ಸೂತ್ರವಾಗಿ
ನಮ್ಮ ಪಟವ
ಬಂಧಿಸಿಹುದು–೨

ಮುಂದು ನಾನು
ಹೋಗಬೇಕು
ಪಟವು ದೂರ
ಹಾರಬೇಕು–೩

ಬಾಳು ಪಟದ
ಸೂತ್ರವೆಲ್ಲ
ನಿನ್ನಲಿಹುದು
ಮಾಡಲೇನು–೪

ಸೂತ್ರ ನಿನ್ನಲಿದ್ದರೇನು
ನಿನ್ನ ಭಕ್ತ ನಾನು ಎನಿಸಿ
ಬಾಳು ಪಟವ ಬಯಸದೆನಿತು
ಹಾರಿಸುತಲಿ ಮೆರೆಯುವೆ–೫



ಜಗದ್ವಿಖ್ಯಾತ, ಸಮಾಜಶಾಸ್ತ್ರಜ್ಞ, ನಾಟಕಕಾರ

# ಜಾರ್ಜ ಬರ್ನಾರ್ಡ ಷಾ

ಅಂತರರಾಷ್ಟ್ರೀಯ ಕೀರ್ತಿಯನ್ನು ಪಡೆಯುವ ಈ ಶಿಲ್ಪಿಯು ನಮ್ಮನ್ನು ಅಗಲಿಹೋಗಿದ್ದಾನೆ. ಆಂಗ್ಲ ನಾಟಕಗಳ ಇತಿಹಾಸದಲ್ಲಿ ಇಷ್ಟೊಂದು ಕೀರ್ತಿ ಸಿಕ್ಕಿದ್ದು ಶೇಕಸ್ಪಿಅರ್ ಆದನಂತರ ಇವರಿಗೆನೇ ! ತನ್ನ ನಾಟಕಗಳಿಂದ ಜನರನ್ನು ನಗಿಸುವ, ನಗುವಾಗಲೇ ವಿಚಾರಗಳಲ್ಲಿ ತಿಕ್ಕಾಟವೆಬ್ಬಿಸುವ ಈ ಜಗದ್ವಂದ್ಯ, ನಾಟಕಕಾರನು ಮೊದಲು ಕಾದಂಬರಿಕಾರನಿದ್ದನೆಂದರೆ ಆಶ್ಚರ್ಯವಾಗಲಿಕ್ಕಿಲ್ಲವೇ? ಷಾ ಅವರ ಜನ್ಮವಾದುದು ೧೮೫೬ನೇ ಇಸ್ವಿಯ ಜುಲೈ ೨೬ಕ್ಕೆ ಡಬ್ಲಿನ್‌ದಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಅಷ್ಟೊಂದು ಪ್ರಗತಿ ಅವರಲ್ಲಿ ಕಂಡುಬರಲಿಲ್ಲ ಆದರೆ ಅವರಿಗೆ ಬಂದ ಯಶದಲ್ಲಿ ತಾಯಿಯ ಪಾಲು ದೊಡ್ಡದಿದೆ. ಎಂಬುದನ್ನು ಮಾನ್ಯಮಾಡಲೇಬೇಕಾಗುವದು. ಶಾಲೆಯನ್ನು ಬಿಟ್ಟ ಮೇಲೆ ಷಾ ಅವರು ಏಜಂಟನೊಬ್ಬನ ಕಚೇರಿಯಲ್ಲಿ ಕೆಲಸ ಮಾಡಿದರು. ಆದರೆ ಅದನ್ನು ಬಿಟ್ಟು ಮುಂದೆ ಅವರು ಲಂಡನಕ್ಕೆ ಬಂದರು. ಅವರು ತಮ್ಮ ಲೇಖನಕಾರ್ಯವನ್ನು ಸುರುಮಾಡಿದುದು ೧೮೭೯ ರಲ್ಲಿ ಆ ಕಾರ್ಯವು ಅಷ್ಟೊಂದು ಆಶಾದಾಯಕ ಕಾಣಲಿಲ್ಲ. ಷಾ ಅವರು ೧೮೭೯-೮೩ ರ ಮಧ್ಯದಲ್ಲಿ ಐದು ಕಾದಂಬರಿಗಳನ್ನು ಪ್ರಸಿದ್ಧಗೊಳಿಸಿದರು. ಆದರೆ ಅವೆಲ್ಲವೂ ಅಯಶಸ್ವಿಯಾದವು.

ಷಾ ಅವರ ಮನಸ್ಸಿನ ಮೇಲೆ ಪರಿಣಾಮ ಉಂಟುಮಾಡಿದವರಲ್ಲಿ ಅವರ ತಾಯಿಯ ಹೆಸರನ್ನೇ ಪ್ರಾಮುಖ್ಯವಾಗಿ ಉಚ್ಚರಿಸಬಹುದು. ಅವಳು ಸಂಗೀತ ಕಲೆಯಲ್ಲಿ ನಿಪುಣಳಿದ್ದಳು. ನಿಜವಾಗಿಯೂ ಆಕೆ ಒಬ್ಬ ಆದರ್ಶ ಸ್ತ್ರೀ. ಷಾ ಅವರು ಸಂಗೀತ ಕಲಿತುದು ತಮ್ಮ ತಾಯಿಯಿಂದಲೇ. ಮೊದಲಿನಿಂದಲೂ ಕಡೆಯ ವರೆಗಿನ ಸಂಗೀತ ಪಾಠಗಳನ್ನು ಷಾ ಅವರು ಆಕೆಯಿಂದ ಕಲಿತರು. ಷಾ ಅವರ ಬೌದ್ಧಿಕ ವಿಕಾಸದಲ್ಲಿ ಅವರ ತಾಯಿಯು ಮಾಡಿದ ಸಹಾಯವನ್ನು ಮರೆಯು ವಂತಿಲ್ಲ. ತರುಣ ಷಾ ಲಂಡನ್‌ದ ಬ್ರಿಟಿಶ್ ಮ್ಯೂಜಿಯಮದ ವಾಚನಾಲಯದಲ್ಲಿ ಕೂತಾಗಲೆಲ್ಲ ಅವರ ಕೈಯಲ್ಲಿ ಮಾರ್ಕ್ಸನ 'ಕೆಪಿಟಲ್' ಒಂದು ಕಂಡುಬರುತ್ತಿತ್ತು. ೧೮೮೨ ರಲ್ಲಿ ಅವರು ಹೆನ್ರಿ ಜಾರ್ಜರ ಭಾಷಣಗಳನ್ನು ಕೇಳಿದರು ಮತ್ತು ಅವುಗಳ ವಿಚಾರದಲ್ಲಿ ತಮ್ಮ ವಿಚಾರಗಳನ್ನು ಬೆರೆಯಿಸಿದರು ಅವರು ಪೂರ್ಣ ಸಮಾಜ ವಾದಿಗಳಾದರು. ಸಿಡ್‌ನೆ ವೆಬ್, ಬಿಯ್ಯಟ್ರೀಸ ವೆಬ, ವಿಲ್ಯಾಮ ಮಾರೀಸ ಇವರು ಷಾ ಅವರ ಮಿತ್ರವೃಂದದಲ್ಲಿ ಇದ್ದರು. ೧೮೮೪ ರಲ್ಲಿ ಷಾ ಫೆಬಿಯನ್ ಸೊಸಾ

ಯಿಟಿಯ ಸಭಾಸದರಾದರು. ಅಂದಿನಿಂದಲೂ ೧೯೦೪ ರವರೆಗೆ ಅವರ ಆ ಸೊಸಾಯಿಟಿಯ ಪ್ರಚಾರಾರ್ಥ ಲೇಖನ ಕಾರ್ಯವನ್ನು ಮಾಡಿದರು. ಕೇವಲ ಸಮಾಜವಾದದ ತತ್ವಗಳನ್ನು ಹರಡುವದಕ್ಕಾಗಿಯೇ ಆ ಸೊಸಾಯಿಟಿಯ ಸ್ಥಾಪನೆಯಾದುದು. ಸಂಶೋಧನ, ಶಿಕ್ಷಣ ಮತ್ತು ಪ್ರಚಾರ ಇವುಗಳ ಮೇಲೆಯೇ ಆ ಸೊಸಾಯಿಟಿಯ ವಿಶ್ವಾಸವಿದ್ದಿತು. ಒಮ್ಮೆಲೆ ಕ್ರಾಂತಿಕಾರಕ ಬದಲಾವಣೆ ಆಗಬಹುದೆಂದು ಅದರ ವಿಚಾರವಿದ್ದಿಲ್ಲ. ಶಾ ಕೂಡ ಕಾನ್‌ಸ್ಟಿಟ್ಯೂಶನಲ್ ಸಮಾಜವಾದಿಗಳೇ ಇದ್ದರು.

ಶಾ ಅವರು ತಮ್ಮ ಸಾಧ್ಯ ಲೇಖನವನ್ನು ಸುರು ಮಾಡಿದ್ದು ೧೮೮೫ ರಲ್ಲಿ ಅವರು ಬರೆದ ಕಾದಂಬರಿಗಳಲ್ಲೆಲ್ಲ ನಾಟಕಕಾರನ ಶೈಲಿಯೇ ಕಂಡುಬರುತ್ತದೆ. ಕಾದಂಬರಿಕಾರನದಲ್ಲ ಎಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಕಾದಂಬರಿಗಳಲ್ಲಿ ಅವರ ಮನಸ್ಸು ಸಂವಾದದ ಕಡೆಗೆ ಇದೆ ಎಂಬುದು ಕಂಡುಬರುತ್ತದೆ. ವರ್ಣನೆ ಅಥವಾ ಕಥನೆಗಿಂತಲೂ ಅವರು ತೀಕ್ಷ್ಣವಾದ ಸಂವಾದವನ್ನು ಸಹಜವಾಗಿ ಬರೆಯುತ್ತಿದ್ದರು. ನಾಟಕ ಬರೆಯುವದಕ್ಕಿಂತಲೂ ಮೊದಲಿನ ತಯಾರಿ ಎಂದು ಅವರ ಕಾದಂಬರಿಗಳೆಡೆಗೆ ದೃಷ್ಟಿಕೋನವನ್ನು ತಿರುಗಿಸಬಹುದು.

ಶಾ ಅವರ ಮೊದಲನೇ ನಾಟಕ ಹೊರಗೆ ಬಂದುದು ೧೮೯೨ ರಲ್ಲಿ. ಅದಕ್ಕೂ ಮೊದಲು ಇಬ್ಸೆನ್‌ನೇ ತನ್ನ ನಾಟಕಗಳ ಮೂಲಕ ರಂಗಭೂಮಿಯನ್ನು ಶೃಂಗಾರಗೊಳಿಸಿದ್ದನು. ಇಬ್ಸೆನ್‌ನ ನಾಟಕಗಳ ಅಭಿನಯ ಪದ್ಧತಿಯು ಶಾ ಅವರ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿತು. ಇಬ್ಸೆನ್‌ನ ' ಡಾಲ್ಸ ಹಾವುಸ' ಶಾ ಅವರಿಗೆ ಬೇರೆ ದಿಶೆಯೊಂದನ್ನೇ ತೋರಿಸಿತೆಂದು ಹೇಳಬಹುದು. ಶಾ ಅವರು ಇವತ್ತಿನ ವರೆಗೆ ಐವತ್ತು ನಾಟಕಗಳನ್ನು ಬರೆದು ಆಂಗ್ಲ ರಂಗಭೂಮಿಯ ಇತಿಹಾಸದಲ್ಲಿಯೇ ಕೀರ್ತಿಯ ಕಳಸವನ್ನು ಮುಟ್ಟಿದಂತಾಗಿದೆ. ಅವರ ನಾಟಕಗಳು ನಾನಾ ತರಹದ ಟೀಕೆಗಳಿಗೆ ಗುರಿಯಾದವು. ' ಶಾ ನಾಟಕಕಾರನೇ ಅಲ್ಲ ' ಎನ್ನುವದಕ್ಕೂ ಕೂಡ ಕೆಲವು ಜನರು ಹಿಂಜರಿಯುವದಿಲ್ಲ. ಆ ಜನರ ಹೇಳಿಕೆಯು ' ಶಾ 'ರ ಎಲ್ಲ ನಾಟಕಗಳೂ ಪ್ರಚಾರಾತ್ಮಕವಾಗಿವೆ, ಅದರಲ್ಲಿ ಕಲೆಯ ಅಂಶವು ಇಲ್ಲವೇ ಇಲ್ಲ. ನಾಟಕಕಾರ-ಕಲಾಕಾರ ಎಂದು ಅನ್ನುವದು ಶಕ್ಯವಿಲ್ಲ. ಅವರ ನಾಟಕಗಳಲ್ಲಿಯ ಪಾತ್ರಗಳೆಲ್ಲವೂ ದಾರ ಕಟ್ಟಿದ ಗೊಂಬೆಗಳಂತಿವೆ. ಶಾ ನಾಟಕಕಾರನಲ್ಲ, ದಾರದ ಮೂಲಕ ಗೊಂಬೆಗಳನ್ನಾಡಿಸುವವ ' ಎನ್ನುವದೇ ಆಗಿತ್ತು. ಶಾ ರ ನಾಟಕಗಳಲ್ಲಿ ಕಥಾನಕ ಇರುವದಿಲ್ಲ ಎಂಬುದೇ ವಿಮರ್ಶಕರ ಬಾಯಿಮಾತಾಗಿದೆ. ಈ ವಿಮರ್ಶೆಯು ಪೂರ್ಣ ತಪ್ಪಿದೆ ಎಂದು ಹೇಳುವದು ಸರಿಯಾಗಿರಲಾರದು. ಶಾ ರ ನಾಟಕಗಳು ಕೆಲವೊಂದು ಅಂಶದಿಂದ ಬೇರೆಯೇ ಆಗಿರುತ್ತದೆ. ನಾವು ಯಾವದಕ್ಕೆ ' Problem plays ' ಎನ್ನುತ್ತೇವೆಯೋ ಅಂತಹವೇ ಈ ನಾಟಕಗಳಾಗಿವೆ. ಇದೇ ಒಂದು ದೊಡ್ಡ ಅಂತರವೇ ಶಾ ಮತ್ತು ಆಸ್ಕರ

ವಾಯಿಲ್ಡ ಇವರಿಬ್ಬರಲ್ಲಿ ಇರುತ್ತದೆ. ಜನರ ಮನರಂಜನೆ ಮಾಡುವದರಗೋಸುಗ ಆಸ್ಕರ ವಾಯಿಲ್ಡ ತನ್ನ ಲಕ್ಷ್ಯವನ್ನು ಪೂರೈಸುತ್ತಾನೆ. ಷಾ ವಿನೋದದ ಸಲುವಾಗಿ ವಿನೋದವನ್ನೆಂದೂ ಮಾಡಿಲ್ಲ. ಷಾ ನ ಪ್ರತಿಯೊಂದು ನಾಟಕವೂ ವಿಚಾರ ಪರಿಪ್ಲುತವಾಗಿದೆ. ಯಾವುದೋ ಒಂದು ಪ್ರಶ್ನೆಯ ಚರ್ಚೆ ಅದರಲ್ಲಿ ಬರುತ್ತದೆ. ಷಾ ಕೇವಲ ನಾಟಕಕಾರನಲ್ಲದೇ ವಿಚಾರ ಪೂರ್ಣ ಸಾಹಿತಿ ಮತ್ತು ಸಮಾಜ ಸೇವಕನಿದ್ದನೆಂಬದನ್ನು ಅಲ್ಲಗಳೆಯುವಂತಿಲ್ಲ. 'ಕಲೆಯ ಸಲುವಾಗಿಯೇ ಕಲೆ' ಎಂಬ ತತ್ತ್ವವು ಷಾ ಅವರನ್ನು ಬಾಧಿಸಿದ್ದಿಲ್ಲ. ಷಾ ರ ನಾಟಕಗಳಲ್ಲಿ ಸಾಮಾಜಿಕ, ಧಾರ್ಮಿಕ, ನೈತಿಕ, ರಾಜಕೀಯ, ಧಾರ್ಮಿಕ ವಿಚಾರಗಳ ಸಂಕಲನಗಳು ಕಂಡುಬರುತ್ತದೆ. ನಾಟಕ ಬರೆಯುವ ವೇಳೆಯಲ್ಲಿ ಷಾ ರ ಮುಂದೆ ಒಂದೇ ಒಂದು ಧ್ಯೇಯವಿರುತ್ತಿತ್ತು. ಆ ಧ್ಯೇಯವನ್ನು ಹಿಂಬಾಲಿಸಿಯೇ ಅವರು ತಮ್ಮ ಒಂದೊಂದು ಕಲಾಕೃತಿಯನ್ನು ಜನರಿಗೆ ಒದಗಿಸಿಕೊಟ್ಟರು. 'ವಿಡೋವರ್ಸ ಹಾವುಸ' ಎಂಬ ಮೊದಲನೇ ನಾಟಕದಲ್ಲಿ ಬಡಜನರ ಮೂಲಕ ತಮ್ಮ ಮನರಂಜನೆ ಸಾಗಿಸುವಂಥ ಶ್ರೀಮಂತರಿಗೆ ಬರಿಕೊಟ್ಟರು. 'ಮಿಸೆಸ್ ವಾರೆನ ಪ್ರೊಫೆಶನ್' ದಲ್ಲಿ ಅವರು ವೇಶ್ಯಾ ಜನರ ಪ್ರಶ್ನೆಯನ್ನು ಬಿಡಿಸುವಂತಿದೆ. 'ದಿ ಮ್ಯಾನ ಆಫ್ ಡೆಸ್ಟಿನಿಯಲ್ಲಿ' ಅವರು ನೆಪೋಲಿಯನ್‌ನ ಬೇರೆ ಚಿತ್ರವೊಂದನ್ನೇ ಮೂಡಿಸಿದ್ದಾರೆ. 'ಮೇಜರ ಬಾರ್ಬರಾ' ದಲ್ಲಿ ಷಾ ಯುದ್ಧ ಪಿಪಾಸು ಕಾರಖಾನೆದಾರರ ಬತ್ತಲೆ ಸ್ವರೂಪವನ್ನೇ ಮೂಡಿಸಿದ್ದಾರೆ. 'ದಿ ಡಾಕ್ಟರ್ಸ ಡಾಯಲೆಮಾ' ದಲ್ಲಿ ಡಾಕ್ಟರ ಜನರ ವಿಷಯದಲ್ಲಿ ಮನೋರಂಜಕ ಮತ್ತು ಮರ್ಮ ಭೇದಕ ವಿಮರ್ಶೆ ಮಾಡಿದೆ.

ಷಾ ತಮ್ಮ ನಾಟಕಗಳಲ್ಲಿ ಮೇಲಿನಂತೆ ಪ್ರಶ್ನೆ ತೆಗೆದುಕೊಂಡದ್ದರಿಂದ ಅವರ ನಾಟಕಗಳಿಗೆ ಬೇರೆ ಒಂದು ಸ್ವರೂಪವೇ ಪ್ರಾಪ್ತವಾಗಿದೆ ಎನ್ನಬಹುದು. ನಾವು 'ಆ್ಯಕ್ಶನ್' ಎಂದು ಯಾವದಕ್ಕೆ ಅನ್ನುತ್ತೇವೆಯೋ ಅದು ಷಾ ರ ನಾಟಕಗಳಲ್ಲಿ ಕಂಡು ಬರುವದಿಲ್ಲ; ಆದರೆ ಚರ್ಚೆಯು ಇರುತ್ತದೆ. ಅವರು ನಿರ್ಮಿಸಿದ ಪಾತ್ರಗಳೆಲ್ಲವೂ ದಿವಾಣಖಾನೆಯಲ್ಲಿ ಚರ್ಚೆ ಮಾಡುವದರಲ್ಲಿ ಮಗ್ನವಾದುದು ಕಂಡುಬರುತ್ತದೆ ಅಂತೆಯೇ ಷಾರ ನಾಟಕಗಳಿಗೆ 'ಡಿಕ್ಶನ್ ಪ್ಲೇಜ' ಎಂದು ಜನರು ಅನ್ನುವದುಂಟು. ಷಾ ಇಂಥ ನಾಟಕಗಳನ್ನು ಬರೆದು ರಂಗಭೂಮಿಯಮೇಲೆ ಬೇರೆ ಒಂದು ಜ್ಞಾನಯಾಗವನ್ನೇ ಸುರು ಮಾಡಿದರೆಂದು ಹೇಳಬಹುದು. ಲಲಿತ ವಾಙ್ಮಯದಲ್ಲಿ ನಾಟ್ಯಕಲೆಯ ಸ್ಥಾನವು ಉಚ್ಚಮಟ್ಟದ್ದಿರುತ್ತದೆ ಯಾಕಂದರೆ ಒಂದೇ ಬಾರಿ ಆ ಕಲಾಕೃತಿಯನ್ನು ನೋಡಲು ಶಕ್ತರಾಗುತ್ತಾರೆ. ಪ್ರಚಾರ ಸಾಧನೆಗಂತೂ ನಾಟ್ಯಕಲೆಯ ಉಪಯೋಗ ಹೇಳತೀರದು. ಅಂತೆಯೇ ಷಾರಿಗೆ ಜನರು 'ಆಧುನಿಕ ವ್ಹಾಲ್ಟೇರ್ ಮತ್ತು ಗಿಬನ್' ಎಂದು ಅನ್ನುತ್ತಾರೆ. ಅವರ ನಾಟಕಗಳಲ್ಲಿ ಮೂರು ನಾಟಕಗಳು ಪ್ರಥಮ ಸ್ಥಾನ ಪಡೆಯುವಂತಹವಿವೆಯೆಂದು ವಿದಿತವಾದ

ಮಾತು. ಅದರಲ್ಲಿಯೂ ಕೂಡ ಷಾ 'ಬ್ಯಾಕ ಟು ಮ್ಯಾಥುಸಿಲಾ' ಎಂಬ ಅದ್ವಿತೀಯ ನಾಟಕ ಬರೆದು ರಂಗಭೂಮಿಯ ಮೇಲೆ ಒಂದು ವಿಕ್ರಮವನ್ನೇ ಸ್ಥಾಪಿಸಿದರೆಂದು ಹೇಳಬಹುದು. ೧೯೨೧ ರಲ್ಲಿ ಈ ನಾಟಕದಲ್ಲಿ ವಿಶ್ವದ ಆರಂಭದಿಂದ ಈಗಿನವರೆಗಿನ ಇತಿಹಾಸವು ವರ್ಣಿಸಲ್ಪಟ್ಟಿದೆ. ಸ್ವತಃ ಷಾರಿಗೆ ಈ ನಾಟಕವೆಂದರೆ ತಮ್ಮ ಇಮಾರತಿಯ ಮೇಲಿನ ಬಂಗಾರದ ಕಳಸವಿದ್ದಂತಿದೆ. ಷಾ ಈ ನಾಟಕದಲ್ಲಿ 'ಲಾಯಫ ಫೋರ್ಸ' ದ ಮನುಷ್ಯನ ಮೇಲೆ ಮತ್ತು ಅವನ ಭವಿತವ್ಯದ ಮೇಲೆ ಆಗುವ ಪರಿಣಾಮವನ್ನು ಚಿತ್ರಿಸಿದ್ದಾರೆ. 'ಮ್ಯಾನ್ ಆ್ಯಂಡ ಸುಪರಮ್ಯಾನ್' ದಲ್ಲಿ 'ಹೊಸ ಪುರುಷೋತ್ತಮನೊಬ್ಬನ ಜರೂರಿ ಇದೆ. ಅವನು ಇಲ್ಲದ ಹೊರತು ಮನುಷ್ಯನ ಹೀನತ್ವವು ಹೋಗಲಾರದು' ಎಂದು ಅವರು ಹೇಳಿದ್ದಾರೆ. ಈ ನಾಟಕವು ತನ್ನ ವಿಚಾರಗಳ ಶ್ರೇಷ್ಠತೆಗಾಗಿ ಎಲ್ಲರಿಗೂ ಸೇರುತ್ತದೆ. ಆಮೇಲೆ ಎಲ್ಲರಿಗೂ ಬೇಕಾದಂಥ 'ಕಾಡಿಡಾ' ನಾಟಕವಿರುತ್ತದೆ. ಈ ಹೊಸ ಸ್ತ್ರೀಯನ್ನು ತಮ್ಮ ಮುಂದೆಯೇ ನಿಲ್ಲಿಸಿರುತ್ತಾರೆ ಆಕೆಯ ಸ್ವಭಾವ ಚಿತ್ರವು ಬಹಳ ಮಾರ್ಮಿಕವಾಗಿ ಚಿತ್ರಿಸಲ್ಪಟ್ಟಿದೆ. 'ಷಾರಿಗೆ ಸ್ವಭಾವ ಚಿತ್ರಣ ಬರುವದಿಲ್ಲ' ಎಂದು ಅನ್ನುವ ಜನರನ್ನು ಅದು ಸುಮ್ಮನೆ ಕೂಡ್ರಿಸುವಂತಿದೆ. ಇದರ ಹೊರತು ಸೆಂಟ ಜೋನ್ಸ, ದಿ ಆ್ಯಪಲ್ ಕಾರ್ಟ, ಟೂ ಟ್ರು ಟು ಬಿಗುಡ್' ಈ ನಾಟಕಗಳು ವಿಶೇಷ ಪ್ರಸಿದ್ಧಿಯನ್ನು ಪಡೆದಿವೆ. 'ಪಿಗ್‌ಮ್ಯೆಲಿಯನ್' ನಾಟಕ ಕೂಡ ವಿಚಾರಗಳಲ್ಲಿ ತಿಕ್ಕಾಟವೆಬ್ಬಿಸುವದೆಂದೇ ತಿಳಿಯಲ್ಪಟ್ಟಿತ್ತು.

ಷಾ ಇಷ್ಟೆಲ್ಲ ನಾಟಕಗಳನ್ನು ಬರೆದು ಜಗತ್ತಿನ ವಿಚಾರಗಳಲ್ಲಿ ಒಂದು ದೊಡ್ಡ ಪಾಲು ವಿಚಾರಗಳನ್ನು ಬೆರೆಯಿಸಿದ್ದಾರೆ. ಉಪಹಾಸ ಮತ್ತು ವಿನೋದಗಳೇ ಅವರ ಅಸ್ತ್ರಗಳಾಗಿದ್ದರಿಂದ ಅವರಿಗೆ 'ಲಾಫಿಂಗ ಫಿಲಾಸಾಫರ' ಅನ್ನುವದುಂಟು. ಅವರ ಎಲ್ಲೆಲ್ಲಿಯೂ ಒಬ್ಬಿಬ್ಬ ಡಾಂಭಿಕತನವನ್ನು ಮತ್ತು ಅಸತ್ಯತೆಯನ್ನು ಮುಂದೆ ಎಳೆದು ಅವುಗಳ ವಿಷಯದಲ್ಲಿ ತಮ್ಮ ವಿಚಾರವನ್ನು ವ್ಯಕ್ತಪಡಿಸಿದರು ಅವರ ವಿಚಾರಗಳು ಯೋಗ್ಯ ಮತ್ತು ಸಾವೇಶವಾಗಿರುತ್ತಿದ್ದವು. ಕೇವಲ 'ನಾಟಕಕಾರ' ಎಂದೇ ಕೀರ್ತಿಕಳಸವನ್ನು ಮುಟ್ಟಿದಂತಾಯಿತಷ್ಟೇ ಅಲ್ಲ ಆದರೆ ಒಬ್ಬ ಮಹಾನ್ 'ವಿಚಾರವಂತ' ಎಂದೂ ಕೂಡು ಷಾರ ಹೆಸರು ಅಜರಾಮರ ಉಳಿಯುತ್ತದೆ. ಅವರು ಜಗತ್ತಿಗೇ ಕಲಿಸಿದರು. ಒಬ್ಬ ದೊಡ್ಡ ಶಿಕ್ಷಕರು ಅವರಿದ್ದರು. ವಿಚಾರ ಮಾಡುವ ಮಾರ್ಗವನ್ನೇ ಜಗತ್ತಿಗೆ ತಿಳಿಸಿಕೊಟ್ಟರು. ಅವ್ಹಾನಿಸುವದನ್ನು ಮತ್ತು ಬಂಡಖೋರ ವೃತ್ತಿಯನ್ನು ಆತ್ಮಸಾತ್ ಮಾಡಲು ಕಲಿಸಿದರು. ಅಂತೆಯೇ ಅವರಿಗೆ 'ಮೂರ್ತಿ ಬಂಜಿಕ' ಎನ್ನುತ್ತಾರೆ. ಷಾರಿಗೆ ಬೇಕಿದ್ದುದು ವಿಚಾರಗಳ ಸಾಮ್ರಾಜ್ಯವೇ. ಷಾರ ನಾಟಕಗಳು ರಂಗಭೂಮಿಯಮೇಲೆ ಬಹಳೇ ಪ್ರಸಿದ್ಧಿಯನ್ನು ಪಡೆದವು. ಕಲೆ ಮತ್ತು ಪ್ರಚಾರ ಇವೆರಡುವುಗಳನ್ನೂ ಕಲೆಹಾಕಿ ಅಪೂರ್ವ ಪ್ರಯೋಗವೊಂದನ್ನು ಮಾಡಿದರೆಂದೇ ಹೇಳಬಹುದು. ಒಬ್ಬ ನಾಟಕಕಾರನೆಂದಷ್ಟೇ ಅಲ್ಲ ಆದರೆ ಮಹಾನ್ ವಿಚಾರವಂತನೊಬ್ಬನೆಂದು ಅವರ ಹೆಸರು. ಅಮರವಾಗಿ ಉಳಿಯುವದು. [ಮರಾಠೀ ಲೇಖವೊಂದರಿಂದ]

# ಹೊಸ ರೂಪ ತಳೆದ ಕೊಣ್ಣೂರು



ಬೆಳಗಾವಿ ಜಿಲ್ಲೆಯ ಕೊಣ್ಣೂರಲ್ಲಿ ಈಗ ಪ್ರಶಸ್ತವಾದ ಚನ್ನಾಗಿ ಗಾಳಿ ಬೆಳಕುಗಳಾಡುವ ಹೊಸ ಮನೆಗಳ ಸಾಲಗಳು ಕಂಗೊಳಿಸತೊಡಗಿವೆ. ಅಲ್ಲಿಯ ಹಿಂದುಳಿದ ವರ್ಗದವರಾದ ಬೇಡರು ಹಾಗು ಒಡ್ಡರು ಅನೇಕ ಶತಮಾನಗಳಿಂದ ಹುಲ್ಲಿನ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಸಹಕಾರಿ ಪ್ರಯತ್ನವೀಗ ಅವರಿಗೆ ತಮ್ಮ ವಸತಿ ಸುಧಾರಣೆಯ ಹೊಸ ದಾರಿಯನ್ನು ತೋರಿಸಿ ಕೊಟ್ಟಿದೆ.

ಕೊಣ್ಣೂರ ವಡ್ಡರ ಹಾಗು ಬೇಡರ ಸಹಕಾರಿ ವಸತಿ ಸಂಘವು ೧೯೫೦ ರಲ್ಲಿ ಸ್ಥಾಪಿಸಲ್ಪಟ್ಟಿತು. ಪ್ರತ್ಯಕ್ಷ ಕಾರ್ಯ ಆರಂಭವಾದದ್ದು ೧೯೫೨ ರಲ್ಲಿ ಅಲ್ಲಿ ಕಟ್ಟಬೇಕೆಂದಿರುವ ೯೭ ಮನೆಗಳಲ್ಲಿ ಕೇವಲ ಆರೇ ತಿಂಗಳುಗಳಲ್ಲಿ ೧೬ ಪೂರ್ತಿಗೊಂಡಿವೆ. ಮೊನ್ನೆ ಗಾಂಧೀ ಜಯಂತಿಯ ದಿನದಂದು ಮುಂಬಯಿ ರಾಜ್ಯದ ಸಹಕಾರ ಮಂತ್ರಿ ಶ್ರೀ. ಪಾಟೀಲ ಮಲ್ಲನಗೌಡರು ಈ ಹೊಸ ಮನೆಗಳ ಉದ್ಘಾಟನಾ ಸಮಾರಂಭವನ್ನು ನೆರವೇರಿಸಿದರು. ಇನ್ನೂ ೩೨ ಮನೆಗಳ ಕೆಲಸ ಮುಗಿಯುತ್ತ ಬಂದಿದೆ.

ಸರಕಾರವು ಈ ಸಂಘಕ್ಕೆ ೧,೪೦,೦೦೦ ರೂ. ಗಳ ಸಾಲವನ್ನು ಬಡ್ಡಿಯಿಲ್ಲದೆ ಕೊಟ್ಟಿತು. ಸಂಘವು ೨೦ ವರ್ಷಗಳಲ್ಲಿ ಸುಲಭ ಕಂತುಗಳಲ್ಲಿ ಸಾಲವನ್ನು ತಿರುಗಿ ಮುಟ್ಟಿಸಬಹುದು. ಮನೆಗಳನ್ನು ಕಟ್ಟುವಲ್ಲಿ ಸಂಘದ ಸದಸ್ಯರೇ ಸ್ವತಃ ದುಡಿದರು. ಈ ವರೆಗೆ ಅವರು ಸ್ವಶ್ರಮದಿಂದ ಮಾಡಿದ ಕೆಲಸಕ್ಕೆ ೧೨,೦೦೦ ರೂ. ವೆಚ್ಚ ಬರಬಹುದಿತ್ತೆಂದು ಅಂದಾಜುಮಾಡಲಾಗಿದೆ. ಪ್ರತಿ ಮನೆಯು ಕಲ್ಲಿನ ಗೋಡೆ ಹಾಗು ಹಂಚಿನ ಚಪ್ಪರಗಳುಳ್ಳ ಪಕ್ಕಾ ಕಟ್ಟಡವಾಗಿದೆ.

ಪ್ರಾದೇಶಿಕ ಪ್ರಸಿದ್ಧಿ ಅಧಿಕಾರಿಗಳು
ಧಾರವಾಡ ಇವರ ಪರವಾಗಿ

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ 'ಅಕ್ಕನ ಪೆಟ್ಟಿಗೆ'ಗೆ ಓಲೆಗಳನ್ನು ಕಳುಹಿಸಬಹುದು. ಮತ್ತೆ ನೀವೇ ಬರೆದ ಸಣ್ಣ ಕತೆ, ಕವನ, ಆಟ, ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ; ನೀವೇ ತೆಗೆದ ಅಂದವಾದ ಚಿತ್ರವಿದ್ದರೆ, ಅದನ್ನೂ ಮೂಡಿಸುತ್ತೇವೆ, ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲ ಬರೆದು, ಪಾಕೀಟಿನಲ್ಲಿ ಹಾಕಿ ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಾಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರ (ಬ್ಲಾಕ) ಕಳಿಸಿದರೆ, ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

ನಿಮ್ಮ ಪತ್ರ ವ್ಯವಹಾರಗಳೆಲ್ಲ ಕೆಳಗಿನ ವಿಳಾಸಕ್ಕಿರಲಿ :

**ಅಕ್ಕನ ಪೆಟ್ಟಿಗೆ, ವೀರಮಾತೆ ಕಾರ್ಯಾಲಯ,**

ವನಿತಾಸೇವಾ ಸಮಾಜ **ಧಾರವಾಡ.**

---

### ಅಕ್ಕನ ಪೆಟ್ಟಿಗೆ

**ವೀರಮಾತಾ ಕಾರ್ಯಾಲಯ**

**ಧಾರವಾಡ.**

—◆—

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು..........................................................

..................................................................................................

ಪೂರ್ಣ ವಿಳಾಸ..............................................................................

(ಮನೆ ನಂಬರು ಸಹಿತ) ..................................................................

೨ ಆಣೆ ಸದಸ್ಯತ್ವದಫೀಯನ್ನು ಕೊಟ್ಟು, ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು, ಇಂದಿನಿಂದ ನಾನು ಸದಸ್ಯ ನಾ/ಳಾ ಗಿದ್ದೇನೆ.

ತಾರೀಖು .................. ಸಹಿ

## ಅಕ್ಕನ ಪೆಟ್ಟಿಗೆಯು ಹೊಸ ಸದಸ್ಯರು.

೧. ವಿ. ನರಸಿಂಹ ಮೂರ್ತಿ (ಕಾವ್ಯನಾಮವು 'ಕಸ್ತೂರಿ'ಯಂತೆ) ೭೮೭ ಶಿವ ರಾಮಪುರಂ ಬೆಂಗಳೂರ ೩. ವಯಸ್ಸು ೧೬. S. S. L. C. ಯಲ್ಲಿ ಓದುತ್ತಿರುವದು. ಸಾಹಿತ್ಯದಲ್ಲಿ ವಿಪರೀತ ಹುಚ್ಚು. ತಮಿಳು ಮತ್ತು ತೆಲಗು ಭಾಷೆಗಳ ಪರಿಚಯವಿದ್ದು ಆ ಭಾಷೆಗಳ ಪತ್ರಿಕೆಗಳಿಗೆ ಸಹ ಕಥೆ ಬರೆದು ಕಳುಹಿಸಿರುವನಂತೆ. ಸದಸ್ಯರ ಪತ್ರಗಳಿಗೆ ಬರೆದ ಉತ್ತರದಲ್ಲಿ ಈ ನಿಮ್ಮ ಗೆಳೆಯನ ಬಗ್ಗೆ ಹೆಚ್ಚಿನ ವಿವರ ಬರೆದಿದೆ. ಎಲ್ಲ ತಮ್ಮ-ತಂಗಿ ಯರೂ ನೋಡಿಕೊಂಡು ಅವನಂತೆ ಆಗಿರೆಂದು ಅಕ್ಕನ ಹಾರೈಕೆ.

೨. ಡಿ. ಎಸ್. ಕುರಡಿ, ಶ್ರೀ ಸರಸ್ವತಿ ಮಂದಿರಂ, ಧಾರವಾಡ. ವ. ೧೬. S. S. C. ಪರೀಕ್ಷೆಗೆ ಇದೇ ವರ್ಷ ಕುಳಿತಿದ್ದು ಪರೀಕ್ಷೆಯ ಪರಿಣಾಮ ಕ್ಕಾಗಿ ಕಾಯುತ್ತಿರುವನಂತೆ. ನಮ್ಮ ಸೋದರನ ಪರಿಣಾಮವು ಯಶಸ್ವಿ ಯಾಗಿ ನಮ್ಮೆಲ್ಲರ ಬಾಯೂ ಸಿಹಿಯಾಗಲೆಂದು ನಮ್ಮ ಪೆಟ್ಟಿಗೆಯ ಸದಸ್ಯ ರೆಲ್ಲರೊಡನೆ ಅಕ್ಕನೂ ಕಾಯುತ್ತಿರುವದು ಯೋಗ್ಯವಲ್ಲವೇ? ಕನ್ನಡ ಸಾಹಿತ್ಯದಲ್ಲಿ ಆಸಕ್ತಿ ಹೆಚ್ಚಂತೆ. ಈ ಸಲದ ಕರ್ನಾಟಕ ಸಾಹಿತ್ಯ ಪರಿ ಷತ್ತಿನ, 'ಜಾಣ' ಪರೀಕ್ಷೆಗೆ ಕೂಡ್ರಲು ಇಚ್ಛಿಸುತ್ತಾನಂತೆ. ಸೋದರನಿಗೆ ಎಲ್ಲೆಡೆಗಳಲ್ಲಿಯೂ ಯಶ ಸಿಕ್ಕಲೆಂಬುದೇ ನಮ್ಮ ಹಾರೈಕೆ.

೩. ಶ್ರೀಧರ ಶೇಷಾದ್ರಿ, ಜೂನಿ ಗಿರಣಿ ಸೊಲ್ಲಾಪೂರ. ವ. ೯. ಓದುತ್ತಿರು ವದು ೮ನೇ ವರ್ಗ. ಕ್ರಿಕೇಟ ಆಟ ಹಾಗೂ ಓದುವದರಲ್ಲಿ ಬಹಳ ಆಸಕ್ತಿಯಂತೆ.

೪. ವ್ಹಿ. ಶಕುಂತಲಾ C/o ಬಿ. ಪಿ. ಕಾಳೆ. ೩೦೦ ಮದಿಹಾಳ ಧಾರವಾಡ. ಹೆಚ್ಚಿನ ಪರಿಚಯ ಏನೂ ತಿಳಿಸಿಲ್ಲ.

೫. ಕಮಲಾ ಜಯದೇವರಾವ್ ಕುಲಕರ್ಣಿ. ೫೭೭ ಮಠಗಲ್ಲಿ ಬೆಳಗಾಂವ ವ. ೧೬. ಪ್ರೀವ್ಹಿಯಸ್‌ನಲ್ಲಿ ಮೊದಲನೇ ದರ್ಜೆಯಲ್ಲಿ ೨ನೇ ನಂಬರಿನಿಂದ ಪಾಸಾಗಿರುವಳಂತೆ. ಸಂಗೀತದಲ್ಲಿ ಅಭಿರುಚಿ.

೬. ಸುಧಾ ಕೃಷ್ಣಾರಾವ್ ಕುಲಕರ್ಣಿ. ವ. ೧೦. ಇಂಗ್ಲೀಷ ೨ನೆಯ ಇಯತ್ತೆ. ಹಾಡು, ಹೊಲಿಗೆ, ಹೆಣಿಕೆ, ಡ್ರಾಯಿಂಗ ತೆಗೆಯುವದು ಹಾಗೂ ಕಥೆ ಓದುವದರಲ್ಲಿ ಬಹಳೇ ಇಷ್ಟವಂತೆ.

## ಸದಸ್ಯರ ಪತ್ರಗಳಿಗೆ ಉತ್ತರ.

ಪ್ರಿಯ ತಮ್ಮ ನರಸಿಂಹ ಮೂರ್ತಿ,

ನಿನ್ನ ಕಾರ್ಯವು ಬಹಳೇ ಸ್ತುತ್ಯವಿದೆ. ಸಾಹಸ ದೊಡ್ಡದಿದೆ. ನೀನು ನಡೆಸುತ್ತಿರುವ 'ಬಾಲ ಸಾಹಿತ್ಯ ಸಂಘ'ಕ್ಕೆ ಜಯಸಿಗಲೆಂದು ನಿನ್ನ ಈ ಅಕ್ಕನ ಆಶೀ-ವಾದವು ಸದಾ ಇದೆ. ನಿನ್ನಂಥಹ ಬಹು ಜನ ತಮ್ಮ-ತಂಗಿಯರಿಗಾಗಿ ಅಕ್ಕನು ಸದಾ ತಪಿಸುತ್ತಿದ್ದಾಳೆ. ನಿನ್ನ ಸಹಕಾರಿ ಗೆಳೆಯನಿಗೂ ಅಕ್ಕನ ಧನ್ಯವಾದಗಳನ್ನು ಹೇಳು. ನೀನು ಕೈಬರಹದ ಸಂಚಿಕೆಯ ಸಂಪಾದಕನಿದ್ದದ್ದನ್ನು ಕೇಳಿ ಹಿಡಿಸಲಾರದ ಆನಂದವೆನಿಸಿದೆ. ನಿನ್ನ 'ಮಧುವನ' ತ್ರೈಮಾಸಿಕದ ಮುನ್ನುಡಿಯನ್ನು ಅಕ್ಕನಹಸ್ತೆ ಪಡೆಯುವ ಕಾತುರತೆ ನಿನಗಿರುವದು ಸಹಜವೇಸರಿ. ಆದರೆ ಮನೆಯ ಅಕ್ಕನಿಂದ ಬರೆಸುವ ಬದಲು ಪರರಿಂದ ಬರೆಸುವದು ಒಳ್ಳೆಯದಲ್ಲವೇ ? ನೀನು ಆಣೆ ಹಾಕಿದಮೇಲೆ ನಿನ್ನ ಮಾತಿಗೆ ಅಕ್ಕನು ಹೊರತಲ್ಲದಿದ್ದರೂ ಸಹ ಇದು ನನ್ನದೊಂದು ಸೂಚದೆಯೆಂದು ತಿಳಿಸಿದ್ದೆನೆ. ನಿನಗೆ ಹೇಗೆ ಸಮಂಜಸವೆನಿಸುವದೋ ಹಾಗೆ ಮಾಡಲಡ್ಡಿಯಿಲ್ಲ. ತಿಳಿಯಿತೆ ? ಅಕ್ಕನ ಪೆಟ್ಟಿಗೆ'ಯ ಸದಸ್ಯರಿದ್ದವರು ಬೇರೆ ವಿಭಾಗಗಳಲ್ಲಿ ಭಾಗವಹಿಸಲು ಯಾವ ಅಭ್ಯಂತರವೂ ಇಲ್ಲ. ನಿನಗೆ ಬೇಕಾದ ಲೇಖ ಕಳುಹಿಸಬಹುದು. ವಯಸ್ಸಿನ ನಿರ್ಬಂಧವೇನಿಲ್ಲ 'ಬಾಲಾದಪಿ ಸುಭಾಷಿತಂ' ಎಂಬ ವಾಕ್ಯವು ನಿನ್ನಂತಹ ವಿವೇಕಿಗೆ ತಿಳಿಸುವ ಕಾರಣವಿಲ್ಲ. ಲೇಖಕರಿಗೆ ಕೇವಲ ಒಂದು ಪ್ರತಿಯನ್ನು ಮಾತ್ರಾ ಪುಕ್ಕಟೆ ಕೊಡಲಾಗುವದು. ನೇರವಾದ ಉತ್ತರ ಬೇಕಾಗಿದ್ದರೆ ಅಂಚೆಯ 'ಟಿಕಿಟ್' ಇಡಬೇಕಾಗುವದು.

ಇತಿ ನಿನ್ನಾದರದ ಅಕ್ಕ.

ಮಾನ್ಯ ಬಂಧು ಡಿ. ಎನ್. ಕುರಡಿ,

ನೀನು ಬೇಕಾದ ಲೇಖನಗಳನ್ನು ಕಳುಹಿಸಬಹುದು. ಯೋಗ್ಯ ಕಂಡಲ್ಲಿ ವೀರಮಾತೆಯು ಸ್ವಾಗತಿಸಿಯೇ ತೀರುವಳು. ನಿನ್ನ ಕನ್ನಡ ಸಾಹಿತ್ಯದಲ್ಲಿನ ಆಸಕ್ತಿಗಾಗಿ ನನಗೆ ತುಂಬ ಹೆಮ್ಮೆ. ಹೀಗೆಯೇ ಅಭ್ಯಾಸವನ್ನು ಮುಂದುವರಿಸು. ನಿನಗೆ ಎಲ್ಲೆಲ್ಲಿಯೂ ಯಶ ದೊರಕಲೆಂದು ವೀರಮಾತೆ ಹೃತ್ಪೂರ್ವಕವಾಗಿ ಬಯಸುತ್ತಾಳೆ.

ಇತಿ ನಿನ್ನವಳಾದ ಹಿರಿಯಕ್ಕ.

ಪ್ರಿಯ ತಮ್ಮ ಶ್ರೀಧರ.

ನೀನು ಕಳುಹಿಸಿದ ಕವಿತೆ ನೋಡಿದೆ. ಹುಡುಗರ ಮನವನ್ನು ಹೆಚ್ಚು ಆಕರ್ಷಿಸುವಂತಿರಬೇಕಲ್ಲವೇ ತಮ್ಮ ? ಮುಂದಿನಸಾರೆ ಇನ್ನೂ ಹೆಚ್ಚು ಸುಧಾರಿಸಿ ಬರೆದು ಕಳುಹಿಸು. ನಿಜವಾಗಿ ಪ್ರಕಟಿಸುವೆ, ಸದಸ್ಯತ್ವದ ಫೀ ಎರಡಾಣೆಯನ್ನೇಕೆ ಇಟ್ಟಿಲ್ಲ ? ಒಮ್ಮೆ ಪ್ರಕಟವಾದ ಕವಿತೆಗಳನ್ನು ಕಳುಹಿಸಬೇಡ.

ಇತಿ ನಿನ್ನ ಪ್ರೀತಿಯ ಅಕ್ಕ

ಪ್ರಿಯ ತಂಗಿ ಕಮಲ

ನೀನು ನಿನ್ನ ಈ ಸಣ್ಣವಯಸ್ಸಿನಲ್ಲೇ ಇಷ್ಟು ವಿಚಾರಕ್ಕೆ ಚಾಲನೆಕೊಟ್ಟು ಜಾಣಳಾಗಿ ಹ್ಯಾಸ್ಕೂಲ್ ವಿದ್ಯಾಭ್ಯಾಸ ಮುಗಿಸಿ ಪ್ರಿವ್ಹಿಯಸ್‌ನಲ್ಲಿ ೧ನೇ ದರ್ಜೆಯಲ್ಲಿ ೨ ನೇ ನಂಬರಿನಲ್ಲಿ ಪಾಸಾದದ್ದು ಆನಂದದ ಸಂಗತಿ. ಲೇಖಗಳನ್ನು ಬೇಕಾದಾಗ ಕಳುಹಿಸಹುದು. ನಮ್ಮ ಲೇಖಗಳ ಆಯ್ಕೆಯು ಮುಗಿದ ನಂತರ ಬಂದಲ್ಲಿ ಮುಂದಿನ ತಿಂಗಳ ಸಂಚಿಕೆಗಾಗಿ ಕಾಯ್ದಿಡುವೆವು.

ಇತಿ ನಿನ್ನೊಲುಮೆಯ ಹಿರಿಯಕ್ಕ.

---

ಪ್ರಿಯ ತಮ್ಮ ತಂಗಿಯರಿರಾ,

ಈ ಸಾರೆ S. S. C. ಹಾಗೂ S. S. L. C. ವಿದ್ಯಾರ್ಥಿಗಳು ಮತ್ತು ಹ್ಯಾಸ್ಕೂಲಿನ ವಿದ್ಯಾಭಾಸ ಮುಗಿಸಿ ಕಾಲೇಜ ಮೆಟ್ಟಲನ್ನು ಹತ್ತಿದಂತಹ ಹಿರಿಯ ತಮ್ಮ-ತಂಗಿಯರೂ ಸಹ ನಮ್ಮ ಪೆಟ್ಟಿಗೆಗೆ ಸದಸ್ಯರಾದದ್ದು ಅಭಿನಂದನೀಯ ಸಂಗತಿ ಯಲ್ಲವೆ ! ನಮ್ಮ ಈ ಪೆಟ್ಟಿಗೆಯು ದಿನದಿನಕ್ಕೆ ಇದೇ ತೆರನಾಗಿ ಪ್ರಗತಿ ಹೊಂದುತ್ತ ನಡೆಯುವದೆಂದರೆ ನಮಗೆ ಗೌರವವಲ್ಲವೇ ? ಈ ಸಾರೆ ಸದಸ್ಯನಾದಂತಹ ಚಿ॥ ನರಸಿಂಹಮೂರ್ತಿಯ ಬಗ್ಗೆ ಅವನಿಗೆ ಬರೆದ ಪತ್ರದ ಉತ್ತರದಮೇಲಿಂದಲೇ ನೀವೆಲ್ಲರೂ ಪರಿಚಯ ಮಾಡಿಕೊಳ್ಳಬಹುದು. ನೀವಾದರೂ ಅವನಂತೆ ಆದರ್ಶ ಮಕ್ಕಳಾಗಿರೆಂದು ಅಕ್ಕನ ಹಾರೈಕೆ. ಅವನು ತನ್ನ ಈ ಸಣ್ಣವಯಸ್ಸಿನಲ್ಲಿ 'ಬಾಲ ಸಂಘ' ಒಂದನ್ನೇರ್ಪಡಿಸಿರುವನಂತೆ. ಅದರಲ್ಲಿ ಸುಮಾರು ೩೦ ಜನ ಸದಸ್ಯರಿರು ವರಂತೆ. ಅಲ್ಲಿ ವಾಚನಾಲಯ, ವಿಹಾರ ಪಂದ್ಯಾಟಗಳೆಲ್ಲದರ ವ್ಯವಸ್ಥೆ ಇದೆಯಂತೆ. ಮೇಲಾಗಿ ಇವನು ಸ್ವತಃ 'ಮಧುವನ' ವೆಂಬ ಕೈಬರಹದ ತ್ರೈಮಾಸಿಕದ ಸಂಪಾ ದಕನಿರುವನಂತೆ. ನೀವೆಲ್ಲ ಸದಸ್ಯರೂ ಬೇರೆ ಬೇರೆ ಚಟುವಟಿಕೆಗಳನ್ನು ಕೈಗೊಂಡು ಅವನಂತೆಯೇ ಆದರ್ಶ ಸೋದರರಾಗಿ ಅಕ್ಕನ ಪೆಟ್ಟಿಗೆಗೆ ಹೆಚ್ಚುಕಳೆ ತರುವಿರೆಂದು ಹಿರಿಯಾಶೆ.

ನೀವು ಸ್ಪರ್ದೆಯಲ್ಲಿ ಭಾಗವಹಿಸುವಾಗ, ನೀವು ಪೆಟ್ಟಿಗೆಯ ಸದಸ್ಯರಿದ್ದರೆ ಅವಶ್ಯವಾಗಿಯೂ ತಿಳಿಸಬೇಕು. ನೀವು ಕಳುಹಿಸುವ ಕಥೆ, ಕವನ ಮುಂತಾದವು ಒಮ್ಮೆ ಅಚ್ಚಾದದ್ದಿರಬಾರದು. ನೀವು ಕಳುಹುವ ಪತ್ರ, ಫಾರ್ಮ ಎಲ್ಲವನ್ನೂ ಅಂಟಿ ನಿಂದ ಜೋಡಿಸಿ ಕಳಿಸಿರಿ. ತಿಳಿಯಿತೆ ?

ಇತಿ ನಿಮ್ಮೆಲ್ಲರ ಆದರದ ಹಿರಿಯಕ್ಕ.

ಹೋದ ತಿಂಗಳ ಸ್ಪರ್ಧೆಯಲ್ಲಿ ಮೇಲಿಂದ ೪ ನೇ ಸಾಲಿನ ೨ ನೇ ಅಕ್ಷರವು 'ತ್ರಿ' ದ ಬದಲು 'ಜ' ಎಂದು ತಪ್ಪು ಅಚ್ಚಾಗಿದೆ. ಅದನ್ನು ತಿದ್ದಿ ಸರಿಯುತ್ತರ ಕಳುಹಿಸಿದವರ ಹೆಸರನ್ನು ಮುಂದೆ ಕೊಡಲಾಗಿದೆ.

ಸರಿಯುತ್ತರ. (ಮೇಲಿನಿಂದ ೫ ನೇ ಸಾಲಿನ ಮೂರನೇ ಅಕ್ಷರದಿಂದ ಹೊರಡಿರಿ) (೧) ಸಾವಿತ್ರಿ. (೨) ಪಂಕಜ (೩) ಮಾಲಿನಿ (೪) ಸುಜಾತ (೫) ಮಾಲವೀಕ (೬) ಪ್ರಮೀಳ (೭) ಮಾಧವಿ (೮) ಗಿರಿಜೆ (೯) ಶೀಲ (೧೦) ಶಾಂತ (೧೧) ಸರೋಜಿನಿ (೧೨) ಪಾರ್ವತಿ.

### ಸರಿಯುತ್ತರಿಸಿದವರು.

(೧) **ವಿಮು ಹೂಲಿ,** ಧಾರವಾಡ.

(೨) **ಡಿ. ಎನ್. ಕುರಡಿ,** ಶ್ರೀ ಸರಸ್ವತೀ ಮಂದಿರಂ, ಧಾರವಾಡ.

(೩) **ಸರೋಜಿನಿ ಕೊಯಮುತ್ತೂರ,** ಧಾರವಾಡ.

'ತ್ರಿ' ಇದನ್ನು ತಿದ್ದದೆ 'ಸಾವಿತ್ರಿ' ಗೆ ಬದಲು 'ಸಾವಿಜ' ಎಂದು ಹಾಗೂ ಹೆಸರುಗಳನ್ನು ತಿರುವು ಮುರುವು ಮಾಡಿ ಕಳುಹಿಸಿದವರು (ಹೆಸರುಗಳು ಮಾತ್ರ ಸರಿಇದ್ದು)

ಕಮಲಾ ಜ. ಕುಲಕರ್ಣಿ ಬೆಳಗಾಂವ (೨) ವಿದ್ಯಾ ಜಿ. ಪುರಾಣೀಕ. (೩) ವ್ಹಿ. ಶಕುಂತಲಾ. ಧಾರವಾಡ.

* * * *

### ಸರಿಯಕ್ಷರಗಳನ್ನು ತುಂಬಿರಿ.

(೧)............ ಕರದಿಂದ ಕೆಲಸ ಮಾಡಬಹುದೆ ? ಇಲ್ಲ.

(೨)............ ವನದಲ್ಲಿ ಸಂಚರಿಸಬಹುದೆ ? ಇಲ್ಲ.

(೩)............ ರಸವನ್ನು ಕುಡಿಯಬಹುದೆ ? ಇಲ್ಲ.

ರಚಿಸಿದವರು:— **ವಿಶಾಲ ಧಾರವಾಡ.**

---

## ಒಗಟು

(೧) ನಾನು ಹೇಳುವದೂ ಅಲ್ಲ ! ನೀನು ತರುವದೂ ಅಲ್ಲ ! ಹಣ ಕೊಟ್ಟರೆ ಸಿಗುವದೂ ಅಲ್ಲ ! ಪೇಟೆಯಲ್ಲಿ ಸಿಗುವದೂ ಅಲ್ಲ ! ಹಾಗಾದರೆ ನಾನು ಹೇಳಿದ್ದು ಏನು ? ( ಇದು ಔಷಧಕ್ಕೆ ಉಪಯೋಗ, ಬಹಳ ಕಾರ)

**ವಿಶಾಲ. ಧಾರವಾಡ.**




(೧) **ಮಾಸ್ತರು:—** ಎಲೋ ರಾಮು ಯಾವಾಗಲೂ ಸ್ಪಷ್ಟವಾಗಿ ಮಾತಾಡಬೇಕು.

**ರಾಮು:—** ಏನ್ರಿ ನೀವು ಮಾತಾಡಿದ್ದು ತಿಳಿಯಲೊಲ್ಲದು.

**ಮಾಸ್ತರು:—** ಯಾವಾಗಲೂ ಸ್ಪಷ್ಟವಾಗಿ ಮಾತಾಡಬೇಕಂತ

**ರಾಮು:—** ಹೀಗೋ ನೀವು ಮಾತಾಡಿದ್ದು ತಿಳಿಯಲಿಲ್ಲ ನನಗೆ.

**—ಸುಧಾ ಕೃಷ್ಣರಾವ ಕುಲಕರ್ಣಿ.**

(೨) **ಗಂಡ:—** ನೀನು ಹೀಗೆ ಮಾಡುತ್ತಾ ಇರು. ನಾನು ನಾಲಿಗೆ ಕಿತ್ಕೊಂಡು ಪ್ರಾಣಬಿಡುತ್ತೇನೆ.

**ಬಜಾರಿ ಹೆಂಡತಿ:—** ಎಲ್ಲಿ, ಕಿತ್ಕೊಂಡ ಪ್ರಾಣ ಬಿಡ್ರಿ ನೋಡೋಣ.

**ಗಂಡ:—** ಅಲ್ಲಾ ಕಣೆ ಕೈ ಎಂಜಲಾಗುತ್ತೆ ಅಂತ ಸುಮ್ಮನೆ ಇದ್ದೇನೆ. ಇಲ್ಲದಿದ್ದರೆ...............

(೩) **ಪತಿ:—** ಏನೇ ಸಾರಿಗೆ ಉಪ್ಪೆ ಹಾಕಿಲ್ಲ ಅಷ್ಟು ಗೊತ್ತಾಗಲಿಲ್ಲವೆ.

**ಸತಿ:—** ನಾನು ಮೊದಲೆ ಊಟಮಾಡಿದ್ದರೆ ಗೊತ್ತಾಗುತ್ತಿತ್ತು ಅಷ್ಟು ತಿಳಿಯಲಿಲ್ಲೆ ನಿಮಗೆ.

(೪) **ಹೆಂಡತಿ:—** ಇಲ್ಕೊಳ್ಳೀಡ್ರಿ ! ಇಲ್ಕೊಂದು ಹಾವು ಬಂದಿದೆ.

**ಗಂಡ:—** ನಾನೇನು ಮಾಡ್ಲೆ ? ನಾನೇನು ಮುಂಗುಲಿ ಎಂದು ತಿಳದಿದ್ದಿಯೇನು ?

(೫) **ಹೋಟಲಿನವ:—** ಈ ರೂಪಾಯಿ ತೂತು ಬಿದ್ದಿದೆಯಲ್ಲಾ ಸ್ವಾಮಿ

**ರಾಮು:—** ಹಾಗಾದರೆ ಅದನ್ನು ಬರಿ ದೋಸೆ ಚಾರ್ಜಿಗೆ ತೆಗೆದುಕೊಳ್ಳಯ್ಯಾ.

**ಹೋಟಲಿನವ:—** ಅದೇಕೆ ?

**ರಾಮು:—** ಏನಯ್ಯಾ ಹೀಗೆ ಕೇಳತಿ ? ದೋಸೆಯಲ್ಲಿ ಮಾತ್ರ ತೂತಿರಲಿಲ್ಲವೋ ?

**ಗಂಗಮ್ಮ ಹರಿಹರ.**



<u>ಮಕ್ಕಳಿಗಾಗಿ ಈ ತಿಂಗಳ ಕಥೆ</u>

ಒಂದು ಊರಲ್ಲಿ ಲಕ್ಷ್ಮೀ ನಾರಾಯಣ ಎಂಬ ದಂಪತಿಗಳಿದ್ದರು. ನಾರಾಯಣನಿಗೆ ಭವಿಷ್ಯದ ಮೇಲೆ ಹುಚ್ಚು ಬಹಳ ಇತ್ತು. ಮತ್ತು ಸದಾ ಸಂಶಯದಿಂದಿರುತ್ತಿದ್ದ ಇದರ ಸಲುವಾಗಿ ಲಕ್ಷ್ಮೀಗೆ ಸಾಕಾಗಿಹೋಗಿತ್ತು. ಒಂದು ದಿವಸ ಏಕಾದಶಿ ಇತ್ತು. ಉಪವಾಸ ಮಾಡಿದ್ದನು. ರಾತ್ರಿ ಹನ್ನೆರಡು ಆಗಿರಬಹುದು ಪುರಾಣ ಓದಲಿಕ್ಕೆ ಕೂಡಬೇಕೆಂದು ಸ್ನಾನಮಾಡಿ ಬಂದನು. ಲಕ್ಷ್ಮೀ ಪುಸ್ತಕ ಕೊಡಲಿಕ್ಕೆ ಬಂದು ಮಾತಾಡಿಸಿದಳು. ಆಕೆಯ ಉಗುಳು ನಾರಾಯಣನ ಕಿರು ಬೆರಳಿಗೆ ಸ್ವಲ್ಪ ಸಿಡಿಯಿತು. ಕೂಡಲೆ ದೀಕ್ಷಿತರ ಮನೆಗೆ ಹೋದನು. ಅವರು ಅದೇ ಊಟಮಾಡಿ ಮಲಗಿಕೊಂಡಿದ್ದರು. ಇವನು ಅವರನ್ನು ಎಬ್ಬಿಸಿ ಬಿಟ್ಟನು. ಅವರು ಎದ್ದು ಬಂದು, ಏನ್ರಿ ನಾರಾಯಣರಾಯರ ಏನು ಹೇಳಬೇಕು ಎಂದು ಕೇಳಿದರು.

ನಾರಾಯಣ:— ಏನಿಲ್ಲ್ರಿ, ನಾನು ನನ್ನ ಹೆಂಡತಿ ಮಾತಾಡುವಾಗ ಆಕೆಯ ಉಗುಳು ಸ್ವಲ್ಪ ಬೆರಳಿಗೆ ಸಿಡದದ ನೋಡಿರಿ.

ದಿಕ್ಷಿತರು:— (ವಿಚಾರಮಾಡಿ, ಇವನನ್ನು ಏನು ಮಾಡಬೇಕು? ನನಗೂ ಭವಿಷ್ಯ ಹೇಳಿ ಹೇಳಿ ಸಾಕಾಗ್ಯದ) ಎಂದು ನೀವು ಕಾಶಿಯಾತ್ರೆ ಮಾಡಿರಿ ಪಾಪ ಪರಿಹಾರವಾಗುವದು ಎಂದನು.

ನಾರಾಯಣನು ಹೂನ್ರಿ ಹಾಗೆ ಆಗಲಿ ಎಂದು ಮನಿಯ ಹೊರಗೆ ನಿಂತು, ನಾನು ಕಾಶಿಯಾತ್ರೆಗೆ ಹೋಗುತ್ತೇನೆ. ನನ್ನ ಹಾಸಿಗಿ ಅರವಿ ಟ್ರಂಕು ತಾ ಎಂದನು.

ಲಕ್ಷ್ಮೀಗೂ ಇವನ ಮಡಿಯ ಸಲುವಾಗಿ ಸಾಕಾಗಿತ್ತು. ಎಲ್ಲವನ್ನೂ ಹೊರಗೆ ಕೊಟ್ಟು ಮೊದಲು ಹೋಗಿರಿ ಎಂದು ಕಳಿಸಿ ಬಿಟ್ಟಳು.

ನಾರಾಯಣನು ರಾತ್ರಿಯಲ್ಲಿಯೆ ಹೊರಟನು. ನಡೆದು ನಡೆದು ಊಟದ ಹೊತ್ತಿಗೆ ಒಂದು ಶಹರಕ್ಕೆ ಮುಟ್ಟಿದನು. ಒಂದು ಖಾನಾವಳಿ ಕಂಡಿತು. ಬಾಗಿಲದಲ್ಲಿ ತುಳಸಿಯ ಕಟ್ಟೆಯಿತ್ತು. ಹಾಗಾದರೆ ಇದು ಬ್ರಾಹ್ಮಣರದು ಇರಬಹುದೆಂದು ಒಳಗೆ ಹೋದನು.

ಇವರನ್ನು ನೋಡಿದ ಕೂಡಲೆ ಬರ್ರಿ ಬರ್ರಿ ಎಂದು ಕರೆದು ಕೂಡಿಸಿದರು. ಅವರು ಬ್ರಾಹ್ಮಣರನ್ನು ಕುಲಗೆಡಿಸುವದರ ಸಲುವಾಗಿ ಒಬ್ಬ ಮುಸಲ್ಮಾನ ಹೆಣ್ಣುಮಗಳ ತಲೆಯನ್ನು ಕತ್ತರಿಸಿ ಕೆಂಪು ಉಡುಸಿ ಅಡಿಗೆಯ ಸಲುವಾಗಿ ಇಟ್ಟಿದ್ದರು. ಇದು ಯಾವದೂ ಗೊತ್ತಿಲ್ಲದೆ ನಾರಾಯಣನು ಸ್ನಾನ ಊಟ ಎಲ್ಲವನ್ನೂ ಮುಗಿಸಿ ಕುಳಿತನು ಹೆಣ್ಣುಮಗಳದ್ದು ಸ್ವಲ್ಪಹೊತ್ತಿನಮೇಲೆ ಕೆಲಸವಾಯಿತು. ಇವರನ್ನು ನೋಡಿ ಇವರು ಬಹಳ ತಿಳಿದವರಿರಬಹುದು ಎಂದು ಹೀಗೆ ಕೇಳಿದಳು.

ಹೆಣ್ಣುಮಗಳು:— ನೋಡ್ರಿ, ನಾನು ಮುಸಲ್ಮಾನರವಳು. ನನ್ನ ಗಂಡ ಇದ್ದಾಗ ಎರಡು ಗಂಡು ಹುಡುಗರು ಹುಟ್ಟಿರುತ್ತವೆ. ಈಗ ಬ್ರಾಹ್ಮಣಳಾಗಿದ್ದೇನೆ. ಆ ಹುಡುಗರ ಲಗ್ನವನ್ನು ಮುಸಲ್ಮಾನರ ಪದ್ಧತಿಯಂತೆ ಲಗ್ನಮಾಡ

ಬೇಕೋ. ಬ್ರಾಹ್ಮಣರ ಪದ್ಧತಿಯಂತೆ ಮುಂಜಿವಿ ಮಾಡಿ ಲಗ್ನ ಮಾಡಬೇಕೋ ಎಂದು ಕೇಳಿದಳು.

ನಾರಾಯಣ:— ಏನು ಹೇಳಲಿ !. ನನ್ನ ಹೆಂಡತಿಯ ಉಗುಳು ಸಿಡಿದದ್ದರ ಸಲುವಾಗಿ ಕಾಶಿಯಾತ್ರೆಗೆ ಹೊರಟೆ. ಶುದ್ಧ ಬ್ರಾಹ್ಮಣ ನಾನು. ಈಗ ದಾರಿಯಲ್ಲಿ ಏನಾಯಿತುನೋಡು. ಮುಸಲ್ಮಾನರವಳು ನೀನು ನಿನ್ನ ಕೈಯಲ್ಲಿಯ ಅಡಿಗೆಯನ್ನು ಊಟಮಾಡಿದೆ. ನಾನು ಸತ್ತರೆ ಮುಸಲ್ಮಾನರ ಪದ್ಧತಿಯಂತೆ ಹುಗಿಯಬೇಕೋ? ಬ್ರಾಹ್ಮಣರ ಪದ್ಧತಿಯಂತೆ ಸುಟ್ಟು ಭಸ್ಮಮಾಡಬೇಕೋ ?ಮೊದಲು ನನಗೆ ಹೇಳು ಎಂದು ಕೇಳಿದನು. ಲೇ— **ಸುಲೋಚನಾ ತಾಯಿ, ಹುಬ್ಬಳ್ಳಿ.**



# ಸಾದರ ಸ್ವೀಕಾರ

೧. **ನನ್ನ ಗೃಹಿಣಿ:—** (ಸಾಮಾಜಿಕ ಕಾದಂಬರಿ) ಲೇ— ಬಿ. ಪಿ. ಕಾಳೆ. ಕ್ರಯ ೨-೪-೦ ಪುಟ ೧೭೬.

೨. **ಸ್ಕೂಲ್ ಮಿಸ್ಟ್ರೆಸ್:—** (ಸಾಮಾಜಿಕ ಕಥೆ) ಲೇ— ಬಿ. ಪಿ. ಕಾಳೆ. ಕ್ರಯ ೩-೦-೦ ೨೨೮ ಪುಟ.

೩. **ಕರಿನೀರು:—** (ರಮ್ಯಭೀಷಣ ಕಾದಂಬರಿ) ೧ನೇ ಭಾಗ ಲೇ— ಸ್ವಾತಂತ್ರ್ಯ ವೀರ ಸಾವರಕರ ಕ್ರಯ ೫-೦-೦ ೨೦೪ ಪುಟ.

೪. **ಕರಿನೀರು:—** ಸ್ವಾತಂತ್ರ್ಯ ವೀರ ಸಾವರಕರ ಇವರ ರಮ್ಯಭೀಷಣ ಕಾದಂಬರಿ ೨ನೇ ಭಾಗ. ಪುಟ ೨೦೫ ರಿಂದ ೪೦೦. ಪುಟ ೪೦೦.

೫. **ಜೀವನ ಪ್ರಕಾಶ:—** ಯುಗಾದಿ ಸಂಚಿಕೆ. ಸಂಚಿಕೆ ೧. ಸಂಪುಟ ೩. ಕ್ರಯ ೦-೮-೦. ಸಂ-ಸೌ. ಪ್ರೇಮಾ ಹುಲಕೊಪ್ಪಕರ, ಪುಟ ೪೪

# ಸುಧಾ-ಸಿಂಧು

೧

ಈ ವಿಶ್ವದ ಮಲೆನಾಡಿಂದಲಿ
ಅಮೃತ ಸಾಗರ ಬರುತಲಿದೆ
ತೊರೆ ತೆರೆಯಿಂದಲಿ ಬಿರಿನೊರೆಯಾಗುತ
ಇಳುಕಲಿನಲಿ ಅರ್ಭಟಿಸುತಿದೆ
ಸಾಗುತ ಸಾಗುತ ವನಬನದೊಳು ತಾ
ಸೃಷ್ಟಿಯ ನವರಸ ಚಿಮ್ಮುತಿದೆ
ಗುಡ್ಡವನೊಡೆಯುತ ಬೆಟ್ಟವ ಸೀಳುತ
ಕೂಗುತ ಸಾಗುತ ಬರುತಲಿದೆ
ಪೆರ್ದೊರೆಯಿಂದಲಿ ಸುಧಾ-ಸಿಂಧು ತಾ
ಭೂಲೋಕಕೆ ಇಳಿದಿಳಿಯುತಿದೆ

೨

ಏನಿದು ಪ್ರಕೃತಿಯ ಬಗೆಬಗೆ ನೋಟ
ವನಗಳ ತರುಮರಗಳ ತೋಟ
ಸಿಹಿ, ಹುಳಿ, ಒಗರಿನ ಗಿಡಗಳ ಬೇರಿಗೆ
ದೊರೆಯುವದೊಂದೇ ನೀರಿನ ಊಟ
ಚಂದನ ಕೊರಡೊಳು, ಹೂವಿನ ಬನದೊಳು
ಹರಿಯುವದೊಂದೆ ನೀರಿನ ಝುರಿಯು
ಇವುಗಳಿಗೆಲ್ಲ ವಾಸನೆ ರುಚಿಗಳ
ಜಲತಾನೊಂದೇ ನೀಡುತ ನೀಡುತ
ಜಗ ಜನಕೆಲ್ಲೊಳು ಸುಧಾ-ಸಿಂಧು ತಾ
ಅಮೃತ ಸಾಗರ ಹರಿಸುತಿದೆ

**ಶ್ರೀ. ಎಸ್. ವ್ಹಿ. ಕಂಬಿ, "ಸಾಹಿತ್ಯಭೂಷಣ"**
ಬೆಳಗಾಂವ.

▩ ಈ ಗುರುತಿದ್ದ ಜಾಗದಲ್ಲಿ ಯೋಗ್ಯ ಅಕ್ಷರಗಳನ್ನು ತುಂಬಿರಿ.

| | | | | | |
|---|---|---|---|---|---|
| ಆ೧ | ▩ | * | ▩೨ | ರೆ | * |
| * | § | ▩೩ | § | § | ▩೪ |
| ▩೫ | § | ತ್ರೆ | * | ▩೬ | ರಿ |
| ▩ | * | * | * | ಳ್ಳ | * |
| ಲ | * | ▩೭ | * | * | ಕ೮ |
| * | ▩೯ | ಗ | ▩ | * | ▩ |

**ಪ್ರವೇಶ ಫೀ ೨ ಆಣೆ**

**ಸರಿಯುತ್ತರಕ್ಕೆ**

**ಒಂದು**

**ವೀರಮಾತೆ**

**ಪುಕ್ಕಟೆ.**

**ಎಡದಿಂದ ಬಲಕ್ಕೆ**— (೧) ..........ವು ಜೀವಿಸಲು ಅತ್ಯವಶ್ಯಕವಾದ ವಸ್ತು. (೨) ..........ಯು ಸಮುದ್ರವಾಸಿ. (೬)..........ಬಹಳ ಉಪಯೋಗವುಳ್ಳ ಒಂದು ಪ್ರಾಣಿ (೯) ..........ಎಲ್ಲರನ್ನೂ ಬಾಗಿಸುವದು.

**ಮೇಲಿನಿಂದ ಕೆಳಗೆ:**— (೩) ಚಿತೆಗಿಂತ ಹೆಚ್ಚು ತಾಪವುಳ್ಳದು.......... (೪) ಉರಿಯ ತಾಪಕ್ಕಿಂತ..........ಯ ತಾಪ ಹೆಚ್ಚು ತ್ರಾಸಿನದಿರುತ್ತದೆ. (೫) ಜೀವನಕ್ಕೆ ಅತಿ ಮುಖ್ಯ ವಸ್ತು. (೬) ಕಳ್ಳರನ್ನು ನಂಬಿದರೂ ಸಹ..........ರನ್ನು ನಂಬಬಾರದೆಂಬ ಗಾದೆಯುಂಟು. (೭) ..........ಗಳಿಗೆ ಮನಸ್ಸಮಾಧಾನವಿರುವದರಿಂದ ಯಾವಾಗಲೂ ಅವರಿಗೆ ಹೆಚ್ಚು ಸುಖವಿದೆ. (೮) ..........ಯು ಎಲ್ಲವನ್ನು ನಿರೀಕ್ಷಿಸುವ ಮಾನವ ಪ್ರಾಣಿ. ರಚಿಸಿದವರು:— **ವಿಶಾಲ ಧಾರವಾಡ.**

ನಿಯಮ:— ಸ್ಪರ್ಧೆಯಲ್ಲಿ ಭಾಗವಹಿಸುವ ಸೋದರ ಸೋದರಿಯರು ಅಚ್ಚು ಕೂಪನ್ನಿನಲ್ಲೇ ತುಂಬಿ ಕಳುಹಿಸಬೇಕು. ೨ ಆಣೆ ಪ್ರವೇಶ ಫೀ ಇಡದವರ ಕೂಪನ್ನನ್ನು ಮಾನ್ಯಮಾಡುವದಿಲ್ಲ.

# ಧಾರವಾಡ ವನಿತಾಸೇವಾ ಸಮಾಜದ
# ವನಿತಾ ಬೇಸಿಕ ಟ್ರೇನಿಂಗ ಕಾಲೇಜ

ಈ ಮೊದಲೇ ಕರ್ನಾಟಕದ ಲೋಕ ಪ್ರಸಿದ್ಧ ವೃತ್ತಪತ್ರಗಳಲ್ಲಿ ೧೯೫೨ ನೇ ಜೂನ ತಿಂಗಳಿಂದ ಟ್ರೇನಿಂಗ ಕಾಲೇಜ ಪ್ರಾರಂಭಿಸಲು ಸರಕಾರದಿಂದ ಪರವಾನಿಗೆ ಸಿಕ್ಕ ಬಗ್ಗೆ ಮತ್ತು ಕಾಲೇಜನ್ನು ಸೇರಲಿಚ್ಛಿಸುವವರು ಬೇಗನೇ ಅರ್ಜಿ ಮಾಡ ಬೇಕೆಂಬ ಬಗ್ಗೆ ಮೊದಲನೇ ಪ್ರಕಟನೆಯನ್ನು ಪ್ರಸಿದ್ಧಿಸಲಾಗಿದೆ ಆ ಪ್ರಕಟನೆಗೆ ಪ್ರತಿಕ್ರಿಯೆಯೆಂದು ಸಾಕಷ್ಟು ಭರದಿಂದ ಅರ್ಜಿಗಳು ಬಂದಿರುವದಿಲ್ಲ. ಇದಕ್ಕೆ ಕಾರಣವೆಂದರೆ ಕಾಲೇಜ ಶಿಕ್ಷಣವು ಕೇವಲ ನೌಕರಿಗಾಗಿಯೇ ಇರುವದೆಂದು ಸಾಮಾನ್ಯ ಜನರ ಕಲ್ಪನೆಯಾದದ್ದೆಂದು ಹೇಳಲಡ್ಡಿಯಿಲ್ಲ. ಏಕೆಂದರೆ, ಕೇವಲ ಪ್ರಾಥಮಿಕ್ ಪ್ರಮಾಣ ಪತ್ರ ಪರೀಕ್ಷೆ ಪಾಸಾದವರು ಲಗ್ನವಾದಲ್ಲಿ ಪ್ರಾಪಂಚಿಕ ತೊಡಕಿನ ನಿಮಿತ್ತ ಕಲಿಯಲು ಶಕ್ಯವಿಲ್ಲ. ಇಂಥ ಪರಿಸ್ಥಿತಿಯಲ್ಲಿ ಪ್ರಾಪಂಚಿಕ ತೊಂದರೆಗಳುಂಟಾದರೆ ಆರ್ಥಿಕ ತೊಂದರೆಯ ನಿಮಿತ್ತ ಇತ್ತ ವಿದ್ಯೆಯೂ ಇಲ್ಲ. ಅತ್ತ ನೌಕರಿಯೂ ಇಲ್ಲ ಇಂಥ ಇಕ್ಕಟ್ಟಿನ ಪರಿಸ್ಥಿತಿಯು, ಹೆಣ್ಣುಮಕ್ಕಳಿಗೆ ಒದಗ ದಿರದು. ಆದ್ದರಿಂದ ಭವಿಷ್ಯತ್ಕಾಲದ ಆಪತ್ತಿಗೆ ಪೂರ್ವ ಮದ್ದೆಂದು ಕಿಮಾನ್ ಪಕ್ಷ ಮುಲ್ಕೀ ಪರಿಕ್ಷೆ ಪಾಸಾದವರು ಟ್ರೇನಿಂಗ ಹೊಂದಿಯಾದರೂ ತಮ್ಮ ಶಿಕ್ಷಣ ಮುಗಿಸ ಬೇಕು. ಇದರಿಂದ ಪ್ರಸಂಗ ಬಿದ್ದಾಗ ಸ್ವಾವಲಂಬಿನಿಯರಾಗಲಾಗಲೀ ಅರ್ಹರಾಗು ವರು. ಹಾಗೂ ಪ್ರಸಂಗಬಿದ್ದಲ್ಲಿ ಅಲ್ಲಲ್ಲಿಗೆ ಖಾಸಗಿ ಪ್ರಾಥಮಿಕ ಶಾಲೆಗಳನ್ನು ತೆಗೆದು ಶಿಕ್ಷಣ ಪ್ರಸಾರ ಮಾಡುವ ಸಾಧನ ಸಿಕ್ಕು ರಾಷ್ಟ್ರದ, ವಿಶೇಷತಃ ಕರ್ನಾಟಕದ ಏಳ್ಗೆ ಯಾಗಲು ಅನುಕೂಲವಾಗುವದು. ಮತ್ತು ಕಿಮಾನ ಪಕ್ಷ ಏನಿಲ್ಲೆಂದರು ತಮ್ಮ ಚಿಕ್ಕ ಮಕ್ಕಳ ಶಿಕ್ಷಣವನ್ನಾದರೂ ನೋಡಿಕೊಂಡು ಟ್ಯೂಶನದ ವೆಚ್ಚವನ್ನಾದರುಳಿಸಿ ಪ್ರಪಂಚಕ್ಕೆ ಅಪ್ರತ್ಯಕ್ಷವಾಗಿ ನೆರವಾಗುವರು. ಆದ್ದರಿಂದ ಪಾಲಕರು ಭಗಿನಿಯರು ಇತ್ತ ಕಡೆಗೆ ಗಮನಿಸದಿದ್ದಲ್ಲಿ ಕಾಲೇಜದ ಮಂಜೂರಿಯು ರದ್ದಾಗಿ ಹೆಣ್ಣುಮಕ್ಕಳು ತಮ್ಮ ಹಾನಿಗೆ ತಾವೇ ಪಾತ್ರರಾದಂತಾಗುವದು. ಕಾರಣ ತ್ವರೆ ಮಾಡೀ. ಈ ಕಾಲೇಜದ ಶಿಕ್ಷಣ ಪಡೆಯಲು ಇಂದೇ ಬನ್ನಿರಿ. ನಿಮ್ಮೆಲ್ಲರ ವಿಶೇಷವಾಗಿ ನೌಕರಿಗೆ ಆರಿಸದಿದ್ದವರ ಸಲುವಾಗಿ, ಕಾರಣಾಂತರಗಳಿಂದ ಗುಣಗಳು ಕಡಿಮೆ ಬಿದ್ದವರ ಹಾಗು ಬಡವರ ಸ್ಥಾನಿಕ ಪರಸ್ಥಳ ಪ್ರೌಢ ಹೆಣ್ಣುಮಕ್ಕಳ ಹಿತಕ್ಕಾಗಿ ಹಣದಡಚಣಿ ಯಿಂದುಂಟಾಗತಕ್ಕ ಲುಕ್ಸಾನವನ್ನು ಲೆಕ್ಕಿಸದೆ, ಸರಕಾರಕ್ಕೆ ಒತ್ತಾಯಪಡಿಸಿ ಧಾರವಾಡ ವನಿತಾ ಸೇವಾ ಸಮಾಜದವರು ಕಾಲೇಜದ ಪರವಾನಗಿಯನ್ನು ಸರಕಾರದಿಂದ ಪಡೆದಿರುವರು. ಈ ವರ್ಷ ಜೂನದಿಂದ ೨ನೇ ವರ್ಷ ಪ್ರಾರಂಭ ವಾಗುವದು. ಕಾರಣ ತ್ವರೆಮಾಡಿ ಕಾರ್ಯಾಲಯದಿಂದ ಛಾಪಿಲ ಫಾರ್ಮಗಳನ್ನು ತರಿಸಿ ಅರ್ಜಿಗಳನ್ನು ಮಾಡಿ. ಸೋಮಾರಿತನದಿಂದ ತಡಮಾಡಿ ಹೋದ ವರ್ಷ

ಪಶ್ಚಾತ್ತಾಪಕ್ಕೆ ಗುರಿಯಾದಂತೆ ಆಗಬೇಡಿರಿ. ಹೆಣ್ಣುಮಕ್ಕಳ ಏಳಿಗೆ ನಿಜವಾದ ಸ್ವಾತಂತ್ರ್ಯ ಸ್ವಾಭಿಮಾನ, ಆರೋಗ್ಯದ ದೃಷ್ಟಿಯಿಂದ ವಸತಿಗೃಹದ ನಿಯಮಗಳು ಸ್ವಲ್ಪ ಹೆಚ್ಚು ಬಿಗಿಯಾಗಿರುವವು. ಆದರೆ ಅವು ಈ ಗಾಂಧಿಯುಗಕ್ಕೆ ಸಲ್ಲುವಂಥವು. ನಿಜವಾಗಿ ಈ ಬೇಸಿಕ ಟ್ರೇನಿಂಗ ಕಾಲೇಜದ ಮೂಲ ಸಿದ್ಧಾಂತಗಳಿಗೆ ಸಲ್ಲುವಂಥ ವಿರುವವು. ಇದನ್ನು ಲಕ್ಷ್ಯಕ್ಕೆ ತಂದು ಪಾಲಕರು, ವಿದ್ಯಾರ್ಥಿನಿಯರು ಇದರ ಲಾಭ ಪಡೆದು ತಮ್ಮ ಉದ್ಧಾರ ಹಾಗು ಸಮಾಜದ ವಿಕಾಸಗೊಳಿಸಿದ ಶ್ರೇಯಸ್ಸಿಗೆ ಪಾತ್ರರಾಗುವರೆಂದು ಬಲವಾದ ನಂಬಿಗೆ

---

## ಸುದ್ದಿ-ಸಮಾಚಾರ

### ಸ್ತ್ರೀಯರಿಗೆ ಸಮಾನವೇತನ.

ಸಮಾನ ರೀತಿಯ ಕೆಲಸಗಳಿಗೆ ಸ್ತ್ರೀಪುರುಷರಿಬ್ಬರಿಗೂ ಸಮಾನವೇತನ ಗಳು ಸಿಗಬೇಕೆಂಬ ತತ್ವವನ್ನು ಎಲ್ಲ ದೇಶಗಳಿಗೂ ಆಚರಣೆಗೆ ತರಬೇಕೆಂದು ಗೊತ್ತುವಳಿಯನ್ನು ಸ್ತ್ರೀಯರ ಸ್ಥಿತಿಗತಿ ಸಮಿತಿಯು ಇಂದು ಅಂಗೀಕರಿಸಿತು.

ಈ ಠರಾವಿನ ಪರವಾಗಿ ೧೪ ಮತಗಳು ಕೊಡಲ್ಪಟ್ಟಿದೆ. ವಿರೋಧ ಮತ ಗಳಿರಲಿಲ್ಲ. ಮೂವರು ಸದಸ್ಯರು ಗೈರಹಾಜರಿದ್ದರು. ಈ ಠರಾವು ಆರ್ಥಿಕ ಮತ್ತು ಸಾಮಾಜಿಕ ಪರಿಶೀಲನೆಗೆ ಕಳಿಸಲ್ಪಡುವದು.

### ಶ್ರೀ ಮತ್ತು ಶ್ರೀಮತಿ ಮದ್ರಾಸ ಸರಕಾರದ ಆಜ್ಞೆ.

ಮದ್ರಾಸ ರಾಜ್ಯದಲ್ಲಿ ಎಲ್ಲ ಪುರುಷರನ್ನು ಯಾವ ಜಾತಿಜನಾಂಗದ ಭೇದ ವೆಣಿಸದೆ, ಗೌರವಪೂರ್ವಕ ಸಂಬೋಧಿಸಬೇಕಾದರೆ ಶ್ರೀ ಎಂಬ ಶಬ್ದವನ್ನು ಅವರ ಹೆಸರಿನ ಪ್ರಾರಂಭಕ್ಕೆ ಜೋಡಿಸಬೇಕು. ಹೆಣ್ಣುಮಕ್ಕಳಿಗೆ "ಶ್ರೀಮತಿ" ಅಥವಾ ಕುಮಾರಿ ಎಂದು ಕರೆಯಬಹುದು. ಸ್ತ್ರೀಯರು ಅನೇಕ ಜನರಿದ್ದಾಗ ಶ್ರೀಮತಿ ಅಥವಾ ಕುಮಾರಿಯರೆಂದು ಕರೆಯಬಹುದಾದರೂ ಪುರುಷರು ಅನೇಕರಿದ್ದರೆ ಶ್ರೀ ಎಂದೇ ಸಂಬೋಧಿಸಬೇಕು. ಮೇಸರ್ಸಕ್ಕೆ ಬದಲಾಗಿ "ಶ್ರೀ" ಉಪಯೋಗಿ ಸಬಹುದು ಎಂದು ಸರಕಾರಿ ಆಜ್ಞೆ ಹೊರಟಿದೆ.

### ವಿವಾಹದ ವಯಸ್ಸನ್ನು ಹೆಚ್ಚಿಸುವ ಪ್ರಯತ್ನ.

ಯುವಕ ಯುವತಿಯರ ವಿವಾಹದ ವಯಸ್ಸನ್ನು ಹೆಚ್ಚಿಸುವ ಒಂದು ಖಾಸಗೀ ಮಸೂದೆಗೆ ಬೆಂಬಲಕೊಡಬೇಕೆಂದು ಇಲ್ಲಿ ಮಂತ್ರಿ ಮಂಡಲವು ನಿರ್ಧರಿ ಸಿದೆ. ಎಂದು ತಿಳಿದುಬಂದಿದೆ

ವಿಧಾನ ಪರಿಷತ್ತಿನ ಮುಂದೆ ಬರಲಿರುವ ಈ ಮಸೂದೆಯು ತರುಣ ವಿವಾಹದ ವಯಸ್ಸನ್ನು ೨೧ ವರ್ಷಗಳಿಗೂ ತರುಣಿಯ ವಯಸ್ಸನ್ನು ೧೭ ವರ್ಷ ಗಳಿಗೂ ಸೂಚಿಸುತ್ತದೆ.

# ಅಂಕ ೨ ದೃಶ್ಯ ೬

( ಸ್ಥಳ:— ರಸ್ತೆ )

**ಇನ್‌ಶೂರನ್ಸ ಏಜೆಂಟ:—** ಮೀಟಿಂಗಿನಲ್ಲಿ ಶ್ರೀಧರಲಾಲ, ಡಾಕ್ಟರ, ರತಿಲಾಲ, ಸಮಶೀಲ ಮುಂತಾದವರು ಬಡವರ ಗೋಳಾಟದ ನಿವಾರಣೆಯ ಸಲುವಾಗಿ ಏನೇನೊ ಹರಟೆಯನ್ನು ಕೊಚ್ಚುತ್ತಿದ್ದರು. ಇನ್‌ಸೂರನ್ಸ ಕಂಪನಿಗಳು ಹೆಚ್ಚಾಗಿ ಎಲ್ಲರೂ ತಮ್ಮ ತಮ್ಮ ಆಯುಷ್ಯವನ್ನು ಇನ್‌ಸೂರ ಮಾಡದ ವಿನಹಾ ಬಡತನ ಹೋಗದು. ಈ ಕಲಿತವರಿಗೆ ಇಷ್ಟು ತಿಳಿಯಬಾರದೇ. ಇನ್ಸೂರನ್ಸ ಕಂಪನಿಗಳು ಮನುಷ್ಯನಿಗೆ ಅಪ್ರತ್ಯಕ್ಷ ಒತ್ತಾಯದಿಂದ ಉತ್ಪನ್ನದಲ್ಲಿಯ ಕಿಂಚಿತ್ ಭಾಗವನ್ನಾದರೂ ಸಿಲ್ಕು ಇಡಲಿಕ್ಕೆ ಹಚ್ಚಿ ಅವನು ಆಕಸ್ಮಿಕ ಕಾರಣದಿಂದ ಮರಣಹೊಂದಿದರೆ ಆಗುವ ಹಾನಿಯನ್ನು ತಪ್ಪಿಸಿ ಒಂದು ಕುಟುಂಬದ ಭಾರವನ್ನು ಮತ್ತು ದುಃಖವನ್ನು ಕಡಿಮೆ ಮಾಡುವದು. ನೀನು ಬಡವ, ನಿನಗೆ ಮಕ್ಕಳು ಮೂರು ನಾಲ್ಕು ಮಕ್ಕಳು. ಆಯುಷ್ಯ ಅಸ್ಥಿರ. ಈ ಪಟ್ಟಣದಲ್ಲಿ ಯಾವ ಯಾವೋ ಬೇನೆಗಳು. ಮೋಟರ ಎಕ್ಸಿಡೆಂಟ, ಎಗಿರಣ ಎಕ್ಸಿಡೆಂಟ ಎಲ್ಲ ಸೀಝುನಿನಲ್ಲಿ. ಬಡವರ ಸಲುವಾಗಿ ಮುದ್ದಾಮ ಇಟ್ಟಿದ್ದ ನಮ್ಮ Popular policy ಯಲ್ಲಿ ನೀನು ಇನ್‌ಸೂರು ಮಾಡು ನಿನಗೆ ಬೇಕಾದ ಸಹಾಯವನ್ನು ನಾನು ಮಾಡುತ್ತೆನೆ. ತಿಂಗಳಿಗೆ ಸ್ವಲ್ಪ ಏನಾದರೂ ಸಿಲ್ಕು ಇಡು.

**ಭೀಮಪ್ಪ:—** ಸಿಲ್ಕು ? ನನ್ನ ಕೈಯಾಗ ? ಆಗದ ಮಾತು. ಈ ಇನ್‌ಸೂರ ಕಂಪನಿಗಳು ಅವರ ಎಜಂಟರು ಇನ್ಸೂರ ಮಾಡಿದಬಳಿಕ ಕೈ ನಿಂತು ರೊಕ್ಕ ಕಟ್ಟಲಿಕ್ಕೆ ಸಗತಿ ಇಲ್ಲದಾಗ ನಡಾಕ ಬಿಟ್ಟ ಬಡವನ ರೊಕ್ಕತಿಂದ ಮಜಾಮಾಡತಾರಂತ ನಿಜಾ ಏನುಸ್ವಾಮಿ ?

**ಏಜೆಂಟ:—** ಏನಿಲ್ಲಾ ! ತಿಳವಳಿಕೆ ಇಲ್ಲದವರ ಮಾತು.

**ಭೀಮಪ್ಪ:—** ಬಾಳ ರೊಕ್ಕ ಕಟ್ಟದ ದುಡ್ಡು ಜಾಸ್ತಿ ಬರಾಕ ಏನಾದರೂ ಒಂದು ಹಿಕುಮತ ಹೇಳಿರಿ.

**ಏಜಂಟ:—**[ಆಲೋಚನೆಮಾಡಿ ಭೀಮಪ್ಪ ಕಿವಿಯಲ್ಲಿ ಏನೋ ಮಾತಾಡುವನು]

**ಭೀಮಪ್ಪ:—** [ ಘಾಬರಿ ಸಿಟ್ಟು ] ಥೂ ! ನಿನ್ನ ಮಂಜಾಳಿ ಹೋಗಲಿ ! ಇನ್ನಽ ಯರಡಿತ ಮಕ್ಕಳ ಸಲುವಾಗಿ ನಾನ್ ಸಾಯಂದ್ರ ಸಾಯ್ತಿನಿ.

**ಏಜೆಂಟ:—** ನೀನು ಸತ್ತರೆ ನಿನ್ನ ಕುಟುಂಬದ ಬಾಳ್ವೆ ಹೇಗೆ ? " ತ್ಯಜೇತ್ ಏಕಂ ಕುಲಸ್ಯಾರ್ಥೆ " ಕುಲದ ರಕ್ಷಣಕ್ಕಾಗಿ ಒಬ್ಬರನ್ನು ಆಹುತಿ ಕೊಟ್ಟರೆ ಅದೇನು ತಪ್ಪಲ್ಲ. ಮಕ್ಕಳ ಸಂಖ್ಯೆ ಕಮ್ಮಿ ಆಗಲಿಕ್ಕೆ " ಬ್ರಹ್ಮಚಾರಿ " ಆಗಿರಿ ಎಂಬುವ ಧಾರ್ಮಿಕರು ಗರ್ಭನಿಲ್ಲದ ಹಾಗೆ ಮಾಡಬೇಕು ಎಂಬುವ ಆಧುನಿಕ ಪಂಡಿತರು ಪರ್ಯಾಯದಿಂದ ನಾನು ಹೇಳಿದ ಹಾಗೇನೇ ಹೇಳುವರು ಜೀವ ಹುಟ್ಟದ ಹಾಗೆ

ಮಾಡುವದು ಉಪಾಯಗಳು ಹುಟ್ಟಿದ ಜೀವ ಇಲ್ಲದ ಹಾಗೆ ಮಾಡುವ ಉಪಾಯಗಳು ಇದರಲ್ಲಿ ಏನೂ ಬೇಧವಿಲ್ಲ."ಏನಕೇನ ಪ್ರಕಾರೇಣ ಸಂಪತ್ತಿಯಾನ ಪುರುಷೋಭವೇತ್ " ಇದೇ ಈ ಯುಗದಲ್ಲಿಯ ಮಂತ್ರ. ಸಂಪತ್ತಿಯು ಅಧಿದೇವತೆ.

ಭೀಮಪ್ಪ:— ಒಳ್ಳೇ ಬುದ್ಧಿ ಮಾತು ಹೇಳಿದ್ರಿ. ನನ್ನ ತಲ್ಯಾಗ ಅದು ಹೊಕ್ಕಿತು. ಬುದ್ಧೀ ಇಲ್ಲದರು ನಾವು ಏನೇನೋ ಧರಮ ನೀತಿ ತಿಳಕೊಂತೀನಿ. ಬುದ್ಧಿವಂತರು ಮಾಡುವದೇ ನೀತಿ.

ಏಜೆಂಟ:— ಮತ್ತೆ ಯಾವಾಗ ಇನ್ ಸೂರು ಮಾಡುತ್ತೀ ?

ಭೀಮಪ್ಪ:— ಈಗಲೇ ನಡೆಯಿರಿ [ ಏಜೆಂಟ ಮೊದಲು ಹೋಗುವನು. ಭೀಮಪ್ಪ ಒಂದು ಹಾಡಿ ಹೋಗುವನು ].



## ಅಂಕ ೨ ದೃಶ್ಯ ೭

[ ಸ್ಥಳ:— ಭೀಮಪ್ಪನ ಮನೆ:— ಭೀಮಪ್ಪಾ ಕುಡಿಯುತ್ತಾ ಇರುವನು. ಒಂದು ಮಗು ಹಾಸಿಗೆಯ ಮೇಲೆ ಮಲಗಿರುವದು ].

ಭೀಮಪ್ಪ:— ಇಕಾ ನೋಡು ! ಮಗಳ ಇನ್ ಸೂರ ಮಾಡಿದಾಗಿನಿಂದ ನನ್ನ ಪಟ್ಯಾಗ ಯಾಂಗಾಗೋ ಯಾಂಗಾಗೋ ಆಗತೈತಿ ! ಆ ಕೂಸು ಸ್ವರಗಾಕತೈತಿ ಸ್ವರಗಾಕತೈತಿ !! ಪಟ್ಯಾಗ ಬೆಂಕಿ ಬಿದ್ಯೆತಿ ಈ ಹಾಳು ಬಂಬೈಗೆ ಬಂದಾಗಿಂದ ಒಮ್ಮೆ ಕೂಡ ಸಂತೋಷದಿಂದ ಎಲ್ಲರೂ ಒಂದು ಕಡೆ ಕುಂತಿಲ್ಲ. ಬಾ ! ಸಂತೋಸದಿಂದ ಕೈಯ್ಯಾಗ ಕೈ ಹಾಕೊಂಡು ಕುಂತಕೊಂಬೋಣ ನಿನ್ನೆ ರಾತ್ರಿ ನನಗೊಂದು ಕನಸು ಬಿದ್ದಿತ್ತು. ನಾನು ನೀನು ಬಾಳದಿನ ಕೂಡಿ ಇಂಗಿಲ್ಲಾಂತ ಹಾಳು ಕನಸ್ಸು. ದೇವ್ರ ಬಲ್ಲ ! ನೋಡು ಇದರ ಎಲ್ಲಾ ದುಃಖಾ ಮರಸತೈತಿ [ ಜೇನೆಯ ಮಗುವಿನ ಹತ್ತರ ಹೋಗಿ ಮುದ್ದಾಡಿ]. ಅಯ್ಯೋ ! ಏನಗತಿ ಆತಪ್ಪ ! ನನ್ನ ಬಡತನ ! ನನ್ನ ಕುಡುಕತನ !! ಬಾಟಲಿ ಅಮ್ಮಾ ! ನೀನೇ ಬಾ ಅಮ್ಮಾ. ನೀನೇನತಿ ! [ ಕುಡಿಯುತ್ತ ಏನೋನೋ ಹಾಡುವನು ]

---

## ಅಂಕ ೨ ದೃಶ್ಯ ೮

[ಸ್ಥಳ:— ಭೀಮಪ್ಪನ ಮನೆ. ಕೂಸು ಸತ್ತು ಬಿದ್ದಿರುವದು. ರಾಮಕ್ಕಹುಡುಗರು ಅಳುತ್ತಾ ಕೂತಿರಲು ತೆರೆಯು ಬೀಳುತ್ತದೆ.]

ರಾಮಕ್ಕ:— [ ಅಳುತ್ತಾ ಕುಳಿತಿರಲು ಭೀಮಪ್ಪ ಇನ್ ಸೂರನ್ಸ ಏಜೇಂಟ ಇವರ ಪ್ರವೇಶ ].

[ ಏಜೆಂಟನಿಗೆ ] ನಿನ್ನ ಸಕ್ರವ್ವನ ಗತಿ ಯಾಂಗಾತಪ್ಪಾ ! ನಿನ್ನ ಹಾಳು ಇನ್‌ಸೂರನ್ಸ ಮಾಡಿದಾಗಿನಿಂದ ನನ್ನ ಕೂಸು ಒಣಗಲಿಕ್ಕೆ ಹತ್ತಿತ್ತು. ಇನ್‌ಸೂರ ಮಾಡಿ ಮೂರು ತಿಂಗಳೊಳಗೆ ಏನಾಯಿತಪ್ಪಾ ಅಳುವಳು.

ಏಜಂಟಃ— ನಾನು ಈ ಕೂಸನ್ನ ಸ್ಮಶಾನಕ್ಕೆ ಈಗಲೇ ಬಿಡುವದಿಲ್ಲ. ನನಗೇನೋ ಅನುಮಾನ. ಈ ಕೂಸಿನ ವಿಮೆಯ ಹಣದ ಆಶೆಯಿಂದ ಅದನ್ನು Slow poisoning ಮಾಡಿಕೊಂಡ ಹಾಗೆ ಕಾಣಿಸುತ್ತದೆ.

ಭೀಮಪ್ಪಃ— ಇದೇನು ಬುದ್ಧಿ ! ಬಂದ ಹಣ ಹಂಚಿಕೊಂಡ್ರಾಯಿತು.

ಏಜಂಟಃ— ಬರಿ ಸಮಾನ ಹಂಚಿಕೊಂಡ್ರ ಪ್ರಯೋಜನವಿಲ್ಲ. ಮುಕ್ಕಾಲು ಭಾಗ ನನಗೆ ಮತ್ತು ಹಿಂದಿನ ತಾರೀಖು ಹಾಕಿ ನನ್ನ ಹೆಸರಿನಲ್ಲಿ ಒಂದು ಪ್ರಾಮಿಸರೀ ನೋಟು ಬರೆದುಕೊಡಬೇಕು.

ಭೀಮಪ್ಪಃ— ನಾಳೆ ಹಣ ಬಾರದಹೋದರೆ ಯಾಂಗ ಬುದ್ಧೀ ? ನೀವೇ ಅಲ್ಲೇನು ನಿನಗೆ ಹಣಾಬರಲಿಕ್ಕೆ ಅಕ್ಲಾ ಹೇಳಿದ್ಲು. ನಿಮ್ಮಂಥಾ ದೊಡ್ಡವರೇ ಈಂಗ ಮಾಡಿದರ‍್ಯಾಂಗ ಬುದ್ಧಿ? ವಿಮಾದ ಕೆಲಸ ಪುಣ್ಯಾದ ಕೆಲಸ ಅಂತ ಹೇಳಿದ್ರಲ್ಲ ಬುದ್ಧಿ?

ಏಜಂಟಃ— ಈ ರೊಕ್ಕಸ್ತರ ರಾಜ್ಯದಲ್ಲಿ ರೊಕ್ಕ ದೊರಕಿಸುವದೇ ಪುಣ್ಯದ ಕೆಲಸ. ಯುದ್ಧ ಪರದೇಶಾಪಾಹರಣ ಮುಂತಾದ ಖೂನಿ ಡಕಾಯಿತ ಸಹ ಪುಣ್ಯದ ದಾರಿಗಳೇ. ದೊಡ್ಡ ದೊಡ್ಡ ಸರಕಾರೀ ಬಿನ್ನ ಸರಕಾರೀ ನೌಕರರು ವಕೀಲರು, ವರ್ತಕರು ಮುಂತಾದವರು; ಸಂಬಳ ಫೀಜು; ಬಾಡಿಗೆ, ಬಡ್ಡಿ, ಲಾಭ, ಲಂಚ, ಮುಂತಾದ ಬೇರೆ ಬೇರೆ ಹೆಸರಿಟ್ಟು ಲಕ್ಷ್ಮಿಪೂಜೆ ಮಾಡುವರು. ನಾನೂ ಮಾಡುವದು ಅದೇ ಲಕ್ಷ್ಮೀ ಪೂಜೆ.

[ ಸರಕಲ್ ಇನ್‌ಸ್ಪೆಕ್ಟರರ ಪ್ರವೇಶ ]

ಇನ್‌ಸ್ಪೆಕ್ಟರಃ— ಕ್ಯಾ ಕ್ಯಾ ಬಾತೇ ಬಕ್‌ತೆಹೋ ದೋನೋಂಕೊ ಗಿರಪ್ತಾರ ಕರೆಂಗೆ. ಚಲೋ ಸ್ಟೇಶನಕೆ ಪಾಸ. ಸಬಕುಛ ಮಾಲುಮಹುವಾಹೈ C. I. D. ಸೆ.

ಏಜೆಂಟಃ— ಹಮನೆ ಕ್ಯಾ ಕಿಯಾ ಹೈ ?

ಇನ್‌ಸ್ಪೆಕ್ಟರಃ— ಕ್ಯಾ ನಹೀ ಕಿಯಾಹೈ ? ಸಬ ಕೋಯಿ ಕರತಾ ಹೈ ಪೇಟಕೆವಾಸ್ತೆ.

[ ಇನ್ಸಪೆಕ್ಟರನು, ಭೀಮಪ್ಪ ಮತ್ತು ಏಜಂಟನನ್ನು ಕೈದುಮಾಡಿ ಕರೆದುಕೊಂಡು ಹೋಗುವನು. ಭೀಮಪ್ಪನು ಮುಂದೆ, ಇನ್ಸಪೆಕ್ಟರ ನಡುವೆ, ಕೊನೆಗೆ ಏಜಂಟನು, ಇನ್ಸಪೆಕ್ಟರನ ಕೈಯಲ್ಲಿ ನೋಟನ್ನು ಕೊಡುವನು. ಕೊಟ್ಟನಂತರ ಏಜಂಟನನ್ನು ಬಿಟ್ಟು ಇನ್ಸಪೆಕ್ಟರನು ಭೀಮಪ್ಪನನ್ನು ಮಾತ್ರ ಕರೆದುಕೊಂಡು ಹೋಗುವನು ]

ಏಜಂಟಃ— " Might is right, money is might " (ಹೋಗುವನು.)

## ಅಂಕ ೨ ದೃಶ್ಯ ೬

[ ರಸ್ತೆಯ ಮೇಲೆ ರಾಮಕ್ಕ, ತನ್ನ ಮಕ್ಕಳ ಸಹಿತವಾಗಿ ಹಾಡುತ್ತ ಬರುವಳು—ಭ್ರುನಿಷ್ಟಳಾದುದು ಮೋರೆಯಮೇಲೆ ಕಂಡುಬರುತ್ತಿದೆ.]

**ಹಾಡು:—**

[ " ಕನ್ನಮ್ಮ ಮಾತಲ್ಲಿ " ಎಂಬಂತೆ ]

ಬೇಡಮ್ಮಾ ಜನ್ಮವು—ಬಡತನ ಹಿಂಗದು ॥ ಪಲ್ಲವ ॥
ಮಕ್ಕಳಮರಿಗಳು—ಬಾನಿಲ್ದೆ ಅಳುವವು
ಕಾಸು ಕೈಯಾಗಿಲ್ಲ—ನಾವೆಂತು ಬದುಕುವುದು ?
ಹೊಟ್ಟೆ ತುಂಬಿದವರಿಗೆ ದಾನವ ಮಾಡುವರು ॥ ೧ ॥
ಹೊಟ್ಟೆಗಿಲ್ಲದವರನು—ಕಣ್ಣೆತ್ತಿ ನೋಡರು ॥ ೨ ॥
ಬೇಡಮ್ಮಾ ಜನ್ಮವು—ಬಡತನ ಹಿಂಗದು

**ರಾಮಕ್ಕ:—** ಹೊಟ್ಟೆ ಮಾಡತೈತಿ ಮೂರಾಬಟ್ಟೆ. ಅಯ್ಯೊ ದೇವರ ಆ ಹುಚ್ಚು ಮುಂಡಿ ಲಚಮಿ ಮನಿಗೆ 'ಅಮ್ಮಾ ಬಿಕ್ಷಾ ನೀಡಮ್ಮಾ' ಅಂತ ಹೋಗುವ ವ್ಯಾಳ್ಯ ತಂದೆಲ್ಲಪ್ಪಾ ! ಆ ಹುಚುಮುಂಡಿ ನಮ್ಮ ಕುಲಾ ಕೆಡಿಸ್ಯಾಳ. ನಾಚಗೀ ಬಿಟ್ಟಾಳ. ಅವಳ ಕಡೆ ಸಾಲಕ್ಕೆ ಓಗಬೇಕಂದ್ರೆ ಮೈಮೇಲೆ ಮುಳ್ಳು ಬರತೈತಿ. ಆತನಂತು ಈ ವಟ್ಟೀಸಲುವಾಗಿ, ಯಿದ್ದ ಮಕ್ಕಳು ಸುಖ ಪಡಲೀ ಅಂತ ಒಂದು ಕೂಸು ಕೊಂದು ಯೇಳುವರುಸ ಜೈಲಾಗೆ ಬಿದ್ದಾನೆ. ಈ ವಟ್ಟೀ ಇಚ್ಚಿಗಿ ಮಾನಾ ಪೋಯಿತು. ಕೂಸಿನ ಕೊಂದ ಪಾಪ ಕಟ್ಟಿಕೊಂಡೆವು. ಈ ಮೂರು ಮಕ್ಕಳು ಮೂರು ದಿವಸಾತು ಅರವಟ್ಟೀಲಿ ಇದ್ದಾವ. ನಡಾಕಿನ ಮಗು ಬ್ಯಾನಿ ಬಿದ್ದೈತಿ. ಔಸುದ್ಯಾ ರೊಕ್ಕಾ ಕೊಡಲಿಕ್ಕೆ ರೊಕ್ಕಾ ಇಲ್ಲ. ಕಡೀಗೆ ನನ್ನ ದೊಡ್ಡ ಮಗಳ ಮರ್ಯಾದಿ ಮುಚ್ಚಲಿಕ್ಕೆ ಒಂದು ಗೇಣು ಗಟ್ಟಿ ಅರಿಬಿಲ್ಲ ! ದೇವ್ರ ! ನಾನು ಇಸಾ ತಕ್ಕೊಂಡು ಸಾಯಿಲ್ಯಾ ? ಈ ಕೂಸು ಗೊಳ್ಳ ಕಟ್ಟಿಕೊಂಡು ಸತ್ರs ?? ಕಿಟಕಿಟನೆ ಇಲ್ಲ. ಯಲ್ಲಾರು ಹಾಯಾಗಿ ಕಣ್ಣುಮುಚ್ಚಿಕೊಂಡು ಹೋಗತೀವಿ ! ಈ ಕಣ್ಣು ಏನು ಸುಕಾ ಕಂಡಾವ ? ಮಕ್ಕಳು ಮುಗ್ಗ ಜ್ವಾಳದ ಮುದ್ದಿ ತಿಂದು— ತಲೀಗೆ ಎಣ್ಣಿ ಇಲ್ದಾಂಗ ತಿಪ್ಯಾಗ ತಿರುಗಿ ತಿರುಗಿ ಸಂಜೀನಾಗ ಪಾಯಿಕಾನಿ ನಾತಾ ಕುಡುಕೊಂತಾ ಹರುಕ ಚ್ಯಾಪೀ ಮ್ಯಾಲೆ ಧುಸ್ ಅಂತ ಬಿದ್ದಿದ್ದು ನೋಡಿ ನೋಡಿ ಈ ಕಣ್ಣು ಬ್ಯಾಸತ್ತಾವ ! ದೇವ್ರ ! ನೀನೆ ಈ ಕಣ್ಣುಗಳು ಮುಚ್ಚಪ್ಪಾ !!

[ ಮತ್ತೆ ಅರೆ ಹುಚ್ಚಳಂತೆ ಮಕ್ಕಳನ್ನು ಕರೆದುಕೊಂಡು ಹೋಗುವಳು. ]



[ ದೊಡ್ಡ ಮಹಡಿಯ ಮನೆ. ದೊಡ್ಡ ದೊಡ್ಡ ಗಾಜಿನ ಖಿಡಿಕಿಗಳಿಂದ ಅಲಂಕೃತವಾಗಿದೆ. ಗಾಜಿನ ಖಿಡಿಕಿಗಳಿಂದ ಒಳಗಿನ ಫೋಟೋಗಳು ಮಿಕ್ಕ "ಶೋಕಿನ" ಸಾಮಾನುಗಳನ್ನು ನೋಡಬಹುದು. ಮನೆಯನ್ನು ನೋಡಿದ ತಕ್ಷಣವೆ "ರಸಿಕರ" ಮನೆ ಎಂದು ಭಾಸವಾಗುತ್ತೆ. ಸಾಯಂ ಕಾಲ ೬ ಗಂಟೆಯಾಗಿರಬೇಕು—ಲಕ್ಷ್ಮೀ ತನ್ನ "ಭವ್ಯವಾದ" ಈ ಮನೆಯಲ್ಲಿ ಹಾಡುತ್ತ ಡಾನ್ಸನ್ನು ಕಲಿಯುತ್ತ ಕುಳಿತಿರುವಳು. ]

[ ತೆರೆಯಲ್ಲಿ "ಲಚಮುಮ್ಮಾ" "ಲಚಮುಮ್ಮಾ ಎಂದು ಸ್ವರ ಒಂದು ನೀಳ್ದನಿಯಿಂದ ಕರೆಯುವುದು." ]

ಲಕ್ಷ್ಮೀ:— ಯಾರಲ್ಲಿ? ಯಾರಲ್ಲಿ ಬಂದದ್ದು?

[ ರಾಮುಕ್ಕ ತನ್ನ ಮಕ್ಕಳ ಸಮೇತ ಬರುವಳು. ]

ರಾಮುಕ್ಕ:— ನಾನು ರಾಮುಕ್ಕsಽ.

ಲಕ್ಷ್ಮೀ:— ಏನು ಬಂದದ್ದು.

ರಾಮುಕ್ಕ:— ಏನಿಲ್ಲ, ಏನಿಲ್ಲ.

ಲಕ್ಷ್ಮೀ:— [ ಸ್ವಲ್ಪ ರೇಗಿ ] ಏನಿಲ್ಲ, ಏನಿಲ್ಲ, ಏನಿಲ್ಲದಿದ್ದರೆ ಬಂದೇಕೆ?

ರಾಮುಕ್ಕ:— ಏನಿಲ್ಲ, ಮತಽ ಬಾನಕ್ಕಿಲ್ಲ. ಏನೋ ಸಾಲಾ ಕೊಟ್ಟೆಯಂತು ಬಂದಿದ್ದೆ.

ಲಕ್ಷ್ಮೀ:— ಥೂ ನಿನ್ನ! ಯಾವಾಗಲೂ ನಿನ್ನ ಪಾಡು ಇಷ್ಟಾ ಆತು ನಿನ್ನಂಥ ಬಡವಳಿಗೆ ಸಾಲವೆ? ಸಾಲಾ ಗೀಲಾ ಆಗದ ಮಾತು. ಠಕ್ಕು ಶಿರಿವಂತ ರಿಗೆ ಸಾಲಾ ಕೊಡಬಹುದೆ ಹೊರ್ತು ಬಡವರಿಗೆ ಅವರು ಎಷ್ಟು ಸಾಚಾ ಇದ್ದರೂ ಕೊಡಕೂಡದು. ಅವರ ದುಡ್ಡಿನ ಕೊರತೆಗೆ ಈಡೇ ಇಲ್ಲ.

ರಾಮುಕ್ಕ:— ಯಿಂಗ್ಯಾಕವ್ಮ ಲಚಮುಮ್ಮಾ? ನಮ್ಮವಳಲ್ಲs ನೀನು?

ಲಕ್ಷ್ಮೀ:— ದುಡ್ಡಿನ ಮುಂದೆ ನಮ್ಮವರಿಲ್ಲ, ನಿಮ್ಮವರಿಲ್ಲ ನೋಡ. ನೀನು ನನ್ನ ದೊಡ್ಡಮ್ಮನ ಮಗಳು ಅದನ್ನು ನಾನು ಮರೆತಿಲ್ಲ. ಆದರೆ ನಾನು ಹೇಳಿ ದ್ದನ್ನು ಕೇಳ್ತಿಯಾ.

ರಾಮುಕ್ಕ:— ನಮ್ಮ ಮಾನಾ ಮರ್ಯಾದೆ ಒಂದು ಹೋಗದಿದ್ದರs ಏನಾದರೂ ಮಾಡ್ತಿನಿ. ನೀನು ಹೇಳಿದ್ದನ್ನು ಕೇಳ್ತೀನಿ.

ಲಕ್ಷ್ಮೀ:— ಮರ್ಯಾದೆ? ಮೂಢ ಮರ್ಯಾದೆಯ ಬೆನ್ನುಹತ್ತಿದ ನಿನ್ನ ಗತಿ ಹೀಗಾದರೆ ಮರ್ಯಾದೆ ಇಲ್ಲದ ನನ್ನ ಸ್ಥಿತಿ ಏನಾಗಿದೆ ನೋಡು. ನೀ ಊರು ಬಿಟ್ಟ ಒಂದು ವರ್ಷದ ಮೇಲೆ ನಾನು ಊರು ಬಿಟ್ಟಿರುತ್ತೇನೆ. ನೋಡು ನಿನ್ನ ಆ ಪಾಯಖಾನೆ ಹತ್ತಿರದ ೨ ರೂಪಾಯಿ ಬಾಡಿಗೆಯ ಮನೆ ಹೇಗಿದೆ—ನನ್ನ ಈ ಸ್ವಂತ ಸಂಪಾದಿಸಿದ ಸಾವಿರಗಟ್ಟಲೆ ಖರ್ಚು ಮಾಡಿ ಕಟ್ಟಿಸಿದ ಬಂಗಲೆ. ನಿನ್ನ

ಮೂರ್ಖತನದ ಕಲ್ಪನೆಯನ್ನು ಬಿಟ್ಟುಬಿಡು. ಈಗ ಸಂಪತ್ತೇ ಮರ್ಯಾದೆ, ಕುಲೀನತ್ವ ಮತ್ತು ಗುಣಶ್ರೇಷ್ಠ. ಈ ಸುಲಿಗೆಯ ಸಮಾಜದಲ್ಲಿ ಟೊಳ್ಳು ಮರ್ಯಾದೆಯ ಬೆನ್ನುಹತ್ತಿದ ನಿನಗೆ ಕಸಬರಿಗೆಯಷ್ಟು ಸಹ ಮರ್ಯಾದೆ ಇಲ್ಲ. ಯಾವ ಹೆಂಗಸು ಯಾವ ಗಂಡಸು ನನಗಿಂತ ಹೆಚ್ಚಾಗಿ ಮದುವೆಯಾದ ಸ್ತ್ರೀ ಸರ್ವ ಸಾಮಾನ್ಯ ವೇಶ್ಯೆಯರಕಿಂತ ಆರ್ಥಿಕ ಪರಾವಲಂಬನೆಯಿಂದ ಪುರುಷನ ಪಶು ವೃತ್ತಿಗೆ ಹೆಚ್ಚಾಗಿ ಬಳಿಬಿದ್ದಿರುವಳು. ಆ ಪಶು ವೃತ್ತಿ ಒಬ್ಬನದೋ ಇಲ್ಲವೆ ಬಹು ಜನರದೋ ಅದು ಮುಖ್ಯ ಮಾತಲ್ಲ. ಗಂಡನ ಮರ್ಜಿ ಇರೊವರೆಗೆ ಅವನು ಕೊಟ್ಟ ಪರಿಮಿತ ಸ್ವಾತಂತ್ರದಲ್ಲಿ ಅಲಂಕಾರದಿಂದ ಅವನ ಕಣ್ಣುಗಳನ್ನು ತೃಪ್ತಪಡಿಸಿ ಅವನ ಭೋಗ ವಸ್ತುವಾಗಿ ನಟಿಸುವ ಸ್ತ್ರೀಯು ನನಗಿಂತಲೂ ಹೇಗೆ ಹೆಚ್ಚು ಮರ್ಯಾದೆ ಉಳ್ಳವಳು? ಬಡವರ ರಕ್ತದ ಮೇಲೆ ಜೀವಿಸುವ ಗಿರಣಿಯ ಮಾಲಕರಿಗಿಂತ ಬಡ್ಡಿ ಬಾಡಿಗೆಗಳ ಮೇಲೆ ಜೀವಿಸುವ ನಿಷ್ಕ್ರೀಯ ಶಿರಿವಂತರಿಗಿಂತ, ಮತ್ತು ಇಂಥ ಶಿರಿವಂತರ ಮರ್ಜಿಯನ್ನು ಕಾಯ್ದು ಬೌದ್ಧಿಕ ವೇಶ್ಯಾವೃತ್ತಿಯನ್ನು ಅವಲಂಬಿಸುವ ವಕೀಲರಿಗಿಂತ ಒಂದೆರೆಡು ದಿನಗಳಲ್ಲಿ ನೆಟ್ಟಗಾಗುವ ಬೇನೆಯನ್ನು ಜಾಸ್ತಿ ದಿನಗಳವರೆವಿಗೂ ಎಳೆದು ಹಣ ಸಂಪಾದಿಸುವ ಡಾಕ್ಟರ್‌ರಿಗಿಂತ ಹಾಗೆಯೇ ಬಡವರ ರಕ್ತಮಾಂಸಗಳ ಮೇಲೆ ಅವಲಂಬಿಸುವ ಸರಕಾರದಿಂದೇ ಆಗಲಿ ಅಥವಾ ಅದರ ನೌಕರರಿಗಿಂತ ಇವರಿಂದ ದುಡ್ಡನ್ನು ಸೆಳೆಯುವ ನನ್ನ ಮರ್ಯಾದೆ ಹೇಗೆ ಕಡಿಮೆ? ನನ್ನ ಮರ್ಯಾದೆಯು ನನ್ನ ಆಸ್ತಿಯ ಮೇಲಿದೆ. "ನನ್ನ ಆಸ್ತಿ, ನನ್ನ ಆಸ್ತಿ" ಇದೇ ಈ ಆರ್ಥಿಕ ಯುಗದಲ್ಲಿಯ ಮಹಾ ಮಂತ್ರ. ಆ ಆಸ್ತಿಯನ್ನು ಸಂಪಾದನೆ ಮಾಡುವುದೇ ಸದ್ಗುಣ. ಮಿಕ್ಕವೆಲ್ಲ ಬರಿಯ ಬಿಕ್ಷುಕನ ಬಯಕೆಗಳು.

ರಾಮಕ್ಕ:— ಅಲ್ಲs! ನೀನು ಎಲ್ಲರನ್ನು ಹೀಂsಗ ಎತ್ತಿಹಾಕಿ ಮಾತಾಡಿದರs ಹ್ಯಾಂಗ? ಅದರಿಂದ ಏನು ಫಾಯದೇನೆs. ಅಲ್ಲs! ಈ ಹಾಳು ಕೆಲಸದಿಂದ ಯಾರಿಗೇನು ಫಾಯಿದೇ-ನೇs?

ಲಕ್ಷ್ಮಿ:— "ಪರೋಪಕಾರ" "ಪರೋಪಕಾರ" ಎಂದು ಜಂಬ ಕೊಚ್ಚಿಕೊಳ್ಳುವವರಕಿಂತಲೂ ನನ್ನಿಂದ ಸಮಾಜಕ್ಕೆ ಹೆಚ್ಚು ಸೇವೆ ಆಗುವುದು. ಮನೆಯಲ್ಲಿಯ ರಾಕ್ಷಸೀ ಸ್ವಭಾವದ ಹೆಂಡಂದಿರಿಂದ ಭಗ್ನ ಪ್ರೇಮಿಗಳಾದವರಿಗೆ ವಿಶ್ರಾಮ ಸ್ಥಾನವೆಂದರೆ ನಮ್ಮ ಮನೆ. ಹೃದಯವನ್ನು ಬಾಡಿಸಿ ಬೆಂಡಾಗಿ ಮಾಡುವ ಅಡವಿಯಂತಿರುವ ಆ ಗೃಹಣಿ ಹೀನ ಮನೆಗಳಕಿಂತಲೂ ಸಾವಿರಪಟ್ಟು ಮೇಲಾಗಿದೆ ನಮ್ಮ ಮನೆ. ಅದರ ಜೊತೆಯಲ್ಲಿ ನೈಸರ್ಗಿಕ ಪ್ರವೃತ್ತಿಗಳಲ್ಲಿ ಅತಿ ಅವಶ್ಯವಾದ ಮತ್ತು ಶ್ರೇಷ್ಟವಾದ ಮತ್ತು ಅತಿ ಬಲಿಷ್ಟವಾದ ಪ್ರವೃತ್ತಿ ಎಂದರೆ ಆತ್ಮ ಸಂರಕ್ಷಣೆ ಮತ್ತು ಜಾತಿ ಉತ್ಪಾದನೆ. ಆದರೆ ಈ ಪವಿತ್ರವಾದ ಪ್ರವೃತ್ತಿಗಳನ್ನು ಈ ಸುಲಿಗೆಖೋರ ಸಮಾಜವು ಅತಿ ಹೀನವೆಂದು ಕರೆದು. ಅದನ್ನು ಹತ್ತಿಕ್ಕಲು ಸಮಾಜವನ್ನು ಆ ಮಾರ್ಗದಲ್ಲಿ ರಚಿಸಲು ಪ್ರಯತ್ನಿಸುತ್ತಿದೆ. ಆದರೆ ನೈಸರ್ಗಿಕವಾದ ಇವುಗಳನ್ನು

ತಡೆಗಟ್ಟಲು ಸಾಧ್ಯವಾಗದೆ ಇದ್ದು ಸಮಾಜದ ಈ ಕೃತ್ರಿಮ ನೀತಿಗಳಿಗೆ ದಾಸರಾಗಿ ಅನೈಸರ್ಗಿಕ ಪಾಪಗಳನ್ನು ತಡೆಗಟ್ಟುತ್ತಿದ್ದೇವೆ. ಇಲ್ಲದೆ ಹೋದ ಪಕ್ಷದಲ್ಲಿ ಬಾಲ ಹತ್ಯ-ಮಾನಸಿಕ ರೋಗಗಳು ಹೆಚ್ಚಾಗುತ್ತಿದ್ದವು. ಎಲ್ಲ ಆಸ್ಪತ್ರಿಗಳನ್ನು ಹುಚ್ಚಾಸ್ಪತ್ರೆಗಳನ್ನಾಗಿ ಮಾಡಬೇಕಾಗುತಿತ್ತು.

ರಾಮಕ್ಕ:— [ ಗಾಬರಿಗೊಂಡು ರಾಮಕ್ಕ ಮಾತನಾಡುವಳು ]

ಅಲ್ಲs ! ಮತ್ತೆ ! ಹೀಂಗ ಮರ್ಯಾದೆ ಇಲ್ಲದ ಕೆಲ್ಸ ಮಾಡಿದರs ಬ್ಯಾನಿ ಬಂದರ ಹ್ಯಾಂಗ ?

ಲಕ್ಷ್ಮಿ:— ಬಡತನವೆ ಬ್ಯಾನಿಯ ಬೀಜ ಮತ್ತು ಬೇರು. ಪ್ಲೇಗ-ಕಾಲರಾ ಮುಂತಾದ ಬೇನೆಗಳು- ಇಸುಬು ಖಜ್ಜಿ, ಹುರುಕು ಮುಂತಾದ ತ್ವಚಾರೋಗಗಳು ಇಷ್ಟೇ ಅಲ್ಲದೆ- ಬಾಲ ಪೀಡೆ, ಅಮ್ಮ-ಗಣಜಿಲೆ ಮುಂತಾದ ಬೇನೆಗಳೂ ಬಡವರಿಗೆ ! ಇಂಥ ಬೇನೆಗಳ ಮುಂದೆ ವೇಶ್ಯೆಯರಿಗೆ ಬರುವ ಬೇನೆಗಳು ಏನೂ ಅಲ್ಲ. ನಮಗಾದರೂ ನಾಲ್ಕುಕಾಸು ಖರ್ಚುಮಾಡಿ ಉಪಚಾರ ಪಡೆಯಲು ಸಾಧ್ಯವಿದೆ. ಆದರೆ ಬಡವರಿಗೆ ಅದೂ ಇಲ್ಲ. ಬದುಕಿದಾಗ ಹೊಟ್ಟೆಗಿಲ್ಲ. ಬೇನೆಬಿದ್ದಾಗ ಉಪಚಾರಕ್ಕಿಲ್ಲ. ಕೊನೆಗೆ ಸತ್ತಾಗಲೂ ಇಲ್ಲ. ಇಂಥ ನಾಯಿಯ ಬಾಳ್ವೆಯಲ್ಲಿರುವ ಮರ್ಯಾದೆ ಅದೆಂಥಾ ಮರ್ಯಾದೆ ?

ರಾಮಕ್ಕ:—[ ಗಾಬರಿಗೊಂಡ ರಾಮಕ್ಕ ಏನೂ ತಿಳಿಯದಾಗಿ ಮಾತನಾಡುವಳು ]

ಅಲ್ಲs. ಲಚಮವ್ವ ಇಂಥಾ ದೊಡ್ಡ ದೊಡ್ಡ ಮಾತ ನಿನಗ್ಯಾರು ಕಲಿಸಿದರs ?

ಲಕ್ಷ್ಮೀ:— ಯಾರು ಯಾಕ ಕಲಿಸಬೇಕು ? ಸ್ವಲ್ಪ ವಿಚಾರ ಮಾಡಿದರೆ ಎಲ್ಲರಿಗೂ ತಿಳಿಯುವುದು. ಅಷ್ಟೇ ಅಲ್ಲದೆ ನನ್ನ ಹತ್ತಿರ ಸಮಾಜ ಧುರೀಣರು, ದೊಡ್ಡ ದೊಡ್ಡ ಆಚಾರ್ಯರರು, ಪ್ರಖ್ಯಾತ ವಕೀಲರು, ಡಾಕ್ಟರರು, ವೈಭವಶಾಲೀ ಸೇಠರೂ,ನಾಮಾಂಕಿತ ವಿದ್ವಾಂಸರೂ,ತತ್ವಜ್ಞಾನಿಗಳೂಎಲ್ಲರೂ ಬರುವವರೆ. ಇಂಥ ಸಂಪರ್ಕದಿಂದ ಬೇಕಾದ್ದುದನ್ನು ಕಲಿಯಬಹುದು. ಗಿರಣಿಯೊಳಗೆ ಕೆಲಸಮಾಡುವ ಹೆಂಗಸರಹಾಗೆ ನಾನು ಬರಿಯ ಮೇಸ್ತ್ರಿಗಳು ಅಥವಾ ಆಫೀಸುಗಳಲ್ಲಿ ಕೆಲಸ ಮಾಡುವವರ ಹತ್ತಿರ ಮಾತ್ರವೆ ಸಂಪರ್ಕವಿಡುವದಿಲ್ಲ.

ರಾಮಕ್ಕ:— ಲಚಮವ್ವ ಇಂಥಾ ದೊಡ್ಡ ಮಾತಿನಿಂದ ನನಗೇನು ಕೆಲಸ ? ನನಗೊಂದು ಆಖೇರು ಮಾತ್ಹೇಳು. ನನ್ನ ಜೀವ ಬ್ಯಾಸರಾಗೈತಿ ಗಂಡಂತು ಜೈಲಾಗ ಬಿದ್ದಾನ. ಎಂದು ಬರತಾನೊ ಏನೋ ?

ಲಕ್ಷ್ಮೀ:— ನಾನೊಂದು ಖಂಡಿತ ಮಾತು ಹೇಳಲ್ಯಾ ? ಆದರೆ ನಾನು ಹೇಳಿದ್ದನ್ನು ಮಾಡುವುದಾದರೆ ಹೇಳುತ್ತೇನೆ. ಇಲ್ಲವಾದರೆ “ ಬಂದ ದಾರಿಗೆ ಸುಂಕ ವಿಲ್ಲವೆಂದು ” ನಿನ್ನ ದಾರಿ ಹಿಡಿ.

ರಾಮಕ್ಕ:— [ ಲಕ್ಷ್ಮಿಯ ಮೋರೆಯನ್ನು ದಿಟ್ಟಿಸಿನೋಡಿ ದಾರಿ ಕಾಣದಾಗಿ— ನಿರಾಶೆಯಿಂದ ]

ನೀನು ಹೇಳಿದ್ದು ಕೇಳ್ತೀನಿ ನಾನು ಸಾಯಂದ್ರ ಸಾಯ್ತೀನಿ. ಇನ್ಯಾರನರೆ ಕೊಲ್ಲಂದರೆ ಕೊಲ್ತಿನಿ. ಈ ಮಕ್ಕಳ ಗೋಳ್ಯಾಟ ನಾನ್ ನೋಡಲಾರೆ.

ಲಕ್ಷ್ಮಿ:— [ ರಾಮಕ್ಕನ ಹಿರಿಯ ಮಗಳ ಕಡೆಗೆ ನೋಡುತ್ತ ಪ್ರೀತಿಯಿಂದ ಆಕೆಯ ಬೆನ್ನು ಚಪ್ಪರಿಸುತ್ತ ಹಸನ್ಮುಖಳಾಗಿ ]

ನಿನ್ನ ಮಗಳು ನೋಡಲಿಕ್ಕೆ ಚೆನ್ನಾಗಿರುವಳು. ಪರವಾಇಲ್ಲ. ನಿನ್ನ ಹಿರೇ ಮಗಳನ್ನು ನನಗೆ ಕೊಟ್ಟುಬಿಡು ಬೇಕಾದರೆ ಒಂದು ಸಾವಿರ ರೂಪಾಯಿಯನ್ನು ನಿನಗೆ ಕೊಡುತ್ತೇನೆ. ಇಲ್ಲದಿದ್ದರೆ............ ಇಲ್ಲದಿದ್ದರೆ ನೀನು ನಿನ್ನ ಮಕ್ಕಳ ಸಂಗಡ ವಕೀಲರಹಾಗೆ " ಬೋರ್ಡು " ಹಾಕಿ ನನ್ನ ಹಾಗೆ ಇದ್ದುಬಿಡು. ಇದರಿಂದ ನೀನು ಮತ್ತು ನಿನ್ನ ಮಕ್ಕಳು ಎಲ್ಲರೂ ಸುಖವಾಗಿರಬಹುದು. ಬೇರೆಯುವರ ಸಲುವಾಗಿ ನಿನ್ನ ಮಗಳ ಯೌವ್ವನ ಸೌಂದರ್ಯಗಳು ಕೆಡಬಹುದೆಂದು ಹೆದುರುವುದು ಬೇಕಾಗಿಲ್ಲ. ಬೇರೆ ಏನು ಕೆಲಸ ಮಾಡಿದರೂ ಯಾರಾದರು ಆಕೆಯ ಈ ಯೌವ್ವನ ಮತ್ತು ಸೌಂದರ್ಯಗಳ ಲಾಭವನ್ನು ಪಡೆಯದೆ ಇರಲು ಸಾಧ್ಯವಿಲ್ಲ.

ರಾಮಕ್ಕ:— [ ದಿಕ್‌ಭ್ರಾಂತಳಾಗಿ ಲಕ್ಷ್ಮಿಯನ್ನು ದಿಟ್ಟಿಸಿನೋಡುವಳು. ಆಕೆಯಲ್ಲಿ ಹೊರಟ ವಿಚಾರ ತರಂಗಗಳನ್ನು ಆಕೆಯ ಹೊಳೆಯುವ ಆ ಕಣ್ಣುಗಳಲ್ಲಿ ಕಾಣಬಹುದಿತ್ತು. ಆಕೆಯ ಮೋರೆಯಮೇಲೆ ಬೆವರು ಒಡಿಯಲು ಪ್ರಾರಂಭವಾಗಿ ಮತ್ತೊಮ್ಮೆ ದಿಟ್ಟಿಸಿನೋಡಿ ಗೊಗ್ಗರ ಧ್ವನಿಯಿಂದ ಮಾತನಾಡುವಳು ]

ಆಗಲಿ........ ಆಗಲಿ, ನಿನ್ನಂತೆ ಆಗಲಿ. ನಶೀಬದಲ್ಲಿ ಇದೇ ಬರೆಧಾಂಗೈತಿ ಮಕ್ಕಳ್ನ ನಿನಗs ಕೊಟ್ಟು ಹೋಗ್ತೀನಿ.

[ ಕಣ್ಣಲ್ಲಿ ನೀರು ಧಾರೆಯಾಗಿ ಇಳಿಯುವುದು ]

ನನ್ನ ಹೊಟ್ಟೆಗೆ ಹ್ಯಾಂಗರ ಮಾಡ್ತೀನಿ. ನಿನ್ನ ರೂಪಾಯಿ ನನಗೇನ ಬ್ಯಾಡ. ಮಕ್ಕಳ್ನೊಂದು ಸುಖವಾಗಿ ನೋಡ್ಕೋ.

[ ರಾಮಕ್ಕ ತನ್ನ ಮಕ್ಕಳ ತಲೆಯಮೇಲೆ ಕೈಯಿಟ್ಟು ಹಾಗೆಯೇ ಕೈ ಜಾರಿಸುತ್ತ ಹೋಗುವಳು. ಮಕ್ಕಳು ' ಅಮ್ಮಾ ' ಎಂದು ಕೂಗುವವು ಮಕ್ಕಳನ್ನು ತಡೆಗಟ್ಟುವಳು. ಎಲ್ಲರು ರಾಮಕ್ಕನನ್ನೆ ದಿಟ್ಟಿಸಿನೋಡುವರು ]

[ ತೆರೆಯು ಬೀಳುವುದು ]



Reg. No. 6410 ೧೯೫೩ ಮೇ ಬೆಲೆ : ೬ ಆಣೆ



# ವೀರಮಾತೆ

ಇಂದೇ ಚಂದಾದಾರರಾಗಿರಿ.

ಮುಖ್ಯ ಸಂಪಾದಿಕೆಯರು :— ಶ್ರೀಮತಿ ಸರೋಜಿನಿ ಮಹಿಷಿ, ಎಮ್. ಎ.

ಕೇವಲ ಸ್ತ್ರೀಯರ ವಿಕಾಸಕ್ಕಾಗಿಯೇ ಮೀಸಲಾಗಿಟ್ಟ ಮಾಸಪತ್ರಿಕೆ
ಪ್ರತಿಯೊಬ್ಬರೂ ಓದಲೇಬೇಕಾದುದು.

| | |
|---|---|
| ವಾರ್ಷಿಕ ಚಂದಾಹಣ ಕೇವಲ | ೫ ರೂಪಾಯಿ |
| ಸ್ಥಳೀಯರಿಗೆ ಕೇವಲ | ೪ ರೂ. ೮ ಆ. |
| ಬಿಡಿ ಸಂಚಿಕೆ | ೬ ಆಣೆ ಮಾತ್ರ. |

ಮನೆಮನೆಯಲ್ಲೂ ಸುಖಸಂತೋಷಗಳನ್ನು ಬೀರಬಲ್ಲ
ಕನ್ನಡ ಮಾಸಪತ್ರಿಕೆ !

[ ಮುಂಬಯಿ ಮತ್ತು ಮದ್ರಾಸ ಸರಕಾರಗಳಿಂದ ಮಾನ್ಯತೆ ದೊರೆತಿದೆ. ]

---

ಹೊಸ ಪುಸ್ತಕ ! ತುಲನಾತ್ಮಕ ಅಭ್ಯಾಸ ! ಹೊಸ ಶೈಲಿ !

## ಬಾಣಂತೀ ಉಪಚಾರ

ಬರೆದವರು :— ವೈದ್ಯ ಗುಂಡಾಚಾರ್ಯ ಸವಣೂರ L. A. M. S.

ಬಾಣಂತಿತನವೆಂದರೇನು ! ಅದನ್ನು ಆಚರಿಸುವ ಬಗೆ, ಮನೆತನದ ಉಪಾಯಗಳು, ಕೆಲವು ಸ್ತ್ರೀ ರೋಗಗಳು, ಇತ್ಯಾದಿಗಳ ವಿಚಾರವಾಗಿ ಸುಲಭವಾದ ಶೈಲಿಯಲ್ಲಿ ವಿಷಯಗಳನ್ನು ತಿಳಿಸಲಾಗಿದೆ. ದೊರೆಯುವ ಸ್ಥಳ :—

ಆಯುರ್ವೇದ ವಿದ್ವಾನ್—ಗುಂಡಾಚಾರ್ಯ ಸವಣೂರ L. A. M. S.
ಹಳೇ ಹುಬ್ಬಳ್ಳಿ, ಹುಬ್ಬಳ್ಳಿ.

---

## ಆರ್. ಕೆ. ಕಬ್ಬೂರ ಮತ್ತು ಸನ್ಸ್,

ಕೊಪ್ಪೀಕರ ರೋಡ ಹುಬ್ಬಳ್ಳಿ.

ನಮ್ಮಲ್ಲಿ ಲೋಧ್ರ, ಜೀವಾಮೃತ, ಬ್ರಾಹ್ಮಿ [illegible], [illegible], ಮದನಮಂಜರಿ, ಇತ್ಯಾದಿ ಆಯುರ್ವೇದೀಯ [illegible] ದೊರೆಯುತ್ತವೆ.



---

ಮುದ್ರಕರು : ಶ್ರೀಯುತ [illegible] ನಾರಾಯಣರಾಯರು.
ಸ್ಥಳ : ಶ್ರೀ ಸರಸ್ವತೀ ಮುದ್ರಣಾಲಯ ಧಾರವಾಡ.
ಪ್ರಕಾಶಕರು : ಶ್ರೀ. [illegible]

